# ಶ್ರೀ ಸಿದ್ಧಾಂತ ಶಿಖಾಮಣಿ

# ಪ್ರವಚನ ಪ್ರಭೆ

ಸಂಪುಟ ೨

"ವಿದ್ಯಾವಾಚಸ್ಪತಿ"
ಶ್ರೀ ೧೦೦೮ ಕಾಶೀ ಜಗದ್ಗುರು
**ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು**



ಶ್ರೀ ಶಿವಯೋಗಿಶಿವಾಚಾರ್ಯ ವಿರಚಿತ

# ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ

ಪರಿಚ್ಛೇದ ೧೫-೨೧, ಲಿಂಗಸ್ಥಲಗಳು

ಸಂಪುಟ - ೨

## ಆಶೀರ್ವಚನ

''ವಿದ್ಯಾವಾಚಸ್ಪತಿ''

ಶ್ರೀಮದ್ ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು

ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು

ಜಂಗಮವಾಡಿಮಠ, ವಾರಾಣಸಿ

ಸಂಕಲನ

ಶ್ರೀ ಷ. ಬ್ರ. ಡಾ. ಮಹಾದೇವ ಶಿವಾಚಾರ್ಯ ಸ್ವಾಮಿಗಳು,

ಬೃಹನ್ಮಠ, ಬಬಲೇಶ್ವರ

ಶ್ರೀ ಷ. ಬ್ರ. ಡಾ. ಸಿದ್ಧರಾಮ ಶಿವಾಚಾರ್ಯರು ಹಿರೇಮಠ

ಹಿಪ್ಪರಗಿ, ಯಡೂರು

ಪ್ರಕಾಶಕರು

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆ,

ಬೆಂಗಳೂರು - ೫೩

Shree Shivayogi Shivacharya Virachita **Shree Siddhanta Shikhamani Pravachanaprabhe** By H. H. Shree 1008 Kashi Jagadguru Dr. Chandrashekhar Shivacharya Mahaswamiji Jangamawadimath, Varanasi. (U.P.)

Compilation by :
Dr. Mahadeva Shivacharya Swamiji, Babaleshwar

Published by,
Shree Jagadguru Panchacharya Manava Dharma Samsthe
Bangalore - 53

Revised First Edition : 2009
Reprint : 2014
Reprint : 2016

Copies : 2000



ಗ್ರಂಥ ದೊರೆಯುವ ಸ್ಥಳ :
ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ
ಸಂಭಾಪೂರ ರಸ್ತೆ, ಗದಗ – ೫೮೨ ೧೦೧
Mobile : 9880944739, 9482381001
E-mail : guruk1008@gmail.com

ಶ್ರೀ ಅಮರೇಶ್ವರಮಠ ಗುಳೇದಗುಡ್ಡ ಜಿ. ಬಾಗಲಕೋಟ
ಫೋನ ನಂ. 08357 - 250564

ಪರಿಷ್ಕೃತ ಪ್ರಥಮ ಮುದ್ರಣ ೨೦೦೯
ಮರುಮುದ್ರಣ : ೨೦೧೪
ಮರುಮುದ್ರಣ : ೨೦೧೬

ಪ್ರತಿಗಳು : ೨೦೦೦



ಬೆಲೆ : ರೂ. ೫೦೦/- (ಸಂಪುಟ ೧ ಮತ್ತು ೨)

೧೮.೬ ಮ್ಯಾಪಲಿಥೋ ೭೦ GSM

ಮುದ್ರಕರು :
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ – 582 101.
Email : chaitanyaoffset@gmail.com

ಶ್ರೀ ಜಗದ್ಗುರು ರೇಣುಕಾಚಾರ್ಯ ಭಗವತ್ಪಾದರು

**ಶ್ರೀ ಅಗಸ್ತ್ಯಮಹರ್ಷಿಗೆ ಉಪದೇಶ ನೀಡುತ್ತಿರುವರು**



ಶ್ರೀ ಜಗದ್ಗುರು ಪ್ರಸನ್ನ ಪಂಚ ಪೀಠಾಧೀಶ್ವರರು







ಶ್ರೀ ಕಾಶೀ ಪೀಠದ ಸರ್ವ ಪೂರ್ವಾಚಾರ್ಯರ ದಿವ್ಯ ಸನ್ನಿಧಿಗೆ

## ಸಮರ್ಪಣೆ



**ಶ್ರೀ ಶ್ರೀ ಶ್ರೀ ೧೦೦೮ ಅಂ. ಜಗದ್ಗುರು**
**ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ**
**ಪುಣ್ಯಾರಾಧನೆಯ ರಜತಮಹೋತ್ಸವ ಹಾಗೂ**
**ಸರ್ವ ಪೂರ್ವಾಚಾರ್ಯರ ಆರಾಧನಾ ಮಹೋತ್ಸವದ ನಿಮಿತ್ಯ ಅರ್ಪಣೆ**

ದಿನಾಂಕ : 27-09-2014 ಶನಿವಾರ



ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು

ಡಾ॥ ಚಂದ್ರಶೇಖರ ಶಿವಾಚಾರ್ಯ ಮಹಾಸನ್ನಿಧಿಯವರ

# ಪೀಠಾರೋಹಣದ ರಜತಮಹೋತ್ಸವ

(ಕಾರ್ತಿಕ ಬಹುಳ ಪಂಚಮಿ) ದಿನಾಂಕ : 11-11-2014 ಮಂಗಳವಾರ

## ಲಿಂಗಸ್ಥಲಗಳೊಳಗಣ ಬೆಳಗು...........!

ಸಂಪುಟ ಒಂದರಲ್ಲಿ ಶ್ರೀಮತ್ ಕಾಶೀ ಜಗದ್ಗುರುಗಳವರು ವಿದ್ವತ್‌ಪೂರ್ಣವಾಗಿ, ಆದರೆ ಸುಲಲಿತವಾಗಿ ನಿರೂಪಿಸಿದ ಸಿದ್ಧಾಂತ ಶಿಖಾಮಣಿಯ ಸಮಗ್ರ ಪರಿಚಯವನ್ನು ಹಾಗೂ ಅಂಗಸ್ಥಲದ ಅವಾಂತರಸ್ಥಲಗಳ ಪರಿಪೂರ್ಣ ಪರಿಚಯವನ್ನು ಸಹೃದಯೀ ಓದುಗರು ಸವಿದವರಾಗಿದ್ದೀರಿ.

ಇದೀಗ ಜಿಜ್ಞಾಸು ಓದುಗರು ದ್ವಿತೀಯ ಸಂಪುಟದ ಪುಟಗಳನ್ನು ತೆರೆಯಲಿದ್ದೀರಿ. ಲಿಂಗಸ್ಥಲದ ಐವತ್ತೇಳು ಅವಾಂತರಸ್ಥಲಗಳಲ್ಲಿ ಶುದ್ಧಾಂಗನಾದ ವೀರಶೈವನು ಅದು ಹೇಗೆ ಲಿಂಗಾಂಗ ಸಾಮರಸ್ಯವನ್ನು ಸಾಧಿಸಬಲ್ಲ ಎಂಬುದನ್ನು ಶ್ರೀಕಾಶೀ ಜಗದ್ಗುರು ಮಹಾಸನ್ನಿಧಿಯರು ಹೃದಯಂಗಮವಾಗಿ ನಿರೂಪಿಸಿದುದನ್ನು, ಮನೋವೈಜ್ಞಾನಿಕ ವಿಕಾಸದ ತಳಹದಿಯ ಮೇಲೆ ಅಂಗನು ಕ್ರಮಕ್ರಮವಾಗಿ ಲಿಂಗನಾಗುವ ತತ್ತ್ವವಡಗಿದುದನ್ನು ಕಾಣಬಲ್ಲಿರಿ. ಅರಿಯಬಲ್ಲಿರಿ ಸಾವಧಾನದಿಂದ ಅಧ್ಯಯನಗೈದಲ್ಲಿ ಸಿದ್ಧಾಂತದಲ್ಲಡಗಿದ ಸತ್ಯಾರ್ಥವು ಮನದಟ್ಟಾಗುವುದು. ಅಲ್ಲದೆ ಮಹಾಬೆಳಗಿನ ದರ್ಶನವಾಗುವುದು.

ಅ.ಸಿ.ಹಿರೇಮಠ

# ಗ್ರಂಥಾಂತರಂಗ

## ಲಿಂಗಸ್ಥಲಗಳು ೪೫-೧೦೧

# ಪಂಚದಶ ಪರಿಚ್ಛೇದವು

## (ಲಿಂಗಸ್ಥಲಗಳು)

ಆಶೀರ್ವಚನ-೧

## ದೀಕ್ಷಾಗುರುಸ್ಥಲ

ವಿಶ್ವೇಶಲಿಂಗ ಸಂಭೂತಂ ವಿಶ್ವವಿದ್ಯಾವಿಬೋಧಕಂ।
ವಿಶ್ವವಂದ್ಯಂ ಸದಾವಂದೇ ವಿಶ್ವಾರಾಧ್ಯಂ ಜಗದ್ಗುರುಮ್ ॥

ಕಾಶೀ ಜ್ಞಾನಸಿಂಹಾಸನದ ಆದಿಜಗದ್ಗುರು ವಿಶ್ವಾರಾಧ್ಯರನ್ನೇ ಮೊದಲುಗೊಂಡು ವಿಶ್ವೇಶ್ವರ ಶಿವಾಚಾರ್ಯ ಪರ್ಯಂತವಾದ ಗುರುಪರಂಪರೆಗೆ ಅನಂತ ಪ್ರಣಾಮಗಳನ್ನು ಸಮರ್ಪಿಸಿ,

ಜಿಜ್ಞಾಸುಗಳಾದ ಸದ್ಭಕ್ತರೇ !

ಇಲ್ಲಿಯವರೆಗೆ ನೀವುಗಳೆಲ್ಲ ಶ್ರೀಸಿದ್ಧಾಂತ ಶಿಖಾಮಣಿಯ ಅಂಗಷಟ್ ಸ್ಥಲಾಂತರ್ಗತಗಳಾದ ನಲ್ವತ್ನಾಲ್ಕು ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸಿದ್ದೀರಿ. ಇನ್ನು ಮುಂದೆ ಲಿಂಗಷಟ್‌ಸ್ಥಲಾಂತರ್ಗತಗಳಾದ ಐವತ್ತೇಳು ಅವಾಂತರ ಸ್ಥಲಗಳ ಮೇಲೆ ವಿವೇಚಿಸಲಾಗುವುದು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನೇ ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ದಾರ್ಶನಿಕ ಗ್ರಂಥವಾದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ, ವೀರಶೈವ ಸಾಧಕನು ಮುಕ್ತಿಸ್ಥಿತಿಯನ್ನು ಪಡೆಯಲೋಸುಗ ಲಿಂಗಷಟ್‌ಸ್ಥಲವನ್ನು ಉಪದೇಶಿಸಲಿದ್ದಾರೆ.

ಶಿವಾದ್ವೈತ ಸಿದ್ಧಾಂತದ ಪ್ರಕಾರ ಸೃಷ್ಟಿಯ ಆದಿಯಲ್ಲಿರುವ ಮತ್ತು ಈ ಪ್ರಪಂಚದ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ಕಾರಣೀಭೂತವಾದ ಸ್ಥಲತತ್ತ್ವವೇ ತನ್ನ ವಿನೋದಕ್ಕಾಗಿ ಅಂಗ ಮತ್ತು ಲಿಂಗರೂಪದಲ್ಲಿ ಲೀಲಾವಿಗ್ರಹವನ್ನು ತಾಳಿ ಲೀಲೆಯನ್ನು ಮಾಡುತ್ತಿರುತ್ತದೆ. ಈ ಲೀಲೆಯಲ್ಲಿ ಅಂಗನಾಗಿ ವ್ಯವಹರಿಸುವ ಜೀವಾತ್ಮನು ತನ್ನ ಸಾಧನೆಯಿಂದ ಪುನಃ ಲಿಂಗರೂಪವನ್ನು ಹೊಂದಿದಾಗಲೇ ಅವನಿಗೆ ಶಾಶ್ವತವಾದ ಶಾಂತಿಯು ಪ್ರಾಪ್ತವಾಗುವುದು. ಅಂತೆಯೇ ಪೂಜ್ಯಪಾದರು ಸಾಧಕನು ಜೀವನ್ಮುಕ್ತಿಯ ಸ್ಥಿತಿಯನ್ನು ಪ್ರತಿಪಾದಿಸುವ ಲಿಂಗಷಟ್‌ಸ್ಥಲಾಂತರ್ಗತಗಳಾದ ಅವಾಂತರ ಲಿಂಗಸ್ಥಲಗಳ ಬಗ್ಗೆ ಉಪದೇಶಿಸಲು ಉದ್ಯುಕ್ತರಾಗಿ

ಷಟ್‌ಸ್ಥಲೋಕ್ತಸದಾಚಾರ ಸಂಪನ್ನಸ್ಯ ಯಥಾಕ್ರಮಮ್ ।
ಲಿಂಗಸ್ಥಲಾನಿ ಕಥ್ಯಂತೇ ಜೀವನ್ಮುಕ್ತಿಪರಾಣಿಚ ॥

(ಸಿ.ಶಿ.೧೫-೧)

ಹೀಗೆ ಬೋಧಿಸಿದ್ದಾರೆ. ಹೇ ಅಗಸ್ತ್ಯನೇ ! ಷಟ್‌ಸ್ಥಲ ಸಿದ್ಧಾಂತದಲ್ಲಿ ಉಪದೇಶಿಸಿದ ಸದಾಚಾರ ಸಂಪನ್ನನಾದ ಮತ್ತು ಐಕ್ಯಸ್ಥಿತಿಯನ್ನು ಪಡೆದ ಸಾಧಕನಿಗೆ ಇನ್ನುಮುಂದೆ ಜೀವನ್ಮುಕ್ತಿಯ ಸ್ಥಿತಿಯನ್ನು ತಿಳಿಯಪಡಿಸುವ ಲಿಂಗಸ್ಥಲಗಳ ಬಗ್ಗೆ ಉಪದೇಶಿಸೋಣ ವಾಗುವುದು. ಚಿತ್ತವಿಟ್ಟು ಆಲಿಸು. ಪೂಜ್ಯಪಾದರ ಈ ಉಪದೇಶವನ್ನು ಆಲಿಸಿದ ಅಗಸ್ತ್ಯನು–

ಭಕ್ತಾದ್ಯೈಕ್ಯಾವಸಾನಾನಿ ಷಡುಕ್ತಾನಿ ಸ್ಥಲಾನಿ ಚ ।
ಲಿಂಗಸ್ಥಲಾನಿಕಾನೀಹ ಕಥ್ಯಂತೇ ಕತಿವಾ ಪುನಃ ॥

(ಸಿ.ಶಿ. ೧೫–೨)

ಹೀಗೆ ಪ್ರಶ್ನೆಗೈಯ್ಯುತ್ತಾನೆ. ತಾತ್ಪರ್ಯವೇನೆಂದರೆ, ಭಕ್ತಸ್ಥಲವನ್ನೇ ಮೊದಲುಗೊಂಡು ಐಕ್ಯಸ್ಥಲ ಪರ್ಯಂತಗಳಾದ ಷಟ್‌ಸ್ಥಲಗಳ ಬಗ್ಗೆ ತಾವು ಈ ಪೂರ್ವದಲ್ಲಿ ಉಪದೇಶಿಸಿದ್ದೀರಿ. ಹೀಗಿದ್ದೂ ಈ ಲಿಂಗಸ್ಥಲಗಳೆಂದರೆ ಯಾವುವು ? ಮತ್ತು ಅವು ಎಷ್ಟು? ಎಂಬುದನ್ನು ತಾವು ತಿಳುಹಿಸಬೇಕು. ಆಗ ಪೂಜ್ಯಪಾದರು ಅಗಸ್ತ್ಯನನ್ನು ಕುರಿತು–

ಗುರ್ವಾದಿ ಜ್ಞಾನ ಶೂನ್ಯಾಂತಾ ಭಕ್ತಾದಿಸ್ಥಲ ಸಂಶ್ರಿತಾಃ ॥
ಸ್ಥಲಭೇದಾಃ ಪ್ರಕೀರ್ತ್ಯಂತೇ ಪಂಚಾಶತ್ಸಪ್ತಚಾಧುನಾ॥

(ಸಿ.ಶಿ. ೧೫–೩)

ಈ ವಿಧವಾಗಿ ಉಪದೇಶಿಸಿದ್ದಾರೆ. ಹೇ ಅಗಸ್ತ್ಯನೇ! ದೀಕ್ಷಾಗುರು ಸ್ಥಲವನ್ನೇ ಮೊದಲುಗೊಂಡು ಜ್ಞಾನಶೂನ್ಯಸ್ಥಲ ಪರ್ಯಂತಗಳಾದ ಐವತ್ತೇಳು ಸ್ಥಲಗಳಿಗೆ ಲಿಂಗಸ್ಥಲಗಳೆಂಬುದಾಗಿ ಕರೆಯುತ್ತಾರೆ. ಇವುಗಳಲ್ಲಿಯೂ ಸಹ ಪುನಃ ಷಟ್‌ಸ್ಥಲ ವಿಭಾಜನೆಯನ್ನು ಮಾಡಲಾಗುವುದು. ಅಂದರೆ ಈ ಲಿಂಗಸ್ಥಲದಲ್ಲಿಯೂ ಸಹ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬ ವಿಭಾಗಗಳನ್ನು ಮಾಡಲಾಗುವುದು. ಮೊದಲಿನ ಷಟ್‌ಸ್ಥಲಗಳು ಮುಕ್ತಿಗೆ ಸೋಪಾನಗಳಾಗಿದ್ದರೆ ಈ ಲಿಂಗಷಟ್‌ಸ್ಥಲಗಳು ಜೀವನ್ಮುಕ್ತಿಯ ಆನಂದವನ್ನು ಅನುಭವಿಸಲು ಸಾಧನಗಳಾಗುವವು. ಇದುವೇ ಇವೆರಡರಲ್ಲಿಯ ತಾರತಮ್ಯವು ಎಂಬುದಾಗಿ ಉಪದೇಶಿಸಿದ ಪೂಜ್ಯರು ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದಲ್ಲಿ ಬರುವ ಒಂಭತ್ತು ವಿಧವಾದ ಅವಾಂತರ ಸ್ಥಲಗಳ ಹೆಸರುಗಳನ್ನು –

ಆದೌನವಸ್ಥಲಾನೀಹ ಭಕ್ತಸ್ಥಲ ಸಮಾಶ್ರಯಾತ್।
ಕಥ್ಯಂ ತೇ ಗುಣಸಾರೇಣ ನಾಮಾನ್ಯೇಷಾಂ ಪೃಥಕ್‌ಶೃಣು ॥

ದೀಕ್ಷಾಗುರುಸ್ಥಲಂ, ಪೂರ್ವಂ ತತಃ ಶಿಕ್ಷಾಗುರುಸ್ಥಲಮ್ ।
ಪ್ರಜ್ಞಾಗುರು ಸ್ಥಲಂ ಚಾಥಕ್ರಿಯಾ ಲಿಂಗಸ್ಥಲಂ ತತಃ ॥

ಭಾವಲಿಂಗಸ್ಥಲಂ ಚಾಥ ಜ್ಞಾನಲಿಂಗಸ್ಥಲಂ ತತಃ ॥
ಸ್ವಯಂ ಪರಂ ಚರಂ ಚೇತೀ ತೇಷಾಂ ಲಕ್ಷಣಮುಚ್ಯತೇ ॥

(ಸಿ. ಶಿ. ೧೫–೪–೬)

ಈ ವಿಧವಾಗಿ ಉಪದೇಶಿಸಿದ್ದಾರೆ. ಹೇ ಅಗಸ್ತ್ಯನೇ ! ಲಿಂಗಷಟ್ ಸ್ಥಲಾಂತರ್ಗತವಾದ ಭಕ್ತಸ್ಥಲದಲ್ಲಿ ಒಂಭತ್ತು ವಿಧವಾದ ಆವಾಂತರ ಸ್ಥಲಗಳಿರುತ್ತವೆ. ಅವುಗಳ ಹೆಸರುಗಳು ಈ ವಿಧವಾಗಿ ಇರುತ್ತವೆ. ದೀಕ್ಷಾಗುರುಸ್ಥಲ, ಶಿಕ್ಷಾಗುರುಸ್ಥಲ, ಜ್ಞಾನಗುರುಸ್ಥಲ, ಕ್ರಿಯಾಲಿಂಗಸ್ಥಲ, ಭಾವಲಿಂಗಸ್ಥಲ, ಜ್ಞಾನಲಿಂಗಸ್ಥಲ, ಸ್ವಯಸ್ಥಲ, ಚರಸ್ಥಲ ಮತ್ತು ಪರಸ್ಥಲಗಳೇ ಈ ಆವಾಂತರಸ್ಥಲಗಳು. ಇವುಗಳ ವಿಶ್ಲೇಷಣೆಯನ್ನು ಕ್ರಮವಾಗಿ ಮಾಡಲಾಗುವುದು.

ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಮೊದಲ ಅವಾಂತರ ಸ್ಥಲವೇ ದೀಕ್ಷಾಗುರು ಸ್ಥಲವು. ಗುರುವಿನ ಕೃಪೆಯಿಲ್ಲದೆ ಶಿವಕೃಪೆಯು ಪ್ರಾಪ್ತವಾಗದು, ಅಂತೆಯೇ ಶಿವಾನುಗ್ರಹವನ್ನು ಪಡೆಯುವ ಮೊದಲು ಗುರು ಅನುಗ್ರಹವನ್ನು ಪಡೆಯುವುದು ಅತ್ಯಾವಶ್ಯಕವಾದುದು. ತನ್ನ ಸಾನ್ನಿಧ್ಯಕ್ಕೆ ಬಂದ ಮತ್ತು ಶರಣಾಗತನಾದ ಶಿಷ್ಯನಿಗೆ ಸದ್ಗುರುಗಳು 'ದೀಕ್ಷಾ' ಎಂಬ ಸಂಸ್ಕಾರವನ್ನು ಅನುಗ್ರಹಿಸುತ್ತಾರೆ. ಹೀಗೆ ಗುರುದೀಕ್ಷೆಯನ್ನು ಬೋಧಿಸುವ ಮತ್ತು ದೀಕ್ಷೆಯನ್ನನುಭವಿಸುವ ಗುರುವಿನ ಮಹತಿಯನ್ನು ಬೋಧಿಸುವ ಸ್ಥಲವೇ ದೀಕ್ಷಾಗುರು ಸ್ಥಲವು. ಅದನ್ನೇ ಪೂಜ್ಯಪಾದರು–

ದೀಯತೇ ಪರಮಂ ಜ್ಞಾನಂ ಕ್ಷೀಯತೆ ಪಾಶಬಂಧನಮ್।
ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾಗುರುಃ ಸ್ಮೃತಃ॥

(ಸಿ.ಶಿ. ೧೫–೭)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಉತ್ಕೃಷ್ಟವಾದ ಶಿವಜ್ಞಾನವನ್ನುಂಟುಮಾಡುವ ಮತ್ತು ಮಲ, ಮಾಯಾದಿಪಾಶಬಂಧನವನ್ನು ಕತ್ತರಿಸಿಹಾಕುವ ಸಂಸ್ಕಾರ ವಿಶೇಷವೇ ದೀಕ್ಷೆಯೆಂದು ಕರೆಯಲ್ಪಡುತ್ತದೆ. ಇಂತಹ ಜ್ಞಾನಕ್ರಿಯಾತ್ಮಕವಾದ ದೀಕ್ಷಾ ಸಂಸ್ಕಾರವನ್ನು ಅನುಗ್ರಹಿಸುವ ಜೀವನ್ಮುಕ್ತನಾದ ಗುರುವಿಗೆ ದೀಕ್ಷಾಗುರು ಎಂಬುದಾಗಿ ಕರೆಯುತ್ತಾರೆ. ಗುರು ಶಬ್ದದಲ್ಲಡಗಿರುವ ಅರ್ಥಗೌರವವನ್ನು ಅದೆಷ್ಟು ವಿವರಿಸಿದರೂ ಕಡಿಮೆಯೇ. ಅಕ್ಷರಕ್ಕೂ ಅರ್ಥವನ್ನು ಹೇಳುವ ಭಾಷೆಯೆಂದರೆ ಸಂಸ್ಕೃತವೇ, ಈ ಭಾಷೆಯ ತಜ್ಞರು 'ಗುರು' ಎಂಬ ಎರಡಕ್ಷರದ ಅರ್ಥವನ್ನು ಅಜ್ಞಾನ ದೂರಕನೆಂದು ಬೋಧಿಸಿದ್ದಾರೆ. ತಾನು ಮಾಡುವ ಹಾಗೂ ಉಪದೇಶದ ಸಾಮರ್ಥ್ಯದಿಂದ ಶಿಷ್ಯರ ಹೃದಯದಲ್ಲಡಗಿದ ಅನಾದಿಕಾಲದ ಅಜ್ಞಾನವನ್ನು ದೂರಮಾಡುವ ಸಾಮರ್ಥ್ಯವು ಸದ್ಗುರುವಿನಲ್ಲಿರುತ್ತದೆ.

ಆಕಳು, ಎತ್ತು ಮುಂತಾದ ಪ್ರಾಣಿಗಳನ್ನು ಹಗ್ಗದಿಂದ ಕಟ್ಟಿ ಹಾಕುತ್ತೇವೆ. ಹೀಗೆ ಪಾಶಬದ್ಧಗಳಾದ ಈ ಜೀವಿಗಳಿಗೆ ಪಶುಗಳೆಂಬುದಾಗಿ ಕರೆಯುವುದುಂಟು. ಶಾಸ್ತ್ರದೃಷ್ಟಿಯಿಂದ ಅವಲೋಕಿಸಿದಾಗ ಮನುಷ್ಯನೂ ಸಹ ಪಶುವೇ ಆಗಿರುತ್ತಾನೆ. ಈತನಿಗೆ ಮೂರು ವಿಧಗಳಾದ ಪಾಶಗಳು ಕಟ್ಟಲ್ಪಟ್ಟಿರುತ್ತವೆ. ಅವುಗಳಿಗೇನೆ ಆಣವಮಲ, ಮಾಯಾಮಲ ಮತ್ತು ಕಾರ್ಮಿಕಮಲಗಳೆಂಬುದಾಗಿ ಕರೆಯುತ್ತಾರೆ. ಇಚ್ಛಾಶಕ್ತಿ ಸಂಕೋಚವೇ ಆಣವಮಲವು, ಜ್ಞಾನಶಕ್ತಿ ಸಂಕೋಚವೇ ಮಾಯಾಮಲವು, ಕ್ರಿಯಾಶಕ್ತಿಸಂಕೋಚವೇ ಕಾರ್ಮಿಕಮಲವು. ಈಶ್ವರನಲ್ಲಿರುವ ಈ ಶಕ್ತಿಗಳು ಪೂರ್ಣ

ವಿಕಸಿತ ಸ್ವರೂಪವದಲ್ಲಿರೋಣದರಿಂದ ಅವನಿಗೆ ಈ ಮಲಪಾಶಗಳ ಬಂಧನವಿರುವುದಿಲ್ಲ. ಆದರೆ ಜೀವಾತ್ಮನಲ್ಲಿರುವ ಇಚ್ಛಾದಿಶಕ್ತಿಗಳು ಸಂಕುಚಿತವಾಗಿರೋಣದರಿಂದ ಇವನು ಪಾಶಬದ್ಧನಾಗಿ ಪಶುವೆಂಬುದಾಗಿ ಕರೆಯಿಸಿಕೊಳ್ಳುತ್ತಿದ್ದಾನೆ. ಪಶುಗಳಿಗೆ ಕಟ್ಟಲ್ಪಟ್ಟ ಹಗ್ಗವು ಪಶುಗಳಿಂದ ಬಿಡಿಸಿಕೊಳ್ಳಲಾಗುವುದಿಲ್ಲ, ಅವುಗಳನ್ನು ಪಾಶಮುಕ್ತಗೊಳಿಸಲು ಬೇರೊಬ್ಬರ ಸಹಕಾರ ಅವಶ್ಯಕವಿರುವಂತೆ ತ್ರಿವಿಧ ಪಾಶಬದ್ಧರಾಗಿ ಸಂಸಾರದಲ್ಲಿ ಪರಿತಪಿಸುತ್ತಿರುವ ಜೀವಿಗಳ ಈ ಪಾಶವಿಮೋಚನೆಗೆ ಸದ್ಗುರುವೇ ಮುಖ್ಯ ಕಾರಣನು. ಎಲ್ಲಿಯವರೆಗೆ ಈ ಜೀವರು ಸದ್ಗುರುವಿಗೆ ಶರಣಾಗುವುದಿಲ್ಲವೋ ಅಲ್ಲಿಯವರೆಗೆ ಇವರ ಪಾಶವೀಯ ಗುಣಗಳು ದೂರವಾಗಲಾರವು. ಅಂತೆಯೇ ಇಂಥವರನ್ನು ಕಂಡೇ ''ಮನುಷ್ಯರೂಪೇಣ ಮೃಗಾಶ್ಚರಂತಿ'' ಎಂಬುದಾಗಿ ಜ್ಞಾನಿಗಳು ಹೇಳಿದ್ದಾರೆ. ಆಹಾರ, ನಿದ್ರೆ, ಭಯ ಮತ್ತು ಮೈಥುನಗಳು ಪಶು ಹಾಗೂ ಮನುಷ್ಯರಲ್ಲಿ ಸಮಾನವಾಗಿ ತೋರಿಬರುವ ಗುಣಧರ್ಮಗಳಾಗಿವೆ. ತನ್ನ ಜೀವನದುದ್ದಕ್ಕೂ ಇವುಗಳನ್ನೇ ಮಾಡುತ್ತಿರುವ ಮನುಷ್ಯನು ಮನುಷ್ಯನೆಂಬುದಾಗಿ ಕರೆಯಿಸಿಕೊಳ್ಳದೇ 'ಮನುಷ್ಯಪಶು' ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ.

ಆತ್ಮ-ಪರಮಾತ್ಮರ ಜ್ಞಾನವನ್ನು ಮಾಡಿಕೊಂಡಾಗ ಮಾತ್ರ ಮನುಷ್ಯನು ಪಶುವಿಗಿಂತಲೂ ಭಿನ್ನವಾಗಿ ತೋರುವನು. ಹಾಗಾಗಬೇಕಾದಾಗ ಗುರು ಶರಣಾಗತಿಯ ಹೊರತಾಗಿ ಬೇರೊಂದು ಮಾರ್ಗವಿಲ್ಲ. ಶಿಷ್ಯನ ಈ ಪಾಶವೀಯ ಸಂಸ್ಕಾರಗಳನ್ನು ದೂರಮಾಡುವದಕ್ಕಾಗಿ ಸದ್ಗುರು ಶಿಷ್ಯನಲ್ಲಿಯ ಶಕ್ತಿಪಾತ ಚಿಹ್ನೆಗಳನ್ನು ಪರೀಕ್ಷಿಸಿ ಅವನಿಗೆ ದೀಕ್ಷಾಸಂಸ್ಕಾರವನ್ನು ಅನುಗ್ರಹಿಸುತ್ತಾನೆ. ಗುರುವಿನಿಂದ ಅನುಗ್ರಹಿಸಲ್ಪಟ್ಟ ವೇಧಾ ದೀಕ್ಷಾಸಂಸ್ಕಾರದಲ್ಲಿ ಶಿಷ್ಯನ ಆಣವ ಪಾಶವು ನಿವೃತ್ತವಾಗುವುದು. ಮಂತ್ರದೀಕ್ಷಾ ಸಂಸ್ಕಾರದಿಂದ ಮಾಯಾಪಾಶಗಳ ನಿವೃತ್ತಿಯಾಗುವುದು. ಇದೇ ಪ್ರಕಾರ ಕ್ರಿಯಾದೀಕ್ಷಾ ಸಂಸ್ಕಾರದಿಂದ ಕಾರ್ಮಿಕಪಾಶವು ಪರಿಹರಿಸಲ್ಪಡುವುದು. ಹೀಗೆ ಶಿಷ್ಯನ ತ್ರಿವಿಧ ಪಾಶಗಳ ನಿವೃತ್ತಿಗಾಗಿ ತ್ರಿವಿಧ ದೀಕ್ಷಾ ಸಂಸ್ಕಾರವನ್ನು ಅನುಗ್ರಹಿಸುವ ಗುರುವಿಗೇನೇ 'ದೀಕ್ಷಾ ಗುರು' ಎಂಬುದಾಗಿ ಕರೆಯುವರು.

ಗುರುವಿಗೆ ಸಮರ್ಪಿಸುವ ಪೂರ್ವದಲ್ಲಿ ಮಾಂಸಪಿಂಡವೆಂದು ಕರೆಯಿಸಿಕೊಳ್ಳುವ ಈ ಶರೀರಾದಿಗಳು ದೀಕ್ಷಾಸಂಸ್ಕಾರವನ್ನು ಹೊಂದಿದನಂತರ ಮಂತ್ರಪಿಂಡವೆಂಬುದಾಗಿ ಕರೆಯಲ್ಪಡುತ್ತವೆ. ಇದಕ್ಕೇನೇ ಶರಣರು 'ಪ್ರಸಾದ ಕಾಯ' ಎಂಬುದಾಗಿ ಕರೆದಿದ್ದಾರೆ. ಯಾವುದೇ ಪದಾರ್ಥವನ್ನು ಸದ್ಗುರುವಿಗೆ ಇಲ್ಲವೆ ಈಶ್ವರನಿಗೆ ಸಮರ್ಪಿಸಿದಾಗ ಅದು ಪ್ರಸಾದವಾಗಿ ಪರಿಣಮಿಸುತ್ತದೆ. ಯಾವುದು ಪ್ರಸಾದವೆಂದು ಕರೆಯಿಸಿಕೊಳ್ಳುವುದೋ ಅದರ ಮೇಲಿನ ನಮ್ಮ ಮಮತ್ವ ಬುದ್ಧಿಯು ಇಲ್ಲದಾಗಿರುತ್ತದೆ. ಅಂದಾಗ ದೀಕ್ಷಾ ಸಂಸ್ಕಾರವನ್ನು ಪಡೆದ ಸಾಧಕನು ದೇಹಾದಿಗಳ ಮೇಲೆ ಮಮತ್ವ ಭಾವನೆಯನ್ನು ತ್ಯಾಗಮಾಡಿ ಇದೆಲ್ಲವೂ ಈಶ್ವರನದೇ, ಈಶ್ವರನಿಗಾಗಿಯೇ ಇದು ಮೀಸಲವಾದದ್ದು ಎಂಬ ಭಾವನೆಯನ್ನಿರಿಸಿಕೊಂಡು ತನ್ನ ಸ್ಥೂಲ, ಸೂಕ್ಷ್ಮ ಹಾಗೂ ಕಾರಣ ಶರೀರಗಳಿಂದ ಗುರು ಹಾಗೂ ಈಶ್ವರನ ಅನುಗ್ರಹಕ್ಕೆ ಪಾತ್ರವಾಗುವ ಉತ್ತಮ ಕಾರ್ಯಗಳನ್ನೇ ಮಾಡುತ್ತಿರಬೇಕು. ಅಂದಾಗಲೇನೇ 'ದೀಕ್ಷಾ' ಪ್ರಯೋಜನವು ಸಿದ್ಧವಾಗುವುದು.

ಇಂತಹ ದೀಕ್ಷಾಸಂಸ್ಕಾರವನ್ನು ಕೊಡುವಂತಹ ಅಧಿಕಾರವು ಷಟ್‌ಸ್ಥಲ ಬ್ರಹ್ಮನಿಷ್ಠನಾದ ಜೀವನ್ಮುಕ್ತ ಸದ್ಗುರುವಿಗೇನೇ ಇರುತ್ತದೆಂಬುದನ್ನು ತಿಳಿಸುವ ಸ್ಥಲವೇ ದೀಕ್ಷಾಗುರುಸ್ಥಲ. ಈ ವಿಷಯಕವಾದ ಇನ್ನೂ ಹೆಚ್ಚಿನ ವಿಚಾರವನ್ನು ಮುಂದಿನ ಆಶೀರ್ವಚನದಲ್ಲಿ ತಿಳಿಸಲಾಗುವುದೆಂಬುದಾಗಿ ಸೂಚಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ಆಗಷ್ಟ್ ೧೯೮೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೨

# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಶ್ರವಣಮಾಡುತ್ತಿದ್ದೀರಿ. ಜಗತ್ತಿನಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ಮನುಷ್ಯನಿಗೂ ಈಶ್ವರನ ದರ್ಶನವನ್ನು ಪಡೆಯಬೇಕೆಂಬ ಬಯಕೆ ಇದ್ದೇ ಇರುತ್ತದೆ. ಆದರೆ ಈಶ್ವರನು ಮಾಯಾಶಕ್ತಿ ವಿಶಿಷ್ಟನಿರುವುದರಿಂದ ಸಹಜವಾಗಿ ಪ್ರತಿಯೊಬ್ಬರೂ ಅವನನ್ನು ಕಾಣಲು ಸಾಧ್ಯವಾಗುವುದಿಲ್ಲ. ಅಂತೆಯೇ ಆ ಕಾಣದಿರುವ ದೇವನನ್ನು ತೋರಿಸಿಕೊಡುವವನು ಸದ್ಗುರುವೇ ಆಗಿದ್ದಾನೆ. ಅಂತೆಯೇ ಶಾಸ್ತ್ರಗಳು ಗುರುವನ್ನೇ ಪ್ರತ್ಯಕ್ಷ ಪರಮಾತ್ಮನೆಂಬುದಾಗಿ ಉಪದೇಶಿಸಿದ್ದುಂಟು. ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ಈ ದೀಕ್ಷಾಗುರುಸ್ಥಲದಲ್ಲಿ ಗುರುವಿನ ಸ್ವರೂಪವನ್ನು ಗುರುವೆಂಬೆರಡಕ್ಷರಗಳ ಅರ್ಥ ವಿವರಣೆಯೊಂದಿಗೆ ಇಲ್ಲಿ ತಿಳಿಯಪಡಿಸಿದ್ದಾರೆ. ಅದೆಂತೆಂದೊಡೆ–

ಗುಣಾತೀತಂ ಗುಕಾರಂಚ ರೂಪಾತೀತಂ ರುಕಾರಕಮ್ ।<br>
ಗುಣಾತೀತಮರೂಪಂ ಚ ಯೋ ದದ್ಯಾತ್ಸಗುರುಃ ಸ್ಮೃತಃ ॥

(ಸಿ.ಶಿ. ೧೫ – ೮)

ಗುರು ಎಂಬ ಈ ಶಬ್ದದಲ್ಲಿ ಎರಡು ಅಕ್ಷರಗಳಿವೆ 'ಗು' ಎಂದರೆ ಗುಣಾತೀತವೆಂದರ್ಥ 'ರು' ಎಂದರೆ ರೂಪಾತೀತವೆಂದರ್ಥ. ಹೀಗೆ ಗುಣಾತೀತನೂ, ರೂಪಾತೀತನೂ ಆದ ಅರ್ಥಾತ್ ನಿರ್ಗುಣ ನಿರಾಕಾರನಾದ ಪರಮಾತ್ಮ ಸ್ವರೂಪವನ್ನು ತಿಳಿಸಿ ಕೊಡಬಲ್ಲ ಸಾಮರ್ಥ್ಯವುಳ್ಳವನೇ ಗುರುವು.

ಪ್ರಕೃತಿಯಲ್ಲಿ ಸತ್ವ, ರಜ ಮತ್ತು ತಮಸ್ಸೆಂಬ ಮೂರು ಗುಣಗಳಿರುತ್ತವೆ. ಅದರಂತೆ ಪ್ರಕೃತಿಯಿಂದ ಜನಿಸಿದ ಪ್ರಪಂಚದಲ್ಲಿ ಮತ್ತು ಪ್ರಪಂಚದಲ್ಲಿ ಜನಿಸಿದ ಪ್ರತಿಯೊಬ್ಬ ವ್ಯಕ್ತಿಯ ಅಂತಃಕರಣದಲ್ಲಿ ಈ ಮೂರೂ ಗುಣಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇದ್ದೇ ಇರುತ್ತವೆ. ಅಂತೆಯೇ ಸಮಸ್ತ ಸೃಷ್ಟಿಯೆಲ್ಲ ಗುಣಮಯವಾಗಿದೆ. ಈ ಗುಣಗಳೇ ಸೃಷ್ಟಿಯ ವ್ಯವಹಾರಕ್ಕೆ ಕಾರಣಗಳೂ ಆಗಿರುತ್ತವೆ. ಸತ್ವಗುಣದಿಂದಾಗಿ ಮನುಷ್ಯನು ಶಾಂತನೂ, ಧೀರನೂ, ದೈವೀಭಕ್ತಿಸಂಪನ್ನನೂ ಆಗುತ್ತಾನೆ. ರಜೋ ಗುಣದ ಪರಿಣಾಮದಿಂದಾಗಿ ಕಾಮಿಯೂ, ಕ್ರೋಧಿಯೂ, ಸಾಂಸಾರಿಕ ವ್ಯವಹಾರದಲ್ಲಿ ಅತ್ಯಾಸಕ್ತಿಯುಳ್ಳವನೂ ಆಗುತ್ತಾನೆ. ಅದರಂತೆ ತಮೋಗುಣದ ಪ್ರಭಾವದಿಂದಾಗಿ ಆಲಸಿಯೂ, ಮೂಢನೂ, ಕಲಹಪ್ರಿಯನೂ ಆಗುತ್ತಾನೆ. ಜಗತ್ತಿನಲ್ಲಿ ಇರುವ ಮನುಷ್ಯರ ಸ್ವಭಾವ ವೈಪರೀತ್ಯಕ್ಕೆ ಈ ಗುಣಗಳೇ ಮೂಲಕಾರಣಗಳು. ಯಾವ ಗುಣದ

ಪ್ರಮಾಣವು ಅಧಿಕವಾಗುವುದೋ ಆ ಸ್ವಭಾವವು ಅವನಲ್ಲಿ ಎದ್ದು ಕಾಣುವುದು. ಮನುಷ್ಯನು ತನ್ನ ಸ್ವಭಾವವನ್ನು ಬದಲಿಸಿಕೊಳ್ಳಬೇಕಾದರೆ ಗುಣಗಳ ಬದಲಾವಣೆಗೆ ಪ್ರಯತ್ನಿಸಬೇಕಾಗುವುದು. ಈ ತ್ರಿವಿಧ ಗುಣಗಳಲ್ಲಿ ರಜ ಹಾಗೂ ತಮೋಗುಣಗಳು ದುಃಖಮಯವಾದ ಸಂಸಾರದಲ್ಲಿ ಸುಬುದ್ಧಿಯನ್ನುಂಟು ಮಾಡಿ ಸಂಸಾರದಲ್ಲಿ ಜೀವಿಯನ್ನು ಬಂಧನಗೊಳಿಸುತ್ತವೆ. ಪ್ರಾಯಃ ಈ ಸಂಸಾರದಲ್ಲಿ ಅತೀ ಸಾತ್ವಿಕರ ಸಂಖ್ಯೆ ವಿರಳವಾಗಿದ್ದು ರಜ,ತಮೋ ಗುಣಗಳೇ ಹೇರಳವಾಗಿ ಕಾಣಿಸಿಕೊಳ್ಳುತ್ತವೆ.

ಸತ್ವಗುಣಿಯಾದವರು ಕಾಯ್ದ ನೀರು ಭಾಷ್ಪವಾಗಿ ಊರ್ಧ್ವಗಾಮಿಯಾಗುವಂತೆ ತನ್ನ ತ್ಯಾಗ, ತಪಸ್ಸು, ಔದಾರ್ಯಾದಿ ಗುಣಗಳಿಂದ ಉತ್ಕೃಷ್ಟ ವಿಚಾರವುಳ್ಳವರಾ ಗುತ್ತಾರೆ. ಕೆಳಗೆ ಬಿದ್ದ ನೀರು ಇಳುಕಲು ಕಡೆಗೆ ಸಹಜವಾಗಿ ಹರಿದುಹೋಗುವಂತೆ ರಜೋಗುಣಿಯಾದ ಮನುಷ್ಯನು ಅಧೋಮುಖನಾಗಿ ಸ್ರಕ್-ಚಂದನ-ವನಿತಾದಿ ವಿಷಯಗಳಲ್ಲಿ ಆಸಕ್ತನಾಗುತ್ತಾನೆ. ಇನ್ನು ಮಂಜುಗಡ್ಡೆ (ಬರ್ಫ)ಯು ಮೇಲೆಯೂ ಹೋಗದೆ ಕೆಳಗೆಯೂ ಹರಿಯದೆ ಇಟ್ಟಲ್ಲಿಯೇ ಇರುವಂತೆ ತಮೋಗುಣಿಯಾದ ಮನುಷ್ಯನು ಆಲಸ್ಯತನದಿಂದ ಕೂಡಿಕೊಂಡು ವ್ಯರ್ಥವಾಗಿ ಕಾಲಹರಣ ಮಾಡುತ್ತಿರು ತ್ತಾನೆ.

ಓರ್ವ ಅತ್ಯಂತ ತಮೋಗುಣಿಯೂ, ಆಲಸಿಯೂ ಆದ ವ್ಯಕ್ತಿಯು ತನ್ನ ಹೊಲದಲ್ಲಿ ಬೋರೆಹಣ್ಣಿನ ಗಿಡದ ಕೆಳಗಡೆ ಮಲಗಿದ್ದನು. ಗಿಡದೊಳಗಿನ ಹಣ್ಣುಗಳು ಪಕ್ವಗಳಾಗಿ ಅದೆಷ್ಟೋ ಕೆಳಗೆ ಬಿದ್ದಿದ್ದವು. ಹಣ್ಣು ತಿನ್ನುವ ಇಚ್ಛೆಯಿದ್ದರೂ ಈ ಆಲಸಿಯಾದ ಭೂಪನು ಸುತ್ತಮುತ್ತ ಬಿದ್ದಿರುವ ಹಣ್ಣುಗಳಲ್ಲಿ ಒಂದನ್ನೂ ಸಹ ತೆಗೆದುಕೊಳ್ಳಲು ಉದ್ಯುಕ್ತ ನಾಗಲಿಲ್ಲ. ಯೋಗಾಯೋಗದಿಂದ ಒಂದು ಹಣ್ಣು ಅವನ ಎದೆಯ ಮೇಲೆಯೇ ಬಿತ್ತು. ಅದನ್ನು ಕೈಯಿಂದ ತೆಗೆದುಕೊಂಡು ಬಾಯೊಳಗೆ ಹೇಗೆ ಹಾಕುವುದು ? ಎಂಬುದಾಗಿ ವಿಚಾರಿಸುತ್ತ ಹಾಗೆಯೇ ಮಲಗಿದ್ದ ಅಷ್ಟರಲ್ಲಿ ಓರ್ವ ಕುದುರೆ ಸವಾರನು ಸಮೀಪದ ದಾರಿಯಿಂದ ಮುನ್ನಡೆದಿದ್ದ.ಈ ಆಲಸಿಯು ಆತನನ್ನು ನೋಡಿ ಕೂಗಿ ಕರೆದ. ಈತನು ಕೂಗುವುದನ್ನು ಕೇಳಿ ಕುದುರೆಸವಾರನ ಮನಸ್ಸಿನಲ್ಲಿ ದಯಾಭಾವ ಮೂಡಿ 'ಅಯ್ಯೋ ಪಾಪ! ಈತನಿಗೆ ಏನಾಗಿದೆಯೋ ಏನೋ, ನೆಲದಲ್ಲಿ ಬಿದ್ದುಕೊಂಡಿದ್ದಾನೆ ಏಳಲು ತ್ರಾಣವಿದ್ದಂತೆ ತೋರುವುದಿಲ್ಲ ಹೋಗಿ ಎಬ್ಬಿಸಿದರಾಯಿತು ಎಂಬುದಾಗಿ ಯೋಚಿಸಿ ಆತನ ಸಮೀಪಕ್ಕೆ ಬಂದು ಕುದುರೆಯಿಂದಿಳಿದು ಕೇಳಿದನಂತೆ, ನನ್ನಿಂದೇನಾಗಬೇಕಾಗಿದೆ ಯೆಂದು. ಆಗ ಆ ಮಲಗಿದ ವ್ಯಕ್ತಿ ಹೇಳಿದ- "ಏನೂ ಇಲ್ಲ, ನನ್ನ ಎದೆಯ ಮೇಲೆ ಒಂದು ಬೋರೆಹಣ್ಣು ಬಿದ್ದಿದೆ, ಅದನ್ನು ತೆಗೆದು ನನ್ನ ಬಾಯಿಯಲ್ಲಿ ಹಾಕು" ಎಂದ, ಆಗ ಆ ಕುದುರೆ ಸವಾರ ಹೇಳಿದ, ಎಲವೋ ನೀನು ಇಷ್ಟೊಂದು ಆಲಸಿಯಾಗಿ ದ್ದೀಯಾ ? ಎದೆಯ ಮೇಲೆ ಇದ್ದ ಬೋರೆಹಣ್ಣನ್ನು ಬಾಯಲ್ಲಿ ಇಟ್ಟುಕೊಳ್ಳುವುದು ನಿನ್ನಿಂದಾಗು ವುದಿಲ್ಲವೇ ? ನಾನೇನೋ ನಿನ್ನ ಬಾಯಲ್ಲಿ ಬೋರೆಹಣ್ಣನ್ನು ಇಡಬಹುದು, ಅದನ್ನು ಬಾಯಾಡಿಸುತ್ತ ತಿನ್ನಬೇಕಾದವನು ನೀನೇ ಅಲ್ಲವೇ ? ಇಷ್ಟೊಂದು ಆಲಸಿಯಾಗಿ ಭೂಮಿಗೆ ಭಾರವಾಗಿ ಜೀವಿಸುತ್ತಿದ್ದೀಯಾ, ಎಂದು ಬೆದರಿಸಿ ಕುದುರೆಯ ಚಾಬೂಕದಿಂದ

ನಾಲ್ಕಾರು ಏಟು ಥಳಿಸಿದಾಗ ಆಲಸ್ಯ ತೊರೆದು ಆ ಯುವಕ ಎದ್ದು ಓಡಿಹೋಧನಂತೆ. ಇದೊಂದು ತಮೋಗುಣದ ಪರಮಾವಧಿಯ ಉದಾಹರಣೆ. ಜಗತ್ತಿನಲ್ಲಿ ತಮೋಗುಣಿಯಾದವರು ಇದಕ್ಕೆ ಸ್ವಲ್ಪು ಹೆಚ್ಚು ಕಡಿಮೆ ಪ್ರಮಾಣದವರಾಗಿ ಇರುವುದನ್ನು ಕಾಣುತ್ತೇವೆ.

ಮೇಲೆ ವಿವರಿಸಿದ ಸತ್ವಾದಿ ತ್ರಿಗುಣಗಳಲ್ಲಿ ರಜ–ತಮಗುಣಗಳು ಮನುಷ್ಯನನ್ನು ಸಂಸಾರಾಭಿಮುಖಿಯನ್ನಾಗಿ ಮಾಡಿದರೆ ಸತ್ವಗುಣವು ಮಾತ್ರ ಪರಮಾತ್ಮಾಭಿಮುಖಿಯನ್ನಾಗಿ ಮಾಡುತ್ತದೆ. ಆದಕಾರಣ ಸಾಧಕರಾದವರು ರಜ–ತಮ ಗುಣಗಳ ಪ್ರಮಾಣವನ್ನು ಕಡಿಮೆಮಾಡಿಕೊಂಡು ಸತ್ವಗುಣಾಧಿಕ್ಯವನ್ನು ಹೊಂದಿ ಆಧ್ಯಾತ್ಮ ಮಾರ್ಗದಲ್ಲಿ ಪ್ರವೃತ್ತರಾಗಬೇಕು. ಹೀಗೆ ಜೀವಜಗತ್ತುಗಳು ತ್ರಿಗುಣದಿಂದ ಕೂಡಿಕೊಂಡಿದ್ದರೂ ಪರಶಿವನು ಮಾತ್ರ ತ್ರಿಗುಣಾತೀತನಾಗಿದ್ದಾನೆ. ಆತನು ಗುಣಾತೀತನಾಗಿರುವಂತೆ ರೂಪಾತೀತನೂ ಆಗಿದ್ದಾನೆ. ನಮ್ಮ ದೇಶದ ಪ್ರಾಚೀನ ಮಹರ್ಷಿಗಳು ನಿರಾಕಾರನಾದ ಪರಮಾತ್ಮನನ್ನು ಆರಾಧಿಸುವುದು ಸರ್ವರಿಂದಲೂ ಸಾಧ್ಯವಿಲ್ಲವೆಂದು ತಿಳಿದು ಆತನಿಗೆ ಅನೇಕ ಆಕಾರಗಳನ್ನು ಕಲ್ಪಿಸಿದ್ದಾರೆ. ಹಿಂದೂ ಸಂಸ್ಕೃತಿಯಲ್ಲಿ ಒಂದಲ್ಲ ಎರಡಲ್ಲ ಮೂವತ್ಮೂರು ಕೋಟಿ ಆಕಾರದಲ್ಲಿ ಆತನನ್ನು ಪೂಜಿಸುವುದನ್ನು ಕಾಣುತ್ತೇವೆ. ಪರಮಾತ್ಮನ ಈ ನಾಮರೂಪಗಳು ಇಷ್ಟು ವಿಧವಾಗಿ ತೋರುತ್ತಿದ್ದರೂ ಆತನ ಮೂಲಸ್ವರೂಪವು ಒಂದೇ ಆಗಿರುತ್ತದೆ. ಅಂತೆಯೇ ''ಏಕಂ ಸತ್ ವಿಪ್ರಾಃ ಬಹುಧಾ ವದಂತಿ'' ಎಂಬುದಾಗಿ ಹೇಳಿರುವದುಂಟು. ಅದನ್ನೇ ವಚನಕಾರರು 'ದೇವನೊಬ್ಬ ನಾಮ ಹಲವು' ಎಂಬುದಾಗಿ ಉಪದೇಶಿಸಿದ್ದಾರೆ. ಉಪನಿಷತ್ತುಗಳಲ್ಲಿ ''ಅಶಬ್ದಮಸ್ಪರ್ಶಮರೂಪಮವ್ಯಯಮ್'' ಎಂಬುದಾಗಿ ಹೇಳಿರುವುದನ್ನು ಕಾಣುತ್ತೇವೆ. ಶಬ್ದ, ಸ್ಪರ್ಶ, ರೂಪಾದಿಗಳು ಇಲ್ಲದಿರುವ ಸ್ಥಿತಿಯೇ ಪರಮಾತ್ಮನ ವಾಸ್ತವಿಕವಾದ ಸ್ಥಿತಿ. ಹೀಗಿದ್ದರೂ ಸದಾ ಪ್ರಪಂಚದ ಆಕಾರದಲ್ಲಿಯೇ ಅನುರಕ್ತವಾಗಿರುವ ಚಿತ್ತವನ್ನು ಅದರಿಂದ ಹೊರತೆಗೆಯುವುದಕ್ಕಾಗಿ ಪರಮಾತ್ಮನಿಗೆ ಆಕಾರವನ್ನು ಕಲ್ಪಿಸಿದ್ದುಂಟು. ಮಣ್ಣನ್ನು ತಿಂದು ಸಂತೋಷಪಡುತ್ತಿರುವ ಮಗುವಿನ ಕೈಯಿಂದ ಮಣ್ಣನ್ನು ಕಸಿದುಕೊಂಡ ಮಾತ್ರಕ್ಕೆ ಮಗುವಿಗೆ ಸಮಾಧಾನವಾಗುವುದಿಲ್ಲ. ಅದಕ್ಕೆ ಬದಲಾಗಿ ಸಿಹಿ ಪದಾರ್ಥವನ್ನು ಕೊಟ್ಟಾಗ ಅದು ಮಣ್ಣನ್ನು ತಾನಾಗಿಯೇ ಬಿಡುವಂತೆ ಪ್ರಪಂಚದ ಆಕಾರದಲ್ಲಿ ಅನುರಕ್ತವಾದ ಮನಸ್ಸನ್ನು ಅದರಿಂದ ಮುಕ್ತಗೊಳಿಸುವುದಕ್ಕಾಗಿ ಪರಮಾತ್ಮನಿಗೆ ಈ ದಿವ್ಯ ಆಕಾರಗಳನ್ನು ಕಲ್ಪಿಸಿರುವುದಾಗಿ ಊಹಿಸಬಹುದಾಗಿದೆ. ಮಣ್ಣು ತಿನ್ನುವ ಮಗುವಿನ ಕೈಯಿಂದ ಮಣ್ಣನ್ನು ಬಿಡಿಸಿದಂತೆ ಒಂದು ದಿವಸ ಅದರ ಕೈಯಲ್ಲಿಯ ಸಿಹಿ ಪದಾರ್ಥವನ್ನೂ ಬಿಡಿಸಲೇಬೇಕಾಗುವಂತೆ ಪ್ರಪಂಚದ ಆಕಾರದಿಂದ ಹೊರಳಿಸುವುದಕ್ಕಾಗಿ ಪರಮಾತ್ಮನ ಆಕೃತಿಯನ್ನು ಕೈಗೆಕೊಟ್ಟಿದ್ದರೂ ಆ ಆಕೃತಿಯೂ ಸಹ ನಿಜವಾದದ್ದಲ್ಲ. ವಾಸ್ತವಿಕವಾಗಿ ಪರಮಾತ್ಮನು ನಿರಾಕಾರನಾಗಿದ್ದಾನೆ ಎಂಬುದನ್ನು ಸದ್ಗುರುವು ಶಿಷ್ಯನಿಗೆ ಕೊನೆಗೆ ತಿಳಿಸಲೇಬೇಕಾಗುತ್ತದೆ. ಹೀಗೆ ಕೊನೆ ಹಂತದಲ್ಲಿ ತನ್ನ ಶಿಷ್ಯನಿಗೆ ನಿರ್ಗುಣ ನಿರಾಕಾರನಾದ ಪರಮಾತ್ಮನನ್ನು ತಿಳಿಸಿಕೊಡುವವನೇ ಗುರುವೆಂಬುದಾಗಿ 'ಗುರು' ಪದದ ಅರ್ಥ ವಿಶ್ಲೇಷಣೆಯನ್ನು ಪೂಜ್ಯಪಾದರು ಮಾಡಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟ ಇಷ್ಟಲಿಂಗ ಪೂಜೆಯು ಆ ನಿರ್ಗುಣ ನಿರಾಕಾರನಾದ ಪರಮಾತ್ಮನ ಪ್ರತೀಕವೇ ಆಗಿರುತ್ತದೆ. ಆ ನಿರ್ಗುಣ–ನಿರಾಕಾರನಾದ ಪರಮಾತ್ಮನು ಪ್ರತಿಯೊಬ್ಬ ವ್ಯಕ್ತಿಯ ಹೃದಯದಲ್ಲಿ ಸದಾ ನಿವಾಸಗೈದಿದ್ದಾನೆ. ಬೀಜದಲ್ಲಿ ಅಂಕುರವಿರುವಂತೆ ಹೃದಯದಲ್ಲಿ ಆ ಪರಮಾತ್ಮನ ಅಸ್ತಿತ್ವವಿರುತ್ತದೆ. ಇದನ್ನು ತಿಳಿಸುವುದಕ್ಕಾಗಿಯೇ ಇಷ್ಟಲಿಂಗವನ್ನು ಹೃದಯದ ಮೇಲೆ ಧರಿಸುವ ಪದ್ಧತಿಯಾಗಿರುತ್ತದೆ. ಈ ಇಷ್ಟಲಿಂಗದ ಆರಾಧನಾ ರೂಪವಾದ ಶಿವಯೋಗದಿಂದಲೇ ಅಂತರಂಗದಲ್ಲಿಯ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಆರಾಧನೆಯನ್ನು ಮಾಡಲು ಸಾಧ್ಯವಾಗುವುದು. ಜಗತ್ತಿನ ತುಂಬೆಲ್ಲ ತುಂಬಿಕೊಂಡಿರುವ ಆ ಪರಮಾತ್ಮನು ಪ್ರತಿಯೊಬ್ಬರ ಹೃದಯದಲ್ಲಿ ಇದ್ದರೂ ಸಹ ಅಂತರ್ಮುಖ ಪ್ರವೃತ್ತಿಯಿಲ್ಲದ ಜೀವಿಗಳಿಗೆ ಆತನು ಅನುಭವಗೋಚರನಾಗಲಾರನು. ತೀರ್ಥ ಕ್ಷೇತ್ರಗಳಲ್ಲಿ ದೇವರನ್ನು ಹುಡುಕುವವರೇ ಹೆಚ್ಚಾಗಿದ್ದಾರೆ ವಿನಃ ಹೃದಯಮಂದಿರದಲ್ಲಿ ಆತನನ್ನು ಅನುಭವಿಸುವವರು ಅತಿ ವಿರಳ. ಅಂತೆಯೇ ''ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ವ್ಯಾವೃತ್ ಚಕ್ಷುಃ ಅಮೃತತ್ತ್ವಮಿಚ್ಛನ್'' ಎಂಬುದಾಗಿ ಉಪನಿಷದ್ವಚನವು ಅಂತರ್ಮುಖಿಗಳಾದ ಸಾಧಕರ ಅಪರೂಪತೆಯನ್ನು ಎತ್ತಿ ತೋರಿಸುತ್ತದೆ.

ಜಗತ್ತಿನ ಜನರಕಾಟದಿಂದ ಪಾರಾಗಲೋಸುಗ ನಾನು ಎಲ್ಲಿ ನಿವಾಸಮಾಡಬೇಕು? ಎಂಬುದಾಗಿ ವಿಚಾರಿಸಲೋಸುಗ ಒಮ್ಮೆ ಪರಮಾತ್ಮನು ದೇವತೆಗಳ ಸಭೆಯನ್ನು ಕರೆದನು. ಆ ಸಭೆಯಲ್ಲಿ ನಿರ್ಣಯವಾದದ್ದೇನೆಂದರೆ, ''ಕೈಲಾಸ–ಕಾಶಿ–ಮೇರು ಮುಂತಾದ ಯಾವುದೇ ಸ್ಥಾನದಲ್ಲಿ ನೀನು ಕುಳಿತರೂ ಜನ ನಿನ್ನ ಬೆಂಬತ್ತಿ ಬರುತ್ತಾರೆ. ಆದ ಕಾರಣ ಹೊರಗೆ ಆದೆಲ್ಲಿ ಕುಳಿತರೂ ನಿನಗೆ ವಿಶ್ರಾಂತಿ ದೊರೆಯದು. ಆದರೆ ಹುಡುಕುವವರ ಹೃದಯಲ್ಲಿಯೇ ಕುಳಿತರೆ ನೀನು ನಿಶ್ಚಿಂತನಾಗಿ ಸದಾ ವಿಶ್ರಾಂತಿಯಲ್ಲಿರಬಹುದು.'' ಎಂಬ ದೇವತೆಗಳ ಈ ಹೇಳಿಕೆಯಂತೆ ಪರಮಾತ್ಮನು ಪ್ರತಿಯೊಬ್ಬರ ಹೃದಯ ಮಂದಿರದಲ್ಲಿ ನಿವಾಸ ಮಾಡಿದನು. ಅಂದಿನಿಂದ ಅವನು ನಿಶ್ಚಿಂತನಾಗಿದ್ದಾನೆ. ದೇವರನ್ನು ಹುಡುಕುವವರು ತಮ್ಮ ಹೃದಯದತ್ತ ನೋಡದೆ ಬಹಿರ್ಮುಖರಾಗಿ ಹೊರಗೇ ನೋಡುತ್ತಿರೋಣದರಿಂದ ಅಂತರಂಗದ ಪರಮಾತ್ಮನನ್ನು ತಿಳಿಯಲು ಅಸಮರ್ಥರಾಗಿದ್ದಾರೆ. ಜೀವಿಗಳ ಈ ಸ್ಥಿತಿಯನ್ನು ಕಂಡೇ ಸಂತ ಕಬೀರದಾಸನು –

ಕಸ್ತೂರಿ ಕುಂಡಲ ಬಸ್ಯೆ ಮೃಗ ಢೂಂಡೇ ಬನಮಾಹಿ ।
ಘಟಿ ಘಟಿ ರಾಮ ಬಸ್ಯೆ ದುನಿಯಾಕೋ ಮಾಲೂಮ ನಹಿ ॥

ಈ ರೀತಿಯಾಗಿ ಹೇಳಿದ್ದಾನೆ. ತಾತ್ಪರ್ಯವೇನೆಂದರೆ, ಕಸ್ತೂರಿ ಮೃಗವು ತನ್ನ ನಾಭಿಯಲ್ಲಿರುವ ಕಸ್ತೂರಿಯನ್ನರಿಯದೆ ಅದರ ಸುಗಂಧಕ್ಕೆ ಮಾರು ಹೋಗಿ ಇಡೀ ವನವನ್ನೇ ಹುಡುಕಾಡುತ್ತಿರುವಂತೆ ಪರಮಾತ್ಮನ ವಾಸ್ತವಿಕವಾದ ಅಸ್ತಿತ್ವದ ಸ್ಥಾನವನ್ನರಿಯದ ಜೀವಿಗಳು ಬಹಿರ್ಮುಖರಾಗಿ ಹೊರಗೆಲ್ಲ ಪರಮಾತ್ಮನನ್ನು ಹುಡುಕುತ್ತಿರುತ್ತಾರೆ. ಹೊರಗೆ ಹುಡುಕಿ ಹುಡುಕಿ ಬೇಸುತ್ತು ಯಾವಾಗ ಅಂತರ್ಮುಖರಾಗಿ ಹೃದಯದಲ್ಲಿ ಇಣಿಕಿ ನೋಡುವರೋ ಆಗ ತಾನೇ ಪರಮಾತ್ಮನ ದರ್ಶನವಾಗುವುದು. ಹೀಗೆ

ನಿರ್ಗುಣ–ನಿರಾಕಾರನಾದ ಪರಮಾತ್ಮನು ಪ್ರತಿಯೊಬ್ಬರ ಹೃದಯ ಮಂದಿರದಲ್ಲಿಯೇ ನಿವಾಸ ಮಾಡಿರುತ್ತಾನೆ. ಆದ್ದರಿಂದಲೇ ಓರ್ವ ಹಿಂದಿ ಕವಿಯು–

ಮಂದಿರ ತೋಡೋ ಮಸ್ಜಿದ್ ತೋಡೊ।
ಮಗರ್ ಕಿಸೀಕಾ ದಿಲ್ ಮತ್ ತೋಡೋ॥

ಎಂಬುದಾಗಿ ಹೇಳಿ ಮಂದಿರ–ಮಸೀದಿಗಳಿಗಿಂತಲೂ ಹೃದಯ ಮಂದಿರವೇ ಪರಮಾತ್ಮನ ನಿಜವಾದ ನಿವಾಸಸ್ಥಾನವು. ಆದ್ದರಿಂದ ಯಾರ ಹೃದಯಕ್ಕೂ ನೋವಾಗದಂತೆ ವರ್ತಿಸಬೇಕೆಂಬುದಾಗಿ ಮಾರ್ಮಿಕವಾಗಿ ಉಪದೇಶಿಸಿದ್ದಾನೆ. ಅಂತೆಯೇ ವೀರಶೈವ ಸಿದ್ಧಾಂತದಲ್ಲಿ ಪ್ರಾಣಲಿಂಗ ಹಾಗೂ ಭಾವಲಿಂಗಗಳ ರೂಪದಲ್ಲಿ ಪರಮಾತ್ಮನನ್ನು ಹೃದಯಮಂದಿರದಲ್ಲಿಯೇ ಆರಾಧಿಸಬೇಕೆಂಬುದಾಗಿ ಉಪದೇಶಿಸಿದ್ದಾರೆ. ಸದ್ಗುರುವಾದವನು ತನ್ನ ಅಂತರಂಗದಲ್ಲಿ ಈ ನಿರ್ಗುಣ ನಿರಾಕಾರನಾದ ಪರಮಾತ್ಮನನ್ನು ಜ್ಯೋತಿರ್ಲಿಂಗರೂಪದಲ್ಲಿ ಅನುಭವಿಸಿ ಅದನ್ನೇ ತನ್ನ ಶಿಷ್ಯನಿಗೆ ತಿಳಿಸುವವನಾದ ಕಾರಣ ಆತನಿಗೆ 'ಗುರು' ಎಂಬುದಾಗಿ ಕರೆದಿದ್ದಾರೆ. ಹೀಗೆ ಪೂಜ್ಯಪಾದರು ಈ ದೀಕ್ಷಾಗುರು ಸ್ಥಲದಲ್ಲಿ ಗುರು ಪದದ ಅರ್ಥವನ್ನು ನಿರೂಪಿಸಿದ್ದಾರೆಂಬಲ್ಲಿಗೆ ಇಂದಿನ ಆಶೀರ್ವಚನಕ್ಕೆ ವಿರಾಮನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಆಗಷ್ಟ್ ೧೯೯೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೩

# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಪೂಜ್ಯಪಾದರಾದ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಆಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತಮಾನವರನ್ನು ಕುರಿತು ಈ ದೀಕ್ಷಾಗುರುಸ್ಥಲದಲ್ಲಿ ಗುರುಪದದ ವಿಶ್ಲೇಷಣೆಯನ್ನು ಮಾಡಿ ಸದ್ಯಃ ಆಚಾರ್ಯ ಪದದ ಅರ್ಥವನ್ನು ಬೋಧಿಸುವುದಕ್ಕಾಗಿ

ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಚೋಚ್ಯತೇ ॥

(ಸಿ.ಶಿ. ೧೩-೯)

ಈ ರೀತಿಯಾಗಿ ಉಪದೇಶ ಮಾಡಿದ್ದಾರೆ. ವೀರಶೈವ ಶಾಸ್ತ್ರದಲ್ಲಿ ಬರುವ ರಹಸ್ಯಾರ್ಥಗಳನ್ನು ತಾನು ಅಭ್ಯಸಿಸಿ ತನ್ನ ಶಿಷ್ಯರು ಆ ಶಾಸ್ತ್ರದಂತೆ ಆಚಾರ ಸಂಪನ್ನರಾಗಿರುವಂತೆ ಚೆನ್ನಾಗಿ ನೋಡಿಕೊಂಡು ತಾನೂ ಸಹ ಸದಾಚಾರಸಂಪನ್ನನಾಗಿ ಇರುವಂತಹ ಸದ್ಗುರುವಿಗೆ ಆಚಾರ್ಯರೆಂದು ಕರೆಯುತ್ತಾರೆ. ಆಚಾರ್ಯಪದ ವಿಭೂಷಿತನಾದ ಸದ್ಗುರುವು ಸಕಲಶಾಸ್ತ್ರ ಸಂಪನ್ನನಾಗಿರುತ್ತಾನೆ. ಈ ಶಾಸ್ತ್ರಪರಿಣತೆ ಸದ್ಗುರುವಿನ ಒಂದು ಮುಖ್ಯವಾದ ಲಕ್ಷಣವು. ಇದನ್ನೇ ಉಪನಿಷತ್ತುಗಳು 'ಶ್ರೋತ್ರಿಯತ್ವ' ವೆಂಬುದಾಗಿ ಕರೆದಿರುವವು. ಶ್ರೀಮನ್ನಿಜಗುಣ ಶಿವಯೋಗಿಗಳೂ ಸಹ ''ಕರುಣ ಸತ್ಕಲೆ ಶಾಸ್ತ್ರ ಪರಿಣತೆ ಸುಜ್ಞಾನ ಸುಮುಖಂಗಳಿರಲ್ ಅವನೇ ಸೇವ್ಯಗುರುಮಕ್ಕುಮ್'' ಈ ರೀತಿಯಾಗಿ ಗುರುವಿನ ಲಕ್ಷಣವನ್ನು ಹೇಳುವಲ್ಲಿ ಆತನು ಶಾಸ್ತ್ರಜ್ಞನಿರಬೇಕೆಂಬುದನ್ನು ತಿಳಿಸಲೋಸುಗ 'ಶಾಸ್ತ್ರಪರಿಣತೆ' ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾರೆ. ಆದಕಾರಣ ಆಚಾರ್ಯಸ್ಥಾನವನ್ನಲಂಕರಿಸುವ ಸದ್ಗುರುವು ಸಕಲ ಶಾಸ್ತ್ರ ಬಲ್ಲಿದನಾಗಿರಬೇಕು.

ವೇದ, ಆಗಮ, ಉಪನಿಷತ್ತು ಪುರಾಣ ಮತ್ತು ಇತಿಹಾಸಾದಿ ಗ್ರಂಥಗಳಲ್ಲಿ ವೀರಶೈವ ಸಿದ್ಧಾಂತದ ಅನೇಕ ಆಚಾರ-ವಿಚಾರಗಳು ಪ್ರತಿಪಾದಿಸಲ್ಪಟ್ಟಿವೆ. ಅವುಗಳ ಸಮಗ್ರ ಜ್ಞಾನವನ್ನು ಮಾಡಿಕೊಳ್ಳಬೇಕಾದರೆ ಅವೆಲ್ಲವುಗಳ ಅಧ್ಯಯನವು ಅವಶ್ಯಕವಾದುದು. ಜಗತ್ತಿನಲ್ಲಿಯ ಪ್ರತಿಯೊಬ್ಬ ವ್ಯಕ್ತಿಗೆ ಸಕಲಶಾಸ್ತ್ರಗಳ ಅಧ್ಯಯನವು ಸಾಧ್ಯವಾಗುವದಿಲ್ಲ. ಆದ್ದರಿಂದ ಸಮಾಜಕ್ಕೆ ಮಾರ್ಗದರ್ಶಕನಾಗಿರುವ ಸದ್ಗುರುವು ಶಾಸ್ತ್ರಾಧ್ಯಯನವನ್ನು ಮಾಡಿರಲೇಬೇಕು. ಜೇನುಹುಳಗಳು ಪ್ರತಿಯೊಂದು ಪುಷ್ಪದಲ್ಲಿಯ ಮಕರಂದವನ್ನು ಹೀರಿ ಮಧುಸಂಚಯ ಮಾಡಿದ್ದರೆ ಅದು ಅದೆಷ್ಟೋ ಜನರಿಗೆ ಉಪಯೋಗಕ್ಕೆ ಬರುವಂತೆ ಓರ್ವ ಸದ್ಗುರುವು ಮಾಡಿದ ಶಾಸ್ತ್ರಾಧ್ಯಯನದ ಪ್ರಯೋಜನವು

ಲಕ್ಷ ಲಕ್ಷ ಜನರ ಉಪಯೋಗಕ್ಕೆ ಬರುವಂಥಾದ್ದಾಗಿರುತ್ತದೆ. ಅಂತೆಯೇ ಸದ್ಗುರುವಾದವನು ತನ್ನ ಮಠದಲ್ಲಿ ಪ್ರತಿದಿವಸ ಇಲ್ಲವೆ ಸಪ್ತಾಹದಲ್ಲೊಂದು ದಿನ ಅಥವಾ ತಿಂಗಳಿಗೊಂದು ದಿನ ಇಲ್ಲವೇ ವರ್ಷದಲ್ಲಿ ಒಂದು ತಿಂಗಳು ಸತ್ಸಂಗ ಸಮಾರಂಭಗಳನ್ನೇರ್ಪಡಿಸಿ ಸಾಮಾನ್ಯ ಜನರಲ್ಲಿ ಶಾಸ್ತ್ರ ಪ್ರಜ್ಞೆಯನ್ನು ಮೂಡಿಸುವ ಪರಂಪರೆಯು ಈಗಲೂ ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ.

ಈ ಬೋಧನಾತ್ಮಕ ಸಮಾರಂಭಗಳೊಂದಿಗೆ ಜನರಲ್ಲಿ ಕ್ರಿಯಾಚರಣೆಯನ್ನು ತರುವುದಕ್ಕಾಗಿ ಇಷ್ಟಲಿಂಗ ಪೂಜಾದಿಗಳ ಪ್ರಾತ್ಯಕ್ಷಿಕೆಗಳನ್ನು ಮಾಡಿ ತೋರಿಸುವ ರೂಢಿಯೂ ಸಹ ಅಂದಿನಿಂದ ಇಂದಿನವರೆಗೆ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಅಂತೆಯೇ ವೀರಶೈವಧರ್ಮದ ಪೀಠಾಚಾರ್ಯರು ಮತ್ತು ಅವರ ಶಾಖಾನುವರ್ತಿಗಳಾದ ಶಿವಾಚಾರ್ಯರು ಬಹಿರಂಗದಲ್ಲಿ ಸಹಸ್ರಾರು ಜನರ ಮಧ್ಯದಲ್ಲಿ ವೈಭವೋಪೇತವಾದ ಇಷ್ಟಲಿಂಗಪೂಜಾ ಸಮಾರಂಭಗಳನ್ನು ಏರ್ಪಡಿಸುತ್ತಿರುತ್ತಾರೆ. ಬಹುಪಾಲು ಜನರಿಗೆ ಪೂಜಾವಿಧಿಯನ್ನು ಪ್ರತ್ಯಕ್ಷವಾಗಿ ತಿಳಿಸಿಕೊಡುವ ಉದ್ದೇಶಕ್ಕಾಗಿಯೇ ಆಚಾರ್ಯರು ಇಂತಹ ಪೂಜಾದಿಗಳನ್ನು ನೆರವೇರಿಸುತ್ತಿರುತ್ತಾರೆ. ಇದು ಅವರ ಪರಮ ಕರ್ತವ್ಯವೂ ಅಹುದು.

ವೀರಶೈವ ಸಿದ್ಧಾಂತವು ಜ್ಞಾನ ಮತ್ತು ಆಚಾರಗಳ ಸಮನ್ವಯಾತ್ಮಕವಾದುದು. ಅಂತೆಯೇ ಈ ಸಿದ್ಧಾಂತದ ಆಚಾರ್ಯರಾಗಲೀ ಅಥವಾ ಅವರ ಶಿಷ್ಯಸಾಧಕರಾಗಲೀ ಕೇವಲ ಅರಿವುಳ್ಳವರಾದರೆ ಸಾಲದು, ಅವರು ಆಚಾರವಂತರೂ ಆಗಿರಬೇಕು. ಗುರುವಾದವನು ಜ್ಞಾನದೊಂದಿಗೆ ಆಚಾರಸಂಪನ್ನನಾದಾಗಲೇ ಶಿಷ್ಯರಿಗೆ ಬೋಧಿಸುವ ಹಕ್ಕನ್ನು ಪಡೆದುಕೊಂಡಿರುತ್ತಾನೆ. ಜ್ಞಾನ ಸಾಕಷ್ಟಿದ್ದು ಅದು ಆಚರಣೆಯಲ್ಲಿ ಬಾರದಿದ್ದರೆ, ಅದು ಪ್ರಯೋಜನಕಾರಿಯಾಗದು. ಅಂತೆಯೇ ಆಚಾರ್ಯರು ಜ್ಞಾನಾಚಾರಗಳ ಸಮನ್ವಯ ಕೇಂದ್ರವಾಗಿರಬೇಕು. ಆಕಳ ಹಾಲು ಅಮೃತ ಸದೃಶವಾಗಿದ್ದರೂ ಅದನ್ನು ಮನುಷ್ಯನ ಕಪಾಲ (ಡೋಗಿ)ದಲ್ಲಿ ಹಾಕಿಕೊಟ್ಟರೆ ಅದು ಅಗ್ರಾಹ್ಯವಾಗುವಂತೆ ಆಚಾರಹೀನನಾದವನ ಜ್ಞಾನವೂ ಸಹ ಇದೇ ರೀತಿಯಾಗಿ ಅನಾದರಣೀಯವಾಗುತ್ತದೆ. ಅಂತೆಯೇ ಪೂಜ್ಯಪಾದರಾದ ರೇಣುಕರು ಆಚಾರದ ಮಹತಿಯನ್ನು ಕೊಂಡಾಡುತ್ತ–

ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪ್ಯತೇ ।
ಆಚಾರ ಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥

(ಸ.ಶಿ. ೧೬–೧೩)

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ಪೂಜ್ಯರ ದೃಷ್ಟಿಯಲ್ಲಿ ಆಚಾರವು ಒಂದು ಸುಂದರವಾದ ಅಲಂಕಾರವಿದ್ದಂತೆ. ಸಾಮಾನ್ಯವಾಗಿ ಮನುಷ್ಯನು ಅಲಂಕಾರ ಪ್ರಿಯನಾಗಿರುವುದು ಕಂಡುಬರುತ್ತದೆ. ಅಂತಲೇ ಜನರು ವಸ್ತ್ರ, ಪುಷ್ಪ, ರಜತ, ಸುವರ್ಣ ಹಾಗೂ ರತ್ನಾದಿಗಳಿಂದ ತಮ್ಮ ಬಾಹ್ಯ ಶರೀರವನ್ನು ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಅಲಂಕರಿಸಿಕೊಳ್ಳುವುದನ್ನು ಕಾಣುತ್ತೇವೆ. ಇದೂ ಅಲ್ಲದೆ ಇತ್ತೀಚಿನ ದಿನಮಾನಗಳಲ್ಲಿ ಬಾಹ್ಯೋಪಚಾರಗಳಿಂದ ಮತ್ತು ಪ್ರಸಾಧನ ಸಾಮಗ್ರಿಗಳಿಂದ ಶರೀರದ ಸೌಂದರ್ಯ

ವನ್ನು ಹೆಚ್ಚಿಸುವ ಅಂಗಡಿಗಳು (ಬ್ಯೂಟಿ ಪಾರ್ಲರ್) ತೆರೆಯಲ್ಪಟ್ಟಿರುತ್ತವೆ. ಇಂತಹ ಅಂಗಡಿಗಳತ್ತ ಜನರು ಹೆಚ್ಚು ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಸ್ಥೂಲ ಶರೀರವನ್ನು ಅದೆಷ್ಟು ಅಲಂಕರಿಸಿದರೂ ಕೊನೆಗೊಂದು ದಿನ ಅದು ಕುರೂಪವಾಗದೇ ಇರದು. ಸ್ಥೂಲ ಶರೀರದ ಸೌಂದರ್ಯ ವರ್ಧನೆಗಾಗಿ ಕಳೆಯುವ ಸಮಯದಲ್ಲಿ ಸ್ವಲ್ಪ ಕಾಲ ವನ್ನಾದರೂ ಸೂಕ್ಷ್ಮ ಶರೀರದ ಸೌಂದರ್ಯ ವರ್ಧನೆಗಾಗಿ ವ್ಯಯಮಾಡಿದರೆ ಬದುಕು ಸಾರ್ಥಕವಾಗುತ್ತದೆ. ಸೂಕ್ಷ್ಮಶರೀರದ ಸೌಂದರ್ಯದತ್ತ ನಿರ್ಲಕ್ಷಿಸಿ ಕೇವಲ ಸ್ಥೂಲ ಶರೀರವನ್ನು ಅಲಂಕರಿಸುವುದೆಂದರೆ ಹೆಣಕ್ಕೆ ಮಾಡಿದ ಶೃಂಗಾರವೇ ಸರಿ.

ಸೂಕ್ಷ್ಮ ಶರೀರವನ್ನು ಅಲಂಕರಿಸುವ ಸಾಮಗ್ರಿಗಳೆಂದರೆ ಶಾಸ್ತ್ರವಿಹಿತವಾದ ಆಚರಣೆಗಳು. ಯಾರು ಈ ಆಚರಣೆಗಳನ್ನು ಶ್ರದ್ಧೆಯಿಂದ ಆಚರಿಸುವರೋ ಅವರ ಸೂಕ್ಷ್ಮಶರೀರವು ಸುಂದರವಾಗುವುದು. ಸೂಕ್ಷ್ಮಶರೀರದ ಸೌಂದರ್ಯವೇ ನಿಜವಾದ ಸೌಂದರ್ಯ. ಸ್ಥೂಲ ಶರೀರವನ್ನು ಅಲಂಕರಿಸುವ ಹವ್ಯಾಸದಲ್ಲಿ ಬಿದ್ದ ಮನುಷ್ಯನು ತನ್ನ ಸೂಕ್ಷ್ಮ ಶರೀರವನ್ನು ಕಡೆಗಣಿಸಿದ್ದಾನೆ. ಇದರಿಂದಾಗಿ ಜಗತ್ತಿನಲ್ಲಿ ಪ್ರತಿಯೊಬ್ಬ ಮನುಷ್ಯನು ಅಶಾಂತಿಯ ಜೀವನವನ್ನು ಸಾಗಿಸುತ್ತಿದ್ದಾನೆ. ಸ್ಥೂಲ ಶರೀರಕ್ಕೆ ಯಾವುದೇ ಪ್ರಕಾರದ ಜ್ವರ ಬಾಧೆ ಮೊದಲಾದ ರೋಗಗಳು ಪ್ರಾಪ್ತವಾದಾಗ ಅವುಗಳ ಉಪಚಾರಕ್ಕಾಗಿ ವೈದ್ಯರ ಕಡೆಗೆ ಧಾವಿಸಿ ಹೋಗುತ್ತೇವೆ. ಆದರೆ ಸೂಕ್ಷ್ಮ ಶರೀರವು ಅದೆಷ್ಟೇ ಖುಗ್ಣವಾಗಿದ್ದರೂ ಮನುಷ್ಯ ಅದರತ್ತ ನಿರ್ಲಕ್ಷ್ಯ ತಾಳುತ್ತಾನೆ. ಸ್ಥೂಲ ಶರೀರಕ್ಕೆ ಜ್ವರ–ವಿಷಮಜ್ವರ ಬಾಧೆ ಇರುವಂತೆ ಸೂಕ್ಷ್ಮ ಶರೀರಕ್ಕೆ ಕಾಮಜ್ವರ, ಕ್ರೋಧಜ್ವರ, ಮದ–ಲೋಭ–ಮೋಹ–ಮತ್ಸರ ಜ್ವರಗಳು ಅಂಟಿಕೊಂಡಿರುತ್ತವೆ. ಸ್ಥೂಲಶರೀರಕ್ಕೆ ಜ್ವರಬಂದಾಗ ಹಣೆಗೆ ತಣ್ಣೀರಿನ ಪಟ್ಟಿ ಹಾಗೂ ಔಷಧೋಪಚಾರಗಳನ್ನು ಮಾಡುವಂತೆ ಸೂಕ್ಷ್ಮ ಶರೀರದ ಈ ಜ್ವರಬಾಧೆಯನ್ನು ದೂರ ಮಾಡಲು ಸತ್ಸಂಗ, ಸದ್ಗ್ರಂಥಗಳ ಅಧ್ಯಯನ, ಭಗವನ್ನಾಮ ಜಪ ಮುಂತಾದವುಗಳು ಅದರ ಚಿಕಿತ್ಸೆಯ ಸಾಧನಗಳಾಗಿರು ತ್ತವೆ. ಹೀಗೆ ಸೂಕ್ಷ್ಮಶರೀರವನ್ನು ಸ್ವಸ್ಥವಾಗಿರಿಸಿಕೊಂಡು ಶಾಸ್ತ್ರೀಯ ಆಚರಣೆಗಳನ್ನು ಆಚರಿಸುತ್ತ ಸೂಕ್ಷ್ಮ ಶರೀರದ ಸೌಂದರ್ಯವನ್ನು ವರ್ಧಿಸಿಕೊಳ್ಳುವುದೇ ಮನುಷ್ಯ ಜೀವನದ ಮುಖ್ಯ ಗುರಿಯಾಗಿದೆ. ಆದ್ದರಿಂದಲೇ ಆಚಾರ್ಯರು ಇಲ್ಲಿ ಆಚರಣೆಗೆ ಅತ್ಯಧಿಕ ಮಹತ್ವವನ್ನು ಕೊಟ್ಟಿದ್ದಾರೆ. ಆಚರಣೆಯು ಆಚಾರ್ಯರಿಗೆ ಎಷ್ಟು ಮುಖ್ಯ ವಾದುದೋ ಅವರ ಅನುಯಾಯಿಗಳಾದ ಶಿಷ್ಯರಿಗೂ ಸಹ ಅಷ್ಟೇ ಪ್ರಾಮುಖ್ಯ ವಾದುದು.

ಒಂದು ಬಟ್ಟೆಯನ್ನು ನಿರ್ಮಿಸಲು ಹಾಸು–ಹೊಕ್ಕುಗಳೆರಡೂ ಅವಶ್ಯವಿರುವಂತೆ ಒಬ್ಬ ಮನುಷ್ಯನ ಜೀವನವು ಪರಿಪೂರ್ಣವಾಗಬೇಕಾದರೆ ಜ್ಞಾನ ಮತ್ತು ಆಚರಣೆ ಗಳೆರಡೂ ಬೇಕಾಗುತ್ತವೆ. ಅಂತೆಯೇ ಪೂಜ್ಯಪಾದರು ''ಜ್ಞಾನೇನಾಚಾರ ಯುಕ್ತೇನ ಪ್ರಸೀದತಿ ಮಹೇಶ್ವರಃ'' ಎಂಬುದಾಗಿ ಉಪದೇಶಿಸಿ ಶಿವನ ಅನುಗ್ರಹವನ್ನು ಪಡೆಯ ಬೇಕಾದರೆ ಜ್ಞಾನ ಮತ್ತು ಆಚರಣೆಗಳೆರಡೂ ಅವಶ್ಯವೆಂಬುದನ್ನು ಉಪದೇಶಿಸಿದ್ದಾರೆ. ಜ್ಞಾನ ಮತ್ತು ಆಚರಣೆಗಳೆಂಬ ಒಡವೆಗಳು ಅದಾರಿಂದಲೂ ಕದಿಯಲ್ಪಡುವುದಿಲ್ಲ. ಜೀವಿಯು ಈ ದೇಹವನ್ನು ತ್ಯಜಿಸಿದರೂ ಅವನೊಂದಿಗೇ ಬರುವಂಥ ಆಭರಣಗಳೆಂದರೆ

ಇವೆರಡೇ. ಜ್ಞಾನ ಪಿಪಾಸೆಯಿಂದ ತನ್ನೆಡೆಗೆ ಬಂದ ಶಿಷ್ಯನಿಗೆ ಸದ್ಗುರುವು ಮೊದಲು ಆಚರಣೆಯನ್ನು ಕಲಿಸುತ್ತಾನೆ. ಅಂತೆಯೇ ಪೂಜ್ಯರು ''ಆಚಾರೇ ಸ್ಥಾಪಯತ್ಯಪಿ'' ಎಂಬುದಾಗಿ ಉಪದೇಶಿಸಿದ್ದಾರೆ.

ಆಚಾರವೆಂದರೆ ವೇದಾಗಮಾದಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಧರ್ಮ ವಿಶೇಷವು, ಈ ಆಚಾರವು ಕಲ್ಪವೃಕ್ಷವಿದ್ದಹಾಗೆ. ಇದರಿಂದಲೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಪಡೆಯಬಹುದಾಗಿದೆ. ಆಚಾರವಂತನಾದ ಮನುಷ್ಯನು ಸದಾ ಪ್ರಸನ್ನಚಿತ್ತನೂ ಸಾತ್ವಿಕನೂ ದೇಹ ಸ್ವಾಸ್ಥ್ಯಸಂಪನ್ನನೂ ಮತ್ತು ಪೂರ್ಣಾಯುಷಿಯೂ ಆಗುತ್ತಾನೆ. ಆದರೆ ದುರಾಚಾರಿಯಾದವನು ಇದಕ್ಕೆ ವಿಪರೀತವಾಗಿ ಸದಾ ದುಃಖಿಯೂ ರಜೋಗುಣಿಯೂ ಆದಿ–ವ್ಯಾಧಿಯುಕ್ತನೂ ಮತ್ತು ಅಲ್ಪಾಯುವೂ ಆಗುತ್ತಾನೆ. ಆಚಾರಹೀನನಾದವನನ್ನು ಅದಾವ ಶಾಸ್ತ್ರಗಳೂ ಪುನೀತನನ್ನಾಗಿ ಮಾಡಲಾರವು. ಅಂತೆಯೇ ''ಆಚಾರಹೀನಂ ನ ಪುನಂತಿ ವೇದಾಃ'' ಎಂಬುದಾಗಿ ಹೇಳಿದ್ದಾರೆ. ಆಚಾರವೇ ಶ್ರೇಷ್ಠವಾದ ಧರ್ಮವು. ಆಚಾರವೇ ಸರ್ವೋತ್ಕೃಷ್ಟವಾದ ಸಂಪತ್ತು. ಈ ಸಂಪತ್ತನ್ನು ಪಡೆದವನೇ ಶ್ರೀಮಂತನಲ್ಲದೆ ಭೌತಿಕವಾದ ಸಂಪತ್ತು ಬೇಕಾದಷ್ಟಿದ್ದರೂ ಅದನ್ನು ಪಡೆಯದವನು ದರಿದ್ರನೆಂತಲೇ ಭಾವಿಸಬೇಕು.

ವೀರಶೈವ ಸಿದ್ಧಾಂತದಲ್ಲಿ ಈ ಆಚಾರಗಳು ಮುಖ್ಯವಾಗಿ ಐದು ವಿಧವಾಗಿ ಅಂಗೀಕರಿಸಲ್ಪಟ್ಟಿವೆ. ಅವು ಆವವೆಂದರೆ ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ ಮತ್ತು ಗಣಾಚಾರ. ಈ ಪಂಚವಿಧಗಳಾದ ಆಚಾರಗಳು. ವೀರಶೈವರಿಗೆ ಪಂಚಪ್ರಾಣಗಳಷ್ಟೇ ಪ್ರಿಯಗಳಾದವುಗಳು, ವೀರಶೈವ ಸಾಧಕನಿಗೆ ಅಷ್ಟಾವರಣಗಳು ಅಂಗಗಳಾದರೆ ಪಂಚಾಚಾರಗಳು ಪ್ರಾಣಗಳೆಂಬುದಾಗಿ ಬೋಧಿಸಲ್ಪಟ್ಟಿವೆ. ಈ ಪಂಚವಿಧಗಳಾದ ಆಚಾರಗಳ ಸ್ವರೂಪ ವಿಶ್ಲೇಷಣೆಯು ಅತ್ಯಾವಶ್ಯಕವಾದುದರಿಂದ ಪ್ರಸಂಗಾನುಸಾರವಾಗಿ ಇಲ್ಲಿ ಅವುಗಳ ವಿಶ್ಲೇಷಣೆಯನ್ನು ಮಾಡಲಾಗುವುದು. ಈ ಆಚಾರಗಳ ವಿಸ್ತೃತವಾದ ವಿವೇಚನೆಯು ಚಂದ್ರಜ್ಞಾನಾಗಮದ ಕ್ರಿಯಾಪಾದದಲ್ಲಿ ಬಹುಸುಂದರವಾಗಿ ಮಾಡಲ್ಪಟ್ಟಿದೆ. ಅದನ್ನು ಆಧಾರವಾಗಿಟ್ಟುಕೊಂಡೇ ಇಲ್ಲಿ ಪ್ರತಿಯೊಂದು ಆಚಾರಗಳ ವಿಶ್ಲೇಷಣೆಯನ್ನು ಮಾಡಲಾಗುವುದು.

೧. ಲಿಂಗಾಚಾರ : ಪಂಚವಿಧ ಆಚಾರಗಳಲ್ಲಿ ಲಿಂಗಾಚಾರವೇ ಮೊದಲಿನದು. ಅಂಗನನ್ನು (ಜೀವಿಯನ್ನು) ಲಿಂಗವನ್ನಾಗಿಸುವ ಆಚಾರವೇ ಲಿಂಗಾಚಾರವು. ಶರೀರದ ಮೇಲೆ ಲಿಂಗವನ್ನು ಧರಿಸಿ ಪೂಜಿಸುವುದು. ಮನಸ್ಸಿನಲ್ಲಿ ಪ್ರಾಣ ಹಾಗೂ ಭಾವಲಿಂಗಗಳನ್ನು ಕುರಿತು ಚಿಂತಿಸುವುದು ಮತ್ತು ಆ ಲಿಂಗ ವಿಷಯಕವಾಗಿಯೇ ನಿದಿಧ್ಯಾಸಗೈಯುವುದು ಲಿಂಗಾಚಾರದ ಸ್ವರೂಪವಾಗಿರುತ್ತದೆ. ಈ ಆಚಾರದ ಸ್ವರೂಪವು ಚಂದ್ರಜ್ಞಾನಾಗಮದಲ್ಲಿ–

ಗುರುಣಾ ದತ್ತಲಿಂಗಾದ್ ವೈ ನಾಸ್ತಿದೈವಂ ಮಹೀತಲೇ ।
ಇತಿ ಭಾವಾನುಸಂಧಾನಂ ಲಿಂಗಾಚಾರಃ ಸ ಉಚ್ಯತೇ ॥

(ಚ. ಜ್ಞಾ. ಕ್ರಿ. ೬–೪)

ಈ ತೆರನಾಗಿ ಹೇಳಲಾಗಿದೆ. ತಾತ್ಪರ್ಯವೇನೆಂದರೆ ಸದ್ಗುರುವು ದೀಕ್ಷಾಸಂಸ್ಕಾರವನ್ನು ಮಾಡುವಾಗ ಸ್ಥೂಲಶರೀರಕ್ಕೆ ಇಷ್ಟಲಿಂಗವನ್ನು ಧರಿಸಿ ಸೂಕ್ಷ್ಮ ಹಾಗೂ ಕಾರಣ ಶರೀರಗಳಿಗೆ ಪ್ರಾಣ ಹಾಗೂ ಭಾವಲಿಂಗಗಳನ್ನು ಬೋಧಿಸುತ್ತಾನೆ. ವೀರಶೈವ ಸಾಧಕನಿಗೆ ಈ ಮೂರು ಲಿಂಗಗಳೇ ಆರಾಧ್ಯವಾಗಿರುತ್ತವೆ. ಕಾರಣ ಇವುಗಳನ್ನು ಹೊರತು ಪಡಿಸಿ ಬೇರೆಲ್ಲಿಯೂ ತನ್ನ ಶ್ರದ್ಧಾಸುಮನಗಳನ್ನು ಸಲ್ಲಿಸಕೂಡದು. ಈ ಸಿದ್ಧಾಂತದಲ್ಲಿ ಅಂಗನಿಗೆ ಸತಿಯೆಂತಲೂ ಲಿಂಗನಿಗೆ ಪತಿಯೆಂತಲೂ ಭಾವಿಸಿರುವುದುಂಟು. ಪತಿವ್ರತೆಯಾದ ಹೆಣ್ಣುಮಗಳು ತನ್ನ ಪತಿಯನ್ನು ಹೊರತುಪಡಿಸಿ ಬೇರಾರ ಸೇವೆಯನ್ನು ಮಾಡುವುದು ಹೇಗೆ ಅನುಚಿತವೋ ಹಾಗೆ ಅನ್ಯದೇವಾರ್ಚನೆಯು ಈತನಿಗೆ ಉಚಿತವಾದುದಲ್ಲ. ಈ ಲಿಂಗಾಚಾರವನ್ನು ಕಟ್ಟುನಿಟ್ಟಾಗಿ ಪರಿಪಾಲಿಸಿದರೆ ನಿಷ್ಠೆಯು ಬೆಳೆದು ಸಾಧಕನ ಅಂತರಂಗ ಪ್ರವೃತ್ತಿಯು ಬಲಗೊಳ್ಳುವುದು.

೨) ಸದಾಚಾರ : ಪಂಚಾಚಾರಗಳಲ್ಲಿ ಎರಡನೇ ಆಚಾರವೇ ಸದಾಚಾರವು. ಸತ್ಪುರುಷರು ಆಚರಿಸುವ ಆಚಾರವೇ ಸದಾಚಾರವು ಅಥವಾ ಸದ್ರೂಪನಾದ ಪರಮಾತ್ಮನ ಪ್ರಾಪ್ತಿಗೋಸುಗ ಆಚರಿಸಲ್ಪಡುವ ಆಚಾರವೇ ಸದಾಚಾರವು. ಇಲ್ಲವೆ ಶಿವನಿಗೆ ಅಥವಾ ಶಿವಭಕ್ತನಿಗೆ ಸಂತೋಷವನ್ನುಂಟು ಮಾಡುವ ಆಚಾರವೇ ಸದಾಚಾರವೆಂಬುದಾಗಿ ಇದರ ವ್ಯಾಖ್ಯಾನಗಳು ಪ್ರತಿಪಾದಿಸಲ್ಪಟ್ಟಿವೆ. ಚಂದ್ರಜ್ಞಾನಾಗಮದಲ್ಲಿ –

> ಧರ್ಮಾರ್ಜಿತೇನ ದ್ರವ್ಯೇಣಯತ್ ಸಂತರ್ಪಣಮನ್ವಹಮ್ ।
> ಗುರುಲಿಂಗಜಂಗಮಾನಾಂ ಸದಾಚಾರ ಇತಿ ಸ್ಮೃತಃ ॥
>
> (ಚ.ಜ್ಞಾ.ಕ್ರಿ. ೯–೬)

ಈ ವಿಧವಾಗಿ ಸದಾಚಾರದ ಸ್ವರೂಪವು ನಿರೂಪಿತವಾಗಿದೆ. ತಾತ್ಪರ್ಯವೇನೆಂದರೆ ಧರ್ಮಮಾರ್ಗದಲ್ಲಿ ಧನವನ್ನು ಸಂಗ್ರಹಿಸಿ ತನ್ನ ಆರಾಧ್ಯರಾದ ಗುರುಲಿಂಗಜಂಗಮರಿಗೆ ಪ್ರತಿದಿನ ಅನ್ನ, ವಸ್ತ್ರ ಮತ್ತು ಧನಾದಿಗಳನ್ನು ದಾನರೂಪದಲ್ಲಿ ಸಮರ್ಪಿಸಿ ಅವರ ಅನುಗ್ರಹವನ್ನು ಪಡೆಯುವುದೇ ವೀರಶೈವರ ಸದಾಚಾರವಾಗಿರುತ್ತದೆ.

ತಾನು ಸಂಪಾದಿಸಿದ ಅನ್ನಾದಿಗಳನ್ನು ತಾನೋರ್ವನೆ ಭುಂಜಿಸುವುದು ನಮ್ಮ ಭಾರತೀಯ ಸಂಸ್ಕೃತಿಯಲ್ಲ. ಅಂತೆಯೇ ''ತೇನ ತ್ಯಕ್ತೇನ ಭುಂಜೀಥಾಃ'' ಎಂಬುದಾಗಿ ಈಶಾವಾಸ್ಯೋಪನಿಷತ್ತು ಬೋಧಿಸಿದರೆ ಪುನಃ ''ಯೋಭುಂಕ್ತೇಸ್ತೇನ ಏವ ಸಃ'' (ಗೀತಾ ೩–೧೨)'' ಎಂಬುದಾಗಿ ಭಗವದ್ಗೀತೆಯು ಬೋಧಿಸಿದೆ. ತಾನು ಸಂಪಾದಿಸಿದ್ದರಲ್ಲಿಯೇ ತನ್ನ ಇಷ್ಟದೇವರಿಗೆ ಅತಿಥಿ–ಅಭ್ಯಾಗತರಿಗೆ ಸಮರ್ಪಿಸಿ ಉಪಭೋಗಿಸಬೇಕಾದುದು ಸುಸಂಸ್ಕೃತಿಯ ಪ್ರತೀಕವಾಗಿದೆ. ಇದಕ್ಕೆ ವಿಪರೀತವಾಗಿ ವರ್ತಿಸಿದವನು ಕಳ್ಳನೆಂಬುದಾಗಿ ಗೀತೆಯು ಹೇಳುತ್ತದೆ. ದಾರಿಹೋಕರಿಗೆ, ನಿರುದ್ಯೋಗಿಗಳಿಗೆ, ವಿದ್ಯಾರ್ಥಿಗಳಿಗೆ ಪ್ರತಿದಿನ ಅತಿಥಿರೂಪದಲ್ಲಿ ಅನ್ನ–ತೋಯಾದಿಗಳನ್ನು ಸಮರ್ಪಿಸಬೇಕೆಂಬುದಾಗಿ ಧರ್ಮಶಾಸ್ತ್ರದಲ್ಲಿ ಉಪದೇಶಿಸಲಾಗಿದೆ. ಮನೆಯಲ್ಲಿ ಅಡುಗೆ ತಯಾರಾದ ಬಳಿಕ ತತ್ಕ್ಷಣ ಭೋಜನಕ್ಕೆ ಕೂಡ್ರದೆ ಗೋದೋಹನಕಾಲ ಪರ್ಯಂತವಾಗಿ ಅಂದರೆ ಆಕಳನ್ನು ಹಿಂಡಲು ತಗಲುವ ವೇಳೆಯವರೆಗೆ ಅತಿಥಿಗಳ ಆಗಮನದ ಪ್ರತೀಕ್ಷೆಯನ್ನು

ಮಾಡಿ ನಂತರ ತಾನು ಭೋಜನವನ್ನು ಸ್ವೀಕರಿಸಬೇಕೆಂಬುದಾಗಿ ನಮ್ಮ ಪ್ರಾಚೀನ ಶಾಸ್ತ್ರಗಳು ಬೋಧಿಸುತ್ತವೆ. ಈ ನಿಯಮವನ್ನು ಪರಿಪಾಲಿಸದವನು ದೋಷಭಾಜನನಾಗುತ್ತಾನೆ. ಹೀಗೆ ಶಾಸ್ತ್ರೋಕ್ತಪದ್ಧತಿಯಂತೆ ಅನ್ನ–ತೋಯಾದಿಗಳನ್ನು ಗುರು–ಲಿಂಗ-ಜಂಗಮಾದಿಗಳಿಗೆ ಸಮರ್ಪಿಸಿ ಅವರನ್ನು ಸಂತೋಷಗೊಳಿಸುವುದೇ ವೀರಶೈವರ ಸದಾಚಾರವಾಗಿರುತ್ತದೆ. ಈ ಸದಾಚಾರವು ಎಂಟು ವಿಧಗಳಾದ ಶೀಲಗಳನ್ನು ಒಳಗೊಂಡುದಾಗಿರುತ್ತದೆ. ಶೀಲವೆಂದರೆ ಶಿವತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಉತ್ಕಟವಾದ ಬಯಕೆಯು. ಇದಕ್ಕೆ ಅನುಗುಣವಾದ ಎಂಟು ವಿಧ ಆಚಾರಗಳೇ ಅಷ್ಟಶೀಲಗಳೆಂದು ಕರೆಯಿಸಿಕೊಳ್ಳುತ್ತವೆ. ಅವು ಯಾವುವೆಂದರೆ ಅಂಕುರಶೀಲ, ಉತ್ಪನ್ನಶೀಲ, ದ್ವಿದಲಶೀಲ, ಪ್ರವೃದ್ಧಶೀಲ, ಸಪ್ರಕಾಂಡಶೀಲ, ಸಶಾಖಾಶೀಲ, ಸಪುಷ್ಪಶೀಲ ಮತ್ತುಸಫಲಶೀಲಗಳು.

೧) ಅಂಕುರಶೀಲ – ಗುರು ಕರುಣೆಯಿಂದ ತ್ರಿವಿಧ ದೀಕ್ಷೆಗಳನ್ನು ಪಡೆದು ತನ್ನ ಸ್ಥೂಲ–ಸೂಕ್ಷ್ಮ ಹಾಗೂ ಕಾರಣ ಶರೀರಗಳನ್ನು ಶುದ್ಧಿಗೊಳಿಸಿಕೊಂಡು ಗುರುವಿನ ಉಪದೇಶದ ಮೇರೆಗೆ ಪ್ರತಿದಿನ ನಿಯಮಪೂರ್ವಕವಾಗಿ ಇಷ್ಟಲಿಂಗ ಪೂಜಾದಿಗಳನ್ನು ಆಚರಿಸುವುದೇ ಅಂಕುರಶೀಲವು.

೨) ಉತ್ಪನ್ನಶೀಲ – ತಾನು ದೀಕ್ಷಾಸಂಸ್ಕಾರವನ್ನು ಹೊಂದಿದಂತೆ ತನ್ನ ಸತಿ,ಪುತ್ರ ಪೌತ್ರಾದಿಗಳಿಗೂ ಸಹ ಸ್ವಗೋತ್ರದ ಗುರುಗಳಿಂದ ದೀಕ್ಷಾಸಂಸ್ಕಾರವನ್ನು ಕೊಡಿಸಿ ಅವರನ್ನು ತನ್ನಂತೆ ಶುದ್ಧೀಕರಿಸಿಕೊಂಡು ದೀಕ್ಷಿತರಾದವರೊಂದಿಗೇನೇ ಸಹವಾಸದ ವ್ಯವಹಾರಗಳನ್ನು ಆಚರಿಸುವುದೇ ಉತ್ಪನ್ನಶೀಲವು.

೩) ದ್ವಿದಲಶೀಲ– ಶರೀರದ ಮೇಲೆ ಇಷ್ಟಲಿಂಗ, ಭಸ್ಮ ಮತ್ತು ರುದ್ರಾಕ್ಷ್ಯಾದಿ ವೀರಶೈವ ಲಾಂಛನಗಳನ್ನು ತಪ್ಪದೇ ಸರ್ವದಾ ಧರಿಸಿಕೊಂಡಿರುವುದೇ ದ್ವಿದಲಶೀಲವು.

೪) ಪ್ರವೃದ್ಧಶೀಲ– ಪ್ರತಿದಿನ ಶಿವನ ಮಹಾತ್ಮೆಯನ್ನು ಶ್ರವಣಮಾಡುವುದು. ಶ್ರವಣಮಾಡಿದ್ದನ್ನೇ ಮನನ–ನಿಧಿಧ್ಯಾಸನಗಳನ್ನು ಮಾಡಿ ಶಿವಭಕ್ತಿಯನ್ನು ಮನಸ್ಸಿನಲ್ಲಿ ಬೆಳೆಸಿಕೊಳ್ಳುವುದೇ ಪ್ರವೃದ್ಧಶೀಲವೆನ್ನಿಸಿಕೊಳ್ಳುತ್ತದೆ.

೫) ಸಪ್ರಕಾಂಡಶೀಲ– ವೀರಶೈವ ಸಿದ್ಧಾಂತದ ನಿತ್ಯಕರ್ಮವಾದ ಇಷ್ಟಲಿಂಗ ಪೂಜೆಯನ್ನು ನಿಯಮಪೂರ್ವಕವಾಗಿ ನೆರವೇರಿಸುವುದು. ಒಂದು ವೇಳೆ ಯಾವುದೋ ಕಾರಣದಿಂದ ಆ ನಿತ್ಯಕರ್ಮವಾಗದಿದ್ದಾಗ ಅನ್ನ–ಜಲಾದಿಗಳನ್ನು ಗ್ರಹಿಸದೆ ಉಪವಾಸವನ್ನಾಚರಿಸುವುದೇ ಸಪ್ರಕಾಂಡಶೀಲವು.

೬) ಸಶಾಖಾಶೀಲವು – ಇಷ್ಟಲಿಂಗಕ್ಕೆ ಅರ್ಪಿತವಾಗದೇ ಇರುವ ಅದಾವ ಭಕ್ಷ್ಯ-ಭೋಜ್ಯಾದಿ ಪ್ರದಾರ್ಥಗಳನ್ನು ಗ್ರಹಿಸದಿರುವಿಕೆಯೇ ಸಶಾಖಾಶೀಲವು.

೭) ಸಪುಷ್ಪಶೀಲವು – ಇಷ್ಟಲಿಂಗಕ್ಕೆ ಅರ್ಪಿತವಾದ ಪ್ರಸಾದವನ್ನು ಪರಿತ್ಯಜಿಸದೇ ಸಂಪೂರ್ಣವಾಗಿ ಸೇವಿಸುವುದು ಅರ್ಥಾತ್ ಪ್ರಸಾದದ ಬಗ್ಗೆ ಅದೆಂದೂ ಅವಜ್ಞೆಯನ್ನು ತಾಳದಿರುವುದೇ ಸಪುಷ್ಪಶೀಲವು.

೮) ಸಫಲಶೀಲವು- ವೀರಶೈವ ಸಿದ್ಧಾಂತದಲ್ಲಿ ಪೂಜನೀಯರೆಂದು ಪರಿಗಣಿಸಲ್ಪಟ್ಟಿರುವ ಗುರುಲಿಂಗಜಂಗಮರಲ್ಲಿ ಭೇದಬುದ್ಧಿಯನ್ನು ತಾಳದೆ ಇವರು ಒಂದೇ ತತ್ವದ ಮೂರು ಸ್ವರೂಪಗಳೆಂದು ಭಾವಿಸಿ ಅವರನ್ನು ಅರ್ಚಿಸುವುದೇ ಸಫಲಶೀಲವು.

ಹೀಗೆ ಈ ಸದಾಚಾರವು ಎಂಟು ಅವಾಂತರ ಶೀಲಗಳಿಂದೊಡಗೂಡಿದುದಾಗಿದೆ. ಪರಮಾತ್ಮನು ಸದಾಚಾರ ಪ್ರಿಯನಾಗಿದ್ದಾನೆ. ಸದಾಚಾರವನ್ನು ಪರಿಪಾಲಿಸುವುದೇ ನಿಜವಾದ ಈಶ್ವರನ ಪೂಜೆಯು. ಇಂತಹ ಸದಾಚಾರವಿಲ್ಲದ ಅದಾರೂ ಶಿವಕೃಪೆಯನ್ನು ಪಡೆಯಲಾರರು. ಆದಕಾರಣ ಪ್ರತಿಯೊಬ್ಬ ವೀರಶೈವರು ಸದಾಚಾರವನ್ನು ನಿಷ್ಠೆಯಿಂದ ಪರಿಪಾಲಿಸಬೇಕು. ಇದು ಭಕ್ತರ ಮನೋಭೀಷ್ಟವನ್ನು ಅನುಗ್ರಹಿಸುವ ಕಲ್ಪವೃಕ್ಷ ಸದೃಶವಾಗಿದೆ. ಆದ್ದರಿಂದ ಪ್ರತಿಯೊಬ್ಬರೂ ಸದಾಚಾರಸಂಪನ್ನರಾಗಿರಬೇಕು. ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩ ಆಗಷ್ಟ್ ೧೯೯೨
(ಸ್ಥಳ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಈ ಹಿಂದೆ ನೀವೆಲ್ಲ ಪಂಚಾಚಾರಗಳಲ್ಲಿಯ ಲಿಂಗಾಚಾರ ಹಾಗೂ ಸದಾಚಾರಗಳ ಸ್ವರೂಪದ ಬಗ್ಗೆ ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಸದ್ಯಃ ಪ್ರಸಂಗಪ್ರಾಪ್ತವಾದ ಶಿವಾಚಾರ ಸ್ವರೂಪದ ಬಗ್ಗೆ ವಿವೇಚಿಸೋಣ.

೩) ಶಿವಾಚಾರ– ಸೃಷ್ಟಿ, ಸ್ಥಿತಿ,ಸಂಹಾರ; ನಿಗ್ರಹ, ಅನುಗ್ರಹಗಳೆಂಬ ಪಂಚಕೃತ್ಯ ಗಳನ್ನು ನಿರ್ವಹಿಸುವ ಶಿವನೇ ಪರಬ್ರಹ್ಮಸ್ವರೂಪನು. ಆವನ ಹೊರತಾಗಿ ಬೇರಾರೂ ನನಗೆ ಗತಿಯಿಲ್ಲ ಎಂಬ ಭಾವನೆಯಿಂದ ಶಿವಶರಣಾಗತಿಯನ್ನು ಹೊಂದುವುದೇ ಶಿವಾಚಾರವು. ಇಂತಹ ಭಾವನೆಯಿಂದ ಶಿವಭಕ್ತಿಯು ದೃಢಗೊಂಡು ಸರ್ವತ್ರ ಶಿವನನ್ನು ನೋಡುವ ಶಿವದೃಷ್ಟಿಯು ಪ್ರಾಪ್ತವಾಗುವುದು. ಇಂತಹ ಸರ್ವಶಿವಮಯ ಭಾವದ ಉದಯವಾಗೋಣದರಿಂದ ಈ ಶಿವಾಚಾರಿಯು ಯಾರನ್ನೂ ದ್ವೇಷಿಸಲಾರ, ಯಾರ ಬಗ್ಗೆಯೂ ಹೀನಬುದ್ಧಿಯನ್ನು ತಾಳಲಾರ. ಭಾವಶುದ್ಧವಾಗದೇ ಈ ಶಿವಾಚಾರವು ಸಮನಿಸದು. ಅಂತೆಯೇ ಭಾವಶುದ್ಧಿಗೆ ಪದಾರ್ಥಶುದ್ಧಿಯು ಆವಶ್ಯಕವೆಂಬುದನ್ನು ತಿಳಿಯಪಡಿಸಲೋಸುಗ ಈ ಶಿವಾಚಾರದಲ್ಲಿ ಹದಿನಾರು ಪ್ರಕಾರದ ಪದಾರ್ಥಶುದ್ಧಿಯು ಚಂದ್ರಜ್ಞಾನಾಗಮದಲ್ಲಿ–

ದ್ರವ್ಯಕ್ಷೇತ್ರಗೃಹಾದೀನಾಂ ಷೋಡಶಾನಾಂ ವಿಶೋಧನಮ್।
ಶಿವಶಾಸ್ತ್ರೋಕ್ತಮಾರ್ಗೇಣ ಶಿವಾಚಾರ ಇತಿ ಸ್ಮೃತಃ ॥

(ಚ.ಜ್ಞಾ.ಕ್ರಿ. ೯–೩೨)

ಹೀಗೆ ಪ್ರತಿಪಾದಿಸಲ್ಪಟ್ಟಿದೆ. ಅವುಗಳನ್ನು ಇಲ್ಲಿ ಕ್ರಮವಾಗಿ ಪರಿಶೀಲಿಸೋಣ.

೧) ದ್ರವ್ಯಶುದ್ಧಿ - ಶಿವಭಕ್ತನಾದವನಿಂದಲೇ ಫಲಮೂಲಾದಿಗಳನ್ನು ಗ್ರಹಿಸು ವುದು. ಒಂದು ವೇಳೆ ಶಿಭಕ್ತನಲ್ಲದವನಿಂದ ಅವುಗಳು ಪ್ರಾಪ್ತವಾದರೆ ಮಂತ್ರೋ ಚ್ಚಾರಣ ಪೂರ್ವಕ ಅವುಗಳ ಮೇಲೆ ಭಸ್ಮ ಪ್ರೋಕ್ಷಣೆಯನ್ನು ಮಾಡಿ ಅವುಗಳನ್ನು ಸ್ವೀಕರಿಸುವುದೇ ದ್ರವ್ಯಶುದ್ಧಿಯು.

೨) ಕ್ಷೇತ್ರಶುದ್ಧಿ - ತನ್ನ ಹೊಲ ಇಲ್ಲವೆ ಮನೆಯ ನಾಲ್ಕೂ ಮೂಲೆಗಳಲ್ಲಿ ನಂದಿ ಹಾಗೂ ಶಿವಲಿಂಗಗಳಿಂದ ಅಂಕಿತಗಳಾದ ಲಿಂಗಮುದ್ರಾಶಿಲೆಗಳನ್ನು ಸಂಸ್ಥಾಪಿಸುವುದು. ಕ್ಷೇತ್ರಶುದ್ಧಿಯೆನಿಸಿಕೊಳ್ಳುವುದು. ಲಿಂಗಧಾರಣೆಯಿಂದ ಶರೀರವು ಶುದ್ಧವಾಗುವಂತೆ ಹೊಲಮನೆಗಳೂ ಸಹ ಶುದ್ಧವಾಗಿರಬೇಕೆಂಬ ಉದ್ದೇಶದಿಂದಲೇ ಈ ಆಚರಣೆಯು ಇಂದಿಗೂ ರೂಢಿಯಲ್ಲಿದೆ. ಆದರೆ ಇಂದಿನ ದಿನಮಾನಗಳಲ್ಲಿ ಈ ಲಿಂಗಮುದ್ರಾ

ಕಲ್ಲುಗಳನ್ನು ಸ್ಥಾಪಿಸುವುದು ಕೇವಲ ಮಠ ಮಂದಿರಗಳಿಗೆ ಮಾತ್ರ ಸೀಮಿತವಾಗಿ ಉಳಿದಿದೆ. ಆದರೆ ಅತಿ ಪ್ರಾಚೀನಕಾಲದಲ್ಲಿ ಪ್ರತಿಯೊಬ್ಬ ಶಿವಭಕ್ತನು ತನ್ನ ಭೂಮಿಯ ಮೇರೆಯಲ್ಲಿ ಈ ಲಿಂಗಮುದ್ರಾಂಕಿತಗಳಾದ ಶಿಲೆಗಳನ್ನು ಸಂಸ್ಥಾಪಿಸುತ್ತಿದ್ದನು. ಆ ಶಿಲೆಗಳನ್ನು ನೋಡಿದಾಗಲೇ ಈ ಹೊಲವು ಶಿವಭಕ್ತರದೆಂಬುದು ತಿಳಿದುಬರುತ್ತಿತ್ತು. ಇಂದು ಲುಪ್ತವಾಗುತ್ತಿರುವ ಈ ಪದ್ಧತಿಯನ್ನು ಪ್ರಚಾರದಲ್ಲಿ ತಂದು ಲಿಂಗಮುದ್ರಾಂಕಿತ ಶಿಲೆಗಳನ್ನು ಪ್ರತಿಷ್ಠಾಪಿಸುವುದು ಸೂಕ್ತವಾದುದಾಗಿದೆ.

೩) ಗೃಹಶುದ್ಧಿ - ಶಿವಭಕ್ತನಾದವನು ತನ್ನ ಮನೆಯನ್ನು ನಿರ್ಮಿಸಿಕೊಳ್ಳುವಾಗ ಶಿವಭಕ್ತಿಸಂಪನ್ನರಾದ ಗೌಂಡಿಗಳನ್ನೇ ನೇಮಿಸಿಕೊಳ್ಳುವುದು ಅಥವಾ ಅನ್ಯರಿಂದ ನಿರ್ಮಿಸಲ್ಪಟ್ಟರೂ ಮನೆಯ ಮಹಾದ್ವಾರದ ಮೇಲೆ ನಂದಿ ಹಾಗೂ ಶಿವಲಿಂಗಗಳನ್ನು ಕೆತ್ತಿಸುವುದು 'ಗೃಹಶುದ್ಧಿ'ಯೆನಿಸಿಕೊಳ್ಳುವುದು.

೪) ಭಾಂಡಶುದ್ಧಿ - ಶಿವಭಕ್ತನಿಂದ ನಿರ್ಮಿಸಲ್ಪಟ್ಟ ಇಲ್ಲವೆ ಶಿವಲಿಂಗಾಂಕಿತಗಳಾದ ಭಾಂಡಗಳನ್ನು ಅಡಿಗೆ ಮುಂತಾದ ಕಾರ್ಯಗಳಿಗೆ ಉಪಯೋಗಿಸುವುದೇ ಭಾಂಡ ಶುದ್ಧಿಯು.

೫) ತೃಣಶುದ್ಧಿ - ತನ್ನ ಮನೆ-ಮಠಗಳಲ್ಲಿಯ ಆಕಳು-ಎತ್ತು ಮುಂತಾದ ಪಶುಗಳಿಗೆ ಬೇಕಾದ ಹುಲ್ಲನ್ನು ಶಿವಭಕ್ತರಿಂದಲೇ ತರಿಸಿಕೊಳ್ಳುವುದು. ಅನ್ಯರು ಯಾರಾದರೂ ತಂದರೆ ಮಂತ್ರಪೂತವಾದ ಭಸ್ಮವನ್ನು ಪ್ರೋಕ್ಷಿಸಿ ಅದರಿಂದ ಅದನ್ನು ಶುದ್ಧೀಕರಿಸಿಕೊಳ್ಳುವುದೇ ತೃಣಶುದ್ಧಿಯು.

೬) ಕಾಷ್ಠಶುದ್ಧಿ - ಶಿವಾಚಾರಸಂಪನ್ನನಾದ ಸಾಧಕನು ಅಡುಗೆ ಮಾಡಲು ತನಗೆ ಬೇಕಾದ ಉರುವಲವನ್ನು ಶಿವಭಕ್ತನಾದವನಿಂದಲೇ ತೆಗೆದುಕೊಳ್ಳಬೇಕು ಇಲ್ಲವೆ ಬೇರೊಬ್ಬರಿಂದ ತೆಗೆದುಕೊಳ್ಳುವ ಪ್ರಸಂಗ ಬಂದಾಗ ಆ ಕಟ್ಟಿಗೆಗಳನ್ನು ಭಸ್ಮ ಪ್ರೋಕ್ಷಣೆಯಿಂದ ಶುದ್ಧೀಕರಿಸಿಕೊಳ್ಳುವುದೇ ಕಾಷ್ಠಶುದ್ಧಿಯು.

೭) ವೀಟಿಕಾಶುದ್ಧಿ- ಶಿವಭಕ್ತನಾದವನಿಂದಲೇ ತಾಂಬೂಲವನ್ನು ಸ್ವೀಕರಿಸುವುದು ಅಥವಾ ಅನ್ಯರಿಂದ ದೊರೆತಾಗ ಅದನ್ನು ಭಸ್ಮ ಪ್ರೋಕ್ಷಣೆಯಿಂದ ಶುದ್ಧ ಮಾಡಿಕೊಳ್ಳು ವುದೇ ವೀಟಿಕಾಶುದ್ಧಿಯೆಂದೆನಿಸಿಕೊಳ್ಳುವುದು.

೮) ಪಾಕಶುದ್ಧಿ - ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದ ಶಿವಭಕ್ತನಿಂದಲೇ ಪಾಕಾದಿಗಳನ್ನು ತಯಾರಿಸುವುದು ಮತ್ತು ಆ ಪಕ್ವವಾದ ಅನ್ನದಮೇಲೆ ಭವಿಗಳ ದೃಷ್ಟಿಬೀಳದಂತೆ ಜಾಗರೂಕತೆಯಿಂದಿರುವುದೇ ಪಾಕ ಶುದ್ಧಿಯು.

೯) ರಸಶುದ್ಧಿ - ಹಾಲು, ಮೊಸರು, ತುಪ್ಪ, ಬೆಣ್ಣೆ ಮಜ್ಜಿಗೆ ಇವುಗಳಿಗೆ ರಸ ಪದಾರ್ಥಗಳೆಂದು ಕರೆಯುವರು. ಶಿವಭಕ್ತನಾದವನು ಆಕಳ ಹಾಲು ಮೊಸರುಗಳನ್ನೇ ಉಪಯೋಗಿಸಬೇಕೇ ವಿನಃ ಎಮ್ಮೆ ಮುಂತಾದ ಪಶುಗಳ ಹಾಲು ಮುಂತಾದವುಗಳನ್ನು ಉಪಯೋಗಿಸಬಾರದು. ಇದಕ್ಕೇನೇ ರಸಶುದ್ಧಿಯೆನ್ನುವರು. ರಸಶುದ್ಧವಿದ್ದರೆ ರಕ್ತಶುದ್ಧಿ ಯಾಗುವುದು. ಅದರಂತೆ ಮುಂದಿನ ಮಾಂಸ, ಮಜ್ಜಾ ಅಸ್ಥಿ ಮತ್ತು ಶುಕ್ರ

ಶೋಣಿತಗಳು ಶುದ್ಧಗಳಾಗುವವು. ಶುಕ್ರಶೋಣಿತಗಳು ಶುದ್ಧವಿದ್ದರೆ ಅದರಿಂದ ಉತ್ಪನ್ನವಾಗುವ ಸಂತತಿಯೂ ಸಹ ಶುದ್ಧವಾಗಿರಲು ಸಾಧ್ಯವಾಗುವುದು. ಇಂದಿನ ದಿನಮಾನಗಳಲ್ಲಿ ಉಂಟಾಗುತ್ತಿರುವ ಅಶುದ್ಧ ಸಂತತಿಗೆ ನಮ್ಮ ಅಶುದ್ಧವಾದ ರಸಸೇವನೆಯೇ ಕಾರಣವೆಂಬುದು ವೈಜ್ಞಾನಿಕವಾದ ಸತ್ಯವು. ಅಂತೆಯೇ ನಮ್ಮ ಪೂರ್ವಾಚಾರ್ಯರು ರಸಶುದ್ಧಿಯತ್ತ ಗಮನಹರಿಸಿದ್ದರೆಂಬುದು ತಿಳಿದುಬರುತ್ತದೆ. ಸಮಾಜದಲ್ಲಿ ಇಂದಿನ ಸಂತಾನದ ಪರಿಸ್ಥಿತಿಯನ್ನವಲೋಕಿಸಿದಾಗ ಅಂದು ಹೇಳಿದ ಆ ರಸಶುದ್ಧಿಯು ಇಂದಿಗೂ ಅದೆಷ್ಟು ಉಚಿತವಾದುದೆಂಬುದು ತಿಳಿದುಬರುತ್ತದೆ. ಆದ್ದರಿಂದ ಮನುಷ್ಯನು ಶಿವಾಚಾರ ಸಂಪನ್ನನಾಗಿ ರಸಶುದ್ಧಿಯತ್ತ ತನ್ನ ಲಕ್ಷ್ಯವನ್ನು ಹರಿಸಬೇಕು.

೧೦) ಭವಶುದ್ಧಿ - ಕಾಮ್ಯ ಕರ್ಮಗಳನ್ನು ಪರಿತ್ಯಜಿಸಿ ನಿಷ್ಕಾಮ ಕರ್ಮವನ್ನಾಚರಿಸಿ ತನ್ನ ಅಂತಃಕರಣವನ್ನು ಪರಿಶುದ್ಧ ಮಾಡಿಕೊಂಡು ಆ ಶುದ್ಧಾಂತಃಕರಣದಿಂದ ತತ್ತ್ವಜ್ಞಾನವನ್ನು ಪ್ರಾಪ್ತಮಾಡಿಕೊಂಡು ಪುನರ್ಜನ್ಮರಾಹಿತ್ಯ ರೂಪವಾದ ಸ್ಥಿತಿಯನ್ನು ಸಂಪಾದಿಸುವುದೇ ಭವಶುದ್ಧಿಯು. 'ಭವ' ಎಂದರೆ ಜನನ–ಮರಣಗಳೆಂದರ್ಥ. ಮನುಷ್ಯನು ಕಾಮ್ಯಕರ್ಮಾಸಕ್ತನಾದಾಗ ಆ ಕರ್ಮಫಲಗಳನ್ನನುಭವಿಸುವುದಕ್ಕಾಗಿ ಈ ಸಂಸಾರದಲ್ಲಿ ಅದೆಷ್ಟೋಸಾರೆ ಪುನಃ ಪುನಃ ಜನನ–ಮರಣಗಳನ್ನು ಪಡೆಯಬೇಕಾಗುತ್ತದೆ. ಈ ಭವಚಕ್ರದಿಂದ ಪಾರಾಗಬೇಕಾದರೆ ನಿಷ್ಕಾಮ ಕರ್ಮಾಸಕ್ತನಾಗಬೇಕಾಗುವುದು. ನಿಷ್ಕಾಮ ಕರ್ಮಾನುಷ್ಠಾನದಿಂದ ಅಂತಃಕರಣವು ಪರಿಶುದ್ಧಗೊಂಡಾಗ ಆ ಪರಿಶುದ್ಧಾಂತಃಕರಣದಲ್ಲಿ ಆತ್ಮಾನಾತ್ಮ ವಿವೇಕವು ಉದಯಿಸಿ ಶಿವಭಕ್ತನಿಗೆ ಶಿವಜ್ಞಾನವು ಪ್ರಾಪ್ತವಾಗುವುದು. ಹೀಗೆ ಶಿವಜ್ಞಾನ ಸಂಪನ್ನನಾದವನಿಗೆ ಪುನರ್ಜನ್ಮವಿರುವುದಿಲ್ಲ. ಈ ಪುನರ್ಜನ್ಮರಾಹಿತ್ಯ ಸ್ಥಿತಿಯನ್ನು ಪಡೆದುಕೊಳ್ಳುವುದಕ್ಕೇನೇ ಇಲ್ಲಿ ಭವಶುದ್ಧಿಯೆಂಬುದಾಗಿ ಕರೆದಿದ್ದಾರೆ.

೧೧) ಭೂತಶುದ್ಧಿ - ಭೂತವೆಂದರೆ ಪ್ರಾಣಿಗಳು ಎಂದರ್ಥ. ಶಿವಾಚಾರ ಸಂಪನ್ನನಾದವನು ಸರ್ವಪ್ರಾಣಿಗಳಲ್ಲಿ ದಯಾಭಾವನೆಯನ್ನು ತಾಳಿದವನಾಗಿರಬೇಕು. ಯಾವ ಪ್ರಾಣಿಯನ್ನೂ ದೂಷಿಸಬಾರದು. ಹೀಗೆ ಪ್ರಾಣಿದೂಷಣರಾಹಿತ್ಯ ಹಾಗೂ ಸರ್ವಭೂತ ದಯಾಲುತ್ವಕ್ಕೆ ಭೂತಶುದ್ಧಿಯೆಂಬುದಾಗಿ ಕರೆದಿದ್ದಾರೆ.

೧೨) ಭಾವಶುದ್ಧಿ - ಮನಸ್ಸಿನ ಕಾಮನೆಗಳೆಲ್ಲವುಗಳನ್ನು ತೊರೆದು ಸದಾ ಶಿವಭಾವನೆಯಿಂದೊಡಗೂಡಿಕೊಂಡಿರುವುದೇ ಭಾವಶುದ್ಧಿಯೆಂದು ಕರೆಯಿಸಿಕೊಳ್ಳುವುದು. ಸರ್ವ ಶುದ್ಧಿಗಳಲ್ಲಿ ಭಾವಶುದ್ಧಿಯು ಬಹಳ ಪ್ರಮುಖವಾದುದು. ಎಲ್ಲವೂ ಶುದ್ಧವಾಗಿದ್ದು ಭಾವವೇ ಅಶುದ್ಧವಾಗಿದ್ದರೆ ಅದಾವ ಪ್ರಯೋಜನವೂ ಆಗಲಾರದು. ಆದಕಾರಣ ಶಿವಾಚಾರಿಯು ಸದಾ ಶಿವಭಾವನೆಯಿಂದ ಕೂಡಿಕೊಂಡಿರಬೇಕು.

೧೩) ಮಾರ್ಗಶುದ್ಧಿ - ತಾನು ದಾರಿಯಲ್ಲಿ ನಡೆಯುವಾಗ ವಾಹನಗಳ ಮೇಲೆ ಕುಳಿತು ಹೋಗುವಾಗ, ಇರುವೆ ಮುಂತಾದ ಯಾವುದೇ ಪ್ರಾಣಿಗಳಿಗೆ ತನ್ನಿಂದ ಹಿಂಸೆಯಾಗದಂತೆ ಜಾಗರೂಕತೆಯಿಂದ ಮಾರ್ಗವನ್ನು ಕ್ರಮಿಸುವುದೇ ಮಾರ್ಗಶುದ್ಧಿಯು. ಹಿಂಸೆಯು ಅತ್ಯಂತ ಹೀನಕೃತ್ಯವಾಗಿರುವುದರಿಂದ ಈ ಕೃತ್ಯವನ್ನೆಸಗುವ ಮನುಷ್ಯನು

ಕ್ರಮಶಃ ಹೀನಭಾವನೆಯುಳ್ಳವನಾಗುತ್ತಾನೆ. ಹೀನಭಾವನೆಯೇ ಮನುಷ್ಯನ ಅಧಃ ಪತನಕ್ಕೆ ಕಾರಣೀಭೂತವಾಗುವುದು. ಪ್ರಾಣಿಹಿಂಸೆಯ ಈ ಅವನತಿಯನ್ನರಿತೇ ನಮ್ಮ ಪೂರ್ವಾಚಾರ್ಯರು ಅಹಿಂಸಾ ಧರ್ಮಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಆದಕಾರಣ ಶಿವಭಕ್ತನಾದವನು ತನ್ನಿಂದ ಪ್ರಾಣಿಹಿಂಸೆಯಾಗದಂತೆ ಎಚ್ಚರಿಕೆಯನ್ನು ವಹಿಸಿಕೊಳ್ಳ ಬೇಕು.

೧೪) ಕಾಲಶುದ್ಧಿ - ಕಾಲ ಎಂದರೆ ಸಮಯ, ವೇಳೆ ಎಂದರ್ಥ, ಶಾಸ್ತ್ರದಿಂದ ವಿಧಿಸಲ್ಪಟ್ಟ ಪ್ರಾತಃಕಾಲ ಹಾಗೂ ಸಾಯಂಕಾಲದ ಸಂಧ್ಯಾಸಮಯಗಳಲ್ಲಿ ನಿಶ್ಶಬ್ದವೂ ಮನೋರಮವೂ ಆದ ಸ್ಥಾನದಲ್ಲಿ ಕುಳಿತುಕೊಂಡು ಆನಂದವಾಗಿ ತನ್ನ ಇಷ್ಟಲಿಂಗ ವನ್ನು ಆರಾಧಿಸುವುದೇ ಕಾಲಶುದ್ಧಿಯು. ಅಂತೆಯೇ ಪ್ರತಿಯೊಬ್ಬ ವೀರಶೈವರು ಪ್ರಾತಃ ಹಾಗೂ ಸಂಧ್ಯಾಕಾಲೀನ ಪ್ರಶಾಂತ ವೇಳೆಯಲ್ಲಿ ಶಿವಪೂಜೆಯನ್ನು ತಪ್ಪದೇ ಆಚರಿಸಬೇಕು.

೧೫) ವಾಕ್‌ಶುದ್ಧಿ - ವಾಕ್ ಅಂದರೆ ವಾಣಿಯು. ಈ ವಾಣಿಯನ್ನು ಶುದ್ಧವಾಗಿರಿ ಸುವುದಕ್ಕೆ ವಾಕ್‌ಶುದ್ಧಿಯೆಂದು ಕರೆಯುತ್ತಾರೆ. ಸುಳ್ಳು ಹೇಳುವುದರಿಂದ, ಕಠೋರಶಬ್ದ ಗಳನ್ನು ಪ್ರಯೋಗಿಸುವುದರಿಂದ, ಅಶ್ಲೀಲ ಶಬ್ದಗಳನ್ನು ಬಳಸುವುದರಿಂದ ಡಾಂಭಿಕ ಗಳಾದ ಆತ್ಮಪೌರುಷೇಯ ವಚನಗಳನ್ನು ಬಳಸುವುದರಿಂದ ವಾಣಿಯು ಅಶುದ್ಧವಾಗು ವುದು. ವಾಣಿಯ ಅಶುದ್ಧತೆಯಿಂದ ಸಮಾಜದಲ್ಲಿ ಪರಸ್ಪರ ಕಲಹ, ದ್ವೇಷ ಅಸೂಯಾದಿಗಳು ಬೆಳೆದು ಅಶಾಂತಿಯ ವಾತಾವರಣವು ನಿರ್ಮಾಣಗೊಳ್ಳುತ್ತದೆ. ಅಂತೆಯೇ ಕನ್ನಡದಲ್ಲಿ ''ಮಾತು ಬಲ್ಲವ ಮಾಣಿಕ ತಂದ, ಮಾತರಿಯದವ ಜಗಳ ತಂದ'' ಎಂಬ ನಾಣ್ಣುಡಿಯು ಪ್ರಸಿದ್ಧವಾಗಿದೆ. ಅಶುದ್ಧ ಶಬ್ದ ಬಳಕೆಯಿಂದ ವಾಣಿಯು ಅಪವಿತ್ರವಾಗುವಂತೆ ಶುದ್ಧ ಹಾಗೂ ಪವಿತ್ರ ಶಬ್ದಬಳಕೆಯಿಂದ ಅದು ಪವಿತ್ರ ವಾಗುತ್ತದೆ. ಅಂತೆಯೇ ವಾಣಿಯನ್ನು ಪವಿತ್ರಗೊಳಿಸಿಕೊಳ್ಳಲೋಸುಗ ವೈದಿಕಮಂತ್ರ ಗಳಾದ ಶ್ರೀರುದ್ರಪಠಣ, ಭಗವನ್ನಾಮ ಜಪ, ಭಜನೆ ಮುಂತಾದವುಗಳನ್ನು ಸಾಧಕನು ಪ್ರತಿದಿನವೂ ಮಾಡುತ್ತಿರಬೇಕು. ಇದುವೇ ವಾಕ್‌ಶುದ್ಧಿಯು.

೧೬) ಜನಶುದ್ಧಿ - ಶಿವಾಚಾರದಲ್ಲಿಯ ಕೊನೆಯದಾದ ಶೀಲವೇ ಜನಶುದ್ಧಿಯು. ಕೂಡ್ರುವಾಗ, ಮಲಗುವಾಗ, ಪ್ರಯಾಣವನ್ನು ಮಾಡುವಾಗ ಸಭಾ ಸಮ್ಮೇಲನಗಳಲ್ಲಿ ಭಾಗವಹಿಸುವಾಗ ಶಿವಭಕ್ತಿಸಂಪನ್ನರಾದ ಜನರೊಂದಿಗೆ ವ್ಯವಹರಿಸುವುದೇ ಜನ ಶುದ್ಧಿಯು. ತನ್ನ ಆಚಾರ-ವಿಚಾರಕ್ಕೆ ಪ್ರತಿಕೂಲರಾದವರೊಂದಿಗೆ ಕುಳಿತುಕೊಳ್ಳೋಣ ದರಿಂದ ಅಥವಾ ಯಾತ್ರಾದಿಗಳನ್ನು ಮಾಡೋಣದರಿಂದ ಅವರ ಕುಸಂಸ್ಕಾರವು ತನ್ನ ಮೇಲಾಗಿ ತಾನು ಮಾಡುತ್ತಿರುವ ಶಿವಭಕ್ತಿಗೆ ಪ್ರತಿಕೂಲ ಪರಿಸ್ಥಿತಿಯು ಉಂಟಾಗುವ ಸಂಭವವಿದೆ. ಆದ್ದರಿಂದ ಶಿವಾಚಾರಿಯಾದವನು ಸಂಗ-ಸಹವಾಸಗಳನ್ನು ಮಾಡು ವಾಗ ಬಹು ಎಚ್ಚರಿಕೆಯಿಂದಿರಬೇಕು. ''ಸಂಸರ್ಗಜಾದೋಷಗುಣಾ ಭವಂತಿ'' ಎಂಬ ಸುಭಾಷಿತೋಕ್ತಿಯಂತೆ ಒಳ್ಳೆಯವರ ಸಹವಾಸ ಮಾಡಿದಾಗ ಒಳ್ಳೆಯತನ ಹಾಗೂ ಕೆಟ್ಟವರ ಸಹವಾಸ ಮಾಡಿದಾಗ ಕೆಟ್ಟತನ ಬರುವುದು ಸಹಜವಾದುದು. ಆದ್ದರಿಂದಲೇ

ಪ್ರತಿಯೊಂದು ವ್ಯವಹಾರದಲ್ಲಿ ತನ್ನ ಆಚಾರ ವಿಚಾರಕ್ಕೆ ಪ್ರತಿಕೂಲವಾದ ಸಂಸ್ಕಾರವುಳ್ಳ ಜನರೊಂದಿಗೆ ವ್ಯವಹರಿಸಬಾರದೆಂಬುದೇ ಶಿವಾಚಾರದ ರಹಸ್ಯವಾಗಿದೆ. ಹೀಗೆ ಹದಿನಾರು ವಿಧವಾದ ಶುದ್ಧಿಗಳನ್ನು ಪರಿಪಾಲಿಸುವುದೇ ಶಿವಾಚಾರವು.

೪) ಗಣಾಚಾರ- ಪಂಚಾಚಾರಗಳಲ್ಲಿ ನಾಲ್ಕನೆಯ ಆಚಾರವೇ ಗಣಾಚಾರವು. ಶಿವಭಕ್ತಗಣರಿಂದ ಆಚರಿಸಲ್ಪಡುವ ಆಚಾರವೇ ಗಣಾಚಾರವು. ತನ್ನ ಇಷ್ಟದೇವರ ಬಗ್ಗೆ, ಗುರುವಿನ ಬಗ್ಗೆ ಮತ್ತು ತನ್ನ ಧರ್ಮಗ್ರಂಥಾದಿಗಳ ಬಗ್ಗೆ ಯಾರಾದರೂ ತಿರಸ್ಕರಿಸಿ ಮಾತನಾಡಿದರೆ ಅಥವಾ ನಿಂದಿಸಿದರೆ ಅದನ್ನು ಕೇಳಿ ಸಹಿಸಿಕೊಳ್ಳದೆ ಆ ಸ್ಥಾನವನ್ನಾದರೂ ತ್ಯಜಿಸಿ ದೂರ ಸರಿದು ಹೋಗಬೇಕು. ಒಂದು ವೇಳೆ ಪ್ರತಿಕ್ರಿಯೆಯನ್ನು ಮಾಡುವ ಸಾಮರ್ಥ್ಯವಿದ್ದರೆ ದಂಡೋಪಾಯದಿಂದ ಅದನ್ನು ಪ್ರತಿಭಟಿಸಿ ನಿಂದಕನಿಗೆ ಸರಿಯಾದ ಶಿಕ್ಷೆಯನ್ನು ವಿಧಿಸುವುದೇ ಗಣಾಚಾರವು. ನಿಂದೆಯು ಅತಿ ನಿಕೃಷ್ಟವಾದ ದುರ್ಗುಣವು. ನಿಂದೆಯನ್ನು ಮಾಡಿದವನಿಗೆ ಯಾವ ದೋಷವುಂಟಾಗುವುದೋ ಆ ನಿಂದೆಯನ್ನು ಆಸಕ್ತಿಯಿಂದ ಆಲಿಸಿದವನಿಗೂ ಅದೇ ಫಲವು ಪ್ರಾಪ್ತವಾಗುವುದು. ಆದುದರಿಂದ ಶಿವಭಕ್ತನಾದವನು ಶಿವನಿಂದಾದಿಗಳನ್ನು ಅದೆಂದೂ ಆಲಿಸಕೂಡದೆಂದು ತಿಳಿಸುವ ಆಚಾರವೇ ಗಣಾಚಾರವು. ಈ ವಿಷಯವು ಚಂದ್ರಜ್ಞಾನಾಗಮದಲ್ಲಿ–

ಶಿವಸ್ಯ ಶಿವಭಕ್ತಸ್ಯ ಶಿವಧರ್ಮಾಧಿಕಸ್ಯ ಚ ।
ನ ಶೃಣೋತಿ ಚ ಯೋ ನಿಂದಾಂ ಸ ಗಣಾಚಾರ ಉಚ್ಯತೇ ॥

(ಚ. ಜ್ಞಾ. ಕ್ರಿ. ೯–೮)

ಹೀಗೆ ವಿವರಿಸಲ್ಪಟ್ಟಿರುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗ ಕ್ರಿಯಾಸ್ಥಲ ದಲ್ಲಿಯೂ ಶಿವನಿಂದಕನನ್ನು ಶಪಿಸಬೇಕು, ಇಲ್ಲವೆ ಸಂಹರಿಸಬೇಕು. ಇವೆರಡೂ ಸಾಧ್ಯವಾಗದಿದ್ದರೆ ಆ ಸ್ಥಾನವನ್ನೇ ತ್ಯಜಿಸಿ ಹೋಗಬೇಕೆಂಬುದಾಗಿ ಬೋಧಿಸಲಾಗಿದೆ. ಹಿಂದೊಮ್ಮೆ ದಕ್ಷ ಪ್ರಜಾಪತಿಯು ಶಿವನನ್ನು ಅಪಮಾನ ಗೊಳಿಸುವುದಕ್ಕಾಗಿ ಬಹುದೊಡ್ಡ ಯಾಗವನ್ನು ಏರ್ಪಡಿಸಿದಾಗ ಶಿವನ ಜಟೆಯಿಂದ ಆವಿರ್ಭವಿಸಿದ ವೀರಭದ್ರನು ದಕ್ಷನ ಆ ಕುಯಜ್ಞವನ್ನು ಧ್ವಂಸಗೊಳಿಸಿ ದಕ್ಷನ ಶಿರವನ್ನು ಕತ್ತರಿಸಿ ಕುರಿದಲೆಯನ್ನಿತ್ತು ಆತನಿಗೆ ತಕ್ಕ ಶಿಕ್ಷೆಯನ್ನು ಕೊಟ್ಟ ವೀರಭದ್ರನ ಈ ಆಚರಣೆಯು ಗಣಾಚಾರಕ್ಕೊಂದು ಉತ್ಕೃಷ್ಟ ಉದಾಹರಣೆಯಾಗಿದೆ.

ಈ ಗಣಾಚಾರದ ನಿರೂಪಣೆಯಲ್ಲಿ ಶಿವನಿಂದಕನನ್ನು ಸಂಹರಿಸಬೇಕು ಎಂದು ಹೇಳಿದ ಶಬ್ದದ ತಾತ್ಪರ್ಯವು ಪ್ರಾಣಸಂಹಾರದಲ್ಲಿರದೆ ಬುದ್ಧಿಯ ಸಂಹಾರದ ದ್ಯೋತಕವಾಗಿದೆಯೆಂಬುದನ್ನರಿಯಬೇಕು. ಬುದ್ಧಿ ದುಷ್ಟವಾದಾಗಲೇ ಮನುಷ್ಯನು ದುಷ್ಟನೆಂತಲೂ, ದುರಾಚಾರಿಯೆಂತಲೂ ಕರೆಯಿಸಿಕೊಳ್ಳುತ್ತಾನೆ. ಅದೇ ಬುದ್ಧಿಯು ಸುಧಾರಣೆಗೊಂಡಾಗ ಅವನೋರ್ವ ಶ್ರೇಷ್ಠವ್ಯಕ್ತಿಯಾಗಿ ಪರಿವರ್ತನೆಗೊಳ್ಳುತ್ತಾನೆ. ನಮ್ಮ ದೇಶದ ಇತಿಹಾಸದಲ್ಲಿ ಅಂತಹ ಅನೇಕ ಘಟನೆಗಳು ಸಂಭವಿಸಿದ್ದನ್ನು ಕಾಣಬಹುದು. ಕೊಲೆಗಡುಕರೂ, ದರೋಡೆಖೋರರು, ಸಂಸ್ಕಾರ ಹೀನರೂ ಆದ ವಾಲ್ಮೀಕಿ, ಅಂಗುಲಿಮಾಲ, ಮಾತಂಗ ಇವರುಗಳು ಕ್ರಮವಾಗಿ ನಾರದ, ಬುದ್ಧ ಮತ್ತು

ಸುಜ್ಞಾನ ದೇವರ ಸಹವಾಸದಿಂದ ಶ್ರೇಷ್ಠ ವ್ಯಕ್ತಿಗಳಾಗಿ ಪರಿವರ್ತಿಸಲ್ಪಟ್ಟ ಉದಾಹರಣೆ ಗಳು ಜನಜನಿತವಾಗಿವೆ. ಸಂತರಾದವರು ವ್ಯಕ್ತಿಯನ್ನು ಸಂಹರಿಸದೆ ಆತನ ಬುದ್ಧಿಯ ಪರಿವರ್ತನೆಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ. ವೀರಭದ್ರನು ದಕ್ಷನ ಶಿರವನ್ನು ಕತ್ತರಿಸಿ ಆತನನ್ನು ಕೊಂದುಹಾಕಲಿಲ್ಲ. ಆದರೆ ಆತನಿಗೆ ಕುರಿದಲೆಯನಿತ್ತು ಪುನಃ ಜೀವದಾನ ಮಾಡಿದನು. ಇಲ್ಲಿ ನರದಲೆಯನ್ನು ಕತ್ತರಿಸಿ ಕುರಿದಲೆಯನ್ನಿಟ್ಟಿದ್ದು ಬುದ್ಧಿ ಪರಿವರ್ತನೆಯ ಸಂಕೇತವಾಗಿದೆ.

ಓರ್ವ ಸಂತನು ನೌಕೆಯಲ್ಲಿ ಕುಳಿತು ನದಿಯಲ್ಲಿ ಪ್ರವಾಸಗೈಯುತ್ತಿದ್ದನು. ಆ ನೌಕೆಯಲ್ಲಿ ಕೆಲವು ಜನ ದುಷ್ಟರೂ ಸಹ ಕುಳಿತಿದ್ದರು. ಈ ಸಂತನನ್ನು ಕಂಡು ಆ ದುಷ್ಟರು ನಾನಾ ತರದ ಚೇಷ್ಟೆಗಳನ್ನು ಮಾಡಿ ಗೇಲಿ ಮಾಡುತ್ತ ಆ ಸಂತನ ಮನಸ್ಸನ್ನು ನೋಯಿಸುತ್ತಿದ್ದರು. ಇವರ ಈ ಕುಚೇಷ್ಟೆಗೆ ಲಕ್ಷಕೊಡದೆ ಆತನು ತನ್ನ ಆರಾಧ್ಯದೇವರ ಧ್ಯಾನದಲ್ಲಿಯೇ ತಲ್ಲೀನನಾಗಿದ್ದನು. ಆ ದುಷ್ಟರು ಕೊಡುವ ತೊಂದರೆಯನ್ನು ಸಹಿಸದೇ ಭಗವಂತನು ಸಂತನಿಗೆ ಆಕಾಶವಾಣಿಯಿಂದ ಕೇಳಿದನಂತೆ "ಈ ದುಷ್ಟರು ನಿನಗೆ ಕೊಡುವ ಕೀಟಲೆಯನ್ನು ನಾನು ಸಹಿಸಲಾರೆ. ನೀನು ಅಪೇಕ್ಷಿಪಟ್ಟರೆ ಈ ನೌಕೆಯನ್ನು ಪಲ್ಲಟಗೊಳಿಸಿ ಇವರೆಲ್ಲರನ್ನು ಸಂಹರಿಸಿ ಬಿಡುತ್ತೇನೆ ಇದಕ್ಕೆ ನೀನೇನಂತಿಯಾ ?" ಭಗವಂತನ ಈ ಆಕಾಶವಾಣಿಯನ್ನು ಕೇಳಿ ಆ ದುಷ್ಟರೆಲ್ಲ ಭಯಭೀತಿಗೊಂಡಾಗ ಈ ಸಂತನು ಹೇಳಿದ್ದೇನೆಂದರೆ– "ಹೇ ಭಗವಂತನೇ ! ಇವರು ಮಾಡುವ ತಪ್ಪಿನ ಅರಿವು ಇವರಿಗಿಲ್ಲ, ಈ ನೌಕೆಯನ್ನು ತಿರುವಿ ಹಾಕಿ ಇವರನ್ನೆಲ್ಲ ಸಂಹರಿಸುವುದಕ್ಕಿಂತ ಇವರೆಲ್ಲರ ಬುದ್ಧಿಯನ್ನು ಮಾತ್ರ ತಿರುವಿ ಹಾಕು ಅರ್ಥಾತ್ ಇವರ ಬುದ್ಧಿಪರಿವರ್ತನೆಗೊಳಿಸು", ಸಂತನ ಈ ಸಾತ್ವಿಕ ನುಡಿಯನ್ನು ಕೇಳಿ ಅವರೆಲ್ಲ ತತ್‌ಕ್ಷಣ ಪರಿವರ್ತನೆಗೊಂಡು ತಮ್ಮ ತಪ್ಪನ್ನೊಪ್ಪಿಕೊಂಡು ಸಂತನ ಶಿಷ್ಯರಾದರಂತೆ. ಹೀಗೆ ಗಣಾಚಾರದಲ್ಲಿ ಶಿವನಿಂದಕನನ್ನು ಸಂಹರಿಸಬೇಕು ಎಂದು ಹೇಳಿದ ಶಬ್ದದ ತಾತ್ಪರ್ಯವು ಬುದ್ಧಿಪರಿವರ್ತನೆಯಲ್ಲಿದೆ ಎಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು.

ಈ ಗಣಾಚಾರದಲ್ಲಿ ಕಾಯಿಕ, ವಾಚಿಕ ಮತ್ತು ಮಾನಸಿಕ ಶುದ್ಧಿಗೋಸ್ಕರ ಅರವತ್ನಾಲ್ಕು ಪ್ರಕಾರದ ಶೀಲಾಚರಣೆಗಳು ಪ್ರತಿಪಾದಿಸಲ್ಪಟ್ಟಿವೆ. ಈ ವಿಷಯವು ಚಂದ್ರಜ್ಞಾನಾಗಮದಲ್ಲಿ–

> ಸರ್ವೋತ್ತಮೇ ಗಣಾಚಾರೇ ಸದ್ಯಃ ಸಿದ್ಧಿಕರೇ ಪರೇ ।
> ಶೀಲಾನಿ ತು ಚತುಃಷಷ್ಟಿರ್ವರ್ತಂತೇ ತಾನಿ ಸಂಶೃಣು ॥

(ಚ.ಜ್ಞಾ.ಕ್ರಿ.೯–೫೨)

ಹೀಗೆ ಪ್ರತಿಪಾದಿಸಲ್ಪಟ್ಟಿದೆ. ಈ ಚತುಃಷಷ್ಟಿ ಶೀಲಗಳಾವುವೆಂಬುದನ್ನು ಇಲ್ಲಿ ಪರ್ಯಾ ಲೋಚಿಸೋಣ.

ಸಪ್ತವಿಧವಾದ ವಾಚಿಕಶೀಲಗಳು : ೧) ಸತ್ಯವನ್ನು ನುಡಿಯುವುದು. ೨) ಆ ಸತ್ಯನುಡಿಯು ಪ್ರಿಯವೂ ಹಿತಕರವೂ ಆಗಿರುವುದಾಗಿರಬೇಕು. ೩) ಪ್ರತಿದಿನ ವೇದಾಗ ಮಾದಿ ಶಾಸ್ತ್ರವನ್ನು ಪಠಿಸುವುದು. ೪) ಶಿವನ ಹಾಗೂ ಶಿವಭಕ್ತರ ಗುಣಗಾನವನ್ನು

ಮಾಡುವುದು. ೫) ತನ್ನ ಇಷ್ಟದೇವರನ್ನು ಹೊರತುಪಡಿಸಿ ಬೇರಾವ ದೇವರನ್ನೂ ಸ್ತುತಿಸುವುದಾಗಲೀ ಮನುಷ್ಯನನ್ನು ಪ್ರಶಂಸಿಸುವುದಾಗಲೀ ಮಾಡದಿರುವುದು. ೬) ಎಲ್ಲಿಯೂ ಯಾವಾಗಲೂ ಆತ್ಮಸ್ತುತಿಯನ್ನು ಮಾಡಿಕೊಳ್ಳದಿರುವುದು. ೭) ಯಾವುದೇ ದೇವರನ್ನು ಅಥವಾ ಯಾರೊಬ್ಬ ವ್ಯಕ್ತಿಯನ್ನು ಯಾವ ಕಾಲಕ್ಕೂ ನಿಂದಿಸ ದಿರುವುದು. ಹೀಗೆ ಈ ಏಳು ಶೀಲಗಳು ವಾಚಿಕ ಶೀಲಗಳೆಂಬುದಾಗಿ ಕರೆಯಲ್ಪಡುತ್ತವೆ. ಈ ಶೀಲಾಚರಣೆಯಿಂದ ವಾಣಿಯು ಅತ್ಯಂತ ಪವಿತ್ರವಾಗುವುದಲ್ಲದೆ ಸತ್ವಶಾಲಿಯೂ ಆಗುವುದು. ಈ ಶೀಲವನ್ನಾಚರಿಸಿದವನಿಗೆ ಸಹಜವಾಗಿಯೇ ವಾಕ್‌ಪಾರುಷ್ಯವು ಪ್ರಾಪ್ತವಾಗುವುದು. ಅಂತೆಯೇ ಬಸವಣ್ಣನವರು – ಹುಸಿಯ ನುಡಿಯಲು ಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ ಮುಂತಾಗಿ ತಮ್ಮ ವಚನಗಳಲ್ಲಿ ಹೇಳಿರುವುದೇ ಈ ಗಣಾಚಾರಾಂತರ್ಗತವಾದ ವಾಕ್‌ಶೀಲವೆಂಬುದಾಗಿ ತಿಳಿದುಕೊಳ್ಳಬೇಕು.

ಹಸ್ತಗತ ಪಂಚವಿಧ ಶೀಲಗಳು- (೮) ಗುರು ಲಿಂಗ ಜಂಗಮರಿಗೆ ನಮಸ್ಕರಿಸು ವುದು. (೯) ತನ್ನ ಪೂಜಾ ಸಾಮಗ್ರಿಗಳನ್ನು ತನ್ನ ಹಸ್ತದಿಂದಲೇ ಸಂಗ್ರಹಿಸುವುದು. (೧೦) ಹಸ್ತದಲ್ಲಿ ರುದ್ರಾಕ್ಷಮಾಲೆಯನ್ನು ಹಿಡಿದು ಸದಾ ಜಪಿಸುವುದು. (೧೧) ತನ್ನ ಹಸ್ತಗಳಿಂದ ಪ್ರತಿದಿನ ಗುರು ಲಿಂಗ ಜಂಗಮರನ್ನು ಆರಾಧಿಸುವುದು (೧೨) ಗುರು ಲಿಂಗ ಜಂಗಮಾದಿಗಳಿಗೆ ಮತ್ತು ಧರ್ಮಕ್ಕಾಗಿ ಶಕ್ಯಾನುಸಾರವಾಗಿ ದಾನಗೈಯುವುದು. ಇವು ಗಳಿಗೆ ಹಸ್ತಗತ ಪಂಚವಿಧ ಶೀಲಗಳೆಂದು ಕರೆಯುತ್ತಾರೆ. ಮನುಷ್ಯನ ಉತ್ಕೃಷ್ಟ ಇಲ್ಲವೆ ನಿಕೃಷ್ಟ ಭವಿಷ್ಯಕ್ಕೆ ಅವನ ಹಸ್ತಗಳೇ ಕಾರಣಗಳು. ಕೈಗಳಿಂದ ಶಾಸ್ತ್ರವಿಹಿತಗಳಾದ ಕರ್ಮಗಳನ್ನು ಮಾಡಿದರೆ ಮನುಷ್ಯನ ಭವಿಷ್ಯವು ಉಜ್ವಲವಾಗುವುದು. ಅದಕ್ಕೆ ವಿಪರೀತವಾಗಿ ನಿಷಿದ್ಧ ಕರ್ಮಗಳನ್ನಾಚರಿಸಿದರೆ ಪಾಪಕರ್ಮಿಯಾಗಿ ಪತಿತನಾಗುತ್ತಾನೆ. ಭಗವಂತನಿಂದ ಅನುಗ್ರಹಿಸಲ್ಪಟ್ಟ ಹಸ್ತಗಳಿಂದ ಸದಾ ಉತ್ತಮ ಕಾರ್ಯಗಳನ್ನೇ ಆಚರಿಸಬೇಕು. ನಮ್ಮ ಭಾಗ್ಯವನ್ನು ಬರೆಯುವ ಭಗವಂತನೇ ನಮ್ಮ ಹಸ್ತಗಳು. ಅಂತೆಯೇ ವೇದದಲ್ಲಿ ''ಅಯಮ್ ಮೇ ಹಸ್ತೋ ಭಗವಾನ್''ಎಂಬುದಾಗಿ ಉಪದೇಶಿಸಲಾಗಿದೆ. ಹಸ್ತವು ಪಂಚವಿಧ ಕರ್ಮೇಂದ್ರಿಯಗಳಲ್ಲಿ ಪ್ರಮುಖವಾದುದು. ಇದರಿಂದ ಸದಾ ಉತ್ತಮ ಕರ್ಮಗಳೇ ಆಚರಿಸಲ್ಪಡಬೇಕೆಂಬ ಉದ್ದೇಶದಿಂದ ವೀರಶೈವ ಆಚಾರ್ಯರು ಪ್ರಮುಖವಾದ ಈ ಗಣಾಚಾರದಲ್ಲಿ ಬರುವ ಅರವತ್ನಾಲ್ಕು ಶೀಲಗಳಲ್ಲಿ ಐದು ಶೀಲಗಳನ್ನು ಹಸ್ತಕ್ಕಾಗಿ ಮೀಸಲಾಗಿರಿಸಿದ್ದಾರೆ.

ಪಾದಗತ ಚತುರ್ವಿಧ ಶೀಲಗಳು - (೧೩) ಗುರುವಿದ್ದಲ್ಲಿಗೆ ಹಾಗೂ ದೇವಸ್ಥಾನ ಗಳಿಗೆ ಹೋಗುವುದು ಅಥವಾ ಯಾತ್ರೆಗೈಯುವುದು. (೧೪) ಗುರುವಿಗೆ ಹಾಗೂ ದೇವರಿಗೆ ಪ್ರದಕ್ಷಿಣೆಯನ್ನು ಹಾಕುವುದು. (೧೫) ಪೂಜೆಗೆ ಬೇಕಾಗುವ ಪತ್ರಪುಷ್ಪಾದಿ ಗಳನ್ನು ತರಲು ಹೋಗುವುದು. (೧೬) ಇಷ್ಟಲಿಂಗ ಪೂಜೆಗಾಗಿ ಅಥವಾ ಗುರುಪಾದ ಪೂಜೆಗಾಗಿ ಸ್ಥಿರಾಸನವನ್ನು ಹಾಕಿಕೊಂಡು ಕುಳಿತುಕೊಳ್ಳುವುದು. ಇವು ನಾಲ್ಕು ವಿಧವಾದ ಶೀಲಗಳು ಪಾದಸಂಬಂಧಿಯಾಗಿರೋಣದರಿಂದ ಇವುಗಳಿಗೆ ಪಾದಗತ ಶೀಲಗಳೆಂದು ಕರೆಯುತ್ತಾರೆ. ಈ ಪಾದಗತ ಶೀಲಗಳು ಮನುಷ್ಯನ ನಿಷಿದ್ಧ ಗಮನವನ್ನು ನಿರೋಧಿಸು ತ್ತವೆ. ಇದನ್ನೇ ಬಸವಣ್ಣನವರು –''ಅತ್ತಲಿತ್ತಹೋಗದಂತೆ ಹೆಳವನ ಮಾಡಯ್ಯ ತಂದೆ''

ಎಂದು ದೇವರನ್ನು ಪ್ರಾರ್ಥಿಸಿ ಈ ಪಾದಗತ ಶೀಲವನ್ನು ಪರಿಪಾಲಿಸಿದ್ದರೆಂಬುದು ತಿಳಿದುಬರುತ್ತದೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಗುರುಹಿರಿಯರ ಪಾದಕ್ಕೆ ನಮಸ್ಕರಿಸುವ ಪರಿಪಾಠ ಉಂಟು. ಯಾರ ಪಾದಗಳು ಶಾಸ್ತ್ರವಿಹಿತ ಮಾರ್ಗದಲ್ಲಿ ಚಲಿಸುತ್ತವೆಯೋ ಆ ಪಾದಗಳೇ ಪೂಜನೀಯವಾದವುಗಳು ಎಂಬುದು ಈ ಪರಿಪಾಠದ ಹಿನ್ನೆಲೆಯಾಗಿದೆ. ಪಾದವು ಆಚಾರದ ಪ್ರತೀಕವು ಆದಕಾರಣ ಪ್ರತಿಯೊಬ್ಬರು ಶೀಲಬಾಹಿರರಾಗದೆ ಶೀಲವಂತರಾಗಿರಲಿ ಅಂದಾಗಲೇ ಅವರ ಪಾದಗಳು ಪೂಜನೀಯ ವಾಗುವವು.

ಶ್ರೀರಾಮಚಂದ್ರನು ವನವಾಸದಲ್ಲಿದ್ದಾಗ ಒಂದು ದಿನ ರಾಮ ಸೀತೆಯರು ಸಹಜವಾಗಿ ಕುಳಿತುಕೊಂಡಾಗ ರಾಮನು ಸೀತೆಯನ್ನುದ್ದೇಶಿಸಿ– ತನ್ನ ಪಾದಗಳನ್ನು ತೋರಿಸುತ್ತ ''ಇಗೋ ನೋಡು ! ನನ್ನ ಪಾದಗಳೆಷ್ಟು ಸುಂದರವಾಗಿವೆ?'' ಎಂಬುದಾಗಿ ನುಡಿದನು. ಆಗ ಸೀತೆಯು ತತ್‌ಕ್ಷಣದಲ್ಲಿಯೇ ''ನಿಮಗಿಂತಲೂ ನನ್ನ ಪಾದಗಳೆಷ್ಟು ಸುಂದರವಾಗಿವೆ ನೋಡಿ'' ಎಂದಳು. ಹೀಗೆ ಈರ್ವರಲ್ಲಿ ಪಾದವಿಷಯಕ ವಾದ ವಿವಾದವು ಬೆಳೆದು ನಿರ್ಣಯವಾಗದೆಯಿದ್ದಾಗ ಅದೇ ಸಮಯಕ್ಕೆ ಗಡ್ಡೆ–ಗೆಣಸು ಗಳನ್ನು ತರಹೋದ ಲಕ್ಷ್ಮಣನು ಆಶ್ರಮಕ್ಕೆ ಮರಳಿಬಂದನು. ಲಕ್ಷ್ಮಣನು ಬಂದಾಕ್ಷಣ ಆತನನ್ನು ಶ್ರೀರಾಮನು ಬಳಿಗೆ ಕರೆದು ''ನಮ್ಮೀರ್ವರ ಪಾದಗಳಲ್ಲಿ ಯಾರ ಪಾದಗಳು ಸುಂದರವಾದವುಗಳು ? ನೀನೇ ನಿರ್ಣಯಿಸಿ ಹೇಳು'' ಎಂಬುದಾಗಿ ಹೇಳಿದನು. ಆಗ ಲಕ್ಷ್ಮಣನು ಉಭಯಸಂಕಟದಲ್ಲಿ ಸಿಲುಕಿಕೊಂಡನು. ನನಗೆ ಈರ್ವರೂ ಪೂಜ್ಯರೇ ಹೀಗಿರುವಾಗ ಹೇಗೆ ನಿರ್ಣಯಿಸುವುದು ? ಎಂಬುದಾಗಿ ಕೆಲಹೊತ್ತು ವಿಚಾರಿಸುತ್ತಿರಲು ಪುನಃ ರಾಮನು ನುಡಿದನಂತೆ ''ಅದೇನು ವಿಚಾರಿಸುತ್ತಿರುವೆ ? ಬೇಗನೇ ಹೇಳು'' ರಾಮಚಂದ್ರನ ಆಜ್ಞಾಧಾರಕನಾದ ಶ್ರೀ ಲಕ್ಷ್ಮಣನು ಬಹಳಷ್ಟು ಆಲೋಚಿಸಿ ನುಡಿದದ್ದೇನೆಂದರೆ, ''ನನ್ನ ದೃಷ್ಟಿಯಲ್ಲಿ ಸೀತಾಮಾತೆಯ ಪಾದಗಳೇ ಸುಂದರಗಳಾದವು ಗಳು'' ಲಕ್ಷ್ಮಣನ ಈ ನುಡಿಯನ್ನು ಕೇಳಿ ಸೀತೆಗೆ ಸಂತೋಷವಾಯಿತೇನೋ ನಿಜ, ಆದರೆ ರಾಮಚಂದ್ರ ಕಳವಳಗೊಂಡನು. ರಾಮಚಂದ್ರನ ಈ ಸ್ಥಿತಿಯನ್ನರಿತ ಲಕ್ಷ್ಮಣನು ಮರುಕ್ಷಣದಲ್ಲಿಯೇ ನುಡಿದದ್ದೇನೆಂದರೆ ''ಸೀತಾಮಾತೆಯ ಪಾದಗಳು ಸುಂದರಗಳಾಗಿ ತೋರಲು ಪಕ್ಕದಲ್ಲಿರುವ ಪೂಜ್ಯ ಅಣ್ಣನಾದ ಶ್ರೀರಾಮಚಂದ್ರನ ಪಾದಗಳೇ ಕಾರಣಗಳು. ಪತಿಯ ಪಾದವಿದ್ದಾಗಲೇ ಪತ್ನಿಯ ಪಾದಕ್ಕೆ ಬೆಲೆಯು.'' ಎಂಬುದಾಗಿ ಲಕ್ಷ್ಮಣನು ನುಡಿದದ್ದನ್ನು ಕೇಳಿದಾಗ ರಾಮಚಂದ್ರನಿಗೆ ಬಹಳಷ್ಟು ಸಂತೋಷ ವಾಯಿತು. ಲಕ್ಷ್ಮಣನು ಅಷ್ಟಕ್ಕೆ ಸುಮ್ಮನಿರದೆ ನುಡಿದದ್ದೇನೆಂದರೆ : ''ಶ್ರೀರಾಮನ ಪಾದಗಳಿಗೆ ಇಷ್ಟೊಂದು ಮಹತ್ವ ಬರಲು ಕಾರಣವೇನೆಂದರೆ ಇವುಗಳು ಪಿತೃವಚನ ಪರಿಪಾಲನೆಗಾಗಿ ರಾಜ್ಯಭೋಗವನ್ನು ತೊರೆದು ಅಡವಿಯಲ್ಲಿ ಪಾದತ್ರಾಣಗಳಿಲ್ಲದೆ ಅಲೆಯುತ್ತಿವೆ'' ಲಕ್ಷ್ಮಣನ ಈ ನಿಷ್ಕರ್ಷವು ಶಾಸ್ತ್ರ ಸಮ್ಮತವಾದುದು. ಯಾರ ಪಾದಗಳು ಶಾಸ್ತ್ರವಿಹಿತಮಾರ್ಗದಲ್ಲಿ ನಡೆಯುತ್ತವೆಯೋ ಅವರ ಪಾದಗಳೇ ಸುಂದರ ಗಳೂ, ಪೂಜ್ಯಗಳೂ ಆಗುತ್ತವೆ. ಉತ್ತಮವಾದ ನಡೆಯೇ ಮನುಷ್ಯನಿಗೆ ಗೌರವವನ್ನು

ತಂದುಕೊಡುತ್ತದೆ. ಅಂತೆಯೇ ಈ ಗಣಾಚಾರದಲ್ಲಿ ಪಾದದಿಂದಾಚರಿಸಬಹುದಾದ ಚತುರ್ವಿಧ ಶೀಲಗಳ ಬಗ್ಗೆ ಪರಿಜ್ಞಾನವನ್ನು ಮೂಡಿಸಲಾಗಿದೆ.

ತ್ವಕ್ ಸಂಬಂಧೀ ದ್ವಿವಿಧಶೀಲಗಳು : ಪಂಚವಿಧ ಜ್ಞಾನೇಂದ್ರಿಯಗಳಲ್ಲಿ ತ್ವಗಿಂದ್ರಿಯವೂ ಒಂದಾಗಿದೆ. ತ್ವಕ್ ಎಂದರೆ ಚರ್ಮವೆಂದರ್ಥ ಒಂದೊಂದು ಇಂದ್ರಿಯವು ಒಂದೊಂದು ನಿರ್ದಿಷ್ಟ ಸ್ಥಾನದಲ್ಲಿದ್ದರೆ ತ್ವಗಿಂದ್ರಿಯವು ಸಂಪೂರ್ಣ ಶರೀರವನ್ನು ವ್ಯಾಪಿಸಿದುದಾಗಿದೆ. ಅಂತೆಯೇ ಇದೊಂದು ಪ್ರಬಲವಾದ ಜ್ಞಾನೇಂದ್ರಿಯವು. ಮೃದು, ಕಠಿಣ, ಶೀತ ಮತ್ತು ಉಷ್ಣ ಮೊದಲಾದ ಸ್ಪರ್ಶಗುಣವನ್ನು ಅರಿಯಲು ಈ ತ್ವಗಿಂದ್ರಿಯವು ಸಹಾಯಕವಾದುದಾಗಿದೆ. ಶಾಸ್ತ್ರನಿಷಿದ್ಧವಾದ ಸ್ಪರ್ಶಸುಖವನ್ನು ಅನುಭವಿಸಿ ಅಧೋಮಾರ್ಗದತ್ತ ಗಮಿಸುವ ಜನರೇ ಈ ಸಂಸಾರದಲ್ಲಿ ಹೇರಳವಾಗಿ ದೊರೆಯುತ್ತಾರೆ. ಪ್ರಕೃತಿ ಪ್ರದತ್ತವಾದ' ಈ ಇಂದ್ರಿಯಗಳನ್ನು ಸದುಪಯೋಗಪಡಿಸಿಕೊಂಡಾಗ ಮನುಷ್ಯನು ಉನ್ನತಿಯ ಸ್ಥಿತಿಯನ್ನು ಪಡೆಯಬಲ್ಲ. ಅಂತೆಯೇ ಗಣಾಚಾರದಲ್ಲಿ ಮನುಷ್ಯನ ಉನ್ನತಿಗೆ ಸಾಧನಗಳಾದ ತ್ವಕ್ ಸಂಬಂಧಗಳಾದ ದ್ವಿವಿಧಶೀಲಗಳನ್ನು ಪ್ರತಿಪಾದಿಸಿದ್ದಾರೆ. ಅವು ಯಾವುವು ಎಂದರೆ (೧೭) ತನ್ನ ದೇಹದ ಮೇಲೆ ಅದೆಂದಿಗೂ ಅಗಲದಂತೆ ಇಷ್ಟಲಿಂಗವನ್ನು ಧರಿಸಿಕೊಂಡು ಸದಾ ಅದರ ಸ್ಪರ್ಶವನ್ನು ಅನುಭವಿಸುವುದು. (೧೮) ತನ್ನ ಇಷ್ಟಲಿಂಗ ಸ್ಪರ್ಶಜನ್ಯವಾದ ರೋಮಾಂಚನವನ್ನು ಅನುಭವಿಸುವುದು. ದೇಹದ ಮೇಲೆ ಇಷ್ಟಲಿಂಗವನ್ನು ಧರಿಸಿದವರು ಅದೆಷ್ಟೋ ಜನರಿರುತ್ತಾರೆ. ಆದರೆ ಅದರ ಅಸ್ತಿತ್ವದ ಅರಿವು ಇರುವವರು ಬಹಳ ವಿರಳ. ನಾನು ಲಿಂಗಧಾರಿಯಾಗಿದ್ದೇನೆ ಎಂಬ ಅರಿವನ್ನು ಸದಾಕಾಲದಲ್ಲಿಟ್ಟು ಕೊಂಡು ಈ ಇಷ್ಟಲಿಂಗ ದೊರೆಯಬೇಕಾದರೆ, ನಾನು ಅದೆಷ್ಟು ಜನ್ಮ ಪುಣ್ಯವನ್ನು ಮಾಡಿದ್ದೇನೆಯೋ ಎಂಬ ಹರ್ಷವು ಮನದಲ್ಲಿ ಒಡಮೂಡಿ ಮೇಲಿಂದ ಮೇಲೆ ರೋಮಾಂಚನದ ಅನುಭವವಾಗುತ್ತಿರಬೇಕು. ಇದನ್ನೇ ಶ್ರೀಮನ್ನಿಜಗುಣ ಶಿವಯೋಗಿ ಗಳು 'ಯೋಗಪ್ರತಿಪಾದನಸ್ಥಲ'ದ 'ಶಿವಯೋಗ' ಪ್ರಕರಣದಲ್ಲಿ– ''ಪರತರ ಶಿವಲಿಂಗವೆಳೆಸಿ ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿಯಜಿಸು'' ಎಂಬುದಾಗಿ ಹೇಳಿ ನಮ್ಮ ಹಸ್ತಪೀಠದಲ್ಲಿ ಇಷ್ಟಲಿಂಗವಾಗಿ ದೊರೆತಿರುವುದೇ ಆ ಪರಶಿವಲಿಂಗ ವೆಂಬುದನ್ನು ಅರುಹಿ ಎಚ್ಚರಿಸಿದ್ದಾರೆ. ಕ್ಷಣಿಕವಾದ ಸ್ಪರ್ಶಸುಖವನ್ನು ಅನುಭವಿಸಿ ಪುಲಕಿತಗೊಳ್ಳುವ ಜೀವಿಗಳಿಗೆ ಆ ಪರಾತ್ಪರ ವಸ್ತುವಿನ ಶಾಶ್ವತ ಸ್ಪರ್ಶ ಪ್ರಾಪ್ತವಾಗಿರಲು ಅದೆಷ್ಟು ಆನಂದವಾಗಲಿಕ್ಕಿಲ್ಲ ? ಇಂತಹ ಅಲೌಕಿಕ ಸ್ಪರ್ಶಸುಖವನ್ನು ಅನುಭವಿಸಿ ಆನಂದಿಸುವುದೇ ''ತ್ವಕ್‌ಸಂಬಂಧಿಯಾದ ಶೀಲ''ವೆಂಬುದನ್ನು ಇಲ್ಲಿ ತಿಳುಹಿಸಲಾಗಿದೆ.

ಚಕ್ಷುಸಂಬಂಧೀ ದ್ವಿವಿಧಶೀಲಗಳು- ಪಂಚಜ್ಞಾನೇಂದ್ರಿಯಗಳಲ್ಲಿ ಚಕ್ಷುರಿಂದ್ರಿಯವೂ ಒಂದಾಗಿದೆ. ಇದು ರೂಪ ವಿಷಯವನ್ನು ಗ್ರಹಿಸುವ ಇಂದ್ರಿಯವು. ಭೋಗಾಸಕ್ತರಾದ ಸಾಂಸಾರಿಕ ಜೀವಿಗಳು ಕ್ಷಣಿಕವಾದ ರೂಪಕ್ಕೆ ಮಾರುಹೋಗಿ ಭೋಗಜೀವಿಗಳಾಗಿ ಅದೆಷ್ಟೋ ಜನ್ಮಗಳನ್ನು ಹಾಳುಮಾಡಿಕೊಂಡಿದ್ದಾರೆ. ತನ್ನ ಜೀವನವನ್ನು ಉದ್ಧಾರ ಗೊಳಿಸಿಕೊಳ್ಳಬೇಕಾದರೆ ಪ್ರತಿಯೊಬ್ಬರೂ ಯೋಗಮಾರ್ಗವನ್ನವಲಂಬಿಸಬೇಕು. ಅನೇಕ ವಿಧವಾದ ಯೋಗಗಳಲ್ಲಿ ಶಿವಯೋಗವು ಸರ್ವೋತ್ಕೃಷ್ಟವಾದುದು ಈ

ಶಿವಯೋಗದಲ್ಲಿ (೧೯) ಆನಂದಪೂರ್ವಕವಾಗಿ ಹಾಗೂ ಅವಿಶ್ರಾಂತವಾಗಿ ಇಷ್ಟಲಿಂಗವನ್ನು ನಿರೀಕ್ಷಿಸುವುದು (೨೦) ಇಷ್ಟಲಿಂಗವನ್ನು ನೆಟ್ಟದೃಷ್ಟಿಯಿಂದ ಅವಲೋಕಿಸುವಾಗ ಆನಂದಭಾಷ್ಪಗಳುದ್ಭವಿಸುವುದು. ಇವೆರಡೂ ಚಕ್ಷುಸಂಬಂಧಿಯಾದ ಶೀಲಗಳೆಂದು ಪ್ರತಿಪಾದಿಸಲಾಗಿದೆ. ಇಷ್ಟಲಿಂಗವನ್ನವಲೋಕಿಸೋಣದರಿಂದ ಹಾಗೂ ಅದರಿಂದ ಉದ್ಭವಿಸುವ ಅಶ್ರುಪಾತದಿಂದ ನೇತ್ರಗಳು ಪರಿಶುದ್ಧಗಳಾಗುತ್ತವೆ. ಅಂತೆಯೇ ಇವುಗಳನ್ನು ಚಕ್ಷು ಸಂಬಂಧಿಯಾದ ಶೀಲಗಳೆಂದು ತಿಳಿದುಕೊಳ್ಳಬೇಕು.

ಜಿಹ್ವಾ ಸಂಬಂಧಿ ಶೀಲವು: ರಸವನ್ನು ಗ್ರಹಿಸುವ ಜ್ಞಾನೇಂದ್ರಿಯವೇ ರಸನೆಯು. ಇದಕ್ಕೇನೇ ಜಿಹ್ವೆ ಎಂದು ಕರೆಯುತ್ತಾರೆ. (೨೧) ಶಿವನಿಗೆ ಸಮರ್ಪಿಸಿದ ಪ್ರಸಾದ ರಸವನ್ನು ಸ್ವೀಕರಿಸುವುದೇ ಜಿಹ್ವಾ ಸಂಬಂಧೀ ಶೀಲವು, ಗಣಾಚಾರಿಯಾದವನು ಜಿಹ್ವಾಲೋಲುಪನಾಗದೆ ಪ್ರಸಾದಭೋಗಿಯಾಗಿರಬೇಕು ಎಂಬುದೇ ಈ ಜಿಹ್ವಾಶೀಲದ ತಾತ್ಪರ್ಯವು. ಪ್ರತಿನಿತ್ಯ ಪ್ರಸಾದ ರಸಾಸ್ವಾದನೆಯನ್ನು ಮಾಡೋಣದರಿಂದ ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಆ ಪ್ರಸನ್ನವಾದ ಚಿತ್ತೇ ಪರಮಾತ್ಮನ ಚಿಂತನೆಗೆ ಸಹಾಯಕವಾಗುವುದು. ಹೀಗೆ ಜಿಹ್ವೆಯ ಶೀಲದಿಂದ ಮನಶುದ್ಧಿಯಾಗಿ ಪ್ರಸನ್ನ ಚಿತ್ತತೆಯು ಪ್ರಾಪ್ತವಾಗೋಣದರಿಂದ ಗಣಾಚಾರಿಯಾದವನು ಇದನ್ನು ಪ್ರತಿನಿತ್ಯ ಅನುಷ್ಠಾನದಲ್ಲಿರಿಸಿಕೊಳ್ಳಬೇಕು.

ಘ್ರಾಣ ಸಂಬಂಧಿ ಶೀಲವು - ಗಂಧಗ್ರಾಹಕವಾದ ಇಂದ್ರಿಯವೇ ಘ್ರಾಣವು. ಇದೂ ಸಹ ಜ್ಞಾನೇಂದ್ರಿಯದಲ್ಲಿಯೇ ಪರಿಗಣಿಸಲ್ಪಟ್ಟಿದೆ. (೨೨) ಶಿವನಿರ್ಮಾಲ್ಯಗಳಾದ ಗಂಧಪುಷ್ಪಾದಿಗಳನ್ನು ಮೂಸಿ ಗಂಧಪ್ರಸಾದವನ್ನು ಸ್ವೀಕರಿಸುವುದೇ ಘ್ರಾಣ ಸಂಬಂಧಿಯಾದ ಶೀಲವು. ಶಿವಭಕ್ತನಾದವನು ಸುಗಂಧ ಪದಾರ್ಥವನ್ನು ಆಘ್ರಾಣಿಸುವ ಪೂರ್ವದಲ್ಲಿ ಅದನ್ನು ಮೊದಲು ತನ್ನ ಇಷ್ಟಲಿಂಗಕ್ಕೆ ಸಮರ್ಪಿಸಬೇಕು. ಹೀಗೆ ಸಮರ್ಪಿಸಿದಾಗ ಅದು ಪ್ರಸಾದವಾಗಿ ಪರಿಣಮಿಸುತ್ತದೆ. ಕೇವಲ ಗಂಧವನ್ನು ಆಘ್ರಾಣಿಸುವುದು ವೀರಶೈವರ ಆಚಾರವಲ್ಲ. ಆ ಗಂಧವನ್ನು ಇಷ್ಟಲಿಂಗಕ್ಕೆ ಸಮರ್ಪಿಸಿ ಅದನ್ನು ಗಂಧಪ್ರಸಾದವನ್ನಾಗಿಸಿ ಸೇವಿಸುವುದೇ ಗಣಾಚಾರದ ಒಂದು ಅಂಗವಾಗಿದೆ.

ಶ್ರೋತ್ರಸಂಬಂಧವಾದ ಶೀಲಗಳು : ಶಬ್ದವನ್ನು ಗ್ರಹಿಸುವ ಜ್ಞಾನೇಂದ್ರಿಯವೇ ಶ್ರೋತ್ರವು ಅಥವಾ ಕಿವಿಯು. ಕಿವಿ ಇದೆಯೆಂದು ಏನು ಬೇಕಾದ್ದನ್ನು ಕೇಳಬಾರದು. (೨೩) ಗುರುವಿನ, ಶಿವನ ಹಾಗೂ ಶಿವಭಕ್ತರ ಸ್ತುತಿ ಸ್ತೋತ್ರಾದಿಗಳನ್ನು ಆಲಿಸುವುದು. (೨೪) ಅದರಂತೆ ಗುರುವಿನ, ಶಿವನ ಹಾಗೂ ಶಿವಭಕ್ತರ ನಿಂದೆಯನ್ನು ಕೇಳದಿರುವುದು. ಇವೆರಡು ಶ್ರೋತ್ರಸಂಬಂಧಿಯಾದ ಶೀಲಗಳೆಂದು ಕರೆಯಲ್ಪಟ್ಟಿವೆ. ಸ್ತುತಿ ಮಾಡಿದವರಿಗೆ ಯಾವ ಫಲವು ಪ್ರಾಪ್ತವಾಗುವುದೋ ಆ ಸ್ತುತಿಯನ್ನು ಕೇಳಿದವರಿಗೂ ಸಹ ಅದೇ ಫಲವು ಪ್ರಾಪ್ತವಾಗುತ್ತದೆ. ಅದರಂತೆ ನಿಂದೆ ಮಾಡಿದವರಿಗೆ ದೊರಕುವ ದುರಿತವು ನಿಂದೆಯನ್ನು ಆಲಿಸಿದವನಿಗೂ ದೊರೆಯುತ್ತದೆ. ಆದ ಕಾರಣ ಕಿವಿಯಿಂದ ಸದಾ ಸಂತರ, ಶರಣರ ಸ್ತೋತ್ರಾದಿಗಳನ್ನು ಆಲಿಸಬೇಕೇ ವಿನಹ ನಿಂದೆಯನ್ನು ಅದೆಂದಿಗೂ ಆಲಿಸಬಾರದು. ನಾವು ಎಂತಹ ಶಬ್ದಾದಿಗಳನ್ನು ಆಲಿಸುತ್ತೇವೆಯೋ ಅಂತಹ ವಿಚಾರ

ಗಳೇ ಮನಸ್ಸಿನಲ್ಲಿ ತಲೆದೋರುತ್ತವೆ. ವಿಚಾರಗಳು ಕೆಟ್ಟದ್ದಾದರೆ ಕೃತಿಯೂ ಕೆಡುವುದು. ಹೀಗೆ ನಾವು ಕೇಳಿದ ಶಬ್ದಗಳಿಂದಲೇ ನಮ್ಮ ಕ್ರಿಯಾಶಕ್ತಿಯ ಅಭಿವ್ಯಕ್ತಿಯಾಗುವುದು. ಆದ ಕಾರಣ ಸಮಾಜದಲ್ಲಿ ಒಳ್ಳೆಯವನೆನಿಸಿಕೊಂಡು ಉತ್ತಮ ಕಾರ್ಯವನ್ನು ಮಾಡುವ ಅಭಿಲಾಷೆಯಿದ್ದರೆ ಸದಾ ಒಳ್ಳೆಯ ಶಬ್ದಗಳನ್ನೇ ಆಲಿಸುತ್ತಿರಬೇಕೆಂಬುದೇ ಈ ಶ್ರೋತ್ರ ಸಂಬಂಧಿಯಾದ ಶೀಲಗಳ ತಾತ್ಪರ್ಯವು.

ಪಂಚವಿಧಗಳಾದ ಕಾಯ ಶೋಧನೆಯ ಶೀಲಗಳು – ಅಶುದ್ಧವಾದ ಕಾಯವನ್ನು ಶುದ್ಧಗೊಳಿಸುವ ಆಚಾರಗಳೇ ಕಾಯಶೋಧನೆಯ ಶೀಲಗಳು. ಅವು ಯಾವುವೆಂದರೆ, (೨೫) ಗುರು ಲಿಂಗ ಜಂಗಮರಿಗೆ ಅರ್ಪಿಸಿದ ಪ್ರಸಾದವನ್ನು ಸೇವಿಸುವುದು (೨೬) ಶಾಸ್ತ್ರನಿಷಿದ್ಧ ವಿಷಯಗಳತ್ತ ಇಂದ್ರಿಯಗಳು ಹೋಗದಂತೆ ನಿಗ್ರಹಿಸುವುದು. (೨೭) ಅಸ್ಪೃಶ್ಯವಾದ ವಸ್ತುವಿನ ಅಥವಾ ವ್ಯಕ್ತಿಯ ಸಂಸ್ಪರ್ಶವಾದಾಗ ಜಲಸ್ನಾನ ಇಲ್ಲವೆ ಭಸ್ಮಸ್ನಾನದಿಂದ ಶರೀರವನ್ನು ಶುಚಿರ್ಭೂತಗೊಳಿಸುವುದು. (೨೮) ಕುಳಿತುಕೊಳ್ಳುವಲ್ಲಿ, ಮಲಗುವಲ್ಲಿ, ಯಾತ್ರೆಯಲ್ಲಿ ಮತ್ತು ಸಭೆ ಸಮ್ಮೇಲನಾದಿಗಳಲ್ಲಿ ಭವಿಗಳ ಸಂಬಂಧ ವಾಗದಂತೆ ಎಚ್ಚರಿಕೆ ವಹಿಸುವುದು. (೨೯) ಶರೀರದ ಮೇಲೆ ವಿಭೂತಿ, ''ರುದ್ರಾಕ್ಷಿ ಮತ್ತು ಇಷ್ಟಲಿಂಗವನ್ನು ಸದಾ ಧರಿಸಿಕೊಂಡಿರುವುದು. ಈ ಐದು ವಿಧವಾದ ಆಚರಣೆ ಗಳಿಂದ ಶರೀರವು ಶುದ್ಧವಾಗಿರಲು ಸಾಧ್ಯವಾಗುತ್ತದೆ. ಅಂತೆಯೇ ಇವುಗಳಿಗೆ ಕಾಯ ಶೋಧನಶೀಲಗಳೆಂದು ಕರೆದಿದ್ದಾರೆ.

ಮನುಷ್ಯ ಶರೀರವು ಸ್ವಾಭಾವಿಕವಾಗಿ ಅಶುದ್ಧವಾದುದಾಗಿದೆ. ಏಕೆಂದರೆ ಇದರ ಉತ್ಪತ್ತಿಯ ಸ್ಥಾನ, ಇದಕ್ಕೆ ಕಾರಣವಾದ ಬೀಜ, ಇದರಲ್ಲಿಯ ಮಾಂಸ ಮಜ್ಜಾದಿಗಳು. ಇದರಿಂದ ಸ್ರವಿಸುವ ಮಲ ಮೂತ್ರಾದಿಗಳು,ಇವೆಲ್ಲವುಗಳು ಅಪವಿತ್ರವಾದವುಗಳೇ ಆಗಿವೆ, ಇದೂ ಅಲ್ಲದೆ ಇದಕ್ಕೊದಗುವ ಕೊನೆಯದಾದ ಮರಣ ಸ್ಥಿತಿಯು ಅತ್ಯಂತ ಮಂಗಲಸ್ವರೂಪವಾದುದಾಗಿದೆ. ಹೀಗಿರುವಾಗ ಅದು ಹೇಗೆ ತಾನೆ ಈ ಶರೀರವು ಸ್ವಾಭಾವಿಕವಾಗಿ ಪವಿತ್ರವಾಗಿರಬಲ್ಲದು? ಅಂತೆಯೇ ವೀರಶೈವ ಆಚಾರ್ಯರು ಈ ಅಪವಿತ್ರವಾದ ದೇಹವನ್ನು ಪವಿತ್ರಗೊಳಿಸಲೋಸುಗ ಈ ಕಾರ್ಯಶೋಧನೆಯ ಪಂಚವಿಧಶೀಲಗಳನ್ನು ಉಪದೇಶಿಸಿದ್ದುಂಟು.

ಅನ್ನಮಯವಾದ ಈ ಸ್ಥೂಲ ಶರೀರವು ಅನ್ನದ ಪರಿಣಾಮವಾಗಿರುವುದರಿಂದ ಇದರ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಅನ್ನವೇ ಕಾರಣವಾಗಿರುವುದರಿಂದ ಇದನ್ನು ಶುದ್ಧಗೊಳಿಸಬೇಕಾದರೆ ಅನ್ನ ಶುದ್ಧಿಯೇ ಮುಖ್ಯವಾದುದು. ಗುರು ಲಿಂಗ ಜಂಗಮರಿಗೆ ಸಮರ್ಪಿಸಿದಾಗ ಅನ್ನವು ಶುದ್ಧವಾಗುವುದು. ಆ ಶುದ್ಧಾನ್ನಕ್ಕೇನೇ 'ಪ್ರಸಾದ' ವೆಂಬುದಾಗಿ ಕರೆಯುತ್ತಾರೆ. ಪ್ರತಿನಿತ್ಯ ಇಂತಹ ಪ್ರಸಾದ ಸೇವನೆಯಿಂದ ಕಾಯವೂ ಸಹ ಪ್ರಸಾದಕಾಯವಾಗಿ ಪರಿಣಮಿಸುತ್ತದೆ. ಹೀಗೆ ಶುದ್ಧಾನ್ನ ಸೇವನೆಯಿಂದ ಕಾಯವನ್ನು ಪರಿಶುದ್ಧಗೊಳಿಸುವುದೊಂದು ಕಾಯಶೋಧನೆಯ ಶೀಲವಾಗಿರುತ್ತದೆ.

ಪ್ರಸಾದ ಸೇವನೆಯಿಂದ ಕಾಯವು ಶುದ್ಧವಾದರೂ ಅದಕ್ಕೆ ನಿಷಿದ್ಧ ವಿಷಯಗಳ ಸಂಪರ್ಕವಾದಾಗ ಅದು ಪುನಃ ಅಶುದ್ಧತೆಯನ್ನು ಹೊಂದುವುದು. ಅಂತೆಯೇ ಈ

ಕಾಯಶೋಧನೆಯಲ್ಲಿ ನಿಷಿದ್ಧ ವಿಷಯಗಳಿಂದ ಇಂದ್ರಿಯಗಳನ್ನು ನಿಗ್ರಹಿಸಬೇಕೆಂಬು ದಾಗಿಯೂ ಉಪದೇಶಿಸಲಾಗಿದೆ. ನಮ್ಮ ದೇಹದಲ್ಲಿರುವ ಪಂಚಜ್ಞಾನೇಂದ್ರಿಯ ಹಾಗೂ ಪಂಚಕರ್ಮೇಂದ್ರಿಯಗಳು. ಬಹಿರ್ಮುಖಗಳಾಗಿರೋಣದರಿಂದ ಅವುಗಳು ಸ್ವಾಭಾ ವಿಕವಾಗಿ ವಿಷಯಗಳತ್ತ ಪ್ರವಹಿಸುತ್ತವೆ. ಈ ಇಂದ್ರಿಯಗಳಿಗೆ ಯಾವುಗಳು ಗ್ರಾಹ್ಯ ಮತ್ತು ಯಾವುಗಳು ಅಗ್ರಾಹ್ಯ ಎಂಬುದನ್ನು ಶಾಸ್ತ್ರದಲ್ಲಿ ನಿರ್ಣಯಿಸಲಾಗಿದೆ. ಅಂತೆಯೇ ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟ ಅಭಕ್ಷ-ಭಕ್ಷಣೆ ಅಪಾನಪೇಯಾದಿಗಳಿಂದ ಈ ಗಣಾಚಾರಿಯು ದೂರವಿರಬೇಕಾಗುವುದು. ಅದೆಷ್ಟೋ ಸಾರೆ ಫ್ಯಾಶನ್ನಿಗಾಗಿ ಪ್ರತಿಷ್ಠೆಗಾಗಿ ಮನುಷ್ಯನು ದುರಾಚಾರದತ್ತ ಅಭಿಮುಖವಾಗುತ್ತಾನೆ. ಒಮ್ಮೆ ಈತನು ವ್ಯಸನಾಧೀನನಾದರೆ ಪುನಃ ಅದರಿಂದ ಮುಕ್ತನಾಗುವುದು ಸುಲಭ ಸಾಧ್ಯವಾದುದಲ್ಲ. ಇದರಿಂದಾಗಿಯೇ ಅನೇಕ ಕುಟುಂಬಗಳು ನಷ್ಟವಾಗುತ್ತಲಿವೆ. ದೇಶದ ಪರಿಸ್ಥಿತಿಯು ಗಂಭೀರವಾಗುತ್ತ ಸಾಗಿದೆ. ವ್ಯಷ್ಟಿಯ ಸುಧಾರಣೆಯಾಗದೆ, ಸಮಷ್ಟಿಯ ಸುಧಾರಣೆ ಯಾಗದು. ಅಂತೆಯೇ ವೀರಶೈವ ಆಚಾರ್ಯರು ವ್ಯಕ್ತಿಗಳ ಸುಧಾರಣೆಗಾಗಿ ಈ ಶೀಲಗಳನ್ನು ಪ್ರತಿಪಾದಿಸಿದ್ದಾರೆ. ಪಶುವು ಹಸಿರುಕಂಡದ್ದೆಲ್ಲ ಹುಲ್ಲೆಂದು ತಿಳಿದು ತಿನ್ನಲು ಪ್ರವೃತ್ತವಾಗುವುದು ಅದರ ನೈಸರ್ಗಿಕ ಗುಣವಾಗಿರುವಂತೆ ಮನುಷ್ಯನೂ ಸಹ ಗ್ರಾಹ್ಯ ಅಗ್ರಾಹ್ಯಗಳನ್ನು ವಿವೇಚಿಸದೆ ಸಹಜವಾಗಿ ವಿಷಯದತ್ತಹರಿಯುತ್ತಾನೆ. ಈತನ ವಿಷಯ ಲೋಲುಪತೆಯನ್ನು ಕಂಡೇ ನಿಷಿದ್ಧ ವಿಷಯಗಳತ್ತ ಈತನ ಗತಿಯನ್ನು ನಿರೋಧ ಗೊಳಿಸುವುದಕ್ಕಾಗಿಯೇ ಇಲ್ಲಿ ಇಂದ್ರಿಯ ನಿಗ್ರಹವೆಂಬ ಕಾಯ ಶೋಧನೆಯ ಶೀಲವು ಪ್ರತಿಪಾದಿಸಲ್ಪಟ್ಟಿದೆ. ಆದಕಾರಣ ಸಾಧಕರಾದವರು ನಿಷಿದ್ಧ ವಿಷಯಗಳತ್ತ ತಮ್ಮ ಇಂದ್ರಿಯಗಳನ್ನು ಹರಿಬಿಡದೆ ನಿಗ್ರಹಿಸಿಕೊಂಡಿರಬೇಕು. ಇಂದ್ರಿಯನಿಗ್ರಹವು ಅಷ್ಟೊಂದು ಸುಲಭವಾದುದೇನಲ್ಲ ಅಂತೆಯೇ- '' ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿಕರ್ಷತಿ'' ಎಂಬುದಾಗಿ ಹೇಳಿದ ವ್ಯಾಸೋಕ್ತಿಯು ಸುಪ್ರಸಿದ್ಧವಾಗಿದೆ.

ಒಮ್ಮೆ ವ್ಯಾಸಮಹರ್ಷಿಯು ತನ್ನ ಆಶ್ರಮದಲ್ಲಿರುವ ಶಿಷ್ಯರಿಗೆಲ್ಲ ಶಾಸ್ತ್ರಬೋಧೆ ಯನ್ನು ಮಾಡುತ್ತಿರುವಾಗ, ಇಂದ್ರಿಯ ಹಾಗೂ ವಿಷಯಗಳ ಸಂಬಂಧದ ಬಗ್ಗೆ ವಿವೇಚಿ ಸುತ್ತಾ ''ಇಂದ್ರಿಯಗಳ ಸಂಘಾತವು ಅತ್ಯಂತ ಪ್ರಬಲವಾದುದು, ವಿವೇಕಿಗಳನ್ನೂ ಸಹ ಈ ಇಂದ್ರಿಯಗಳು ಒಮ್ಮೊಮ್ಮೆ ದಾರಿ ತಪ್ಪಿಸುವುದುಂಟು'' ಎಂಬುದಾಗಿ, ಬೋಧಿಸುತ್ತ ''ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿಕರ್ಷತಿ'' ಎಂಬುದಾಗಿ ಉಪದೇಶಿಸಿ ದನು. ಆಗ ಕುಳಿತ ಶಿಷ್ಯರಲ್ಲಿ ಅತ್ಯಂತ ಸೂಜ್ಞನಾದ ಜೈಮಿನಿಯು ''ಗುರುಗಳೆ ! ವಿದ್ವಾಂಸಮಪಿಕರ್ಷತಿ' ಎಂಬುದರ ಬದಲಾಗಿ 'ವಿದ್ವಾಂಸಂ ನಾಪಕರ್ಷತಿ' ಎಂದು ಹೇಳಿದರೆ ಸೂಕ್ತವಾಗುವುದು. ಇಂದ್ರಿಯಗಳು ಅವಿವೇಕಿಗಳನ್ನು ದಾರಿ ತಪ್ಪಿಸುವವೇ ವಿನಹ ವಿವೇಕಿಗಳನ್ನು ಅದೆಂದಿಗೂ ತಪ್ಪಿಸಲಾರವು'' ಎಂಬುದಾಗಿ ವಾದಿಸಿದರು. ಆಗ ಗುರುಗಳು ''ಹಾಗಲ್ಲ ಪ್ರಸಂಗ ಬಂದಾಗ ವಿವೇಕಿಗಳೂ ಸಹ ದಾರಿ ತಪ್ಪುವುದುಂಟು ಎಂಬುದಾಗಿ ಅದೆಷ್ಟು ಸಾರೆ ತಿಳಿಸಿ ಹೇಳಿದರೂ ಜೈಮಿನಿಯು ಒಪ್ಪಿಕೊಳ್ಳಲಿಲ್ಲ. ಈ ವಿಷಯವು ವಿವಾದವಾಗಿಯೇ ಉಳಿಯಿತು. ಅನೇಕ ದಿನಗಳು ಗತಿಸಿದ ನಂತರ ಒಮ್ಮೆ ವ್ಯಾಸರು ತಾನು ಹಿಂದೆ ಹೇಳಿದ ಮಾತನ್ನು ಜೈಮಿನಿಗೆ ಅನುಭವಕ್ಕೆ ತಂದು

ಕೊಡಬೇಕೆಂಬುದಾಗಿ ಯೋಚಿಸಿ ಸಮಯದ ಪ್ರತೀಕ್ಷೆಯನ್ನು ಮಾಡುತ್ತಿದ್ದರು. ಒಂದು ದಿನ ಜೈಮಿನಿಯು ನಸುಕಿನಲ್ಲಿ ನದಿಯ ಸ್ನಾನಕ್ಕೆ ಹೋದಾಗ ನದಿಯ ದಡದಲ್ಲಿ ಸುಂದರ ಷೋಡಶಿಯಾದ ಕನ್ಯೆಯನ್ನು ಕಂಡನು. ನಿರ್ಜನವಾದ ವಾತಾವರಣದಲ್ಲಿ ಒಂಟಿಯಾಗಿ ಕುಳಿತ ಕನ್ಯೆಯತ್ತ ಜೈಮಿನಿಯ ಚಿತ್ತ ಹರಿಯಿತು. ನದಿಯಲ್ಲಿ ಸ್ನಾನ ಮಾಡುತ್ತಲೇ ಅವಳ ಬಗ್ಗೆ ಆಲೋಚಿಸತೊಡಗಿದನು. ಇವಳು ಯಾರಿರಬಹುದು ? ಒಬ್ಬಳೇ ನದೀ ದಡದಲ್ಲಿ ಬಂದಿರುವ ಕಾರಣವೇನು ? ಇವಳ ಯೋಗಕ್ಷೇಮವನ್ನಾದರೂ ವಿಚಾರಿಸಬೇಕಲ್ಲ ? ಮುಂತಾಗಿ ಹಲವು ವಿಚಾರಗಳು ಮನದಲ್ಲಿ ಒಡಮೂಡತೊಡಗಿದವು. ಈತನು ಇತ್ತ ಸ್ನಾನ ಮಾಡುತ್ತಿರುವಾಗ ಅವಳೂ ಸಹ ನದಿಯಲ್ಲಿ ಸ್ನಾನಮಾಡತೊಡಗಿದಳು. ಈತನೂ ತನ್ನ ಸ್ನಾನವನ್ನು ಮುಗಿಸಿ ಅವಳತ್ತ ಹೊರಳಿ ನೋಡಿದಾಗ ಆಕೆ ಸ್ನಾನಮಾಡಿ ಒದ್ದೆಯಾದ ಬಟ್ಟೆಯನ್ನುಟ್ಟೇ ಈತನ ಕಡೆಗೆ ಬೆನ್ನುಮಾಡಿ ಹೊರಳಿ ನಿಂತಿದ್ದಳು. ಅವಳ ಸುಂದರ ದೇಹದಿಂದ ಆಕರ್ಷಿತನಾಗಿ ಜೈಮಿನಿಯು ತನ್ನ ಆಶ್ರಮದತ್ತ ಹೋಗದೆ ಇವಳತ್ತ ಬರತೊಡಗಿದನು. ಅವಳ ಮುಂದೆ ನಿಂತು ಅವಳ ದೇಹವನ್ನು ನೋಡುತ್ತ ''ನೀನಾರು? ಇಲ್ಲಿ ಒಬ್ಬೊಂಟಿಗಳಾಗಿ ಬಂದ ಕಾರಣವೇನು ?'' ಮುಂತಾಗಿ ಹಲವು ಹನ್ನೆರಡು ಪ್ರಶ್ನೆಗಳನ್ನು ವಿಚಾರಿಸಿದನು. ಆಗ ಅವಳು ''ನಾನೋರ್ವ ಅನಾಥ ಕನ್ಯೆ, ಯಾರೂ ಗತಿಯಿಲ್ಲದೆ ಹೀಗೆಯೇ ಅಲೆಯುತ್ತಲಿದ್ದೇನೆ. ಸಂಗಾತಿಯೋರ್ವನು ದೊರೆತರೆ ಸುಖವಾಗಿ ಜೀವಿಸಬೇಕೆಂಬುದೊಂದೇ ನನ್ನ ಆಶೆ''. ಅವಳ ಆ ನುಡಿಗಳನ್ನು ಕೇಳಿ ಜೈಮಿನಿಯು ಸಂಪೂರ್ಣವಾಗಿ ಅವಳತ್ತ ಆಕರ್ಷಿತನಾದನು. ಅವಳೊಂದಿಗೆ ತಾನು ಗಾಂಧರ್ವ ವಿವಾಹ ಮಾಡಿಕೊಳ್ಳುವುದಾಗಿಯೂ ತನ್ನ ಒಪ್ಪಿಗೆಯನ್ನಿತ್ತನು. ಆಗ ಅವಳು ''ನೀವು ಮಹರ್ಷಿಗಳು ಮೋಹ–ವ್ಯಾಮೋಹಗಳಿಂದ ದೂರವಿದ್ದವರು ನನ್ನನ್ನು ನಿಜವಾಗಿ ಪ್ರೀತಿಸುತ್ತೀರೆಂಬುದಕ್ಕೆ ಏನು ಪ್ರಮಾಣ ? ನೀವು ನನ್ನನ್ನು ನಿಜವಾಗಿ ಪ್ರೀತಿಸಿ ವಿವಾಹ ಮಾಡಿಕೊಳ್ಳುವುದೇ ಆದರೆ ಮೊದಲು ನನ್ನನ್ನು ನಿಮ್ಮ ಹೆಗಲ ಮೇಲೆ ಕೂಡ್ರಿಸಿಕೊಂಡು ಒಂದು ನೂರು ಹೆಜ್ಜೆ ಮುಂದೆ ನಡೆದು ತೋರಿಸಿರಿ, ಆಗ ತಾನೆ ನಾನು ನನ್ನ ಒಪ್ಪಿಗೆಯನ್ನು ಸೂಚಿಸಬಹುದು'' ಎಂದು ನುಡಿದಳು. ''ಕಾಮಾತುರಾಣಾಂ ನ ಭಯಂ ನ ಲಜ್ಜಾ'' ಎಂಬ ಉಕ್ತಿಗನುಸಾರವಾಗಿ ಜೈಮಿನಿಯು ಭಯ–ಲಜ್ಜೆಗಳನ್ನು ತೊರೆದು ಅವಳನ್ನು ಹೆಗಲ ಮೇಲೆ ಕೂಡ್ರಿಸಿಕೊಂಡು ಹೆಜ್ಜೆಯನೆಣಿಸುತ್ತ ಮುನ್ನಡೆಯತೊಡಗಿದನು. ತನ್ನ ಮೇಲೆ ಕುಳಿತ ಆ ಹೆಣ್ಣಿನ ಅಂಗ ಸ್ಪರ್ಶದ ಕ್ಷಣಿಕ ಆನಂದದಲ್ಲಿ ತನ್ನ ವಿವೇಕವೆಲ್ಲವನ್ನೂ ಕಳೆದುಕೊಂಡು ಸುಮಾರು ಐವತ್ತು ಹೆಜ್ಜೆ ಮುನ್ನಡೆದಿರಬಹುದು. ಆಗ ಜೈಮಿನಿಗೆ ತನ್ನ ಹೆಗಲ ಮೇಲಿನ ದೇಹ ಕ್ರಮೇಣ ಭಾರವಾಗತೊಡಗಿತು. ಅವಳ ಕೋಮಲ, ಕೋಮಲಗಳಾದ ಪಾದಗಳು ವೃದ್ಧಪುರುಷ ಶರೀರದಂತೆ ಋಕ್ಷವಾಗಿ ಅನುಭವಗೋಚರವಾಗತೊಡಗಿದವು. ಇದೇನು ನಾನು ಹೊತ್ತಿರುವ ದೇಹ ಹೆಣ್ಣೋ? ಗಂಡೋ ? ಇಷ್ಟು ಬೇಗನೇ ಪರಿವರ್ತನೆಯಾಗುತ್ತಿರೋಣದರಿಂದ ಇದೇನು ಭೂತವೋ? ಪ್ರೇತವೋ ? ಎಂಬುದಾಗಿ ಆಶಂಕಿತನಾಗಿ ಆ ಹೊತ್ತ ದೇಹವನ್ನು ಮೆಲ್ಲನೆ ಕೆಳಗಿಳಿಸಿ ನೋಡುತ್ತಾನೆ. ಇದೇನಾಶ್ಚರ್ಯ, ತಾನು ಹೊತ್ತುತಂದ ದೇಹ ಹೆಣ್ಣಿನದಾಗಿರದೆ ಮಹರ್ಷಿವ್ಯಾಸನದಾಗಿತ್ತು. ವ್ಯಾಸನ ಈ

ಲೀಲೆಯನ್ನು ಕಂಡು ಜೈಮಿನಿಯು ನಾಚಿಕೆಗೊಳಗಾಗಿ ತಲೆತಗ್ಗಿಸಿಕೊಂಡು ಭಯ ಗಾಬರಿಗಳೊಂದಿಗೆ ಮೌನವಾಗಿ ನಿಂತುಕೊಂಡನು. ಆಗ ವ್ಯಾಸನು ಜೈಮಿನಿಯನ್ನು ಕುರಿತು ''ವಿದ್ವಾಂಸಮಪಿಕರ್ಷತಿ'' ಎಂದು ಹೇಳುವ ನನ್ನ ಮಾತು ಸರಿಯೋ ''ವಿದ್ವಾಂಸಂ ನಾಪಕರ್ಷತಿ'' ಎಂದು ಹೇಳುವ ನಿನ್ನ ಮಾತು ಸರಿಯೋ? ಎಂಬುದಾಗಿ ಪ್ರಶ್ನಿಸಲು ಜೈಮಿನಿಯು ತನ್ನ ತಪ್ಪನ್ನೊಪ್ಪಿಕೊಂಡು ಗುರುಪಾದಕ್ಕೆ ನತಮಸ್ತಕನಾದನು.

ಈ ರೀತಿಯಾಗಿ ಇಂದ್ರಿಯಗಳು ಪ್ರಬಲವಾದವುಗಳಾದ್ದರಿಂದ ಅವು ಒಮ್ಮೊಮ್ಮೆ ವಿದ್ವಾಂಸನನ್ನೂ ಸಹ ದಾರಿ ತಪ್ಪಿಸುವುದುಂಟು, ಅಂತೆಯೇ ಇಂದ್ರಿಯ ನಿಗ್ರಹದ ಮೇಲೆ ಅಭಿಮಾನವನ್ನು ತಾಳದೆ ಅದೊಂದು ಈಶ್ವರಾನುಗ್ರಹವೆಂದೇ ಪರಿಭಾವಿಸಬೇಕು. ಅಂತೆಯೇ ಬಸವಣ್ಣನವರು–

ವಿಷಯವೆಂಬ ಹಸುರನೆನ್ನಮುಂದೆ ತಂದು
ಪಸರಿಸದಿರಯ್ಯಾ !
ಪಶುವೇನು ಬಲ್ಲುದು ಹಸುರೆಂದೆಳೆಸುವುದು
ವಿಷಯರಹಿತನಮಾಡಿ ಕರುಣಿಸಿ ಕಾಪಾಡು
ಕೂಡಲಸಂಗಮದೇವಾ.

ಎಂಬ ಈ ವಚನದಲ್ಲಿ ಇಂದ್ರಿಯ ನಿಗ್ರಹವು ಸ್ವಪ್ರಯತ್ನದಿಂದ ಸಾಧ್ಯವಾಗದೆ ಅದಕ್ಕೆ ಈಶ್ವರಾನುಗ್ರಹವೂ ಬೇಕೆಂಬುದನ್ನು ತಿಳಿಯಪಡಿಸಿದ್ದಾರೆ. ಹೀಗೆ ಸ್ವಪ್ರಯತ್ನ ಹಾಗೂ ಈಶ್ವರಾನುಗ್ರಹಗಳಿಂದ ಇಂದ್ರಿಯಗಳು ನಿಷಿದ್ಧ ವಿಷಯಗಳತ್ತ ಹರಿಯದಂತೆ ಎಚ್ಚರಿಕೆಯನ್ನು ವಹಿಸಿ ಕಾಯವನ್ನು ಪರಿಶುದ್ಧವಾಗಿಟ್ಟುಕೊಳ್ಳಬೇಕೆಂಬುದಾಗಿ ಈ ಕಾಯಶೋಧನೆಯ ಶೀಲವು ತಿಳಿಯಪಡಿಸುತ್ತದೆ.

ಅಸ್ಪೃಶ್ಯ ಸ್ಪರ್ಶದಿಂದ ಉಂಟಾದ ಕಾಯದ ಅಶುದ್ಧಿಯನ್ನು ದೂರಮಾಡಲು ಜಲಸ್ನಾನ ಮತ್ತು ಭಸ್ಮಸ್ನಾನಗಳನ್ನು ಇಲ್ಲಿ ವಿಧಿಸಲಾಗಿದೆ. ಶರೀರಶುದ್ಧಿಗೋಸ್ಕರ ಧರ್ಮಶಾಸ್ತ್ರದಲ್ಲಿ –

ಮಂತ್ರಂ ಭೌಮಂ ತಥಾಗ್ನೇಯಂ ವಾಯುವ್ಯಂ ದಿವ್ಯಮೇವಚ ।
ವಾರುಣಂ ಮಾನಸಂಚೈವ ಸಪ್ತಸ್ನಾನಂ ಪ್ರಕೀರ್ತಿತಮ್ ॥

(ಶಬ್ದಕಲ್ಪದ್ರುಮ ಪು. ೪೫೩)

ಎಂಬುದಾಗಿ ಏಳು ವಿಧವಾದ ಸ್ನಾನಗಳು ಪ್ರತಿಪಾದಿಸಲ್ಪಟ್ಟಿವೆ. '' ಆಪೋಹಿಷ್ಠಾ.....'' ಮುಂತಾದ ವೈದಿಕ ಮಂತ್ರಗಳನ್ನು ಪಠಿಸುತ್ತ ಮಸ್ತಕದ ಮೇಲೆ ಜಲ ಪ್ರೋಕ್ಷಣೆ ಮಾಡಿಕೊಳ್ಳುವುದೇ ಮಂತ್ರ ಸ್ನಾನವು. ಗಂಗಾ ಮುಂತಾದ ಪವಿತ್ರನದಿಗಳಲ್ಲಿಯ ಮಣ್ಣನ್ನು ಹಣೆಯ ಮೇಲೆ ತಿಲಕರೂಪದಲ್ಲಿ ಧರಿಸಿಕೊಳ್ಳುವುದು ಭೌಮಸ್ನಾನವು. ಇದಕ್ಕೆ ಪಾರ್ಥಿವಸ್ನಾನವೆಂತಲೂ ಕರೆಯುತ್ತಾರೆ. ಶಾಸ್ತ್ರೋಕ್ತವಾದ ಪದ್ಧತಿಯಂತೆ ನಿರ್ಮಿಸಿದ ಭಸ್ಮವನ್ನು ಶರೀರದ ತುಂಬೆಲ್ಲ ಲೇಪಿಸಿಕೊಳ್ಳುವುದೇ ಭಸ್ಮಸ್ನಾನವು. ಈ ಭಸ್ಮಸ್ನಾನಕ್ಕೇನೇ ಆಗ್ನೇಯಸ್ನಾನವೆಂದು ಕರೆಯುತ್ತಾರೆ, ಅಗ್ನಿಯಲ್ಲಿ ದಾಹಕ ಶಕ್ತಿ ಇರುವಂತೆ ಸರ್ವ ದೋಷಗಳನ್ನು ದಹಿಸುವ ಸಾಮರ್ಥ್ಯವು ಭಸ್ಮದಲ್ಲಿರೋಣದರಿಂದ ಇದರ ಸ್ನಾನಕ್ಕೆ

ಆಗ್ನೇಯಸ್ನಾನವೆಂಬುದಾಗಿ ಕರೆದಿದ್ದಾರೆ. ಗೋಧೂಳಿಯಿಂದ ಮಿಶ್ರಿತವಾದ ವಾಯುವಿನ ಸಂಸ್ಪರ್ಶಕ್ಕೆ ವಾಯುವ್ಯಸ್ನಾನವೆಂದು ಹೆಸರು. ಗೋಪಾದ ಸ್ಪರ್ಶದಿಂದ ಪವಿತ್ರವಾದ ಆ ಗೋಧೂಳಿಯು ವಾಯುವಿನೊಂದಿಗೆ ಸಮ್ಮಿಶ್ರಣವಾಗಿ ಶರೀರವನ್ನು ಸೋಂಕಿದಾಗ ಶರೀರವು ಪರಿಶುದ್ಧವಾಗುತ್ತದೆ. ಅಂತೆಯೇ ಈ ವಾಯುವ್ಯ ಸ್ನಾನವೂ ಶರೀರ ಶುದ್ಧಿಗೆ ಕಾರಣವಾಗಿರುತ್ತದೆ. ಪ್ರಾತಃಕಾಲ ಇಲ್ಲವೆ ಸಾಯಂಕಾಲ ಹೊಬಿಸಿಲಿನ ವೇಳೆಯಲ್ಲಿ ಬರುತ್ತಿರುವ ಮಳೆಯ ನೀರಿನಲ್ಲಿ ಮಾಡುವ ಸ್ನಾನಕ್ಕೆ ದಿವ್ಯಸ್ನಾನವೆನ್ನುತ್ತಾರೆ. ನದಿಗಳ ಲ್ಲಾಗಲೀ ಅಥವಾ ಸಮುದ್ರ ಸರೋವರಗಳಲ್ಲಾಗಲೀ ಮುಳುಗಿಮಾಡುವ ಸ್ನಾನಕ್ಕೆ ವಾರುಣಸ್ನಾನವೆನ್ನುವರು. ಇನ್ನು ನಿರಂತರವಾಗಿ ಮನಸ್ಸಿನಲ್ಲಿ ಭಗವತ್ ಸ್ಮರಣೆಯನ್ನು ಮಾಡುತ್ತಿರುವುದೇ ಮಾನಸ ಸ್ನಾನವು. ಹೀಗೆ ಯಾಜ್ಞವಲ್ಕ್ಯ ಮಹರ್ಷಿಗಳು ಧರ್ಮ ಶಾಸ್ತ್ರದಲ್ಲಿ ಸಪ್ತವಿಧ ಸ್ನಾನಗಳನ್ನು ಉಪದೇಶಿಸಿದ್ದಾರೆ. ವೀರಶೈವ ಆಚಾರ್ಯರು ಕಾಯಶೋಧನೆಗಾಗಿ ಈ ಗಣಾಚಾರದಲ್ಲಿ ವಾರುಣ ಸ್ನಾನ ಹಾಗೂ ಭಸ್ಮಸ್ನಾನಗಳನ್ನು ಬೋಧಿಸಿದ್ದಾರೆ. ಈ ಸಪ್ತವಿಧ ಸ್ನಾನಗಳಲ್ಲಿ ಭಸ್ಮಸ್ನಾನವೇ ಶ್ರೇಷ್ಠವಾದುದು. ಈ ವಿಷಯವನ್ನು ಪೂಜ್ಯಪಾದರು–

> ಭಸ್ಮನಾ ವಿಹಿತಂ ಸ್ನಾನಮಿದಮಾಗ್ನೇಯಮುತ್ತಮಮ್ ।
> ಸ್ನಾನೇಷು ವಾರುಣಾದ್ಯೇಷು ಮುಖ್ಯಮೇತನ್ಮಲಾಪಹಮ್ ॥
>
> (ಸಿ.ಶಿ. ೭–೩೨)

ಈ ರೀತಿಯಾಗಿ ಬೋಧಿಸಿದ್ದಾರೆ. ಈ ಭಸ್ಮಸ್ನಾನವು ಅಂತರಂಗ ಬಹಿರಂಗಗಳೆರಡನ್ನೂ ಪರಿಶುದ್ಧಗೊಳಿಸೋಣದರಿಂದ ಇದಕ್ಕೆ ಶ್ರೇಷ್ಠಸ್ನಾನವೆಂದು ಕರೆಯುತ್ತಾರೆ.

ಆಸನ–ಶಯನಾದಿಗಳಲ್ಲಿ ಭವಿಗಳೊಂದಿಗೆ ಸಂಪರ್ಕವಾದಾಗಲೂ ಕಾಯವು ಅಶುದ್ಧವಾಗುವುದು. ಅಂತೆಯೇ ಈ ಕಾಯಶೋಧನೆಯಲ್ಲಿ ಭವಿಸಂಬಂಧವನ್ನು ವರ್ಜಿಸಲಾಗಿದೆ. ನಿಸರ್ಗದಲ್ಲಿ ಪ್ರಕೃತಿಯು ಮನುಷ್ಯರನ್ನು ಸ್ತ್ರೀ ಮತ್ತು ಪುರುಷನೆಂಬು ದಾಗಿ ವಿಭಾಗಿಸಿದರೆ ನಮ್ಮ ಆಚಾರ್ಯರು ಲಿಂಗ–ಭೇದಕ್ಕೆ ಮಹತ್ವವನ್ನು ಕೊಡದೆ ಆಚಾರಕ್ಕೆ ಮಹತ್ವಕೊಟ್ಟು ಭವಿ ಮತ್ತು ಭಕ್ತ ಎಂಬುದಾಗಿ ವಿಭಜನೆ ಮಾಡಿದ್ದಾರೆ. ಶಿವಸಂಸ್ಕಾರವನ್ನು ಹೊಂದಿದವರು ಭಕ್ತರೆನಿಸಿಕೊಂಡರೆ, ಈ ಸಂಸ್ಕಾರ ಹೀನರಾದವರೇ ಭವಿಗಳು. ಭಕ್ತನಾದವನು ಭವಿಯ ಸಂಪರ್ಕವನ್ನು ಮಾಡಿದಾಗ ಕ್ರಮವಾಗಿ ಈತನ ಭಾವನೆಯೂ ಸಹ ಕುಗ್ಗುತ್ತ ಹೋಗಿ ಕೊನೆಗೊಂದು ದಿನ ಭಕ್ತನೂ ಭವಿಯಾಗುವ ಪ್ರಸಂಗವೂ ಬಂದೊದಗಬಹುದು. ಅಂತೆಯೇ ಗಣಾಚಾರಾಂತರ್ಗತ ವಾದ ಈ ಕಾಯಶೋಧನೆಯ ಶೀಲದಲ್ಲಿ ಕುಳಿತುಕೊಳ್ಳುವಾಗ, ಮಲಗುವಾಗ, ವಾಹನಗಳಲ್ಲಿ ಯಾತ್ರೆಗೈಯ್ಯುವಾಗ ಸಭೆ–ಸಮಾರಂಭಗಳಲ್ಲಿ ಭಾಗವಹಿಸುವಾಗ ಭವಿಗಳಿಂದ ತಾನು ದೂರಾಗಿರಬೇಕೆಂಬುದಾಗಿ ಇಲ್ಲಿ ಎಚ್ಚರಿಸಲಾಗಿದೆ.

ಇನ್ನು ಶರೀರವನ್ನು ಸದಾ ಶುದ್ಧವಾಗಿಟ್ಟುಕೊಳ್ಳಲೋಸುಗ ವಿಭೂತಿ ರುದ್ರಾಕ್ಷಿ ಧರ್ಮದ ಲಾಂಛನಗಳನ್ನು ದೇಹದ ಮೇಲೆ ಸದಾ ಧರಿಸಿಕೊಂಡಿರಬೇಕೆಂಬುದಾಗಿಯೂ ಈ ಗಣಾಚಾರದಲ್ಲಿ ಉಪದೇಶಿಸಲಾಗಿದೆ. ಪ್ರತಿಯೊಬ್ಬ ವೀರಶೈವನು ದೀಕ್ಷಾ

ಸಂಸ್ಕಾರವನ್ನು ಹೊಂದಿ ದೇಹದ ಮೇಲೆ ಸದಾ ಇಷ್ಟಲಿಂಗವನ್ನು ಧರಿಸಿಕೊಂಡಿರಬೇಕು. ''ಲಿಂಗಧಾರೀ ಸದಾ ಶುದ್ಧಃ'' ಎಂಬ ಆಚಾರ್ಯೋಕ್ತಿಗನುಸಾರವಾಗಿ ದೇಹದ ಮೇಲೆ ಸದಾ ಲಿಂಗವನ್ನು ಧರಿಸಿಕೊಂಡಿರುವುದೆಂದರೆ ಶರೀರದ ಶುದ್ಧಿಯನ್ನು ಕಾಪಾಡಿಕೊಂಡಿ ರುವುದೆಂತರ್ಥ. ಈ ಇಷ್ಟಲಿಂಗದ ಜೊತೆಗೆ ಭಸ್ಮ ರುದ್ರಾಕ್ಷಿಗಳನ್ನೂ ಸಹ ಧರಿಸಿ ಕೊಂಡಿರಬೇಕು. ಈ ಧರ್ಮಲಾಂಛನಗಳು ಮನುಷ್ಯನ ಸ್ವೇಚ್ಛಾಪ್ರವೃತ್ತಿಯ ಮೇಲೆ ನಿಯಂತ್ರಣ ಮಾಡುತ್ತವೆ. ಮದೋನ್ಮತ್ತವಾದ ಆನೆಯನ್ನು ಅಂಕುಶದಿಂದ ಅಂಕಿತ ದಲ್ಲಿಟ್ಟುಕೊಳ್ಳುವಂತೆ ಮನಸ್ಸಿನ ಉಚ್ಛೃಂಕಲ ಪ್ರವೃತ್ತಿಯನ್ನು ತಡೆಗಟ್ಟಲು ಈ ಧಾರ್ಮಿಕ ಚಿಹ್ನೆಗಳು ಸಹಾಯಕಗಳಾಗುವವು. ಹೀಗೆ ಈವರೆಗೆ ಬೋಧಿಸಿದ ಕಾಯ ಶೋಧನೆ ಪಂಚಶೀಲಗಳನ್ನು ಪ್ರತಿಯೊಬ್ಬರು ಆಚರಿಸಿ, ಅನುಭವಿಸಿ ಸುಖಿಗಳಾಗಬೇಕೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ಆಗಸ್ಟ್ ೧೯೮೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ)

■■

ಆಶೀರ್ವಚನ-೫

# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟ ಪಂಚಾಚಾರಗಳ ವಿಸ್ತೃತ ವಿವೇಚನೆಯನ್ನು ಆಲಿಸುತ್ತಿದ್ದಿರಿ. ನಿನ್ನೆಯ ಆಶೀರ್ವಚನದಲ್ಲಿ ಶಿವಾಚಾರ ಮತ್ತು ಗಣಾಚಾರಾಂತರ್ಗತಗಳಾದ ಅವಾಂತರ ಶೀಲಗಳ ಬಗ್ಗೆ ಆಲಿಸಿದ್ದೀರಿ. ಗಣಾಚಾರದಲ್ಲಿ ಬರುವ ಒಟ್ಟು ಅರವತ್ನಾಲ್ಕು ಶೀಲಗಳಲ್ಲಿ ವಾಕ್, ಪಾಣಿ, ಪಾದ, ತ್ವಕ್, ಜಿಹ್ವಾ, ಘ್ರಾಣ, ಶ್ರೋತ್ರ ಮತ್ತುಕಾಯ ಸಂಬಂಧಿಗಳಾದ ಇಪ್ಪತ್ತೊಂಭತ್ತು ಶೀಲಗಳ ಸ್ವರೂಪಗಳ ಬಗ್ಗೆ ಈ ಹಿಂದೆ ಉಪದೇಶಿಸಲಾಗಿದ್ದು, ಇನ್ನು ಮುಂದೆ ಮಾನಸಿಕ ಶುದ್ಧಿಗೆ ಸಂಬಂಧಪಟ್ಟ ಮೂವತ್ತೈದು ವಿಧಗಳಾದ ಶೀಲಗಳ ಬಗ್ಗೆ ವಿವೇಚಿಸೋಣ.

ತ್ರಿಕರಣ ಶುದ್ಧಿಯಲ್ಲಿ ಮನಶುದ್ಧಿಯೇ ಪ್ರಮುಖವಾದುದು. ಮನಸ್ಸೇ ಬಂಧ ಮೋಕ್ಷಗಳಿಗೆ ಕಾರಣವಾದ್ದರಿಂದ ಮನಸ್ಸು ಅಶುದ್ಧವಾದಾಗ ಬಂಧನ, ಅದು ಶುದ್ಧವಾದಾಗ ಮುಕ್ತಿಯು. ಅಂತೆಯೇ ವೀರಶೈವ ಆಚಾರ್ಯರು ಗಣಾಚಾರಾಂತರ್ಗತವಾದ ಮಾನಸಿಕ ಶುದ್ಧಿಯನ್ನು ಮೂವತ್ತೈದು ಶೀಲಗಳ ಮುಖಾಂತರ ಪ್ರತಿಪಾದಿಸಿದ್ದಾರೆ. (೩೦) ನಿಷಿದ್ಧ ಭೋಗವಿಷಯದಲ್ಲಿ ಸಂಕಲ್ಪರಾಹಿತ್ಯರೂಪವಾದ ಬ್ರಹ್ಮಚರ್ಯವು ಮಾನಸಿಕ ಶೀಲವು. ಸಂಕಲ್ಪ–ವಿಕಲ್ಪಗಳು ಮನಸ್ಸಿನ ಧರ್ಮಗಳಾಗಿವೆ. ಇದ್ದ ವಸ್ತುವಿನ ಬಗ್ಗೆ ನಡೆಯುವ ಮಾನಸಿಕ ವಿಚಾರಕ್ಕೆ ಸಂಕಲ್ಪವೆಂತಲೂ, ಕಾಲ್ಪನಿಕ ವಿಷಯದ ಬಗ್ಗೆ ನಡೆಯುವ ಮನೋವಿಚಾರಕ್ಕೆ ವಿಕಲ್ಪವೆಂತಲೂ ಕರೆಯುತ್ತಾರೆ. ಮನಸ್ಸಿನಲ್ಲಿ ಒಮ್ಮೆ ಸಂಕಲ್ಪಾತ್ಮಕ ವೃತ್ತಿ ಇದ್ದರೆ ಮಗದೊಮ್ಮೆ ವಿಕಲ್ಪಾತ್ಮಕವೃತ್ತಿ ಉದ್ಭವಿಸುವುದು. ಕಾಲ್ಪನಿಕ ವಿಷಯ ಚಿಂತನೆಯಲ್ಲಿ ತೊಡಗಿದ ಮನಸ್ಸು ತನ್ನ ಶಕ್ತಿಯನ್ನು ಹ್ರಾಸಗೊಳಿಸಿಕೊಳ್ಳುವುದು. ಅಂತೆಯೇ ಯೋಗಶಾಸ್ತ್ರದಲ್ಲಿ ವಿಕಲ್ಪವೃತ್ತಿಯನ್ನು ತಡೆಯಬೇಕೆಂಬುದಾಗಿ ಬೋಧಿಸಲಾಗಿದೆ. ಇನ್ನೂ ಮನಸ್ಸಿನಲ್ಲಿ ನಡೆಯುವ ಶಬ್ದಸ್ಪರ್ಶಾದಿ ವಿಷಯಕವಾದ ಸಂಕಲ್ಪವಾದರೂ ವಿಹಿತವೋ ನಿಷಿದ್ಧವೋ ಎಂಬುದನ್ನೂ ವಿಚಾರಿಸುವುದು ಅವಶ್ಯಕವಾದುದಾಗಿದೆ. ನಿಷಿದ್ಧವಿಷಯಗಳ ಸಂಕಲ್ಪವೂ ಸಹ ನಿಷಿದ್ಧವೇ ಆಗಿರುತ್ತದೆ. ಆದ್ದರಿಂದ ಸಾಧಕನು ನಿಷಿದ್ಧ ವಿಷಯಗಳ ಉಪಭೋಗವಷ್ಟೇ ಅಲ್ಲ, ಅದರ ವಿಚಾರವನ್ನೇ ತ್ಯಾಗಮಾಡಬೇಕೆಂಬುದಾಗಿ ಉಪದೇಶಿಸಿ ಮಾನಸಿಕ ಬ್ರಹ್ಮಚರ್ಯದ ತಿಳುವಳಿಕೆಯನ್ನು ಮಾಡಿಕೊಟ್ಟಿದ್ದಾರೆ. (೩೧) ''ಭಕ್ತಿಯಲ್ಲಿ ಕಾಮ ಬೇಕೇ ವಿನಹ ವಿಷಯದಲ್ಲಲ್ಲ'' ಕಾಮ ಎಂದರೆ ಸಾಮಾನ್ಯವಾಗಿ ಇಚ್ಛೆ ಎಂದರ್ಥವಾಗುವುದು. ಸಾಧಕನಿಗೆ ಸಂಪೂರ್ಣವಾಗಿ ಇಚ್ಛೆಯ ನಿರೋಧಮಾಡುವುದು ಸಾಧ್ಯವಾಗುವುದಿಲ್ಲ. ಅಂತೆಯೇ ಆ ಇಚ್ಛೆಯ ಮಾರ್ಗವನ್ನು ಬದಲಿಸುವ ಉಪಾಯವನ್ನು ಇಲ್ಲಿ ತಿಳಿಸಿದ್ದಾರೆ. ಭಗವದ್ಭಕ್ತಿಯಲ್ಲಿ ಆಸಕ್ತಿ

ಇರಬೇಕೇ ವಿನಃ ಶಬ್ದಸ್ಪರ್ಶಾದಿ ವಿಷಯಗಳಲ್ಲಿರಕೂಡದೆಂಬುದು ಮಾನಸಿಕ ಶೀಲವು, ವಿಷಯಗಳಲ್ಲಿರುವ ಅನುರಾಗಕ್ಕೆ ''ರತಿ'' ಯೆಂದು ಕರೆದರೆ, ಅದೇ ಅನುರಾಗವು ಭಗವಂತನೆಡೆಗೆ ಹೊರಳಿದಾಗ ಅದಕ್ಕೆ 'ಭಕ್ತಿ' ಎಂಬುದಾಗಿ ಕರೆಯುತ್ತಾರೆ.

(೩೨) ''ಅಧರ್ಮದಲ್ಲಿ ಕ್ರೋಧವಿರಬೇಕೇ ವಿನಃ ವೈರಿಗಳಲ್ಲಲ್ಲ'' ಕ್ರೋಧವು ಮನಸ್ಸಿನ ಒಂದು ವೃತ್ತಿಯಾಗಿದೆ. ಈ ಕ್ರೋಧದಿಂದಾಗಿಯೇ ಜಗತ್ತಿನಲ್ಲಿ ವೈರಿಗಳು ತಲೆದೋರುತ್ತಾರೆ. ಹೀಗೆ ವೈರಿಗಳ ಮೇಲೆ ಪುನಃ ಪುನಃ ಕ್ರೋಧಮಾಡುತ್ತಹೋದರೆ ಆ ವೈರವು ದೃಢವಾಗುತ್ತ ಹೋಗುವುದು. ಈ ರೀತಿಯಾಗಿ ವೈರಿಗಳ ಮೇಲೆ ಮಾಡುವ ಕ್ರೋಧವು ಅನರ್ಥಕ್ಕೆ ಕಾರಣವಾಗುವುದು.

ಕ್ರೋಧವು ಒಂದು ಜ್ವಲನಾತ್ಮಕ ಚಿತ್ತವೃತ್ತಿಯಾಗಿರುತ್ತದೆ. ಅಂತೆಯೇ ಇದಕ್ಕೆ ಕ್ರೋಧಾಗ್ನಿ ಎಂದು ಕರೆದಿರುತ್ತಾರೆ. ಅಗ್ನಿಯು ಎಲ್ಲಿ ಹುಟ್ಟುವುದೋ ಅದನ್ನು ಮೊದಲು ಧ್ವಂಸಗೊಳಿಸಿ ನಂತರ ಪಕ್ಕದಲ್ಲಿರುವುದನ್ನು ಸುಡುವುದು. ಹಾಗೆ ಕ್ರೋಧವು ಯಾರಲ್ಲಿ ಉತ್ಪನ್ನವಾಗುವುದೋ ಮೊದಲು ಅವರಿಗೆ ಅನರ್ಥವನ್ನುಂಟು ಮಾಡಿ ನಂತರ ಅನ್ಯರ ಅನರ್ಥಕ್ಕೆ ಕಾರಣವಾಗುವುದು. ಅಂತೆಯೇ ಬಸವಣ್ಣನವರು–

ತನ್ನ ಮುನಿವವರಿಗೆ ತಾ ಮುನಿಯಲೇಕಯ್ಯಾ !
ತನಗಾದ ಆಗೇನು ? ಅವರಿಗಾದ ಚೇಗೇನು ?
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡುವುದೇ ಕೂಡಲಸಂಗಮದೇವಾ.

ಎಂಬುದಾಗಿ ತಮ್ಮ ಅನುಭವವಾಣಿಯನ್ನು ನುಡಿದದ್ದುಂಟು. ಇತ್ತೀಚಿನ ದಿನಮಾನ ಗಳಲ್ಲಿ ' ಅಧಿಕರಕ್ತದೊತ್ತಡ (High Blood Pressure) ಮತ್ತು ಮಧು ಮೇಹ' ರೋಗಗಳಿಗೆ ಒಳಗಾದ ರೋಗಿಗಳಿಗೆ ವೈದ್ಯರು ಔಷಧೋಪಚಾರದ ಜೊತೆಗೆ ಪಥ್ಯವನ್ನು ಹೇಳುವಾಗ ಪದೇ ಪದೇ ಅನಾವಶ್ಯಕವಾಗಿ ಯಾರ ಮೇಲೂ ಸಿಟ್ಟಿಗೇಳಬಾರದು ಎಂದು ಸೂಚಿಸು ತ್ತಾರೆ. ಆದ್ದರಿಂದ ಕ್ರೋಧದ ಪಥ್ಯವನ್ನೂ ಪಾಲಿಸಿದರೆ ಮನುಷ್ಯನು ದೈಹಿಕವಾಗಿಯೂ, ಮಾನಸಿಕವಾಗಿಯೂ ಸ್ವಾಸ್ಥ್ಯವನ್ನು ಪಡೆದು ಸುಖಮಯ ಜೀವನವನ್ನು ಸಾಗಿಸ ಬಹುದು. ಹೀಗೆ ಮಾನಸಿಕ ಶೀಲಗಳು ಮನುಷ್ಯನ ಸುಖಶಾಂತಿಗೆ ಸಾಧನಗಳಾಗಿರುತ್ತವೆ.

(೩೩) ''ನಧನಾದೌ ವಹೇಲ್ಲೋಭಂ ಶಿವಸ್ಯಾರಾಧನೇ ವಹೇತ್'' ಶಿವನ ಆರಾಧನೆಯಲ್ಲಿ ಲೋಭವಿರಬೇಕೇ ವಿನಃ ಧನಾದಿಗಳಲ್ಲಿ ಇರಕೂಡದು. ಕಾಮ, ಕ್ರೋಧ ಮತ್ತು ಲೋಭಗಳಿಗೆ ನರಕದ ದ್ವಾರಗಳೆಂಬುದಾಗಿ ಗೀತೆಯು ಉಪದೇಶಿಸಿದೆ. ಮನುಷ್ಯನ ವಯೋಮಾನವು ಹೆಚ್ಚಿದಂತೆ ಕಾಮಕ್ರೋಧಗಳ ಉದ್ವೇಗವು ಕಡಿಮೆ ಯಾದರೂ ಲೋಭದ ಉದ್ವೇಗವು ಕಡಿಮೆಯಾಗುವುದಿಲ್ಲ, ಅದು ಮತ್ತಷ್ಟು ಹೆಚ್ಚಾ ಗುತ್ತ ಹೋಗುವುದು. ಅಂತಲೇ ಶಂಕಾರಾಚಾರ್ಯರು ''ವೃದ್ಧೋಯಾತಿ ಗೃಹೀತ್ವಾ ದಂಡಂ ತದಪಿನ ಮುಂಚತ್ಯಾಶಾ ಪಿಂಡಮ್'' ಎಂಬುದಾಗಿ ಉಪದೇಶಿಸಿದ್ದುಂಟು. ಶ್ರೀ ಮನ್ನಿಜಗುಣ ಶಿವಯೋಗಿಗಳು ಲೋಭಕ್ಕೆ ದುರ್ಗುಣವೆಂಬುದಾಗಿ ಕರೆದಿದ್ದಾರೆ. ಲೋಭಿಯಾದ ಮನುಷ್ಯನಿಂದ ಅಸತ್ಯ ಭಾಷಣ, ಚೌರ್ಯ, ಪರವಂಚನೆ, ಅತ್ಯಧಿಕ

ಸಂಗ್ರಹ ಹಾಗೂ ಕೊಲೆ ಮತ್ತು ಇತ್ತೀಚೆಗೆ ರಾಜಕೀಯ ಕ್ಷೇತ್ರದಲ್ಲಿ ವಿಶ್ವವ್ಯಾಪಿ ಕುಖ್ಯಾತಿಯನ್ನು ಪಡೆದುಕೊಂಡ ಶಸ್ತ್ರ ಹಗರಣ, ಮೇವು ಹಗರಣ, ಹವಾಲಾ ಹಗರಣಾದಿಗಳು ಕಡುಲೋಭದ ವಿರಾಡ್ರೂಪವನ್ನು ಪ್ರದರ್ಶಿಸುವಂತಿವೆ. ಇವೆಲ್ಲ ಬಹುದೊಡ್ಡ ಸಾಮಾಜಿಕ ಅಪರಾಧಗಳು. ಈ ಅಪರಾಧಗಳ ಹಿನ್ನೆಲೆಗೆ ಲೋಭವೇ ಕಾರಣವೆಂಬುದು ಜನಜನಿತವಾದ ವಿಷಯ. ಅಂತೆಯೇ ತುಲಸೀದಾಸರೂ ಸಹ ''ಲೋಭ ಪಾಪಕಾ ಬಾಪ ಬಖಾನಾ ! ದಾನ ಧರ್ಮಕಾ ಮೂಲ!'' ಎಂಬ ಈ ವಚನದಲ್ಲಿ ಲೋಭವು ಪಾಪದ ತಂದೆ ಎಂಬುದಾಗಿ ಸಂಕೇತಿಸಿದ್ದಾರೆ. ಹೀಗೆ ಧನದಲ್ಲಿ ಲೋಭವುಳ್ಳಂಥಾ ಮನುಷ್ಯನು ಅನಂತಪಾಪ ಕಾರ್ಯಗಳನ್ನು ಎಸಗುವವನಾದ್ದರಿಂದ ಲೋಭವನ್ನು ಧನಾದಿಗಳಲ್ಲಿಡದೆ ಶಿವನ ಆರಾಧನೆಯಲ್ಲಿರಿಸಬೇಕೆಂಬುದಾಗಿ ಈ ಮಾನಸಿಕ ಶೀಲವು ಉಪದೇಶಿಸುತ್ತದೆ. ಶಿವಾರಾಧನೆಯಲ್ಲಿ ಲೋಭವಿದ್ದರೆ ಹೆಚ್ಚು ಹೆಚ್ಚು ಶಿವಾರಾಧನೆಯು ಸಂಭವಿಸುವುದು. ಇದರಿಂದ ಸಾಧಕನ ವ್ಯಕ್ತಿತ್ವದ ವಿಕಾಸವಾಗಿ ತಾನು ಸಮಾಧಾನಿಯಾಗಿರುವನಲ್ಲದೆ ಅನ್ಯರ ಸಮಾಧಾನಕ್ಕೂ ಕಾರಣನಾಗುವನು.

(೩೪) ''ಮೋಹಂ ಭಕ್ತಜನೇ ಕುರ್ಯಾತ್ ನ ಕಾಂತಾಯಾಂ ಸುತೇಷುವಾ'' ಶಿವಭಕ್ತರಲ್ಲಿ ಮೋಹವಿರಬೇಕೇ ವಿನಃ ಸತಿಸುತಾದಿಗಳಲ್ಲಿ ಇರಬಾರದು. ಮೋಹ ಎಂದರೆ ಅತಿಯಾದ ಆಸಕ್ತಿಯು. ಈ ಆಸಕ್ತಿಯು ಸತಿಸುತಾದಿಗಳಲ್ಲಿದ್ದರೆ ಮನುಷ್ಯನು ತನ್ನ ವಿವೇಕಶಕ್ತಿಯನ್ನು ಕಳೆದುಕೊಂಡು ಕರ್ತವ್ಯಮೂಢನಾಗುತ್ತಾನೆ. ಅಂತೆಯೇ ಅರ್ಜುನನು ಯುದ್ಧಭೂಮಿಯಲ್ಲಿ ತನಗೆ ಎದುರಾಳಾಗಿ ನಿಂತ ಅಣ್ಣತಮ್ಮಂದಿರನ್ನೂ ಗುರುಜನಾದಿಗಳನ್ನೂ ನೋಡಿ ಮೋಹಪರವಶನಾಗಿ ತನ್ನ ಗಾಂಡೀವವನ್ನು ನೆಲಕ್ಕಿಟ್ಟು ''ನಾನು ಯುದ್ಧ ಮಾಡಲು ಒಲ್ಲೆ'' ಎಂಬುದಾಗಿ ಹೇಳಿ ಯುದ್ಧವನ್ನು ತೊರೆದವಿಷಯವು ಮಹಾಭಾರತದಲ್ಲಿ ಪ್ರಸಿದ್ಧವಾದುದು. ಅರ್ಜುನನನ್ನು ಪುನಃ ಕರ್ತವ್ಯದಕ್ಷನನ್ನಾಗಿ ಮಾಡಲೋಸುಗ ಭಗವಂತನು ಅವನ ಮೋಹ ನಿವಾರಣೆಗಾಗಿ ಗೀತೆಯ ಉಪದೇಶ ಮಾಡಬೇಕಾಯಿತು. ಭಗವಂತನ ಉಪದೇಶದಿಂದ ಮೋಹವನ್ನು ಕಳೆದುಕೊಂಡು ಪುನಃ ಕರ್ತವ್ಯ ಪರಾಯಣನಾಗಿ ಯುದ್ಧದಲ್ಲಿ ವಿಜಯಶಾಲಿಯಾದ ವಿಷಯವು ಸರ್ವರಿಗೆ ವಿದಿತವಾದುದೇ ಸರಿ. ಆದ್ದರಿಂದ ಸ್ವ–ಜನರಲ್ಲಿರುವ ಮೋಹವು ಮನುಷ್ಯನನ್ನು ಕರ್ತವ್ಯಚುತನನ್ನಾಗಿ ಮಾಡೋಣದರಿಂದ ಸ್ವ–ಜನರಲ್ಲಿಯ ಮೋಹವನ್ನು ತೊರೆದು ಅದನ್ನು ಶಿವಭಕ್ತರಲ್ಲಿ ಇರಿಸಬೇಕೆಂಬುದಾಗಿ ಈ ಶೀಲವು ಉಪದೇಶಿಸಿದೆ. ಶಿವಭಕ್ತರಲ್ಲಿಟ್ಟ ಅತ್ಯಾಸಕ್ತಿಯಿಂದ ಸಾಧಕನು ತನ್ನಲ್ಲಿ ಶಿವಭಕ್ತಿಯನ್ನು ಹೆಚ್ಚಿಸಿಕೊಂಡು ಶಿವಭಾವನೆಯಿಂದ ಒಡಗೂಡಿದವನಾಗುವನು. ಆದಕಾರಣ ಗಣಾಚಾರಿಯಾದವನು ಸ್ವಜನಮೋಹವನ್ನು ಪರಿತ್ಯಜಿಸಿ ಶಿವಭಕ್ತಮೋಹಿಯಾಗಿರಬೇಕೆಂಬುದೇ ಈ ಶೀಲದ ತಾತ್ಪರ್ಯವು.

(೩೫) ''ಕರಣೇಷ್ವೇವ ಮಾತ್ಸರ್ಯಂ ನ ಜನೇಷು'' ಮಾತ್ಸರ್ಯವನ್ನು ತನ್ನ ಇಂದ್ರಿಯಗಳೊಂದಿಗೆ ಮಾಡಬೇಕೇ ವಿನಃ ಸಮಾನ ಜನರೊಂದಿಗೆ ಮಾಡಬಾರದು. ಮಾತ್ಸರ್ಯವು ಮನಸ್ಸಿನ ಒಂದು ದುರ್ಗುಣವಾಗಿರುತ್ತದೆ. ಅನ್ಯರ ಅಭ್ಯುದಯವನ್ನು ಕಂಡಾಗ ಅದನ್ನು ಸಹಿಸುವದಾಗದೇ ಮನಸ್ಸಿನಲ್ಲುಂಟಾದ ಅಸೂಯಾ ಭಾವನೆಯೇ

ಮಾತ್ಸರ್ಯವು. ಮತ್ತೊಬ್ಬರ ಅಭ್ಯುದಯ–ಅಭಿವೃದ್ಧಿಗಳನ್ನು ಸಹಿಸದ ಮನುಷ್ಯನು ತಾನೆಂದಿಗೂ ಅಭಿವೃದ್ಧಿಯನ್ನು ಹೊಂದಲಾರ. ಗಿಡದ ಬೊಡ್ಡೆಗೆ ಬೆಂಕಿ ತಗುಲಿದರೆ ಅದರ ಶಾಖೆಗಳಲ್ಲಿ ನವ–ಪಲ್ಲವಾದಿಗಳು ಉದಿಸದಿರುವಂತೆ, ಯಾರ ಮನಸ್ಸಿನಲ್ಲಿ ಮಾತ್ಸರ್ಯಾಗ್ನಿ ಹೊತ್ತಿಕೊಂಡಿರುವುದೋ ಅವರ ಮನದಲ್ಲಿ ಉತ್ಕೃಷ್ಟ ವಿಚಾರಗಳು ಬಾರದಿರೋಣದರಿಂದ ಅವರ ಭೌತಿಕ ಹಾಗೂ ಆಧ್ಯಾತ್ಮಿಕ ವಿಕಾಸವು ಅದೆಂದಿಗೂ ಆಗಲಾರದು. ಅಂತೆಯೇ ಮಾತ್ಸರ್ಯರಾಹಿತ್ಯವು ಮನಸ್ಸಿನ ಶೀಲವಾಗಿ ಪರಿಗಣಿಸಲ್ಪಟ್ಟಿದೆ. ಈ ಮಾತ್ಸರ್ಯಗುಣವನ್ನು ಬಿಡಲಾಗದಿದ್ದರೆ ಅದನ್ನು ತನ್ನ ಇಂದ್ರಿಯಗಳೊಂದಿಗೆ ಮಾಡಬೇಕೆಂಬುದಾಗಿ ಶಿವಾಗಮವು ಉಪದೇಶಿಸಿದೆ.

ಪಂಚಜ್ಞಾನೇಂದ್ರಿಯ ಹಾಗೂ ಪಂಚ ಕರ್ಮೇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಸದಾ ಆಸಕ್ತಗಳಾಗಿದ್ದು, ವಿಷಯಾಭಿಮುಖಗಳಾಗಿಯೇ ಪ್ರವರ್ತಿಸುತ್ತಿರುತ್ತವೆ. ಇಂದ್ರಿಯಗಳ ಈ ವಿಷಯ ಪ್ರವೃತ್ತಿಯು ಮನಸ್ಸಿಗೆ ಸಹನೆಯಾಗಬಾರದು. ಅಂದಾಗಲೇ ಮನಸ್ಸು ಇಂದ್ರಿಯಗಳ ಮೇಲೆ ಹತೋಟಿಯನ್ನು ಸಾಧಿಸಲು ಸಾಧ್ಯವಾಗುವುದು. ಹೀಗೆ ಇಂದ್ರಿಯಗಳ ಮೇಲೆ ವಿಷಯ ಪ್ರವೃತ್ತಿಯಲ್ಲಿ ಮನಸ್ಸು ಅವುಗಳಿಗೆ ಅನುಕೂಲವಾಗಿ ವರ್ತಿಸಿ ಆ ಪ್ರವೃತ್ತಿಯ ಬಗ್ಗೆ ಮಾತ್ಸರ್ಯ ಭಾವನೆಯು ಮನಸ್ಸಿನಲ್ಲಿ ಒಡಮೂಡಿದಾಗ ಸಹಜವಾಗಿಯೇ ಸಾಧಕನು ವಿಷಯಗಳಿಂದ ಪರಾಙ್ಮುಖನಾಗಿ ತನ್ನ ಸಾಧನೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗುವುದು. ಈ ರೀತಿಯಾಗಿ ಇಂದ್ರಿಯಗಳಲ್ಲಿರಿಸಿದ ಮಾತ್ಸರ್ಯವು ಅಭ್ಯುದಯಕ್ಕೆ ಕಾರಣವಾದರೆ ತನ್ನ ಸಮಾನ ಜನರೊಂದಿಗೆ ಮಾಡುವ ಮಾತ್ಸರ್ಯವು ಪರಸ್ಪರ ಕಲಹಕ್ಕೆ ನಾಂದಿಯಾಗುವುದು. ಅಂತೆಯೇ ಈ ಆಗಮದ ವಾಕ್ಯದಲ್ಲಿ ಮಾತ್ಸರ್ಯವನ್ನು ಜನರಲ್ಲಿ ಮಾಡದೆ ಇಂದ್ರಿಯಗಳಲ್ಲಿಡಬೇಕೆಂಬುದಾಗಿ ಉಪದೇಶಿಸಲಾಗಿದೆ. ಈ ರೀತಿಯ ವ್ಯವಹಾರವು ಮನಸ್ಸಿನ ಪಾವಿತ್ರ್ಯತೆಗೆ ಕಾರಣವಾಗೋಣದರಿಂದ ಇದನ್ನು ಮಾನಸಿಕ ಶೀಲವೆಂಬುದಾಗಿ ಪರಿಗಣಿಸಲಾಗಿದೆ.

(೩೬) ''ಮಾಯಾ ಜಯೇ ಮದೋ ನ ಧರ್ಮೇನಾಪಿ ಸಂಪದಿ'' ಅರ್ಥಾತ್ ಮಾಯೆಯನ್ನು ಗೆಲ್ಲುವಲ್ಲಿ ಮದ ಅಥವಾ ಅಭಿಮಾನವಿರಬೇಕೇ ವಿನಃ ನಮ್ಮ ಧರ್ಮಾಚರಣೆ ಹಾಗೂ ಸಂಪತ್ತಿನಲ್ಲಿ ಇರಬಾರದು. ಮದವು ಮನಸ್ಸಿನಲ್ಲಿ ಮೂಡುವ ಅರಿಷಡ್ವರ್ಗಗಳಲ್ಲಿ ಒಂದಾಗಿದೆ. ಇದು ಮನುಷ್ಯನ ಅವನತಿಗೆ ಕಾರಣವಾಗುತ್ತದೆ. ಧನ, ಯೌವನ, ರೂಪ, ವಿದ್ಯೆ, ಅಧಿಕಾರ ಮುಂತಾದ ವಿಷಯಗಳ ಮೇಲೆ ಮನುಷ್ಯನು ಅಭಿಮಾನವನ್ನು ತಾಳಿ ಮದೋನ್ಮತ್ತನಾಗಿ ವ್ಯವಹರಿಸುವುದುಂಟು. ಮದವು ಅರಿಷಡ್ವರ್ಗಗಳಲ್ಲಿ ಪರಿಗಣಿತವಾಗಿರುವುದರಿಂದ ಅದರಿಂದ ಯಾರಿಗೂ ಸುಖ, ಸಮಾಧಾನಾದಿಗಳು ದೊರೆಯಲಾರವು. ಅಂತೆಯೇ ಶಾಸ್ತ್ರಗಳಲ್ಲಿ ಇದನ್ನು ಪರಿತ್ಯಜಿಸಬೇಕೆಂಬುದಾಗಿಯೇ ಸರ್ವರೂ ಉಪದೇಶಿಸಿದ್ದಾರೆ. ಈ ಪೂರ್ವದಲ್ಲಿ ಹೇಳಿದ ಶಿವಾಗಮದ ಉಕ್ತಿಯಲ್ಲಿ ಧನ ಹಾಗೂ ಧರ್ಮಗಳ ಮೇಲೆ ಅಭಿಮಾನಪಡಕೂಡದು ಎಂಬುದಾಗಿ ಉಪದೇಶಿಸಿದ್ದಾರೆ. ಧನ ಹಾಗೂ ಧರ್ಮಗಳು ಕ್ರಮವಾಗಿ ಐಹಿಕ ಹಾಗೂ

ಪಾರಲೌಕಿಕ ವ್ಯವಹಾರಗಳಿಗೆ ಮೂಲವಾದವುಗಳಾಗಿವೆ. ಇಹಲೋಕದ ಸರ್ವ ವ್ಯವಹಾರಗಳಿಗೆ ಧನವೇ ಮೂಲವಾದುದು. ಈ ಧನದ ಮಹತಿಯನ್ನು ಓರ್ವ ಸುಭಾಷಿತಕಾರನು.–

ಧನೇನ ನಿಷ್ಕುಲಿನಾಃ ಕುಲಿನಾ ಭವಂತಿ!
ಧನ್ಯೈರಾಪದಂ ಮಾನವಾ ನಿಸ್ತರಂತಿ!
ಧನೇಭ್ಯಃ ಪರೋ ಬಾಂಧವೋ ನಾಸ್ತಿಲೋಕೇ!
ಧನಾನ್ಯರ್ಜಯಧ್ವಂ ಧನಾನ್ಯರ್ಜಯಧ್ವಮ್!!

ಈ ರೀತಿಯಾಗಿ ಹೇಳಿದ್ದಾನೆ. ತಾತ್ಪರ್ಯವೇನೆಂದರೆ– ಧನದಿಂದ ಕುಲಹೀನನು ಕುಲವಂತನಂತೆ ಮರ್ಯಾದೆಯನ್ನು ಪಡೆಯಬಲ್ಲನು. ದೊಡ್ಡ ದೊಡ್ಡ ವಿಪತ್ತುಗಳನ್ನೂ ಸಹ ಧನದ ಪ್ರಭಾವದಿಂದಲೇ ದಾಟಬಹುದು. ಅಂತೆಯೇ ಜಗತ್ತಿನಲ್ಲಿ ಧನಕ್ಕಿಂತ ಬೇರೆ ಬಂಧುಗಳಿಲ್ಲ, ಆದಕಾರಣ ಧನವನ್ನು ಸಂಪಾದಿಸಿರಿ, ಧನವನ್ನು ಸಂಪಾದಿಸಿರಿ.

ಧನವು ಇಹಲೋಕದ ಸರ್ವ ವ್ಯವಹಾರಗಳಿಗೆ ಮೂಲಕಾರಣವಾಗಿರುವುದ ರಿಂದ ಧನವನ್ನು ಸಂಪಾದಿಸಬೇಕೇನೋ ನಿಜ. ಆದರೆ ಸಂಪಾದಿಸಿದ ಧನದ ಮೇಲೆ ಮದವನ್ನು ತಾಳಿದರೆ ಆ ಧನದಿಂದ ಒಳ್ಳೆಯದನ್ನು ಸಾಧಿಸದೆ ಅನರ್ಥವನ್ನೆ ಸಾಧಿಸು ತ್ತಾನೆ. ಧನಾಭಿಮಾನಿಯಾದ ವ್ಯಕ್ತಿಯು ಅನ್ಯರ ಮೇಲೆ ಅನೇಕ ದೌರ್ಜನ್ಯಗಳನ್ನೆಸಗಿ ಅನ್ಯರಿಗೆ ದುಃಖವನ್ನು ಕೊಡುವುದರ ಜೊತೆಗೆ ಕೊನೆಗೊಂದು ದಿನ ತಾನೂ ದುಃಖಿತ ನಾಗುತ್ತಾನೆ. ಆದ್ದರಿಂದ ಧನವನ್ನು ಸಂಪಾದಿಸಿದರೂ ಧನದ ಅಭಿಮಾನವನ್ನು ಪಡೆಯದೇ ಇರಬೇಕು.

ಇದೇ ಪ್ರಕಾರವಾಗಿ ಪರಲೋಕದ ವ್ಯವಹಾರಗಳಿಗೆ ಧರ್ಮವೇ ಮೂಲವು. ಮನುಷ್ಯನು ಯಜ್ಞ, ದಾನ, ತಪ ಮುಂತಾದ ವಿಹಿತಕರ್ಮಗಳನ್ನಾಚರಿಸಿ ಧರ್ಮವನ್ನು ಸಂಪಾದಿಸುತ್ತಾನೆ. ಧರ್ಮವು ಪಾರಲೌಕಿಕ ಸುಖಕ್ಕೆ ಕಾರಣವಾಗಿದ್ದರೂ, ಆ ಧರ್ಮದ ಮೇಲಿನ ದುರಭಿಮಾನವು ಮನುಷ್ಯನ ಅಧಃಪತನಕ್ಕೆ ಕಾರಣವಾಗುವುದು. ಅಂತೆಯೇ ತಾರಕಾಕ್ಷ, ಕಮಲಾಕ್ಷ, ವೀರವಿದ್ಯುನ್ಮಾಲಿ, ಹಿರಣ್ಯಕಶ್ಯಪ, ಭಸ್ಮಾಸುರ ಮುಂತಾದ ತಪಸ್ವೀ ರಾಕ್ಷಸರ ಜೀವನಗಳೇ ಇದಕ್ಕೆ ಉದಾಹರಣೆಗಳು. ಇವರೆಲ್ಲ ಅತೀ ಕಠೋರ ವಾದ ತಪಸ್ಸನ್ನಾಚರಿಸಿ ಅದರ ಫಲವಾದ ಧರ್ಮವನ್ನು ಹೇರಳವಾಗಿ ಸಂಪಾದಿಸಿ ತಾವು ಸಂಪಾದಿಸಿದ ಧರ್ಮದ ಮೇಲೆ ದುರಭಿಮಾನವನ್ನು ತಾಳಿ ಪರಪೀಡೆಯನ್ನು ಮಾಡಲುದ್ಯುಕ್ತರಾದರು. ಅಂತೆಯೇ ಕೊನೆಗೆ ವಿನಾಶವನ್ನು ಹೊಂದಿದರು. ಧನ ಮತ್ತು ಧರ್ಮಗಳು ಸುಖ–ಸಾಧನಗಳಾಗಿದ್ದರೂ ಅವುಗಳ ಮೇಲಿನ ದುರಭಿಮಾನವು ಅನರ್ಥವನ್ನುಂಟುಮಾಡೋಣದರಿಂದ ಇವುಗಳ ಬಗ್ಗೆ ಮದೋನ್ಮತ್ತನಾಗದೆ ಮಾಯೆ ಯನ್ನು ಗೆಲ್ಲುವಲ್ಲಿ ಅಭಿಮಾನಿಯಾಗಿರಬೇಕು. ಅರ್ಥಾತ್ ಮಾಯೆಯನ್ನು ಗೆದ್ದೇ ತೀರುವೆನೆಂಬ ಸದಭಿಮಾನವನ್ನು ಹೊಂದಿರಬೇಕೆಂಬುದಾಗಿ ಶಿವಾಗಮವು ಉಪದೇಶಿ ಸಿದೆ. ಹೀಗೆ ಯಾರು ಧನ ಹಾಗೂ ಧರ್ಮಗಳಲ್ಲಿಯ ಅಭಿಮಾನವನ್ನು ತ್ಯಜಿಸಿ

ಮಾಯೆಯ ಮೇಲೆ ವಿಜಯವನ್ನು ಸಾಧಿಸುವರೋ ಅವರೇ ಸದಾ ಸುಖಿಗಳಾಗಿರ ಬಲ್ಲರು. ಈ ವಿಧವಾದ ಮದರಾಹಿತ್ಯವು ಮನಸ್ಸಿನ ಮತ್ತೊಂದು ಶೀಲವಾಗಿರುತ್ತದೆ.

(೩೭) ''ಗುರೌ ಜಂಗಮೇ ವಾ ಗುಣಾಗುಣ – ವಿಮರ್ಶತ್ಯಾಗಃ'' ಅಂದರೆ ಗುರು ಮತ್ತು ಜಂಗಮರಲ್ಲಿನ ಗುಣಾವಗುಣಗಳ ವಿಮರ್ಶೆಯನ್ನು ಮಾಡದಿರುವುದು. ಇದೂ ಸಹ ಮನಸ್ಸಿನ ಒಂದು ಶೀಲವಾಗಿರುತ್ತದೆ. ಸಾಮಾನ್ಯವಾಗಿ ಪರರ ದೋಷಗಳನ್ನು ಪರಿಗಣಿಸುವುದು ಮನುಷ್ಯನ ಸ್ವಭಾವವಾಗಿರುತ್ತದೆ. ಪ್ರಾಯಃ ಮನುಷ್ಯನು ಅನ್ಯರಲ್ಲಿ ಗುಣಗಳನ್ನು ಪರೀಕ್ಷಿಸದೆ ಅವಗುಣಗಳನ್ನೇ ನಿರೀಕ್ಷಿಸುತ್ತಾನೆ. ಪ್ರತಿಯೊಬ್ಬ ಮನುಷ್ಯನಲ್ಲಿ ಗುಣ ಹಾಗೂ ಅವಗುಣಗಳು ಕಡಿಮೆ ಹಾಗೂ ಹೆಚ್ಚು ಪ್ರಮಾಣದಲ್ಲಿ ಇರುವುದುಂಟು. ಸಾಧ್ಯವಾದಷ್ಟು ಮಟ್ಟಿಗೆ ಅನ್ಯರಲ್ಲಿಯ ಗುಣಗಳನ್ನು ಪರೀಕ್ಷಿಸಿ ಅವುಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರತಿಯೊಬ್ಬರು ಪ್ರಯತ್ನಿಸಬೇಕು. ಅನ್ಯರ ಅವಗುಣ ಗಳ ಕಡೆಗೆ ಲಕ್ಷ್ಯವಹಿಸಿದರೆ ಕ್ರಮಶಃ ತಾನು ಅವಗುಣಿಯಾಗುವ ಪ್ರಸಂಗ ಬಂದೊದ ಗುವುದು. ಅಂತೆಯೇ ಗುಣಗ್ರಾಹಿಯಾಗಬೇಕೇ ವಿನಃ ಅವಗುಣ ಗ್ರಾಹಿಯಾಗ ಬಾರದೆಂಬುದು ಆಗಮದ ಆದೇಶವಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಗುರು ಹಾಗೂ ಜಂಗಮರು ಆರಾಧ್ಯ ಮೂರ್ತಿಗಳಾಗಿ ದ್ದಾರೆ. ಅಕಸ್ಮಾತ್ ಅವರಲ್ಲಿ ಯಾವುದೊಂದು ಅವಗುಣ ಕಂಡರೂ ಅದನ್ನು ಲಕ್ಷಿಸದೆ ದುರ್ಲಕ್ಷಿಸಿ ಅವರಲ್ಲಿಯ ಅನ್ಯ ಸದ್ಗುಣಗಳನ್ನು ಅನುಲಕ್ಷಿಸಿ ಅವುಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ನಮ್ಮ ಮಾನಸಿಕ ಪರಿಶುದ್ಧತೆಗೆ ಅನ್ಯರ ಸದ್ಗುಣಗಳು ಸಾಧಕಗಳಾಗಬಲ್ಲವೇ ವಿನಃ ದುರ್ಗುಣಗಳು ಸಾಧಕಗಳಾಗಲಾರವು. ಆದ್ದರಿಂದ ಸಾಧಕನಾದವನು ಗುರು–ಜಂಗಮರಲ್ಲಿ ನಿತಾಂತ ಶ್ರದ್ಧೆಯುಳ್ಳವನಾಗಿ ಅವರ ಗುಣಾವಗುಣಗಳ ವಿಮರ್ಶೆಯನ್ನು ಮಾಡದೆ ಕೇವಲ ಗುಣಗ್ರಾಹಿಯಾಗಿ ತನ್ನ ಜೀವನವನ್ನು ಮಾರ್ಪಾಡುಗೊಳಿಸುವುದು ಸಹ ಒಂದು ವಿಧವಾದ ಮಾನಸಿಕ ಶೀಲವಾಗಿರುತ್ತದೆ.

(೩೮) ''ಪ್ರಾಣಿನೋ ಅಹಿಂಸಾ ಭಾವನಾ'' ಅಂದರೆ ಯಾವ ಪ್ರಾಣಿಯನ್ನು ಹಿಂಸಿಸದಿರುವ ಅಹಿಂಸಾವ್ರತವನ್ನು ಪರಿಪಾಲಿಸುವುದು ಸಹ ಮಾನಸಿಕ ಶೀಲವಾಗಿರು ತ್ತದೆ. ಹಿಂಸೆಯು ಕಾಯೇನ, ವಾಚಾ ಮತ್ತು ಮನಸಾ ಎಂಬುದಾಗಿ ಮೂರು ವಿಧವಾಗಿ ಇರುತ್ತದೆ. ಶಸ್ತ್ರಾಸ್ತ್ರಗಳಾದಿಯಿಂದ ಅನ್ಯರಿಗೆ ಹಿಂಸೆಕೊಡುವುದು ಕಾಯಿಕ ಹಿಂಸೆಯು. ಅವಾಚ್ಯ ಹಾಗೂ ಪಾರುಷ (ಕಠೋರ) ಶಬ್ದಗಳಿಂದ ಅನ್ಯರಿಗೆ ಮನೋವೇದನೆ ಯನ್ನುಂಟುಮಾಡುವುದು ವಾಚಿಕ ಹಿಂಸೆಯು. ಇನ್ನು ಅನ್ಯರ ಬಗ್ಗೆ ತನ್ನ ಮನಸ್ಸಿನಲ್ಲಿ ಅನಿಷ್ಟ ಚಿಂತನೆಯನ್ನು ಮಾಡುವುದು ಮಾನಸಿಕ ಹಿಂಸೆಯು. ಹೀಗೆ ಹಿಂಸೆಯು ಮೂರು ವಿಧವಾಗಿರುತ್ತದೆ. ಇವುಗಳಲ್ಲಿ ಮಾನಸಿಕ ಹಿಂಸೆಯೇ ಪ್ರಧಾನವಾದುದು. ಮೊದಲು ಅನ್ಯರ ಬಗ್ಗೆ ಅನಿಷ್ಟ ಭಾವನೆಯು ಮನಸ್ಸಿನಲ್ಲಿ ಒಡಮೂಡುವುದು. ಅದುವೇ ಮುಂದೆ ಶಬ್ದರೂಪವನ್ನು ತಾಳಿ ವಾಣಿಯಿಂದ ಹೊರಹೊಮ್ಮುವುದು. ಅದೂ ಅಷ್ಟಕ್ಕೆ ನಿಲ್ಲದೇ ಕೊನೆಗೊಂದು ದಿನ ಹಸ್ತಾ–ಹಸ್ತಿ ಕೇಶಾ ಕೇಶೀ ಸ್ವರೂಪವನ್ನು ತಾಳಿ ಹಿಂಸೆಯ

ವಿರಾಡ್ರೂಪವು ಪ್ರದರ್ಶಿತವಾಗುವುದು. ಈ ವಿರಾಡ್ರೂಪಕ್ಕೆ ಮನಸ್ಸಿನಲ್ಲಿ ಮೊದಲು ಉಂಟಾದ ಅನಿಷ್ಟ ಚಿಂತನೆಯೇ ಕಾರಣವಾದುದರಿಂದ ಅನಿಷ್ಟ ಚಿಂತನಾರೂಪವಾದ ಹಿಂಸೆಯನ್ನು ಪರಿತ್ಯಜಿಸುವುದೇ ಮನಸ್ಸಿನ ಶೀಲವಾಗಿರುತ್ತದೆ.

(೩೯) ''ಪ್ರಾಣಿ ದುಃಖ ವೀಕ್ಷಾಯಾಂ ದಯಾ'' ಅಂದರೆ ಪ್ರಾಣಿಗಳ ದುಃಖವನ್ನು ನೋಡಿ ಸಹಿಸಿಕೊಳ್ಳಲಾಗದಿರುವ ಮನೋಭಾವನೆಯೇ ದಯೆಯು. ಇದೊಂದು ಮನಸ್ಸಿನ ಸಾತ್ವಿಕ ಭಾವನೆಯು. ಅಂತೆಯೇ ಇದನ್ನು ಶಿವಾಗಮಗಳು ಮನದ ಶೀಲವೆಂಬುದಾಗಿ ಪ್ರತಿಪಾದಿಸಿವೆ. ದಶವಿಧ ಧರ್ಮಗಳಲ್ಲಿ ದಯೆಯು ಒಂದು ಪ್ರಮುಖ ಧರ್ಮವಾಗಿರುತ್ತದೆ. ಪ್ರತಿಯೊಂದು ಧರ್ಮಪರಂಪರೆಯಲ್ಲಿ ಪ್ರಾಣಿದಯೆಗೆ ಪ್ರಾಶಸ್ತ್ಯ ಕೊಟ್ಟಿರುತ್ತಾರೆ. ಅಂತೆಯೇ ಬಸವಣ್ಣನವರು ''ದಯವಿಲ್ಲದ ಧರ್ಮವದಾವುದಯ್ಯಾ'' ಎಂಬುದಾಗಿ ಪ್ರಶ್ನಿಸಿ ಸಕಲ ಧರ್ಮಗಳಲ್ಲಿ ದಯವೇ ಮೂಲವೆಂಬುದಾಗಿ ಸಾರಿದ್ದಾರೆ. ಸರ್ವ ಪ್ರಾಣಿಗಳಲ್ಲಿ ಪ್ರತಿಯೊಬ್ಬರು ದಯಾಮನೋಭಾವನೆಯನ್ನು ಹೊಂದಿರ ಬೇಕೆಂಬುದಾಗಿ ಪ್ರತಿಪಾದಿಸಿದ್ದಾರೆ. ದಯೆಯೇ ಶ್ರೇಷ್ಠ ಧರ್ಮಾಚರಣೆಯಾಗಿರು ವುದರಿಂದ ದುಃಖಿಗಳಾದ ಜೀವಿಗಳ ದುಃಖವನ್ನು ಪರಿಹರಿಸುವ ದಯಾ ಮನೋ ಭಾವನೆಯನ್ನು ಪ್ರತಿಯೊಬ್ಬರೂ ತಳೆದಿರಬೇಕೆಂಬುದಾಗಿ ತಿಳಿಸುವುದೇ ಈ ಶೀಲದ ಪರಮೋದ್ದೇಶವಾಗಿದೆ.

ಈ ದಯಾಗುಣವನ್ನು ಮೈಗೂಡಿಸಿಕೊಂಡಿರುವ ನಮ್ಮ ದೇಶದ ಅನೇಕ ಸಂತರ ಜೀವನದಲ್ಲಿ ಎಲ್ಲರೂ ಆಶ್ಚರ್ಯಪಡುವ ಕೆಲವು ಘಟನೆಗಳು ಘಟಿಸಿದ್ದನ್ನು ಕಾಣ ಬಹುದು. ಸಂತ ಏಕನಾಥರು ಗಂಗೋತ್ರಿಯಿಂದ ಗಂಗಾಜಲವನ್ನು ತೆಗೆದುಕೊಂಡು ರಾಮೇಶ್ವರ ಜ್ಯೋತಿರ್ಲಿಂಗಕ್ಕೆ ಅಭಿಷೇಕ ಮಾಡಲು ಪಾದಯಾತ್ರೆಯಿಂದ ಹೊರಟಾಗ ಮಾರ್ಗಮಧ್ಯದಲ್ಲಿ ಬೇಸಿಗೆಯ ಬಿಸಿಲಿನ ತಾಪಕ್ಕೆ ಬಾಯಾರಿ ಪರಿತಪಿಸುತ್ತಿದ್ದ ಒಂದು ಕತ್ತೆಯ ಬಾಯಲ್ಲಿ ಆ ಗಂಗಾಜಲವನ್ನು ಸುರಿದು ಅದಕ್ಕೆ ಜೀವದಾನ ಮಾಡಿದ ಘಟನೆಯು ಎಲ್ಲರನ್ನು ಅಚ್ಚರಿಗೊಳಿಸುವಂಥಾದ್ದೇ. ಪ್ರತಿಯೊಂದು ಪ್ರಾಣಿಯಲ್ಲಿ ಪರಮಾತ್ಮನ ಅಸ್ತಿತ್ವವನ್ನು ಅನುಭವಿಸುವ ಏಕನಾಥರ ಈ ಮನೋಭಾವವು ಪ್ರಾಣಿದಯೆಗೆ ಪರಮೋತ್ಕೃಷ್ಟ ಉದಾಹರಣೆಯಾಗಿದೆ. ಅತೀ ಪ್ರಾಚೀನಕಾಲದಿಂದ ಬಂದ ಗುಲಾಮಿ ಪದ್ಧತಿಯನ್ನು ನಿರ್ಮೂಲನೆ ಮಾಡಿದ ಹುಟ್ಟು ಹೋರಾಟಗಾರನಾಗಿ ಬೆಳೆದು ಅಮೇರಿಕೆಯ ರಾಷ್ಟ್ರಾಧ್ಯಕ್ಷನಾದ ಅಬ್ರಾಹಂ ಲಿಂಕನ್ನನು ಒಂದು ಸಾರೆ ತನ್ನ ಸಾರೋಟಿನಲ್ಲಿ ಪಾರ್ಲಿಮೆಂಟ್ ಭವನಕ್ಕೆ ಹೋಗುತ್ತಿರುವಾಗ ಗಟಾರನಾಲೆಯಲ್ಲಿ ಬಿದ್ದು ಪ್ರಾಣಸಂಕಟದಲ್ಲಿ ಒದ್ದಾಡುತ್ತಿರುವ ಒಂದು ಹಂದಿ ಮರಿಯನ್ನು ಸಾರೋಟಿನಿಂದ ಇಳಿದು ಸ್ವತಃ ತನ್ನ ಕೈಯಾರೆ ನಾಲೆಯಿಂದ ಎತ್ತಿ ಮೇಲಕ್ಕೆ ಬಿಟ್ಟು ಅದಕ್ಕೆ ಪ್ರಾಣ ದಾನ ಮಾಡಿದ ಘಟನೆಯೂ ಸಹ ಈ ದಯಾಮನೋಭಾವನೆಯ ಆಧುನಿಕ ಉದಾಹರಣೆ ಯಾಗಿದೆ. ಇಂತಹ ದಯಾ ಭಾವನೆಯನ್ನು ತಾಳುವುದು ಮನಸ್ಸಿನ ಶೀಲವಾಗಿದೆ. ಅಂತೆಯೇ ನಿಜಗುಣ ಶಿವಯೋಗಿಗಳು ''ಕರುಣವಿರಲಿ ಜೀವರೊಳು'' ಎಂದಿದ್ದಾರೆ.

(೪೦) '' ಕ್ರೀಯಾಯಾಂ ವಚನೇ ಚ ಆರ್ಜವಮ್ '' ಅಂದರೆ ಕೃತಿ ಮತ್ತು ಮಾತುಗಳಲ್ಲಿ ವಂಚನೆಯನ್ನು–ತಾಳದಿರುವುದು. ಆರ್ಜವ ಎಂದರೆ ಸರಳತೆ. ಸಾಮಾನ್ಯತಃ ಪ್ರತಿಯೊಬ್ಬರೂ ಸರಳ ಸ್ವಭಾವಿಗಳಾಗಿರವುದು ಬಹಳ ವಿರಳ. ಆಧ್ಯಾತ್ಮಶಾಸ್ತ್ರವು ಅನುಭವಕ್ಕೆ ಬರಬೇಕಾದರೆ ಸ್ವಭಾವ ಸರಳತೆಯೇ ಮುಖ್ಯವಾದುದು. ನಡೆ–ನುಡಿಗಳೆರಡೂ ಸರಳತೆಯಿಂದ ಕೂಡಿದ್ದರೆ ಮಾತ್ರ ಶಿವಾನುಗ್ರಹವು ಪ್ರಾಪ್ತ ವಾಗುವುದು. ಶಿವನು ಅತ್ಯಂತ ಸರಳ ಸ್ವಭಾವದವನು. ಅಂತಲೇ ಸರಳ ಜೀವಿಗಳು ಆತನಿಗೆ ಅತಿಪ್ರಿಯರಾಗಿರುತ್ತಾರೆ. ಮಾತು ಮತ್ತು ಕೃತಿಗಳು ಸರಳವಾಗಿರಬೇಕಾದರೆ ಮನಸ್ಸು ಮೊದಲು ಸರಳವಾಗಿರಬೇಕು. ಅಂತೆಯೇ ಈ ಶೀಲದಲ್ಲಿ ಮನಸ್ಸಿನ ಸರಳತೆಗೆ ಮಹತ್ವವನ್ನು ಕೊಡಲಾಗಿದೆ.

(೪೧) ''ರಿಪೌ ನಿಜ ಸುತೇವಾಪಿ ವೈಷಮ್ಯ ವಿವರ್ಜನಮ್'' ಅಂದರೆ ಶತ್ರು ಹಾಗೂ ಪುತ್ರರಲ್ಲಿ ವಿಷಮತೆಯನ್ನು ತಾಳದಿರುವುದು. ಮನಸ್ಸಿನ ಈ ಸಮಭಾವ ಸ್ಥಿತಿಯು ಶೀಲವೆಂದು ಕರೆಸಿಕೊಳ್ಳುತ್ತದೆ. ಸಾಮಾನ್ಯವಾಗಿ ತನ್ನವರು ಪರರೆಂಬ ಭೇದಭಾವನೆ ಯುಳ್ಳ ಜನರೇ ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. ಈ ಭೇದಭಾವನೆಯೇ ಸಕಲ ಅನರ್ಥಕ್ಕೆ ಮೂಲಕಾರಣವಾಗುತ್ತದೆ. ಅಂತೆಯೇ– ''ಅಯಂ ನಿಜಃ ಪರೋವೇತಿ ಗಣನಾ ಲಘು ಚೇತಸಾಮ್'' ಎಂಬ ಸುಭಾಷಿತಕಾರರ ಈ ಉಕ್ತಿಯು ಇಂತಹ ತನ್ನವರು, ಪರರು ಎಂಬ ಭೇದಭಾವನೆಯನ್ನು ಖಂಡಿಸುತ್ತದೆ. ಇಂತಹ ಸಮಭಾವದ ಸ್ಥಿತಿಯನ್ನು ಪಡೆದುಕೊಳ್ಳುವುದು ಮಾನಸಿಕ ಶೀಲವಾಗಿರುತ್ತದೆ.

(೪೨) ''ಗುರೂಪದಿಶ್ಟೇಷು ನಿಗಮಾಗಮ ವಚನೇಷು ವಿಶ್ವಾಸಃ'' ಅಂದರೆ ಗುರುವಿನಿಂದ ಉಪದೇಶಿಸಲ್ಪಟ್ಟ ವೇದಾಗಮಗಳ ವಚನಗಳಲ್ಲಿ ವಿಶ್ವಾಸವನ್ನಿಡು ವಿಕೆಯು. ವೇದ ಮತ್ತು ಆಗಮಗಳು ನಮ್ಮ ದೇಶದ ಅತ್ಯಂತ ಪ್ರಾಚೀನವಾದ ವಾಙ್ಮಯಗಳು. ಶಿವನ ಶ್ವಾಸೋಚ್ಛ್ವಾಸದಿಂದ ಆವಿರ್ಭವಿಸಿದುದು ವೇದರಾಶಿಯಾದರೆ, ಆತನ ವೈಖರಿಯ ಉಪದೇಶದಿಂದ ಹೊರಹೊಮ್ಮಿದುದು ಶಿವಾಗಮ ಸಾಹಿತ್ಯವಾಗಿದೆ. ಮನುಷ್ಯನ ಕರ್ತವ್ಯ–ಅಕರ್ತವ್ಯ ವ್ಯವಹಾರಗಳಿಗೆ ಈ ವೇದಾಗಮಗಳೇ ಪ್ರಮಾಣ ಭೂತವಾದವುಗಳು. ಅಂತೆಯೇ ಗೀತೆಯಲ್ಲಿ ಭಗವಂತನು– ''ತಸ್ಮಾತ್–ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ'' ಎಂಬುದಾಗಿ ಉಪದೇಶಿಸಿದ್ದಾನೆ. ಹೀಗೆ ಮನುಷ್ಯನ ಶಾಸ್ತ್ರೀಯ ಹಾಗೂ ಲೌಕಿಕ ವ್ಯವಹಾರಗಳಲ್ಲಿ ವೇದಾಗಮಗಳೇ ಪ್ರಾಣ ಭೂತಗಳಾಗಿರೋಣದರಿಂದ ಅವುಗಳಲ್ಲಿ ಪ್ರತಿಯೊಬ್ಬರು ನಂಬುಗೆಯನ್ನು ಹೊಂದಿದವ ರಾಗಿರಬೇಕು. ಇಂತಹ ನಂಬುಗೆಯೇ ಮನಸ್ಸಿನ ಒಂದು ವಿಧವಾದ ಶೀಲವಾಗಿರುತ್ತದೆ.

ಸದ್ಗುರು ಹಾಗೂ ಶಾಸ್ತ್ರಗಳು ಲೋಕ ಹಿತಾರ್ಥಕ್ಕಾಗಿಯೇ ಇರುವಂಥವು ಗಳಾಗಿವೆ. ಯಾವುದೇ ಶಾಸ್ತ್ರವಾಗಲೀ ಅಥವಾ ಯಾರೇ ಸದ್ಗುರುವಾಗಲಿ ಲೋಕವನ್ನು ವಂಚಿಸಲೋಸುಗ ಅದಾವುದನ್ನೂ ಉಪದೇಶಿಸುವುದಿಲ್ಲ. ನಿಸ್ಪೃಹರೂ, ಪರೋಪಕಾರ ಸ್ವಭಾವಿಗಳೂ ಆದ ಸದ್ಗುರುಗಳಿಗೆ ಲೋಕದ ಜನರಿಂದ ಆವ ಅಪೇಕ್ಷೆಯೂ ಇರುವುದಿಲ್ಲ. ಅವರಿಗೆ ಲೋಕ ಕಲ್ಯಾಣವೇ ಜೀವನದ ಮುಖ್ಯ ಗುರಿಯಾಗಿರುತ್ತದೆ.

ಆದ್ದರಿಂದ ಗುರುವಿನ ಉಪದೇಶದಲ್ಲಿ ಮತ್ತು ಶಾಸ್ತ್ರದ ಉಪದೇಶದಲ್ಲಿ ಪ್ರತಿಯೊಬ್ಬರು ವಿಶ್ವಾಸವನ್ನು ಇಟ್ಟುಕೊಳ್ಳಬೇಕು. ಯಾರ ವಿಶ್ವಾಸವು ಎಷ್ಟು ದೃಢವಾಗಿರುತ್ತದೆಯೋ ಅವರು ಅಷ್ಟು ಹೆಚ್ಚಿನ ಫಲವನ್ನು ಪಡೆದುಕೊಳ್ಳುವವರಾಗುವರು. ಆದುದರಿಂದ ಪ್ರತಿಯೊಬ್ಬರು ಗುರು–ಶಾಸ್ತ್ರಗಳಲ್ಲಿ ವಿಶ್ವಾಸವನ್ನು ಹೊಂದಿದವರಾಗಿರಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ಆಗಷ್ಟ್ ೧೯೯೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲಕಾರ್ಯಾಲಯ, ಪುಣೆ.)

■■

ಆಶೀರ್ವಚನ-೬

# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಗಣಾಚಾರಾಂತರ್ಗತಗಳಾದ ಅರವತ್ನಾಲ್ಕು ಶೀಲಗಳಲ್ಲಿ ಮನಸ್ಸಿಗೆ ಸಂಬಂಧ ಪಟ್ಟ ಶೀಲಗಳ ವಿಶ್ಲೇಷಣೆಯ ಬಗ್ಗೆ ನೀವೆಲ್ಲ ಆಲಿಸುತ್ತಿದ್ದೀರಿ. ನಿನ್ನೆಯ ಆಶೀರ್ವಚನದಲ್ಲಿ ಗುರೂಪದಿಷ್ಟಗಳಾದ ವೇದಾಗಮುಗಳ ವಚನಗಳಲ್ಲಿ ಶ್ರದ್ಧೆಯನ್ನಿರಿಸಬೇಕೆಂಬುದಾಗಿ ತಿಳಿದುಕೊಂಡವರಾಗಿದ್ದೀರಿ. ಸದ್ಯಃ ಶಿವಾಗಮೋಕ್ತಗಳಾದ ಮುಂದಿನ ಮಾನಸಿಕ ಶೀಲಗಳ ಬಗ್ಗೆ ವಿಶ್ಲೇಷಿಸೋಣ.

(೪೩) ''ದುರಂತಾಯಾಂ ಆಪದ್ಯಪಿ ಧರ್ಮಸ್ಯ ಅವರ್ಜನರೂಪಾ ಧೃತಿಃ'' ಅಂದರೆ ಅತಿ ಕಠಿಣವಾದ ವಿಪತ್ತು ಬಂದೊದಗಿದಾಗಲೂ ಧರ್ಮವನ್ನು ಬಿಡದಿರುವ ಧೈರ್ಯವು. ಇಂತಹ ಧೈರ್ಯವು ಮನಸ್ಸಿನ ಶೀಲವಾಗಿರುತ್ತದೆ. ಅದಾವ ಕಠಿಣ ಪ್ರಸಂಗ ಬಂದರೂ ಮನುಷ್ಯನು ತಾನು ಪಿಡಿದ ಧರ್ಮಾಚರಣೆಯನ್ನು ಆದೆಂದಿಗೂ ಬಿಡ ಬಾರದು. ಕೆಲವೊಂದು ಜನ ಸಣ್ಣ ಸಣ್ಣ ನಿಮಿತ್ತಗಳ ನೆಪಮಾಡಿಕೊಂಡು ಹಿಡಿದ ನೇಮವನ್ನು ಬಿಡುವುದನ್ನು ಕಾಣುತ್ತೇವೆ. ತನ್ನ ವ್ರತವನ್ನು ಧೈರ್ಯವಾಗಿ ಪರಿಪಾಲಿಸು ವವನೇ ನಿಜವಾದ ವೀರಶೈವನು. ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಮಾಹೇಶ್ವರ ಸ್ಥಲದ ಸಾಧಕನ ಧೈರ್ಯದ ಬಗ್ಗೆ ವಿಶ್ಲೇಷಿಸುವಾಗ ಸರ್ವಸ್ವವೂ ನಶಿಸಲಿ, ಶಿರಚ್ಛೇದನವೇ ಆಗಲಿ, ಆದರೂ ನಾನು ಲಿಂಗಪೂಜಾ ಮಹಾವ್ರತವನ್ನು ಬಿಡಲಾರೆ ಎಂಬ ಛಲವನ್ನು ಅಲ್ಲಿ ಪ್ರತಿಪಾದಿಸಲಾಗಿದೆ. ನಿಯಮಗಳಲ್ಲಿ ನಿಷ್ಠೆ ಇಲ್ಲದ ಜನರು ನಿಯಮಬಾಹಿರರಾಗಲು ಚಿಕ್ಕ-ಪುಟ್ಟ ನಿಮಿತ್ತಗಳನ್ನು ಹುಡುಕುತ್ತಿರುತ್ತಾರೆ. ಇಂಥವ ರಿಂದ ಅದೇನನ್ನೂ ಸಾಧಿಸಲಾಗುವುದಿಲ್ಲ. ಅಂತೆಯೇ ಇಲ್ಲಿ ಆಪತ್ತಿನಲ್ಲಿಯೂ ಧರ್ಮ ವನ್ನು ತ್ಯಜಿಸಬಾರದೆಂಬ ದೃಢವ್ರತವನ್ನು ಪ್ರತಿಪಾದಿಸಲಾಗಿದೆ. ಶ್ರೀಮನ್ನಿಜಗುಣ ಶಿವಯೋಗಿಗಳೂ ಸಹ ಪರಮಾತ್ಮನಿಗೆ ಬೇಡಿಕೊಳ್ಳುವಾಗ- ''ಪಿಡಿದ ನೇಮವನೆಡೆ ಬಿಡದತಿ ಛಲವನು'' ಎಂಬುದಾಗಿ ನಿಯಮದಲ್ಲಿ ನಿಷ್ಠೆಯನ್ನೇ ಬೇಡಿಕೊಂಡಿದ್ದಾರೆ.

(೪೪) ''ಅಪಕಾರಿಷ್ವಪಿ ವೈರಿ ಜನೇಷು ಅದೂಷಣರೂಪಾ ಕ್ಷಮಾ'' ತನಗೆ ಅಪಕಾರವನ್ನುಂಟು ಮಾಡುವ ವೈರಿಗಳನ್ನೂ ಸಹ ದೂಷಿಸದೆ ಅವರ ಬಗ್ಗೆ ಕ್ಷಮೆಯನ್ನು ತಾಳಿಕೊಳ್ಳುವುದು. ಇದೂ ಸಹ ಒಂದು ವಿಧವಾದ ಮಾನಸಿಕ ಶೀಲವೇ ಆಗಿರುತ್ತದೆ. ಕ್ಷಮಾ ಅಂದರೆ ಸಹನಶೀಲತೆ, ಮನಸ್ಸು ವಿಶಾಲವಾದಂತೆಲ್ಲ ಸಹನಶೀಲತೆಯು ಬೆಳೆಯುತ್ತ ಹೋಗುತ್ತದೆ. ವಿಶಾಲಮನಸ್ಸಿನ ವ್ಯಕ್ತಿಯೇ ''ವಸುಧೈವ ಕುಟುಂಬಕಮ್'' ಎಂಬ ಭಾವನೆಯನ್ನು ತಾಳಿಕೊಳ್ಳುವನು. ಈ ಭಾವನೆಯುಳ್ಳವನೇ ಜಗತ್ತಿನ ಜನರೆಲ್ಲ

ಸುಖಿಗಳಾಗಿರಲೆಂಬ ಮಂಗಲಮಯ ಭಾವನೆಯನ್ನು ಹೊಂದಿದವನಾಗಿರುತ್ತಾನೆ. ಇಂಥವರಿಗೆ ಅದಾರೋ ಅದೆಂತಹ ಅಪರಾಧವನ್ನೆಸಗಿದರೂ ಅವನನ್ನು ಕ್ಷಮಿಸಿ ಬಿಡುತ್ತಾನೆ. ಮತ್ತೊಬ್ಬರ ಅಪರಾಧವನ್ನು ಮರೆತು ಅವರನ್ನು ಕ್ಷಮಿಸುವುದೇ ಶ್ರೇಷ್ಠವಾದ ಮಾನಸಿಕ ಶೀಲವು. ಅಂತೆಯೇ ಕಬೀರದಾಸರು ನಾಲ್ಕು ಸಾವಿರ ಗ್ರಂಥಗಳ ಸಾರವನ್ನು ನಾಲ್ಕು ಮಾತುಗಳಲ್ಲಿ ಕ್ರೋಢೀಕರಿಸಿ ಮರೆಯುವ ಎರಡು ಮಾತುಗಳು, ನೆನಪಿನಲ್ಲಿಡುವ ಎರಡು ಮಾತುಗಳೆಂಬುದಾಗಿ ನಾಲ್ಕು ಮಾತುಗಳನ್ನು ಉಪದೇಶಿಸಿ ದ್ದಾರೆ. ಅವಾವವೆಂದರೆ– ತಾನು ಮತ್ತೊಬ್ಬರಿಗೆ ಮಾಡಿದ ಉಪಕಾರವನ್ನು ಮತ್ತು ಬೇರೆಯವರು ತನಗೆ ಮಾಡಿದ ಅಪಕಾರವನ್ನು ಮರೆಯಬೇಕು. ಇನ್ನು ಹುಟ್ಟಿದವನು ಸಾಯುತ್ತಾನೆ ಮತ್ತು ಪ್ರಪಂಚದಲ್ಲೆಲ್ಲ ಪರಮಾತ್ಮನಿದ್ದಾನೆ ಎಂಬೆರಡು ಮಾತುಗಳನ್ನು ನೆನಪಿಡಬೇಕಾಗಿ ಉಪದೇಶಿಸಿದ್ದಾರೆ. ಈ ನಾಲ್ಕು ಉಪದೇಶದ ವಾಕ್ಯಗಳಲ್ಲಿ ಮತ್ತೊಬ್ಬರು ಮಾಡಿದ ಅಪಕಾರವನ್ನು ಮರೆಯುವುದೇ ಒಂದು ವಿಧವಾದ ಕ್ಷಮೆಯು. ಇಂತಹ ಕ್ಷಮಾಗುಣವನ್ನು ಪ್ರತಿಯೊಬ್ಬರು ಬೆಳೆಸಿಕೊಳ್ಳಬೇಕು.

(೪೫) ''ಮಾನಸೇ ಭೋಗಾಸಕ್ತಿಚ್ಯುತಿಃ'' ಅಂದರೆ ಮನಸ್ಸಿನಲ್ಲಿ ಹುದುಗಿ ಕೊಂಡಿರುವ ವೈಷಯಿಕ ಭೋಗಾಸಕ್ತಿಯನ್ನು ಬಿಡುವುದು. ಇಂತಹ ಭೋಗಾಸಕ್ತಿರಾಹಿತ್ಯ ಸ್ಥಿತಿಯೇ ಮನಸ್ಸಿನ ಒಂದು ಪವಿತ್ರವಾದ ಶೀಲವಾಗುತ್ತದೆ. ಅನೇಕ ಜನ್ಮ– ಜನ್ಮಾಂತರ ಗಳಲ್ಲಿ ಶಬ್ದ–ಸ್ಪರ್ಶಾದಿ ವೈಷಯಿಕ ಸುಖೋಪಭೋಗವನ್ನನುಭವಿಸಿದ ಮನಸ್ಸು ಆಯಾ ವಿಷಯಗಳು ತತ್ತದಿಂದ್ರಿಯಗಳಿಗೆ ಸಂಬಂಧವಾಗದೇ ಇದ್ದಾಗ ಅವುಗಳ ಚಿಂತನೆಯನ್ನು ಮಾಡುವುದು ಅದರ ಸ್ವಭಾವವಾಗಿರುತ್ತದೆ. ಇದರಿಂದ ಮನಸ್ಸಿನ ಅಧಃಪತನವಾಗಿ ಮನುಷ್ಯನು ದುರ್ಗತಿಯನ್ನು ಪಡೆಯುತ್ತಾನೆ. ಮನಸ್ಸಿನಲ್ಲಿಯ ಆಸಕ್ತಿಯಿಂದಾಗಿಯೇ ಮನುಷ್ಯನು ಪುನಃ ಪುನಃ ವಿಷಯಗಳತ್ತ ಧಾವಿಸಿ ಹೋಗುತ್ತಾನೆ. ವಿಷಯಗಳು ವಿಷಸಮಾನಗಳಾಗಿದ್ದರೂ ಮನದಲ್ಲಿಯ ಆ ವಿಷಯಾಸಕ್ತಿಯು ವಿವೇಕ ವನ್ನು ಮಾಡಗೊಡದೇ ಮನುಷ್ಯನನ್ನು ಅಧೋಮಾರ್ಗಕ್ಕೆ ತಳ್ಳಿಬಿಡುತ್ತದೆ. ಅಂತೆಯೇ ಶಿವಾಗಮಗಳು ಮನಸ್ಸಿನ ಪರಿಶುದ್ಧತೆಗಾಗಿ ಮಾನವನ ಅಭ್ಯುದಯಕ್ಕಾಗಿ ಭೋಗಾಸಕ್ತಿ ಯನ್ನು ತ್ಯಾಗ ಮಾಡುವ ಮಾನಸಿಕ ಶೀಲವನ್ನು ಉಪದೇಶಿಸಿರುತ್ತವೆ.

(೪೬) ''ಕ್ರಿಯಾಯಾಂ ವಚನೇವಾಪಿ ಪ್ರಮಾದರಾಹಿತ್ಯಮ್'' ಅಂದರೆ ಕೃತಿ ಮತ್ತು ಮಾತುಗಳಲ್ಲಿ ಪ್ರಮಾದವಿಲ್ಲದಿರುವಿಕೆ. ಹೀಗೆ ಮಾತು ಮತ್ತು ಕೃತಿಗಳಲ್ಲಿ ಪ್ರಮಾದವನ್ನು ಮಾಡದಿರುವುದೇ ಒಂದು ಮಾನಸಿಕ ಶೀಲವಾಗಿದೆ. ಪ್ರಮಾದವೆಂದರೆ ಅಪರಾಧವೆಂದರ್ಥ. ಯಾವ ವೇಳೆಯಲ್ಲಿ ಏನನ್ನು ಮಾಡಬೇಕೋ ಅದನ್ನು ಆ ವೇಳೆಯಲ್ಲಿ ಮಾಡದಿರುವುದೇ ಪ್ರಮಾದವು. ಆಲಸಿಯಾದ ಮನುಷ್ಯನಿಂದ ಇಂತಹ ಪ್ರಮಾದಗಳು ಮೇಲಿಂದ ಮೇಲೆ ಸಂಭವಿಸುತ್ತವೆ. ಆದ್ದರಿಂದ ತನ್ನ ಜೀವನದ ಶತ್ರುವಾದ ಆಲಸ್ಯವನ್ನು ತೊಡೆದು ಹಾಕಿ ನಿತ್ಯ ನೇಮವನ್ನು ತಪ್ಪದೇ ಮಾಡುವ ದೃಢ ಸಂಕಲ್ಪವನ್ನು ಮಾಡಬೇಕಾಗುವುದು ಅಂದಾಗಲೇನೇ ಪ್ರಮಾದರಾಹಿತ್ಯ ಜೀವನವು ಲಭ್ಯವಾಗುವುದು.

(೪೭) ''ಶಿವಾದನ್ಯವಸ್ತೂನಾಂ ಪ್ರಾಪ್ತಿ ಸಂಕಲ್ಪವರ್ಜನರೂಪೋದಮಃ'' ಅಂದರೆ ನಿಷಿದ್ಧ ವಸ್ತುಗಳನ್ನು ಪಡೆಯಬೇಕೆಂಬ ಸಂಕಲ್ಪದ ಪರಿತ್ಯಾಗವು. ಶಾಸ್ತ್ರದಲ್ಲಿ ಶಮೆ–ದಮೆಗಳು ಷಟ್ ಸಂಪತ್ತಿಗಳಲ್ಲಿ ಪರಿಗಣಿಸಲ್ಪಟ್ಟಿವೆ. ಶಮೆಯೆಂದರೆ ಅಂತರಿಂದ್ರಿಯ ನಿಗ್ರಹ, ದಮೆಯೆಂದರೆ ಬಹಿರಿಂದ್ರಿಯ ನಿಗ್ರಹ. ಇವೆರಡೂ ಪರಸ್ಪರ ಪೂರಕಗಳಾಗಿರುತ್ತವೆ. ಸಾಧಕನಾದವನು ಇವೆರಡನ್ನು ಸಾಧಿಸಿಕೊಂಡು ತನ್ನ ಮನಸ್ಸಿನಲ್ಲಿ ಶಾಸ್ತ್ರ ನಿಷಿದ್ಧ ವಸ್ತುಗಳ ಬಯಕೆಯುಂಟಾಗದಂತೆ ತನ್ನ ಮನಸ್ಸಿನ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಬೇಕು. ಇಂತಹ ಪಾವಿತ್ರ್ಯತೆಯೇ ಮಾನಸಿಕ ಶೀಲವಾಗಿರುತ್ತದೆ.

(೪೮) ''ಪರದ್ರವ್ಯ ಅಪರಿಗ್ರಹರೂಪಂ ಅಸ್ತೇಯಮ್'' ಅಂದರೆ ಪರರವಸ್ತುವನ್ನು ಅಪಹರಿಸಬಾರದೆಂಬ ಅಸ್ತೇಯ ಭಾವನೆಯು. ಇದೂ ಸಹ ಮಾನಸಿಕ ಶೀಲವಾಗಿರುತ್ತದೆ. ಮನುಷ್ಯನಿಗೆ ತಾನು ಸಂಪಾದಿಸಿದ ದ್ರವ್ಯದ ಕೊರತೆಯಾದಾಗ ಪರದ್ರವ್ಯವನ್ನು ಅಪಹರಿಸುವ ದುರ್ಬುದ್ಧಿಯು ಉತ್ಪನ್ನವಾಗುತ್ತದೆ. ವಿಲಾಸೀ ಮನೋಭಾವನೆಯ ಮನುಷ್ಯನಿಗೆ ಅದೆಷ್ಟು ಧನ ದೊರೆತರೂ ಕಡಿಮೆಯೇ ಆಗುವುದು. ಆ ಕೊರತೆಯ ಪೂರ್ತಿಗಾಗಿ ನಾನಾವಿಧ ಚೌರ್ಯಕರ್ಮವನ್ನು ಎಸಗುತ್ತ ಹೋಗುತ್ತಾನೆ. ಒಮ್ಮೆ ಈ ಸ್ತೇಯ ಪ್ರವೃತ್ತಿಯು ಬೆಳೆದರೆ ಅದನ್ನು ನಿಯಂತ್ರಿಸುವುದು ಕಷ್ಟ–ಸಾಧ್ಯವಾಗುವುದು. ಆದ್ದರಿಂದ ಮನುಷ್ಯನು ತನ್ನ ಅಭಿಲಾಷೆಗಳನ್ನು ನಿಯಂತ್ರಣದಲ್ಲಿಟ್ಟುಕೊಂಡು ತನ್ನಿಂದ ಈ ಪರದ್ರವ್ಯ ಅಪಹರಣರೂಪವಾದ ಅಪರಾಧವು ಘಟಿಸದಂತೆ ಎಚ್ಚರಿಕೆ ವಹಿಸಬೇಕು. ಇಂತಹ ಎಚ್ಚರಿಕೆಯೇ ಮನಸ್ಸಿನ ಒಂದು ಶೀಲವಾಗಿರುತ್ತದೆ.

(೪೯) ''ಅಪ್ರಾಪ್ತ ವಸ್ತು ವಿಷಯ ವ್ಯಸನಾಭಾವರೂಪಾ ಸಂತುಷ್ಟಿಃ'' ಅಂದರೆ ತನಗೆ ದೊರೆಯದ ವಸ್ತುವಿನ ವಿಷಯದಲ್ಲಿ ವ್ಯಸನವಿಲ್ಲದಿರುವಿಕೆಯು, ಅರ್ಥಾತ್ ಸಂತುಷ್ಟಿ ಎಂದರ್ಥ. ಪ್ರಪಂಚದಲ್ಲಿ ಅಸಂಖ್ಯಾತ ವಸ್ತುಗಳಿರುತ್ತವೆ. ಎಲ್ಲ ವಸ್ತುಗಳು ಎಲ್ಲರಿಗೂ ದೊರೆಯಲಾರವು. ಅಂದಾಗ ಪ್ರತಿಯೊಬ್ಬರಲ್ಲಿ ಒಂದಿಲ್ಲ ಒಂದು ವಸ್ತುವಿನ ಕೊರತೆಯು ಕಂಡುಬರುತ್ತದೆ. ತನಗೆ ದೊರೆಯದಿರುವ ವಸ್ತುವಿನ ಬಗ್ಗೆ ಚಿಂತಿಸ ತೊಡಗಿದರೆ ಮನುಷ್ಯನು ತನ್ನ ಸಂತುಷ್ಟಿ ಭಾವನೆಯನ್ನು ಕಳೆದುಕೊಳ್ಳುತ್ತಾನೆ. ಹೀಗೆ ಸದಾ ಅಸಂತುಷ್ಟನಾದ ಮನುಷ್ಯನು ಸರ್ವದಾ ಚಿಂತಾಮಗ್ನನಾಗಿರುತ್ತಾನೆ. ಚಿಂತೆಯ ಕಾರಣದಿಂದಾಗಿ ದುಃಖಿಯೂ ಆಗುವನು. ಈ ರೀತಿಯಾಗಿ ಅನಾವಶ್ಯಕ ದುಃಖವನ್ನನುಭವಿಸುವುದಕ್ಕಿಂತ ದೊರೆತದ್ದರಲ್ಲಿ ಸಮಾಧಾನವೃತ್ತಿಯನ್ನು ಮಾಡಿಕೊಳ್ಳಬೇಕು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು– ''ದೊರೆಯಲೇನದರೊಳು ಪರಿಣತೆದಳೆವುದೇ ಚಂದಮಮು'' ಎಂಬುದಾಗಿ ಸಂತುಷ್ಟಿಯ ಮಹತಿಯನ್ನು ಪ್ರತಿಪಾದಿಸಿದ್ದಾರೆ. ಓರ್ವ ಸುಭಾಷಿತಕಾರನೂ ಸಹ– ''ಮನಸಿಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ'' ಅಂದರೆ ಮನಸ್ಸಿನಲ್ಲಿ ಸಂತೋಷವೃತ್ತಿಯನ್ನು ತಾಳಿದವನು ಬಹಿರಂಗದಲ್ಲಿ ಧನಿಕನೇ ಇರಲಿ ಅಥವಾ ದರಿದ್ರನೇ ಇರಲಿ ಅದಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಹೀಗೆ ಸಂತುಷ್ಟ ಭಾವನೆಯು ಸರ್ವೋತ್ಕೃಷ್ಟವಾದಕಾರಣ ಇದನ್ನು ಪಡೆದುಕೊಳ್ಳುವುದು ಒಂದು ಮಾನಸಿಕ ಶೀಲವಾಗಿರುತ್ತದೆ.

(೫೦) ''ನಿತ್ಯಂ ಪರಮೇಶ್ವರ ನಾಮರೂಪಯೋಃ ಸ್ಮರಣಮ್'' ಅಂದರೆ ದಿನಾಲೂ ಶಿವನ ನಾಮ ಮತ್ತು ರೂಪಗಳನ್ನು ಸ್ಮರಿಸುವುದು. ಮನಸ್ಸಿನಲ್ಲಿ ಆಗುವ ಈ ಶಿವಸ್ಮರಣೆಯಿಂದ ಮನಸ್ಸಿನ ಪಾವಿತ್ರ್ಯತೆಯು ಹೆಚ್ಚಾಗುವುದು. ಅಂತೆಯೇ ಈ ಶಿವಸ್ಮರಣೆಯನ್ನು ಮಾನಸಿಕ ಶೀಲವೆಂಬುದಾಗಿ ಪರಿಗಣಿಸಿದ್ದಾರೆ. ಸದಾ ಒಂದಿಲ್ಲೊಂದು ವಸ್ತು ಇಲ್ಲವೆ ವ್ಯಕ್ತಿಯನ್ನು ಸ್ಮರಿಸುವುದು ಮನಸ್ಸಿನ ಸಹಜ ಸ್ವಭಾವವಾಗಿರುತ್ತದೆ. ಆದರೆ ಅನ್ಯವಸ್ತು ಇಲ್ಲವೆ ವ್ಯಕ್ತಿಗಳ ಸ್ಮರಣೆಯಿಂದ ಮನಸ್ಸು ಅಶುದ್ಧವಾಗಿ ದುಃಖಕ್ಕೆ ಕಾರಣವಾಗುವುದು. ಶಿವನು ಶಾಂತನೂ, ಸುಖರೂಪನೂ ಆಗಿರೋಣದರಿಂದ ಆತನ ಸ್ಮರಣೆಯಿಂದ ಮನಸ್ಸಿಗೆ ಸುಖ ಶಾಂತಿಗಳ ಲಾಭವಾಗುವುದು. ಅಂತೆಯೇ ಶಿವಾಗಮಗಳು ಈ ವಿಧವಾದ ಶಿವಸ್ಮರಣೆಯನ್ನು ಮಾನಸಿಕ ಶೀಲವೆಂಬುದಾಗಿ ಹೇಳಿರುತ್ತವೆ.

(೫೧) ''ಶಂಭೋರ್ನಾಮಗುಣಾದೀನಾಂ ಅನವರತಂ ಚಿಂತನಮ್'' ಅಂದರೆ ಶಂಭುವಿನ ನಾಮ ಗುಣಾದಿಗಳನ್ನು ಸದಾ ಚಿಂತಿಸುತ್ತಿರುವುದು. ಇದೂ ಸಹ ಮನಸ್ಸಿನ ಶೀಲವೇ. ಅಂತಃಕರಣ ಚತುಷ್ಟಯದಲ್ಲಿ ಚಿತ್ತವೂ ಸಹ ಒಂದಾಗಿದೆ. ಸದಾ ಒಂದಿಲ್ಲೊಂದು ವಿಷಯವನ್ನು ಚಿಂತಿಸುವುದು ಅದರ ಸಹಜ ಸ್ವಭಾವ. ಇಂತಹ ಚಿಂತನಶೀಲವಾದ ಚಿತ್ತಕ್ಕೆ ಪರಮಾತ್ಮನ ನಾಮ ಹಾಗೂ ಗುಣಗಳ ಚಿಂತನಾಕ್ರಿಯೆಯನ್ನು ಹಚ್ಚಿದಾಗ ಆ ನಾಮ ಗುಣ ಚಿಂತನೆಯ ಫಲವಾಗಿ ಚಿತ್ತವು ಪರಿಶುದ್ಧವಾಗಿ ಸಾಂಸಾರಿಕ ಚಿಂತೆಯನ್ನು ಬಿಟ್ಟು, ಅದು ಶಿವಚಿಂತನೆಯಲ್ಲಿ ಅನುರಕ್ತವಾಗುವುದು, ಸಾಂಸಾರಿಕವಾದ ಚಿತ್ತದ ವ್ಯವಹಾರಕ್ಕೆ ಚಿಂತೆಯೆಂದು ಕರೆದರೆ, ಆಧ್ಯಾತ್ಮಿಕವಾದ ಚಿತ್ತದ ವ್ಯವಹಾರಕ್ಕೆ ಚಿಂತನೆಯೆಂಬುದಾಗಿ ಕರೆಯುತ್ತಾರೆ. ಚಿಂತೆಯು ಚಿತೆ ಇದ್ದ ಹಾಗೆ. ಅದು ಯಾವಾಗಲೂ ಸುಡುತ್ತಲೇ ಇರುತ್ತದೆ. ಚಿತೆಯು ನಿರ್ಜೀವ ದೇಹವನ್ನು ದಹಿಸಿದರೆ ಚಿಂತೆಯು ಸಜೀವದೇಹವನ್ನು ದಹಿಸುತ್ತದೆ. ಅದಕ್ಕಾಗಿ ಸಂಸಾರದ ಚಿಂತೆಯನ್ನು ಬಿಟ್ಟು ಶಿವನ ನಾಮ ಹಾಗೂ ಗುಣಗಳ ಚಿಂತನೆಯನ್ನು ಮಾಡುತ್ತಿರಬೇಕೆಂದು ಶಿವಾಗಮಗಳು ಉಪದೇಶಿಸಿವೆ.

(೫೨) ''ಸದಾ ಶಂಭೋಃ ಪಾದ ಸಂವಾಹನ ಭಾವನಮ್'' ಅಂದರೆ ಸದಾ ಶಿವನ ಪಾದ ಸೇವೆಯನ್ನು ಮಾಡುವ ಭಾವನೆಯನ್ನು ತಾಳುವುದು. ನವವಿಧಭಕ್ತಿಗಳಲ್ಲಿ ಪಾದಸೇವೆಯು ಒಂದು ಭಕ್ತಿಯಾಗಿದೆ. ಶಿವನು ನಿರ್ಗುಣ ನಿರಾಕಾರನಾದ್ದರಿಂದ ಪ್ರತ್ಯಕ್ಷವಾಗಿ ಆತನ ಪಾದ ಸೇವೆಯು ಸಂಭವಿಸದಿದ್ದರೂ ಭಾವನಾತ್ಮಕವಾಗಿ ಪಾದಸೇವೆಯನ್ನು ಮಾಡಬೇಕೆಂಬುದಾಗಿ ಈ ಶೀಲದಲ್ಲಿ ತಿಳಿಯಪಡಿಸಲಾಗಿದೆ. ಭಾವನಾತ್ಮಕವಾಗಿ ಮಾಡಿದ ಎಲ್ಲ ವ್ಯವಹಾರಗಳು ಉತ್ಕೃಷ್ಟವಾದವುಗಳೆಂಬುದಾಗಿ ಪರಿಗಣಿಸಲ್ಪಟ್ಟಿವೆ. ಆದ್ದರಿಂದ ತನ್ನ ಮನೆಯಲ್ಲಿ ಶಿವನು ವಿಶ್ರಾಂತಿಗೈದಿದ್ದಾನೆಂಬುದಾಗಿ ಭಾವಿಸಿ ಭಾವನಾತ್ಮಕವಾಗಿಯೇ ಆತನ ಪಾದಸೇವೆಯನ್ನು ಮಾಡುವುದು ಭಾವ ಶುದ್ಧಿಗೆ ಕಾರಣವಾದ್ದರಿಂದ ಶಿವಾಗಮದಲ್ಲಿ ಈ ಭಾವನಾತ್ಮಕ ಪಾದಸೇವೆಯು ಮಾನಸಿಕ ಶೀಲವೆಂಬುದಾಗಿ ಪರಿಗಣಿಸಲ್ಪಟ್ಟಿದೆ.

(೫೩) ''ಶಂಭೋರಾವಾಹನಾದಿನಾ ಮಾನಸಿಕಮರ್ಚನಮ್'' ಅಂದರೆ ಮನೋಮಯ ಸಾಮಗ್ರಿಗಳಿಂದ ಮಾನಸಿಕವಾಗಿ ಶಿವನನ್ನು ಅರ್ಚಿಸುವುದು. ಇದೂ ಸಹ ಮನಸ್ಸಂಬಂಧಿಯಾದ ಶೀಲವೇ. ಶರೀರ, ವಾಣಿ ಮತ್ತು ಮನಸ್ಸಿನಿಂದ ಶಿವಾರ್ಚನೆಯನ್ನು ಮಾಡಬೇಕೆಂಬುದಾಗಿ ಶಾಸ್ತ್ರಗಳು ಉಪದೇಶಿಸುತ್ತವೆ. ಇವುಗಳಲ್ಲಿ ಮಾನಸಿಕವಾದ ಅರ್ಚನೆಯು ಸರ್ವೋತ್ಕೃಷ್ಟವಾದುದು. ಶರೀರವು ಅತ್ಯಂತ ದುರ್ಬಲ ವಾದಾಗ ಮತ್ತು ವಾಣಿಯು ಕುಂಠಿತವಾದಾಗ, ಅಂತೆಯೇ ಇವೆರಡರಿಂದ ಅರ್ಚನೆಯು ಸಂಭವಿಸದಿದ್ದಾಗ ಮಾನಸಿಕವಾದ ಅರ್ಚನೆಯೇ ಅನಿವಾರ್ಯವಾಗುತ್ತದೆ. ಆದ್ದರಿಂದ ಆಚಾರ್ಯರು ಮಾನಸಪೂಜೆಯ ಪ್ರಾಶಸ್ತ್ಯವನ್ನು ಪ್ರತಿಪಾದಿಸಿದ್ದುಂಟು. ಜಗದ್ಗುರು ಶಂಕಾರಾಚಾರ್ಯರು ''ಶಿವಮಾನಸ ಸ್ತೋತ್ರ''ದಲ್ಲಿ ಮಾನಸ ಪೂಜೆಯ ವಿಧಾನವನ್ನು ತಿಳಿಯಪಡಿಸಿದ್ದನ್ನು ಕಾಣುತ್ತೇವೆ. ನಮ್ಮಲ್ಲಿರುವ ತ್ರಿಕರಣಗಳಲ್ಲಿ ಶಾರೀರಿಕ ಪೂಜೆಗಿಂತ ವಾಚಿಕ ಪೂಜೆಯು, ವಾಚಿಕ ಪೂಜೆಗಿಂತ ಮಾನಸಿಕ ಪೂಜೆಯು ಉತ್ತರೋತ್ತರವಾಗಿ ಉತ್ಕೃಷ್ಟವಾದವುಗಳೆಂಬುದಾಗಿ ಪ್ರತಿಪಾದಿಸಲಾಗಿದೆ. ಮನಸ್ಸಿನ ಶುದ್ಧಿಯು ಸರ್ವ ಶುದ್ಧಿಗಳಿಗೂ ಮೂಲವಾದುದರಿಂದ ಮಾನಸಿಕವಾದ ಶಿವಾರ್ಚನೆಯಿಂದ ಮನಸ್ಸು ಶಿವಮಯವಾಗುವುದು. ಅಂತೆಯೇ ಶಿವಾಗಮದಲ್ಲಿ ಮಾನಸಿಕ ಶಿವಾರ್ಚನಾರೂಪ ವಾದ ಶೀಲವು ಪ್ರತಿಪಾದಿಸಲ್ಪಟ್ಟಿದೆ.

(೫೪) ''ನಿತ್ಯಂ ಶಿವಸ್ಯ ಪಾದಾಬ್ಜಯೋರ್ಮಾನಸಿಕಃ ಪ್ರಣಾಮಃ'' ಅಂದರೆ ಶಿವನ ಚರಣಗಳಿಗೆ ನಿತ್ಯವೂ ಮಾನಸಿಕವಾಗಿ ವಂದಿಸುವುದು. ಇದೂ ಸಹ ಮನೋಗತವಾದ ಶೀಲವಾಗಿದೆ. ಪ್ರಣಾಮವು ಸಮರ್ಪಣೆಯ ಒಂದು ಪ್ರತೀಕವಾಗಿದೆ. ತನಗಿಂತಲೂ ಶ್ರೇಷ್ಠರಾದವರಲ್ಲಿ ಸಮರ್ಪಿತವಾಗಿರುವುದು ನಮ್ಮ ಸಂಸ್ಕೃತಿಯಾಗಿದೆ. ಅಂತೆಯೇ ಗುರು ಹಿರಿಯರಿಗೆ ಮತ್ತು ತಂದೆ ತಾಯಿಗಳಿಗೆ ನಮಸ್ಕರಿಸುವುದು ನಮ್ಮ ಭಾರತೀಯ ಸಂಸ್ಕೃತಿಯಾಗಿದೆ. ಇನ್ನು ಜಗತ್ತಿಗೆ ಮಾತಾ–ಪಿತೃಸ್ವರೂಪನಾಗಿರುವ ಶಿವನ ಪಾದಾರ ವಿಂದಗಳಿಗೆ ಮಾನಸಿಕವಾಗಿ ಪ್ರಣಾಮವನ್ನು ಸಮರ್ಪಿಸುವುದು ಸರ್ವೋತ್ಕೃಷ್ಟ ವಾಗಿದೆ. ಇಂತಹ ಮಾನಸಿಕ ಪ್ರಣಾಮವು ಮನಸ್ಸಿನ ಶೀಲವೆಂಬುದಾಗಿ ತಿಳಿದು ಕೊಳ್ಳಬೇಕು.

(೫೫) ''ಶಿವಸ್ಯ ಮಾನಸಿಕಂ ಕೈಂಕರ್ಯಮ್'' ಅಂದರೆ ತನ್ನನ್ನು ಶಿವನ ಕಿಂಕರ ನೆಂದು ಭಾವಿಸುವುದು. ಇದಕ್ಕೇನೇ ಮಾನಸಿಕ ದಾಸ್ಯಶೀಲವೆಂಬುದಾಗಿ ಕರೆಯುತ್ತಾರೆ. ಕಿಂಕರ ಭಾವನೆಯನ್ನು ಬೆಳಸಿಕೊಂಡಾಗ ಸಂಸಾರದ ಬಗೆಗಿರುವ ಅಭಿಮಾನಾದಿಗಳು ಸಹಜವಾಗಿಯೇ ದೂರಾಗುತ್ತವೆ. ಮನೆಯಲ್ಲಿಯ ಸೇವಕನು ಮನೆಯ ಮಾಲಿಕನಿ ಗಿಂತಲೂ ಅಧಿಕವಾಗಿಯೇ ಕೆಲಸಗೈಯ್ಯುತ್ತಿದ್ದರೂ ಅಲ್ಲಿ ಆಗುವ ಹಾನಿ–ಹಳಿವುಗಳಿಗೆ ಸೇವಕನು ಭಾಧ್ಯಸ್ಥನಾಗದಿರುವಂತೆ ಸಾಧಕನು ತನ್ನನ್ನು ಶಿವನ ದಾಸನನ್ನಾಗಿ ಭಾವಿಸಿ ಸಂಸಾರದ ಮೇಲಿನ ಮಮತೆಯನ್ನು ಕಳೆದುಕೊಂಡ ಕಾರಣ ಸಾಂಸಾರಿಕ ಆಗುಹೋಗು ಗಳಿಂದ ಆತನು ಅಲಿಪ್ತನಾಗಿರುತ್ತಾನೆ. ಈ ತೆರನಾದ ಮಾನಸಿಕ ಶಿವಕೈಂಕರ್ಯ ಭಾವನೆಯು ಸಾಧಕನ ಅಭಿವೃದ್ಧಿಗೆ ಕಾರಣವಾಗಿರೋಣದರಿಂದ ಇದನ್ನು ಮಾನಸಿಕ ಶೀಲವೆಂಬು ದಾಗಿ ಪರಿಗಣಿಸಿದ್ದಾರೆ.

(೫೬) ''ಶಿವೇ ಸಖ್ಯ ಭಾವನಾ'' ಅಂದರೆ ಕಲ್ಯಾಣಕಾರಿಯಾದ ಶಿವನೊಂದಿಗೆ ಸಖ್ಯಭಾವನೆಯನ್ನು ಬೆಳಸಿಕೊಳ್ಳುವುದು. ಇದಕ್ಕೆ ಸಖ್ಯಶೀಲವೆಂಬುದಾಗಿ ಕರೆಯುತ್ತಾರೆ. ಇದೊಂದು ವಿಧವಾದ ಮಾನಸಿಕ ಶೀಲವೇ . ಜೀವನದಲ್ಲಿ ಒಬ್ಬ ಜೀವಿಯು ಮತ್ತೊಬ್ಬ ಜೀವಿಗೆ ಸಖನಾಗಿ ಅವರೀರ್ವರೂ ಪರಸ್ಪರ ಸಖ್ಯಭಾವನೆಯಿಂದ ವರ್ತಿಸುವುದನ್ನು ಕಾಣುತ್ತೇವೆ. ಆದರೆ ಈ ಜೀವ ಜೀವಿಗಳ ಸಖ್ಯವು ಶಾಶ್ವತವಾದ ಸಖ್ಯವಾಗಲಾರದು. ಇಬ್ಬರೂ ಜೀವಿಗಳು ಸ್ವಾರ್ಥಪರರೇ ಆಗಿರೋಣದರಿಂದ ಒಂದಿಲ್ಲೊಂದು ದಿನ ತಮ್ಮ ತಮ್ಮ ಸ್ವಾರ್ಥ ಸಿದ್ಧಿಗಾಗಿ ಪರಸ್ಪರವಾಗಿ ಕಲಹಮಾಡಿ ಮಿತ್ರರೇ ಶತ್ರು ಭಾವನೆಯನ್ನು ತಾಳಿ ವ್ಯವಹರಿಸುವುದನ್ನು ಲೋಕದಲ್ಲಿ ಕಾಣುತ್ತೇವೆ. ಆದರೆ ಶಿವನು ನಿಸ್ವಾರ್ಥಿಯೂ ಪರಮ ಕಲ್ಯಾಣಕಾರಿಯೂ ಆಗಿರೋಣದರಿಂದ ಅವನೊಂದಿಗೆ ಸಖ್ಯಭಾವನೆಯನ್ನು ತಾಳಿಕೊಳ್ಳುವುದೇ ಶ್ರೇಷ್ಠವೆಂಬುದಾಗಿ ಪರಿಗಣಿಸಿ 'ಶಿವಾಗಮ ಶಾಸ್ತ್ರ'ವು ಶಿವನೊಂದಿಗೆ ಮಾಡಿಕೊಳ್ಳುವ ಸಖ್ಯಭಾವನೆಗೆ ಅತ್ಯಧಿಕ ಮಹತ್ವವನ್ನು ಕೊಟ್ಟಿದೆ. ಆದಕಾರಣ ಜೀವನಪರಮಸಖನು ಪರಮಾತ್ಮನೇ ಆಗಿದ್ದಾನೆ. ಅಂತೆಯೇ ಸಾಧಕರಾದವರು ಶಿವನೊಂದಿಗೆ ಮಾನಸಿಕ ಸಖ್ಯಭಾವನೆಯನ್ನು ತಾಳಿಕೊಂಡಿರಬೇಕೆಂಬುದೇ ಈ ಶೀಲದ ತಾತ್ಪರ್ಯವಾಗಿದೆ. ಅರ್ಜುನನು ಭಗವಂತನೊಂದಿಗೆ ಸಖ್ಯಭಾವನೆಯನ್ನು ತಾಳಿಕೊಂಡ ಕಾರಣವಾಗಿಯೇ ಅವನಿಂದ ತತ್ತ್ವೋಪದೇಶವನ್ನು ಪಡೆದು ಪರಮಜ್ಞಾನಿಯಾದ ಉದಾಹರಣೆಯು ಮಹಾಭಾರತದಲ್ಲಿಸುಪ್ರಸಿದ್ಧವಾಗಿದೆ.

(೫೭) ''ಬಂಧ ಮೋಕ್ಷ ಚಿಂತಾಯಾಃ ಶಿವ ಸಮರ್ಪಣ ರೂಪಾ ಆತ್ಮಾರ್ಪಣಾ'' ಅಂದರೆ ಬಂಧ ಮತ್ತು ಮೋಕ್ಷಗಳ ಎಲ್ಲ ಹೊಣೆಯನ್ನು ಶಿವನಿಗೆ ಸಮರ್ಪಿಸುವುದೇ ಆತ್ಮಾರ್ಪಣೆಯು. ಇದಕ್ಕೆ ಆತ್ಮಾರ್ಪಣ ಶೀಲವೆಂಬುದಾಗಿ ಕರೆಯುತ್ತಾರೆ. ಇದೂ ಸಹ ಒಂದು ವಿಧವಾದ ಮಾನಸಿಕ ಶೀಲವೇ ಆಗಿರುತ್ತದೆ. ನನ್ನನ್ನು ಬಂಧನದಲ್ಲಾದರೂ ಇಡು ಅಥವಾ ಮುಕ್ತನನ್ನಾದರೂ ಮಾಡು, ಹೇಗಾದರೂ ಮಾಡು, ನಿನಗೆ ತಿಳಿದಂತೆ ಮಾಡು ಎಂಬುದಾಗಿ ಶಿವನಿಗೆ ಸಮರ್ಪಿತವಾಗುವುದೇ ಅಥವಾ ಶಿವಶರಣಾಗತಿಯನ್ನು ಹೊಂದುವುದೇ ಆತ್ಮಾರ್ಪಣಶೀಲವು. ಇಂತಹ ಆತ್ಮಾರ್ಪಣ ಸ್ಥಿತಿಯನ್ನು ಪಡೆದು ಕೊಂಡಾಗ ನಿಜವಾಗಲೂ ಸಾಧಕನು ಚಿಂತಾಮುಕ್ತನಾಗಿ ನಿಶ್ಚಿಂತವಾದ ಸ್ಥಿತಿಯನ್ನು ಪಡೆದುಕೊಳ್ಳುವನು.

(೫೮) ''ಮೂಲ ಮಂತ್ರಸ್ಯ ಸದಾ ಮಾನಸಿಕೋ ಜಪಃ'' ಅಂದರೆ ಮೂಲ ಪಂಚಾಕ್ಷರ ಮಹಾಮಂತ್ರವನ್ನು ಸದಾಕಾಲದಲ್ಲಿ ಮಾನಸಿಕವಾಗಿ ಜಪ ಮಾಡುವುದು. ಇಂಥ ಮಾನಸಿಕ ಜಪವೂ ಸಹ ಮನಸ್ಸಿನ ಶೀಲವೇ ಆಗಿದೆ. 'ಜಪತೋನಾಸ್ತಿ ಪಾತಕಮ್' ಎಂಬ ಉಕ್ತಿಗನುಸಾರವಾಗಿ ಇಷ್ಟ ಮಂತ್ರಜಪದಿಂದ ಸರ್ವಪಾತಕಗಳೂ ದೂರಾಗಿ ಸಾಧಕನು ಅತ್ಯಂತ ಪರಿಶುದ್ಧನಾಗುವನು. ಅದರಲ್ಲೂ ವಿಶೇಷವಾಗಿ ಮಾನಸಿಕ ಜಪವನ್ನು ಗೈದಾಗ ಮನಸ್ಸು ಇನ್ನಷ್ಟು, ಮತ್ತಷ್ಟು ಪರಿಶುದ್ಧವಾಗುವುದು. ಮಾನಸಿಕ ಜಪವನ್ನು ಯಾವಾಗಲಾದರೂ ಮಾಡುತ್ತಲಿರಬಹುದು. ಗೃಹ, ಕ್ಷೇತ್ರ, ಮತ್ತು ವಾಣಿಜ್ಯಾದಿ ವ್ಯವಹಾರಗಳನ್ನು ಮಾಡುತ್ತಿರುವಾಗಲೂ ಮಾನಸಿಕ ಜಪವನ್ನು

ಮಾಡಲು ಅದಾವ ತೊಂದರೆಯೂ ಉಂಟಾಗಲಾರದು. ಅಂತೆಯೇ ಶಿವಾಗಮದಲ್ಲಿ ಮನಶುದ್ಧಿಗೆ ಕಾರಣವಾಗುವ ಮಾನಸಿಕ ಮಂತ್ರಜಪವು ಮನಸ್ಸಿನ ಶೀಲವೆಂಬುದಾಗಿ ಪರಿಗಣಿಸಲ್ಪಟ್ಟಿದೆ.

(೪೯) ''ಶಿವಸ್ಯ ದಿವ್ಯ ರೂಪಾನುಸಂಧಾನ ರೂಪಂ ಧ್ಯಾನಮ್'' ಅಂದರೆ ಶಿವನ ದಿವ್ಯಸ್ವರೂಪವನ್ನು ಅನುಸಂಧಾನ ಮಾಡುವುದೇ ಧ್ಯಾನವು. ಇದೊಂದು ಮಾನಸಿಕ ಶೀಲವೆ. ''ಜಪಕೋಟಿ ಸಮಂ ಧ್ಯಾನಮ್'' ಎಂಬ ಉಕ್ತಿಗನುಸಾರವಾಗಿ ಮಾನಸಿಕ ಜಪಕ್ಕಿಂತಲೂ ಧ್ಯಾನವು ಉಚ್ಚಕೋಟಿಯದಾಗಿರುತ್ತದೆ. ಮನಸ್ಸು ಒಂದು ಪಿಶಾಚಿ ಯಿದ್ದಂತೆ ಅದಕ್ಕೆ ಯಾವಾಗಲೂ ಏನಾದರೊಂದು ಕೆಲಸ ಬೇಕೇ ಬೇಕು. ಯಾವ ಕೆಲಸ ಇಲ್ಲದೇ ಇದ್ದಾಗ ಅನಾವಶ್ಯಕವಾದ ವ್ಯರ್ಥ ಚಿಂತೆಯಲ್ಲಿ ಅದು ಮುಳುಗಿ ಹೋಗುತ್ತದೆ. ಆದ್ದರಿಂದ ಸಾಂಸಾರಿಕ ವ್ಯವಹಾರಗಳಿಂದ ಬಿಡುಗಡೆಯಿದ್ದಾಗಲೆಲ್ಲ ಆ ಮನಸ್ಸನ್ನು ಖಾಲಿ ಕೂಡ್ರಿಸದೆ ಅದನ್ನು ಶಿವಧ್ಯಾನವೆಂಬ ಕಾರ್ಯದಲ್ಲಿ ತೊಡಗಿಸಬೇಕು. ಅಂದಾಗಲೇ ಆ ವ್ಯಕ್ತಿಯ ಆಧ್ಯಾತ್ಮಿಕ ವಿಕಾಸವಾಗುವುದು. ಅಂತೆಯೇ ಶಿವಾಗಮಗಳಲ್ಲಿ ಶಿವನ ದಿವ್ಯರೂಪದ ಅನುಸಂಧಾನ ರೂಪವಾದ ಧ್ಯಾನವನ್ನು ಮನಸ್ಸಿನ ಶೀಲವೆಂಬುದಾಗಿ ಪ್ರತಿಪಾದಿಸಲಾಗಿದೆ.

(೬೦) ''ತೈಲಧಾರಾವತ್ ಅವಿಚ್ಛಿನ್ನಂ ಶಿವಮೂರ್ತೇರ್ಮನಸಿ ಧಾರಣಮ್'' ಅಂದರೆ ತೈಲಧಾರೆಯಂತೆ ಎಡೆಬಿಡದೆ ಶಿವನನ್ನು ನೆನೆಸುವುದೇ ಧಾರಣೆಯು. ಇದೂ ಸಹ ಮನಸ್ಸಿನ ಶೀಲವೇ ಆಗಿರುತ್ತದೆ. ಯಾವ ಶಿವಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಿರುತ್ತೇವೆಯೋ ಆ ಶಿವಸ್ವರೂಪವು ಮನಸ್ಸಿನಲ್ಲಿ ಸ್ಥಿರಗೊಂಡಾಗ ಅದುವೇ ಧಾರಣಾವಸ್ಥೆಯು. ಧ್ಯಾನದ ಪರಿಪಕ್ವಾವಸ್ಥೆಯೇ ಧಾರಣೆಯು. ಒಂದು ಎಣ್ಣೆಯ ಧಾರೆಯನ್ನು ನಾವು ಮೇಲಿನಿಂದ ಬಿಟ್ಟಾಗ ಅದು ಮಧ್ಯದಲ್ಲಿ ಎಲ್ಲಿಯೂ ಭಿನ್ನವಾಗದಂತೆ ಅಖಂಡವಾಗಿ ಪ್ರವಹಿಸುವುದು. ಅದರಂತೆ ಶಿವಧ್ಯಾನವನ್ನು ಮಾಡುತ್ತಿರುವಾಗ ಚಿತ್ತವೃತ್ತಿಯಲ್ಲಿ ಬೇರಾವ ವಿಷಯದ ಚಿಂತನೆ ಬಾರದೆ ಅದು ಅಖಂಡ ವಾಗಿ ಸಾಗಿದರೆ ಅದಕ್ಕೇನೇ ಧಾರಣೆಯೆಂದು ಕರೆಯುತ್ತಾರೆ. ಇದು ಮನಶ್ಶುದ್ಧಿಯ ಆಚರಣೆಯಾದ್ದರಿಂದ ಇದನ್ನು ಮನೋಗತ ಶೀಲವೆಂಬುದಾಗಿ ಪರಿಗಣಿಸಿದ್ದಾರೆ.

(೬೧) ''ನಿವಾತದೀಪವತ್ ಧ್ಯಾನೇಚೇತಸಃ ಸ್ಥಿತಿರೂಪಾ ಸಮಾಧಿಃ'' ಅಂದರೆ ಗಾಳಿಯಿಲ್ಲದೆಡೆಯಿರುವ ದೀಪದಂತೆ ಧ್ಯಾನದಲ್ಲಿ ಮನಸ್ಸು ಸುಸ್ಥಿರತೆಯನ್ನು ಪಡೆಯು ವುದೇ ಸಮಾಧಿಯು. ಇದೊಂದು ಮಾನಸಿಕ ಶೀಲವೇ. ಧಾರಣೆಯ ಮುಂದಿನದಾದ ಅವಸ್ಥೆಯೇ ಸಮಾಧಿಯು. ನಿರ್ವಾತಸ್ಥಾನದಲ್ಲಿ ಬೆಳಗುತ್ತಿರುವ ದೀಪವು ಅತ್ತಿತ್ತ ಸ್ವಲ್ಪವೂ ವಾಲದ ಹಾಗೆ ಅದರ ಜ್ಯೋತಿಯು ಅಖಂಡವಾಗಿ ಊರ್ಧ್ವಮುಖವಾಗಿ ಪ್ರಜ್ವಲಿಸುತ್ತಿರುವಂತೆ ಧ್ಯಾನಸ್ಥವಾದ ಮನಸ್ಸಿಗೆ ಯಾವ ವಿಚಾರದ ಅಲೆಗಳೂ ತಾಕದ ಹಾಗೆ ಇದ್ದಾಗ ಆ ಮನೋವೃತ್ತಿರೂಪವಾದ ಜ್ಯೋತಿಯು ಅಖಂಡವಾಗಿ ಶಿವನೊಂದಿಗೆ ಸಮರಸತೆಯನ್ನು ಪಡೆಯುತ್ತದೆ. ಇದುವೇ ಸಮಾಧಿ ಅವಸ್ಥೆಯು. ಇದಕ್ಕೆ ಸಮಾಧಿ ಶೀಲವೆಂತಲೂ ಕರೆಯುವುದುಂಟು.

(೬೨) ''ಶಿವಸ್ಯ ಸೋಹಂ ಧ್ಯಾನಾನುಸಂಧಾನಮ್'' ಅರ್ಥಾತ್ ಶಿವನನ್ನು ಅಂದರೆ ಶಿವನ ಸ್ವರೂಪವನ್ನು ತನ್ನ ಆತ್ಮ ಸ್ವರೂಪವನ್ನಾಗಿ ಅನುಸಂಧಾನಿಸುವುದು. ಇದೂ ಸಹ ಒಂದು ಮಾನಸಿಕ ಶೀಲವೇ. ಶಿವನನ್ನು ತನಗಿಂತ ಭಿನ್ನವೆಂದು ತಿಳಿದು ಅನುಸಂಧಾನ ಮಾಡುವುದಕ್ಕಿಂತ ತನ್ನನ್ನು ಪರಮಾತ್ಮರೂಪವನ್ನಾಗಿ ಅನುಸಂಧಾನ ಮಾಡುವುದು ಶ್ರೇಷ್ಠವಾದುದು. ಇದರಿಂದ ಜೀವನಿಗೆ ಶಿವ ಸಾಯುಜ್ಯವು ಪ್ರಾಪ್ತ ವಾಗುವುದು. ಅಂತೆಯೇ ಶಿವಾಗಮಗಳು 'ಸೋಹಂ' ಅನುಸಂಧಾನ ರೂಪವಾದ ಮಾನಸಿಕ ಶೀಲವನ್ನು ಉಪದೇಶಿಸುತ್ತವೆ.

(೬೩) ''ಮಹೇಶ್ವರಸ್ಯ ಅಪರಿಚ್ಛಿನ್ನ ಸ್ವರೂಪಾನುಸಂಧಾನಮ್'' ಅಂದರೆ ಶಿವನ ಪರಿಪೂರ್ಣ ಸ್ವರೂಪವನ್ನು ಅನುಸಂಧಾನಮಾಡುವುದು. ಶಿವನು ಸರ್ವದೇಶ ಸರ್ವಕಾಲ, ಸರ್ವವಸ್ತುಗಳಲ್ಲಿ ಇರುವವನಾದ್ದರಿಂದ ಈತನು ದೇಶ, ಕಾಲ ಮತ್ತು ವಸ್ತು ಪರಿಚ್ಛೇದರಹಿತನಾಗಿದ್ದಾನೆ. ಇಂತಹ ಅಪರಿಚ್ಛಿನ್ನ ಸ್ವರೂಪಾನುಸಂಧಾನವನ್ನು ಮಾಡೋಣದರಿಂದ ಸಾಧಕನ ಮನಸ್ಸು ಸರ್ವತ್ರ ಶಿವನ ಅಸ್ತಿತ್ವವನ್ನು ಅನುಭವಿಸುವ ಸ್ಥಿತಿಯನ್ನು ಪಡೆದುಕೊಳ್ಳುತ್ತದೆ. ಇಂತಹ ಸ್ಥಿತಿಯಿಂದಲೇ ಸರ್ವವಿಧವಾದ ಸಂಕುಚಿತ ಭಾವನೆಗಳು ದೂರಾಗಿ ಸಾಧಕನು ವಿಶಾಲ ಮನೋಭಾವನೆಯುಳ್ಳವನಾಗುತ್ತಾನೆ. ಈ ರೀತಿಯಾದ ವಿಶಾಲಮನೋಭಾವನೆಯನ್ನು ತಾಳುವುದೂ ಒಂದು ಮನಸ್ಸಿನ ಶೀಲ ವಾಗಿದೆ.

(೬೪)''ಅನಂತರೂಪಸ್ಯ ದೇವಸ್ಯ ನಿಜರೂಪತೋ ಭಾವನಮ್'' ಅಂದರೆ ಅನಂತರೂಪನಾದ ಶಿವನನ್ನು ನಿಜರೂಪದಿಂದ ಭಾವಿಸುವುದು. ಇದು ಮನಸ್ಸಿನ ಕೊನೆಯ ಶೀಲವಾಗಿರುತ್ತದೆ. ಶಿವನು ಅನಂತ ಸ್ವರೂಪನು. ಪೃಥಿವ್ಯಾದಿ ಪಂಚಮಹಾಭೂತಗಳು. ಸೂರ್ಯ, ಚಂದ್ರ ಮತ್ತು ಆತ್ಮರುಗಳು ಅವನ ಸ್ವರೂಪಗಳೇ ಆಗಿರುತ್ತವೆ. ಹೀಗೆ ಶಿವನು ಜಗನ್ಮಯ ಸ್ವರೂಪನಾಗಿರುವುದರಿಂದ ಸರ್ವವೆಲ್ಲವನ್ನೂ ಶಿವರೂಪವನ್ನಾಗಿ ತಿಳಿಯುವುದೇ ಮನಸ್ಸಿನ ಸರ್ವೋತ್ಕೃಷ್ಟವಾದ ಸ್ಥಿತಿಯು. ಅಂತೆಯೇ ಶಾಸ್ತ್ರಕಾರರು ''ಯತ್ರ ಯತ್ರ ಮನೋಯಾತಿ ತತ್ರ ತತ್ರ ಬ್ರಹ್ಮ ದರ್ಶನಮ್ '' ಎಂಬುದಾಗಿ ಉಪದೇಶಿಸಿ ಶಿವಮಯವಾದ ಮನಸ್ಸುಳ್ಳವರಿಗೆ ಸರ್ವತ್ರ ಶಿವದರ್ಶನವೇ ಆಗುತ್ತದೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಇದನ್ನೇ ಬಸವಣ್ಣನವರು–''ಎತ್ತ ನೋಡಿ ದಡತ್ತ ನೀನೇ ದೇವಾ'' ಎಂಬ ತಮ್ಮ ವಚನದಲ್ಲಿ ವಿಶ್ಲೇಷಿಸಿದ್ದನ್ನು ಕಾಣಬಹುದು. ಈ ತೆರನಾಗಿ ಗಣಾಚಾರದಲ್ಲಿ ಮೂವತ್ತೈದು ಪ್ರಕಾರದ ಮಾನಸಿಕ ಶೀಲಗಳು ಪ್ರತಿಪಾದಿಸಲ್ಪಟ್ಟಿವೆ.

ಪಂಚ ಆಚಾರಗಳಲ್ಲಿ ನಾಲ್ಕನೆಯದಾದ ಗಣಾಚಾರದಲ್ಲಿ ವಾಣಿಗೆ ಸಂಬಂಧವಾದ ಏಳು ಶೀಲಗಳು, ಪಾಣಿಗೆ ಸಂಬಂಧವಾದ ಐದು ಶೀಲಗಳು, ಪಾದಕ್ಕೆ ಸಂಬಂಧಿಸಿದ ನಾಲ್ಕು ಶೀಲಗಳು, ತ್ವಕ್ಕಿಗೆ ಸಂಬಂಧಿಸಿದ ಎರಡು ಶೀಲಗಳು, ಚಕ್ಷುವಿಗೆ ಸಂಬಂಧಿಸಿದ ಎರಡು ಶೀಲಗಳು, ಜಿಹ್ವೆಗೆ ಸಂಬಂಧಿಸಿದ ಒಂದು ಶೀಲವು, ಘ್ರಾಣಕ್ಕೆ ಸಂಬಂಧಿಸಿದ ಒಂದು ಶೀಲವು, ಶ್ರೋತ್ರಕ್ಕೆ ಸಂಬಂಧಿಸಿದ ಎರಡು ಶೀಲಗಳು, ಕಾಯಶುದ್ಧಿಗೆ

ಸಂಬಂಧಿಸಿದ ಐದು ಶೀಲಗಳು ಮತ್ತು ಮನಸ್ಸಿನ ಶುದ್ಧಿಗೆ ಸಂಬಂಧಿಸಿದ ಮೂವತ್ತೈದು ಶೀಲಗಳು ಹೀಗೆ ಒಟ್ಟು ಗಣಾಚಾರದಲ್ಲಿ ಅರವತ್ನಾಲ್ಕು ಶೀಲಗಳು ಪ್ರತಿಪಾದಿಸಲ್ಪಟ್ಟಿವೆ. ಈ ಶೀಲಗಳನ್ನು ನಿಷ್ಠೆಯಿಂದ ಪರಿಪಾಲಿಸಿದರೆ ಸಾಧಕನಿಗೆ ಶಿವದೃಷ್ಟಿಯು ಪ್ರಾಪ್ತವಾಗಿ ಸರ್ವತ್ರ ಶಿವಸ್ವರೂಪದರ್ಶನವು ಉಂಟಾಗುವುದೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಆಗಷ್ಟ್ ೧೯೮೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)

■■

ಆಶೀರ್ವಚನ -೭

# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಇಲ್ಲಿಯವರೆಗೆ ನೀವೆಲ್ಲಾ ಪಂಚಾಚಾರಗಳಲ್ಲೊಂದಾದ ಗಣಾಚಾರ ಹಾಗೂ ಅದರಲ್ಲಿ ಪ್ರತಿಪಾದಿತಗಳಾದ ಅರವತ್ನಾಲ್ಕು ಶೀಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸಿದ್ದೀರಿ. ಇನ್ನು ಕ್ರಮ ಪ್ರಾಪ್ತವಾದ ಐದನೆಯದಾದ ಆಚಾರವೇ ಭೃತ್ಯಾಚಾರವು. ಶಿವನು ನನ್ನ ಸ್ವಾಮಿಯು, ನಾನು ಅವನ ಸೇವಕನು ಎಂಬ ಈ ಭೃತ್ಯಭಾವಕ್ಕೇನೇ ಭೃತ್ಯಾಚಾರವೆಂಬುದಾಗಿ ಕರೆಯುತ್ತಾರೆ, ಇದನ್ನೇ ಚಂದ್ರಜ್ಞಾನಾಗಮದಲ್ಲಿ–

ಶಿವಭಕ್ತಜನಾಃ ಸರ್ವೇ ವರಿಷ್ಠಾಃ ಪೃಥಿವೀ ತಲೇ ।
ತೇಷಾಂ ಭೃತ್ಯೋऽಹಮಿತಿ ಯದ್‌ಭೃತ್ಯಾಚಾರ ಇತಿ ಸ್ಮೃತಃ ॥

(ಚಂ; ಜ್ಞಾ. ಕ್ರಿಯಾಪದ ೯–೯)

ಈ ರೀತಿಯಾಗಿ ಉಪದೇಶಿಸಲಾಗಿದೆ. ತಾತ್ಪರ್ಯವೇನೆಂದರೆ, ಈ ಜಗತ್ತಿನಲ್ಲಿ ಶಿವ ಹಾಗೂ ಶಿವಭಕ್ತರೇ ಸರ್ವಶ್ರೇಷ್ಠರಾದವರು. ನಾನು ಅವರ ಭೃತ್ಯನಾಗಿದ್ದೇನೆ ಎಂಬ ಭಾವನೆಯುಳ್ಳಾತನೇ ಭೃತ್ಯಾಚಾರಿಯು. ಸಾಧಕನಾದ ಶಿವಭಕ್ತನು ತನ್ನ ಮನೆಗೆ ಗುರು–ಜಂಗಮರನ್ನು ಬರಮಾಡಿಕೊಂಡು ಅವರ ಪೂಜಾದಿಗಳನ್ನು ಪೂರೈಸಿ ಅವರ ಪ್ರಸಾದ ಬಟ್ಟಲದಲ್ಲಿ ಪಕ್ವಾನ್ನವನ್ನು ಎಡೆಮಾಡಿ ನಾನು ತಮ್ಮ ಭೃತ್ಯನಿದ್ದೇನೆ ಪ್ರಸಾದವನ್ನು ಸ್ವೀಕರಿಸಬೇಕೆಂಬುದಾಗಿ ವಿನಂತಿಸಿಕೊಂಡು ಗುರು–ಜಂಗಮರ ಎದುರಿನಲ್ಲಿ ಸಾಷ್ಟಾಂಗ ಪ್ರಣಿಪಾತವನ್ನೆಸಗುವ ಪರಂಪರೆಯನ್ನು ಇಂದಿಗೂ ವೀರಶೈವರ ಮನೆಗಳಲ್ಲಿ ಕಾಣುತ್ತೇವೆ. ಇದೊಂದು ಭೃತ್ಯಾಚಾರದ ಸಂಕೇತವೇ ಸರಿ.

ಈ ವಿಧವಾದ ಭೃತ್ಯಭಾವನೆಯನ್ನು ತಾಳೋಣದರಿಂದ ಸಾಧಕನ ಅಂತಃಕರಣ ದಲ್ಲಿ ಅಹಂಕಾರವು ಸುಳಿಯುವುದೇ ಇಲ್ಲ. ಅಹಂಕಾರದಿಂದಾಗಿಯೇ ಬಹಳಷ್ಟು ಜನರು ಅಧಃಪತನ ಹೊಂದುವುದನ್ನು ಕಾಣುತ್ತೇವೆ.ಹೀಗೆ ಅಧಃಪತನಕ್ಕೆ ಕಾರಣವಾದ ಅಹಂಕಾರವನ್ನು ನಿರ್ಮೂಲನಗೊಳಿಸುವುದಕ್ಕಾಗಿಯೇ ಚಂದ್ರಜ್ಞಾನಾಗಮದಲ್ಲಿ ಈ ಭೃತ್ಯಾಚಾರವು ಪ್ರತಿಪಾದಿಸಲ್ಪಟ್ಟಿದೆ. ''ಈಶಾ ವಾಸ್ಯಮಿದಂ ಸರ್ವಮ್'' ಎಂಬ ಉಪನಿಷದ್ ವಾಕ್ಯದಂತೆ ಈ ಸಚರಾಚರ ಪ್ರಪಂಚಕ್ಕೆಲ್ಲಾ ಪರಮಾತ್ಮನೋರ್ವನೇ ಸ್ವಾಮಿ ಅಥವಾ ಮಾಲಿಕನಾಗಿದ್ದಾನೆ. ಅವನನ್ನು ಹೊರತುಪಡಿಸಿ ಬೇರಾರೂ ಈ ಪ್ರಪಂಚದ ಒಡೆಯರಾಗಲಾರರು. ಆದರೆ ಮಾಲಿಕರಲ್ಲದ ಜೀವಿಗಳೂ ಸಹ ಪ್ರಪಂಚದ ಕೆಲವು ವಸ್ತುಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳಿಗೆ ತಮ್ಮನ್ನು ಮಾಲಿಕರನ್ನಾಗಿ ಭಾವಿಸುವುದನ್ನು ಸರ್ವೇಸಾಮಾನ್ಯವಾಗಿ ಎಲ್ಲ ಕಡೆಗೆ ಕಾಣುತ್ತೇವೆ. ಕೆಲವು ಜನ

ಚಕ್ರವರ್ತಿಗಳು ತಮ್ಮ ಬಾಹುಬಲದಿಂದ ರಾಜ್ಯದ ಸೀಮೆಯನ್ನು ವಿಸ್ತರಿಸಿಕೊಂಡು ಸಂಪೂರ್ಣ ದೇಶಕ್ಕೆ ಏಕಚಕ್ರಾಧಿಪತಿಗಳಾಗಿ ''ಇದೆಲ್ಲವೂ ನನ್ನದು, ಇದಕ್ಕೆಲ್ಲ ನಾನೋರ್ವನೇ ಮಾಲಿಕನು'' ಎಂಬ ಭಾವನೆಯನ್ನು ಹೊಂದಿದ್ದರೂ ಅವರಿಗೆ ಅಂತ್ಯಕಾಲದಲ್ಲಿ ತಮ್ಮ ಈ ಭಾವನೆಯು ವ್ಯರ್ಥವೆಂಬುದರ ಅರಿವು ಆಗಿರಲಿಕ್ಕೆ ಸಾಕು. ವಿಶ್ವವಿಜಯೀ ಸಾಮ್ರಾಟನೆನಿಸಿದಂಥ ನೆಪೋಲಿಯನ್ ಬೋನೋಪಾರ್ಟನು ತನ್ನ ಕೊನೆಯ ಅವಸ್ಥೆಯಲ್ಲಿ ಮಂತ್ರಿಗಳನ್ನು ಕರೆಸಿ ತನ್ನ ಅಂತ್ಯಯಾತ್ರೆಯ ಮೆರವಣಿಗೆಯ ಕಾಲಕ್ಕೆ ಎರಡೂ ಕೈಗಳನ್ನು ಶಿದಿಗೆಯಿಂದ ಹೊರಗೆ ಚಾಚಲ್ಪಟ್ಟಂತೆ ಇರಿಸಬೇಕು ಎಂದು ಆಜ್ಞಾಪಿಸಿದ್ದನಂತೆ. ಅವನ ಈ ಆಜ್ಞೆಯ ಅಭಿಪ್ರಾಯವೇನೆಂದರೆ, ಪ್ರತಿಯೊಬ್ಬ ಜೀವಿಗೆ ತಾನು ಎಷ್ಟನ್ನೇ ಸಂಪಾದಿಸಿದ್ದರೂ ಕೊನೆಗಳಿಗೆಯಲ್ಲಿ ಅದೆಲ್ಲವೂ ಹೆರವರ ಪಾಲಾಗಿ ಹೋಗುತ್ತದೆ. ಆದಕಾರಣ ಯಾರೂ ಈ ಐಹಿಕ ಭೋಗಭಾಗ್ಯಗಳ ವ್ಯರ್ಥ ಅಭಿಮಾನ ವನ್ನು ತಾಳಕೂಡದು. ಖ್ಯಾತ ಅನುಭಾವೀ ಸಾಹಿತಿಗಳಾದ ಡಿ.ವಿ.ಜಿ.ಯವರೂ ಸಹ–

> ಬೆತ್ತಲೆಯೆ ನೀಂ ಬಂದೆ ಬೆತ್ತಲೆಯೆ ನೀಂ ಪೋಪೆ।
> ವಸ್ತ್ರವೇಷಗಳೆಲ್ಲ ನಡುವೆ ನಾಲ್ಕುದಿನ॥
> ಚಟ್ಟಕ್ಕೆ ನಿನ್ನನೇರಿಪಮುನ್ನ ನೀನಾಗಿ।
> ಕಿತ್ತೆಸೆಯೋ ಕಂತೆಗಳ –ಮರುಳ ಮುನಿಯ॥

ಈ ತಮ್ಮ 'ಮರುಳ ಮುನಿಯನ ಕಗ್ಗ'ದಲ್ಲಿ ವ್ಯರ್ಥವಾದ ಅಭಿಮಾನದ ಸಂಕೋಲೆಯನ್ನು ಕಿತ್ತೊಗೆಯಬೇಕೆಂಬುದಾಗಿ ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ. ಆದ್ದರಿಂದ ಪ್ರತಿಯೊಬ್ಬರೂ ಶಿವಾಗಮೋಕ್ತವಾದ ಭೃತ್ಯಾಚಾರವನ್ನು ಪರಿಪಾಲಿಸಿ ಮಾಲಿಕತ್ವದ ಸುಳ್ಳು ಅಭಿಮಾನವನ್ನು ಬಿಟ್ಟುಬಿಡುವುದೇ ಯೋಗ್ಯವಾಗಿರುತ್ತದೆ. ಹೀಗೆ ತನ್ನ ತನು–ಮನ–ಧನಗಳ ಮೇಲಿನ ಅಭಿಮಾನವನ್ನು ತ್ಯಜಿಸಿ ಇವೆಲ್ಲವುಗಳು ಈಶ್ವರನವು ಆಗಿರುತ್ತವೆ. ನಾನು ಮಾತ್ರ ಅವನ ಭೃತ್ಯ ಅಥವಾ ಸೇವಕನಾಗಿರುತ್ತೇನೆ ಎಂಬ ಭಾವನೆ ಯನ್ನು ತಾಳುವುದೇ ಭೃತ್ಯಾಚಾರವು.

ತನ್ನಲ್ಲಿ ಏನೆಲ್ಲ ಇದ್ದರೂ ನನ್ನದೇನೂ ಇಲ್ಲ. ಎಲ್ಲವೂ ಈಶ್ವರನದೇ ! ನಾನು ಮಾತ್ರ ಅವನ ಸೇವಕನು ಎಂಬ ಭಾವನೆಯಿಂದ ಯಾರು ಭಗವಂತನ ಭೃತ್ಯರಾಗು ವರೋ ಭಗವಂತನೂ ಸಹ ಅವರ ಭೃತ್ಯನಾಗಿ ಸೇವೆ ಮಾಡುತ್ತಾನೆ. ಸೇವೆಯನ್ನು ಮಾಡುವ ಕಲೆಯು ಗುರುತಿಲ್ಲದ ಕಾರಣದಿಂದಾಗಿ ಜೀವಿಯು ಮಾಲಿಕನಾಗ ಹೋಗಿ ಜೀವನದಲ್ಲಿ ಅನೇಕ ಸಾರೆ ಅಪಮಾನಿತನಾಗುತ್ತಾನೆ.

ಒಬ್ಬ ತಪಸ್ವಿಯು ಓರ್ವ ಶ್ರೀಮಂತನ ಮನೆಯ ಬಾಗಿಲದಲ್ಲಿ ಹೋಗಿ ''ಭವತೀ ಭಿಕ್ಷಾಂ ದೇಹಿ !'' ಎಂಬುದಾಗಿ ಕೂಗಿ ಭಿಕ್ಷೆಯನ್ನು ಬೇಡಿದನು. ಮನೆಯ ಒಡೆಯನು ಅತ್ಯಂತ ಕ್ರೋಧ ಸ್ವಭಾವದವನಾಗಿದ್ದನು. ಸಾಧೂ ಸಂತರನ್ನು–ಭಿಕ್ಷುಕರನ್ನು ನೋಡಿ ದರೆ ಅವನ ಪಿತ್ತ ನೆತ್ತಿಗೇರುತ್ತಿತ್ತು. ಈ ಭಿಕ್ಷುಕರು ಕೆಲಸ ಬೊಗಸೆಯಿಲ್ಲದೆ ಕೇವಲ ಭಿಕ್ಷೆಗಾಗಿಯೇ ತಿರುಗುತ್ತಿರುತ್ತಾರೆಯೆಂಬ ಭಾವನೆಯಿಂದ ಅವನು ಯಾವ ಭಿಕ್ಷುಕರನ್ನೂ ತನ್ನ ಓಣಿಯೊಳಗೆ ಬರಗೊಡುತ್ತಿದ್ದಿಲ್ಲ. ಅಕಸ್ಮಾತ್ ಯಾರಾದರೂ ಅಪ್ಪಿ–ತಪ್ಪಿ ಭಿಕ್ಷುಕರು

ಬಂದರೆ ಅವರಿಗೆ ಘೋರ ಅಪಮಾನಮಾಡಿ ಕಳಿಸುತ್ತಿದ್ದನು. ಹೀಗಾಗಿ ಯಾರೂ ಭಿಕ್ಷುಕರು ಅಲ್ಲಿ ಸುಳಿಯುತ್ತಿರಲಿಲ್ಲ. ಆದರೆ ಇಂದು ಅವನ ಬಾಗಿಲ ಮುಂದೆ ಬಂದ ಭಿಕ್ಷುಕನು ಸಾಮಾನ್ಯ ಭಿಕ್ಷುಕನಾಗಿರದೇ ಓರ್ವ ಸಿದ್ಧಪುರುಷನಾಗಿದ್ದನು. ಈತನನ್ನು ನೋಡಿದ ಕೂಡಲೇ ಆ ಶ್ರೀಮಂತನು ಉಳಿದ ಭಿಕ್ಷುಕರಂತೆ ಇವನಿಗೂ ತುಚ್ಛ ಶಬ್ದಗಳಿಂದ ಬೈದು ಎಲೋ ಭಿಕಾರಿ ! ನೀನೆಲ್ಲಿಂದ ಬಂದೆ ? ತೊಲಗಾಚೆ'' ಎಂದು ರೇಗಿ ನುಡಿದನು. ಆ ಭಿಕ್ಷುಕನು– ''ನಾನು ಇಲ್ಲಿಗೆ ಬಂದಿರುವೆನೆಂದರೆ ಖಾಲೀಕೈಯಿಂದ ಮರಳಿ ಹೋಗುವವನಲ್ಲ, ನಿನ್ನಿಂದ ಏನಾದರೂ ಪಡೆದುಕೊಂಡೇ ಹೋಗುತ್ತೇನೆ'' ಎಂದು ಛಲದಿಂದ ಉತ್ತರಿಸಿದನು. ''ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಾಯ ಗಚ್ಛತಿ'' ಎಂಬ ಪ್ರಮಾಣ ವಚನದಂತೆ ನಿಜವಾದ ಅರ್ಥದಲ್ಲಿ ಯಾವ ಭಿಕ್ಷುಕನೂ ಖಾಲೀ ಕೈಯಿಂದ ಹೋಗುವುದಿಲ್ಲ, ಅವನಿಗೆ ಏನನ್ನಾದರೂ ಕೊಟ್ಟರೆ ಕೊಟ್ಟಷ್ಟನ್ನು ತೆಗೆದುಕೊಂಡು ಹೋಗುತ್ತಾನೆ. ಒಂದು ವೇಳೆ ಏನನ್ನೂ ಕೊಡದೇ ಇದ್ದರೆ ಆ ಮನೆಯ ಯಜಮಾನನ ಪುಣ್ಯವನ್ನೇ ತೆಗೆದುಕೊಂಡು ಹೋಗುತ್ತಾನೆ. ಆದ ಕಾರಣ ಮನೆಗೆ ಬಂದ ಭಿಕ್ಷುಕನನ್ನು –'ನಡೆಯಾಚೆಗೆ' ಎಂದು ತಳ್ಳಕೂಡದು. ಭಿಕ್ಷುಕನು ನುಡಿದ ಛಲದ ನುಡಿಗಳನ್ನು ಕೇಳಿ ಕ್ರುದ್ಧನಾದ ಆ ಶ್ರೀಮಂತನು ತನ್ನ ಸೇವಕರಿಂದ ಆತನನ್ನು ಹೊಡೆಯಿಸಿ–ಬಡೆಯಿಸಿ ಹೊರಗೆ ನೂಕಿಸಿದನು. ಹೀಗೆ ಅಪಮಾನಿತನಾದ ಆ ತಪಸ್ವಿಯು ತನ್ನ ಆಶ್ರಮಕ್ಕೆ ಮರಳಿ ಬಂದು 'ಐಹಿಕ ಸಂಪತ್ತಿನ ಅಭಿಮಾನ'ದಲ್ಲಿ ಧರ್ಮವನ್ನೇ ತಿರಸ್ಕರಿಸುತ್ತಿರುವ ಈತನನ್ನು ಹೇಗೆ ಸುಧಾರಿಸಬೇಕು ? ಎಂಬುದಾಗಿ ಯೋಚಿಸಿ ಒಂದು ನಿರ್ಣಯಕ್ಕೆ ಬಂದನು. ಸಾವುಕಾರನು ಯಾವುದೋ ಕಾರ್ಯ ನಿಮಿತ್ತವಾಗಿ ಪರಗ್ರಾಮಕ್ಕೆ ಹೋದಾಗ ಆತನು ಮರಳಿ ಬರುವ ದಿನವೇ ಅವನಿಗಿಂತಲೂ ಪೂರ್ವದಲ್ಲಿ ಈ ಯೋಗಿಯು ತನ್ನ ಯೋಗ ಸಾಮರ್ಥ್ಯದಿಂದ ಅವನಂತೆಯೇ ರೂಪವನ್ನು ಧರಿಸಿ ಅವನ ಮನೆಯನ್ನು ಪ್ರವೇಶಿಸಿದನು. ಮನೆಯೊಳಗೆ ಹೋದವನೇ ಪರಿವಾರದವರನ್ನು ಹಾಗೂ ಸೇವಕರನ್ನೂ ಕರೆದು ಇಂದು ನಮ್ಮೂರಿಗೆ ಓರ್ವ ಬಹುರೂಪೀ ಬಂದಿದ್ದಾನೆ. ಅವನು ಆಯಾ ಮನೆಯ ಯಜಮಾನರ ವೇಷವನ್ನು ಧರಿಸಿ, ಅವರ ಮನೆಗಳನ್ನು ಪ್ರವೇಶಿಸಿ ಎಲ್ಲರನ್ನೂ ಮೋಸಗೊಳಿಸುತ್ತಿದ್ದಾನೆ. ಕಾರಣ ಅವನು ನಮ್ಮ ಮನೆಗಾದರೂ ಬರಬಹುದು. ನನ್ನಂತೆ ವೇಷಧರಿಸಿ ಯಾರೇ ಬಂದರೂ ಅವರನ್ನು ಒಳಗೆ ಬಿಡಕೂಡದು ಎಂಬುದಾಗಿ ಅವರಿಗೆ ಕಟ್ಟುನಿಟ್ಟಾಗಿ ಆಜ್ಞಾಪಿಸಿದನು. ಹೀಗೆ ಸಾವುಕಾರನ ವೇಷಧರಿಸಿದ ಯೋಗಿಯು ಆದೇಶ ಮಾಡಿದ ಕೆಲವೇ ಘಳಿಗೆಯಲ್ಲಿ ಆ ಮನೆಯ ಯಜಮಾನನಾದ ಸಾಹುಕಾರನು ಮನೆಯ ಅಂಗಳಕ್ಕೆ ಬಂದು ಇನ್ನೇನು ಮನೆಯನ್ನು ಪ್ರವೇಶಿಸಬೇಕೆನ್ನುವಷ್ಟರೊಳಗಾಗಿ ಬಾಗಿಲ ಬಳಿ ನಿಂತಿರುವ ದ್ವಾರ ಪಾಲಕರು ಈತನನ್ನು ಹೊರಗೆ ತಳ್ಳಿ ''ನೀನ್ಯಾರೆಂಬುದನ್ನು ನಾವು ಚೆನ್ನಾಗಿ ಬಲ್ಲೆವು. ನಮ್ಮ ಮಾಲಿಕನ ವೇಷಧರಿಸಿ ನಮಗೆ ಮೋಸಮಾಡಲು ಬಂದ ವೇಷಧಾರಿಯು ನೀನು, ಎಲ್ಲರನ್ನೂ ಮೋಸಗೊಳಿಸಿದಂತೆ ನಮ್ಮನ್ನೂ ಮೋಸಗೊಳಿಸಲಾರೆ ! ನಡೆಯಾಚೆಗೆ !'' ಎಂದು ತಿರಸ್ಕರಿಸಿ ನುಡಿದರು. ಮನೆಯೊಳಗಿದ್ದ ಆತನ ಹೆಂಡಿರು ಮಕ್ಕಳೂ ಸಹ ಅವನಿಗೆ ಛೀ–ಥೂ ಹಾಕಿ ಅಪಮಾನಿಸಿದರು. ಹೀಗೆ ಎಲ್ಲರಿಂದ ತಿರಸ್ಕೃತನಾದ ಆ ಸಾಹುಕಾರನು

ಅನಿವಾರ್ಯವಾಗಿ ನ್ಯಾಯಾಲಯದ ಮೊರೆ ಹೋಗಬೇಕಾಯಿತು. ಅಲ್ಲಿ ನ್ಯಾಯಾಧೀಶರು ಯೋಗ್ಯ ನಿರ್ಣಯವನ್ನು ತೆಗೆದುಕೊಳ್ಳುವ ಉದ್ದೇಶದಿಂದ ಇಬ್ಬರನ್ನೂ ನ್ಯಾಯಾಲಯಕ್ಕೆ ಬರಹೇಳಿದರು. ಇಬ್ಬರ ಸ್ವರೂಪವನ್ನು ಒಂದೇ ರೀತಿಯಾಗಿ ಕಂಡ ನ್ಯಾಯಾಧೀಶರು ಇವರೀರ್ವರಲ್ಲಿ ನಿಜವಾದ ಸಾಹುಕಾರನು ಯಾರು ? ಹಾಗೂ ವೇಷಧಾರಿ ಸಾಹುಕಾರನಾರು ? ಎಂಬುದನ್ನು ನಿರ್ಣಯಿಸಲು ಅಸಮರ್ಥರಾದರು. ಆಗ ಸಾಹುಕಾರನ ವೇಷಧರಿಸಿದ ಆ ಯೋಗಿಯು ನ್ಯಾಯಾಧೀಶರನ್ನುದ್ದೇಶಿಸಿ ''ಭೋ ! ನ್ಯಾಯವಾದಿಗಳೇ ನಮ್ಮೀರ್ವರಲ್ಲಿ ಯಾರು ನಿಜವಾದ ಮಾಲಿಕರೆಂಬುದನ್ನು ಗುರುತಿಸಬೇಕಾದರೆ ಇಬ್ಬರಿಂದಲೂ ಮನೆಯಲ್ಲಿಯ ವಸ್ತು-ವಡವೆಗಳ ಯಾದಿಯನ್ನು ಬರೆಯಿಸಿಕೊಳ್ಳಿರಿ. ಯಾರ ಯಾದಿಯ ಪ್ರಕಾರ ಎಲ್ಲ ವಸ್ತುಗಳು ಯಥಾವತ್ತಾಗಿ ಇರುತ್ತವೆಯೋ ಅವನೇ ಮಾಲಿಕನೆಂದು ನಿರ್ಣಯಿಸಿರಿ'' ಎಂದು ಸಲಹೆಯಿತ್ತನು. ಈತನು ಹೇಳಿದ ಸಲಹೆಯು ನ್ಯಾಯಾಧೀಶರಿಗೆ ಯೋಗ್ಯವೆನಿಸಿತು. ಅದೇ ಪ್ರಕಾರ ಇಬ್ಬರಿಗೂ ಯಾದಿ ಒಪ್ಪಿಸಲು ಆಜ್ಞಾಪಿಸಿದರು. ಯೋಗಿಯು ಸರ್ವಜ್ಞನೂ, ಸಿದ್ಧಿ ಸಾಮರ್ಥ್ಯ ಹೊಂದಿದವನೂ ಆಗಿದ್ದರಿಂದ ಮನೆಯೊಳಗಿನ ಪ್ರತಿಯೊಂದು ವಸ್ತುವಿನ ಯಾದಿಯನ್ನು ಯಥಾವತ್ತಾಗಿ ತಯಾರಿಸಿ ಬರೆದು ಕೊಟ್ಟನು. ಈ ಸಾಹುಕಾರನಾದರೂ ಗಾಬರಿ ಗಾಬರಿಯಾಗಿ, ಹೇಗೋ ಯಾದಿಯನ್ನು ತಯಾರಿಸಿಕೊಟ್ಟನು. ಈರ್ವರ ಯಾದಿಯ ಪ್ರಕಾರ ನ್ಯಾಯವಾದಿಗಳು ಮನೆಗೆ ಹೋಗಿ ಸಾಮಗ್ರಿಗಳನ್ನು ಪರೀಕ್ಷಿಸಲಾಗಿ ಸಾಹುಕಾರ ವೇಷದ ಯೋಗಿಯು ಬರೆದುಕೊಟ್ಟ ಯಾದಿಯ ಪ್ರಕಾರ ಸಾಮಾನುಗಳಿದ್ದವೇ ವಿನಃ ನಿಜವಾದ ಸಾಹುಕಾರನು ಕೊಟ್ಟ ಯಾದಿಯ ಪ್ರಕಾರ ಸಾಮಾನುಗಳಿರಲಿಲ್ಲ, ಆಗ ನ್ಯಾಯಾಧೀಶರು ಸಾಹುಕಾರ ವೇಷಧಾರಿಯಾದ ಯೋಗಿಯೇ ಮನೆಯ ಮಾಲಿಕನೆಂಬುದಾಗಿ ನಿರ್ಣಯಿಸಿ ಘೋಷಿಸಿದರು. ಈ ನಿರ್ಣಯದಿಂದ ನಿರುಪಾಯನಾದ ಸಾಹುಕಾರನು ನಿರಾಶನಾಗಿ ನನ್ನವರು-ತನ್ನವರು ಎಂದು ನಾನೆಷ್ಟು ಬಡಿದಾಡಿದರೂ ನನಗೆ ಕಷ್ಟ ಬಂದಾಗ ನನ್ನವರಾರೂ ನನ್ನನ್ನು ಗುರುತಿಸಲಿಲ್ಲ ಹಾಗೂ ನಂಬಲಿಲ್ಲ, ಆದ ಕಾರಣ ಈ ಜಗತ್ತಿನಲ್ಲಿ ಎಲ್ಲರೂ ಸ್ವಾರ್ಥಿಗಳೇ ಎಂಬುದಾಗಿ ವಿಚಾರಿಸಿ ಊರ ಹೊರಗಿರುವ ಒಂದು ಹಾಳು ದೇವಾಲಯದಲ್ಲಿ ಹೋಗಿ ನಿಟ್ಟುಸಿರುಬಿಡುತ್ತ ಕುಳಿತನು. ಒಂದೆರಡು ದಿನಗಳವರೆಗೆ ತಾನು ಬಿಟ್ಟುಬಂದ ಮನೆ-ಮಡದಿ-ಮಕ್ಕಳ ಬಗ್ಗೆ ಆಲೋಚಿಸಿ, ಆಲೋಚಿಸಿ ಸ್ವಾರ್ಥಪರವಾದ ಸಂಸಾರದ ಬಗ್ಗೆ ಜಿಗುಪ್ಸೆಯನ್ನು ತಾಳಿ ಎಲ್ಲರನ್ನೂ ಮರೆತು ಶಿವನೇ ತನಗೆ ಗತಿಯೆಂದು ನಂಬಿ ಆ ಶಿವಾಲಯದೊಳಗಿನ ಶಿವಲಿಂಗವನ್ನು ಆರಾಧಿಸುತ್ತ ಜಲಾಹಾರಿಯಾಗಿ ಮೂರ್‍ನಾಲ್ಕು ದಿನಗಳನ್ನು ಕಳೆದನು. ಇತ್ತ ಸಾಹುಕಾರನ ವೇಷದಲ್ಲಿದ್ದ ಶಿವಯೋಗಿಯು ತನ್ನ ಅಂತರ್ದೃಷ್ಟಿಯಿಂದ ಆ ಸಾಹುಕಾರನಿಗೆ ಸಂಸಾರದ ಬಗ್ಗೆ ವಿರಕ್ತಿ ಭಾವನೆಯು ಬಂದದ್ದು ತಿಳಿದು ಅವನಿದ್ದಲ್ಲಿಗೆ ತನ್ನ ಮೊದಲಿನ ಶಿವಯೋಗಿ ರೂಪದಲ್ಲಿ ಬಂದು ನಿಂತನು. ಆ ಶಿವಯೋಗಿಯನ್ನು ನೋಡಿದ ಕೂಡಲೆ ಸಾಹುಕಾರನು ನಾಚಿಕೆಯಾಗಿ ತಲೆತಗ್ಗಿಸಿದನು. ಆಗ ಶಿವಯೋಗಿಯು '' ಏನು ಸಾಹುಕಾರರೇ ! ನಿಮ್ಮ ಆ ಮನೆ, ಆ ಮಡದಿಮಕ್ಕಳು ಐಶ್ವರ್ಯವನ್ನೆಲ್ಲ ಬಿಟ್ಟು ಈ ಹಾಳುದೇವಾಲಯದಲ್ಲೇಕೆ ಬಂದು ಕುಳಿತಿರುವಿರಿ ?''

ಎಂದು ಪ್ರಶ್ನಿಸಿದಾಗ ಆ ಸಾಹುಕಾರನು ಹೇ ಯೋಗಿವರ್ಯನೇ ! ಸಂಸಾರದಲ್ಲಿ ಎಲ್ಲರೂ ಸ್ವಾರ್ಥಿಗಳೇ ! ಸದ್ಯ ನನ್ನವರು– ತನ್ನವರೆನ್ನುವರ್ಯಾರೂ ಇಲ್ಲ, ನನ್ನ ಆಳುಗಳೇ ನನ್ನನ್ನು ಹೊಡೆದು ಹೊರ ನೂಕಿದ್ದಾರೆ. ಆದ ಕಾರಣ ಆ ಮನೆ, ಮಡದಿಗಳ ಸುದ್ದಿಯನ್ನೇ ತೆಗೆಯಬೇಡಿರಿ ಎಂಬುದಾಗಿ ದೈನ್ಯದಿಂದ ನುಡಿದನು. ಇವನ ಮನಸ್ಸಿನಲ್ಲುಂಟಾದ ಈ ವಿರಕ್ತಿಭಾವವನ್ನು ಮನಗಂಡ ಶಿವಯೋಗಿಯು ಆತನೆದುರಿನಲ್ಲಿಯೇ ಮತ್ತೆ ಆ ಸಾಹುಕಾರನ ರೂಪದಲ್ಲಿ ಪ್ರಕಟವಾಗಿ ನೋಡು ಅತಿಥಿಯಾಗಿ ನಿನ್ನ ಬಾಗಿಲ ಮುಂದೆ ನಾನು ಬಂದಾಗ ನಿನ್ನ ಸೇವಕರಿಂದ ಹೊಡೆಸಿ ನನ್ನನ್ನು ಹೊರದೂಡಿಸಿದ್ದೆ, ಶ್ರೀಮಂತಿಕೆ ಬಂದಾಗ ಅದರ ಅಮಲಿನಲ್ಲಿ ಅತಿಥಿಗಳನ್ನು ಅಪಮಾನಗೊಳಿಸುವುದು ನಮ್ಮ ಸಂಸ್ಕೃತಿಯಲ್ಲ, ನಿನಗೆ ಪಶ್ಚಾತ್ತಾಪವನ್ನುಂಟು ಮಾಡುವುದಕ್ಕಾಗಿ ನಾನೇ ನಿನ್ನ ರೂಪವನ್ನು ತಾಳಿ ನಿನ್ನ ಸೇವಕರಿಂದ ನಿನ್ನನ್ನು ಅಪಮಾನಗೊಳಿಸಿದೆ. ಈಗ ನಿನಗೆ ತಪ್ಪಿನ ಅರಿವುಂಟಾಗಿದೆ. ನಿನ್ನ ತಪ್ಪನ್ನು ಮನ್ನಿಸಿದ್ದೇನೆ ನಡೆ ಮನೆಗೆ ಹೋಗು, ಮೊದಲಿನಂತೆ ಪುನಃ ವ್ಯವಹಾರಾದಿಗಳನ್ನು ನೋಡಿಕೊಂಡು ಏನೆಲ್ಲ ವ್ಯವಹಾರವನ್ನು ಮಾಡಿದರೂ ಇದೆಲ್ಲ ಈಶ್ವರನದೆಂಬ ಭಾವನೆಯನ್ನು ತಾಳಿಕೊಂಡು ವ್ಯವಹರಿಸು ಎಂಬುದಾಗಿ ಉಪದೇಶಮಾಡಿ ಆತನನ್ನು ಕರೆದುಕೊಂಡು ಹೋಗಿ ಆತನ ಮನೆಗೆ ತಲುಪಿಸಿದನು. ತನ್ನ ಜೀವನದಲ್ಲುಂಟಾದ ಈ ಅವಿಸ್ಮರಣೀಯ ಘಟನೆಯನ್ನು ಸದಾ ಸ್ಮರಿಸುತ್ತ ನಾನು ನನ್ನದೆಂಬ ಅಭಿಮಾನವನ್ನು ತ್ಯಾಗ ಮಾಡಿ ಇದೆಲ್ಲವೂ ಈಶ್ವರನದೇ ಎಂಬ ಭಾವನೆಯನ್ನು ತಾಳಿ ಜೀವನದ ಕೊನೆಯತನಕ ಅತಿಥಿ ಅಭ್ಯಾಗತರ ಸೇವೆ– ಸತ್ಕಾರಗಳನ್ನು ಮಾಡುತ್ತ ಕಾಲಹರಣ ಮಾಡಿದನು.

ಈ ತೆರನಾಗಿ ನಮಗೆ ಪ್ರಾಪ್ತವಾದ ವಸ್ತುಗಳಿಗೆಲ್ಲ ನಾವು ಮಾಲಿಕರಾಗಿರದೆ ಭಗವಂತನೇ ಎಲ್ಲದರ ಒಡೆಯನಾಗಿದ್ದಾನೆ. ನಾನು ಮಾತ್ರ ಅವನ ಸೇವಕನಾಗಿದ್ದೇನೆ ಎಂಬ ಭಾವನೆಯು ಯಾರಲ್ಲಿ ಬರುವುದೋ ಅವನು ಭೃತ್ಯಾಚಾರಿ ಎನಿಸಿಕೊಳ್ಳುವನು ಮತ್ತು ಸದಾ ಸುಖಿಯಾಗಿಯೂ ಇರುವನು. ಮಾಲಿಕನಾಗುವ ಭ್ರಮೆಯು ಯಾರ ಮನಸ್ಸಿನಲ್ಲಿಯಾದರೂ ಬಂದರೆ ಅವರು ನಿಶ್ಚಿತವಾಗಿಯೂ ದುಃಖಿಗಳೇ ಆಗುತ್ತಾರೆ. ಲೌಕಿಕ ಜೀವನದಲ್ಲಿಯೂ ಸಹ ಮನೆಯ ಮಾಲಕನಿಗಿಂತಲೂ ನೌಕರನೇ ಹೆಚ್ಚು ಸುಖಿಯಾಗಿರುವುದನ್ನು ಕಾಣುತ್ತೇವೆ. ಜವಾಬ್ದಾರಿ ಬೆಳೆದಂತೆಲ್ಲ ಮನಸ್ಸಿನ ಮೇಲೆ ಒತ್ತಡಗಳು ಹೆಚ್ಚಾಗಿ ಆತನು ನೈಜ ಸುಖದಿಂದ ವಂಚಿತನಾಗುತ್ತಾನೆ. ಸೇವಕನಾದವನು ತನ್ನ ಪಾಲಿನ ಆಂದಿನ ಕೆಲಸವನ್ನು ಮಾಡಿ ನಿಶ್ಚಿಂತನಾಗಿ ಮಲಗಿಕೊಳ್ಳುತ್ತಾನೆ. ಆದರೆ ಮಾಲಿಕನಾದವನಿಗೆ ಬೇಗನೆ ನಿದ್ರೆಯೇ ಬರುವುದಿಲ್ಲ, ಆದುದರಿಂದ ಇಹದಲ್ಲಿ ಸುಖಮಯ ಜೀವನವನ್ನು ಸಾಗಿಸಬೇಕಾದರೆ ತನ್ನೆಲ್ಲ ಜವಾಬ್ದಾರಿಯನ್ನು ಶಿವನ ಮೇಲೆ ಇರಿಸಿ ತನ್ನನ್ನು ಅವನ ಸೇವಕನನ್ನಾಗಿ ಭಾವಿಸಿ ಅಂದಂದಿನ ಕೆಲಸ ಕಾರ್ಯಗಳನ್ನು ಮಾಡುತ್ತ ಹೋದರೆ ಅವನು ನಿಚ್ಚ ಸುಖಿಯಾಗುವುದರಲ್ಲಿ ಸಂಶಯವಿಲ್ಲ,

ಪೂಜ್ಯಪಾದರಾದ ರೇಣುಕರು–

ಶಿವಯೋಗಿ ಶಿವಃ ಸಾಕ್ಷಾದಿತಿ ಕೈಂಕರ್ಯಭಕ್ತಿತಃ।<br>
ಪೂಜಯೇದಾದರೇಣೈವ ಯಥಾ ಲಿಂಗಂ ಯಥಾ ಗುರುಃ।

(ಸಿ.ಶಿ. ೯–೬೭)

ಎಂಬುದಾಗಿ ಉಪದೇಶಿಸಿ ಗುರು ಹಾಗೂ ಲಿಂಗಗಳ ಬಗ್ಗೆ ಭೃತ್ಯಭಾವವನ್ನು ತಾಳಿದಂತೆ ಶಿವಯೋಗಿ ಅರ್ಥಾತ್ ಜಂಗಮನಲ್ಲಿಯೂ ಭೃತ್ಯಭಾವವನ್ನು ತಾಳಬೇಕೆಂಬುದಾಗಿ ಉಪದೇಶಿಸಿದ್ದಾರೆ. ಅಂದರೆ ನಾನು ಗುರುಲಿಂಗ ಜಂಗಮರ ಭೃತ್ಯನು ಅರ್ಥಾತ್ ಸೇವಕನು ಎಂಬುದಾಗಿ ಭಾವಿಸಿ ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು ಮತ್ತು ಜಂಗಮಕ್ಕೆ ಧನವನ್ನು ಸಮರ್ಪಿಸಿ ಅವುಗಳ ಮೇಲಿನ ಅರ್ಥಾತ್ ತನು, ಮನ, ಧನಗಳ ಮೇಲಿರುವ ಸಂಪೂರ್ಣ ಮಮತ್ವ ಭಾವನೆಯನ್ನು ತೊರೆದಿರುವುದೇ ವೀರಭೃತ್ಯ ಭಾವವೆನಿಸುವುದು. ಇಂತಹ ವೀರಭೃತ್ಯಭಾವವನ್ನು ಹೊಂದಿದ ಭಕ್ತನೇ ಶಿವನ ಅನುಗ್ರಹವನ್ನು ಪಡೆಯಬಲ್ಲನು. ಇದನ್ನೇ ಚಂದ್ರಜ್ಞಾನಾಗಮದಲ್ಲಿ–

> ದೇಶಿಕಾಯ ತನುಂ ಚಿತ್ತಂ ಶಂಭವೇಚ ಧನಂ ತಥಾ ।
> ಜಂಗಮಾಯ ಸಮರ್ಪ್ಯೈವಂ ಮಹೋತ್ಸಾಹ ಸಮನ್ವಿತಃ ॥
>
> ಮುಕ್ತಿಮೇವ ಪರಾಂ ಕಾಂಕ್ಷಮಾಣಂ ಯದವತಿಷ್ಠತೇ ।
> ತನ್ಮತಂ ವೀರಭೃತ್ಯತ್ವಂ ಶಿವಾನುಗ್ರಹಸಾಧನಮ್ ॥
>
> (ಚ.ಜ್ಞಾ. ಕ್ರಿಯಾಪದ ೯/೧೨೫–೧೨೬)

ಈ ವಿಧವಾಗಿ ಉಪದೇಶಿಸಲಾಗಿದೆ. ಗುರು–ಲಿಂಗ–ಜಂಗಮರಿಗೆ ಕ್ರಮವಾಗಿ ತನು–ಮನ–ಧನಗಳನ್ನು ಸಮರ್ಪಿಸಿ ಅತ್ಯಂತ ಸಂತುಷ್ಟಚಿತ್ತನಾದ ಮತ್ತು ಕೇವಲ ಮುಕ್ತಿಯನ್ನು ಮಾತ್ರ ಅಪೇಕ್ಷಿಸುವ ಭಕ್ತನಿಗೆ ವೀರ–ಭೃತ್ಯನೆಂದು ಕರೆಯುವರು. ಇಂತಹ ವೀರಭೃತ್ಯನ ಮೇಲೆ ಸಹಜವಾಗಿಯೇ ಶಿವಾನುಗ್ರಹವು ಪ್ರಾಪ್ತವಾಗುವುದು.

ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟ ಈ ಭೃತ್ಯಾಚಾರವು ತನ್ನಲ್ಲಿಯ ಅಹಂಕಾರವನ್ನು ಕಳೆದುಕೊಳ್ಳುವ ಒಂದು ಅಮೋಘವಾದ ಸಾಧನವಾಗಿದೆ. ಅಹಂಕಾರವು ಅದಃಪತನಕ್ಕೆ ಕಾರಣವಾದರೆ ಭೃತ್ಯಾಚಾರವು ಪರಮೋನ್ನತಿಯ ಸಾಧನವಾಗಿದೆ. ಈ ಪೂರ್ವದಲ್ಲಿ ವಿವರಿಸಿದ ಲಿಂಗಾಚಾರ, ಸದಾಚಾರ, ಶಿವಾಚಾರ ಮತ್ತು ಗಣಾಚಾರಗಳನ್ನು ನಿಷ್ಠಾಪೂರ್ವಕವಾಗಿ ಪರಿಪಾಲನೆ ಮಾಡುತ್ತಿರುವಾಗ ಆಕಸ್ಮಾತ್ತಾಗಿ ಸಾಧಕನ ಮನದಲ್ಲಿ ನನ್ನಂತಹ ಆಚಾರಶೀಲರು ಬೇರಾರಿದ್ದಾರೆ ? ಎಂಬ ಅಹಂಭಾವನೆಯು ಒಡಮೂಡುವ ಸಾಧ್ಯತೆ ಇರುತ್ತದೆ. ಅಂತೆಯೇ ಈ ಭಾವನೆಯು ಬರಬಾರದೆಂದೇ ಕೊನೆಗೆ ಭೃತ್ಯಾಚಾರವನ್ನು ಉಪದೇಶಿಸಲಾಗಿದೆ. ಈ ಭೃತ್ಯಾಚಾರದಿಂದಲೇ ಸಮಾಜದಲ್ಲಿ ಸಮತೆ ಹಾಗೂ ಶಾಂತಿಗಳನ್ನು ಪ್ರತಿಷ್ಠಾಪಿಸಲು ಸಾಧ್ಯವಾಗುವುದು. ಅನ್ಯತಃ ಸರ್ವರೂ ಅಭಿಮಾನಿಗಳೂ, ಅಹಂಕಾರಿಗಳೂ ಆದರೆ ಸುಂದೋಪಸುಂದ ನ್ಯಾಯದಂತೆ ವಿನಾಶ ಹಾಗೂ ಅಶಾಂತಿಗಳೇ ಸಮಾಜದಲ್ಲಿ ತಾಂಡವವಾಡುವವು. ಆದ್ದರಿಂದ ಸರ್ವತ್ರ ಶಾಂತಿಯನ್ನು ಸ್ಥಾಪಿಸಲು ಸರ್ವರೂ ಈ ಭೃತ್ಯಭಾವವನ್ನು ಅಳವಡಿಸಿಕೊಳ್ಳಬೇಕು.

ಇಲ್ಲಿಯವರೆಗೆ ಉಪದೇಶಿಸಲ್ಪಟ್ಟ ಈ ಪಂಚಾಚಾರಗಳನ್ನು ಯಾರು ನಿಷ್ಠೆಯಿಂದ ಪರಿಪಾಲಿಸುತ್ತಾರೋ ಅವರ ಜೀವನವು ಸುಖಮಯವಾಗುವುದರಲ್ಲಿ ಸಂದೇಹವಿಲ್ಲ. ಆಚಾರಹೀನನಾದ ಮನುಷ್ಯನು ತತ್ತ್ವಜ್ಞಾನಿಯಾಗಿದ್ದರೂ ಸಮಾಜದಲ್ಲಿ ಅಗೌರವಕ್ಕೆ

ಪಾತ್ರನಾಗುತ್ತಾನೆ. ಆದ್ದರಿಂದ ಜ್ಞಾನದಷ್ಟೇ ಆಚಾರಕ್ಕೂ ಸಹ ಪ್ರತಿಯೊಬ್ಬರೂ ಮಹತ್ತ್ವವನ್ನು ಕೊಡಬೇಕು. ಹೀಗೆ ಇಲ್ಲಿಯವರೆಗೆ ಉಪದೇಶಿಸಲ್ಪಟ್ಟ ಪಂಚಾಚಾರಗಳ ಬಗ್ಗೆ ಶಿಷ್ಯರಲ್ಲಿ ಪರಿಜ್ಞಾನವನ್ನು ಮೂಡಿಸಿ ಅವರನ್ನು ಆಚಾರಶೀಲರನ್ನಾಗಿ ಮಾಡುವುದರ ಜೊತೆಗೆ ಆ ಆಚರಣೆಗಳನ್ನು ತಾನೂ ಸ್ವತಃ ಆಚರಿಸುವವನೇ ಆಚಾರ್ಯನೆಂದು ಕರೆಯಿಸಿಕೊಳ್ಳುತ್ತಾನೆ. ಅಂತೆಯೇ ಪೂಜ್ಯಪಾದರು–

> ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।
> ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಚೋಚ್ಯತೇ ॥

(ಸಿ.ಶಿ. ೧೫–೯)

ಈ ರೀತಿಯಾಗಿ ಉಪದೇಶಿಸಿ ಆಚಾರ್ಯನ ಲಕ್ಷಣವನ್ನು ನಿರೂಪಿಸಿದ್ದಾರೆ. ಅಂತೆಯೇ ವೀರಶೈವ ಪರಂಪರೆಯಲ್ಲಿ ಆಚಾರಶೀಲರಾದ ಮತ್ತು ಸಮಾಜಕ್ಕೆ ಆಚಾರವನ್ನು ಕಲಿಸುವ ಗುರುಗಳಿಗೆ ಅರ್ಥಾತ್ ಪಟ್ಟಾಧ್ಯಕ್ಷರಿಗೆ ಮತ್ತು ಜಗದ್ಗುರುಗಳಿಗೆ ಕ್ರಮವಾಗಿ ಶಿವಾಚಾರ್ಯ, ಮಹಾಚಾರ್ಯ ಎಂಬುದಾಗಿ ಕರೆಯುತ್ತಾರೆ. ಕಾರಣ ಪ್ರತಿಯೊಬ್ಬ ವೀರಶೈವರು ಶಿವಾಚಾರ್ಯರು ಉಪದೇಶಿಸಿದಂತೆ ಎಲ್ಲರೂ ಆಚಾರಶೀಲರಾಗಿ ರೆಂಬುದಾಗಿ ಉಪದೇಶಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಆಗಷ್ಟ್ ೧೯೭೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ)



# ದೀಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀಸಿದ್ಧಾಂತ ಶಿಖಾಮಣಿಯಲ್ಲಿಯ ಲಿಂಗ ಷಟ್‌ಸ್ಥಲಾಂತರ್ಗತ ಭಕ್ತಸ್ಥಲದಲ್ಲಿಯ ಮೊದಲನೇ ಅವಾಂತರ ಸ್ಥಲವಾದ ದೀಕ್ಷಾಗುರುಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನ ಗಳನ್ನು ಆಲಿಸುತ್ತಿದ್ದೀರಿ. ಗುರುವಿಗೆ ಆಚಾರ್ಯನೆಂಬುದಾಗಿ ಏಕೆ ಕರೆಯುತ್ತಾರೆ ? ಎಂಬ ವಿಷಯವು ಈಗಾಗಲೇ ನಿಮಗೆ ಸವಿಸ್ತಾರವಾಗಿ ತಿಳಿದುದಾಗಿದೆ. ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟ ಪಂಚಾಚಾರಗಳ ಹಾಗೂ ಅವುಗಳ ಅವಾಂತರಗಳಾದ ಎಲ್ಲ ಶೀಲಗಳನ್ನು ಸ್ವತಃ ಆಚರಿಸುವವನಾಗಿ ಶಿಷ್ಯರಿಗೂ ಸಹ ಅವುಗಳ ಮಹತ್ತ್ವವನ್ನು ತಿಳಿಸಿ, ಅವರನ್ನೂ ಆಚಾರಯುಕ್ತರನ್ನಾಗಿ ಮಾಡುವ ಸದ್ಗುರುವಿಗೇನೇ 'ಆಚಾರ್ಯ'ನೆಂಬು ದಾಗಿ ಕರೆಯುತ್ತಾರೆ. ಆಚಾರ್ಯನಿಗೇ ದೇಶಿಕನೆಂದು ಇನ್ನೊಂದು ಪರ್ಯಾಯ ನಾಮವಿದೆ. ಇದನ್ನೇ ಪೂಜ್ಯರು ಪುನಃ –

ಷಡಧ್ವಾತೀತಯೋಗೇನ ಯತತೇ ಯಸ್ತು ದೇಶಿಕಃ।
ಮಾಯಾಬ್ಧಿತಾರಣೋಪಾಯಹೇತುರ್ವಿಶ್ವಗುರುಃ ಶಿವಃ॥

(ಸಿ.ಶಿ.೧೫–೧೦)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ವರ್ಣಾಧ್ವಾದಿ ಷಡಧ್ವಗಳನ್ನು ಮೀರಿದ ಶಿವಯೋಗದಿಂದ ಶಿವನೊಂದಿಗೆ ಸಾಮರಸ್ಯರೂಪವಾದ ಐಕ್ಯಸ್ಥಿತಿಯನ್ನು ಪಡೆದ ದೇಶಿಕನೇ ಮಹಾಮಾಯೆಯೆಂಬ ಸಮುದ್ರವನ್ನು ದಾಂಟಿಸುವ ಉಪಾಯವನ್ನು ತೋರಿಸಿಕೊಡುವ ವಿಶ್ವಗುರುವಾಗಿರುತ್ತಾನೆ. ''ಜ್ಞಾನಾನ್ಮುಕ್ತಿಂ ದಿಶತಿ ಯಃ ಸ ದೇಶಿಕ ಇತಿ ಸ್ಮೃತಃ'' ಎಂಬ ಕಾಮಿಕಾಗಮದ ಉಕ್ತಿಯಂತೆ ಪರಶಿವಬ್ರಹ್ಮ ಸ್ವರೂಪವನ್ನು ತಿಳುಹಿಸಿಕೊಡುವ ಕಾರಣದಿಂದಲೇ ಈತನಿಗೆ ದೇಶಿಕನೆಂಬುದಾಗಿ ಕರೆಯಲಾಗಿದೆ.

ಆತ್ಮ–ಪರಮಾತ್ಮರ ವಾಸ್ತವಿಕ ಜ್ಞಾನವಿಲ್ಲದ ಮೂಲಕವಾಗಿಯೇ ಪ್ರತಿಯೊಂದು ಜೀವಿಯು ಸಾಂಸಾರಿಕ ಬಂಧನಕ್ಕೊಳಗಾಗುತ್ತಾನೆ. ಈ ಬಂಧನದಿಂದ ಬಿಡುಗಡೆ ಯಾಗಬೇಕಾದರೆ ಆತ್ಮಜ್ಞಾನಸಂಪನ್ನನಾದ ದೇಶಿಕನೆಂದು ಕರೆಯಿಸಿಕೊಳ್ಳುವ ಈ ಸದ್ಗುರುವಿನ ಉಪದೇಶವು ಪರಮಾವಶ್ಯಕವಾದುದು. ಸಾಮಾನ್ಯವಾಗಿ ಯಾರಾದರೂ ನಿಮ್ಮನ್ನು ನೀನು ಯಾರು ? ಎಂಬುದಾಗಿ ಪ್ರಶ್ನಿಸಲಾಗಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಹೆಸರು, ತನ್ನ ತಂದೆ–ತಾಯಿಗಳ ಹೆಸರು, ತನ್ನ ಅಡ್ಡಹೆಸರು ಮತ್ತು ಊರು ಮುಂತಾದವುಗಳನ್ನು ಹೇಳಿ ತನ್ನ ಪರಿಚಯವನ್ನು ಮಾಡಿಕೊಡುವುದನ್ನು ನಾವು ಕೇಳುತ್ತೇವೆ. ಅವನು ಮಾಡಿಕೊಟ್ಟ ಈ ಪರಿಚಯವು ಸ್ಥೂಲ ಶರೀರ ಹಾಗೂ ಅದಕ್ಕೆ

ಸಂಬಂಧಪಟ್ಟವರ ಪರಿಚಯವೇ ವಿನಃ ಅವನ ನಿಜವಾದ ಪರಿಚಯವಲ್ಲ. ಪ್ರತಿಯೊಬ್ಬರಿಗೂ ತಮ್ಮ ನಿಜವಾದ ಆತ್ಮಪರಿಚಯವಾಗಬೇಕಾದರೆ ದೇಶಿಕನಾದ ಗುರುವಿನ ಉಪದೇಶವು ಬೇಕೇ ಬೇಕು. ಸದ್ಗುರುವು ಶರೀರವೆಂದರೇನು ? ಇಂದ್ರಿಯ ಗಳೆಷ್ಟು ? ಅಂತಃಕರಣದ ಸ್ವರೂಪವೇನು ? ಮತ್ತು ಇವೆಲ್ಲವುಗಳಿಗಿಂತ ಆತ್ಮನು ಹೇಗೆ ತಾನೆ ಭಿನ್ನನಾಗಿದ್ದಾನೆ ? ಎಂಬ ವಿಷಯವನ್ನು ತಿಳಿಸಿಕೊಡುತ್ತಾನೆ. ಹೀಗೆ ದೇಶಿಕನ ಉಪದೇಶದ ಹೊರತಾಗಿ ಆತ್ಮಸ್ವರೂಪದ ಅರಿವಾಗುವುದಿಲ್ಲ. ಇಂಥ ಉಪದೇಶಕನಾದ ಗುರುವೇ ದೇಶಿಕನು.

ಎಂತಹ ಮೂಢನೇ ಇರಲಿ, ಪಾಪಿಯೇ ಇರಲಿ ಅಂಥವರನ್ನು ತನ್ನ ಉಪದೇಶದ ಪ್ರಭಾವದಿಂದ ಸುಧಾರಿಸಿ ಸನ್ಮಾರ್ಗಕ್ಕೆ ಹಚ್ಚುವವನೇ ಸದ್ಗುರುವು. ಅವನೇ ದೇಶಿಕನು. ಗೌತಮ ಬುದ್ಧನ ಸಂಪರ್ಕಕ್ಕೆ ಬಂದ ನರಹಂತಕನಾದ ಅಂಗುಲಿಮಾಲನು ಬುದ್ಧನ ಉಪದೇಶದ ಪ್ರಭಾವದಿಂದಾಗಿ ತನ್ನನ್ನು ಪರಿವರ್ತಿಸಿಕೊಂಡು ಸನ್ಮಾರ್ಗಿ ಶಿಷ್ಯನಾದ ಕಥೆಯು ಸರ್ವವಿದಿತವಾದುದಾಗಿದೆ. ಅದರಂತೆ ಬೇಡರ ಜಾತಿಯವನೂ ದರೋಡೆ ಖೋರನೂ ಆದ ವಾಲ್ಯಾ ಎಂಬ ಕ್ರೂರಿಯು ನಾರದ ಮಹರ್ಷಿಯ ಉಪದೇಶದ ಫಲವಾಗಿ ತನ್ನ ದುರಾಚಾರಗಳನ್ನೆಲ್ಲ ತ್ಯಜಿಸಿ ತಪಸ್ಸನ್ನಾಚರಿಸಿ ವಾಲ್ಮೀಕಿಯೆಂದು ಪ್ರಸಿದ್ಧನಾದನಲ್ಲದೆ ಆದಿಕವಿಯೆಂದೆನಿಸಿಕೊಂಡು ರಾಮಾಯಣ ಮಹಾಕಾವ್ಯವನ್ನೂ ಸಹ ರಚಿಸಿದ ಇತಿಹಾಸವು ಪ್ರಸಿದ್ಧವಾದುದಾಗಿದೆ. ಹೀಗೆ ದುಷ್ಟರನ್ನೂ, ದುರಾಚಾರಿಗಳನ್ನೂ ತನ್ನ ಉಪದೇಶದ ಮೂಲಕ ಸನ್ಮಾರ್ಗಿಗಳನ್ನಾಗಿ ಮಾಡುವವನೇ ದೇಶಿಕನು. ಅವನಿಗೇನೇ ವಿಶ್ವಗುರು ಎಂದು ಕರೆಯುತ್ತಾರೆ. ಸಮುದ್ರದಲ್ಲಿ ವಿಲೀನಗಳಾದ ನದಿಗಳು ತಮ್ಮ ನಾಮರೂಪಗಳನ್ನು ತ್ಯಜಿಸಿ ಸಮುದ್ರದ ಸ್ವರೂಪವೇ ಆಗುವಂತೆ ಗುರುವಿಗೆ ಶರಣಾಗತನಾದ ಪಾಪಿಯೂ ಸಹ ಗುರುವಿನ ಮಾರ್ಗೋಪದೇಶದಿಂದ ಶಿವಸ್ವರೂಪನೇ ಆಗುತ್ತಾನೆ.

ಪ್ರಪಂಚಕ್ಕೆ ಶಾಸ್ತ್ರಕಾರರು ಮಾಯಾ ಸಮುದ್ರವೆಂಬುದಾಗಿ ಕರೆದಿದ್ದಾರೆ. ಈ ಸಮುದ್ರದಲ್ಲಿ ಬಿದ್ದವನು ಅರ್ಥಾತ್ ಸಾಂಸಾರಿಕ ವಾಸನೆಗಳಿಂದ ಲಿಪ್ತನಾದವನು ತನ್ನದೇ ಆದ ಶಕ್ತಿಸಾಮರ್ಥ್ಯಗಳಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅಂಥವನು ಗುರುವಿಗೇನೇ ಶರಣಾಗತನಾಗಬೇಕಾಗುವುದು. ತನಗೆ ಶರಣಾಗತ ನಾದವನ ಮೋಹ–ಮಮಕಾರಗಳನ್ನು ತನ್ನ ಉಪದೇಶದ ಮೂಲಕವಾಗಿ ದೂರೀಕರಿಸಿ ಸದ್ಗುರುವು ಆತನನ್ನು ಸಂಸಾರ ಸಾಗರದಿಂದ ಉದ್ಧರಿಸುತ್ತಾನೆ. ಗುರುವಿನ ಉಪದೇಶ ದಿಂದ ವಿಶ್ವದ ಸಮಸ್ತ ಮಾನವರು ತಮ್ಮ ಮೋಹ–ಮಮಕಾರಗಳನ್ನು ನೀಗಿ ಮುಕ್ತರಾಗುವರು. ಹೀಗೆ ವಿಶ್ವವನ್ನೇ ಉದ್ಧರಿಸುವ ಈ ಗುರುವಿಗೆ ವಿಶ್ವಗುರು ಎಂಬ ಸಂಜ್ಞೆಯು ಬಂದಿರುತ್ತದೆ.

ಪೂಜ್ಯಪಾದರಾದ ಶ್ರೀಜಗದ್ಗುರು ರೇಣುಕಾಚಾರ್ಯರು ಗುರುವಿನ ಸ್ವರೂಪ ವನ್ನು ವರ್ಣಿಸುತ್ತ ಪುನಃ–

ಅಖಂಡಂ ಏವ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು ।
ಆತ್ಮಯೋಗಪ್ರಭಾವೇಷ ಸ ಗುರುರ್ವಿಶ್ವಭಾಸಕಃ ॥

(ಸಿ.ಶಿ. ೧೫-೧೧)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ದೇಶಿಕನ ಕಣ್ಣಿಗೆ ಬೀಳುವ, ಜಗತ್ತಿನ ಸಕಲವಸ್ತುಗಳಲ್ಲೂ ಆತನ ಶಿವತಾದಾತ್ಮ್ಯ ಯೋಗದ ಪ್ರಭಾವದಿಂದ ಸರ್ವತ್ರ ಅಖಂಡವಾದ ಮತ್ತು ಸಚ್ಚಿದಾನಂದ ಸ್ವರೂಪವಾದ ಚೈತನ್ಯವೇ ತೋರುತ್ತಿರುವುದು. ಇಂತಹ ದಿವ್ಯದೃಷ್ಟಿ-ಸಂಪನ್ನನಾದ ಮಹಾಗುರುವಿಗೆ ಜಗತ್ಪ್ರಕಾಶಕನು ಎಂಬುದಾಗಿ ಕರೆಯುತ್ತಾರೆ.

'ವಿಶ್ವಗುರು', 'ಜಗದ್ಗುರು' ಶಬ್ದಗಳು ಪರ್ಯಾಯವಾಚಕಗಳಾಗಿರುತ್ತವೆ. ಗುರುವಿಗೆ ವಿಶ್ವಗುರು, ಜಗದ್ಗುರು ಅನ್ನಲು ಕಾರಣವೇನೆಂದರೆ ಈ ಜಗತ್ತಿನಲ್ಲಿ ಇರುವ ಭೂತ ಮತ್ತು ಭೌತಿಕ ಪದಾರ್ಥಗಳಲ್ಲಿ ಪರಮಾತ್ಮನು ಅನುಸ್ಯೂತನಾಗಿರುತ್ತಾನೆ. ಹೂವಿನ ಹಾರದಲ್ಲಿ ಅಡಗಿರುವ ದಾರವು ಆ ಹೂವುಗಳಿಗೆಲ್ಲ ಆಧಾರವಾಗಿರುವಂತೆ ಪರಮಾತ್ಮನು ಪ್ರತಿಯೊಂದು ವಸ್ತುವಿಗೂ ಆಧಾರ ಸ್ವರೂಪನಾಗಿರುತ್ತಾನೆ. ಅಂತೆಯೇ ಪರಮಾತ್ಮನಿಗೆ ಸೂತ್ರಾತ್ಮಾ ಎಂಬುದಾಗಿ ಕರೆಯುತ್ತಾರೆ. ಹಾರದೊಳಗಿನ ಪ್ರತಿಯೊಂದು ಹೂವಿನಲ್ಲಿ ದಾರವು ಅನುಸ್ಯೂತವಾಗಿರುವಂತೆ ಪರಮಾತ್ಮನು ಪ್ರತಿಯೊಂದು ವಸ್ತುವಿನಲ್ಲಿಯೂ ಅಡಗಿಕೊಂಡಿರುತ್ತಾನೆ. ಹೀಗೆ ಜಗತ್ತಿನ ಅಥವಾ ವಿಶ್ವದ ಪ್ರತಿವಸ್ತುವಿನಲ್ಲಿ ಅಂತರ್ಹಿತನಾದ ಪರಮಾತ್ಮನನ್ನು ಅರಿಯುವ ಸಾಮರ್ಥ್ಯವುಳ್ಳ ಗುರುವಿಗೆ ವಿಶ್ವಗುರು, ಜಗದ್ಗುರು ಎಂಬುದಾಗಿ ಕರೆಯುವರು. ಈತನು ಸರ್ವವೆಲ್ಲವನ್ನು ತನ್ನ ಆತ್ಮರೂಪವನ್ನಾಗಿ ಅನುಭವಿಸುತ್ತಿರುತ್ತಾನೆ. ಜನಸಾಮಾನ್ಯರಿಗೆ ಇಂತಹ ದಿವ್ಯದೃಷ್ಟಿಯು ಇರುವುದಿಲ್ಲ, ಸಾಮಾನ್ಯ ಜೀವಿಗಳಿಗೆ ವಸ್ತುಗಳ ಪ್ರತ್ಯಕ್ಷ ಜ್ಞಾನವಾಗುವುದೇ ವಿನಃ ವಸ್ತುವಿನಲ್ಲಿ ಅಂತರ್ಹಿತವಾದ ಪರಮಾತ್ಮನ ಸಾಕ್ಷಾತ್ಕಾರವಾಗುವುದಿಲ್ಲ. ಇಂತಹ ಸ್ಥೂಲ ದೃಷ್ಟಿಯ ಜೀವಿಗಳ ದೃಷ್ಟಿ ಪರಿವರ್ತನೆಯನ್ನು ಮಾಡಿ ಅವರಿಗೂ ಸಹ ಸರ್ವತ್ರ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವ ದಿವ್ಯ ದೃಷ್ಟಿಯನ್ನು ಈ ವಿಶ್ವಗುರುವಾದವನು ಅನುಗ್ರಹಿಸುತ್ತಾನೆ. ಹೀಗೆ ವಿಶ್ವದ ಜೀವಿಗಳಿಗೆಲ್ಲ ಶಿವಜ್ಞಾನವನ್ನು ಮಾಡಿಕೊಡುವುದರಿಂದಲೇ ಈತನಿಗೆ ವಿಶ್ವಗುರು ಎನ್ನಲಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತ ಭಕ್ತಸ್ಥಲದಲ್ಲಿಯ ಮೊದಲನೇ ಅವಾಂತರ ಸ್ಥಲವಾದ ಈ ದೀಕ್ಷಾಗುರು ಸ್ಥಲದಲ್ಲಿ ಗುರುವಿನ ಅನೇಕ ಪರ್ಯಾಯ ನಾಮಗಳ ಸ್ಪಷ್ಟೀಕರಣ ಮಾಡಿದುದನ್ನು ನೋಡುತ್ತೇವೆ. ಶಿಷ್ಯರ ಅಜ್ಞಾನವನ್ನು ದೂರಮಾಡಿ ಅವರಿಗೆ ಸುಜ್ಞಾನವನ್ನುಂಟುಮಾಡುವುದರಿಂದ 'ಗುರು' ಎಂತಲೂ, ಶಿಷ್ಯರಿಗೆ ಆಚಾರಗಳನ್ನು ಬೋಧಿಸಿ ಅವರನ್ನು ಸದಾಚಾರಿಗಳನ್ನಾಗಿ ಮಾಡುವದರ ಜೊತೆಗೆ ತಾನೂ ಆ ಆಚರಣೆಗಳನ್ನು ಆಚರಿಸುವುದರಿಂದ 'ಆಚಾರ್ಯ'ನೆಂತಲೂ, ಶರಣಾಗತರಾದವರಿಗೆ ಸನ್ಮಾರ್ಗವನ್ನು ತೋರಿಸಿ ಅವರ ಜೀವನವನ್ನು ಪಾವನಗೊಳಿಸುವುದರಿಂದ ದೇಶಿಕನೆಂತಲೂ, ಜಗತ್ತಿನ ಪ್ರತಿಯೊಂದು ವಸ್ತು ಹಾಗೂ

ವ್ಯಕ್ತಿಗಳಲ್ಲಿ ಪರಮಾತ್ಮ ಸ್ವರೂಪವನ್ನನುಭವಿಸಿ ಇಂತಹದೇ ಆದ ಜ್ಞಾನವನ್ನು ಜಗತ್ತಿನ ಅರ್ಥಾತ್ ವಿಶ್ವದ ಜನರಿಗೆಲ್ಲ ಮಾಡಿಕೊಡುವ ಕಾರಣದಿಂದಾಗಿ ಈತನಿಗೆ ಜಗದ್ಗುರು ಅಥವಾ ವಿಶ್ವಗುರು ಎಂಬುದಾಗಿ ಕರೆಯುತ್ತಾರೆ. ಜಗತ್ಕಲ್ಯಾಣಕಾರಿಯಾದ ಇಂತಹ ಜಗದ್ಗುರುಗಳಿಗೆ ಶರಣಾಗತರಾಗಿ ಪ್ರತಿಯೊಬ್ಬರೂ ತಮ್ಮ ಜೀವನವನ್ನು ಪಾವನ ಗೊಳಿಸಿಕೊಳ್ಳಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಆಗಷ್ಟ್ ೧೯೯೨

(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)

■■

# ಶಿಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತ ಭಕ್ತಸ್ಥಲದಲ್ಲಿಯ ಮೊದಲನೇ ಅವಾಂತರ ಸ್ಥಲವಾದ ದೀಕ್ಷಾಗುರುಸ್ಥಲ ವಿಷಯಕವಾಗಿ ಅತ್ಯಂತ ವಿಸ್ತೃತವಾದ ಆಶೀರ್ವಚನಗಳನ್ನು ಇಲ್ಲಿಯವರೆಗೆ ನೀವೆಲ್ಲ ಆಲಿಸಿದ್ದೀರಿ. ಪ್ರಸಂಗಾನು ಸಾರವಾಗಿ ಪಂಚಾಚಾರಗಳ ವಿಶದವಾದ ವಿವೇಚನೆಯನ್ನು ಮಾಡಲಾಯಿತು. ಇನ್ನು ಮುಂದೆ ಬರುವ ಎರಡನೇ ಅವಾಂತರ ಸ್ಥಲವೇ ಶಿಕ್ಷಾಗುರುಸ್ಥಲವು. ದೀಕ್ಷೆಯನ್ನು ಮಾಡಿ ನಮ್ಮನ್ನು ಸಂಸ್ಕಾರಯುಕ್ತರನ್ನಾಗಿ ಮಾಡಿದ ದೀಕ್ಷಾಗುರುವೇ ಯಾವಾಗ ಧಾರ್ಮಿಕ ಹಾಗೂ ದಾರ್ಶನಿಕ ಶಿಕ್ಷಣವನ್ನು ಕೊಡುತ್ತಾನೆಯೋ ಆಗ ಅವನೇ ಶಿಕ್ಷಾಗುರುವೆಂದು ಕರೆಯಿಸಿಕೊಳ್ಳುತ್ತಾನೆ. ಇದನ್ನೇ ಶ್ರೀಜಗದ್ಗುರು ರೇಣುಕ ಭಗವತ್ಪಾದರು –

> ದೀಕ್ಷಾಗುರುರಸೌ ಶಿಕ್ಷಾಹೇತುಃ ಶಿಷ್ಯಸ್ಯ ಬೋಧಕಃ।
> ಪ್ರಶ್ನೋತ್ತರ ಪ್ರವಕ್ತಾಚ ಶಿಕ್ಷಾಗುರುರಿತೀರ್ಯತೇ ॥
>
> (ಸಿ.ಶಿ. ೧೫–೧೨)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ದೀಕ್ಷಾಸಂಸ್ಕಾರವನ್ನು ಮಾಡಿದ ಆ ಗುರುವೇ ಶಿಷ್ಯನ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು, ತನ್ನ ಅಮೋಘವಾದ ಉಪದೇಶದಿಂದ ಸಂಶಯಗಳನ್ನೆಲ್ಲ ನಿವೃತ್ತಿಗೊಳಿಸಿ, ಶಿಷ್ಯನನ್ನು ಶಿಕ್ಷಿತಗೊಳಿಸುವ ಕಾರಣದಿಂದಾಗಿ ಇವನಿಗೆ ಶಿಕ್ಷಾಗುರುವೆಂದು ಕರೆಯುವರು. ಪೂಜ್ಯಪಾದರು ಇಲ್ಲಿ ಗುರು ಶಿಷ್ಯರ ಸಂಬಂಧವನ್ನು ವಿವರಿಸಿದ್ದಾರೆ. ಎರಡು ವ್ಯಕ್ತಿಗಳ ನಡುವೆ ಯಾವುದಾದರೊಂದು ಸಂಬಂಧ ಇದ್ದೇ ಇರುತ್ತದೆ. ತಂದೆ–ಮಗ, ಗಂಡ–ಹೆಂಡತಿ, ಅಣ್ಣ–ತಮ್ಮ ಇವೆಲ್ಲ ಸಂಬಂಧಗಳು ಲೌಕಿಕವಾದವುಗಳು. ಅಂತಲೇ ಇವುಗಳಿಗೆ ರಕ್ತಸಂಬಂಧವೆಂದು ಕರೆಯುತ್ತಾರೆ. ಈ ಸಂಬಂಧಗಳು ಬಂಧನಕಾರಿಗಳಾದ ಸಂಬಂಧಗಳು, ಇವುಗಳಿಂದಲೇ ಜೀವಾತ್ಮನು ಸಂಸಾರದಲ್ಲಿ ಕಟ್ಟಿಹಾಕಲ್ಪಡುತ್ತಾನೆ.

ನಾರದ ಮಹರ್ಷಿಗಳು ಒಂದು ಸಲ ತ್ರಿಲೋಕ ಸಂಚಾರಗೈಯ್ಯುತ್ತಾ ಕೈಲಾಸಕ್ಕೆ ಹೋದರು. ಅಲ್ಲಿ ಶಿವನೋರ್ವನೇ ಕುಳಿತಿರುವುದನ್ನು ನೋಡಿ ಓ ಸದಾಶಿವನೇ! ಭೂಲೋಕದಲ್ಲಿ ಅದೆಷ್ಟೋ ಜನರು ನಿನ್ನ ಪೂಜೆ ಧ್ಯಾನಾದಿಗಳನ್ನು ಮಾಡುತ್ತಿರುತ್ತಾರೆ. ನಿನ್ನೊಂದಿಗೆ ಸಾಮರಸ್ಯವನ್ನು ಪಡೆಯುವ ಅಭಿಲಾಷೆಯನ್ನೂ ಸಹ ಹೊಂದಿರುತ್ತಾರೆ. ಹೀಗಿದ್ದರೂ ನಿನ್ನ ಸಾನ್ನಿಧ್ಯದಲ್ಲಿ ಯಾರೊಬ್ಬರೂ ಕಾಣುತ್ತಿಲ್ಲವಲ್ಲ ? ನಾರದನ ಈ ಮಾತನ್ನು ಕೇಳಿ ಶಿವನು ''ಎಲೋ ನಾರದಾ ! ಸಂಸಾರವು ಬಹಳಷ್ಟು ವಿಚಿತ್ರವಾದುದು.

ಎಂಥೆಂಥವರನ್ನೂ ಸಹ ಅದು ಕಟ್ಟಿಹಾಕುತ್ತದೆ. ನನ್ನೊಂದಿಗೆ ಸಾಮರಸ್ಯವನ್ನು ಪಡೆಯುವ ಅತ್ಯುತ್ಕಟವಾದ ಬಯಕೆಯುಳ್ಳವರು ಮಾತ್ರ ಅದನ್ನು ಪಡೆಯಲು ಸಮರ್ಥರಾಗುವರು. ದುರ್ಬಲವಾದ ಇಚ್ಛೆಯುಳ್ಳವರು ಸಾಮರಸ್ಯದ ಇಚ್ಛೆ ಇದ್ದರೂ ಅದನ್ನು ಪಡೆಯಲು ಸಮರ್ಥರಾಗುವುದಿಲ್ಲ'' ಎಂದು ಹೇಳಿದ ಪರಮಾತ್ಮನ ನುಡಿಯನ್ನು ಕೇಳಿ ನಾರದನು– ''ಭೂಲೋಕದಲ್ಲಿ ನಿನ್ನೊಂದಿಗೆ ಸಾಮರಸ್ಯವನ್ನು ಪಡೆಯುವ ಉತ್ಕಟವಾದ ಬಯಕೆಯುಳ್ಳವರು ಯಾರಾದರೂ ದೊರೆತರೆ ಅವರನ್ನು ನಿನ್ನ ಸಾನ್ನಿಧ್ಯಕ್ಕೆ ಕರೆದುಕೊಂಡು ಬರಬಹುದೇ ?'' ಎಂದು ಕೇಳಿದನು. ''ಆಗಲಿ ! ಅಂಥವರು ಯಾರಾದರೂ ಇದ್ದರೆ ಅವಶ್ಯವಾಗಿ ಕರೆದುಕೊಂಡು ಬಾ'' ಎಂದು ಹೇಳಿದನು. ಶಿವನ ಆದೇಶವನ್ನು ಪಡೆದ ನಾರದನು ಭೂಲೋಕಕ್ಕೆ ಬಂದು ಅತ್ತಿತ್ತ ತಿರುಗಾಡುತ್ತಲಿರುವಾಗ ಒಂದು ಗ್ರಾಮದಲ್ಲಿ ಸತ್ಸಂಗ ಕಾರ್ಯಕ್ರಮವು ನಡೆದಿತ್ತು. ಊರಿನ ಸಹಸ್ರಾರು ಜನರು ಶ್ರವಣಮಾಡಲು ಬರುತ್ತಿದ್ದರು. ಇವನೂ ಕೂಡ ಹೋಗಿ ಅದರಲ್ಲಿ ಭಾಗಿಯಾಗಿ ಕುಳಿತಾಗ ಅಲ್ಲಿ ಹೇಳುವ ವಿಷಯವಾದರೂ ಶಿವನ ಸಾಮರಸ್ಯ ಸಂಬಂಧವನ್ನು ಕುರಿತಾಗಿತ್ತು. ಜನರು ತನ್ಮಯತೆಯಿಂದ ಪ್ರವಚನ ಕೇಳುತ್ತಿದ್ದರು. ಆದರೆ ನಾರದನು ಮನದಲ್ಲಿ ಯೋಚಿಸಿದ್ದೇನೆಂದರೆ, ಇಷ್ಟೆಲ್ಲ ಜನರು ಆಸಕ್ತಿಯಿಂದ ಆಲಿಸುತ್ತಿರುವಾಗ ಇವರಲ್ಲಿ ಅನೇಕ ಜನರು ಶಿವಲೋಕಕ್ಕೆ ಬರಲು ಸಿದ್ಧರಾಗಬಹುದೆಂದು ಯೋಚಿಸಿ ಪ್ರವಚನ ಮುಗಿದೊಡನೆ ಮಹಾದ್ವಾರದ ಬಳಿ ನಿಂತು ಹೊರಗೆ ಬರುತ್ತಿರುವ ಪ್ರತಿಯೊಬ್ಬ ವ್ಯಕ್ತಿಯನ್ನು ಕುರಿತು– ''ನಿಮ್ಮನ್ನು ಕೈಲಾಸಕ್ಕೆ ಕರೆದೊಯ್ಯುತ್ತೇನೆ ಬರುತ್ತೀರಾ ?'' ಎಂದು ಕೇಳುತ್ತಿದ್ದನು. ಎಲ್ಲರೂ ಅವಸರದಲ್ಲಿ ಮನೆಗೆ ಹೋಗುವವರೇ, ಆದರೆ ಯಾರೂ ನಾರದನ ಮಾತಿಗೆ ಕಿವಿಗೊಡುತ್ತಿರಲಿಲ್ಲ. ಎಲ್ಲಕ್ಕೂ ಕೊನೆಗೆ ಒಬ್ಬ ವಯೋವೃದ್ಧನಾದ ಮುದುಕನು ಬರುತ್ತಿದ್ದುದನ್ನು ನೋಡಿ ಇವನನ್ನು ಕರೆದೊಯ್ಯಲು ಸಾಧ್ಯ ಎಂದು ನಾರದನು ಮನದಲ್ಲಿ ಯೋಚಿಸುತ್ತ ಆತನಿಗೆ ಕೇಳಿದ್ದೇನೆಂದರೆ – ''ಅಯ್ಯಾ ಯಜಮಾನನೇ, ನಿನ್ನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತೇನೆ ಬರುತ್ತೀಯಾ !'' ನಾರದನ ಈ ಮಾತನ್ನು ಕೇಳಿ ಒಂದು ಕ್ಷಣಕಾಲ ಸಂತುಷ್ಟ ಹೃದಯನಾದ ಆ ಮುದುಕನು ''ಆಗಲಿ ನಾನು ಕೈಲಾಸಕ್ಕೆ ಬರಲು ಸಿದ್ಧನಿದ್ದೇನೆ. ಕೈಲಾಸದ ಪ್ರತೀಕ್ಷೆಯಲ್ಲಿಯೇ ನಾನು ಕಾಲಕಳೆಯುತ್ತಲಿದ್ದೇನೆ'' ಎಂಬುದಾಗಿ ತನ್ನ ಹೃದ್ಗತಾಭಿಪ್ರಾಯವನ್ನು ವ್ಯಕ್ತಪಡಿಸಿದನು. ನಾರದನಿಗೆ ಹಿಡಿಸಲಾರದಷ್ಟು ಸಂತೋಷ. ಆಗ ನಾರದನು ಹೇಳಿದ್ದೇನೆಂದರೆ ''ಶುಭಸ್ಯ ಶೀಘ್ರಮ್'' ಒಳ್ಳೆಯ ಕಾರ್ಯವನ್ನು ಎಷ್ಟು ಸಾಧ್ಯವೋ ಅಷ್ಟು ಬೇಗನೇ ಮಾಡಿಬಿಡಬೇಕು ತಡವೇಕೆ ? ನಡೆ ವಿಮಾನ ತಯಾರಿದೆ'' ನಾರದನ ಈ ಮಾತನ್ನು ಕೇಳಿ ಸಂತುಷ್ಟನಾದ ಮುದುಕನು ಅವನೊಂದಿಗೆ ವಿಮಾನದವರೆಗೆ ನಡೆದನು. ಇನ್ನೇನು ವಿಮಾನದಲ್ಲಿ ಕೂಡ್ರುವುದಷ್ಟೇ ಉಳಿದಿತ್ತು. ಆಗ ಮುದುಕನು ''ಅಯ್ಯಾ ನಾರದ ಮಹರ್ಷಿಗಳೇ ! ಕೈಲಾಸಕ್ಕೆ ಹೋದ ಮೇಲೆ ಮರಳಿ ನಮ್ಮೂರಿಗೆ ಎಂದಾದರೂ ಬರಲು ಸಾಧ್ಯವಿದೆಯೇ ?'' ಎಂದು ಕೇಳಿದನು. ಆಗ ನಾರದನು ''ಎಲೈ ಯಜಮಾನನೇ ! 'ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ' ಎಂಬ ಭಗವಂತನ ಉಕ್ತಿಯಂತೆ ಯಾರು ಒಂದು ಸಾರೆ

ಶಿವಸಾನ್ನಿಧ್ಯಕ್ಕೆ ಬರುವವರೋ ಅವರು ಶಿವನೊಂದಿಗೆ ಸಮರಸರಾಗಿ ಬಿಡುತ್ತಾರೆ. ಅವರು ಎಂದೂ ಮರಳಿ ಬರಲಾರರು''. ಮಹರ್ಷಿಯ ಈ ಮಾತನ್ನು ಕೇಳಿದ ಯಜಮಾನನು ಮನಸ್ಸಿನಲ್ಲಿ ಒಂದು ಕ್ಷಣ ಆಲೋಚಿಸಿ ''ಹೇ ಮಹರ್ಷಿಯೇ ! ಮರಳಿ ಬರುವುದೇ ಇಲ್ಲವೆಂದ ಬಳಿಕ ಒಂದು ಸಾರೆ ಮನೆಯವರನ್ನು ಭೆಟ್ಟಿಯಾಗಿ ಹೇಳುವುದನ್ನೆಲ್ಲ ಹೇಳಿ ಬೇಗನೆ ಬಂದು ಬಿಡುತ್ತೇನೆ. ಅಲ್ಲಿಯವರೆಗೆ ತಾವು ಪ್ರತೀಕ್ಷಿಸಬೇಕು'' ಯಜಮಾನನ ಈ ಮಾತನ್ನು ಕೇಳಿದ ಮಹರ್ಷಿಯು ''ಎಲೋ ಯಜಮಾನ ! ಸಾಂಸಾರಿಕ ವ್ಯಾಮೋಹವು ಮನುಷ್ಯನ ಆಧ್ಯಾತ್ಮಿಕ ಪ್ರಗತಿಗೆ ಅಡ್ಡಗೋಡೆಯಿದ್ದಂತೆ. ಈ ಮೋಹ ಮಮಕಾರದಲ್ಲಿ ಸಿಲುಕಿದ ಜೀವಿಯು ಅದೆಷ್ಟು ಸಾರೆ ಈ ಸಂಸಾರದಲ್ಲಿ ಮರಳಿ ಮರಳಿ ಬಂದಿದ್ದಾನೆಯೋ ಅದರ ಲೆಕ್ಕವೇ ಇಲ್ಲ. ನೀನಾದರೂ ಅದಕ್ಕೆ ಹೊರತಾದವನಲ್ಲ. ಈ ಜನ್ಮದಲ್ಲಿ ನಿನ್ನ ವಯಸ್ಸಿನ ಎಪ್ಪತ್ತು–ಎಂಭತ್ತು ಸಂವತ್ಸರಗಳನ್ನು ಈ ಸಂಸಾರಕ್ಕಾಗಿಯೇ ಹಾಳು ಮಾಡಿ ಕೊಂಡಿರುವೆ. ಕಾರಣ ಒಂದು ಒಳ್ಳೆಯ ಯೋಗವು ಪ್ರಾಪ್ತವಾಗಿರುವಾಗ ಅದನ್ನು ಕಳೆದು ಕೊಳ್ಳಬೇಡ. ನೀನು ಮರಳಿ ಮನೆಗೆ ಹೋದರೆ ಆ ಮನೆ ಹಾಗೂ ಮನೆಯವರು ನಿನ್ನನ್ನು ಬಿಡುವುದೇ ಇಲ್ಲ. ಕಾರಣ ಮನೆಗೆ ಹೋಗುವ ವಿಚಾರವನ್ನು ತ್ಯಾಗಮಾಡಿ ವಿಮಾನ ದಲ್ಲಿ ಕುಳಿತುಕೋ ಒಂದು ಕ್ಷಣದಲ್ಲಿಯೇ ನಿನ್ನನ್ನು ಕೈಲಾಸಕ್ಕೆ ಕರೆದೊಯ್ಯುತ್ತೇನೆ''. ನಾರದ ಮಹರ್ಷಿಯ ಈ ತತ್ತ್ವಭರಿತವಾದ ಉಪದೇಶವನ್ನು ಕೇಳಿದರೂ ಸಹ ಯಜಮಾನನ ಮನೆಯ ಮೋಹ ತೊಲಗಲಿಲ್ಲ. ಬೇಗನೆ ಬರುತ್ತೇನೆಂಬುದಾಗಿ ಹೇಳಿ ಮನೆಯತ್ತ ಸಾಗಿಯೇ ಬಿಟ್ಟ. ತಾಸುಗಟ್ಟಲೇ ಆತನ ಪ್ರತೀಕ್ಷೆಮಾಡಿದ ನಾರದನು ಅವನನ್ನು ಕರೆದೊಯ್ಯಲು ಅವನ ಮನೆಯ ಬಾಗಿಲಿಗೇ ಬಂದು ಯಜಮಾನನ್ನು ಪುನಃ ಕರೆದನು. ಆಗ ಯಜಮಾನನು ಮನೆಯ ಹೊರಗೆ ಬಂದು ''ಮಹರ್ಷಿಗಳೇ ! ಈ ಮನೆಯಲ್ಲಿಯ ನನ್ನ ಎಲ್ಲ ಕರ್ತವ್ಯಗಳೂ ಮುಗಿದುಹೋಗಿವೆ. ಆದರೆ ನನ್ನ ಕಿರಿಯ ಮೊಮ್ಮಗನ ತಲೆಯ ಮೇಲೆ ಒಂದೆರಡು ಅಕ್ಕಿಕಾಳುಗಳನ್ನು ಹಾಕಿಬರುತ್ತೇನೆ. ಅಂದರೆ ನಾನು ಕೈಲಾಸದಲ್ಲಿ ನಿಶ್ಚಿಂತನಾಗಿ ಇರಬಹುದು. ಈ ವಿವಾಹಕಾರ್ಯಕ್ಕಾಗಿ ಒಂದು ವರ್ಷಕಾಲ ನನಗೆ ಅವಕಾಶವನ್ನು ಕೊಡು. ಇಂದಿಗೆ ಸರಿಯಾಗಿ ಒಂದು ವರ್ಷಕ್ಕೆ ನೀನು ಬಾ, ನಾನು ತಯಾರಾಗಿಯೇ ಇರುತ್ತೇನೆ'' ಎಂಬುದಾಗಿ ಹೇಳಿ ನಾರದನನ್ನು ಬೀಳ್ಕೊಟ್ಟನು. ಆಗ ನಾರದರು ಬರಿಗೈಯಿಂದ ಶಿವನ ಸಾನ್ನಿಧ್ಯಕ್ಕೆ ಹೇಗೆ ಹೋಗುವುದು ! ಒಂದು ವರ್ಷದವರೆಗೆ ಭೂಮಂಡಲದಲ್ಲಿಯೇ ಅತ್ತಿತ್ತ ಸಂಚರಿಸಿದರಾಯಿತು ಎಂದು ಆಲೋಚಿಸಿ ಅಲ್ಲಿಂದ ಹೊರಟುಹೋದರು. ಒಂದು ವರ್ಷ ಕಾಲದ ಎಣಿಕೆಯನ್ನೇ ಮಾಡುತ್ತಿದ್ದ ನಾರದನು ಸರಿಯಾಗಿ ಒಂದು ವರ್ಷಕ್ಕೆ ಮರಳಿ ಆ ಯಜಮಾನನ ಮನೆಯ ಮುಂದೆ ಬಂದು ನಿಂತು ಆತನನ್ನು ಕೂಗಿದನು. ನಾರದನ ಧ್ವನಿಯನ್ನು ಕೇಳಿ ಗಾಬರಿಗೊಂಡ ಯಜಮಾನನು ಹೊರಗೆ ಬಂದು ನಾರದನಿಗೆ ನಮಸ್ಕರಿಸಿ ''ಹೇ ಮಹರ್ಷಿಯೇ ತಾವು ಬಂದದ್ದು ನನಗೆ ಬಹಳ ಸಂತೋಷವನ್ನು ತಂದಿದೆ. ನನ್ನ ಮೊಮ್ಮಗನ ವಿವಾಹಕಾರ್ಯವೂ ಸಹ ಮುಗಿದು ಹೋಗಿದೆ. ಸದ್ಯ ಅವನ ಧರ್ಮಪತ್ನಿಯು ಗರ್ಭಿಣಿಯಾಗಿದ್ದಾಳೆ. ಆವಳ ಸೀಮಂತಕಾರ್ಯವೂ ಸಹ ಸಮೀಪದಲ್ಲಿ

ಬಂದಿದೆ. ಅದೆಲ್ಲವನ್ನು ಮುಗಿಸಿ ಮರಿಮೊಮ್ಮಗನ ಮುಖದರ್ಶನವನ್ನು ಮಾಡಿ ಸುವರ್ಣ ಪುಷ್ಪಾಭಿಷೇಕವನ್ನು ಪಡೆದು ಸಂತೃಪ್ತನಾಗಿ ಬರುತ್ತೇನೆ. ಕಾರಣ ಇದೆಲ್ಲ ಮುಗಿಯಲು ಇನ್ನೊಂದು ವರ್ಷ ಅವಕಾಶ ಬೇಕಾಗುವುದು. ಇದನ್ನನುಗ್ರಹಿಸುವ ಕೃಪೆಯಾಗಬೇಕು'' ಎಂದು ಅಂಗಲಾಚಿ ಬೇಡಿಕೊಂಡನು. ಆ ವಯೋವೃದ್ಧನ ಈ ದಯನೀಯ ಸ್ಥಿತಿಯನ್ನು ಕಂಡು ಮರುಕ ಹುಟ್ಟಿದ ಮಹರ್ಷಿಯು ತಥಾಸ್ತು ಎಂಬುದಾಗಿ ಹೇಳಿ ಹೊರಟು ಹೋದನು. ಅವನು ಹೇಳಿದಂತೆ ಸರಿಯಾಗಿ ಒಂದು ವರ್ಷಕ್ಕೆ ನಾರದನು ಮರಳಿ ಬರಲಾಗಿ ಆ ಯಜಮಾನ ಮಡಿದುಹೋಗಿದ್ದ. ಜೀವಾತ್ಮನು ಒಂದು ಶರೀರವನ್ನು ಬಿಟ್ಟ ಬಳಿಕ ಮತ್ತೊಂದು ಶರೀರವನ್ನು ಅವಶ್ಯವಾಗಿ ಪಡೆದೇ ಪಡೆಯುತ್ತಾನೆ. ಹೀಗಿರುವಾಗ ಆ ಜೀವಿಯು ಸದ್ಯ ಯಾವ ಯೋನಿಯಲ್ಲಿರಬಹುದು? ಎಂಬುದಾಗಿ ಆಲೋಚಿಸಿ ನಾರದನು ತನ್ನ ಅಂತರ್ದೃಷ್ಟಿಯಿಂದ ನೋಡಿದಾಗ ಅವನು ಆ ಮನೆಯಲ್ಲಿ ಒಂದು ನಾಯಿಯ ಶರೀರವನ್ನು ಪಡೆದು ಅತ್ತಿಂದಿತ್ತ ಓಡಾಡುತ್ತಿದ್ದನು. ಅಯ್ಯೋ ಪಾಪ ! ಸಂಸಾರದ ಮೇಲಿನ ಮೋಹವು ಜೀವಿಗಳನ್ನು ನಿಕೃಷ್ಟಯೋನಿಗೆ ತಳ್ಳುತ್ತದೆ. ಆದರೂ ಜೀವಿಗಳು ಈ ಮೋಹ ನಿದ್ರೆಯಿಂದ ಎಚ್ಚರಾಗುವುದಿಲ್ಲವಲ್ಲ ! ಈಗೇನು ಮಾಡುವುದು? ಏನೇ ಆಗಲಿ ಒಂದು ಸಾರೆ ಈ ಜೀವಿಯನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುವ ನಿಶ್ಚಯವನ್ನು ಮಾಡಿದ್ದೇನೆಂದ ಬಳಿಕ ಅವನು ಯಾವ ಯೋನಿಯಲ್ಲಿದ್ದರೇನು ? ಶಿವನಿಗೆ ಎಲ್ಲರೂ ಸಮಾನರೇ. ಅಂದ ಬಳಿಕ ಈ ನಾಯಿಯ ಮರಿಯನ್ನೇ ತೆಗೆದುಕೊಂಡು ಹೋದರಾಯಿತು ಎಂಬುದಾಗಿ ವಿಚಾರಿಸಿ ಮನೆಯ ಅಂಗಳದಲ್ಲಿ ಇತ್ತಿಂದತ್ತ ಸಂತೋಷದಲ್ಲಿ ಓಡಾಡುತ್ತಲಿದ್ದ ಆ ಕುನ್ನಿಯನ್ನು ಕೈಗೆತ್ತಿಕೊಂಡ. ಆಗ ಅದು 'ಯಾರು ನೀನು? ಬಿಡು ನನ್ನನ್ನು' ಎಂಬ ಭಾವದಲ್ಲಿ ಗುರುಗುಟ್ಟಿತು. ಆಗ ನಾರದ ಮಹರ್ಷಿಯು ಅದರ ಪೂರ್ವಜನ್ಮದ ವೃತ್ತಾಂತವನ್ನು ತಿಳಿಸಿ ನೀನು ನನ್ನ ಜೊತೆಗೆ ಕೈಲಾಸಕ್ಕೆ ಬರುವುದಾಗಿ ವಚನಕೊಟ್ಟಿರುವೆ. ಸಂಸಾರದ ಮೋಹಪಾಶದಲ್ಲಿ ಸಿಲುಕಿಕೊಂಡ ನೀನು ಮನುಷ್ಯ ಜನ್ಮವನ್ನು ಕಳೆದುಕೊಂಡು ಸದ್ಯ ಶ್ವಾನನಾಗಿ ಜನ್ಮತಾಳಿರುವೆ. ಈಗಲಾದರೂ ನಡೆ ನಿನ್ನನ್ನು ಕರೆದೊಯ್ಯುವೆ, ಎಂದು ಹೇಳಿದಾಗ, ಶ್ವಾನಜನ್ಮದಲ್ಲಿರುವ ಆ ಜೀವಿಯು ಮಹರ್ಷಿಯ ಕೃಪೆಯಿಂದ ತನ್ನ ಪೂರ್ವಜನ್ಮದ ವೃತ್ತಾಂತವನ್ನು ಕೇಳಿ ತನ್ನ ಬಗೆಗೇನೆ ನಾಚಿಕೆಪಟ್ಟು, ಕೈಲಾಸಕ್ಕೆ ಹೋಗುವ ವಿಚಾರವು ಮನಸ್ಸಿನಲ್ಲಿ ಬಂದರೂ ಮರುಕ್ಷಣದಲ್ಲಿಯೇ ಮೋಹಮಾಯೆಯು ಆವರಿಸಿ ಮಹರ್ಷಿಗೆ ಹೇಳಿದ್ದೇನೆಂದರೆ– ''ನಾನು ಈಗ ತಾನೇ ಈ ಜನ್ಮದಲ್ಲಿ ಬಂದಿರುವೆ. ಆ ಜೀರ್ಣಶೀರ್ಣವಾದ ಶರೀರವನ್ನು ಕಳೆದುಕೊಂಡು ಹೊಸದಾದ ಬಾಲ ಶರೀರವನ್ನು ಪಡೆದುಕೊಂಡಿದ್ದೇನೆ. ಮನೆಯಲ್ಲಿರುವ ನನ್ನ ಪುಟ್ಟ ಪುಟ್ಟ ಮರಿ ಮೊಮ್ಮಕ್ಕಳು ನನ್ನೊಂದಿಗೆ ಸಂತೋಷವಾಗಿ ಆಡುತ್ತಿದ್ದಾರೆ. ಈ ಆನಂದವನ್ನು ಬಿಟ್ಟು ಬರಲು ಅದೇಕೋ ಮನಸ್ಸಾಗುತ್ತಿಲ್ಲ, ಕಾರಣ ಕೆಲವಾರು ವರ್ಷ ತಡೆದು ಬಂದರೆ ನಾನು ನಿಮ್ಮ ಜೊತೆಗೆ ಬಂದು ಬಿಡುತ್ತೇನೆ,'' ಆ ಕುನ್ನಿಯ ದೇಹದಲ್ಲಿರುವ ಆ ಜೀವಿಯ ಮಾತನ್ನು ಕೇಳಿ ದಯಾವಂತನಾದ ಮಹರ್ಷಿಯು ನಿರಾಶನಾಗದೆ ಮರಳಿ ಹೋದನು. ಕೆಲವಾರು ವರ್ಷಗಳು ಕಳೆದ ಬಳಿಕ ಪುನಃ ಬಂದು ನೋಡಲಾಗಿ ಆ ಜೀವಿಯು ನಾಯಿಯ

ದೇಹವನ್ನು ತ್ಯಜಿಸಿ ಒಂದು ಕಪ್ಪೆಯಾಗಿ ಬಚ್ಚಲುಗುಂಡಿಯಲ್ಲಿ ವಟಗುಡುತ್ತ ಕುಳಿತಿದ್ದುದನ್ನು ನೋಡಿದನು. ಅಯ್ಯೋ ಪಾಪ ! ಈ ಜೀವಿಯು ಎಷ್ಟು ದುರ್ಗತಿಯನ್ನು ಹೊಂದುತ್ತಿದೆಯಲ್ಲ ! ನಾಯಿಯಾದರೇನು, ಕಪ್ಪೆಯಾದರೇನು ಒಳಗಿರುವ ಜೀವಿಯು ಅವನೇ ಇರುವನಲ್ಲ. ಈಗಲಾದರೂ ಇವನನ್ನು ಮಾತನಾಡಿಸಿ ಕೈಲಾಸಕ್ಕೆ ಕರೆದೊಯ್ಯೋಣವೆಂದು ಯೋಚಿಸಿ ಆ ಬಚ್ಚಲುಗುಂಡಿಯ ದಂಡೆಯಲ್ಲಿ ಬಂದು '' ಎಲೈ ಮಂಡೂಕನೇ ! ನೋಡಿದೆಯಾ ನಿನ್ನ ಹೀನವಾದ ಗತಿಯನ್ನು; ನಡೆ ಈಗಲೂ ಸಹ ನಿನ್ನನ್ನು ಕರೆದೊಯ್ಯಲು ಸಿದ್ಧನಿದ್ದೇನೆ, ಯಾವ ಸುಖವಿದೆ ಈ ಕೊಳೆತ ನೀರಿನಲ್ಲಿ'' ನಾರದನ ಈ ನುಡಿಗಳನ್ನು ಕೇಳಿದ ಆ ಕಪ್ಪೆಯು ''ಎಲೈ ಮಹರ್ಷಿಯೇ ! ನಾನು ಯಾವುದೇ ಜನ್ಮವನ್ನು ಪಡೆದುಕೊಂಡು ಬಂದರೂ ನನ್ನ ಪರಿವಾರದವರೊಂದಿಗೇನೇ ಕಾಲ ಕಳೆಯುತ್ತಿದ್ದೇನೆ. ಕೆಲವು ದಿನ ಮನುಷ್ಯನಾಗಿ ಮತ್ತೆ ಕೆಲವು ದಿನ ನಾಯಿಯಾಗಿ ಸದ್ಯ ಕಪ್ಪೆಯಾಗಿ ನಾನು ಈ ಗುಂಡಿಯಲ್ಲಿ ವಾಸವಾಗಿದ್ದೇನೆ. ನಾನು ಈಗ ಮನೆಯೊಳಗೆ ಹೋಗಿ ಮನೆಯವರನ್ನು ಮುಟ್ಟಿತಟ್ಟಿ ಸುಖಪಡುವ ಸನ್ನಿವೇಶವಿರದಿದ್ದರೂ ಅವರ ಮೈ ಸೋಂಕಿದ ನೀರು ನನ್ನ ಮೇಲೆ ಸದಾ ಬೀಳುತ್ತಲಿದೆ. ಈ ಆನಂದದ ಮುಂದೆ ಬೇರಾವ ಮಿಗಿಲಾದ ಆನಂದವೂ ನನಗೆ ಕಂಡು ಬರುತ್ತಿಲ್ಲ. ಈ ಪಾರಿವಾರಿಕ ಆನಂದವನ್ನು ಬಿಟ್ಟು ಒಂಟಿಯಾಗಿ ಕೈಲಾಸದಲ್ಲಿರುವುದರಲ್ಲಿ ಅದಾವ ಸುಖವಿದೆ ? ನನಗೆ ಸರಿಯಾದ ತಿಳುವಳಿಕೆಯಿಲ್ಲದ ಕಾರಣ ನಿನ್ನೊಂದಿಗೆ ಬರುತ್ತೇನೆಂಬುದಾಗಿ ಮಾತುಕೊಟ್ಟಿದ್ದೇನೋ ನಿಜ, ಆದರೆ ಈಗ ನನಗೆ ಪೂರ್ಣ ಅರಿವಾಗಿದೆ. ನಾನು ಮಾತ್ರ ಯಾವ ಜನ್ಮದಲ್ಲಿ ಹೋದರೂ ಸರಿಯೇ! ನನ್ನ ಪರಿವಾರದವರನ್ನು ತ್ಯಜಿಸಿ ನಾನು ಬರಲಾರೆ. ಇನ್ನು ಮೇಲೆ ನನ್ನ ಗೊಡವೆಯನ್ನು ಬಿಟ್ಟು ನೀನು ತೊಲಗುವಂಥವನಾಗು. ಇನ್ನೆಂದೂ ನನ್ನ ಸಮೀಪಕ್ಕೆ ಬರಲೇಬೇಡ'' ಎಂಬುದಾಗಿ ಬೆದರಿಸಿ ನುಡಿದು ಗುಂಡಿಯ ನೀರಿನಲ್ಲಿ ಮುಳುಗಿ ಮರೆಯಾಯಿತು.

ನಿರಾಶನಾದ ನಾರದನು ತಾನೊಬ್ಬನೇ ಬರಿದಾದ ವಿಮಾನವನ್ನು ತೆಗೆದುಕೊಂಡು ಕೈಲಾಸವನ್ನೈದಲಾಗಿ ಶಿವನು ''ಎಲೈ ನಾರದನೇ ! ಭೂಲೋಕದಿಂದ ಯಾರಾದರೂ ಭಕ್ತರು ಬಂದರೆ ಕೈಲಾಸಕ್ಕೆ ?'' ಶಿವನ ಈ ವ್ಯಂಗ್ಯವಾದ ನುಡಿಯನ್ನು ಆಲಿಸಿದ ನಾರದನು ''ಹೇ ಮಹಾದೇವಾ ! ನೀನು ಹೇಳಿದ್ದೆ ನಿಜ. ಭೂಲೋಕದ ಜೀವಿಗಳು ಸಾಂಸಾರಿಕ ಮೋಹಪಾಶದಲ್ಲಿ ಬಹು ಬಿಗಿಯಾಗಿ ಕಟ್ಟಲ್ಪಟ್ಟಿದ್ದಾರೆ. ಅಲ್ಲಿಯ ಬಂಧನದ ಗಂಟುಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಹೋಗುತ್ತವೆಯೇ ವಿನಃ ಅವು ಕಡಿಮೆಯಾಗಲಾರವು. ಹೀಗಾಗಿ ''ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ವ್ಯಾವೃತ್ತ ಚಕ್ಷುಃ ಅಮೃತತ್ತ್ವಮಿಚ್ಛನ್'' ಎಂಬ ಶ್ರುತಿವಚನದಂತೆ ಲಕ್ಷಕ್ಕೋ ಕೋಟಿಗೋ ಒಬ್ಬ ವ್ಯಕ್ತಿಯು ಅಂತರ್ಮುಖಿಯಾಗಿ ಅಮೃತತ್ವದ ಪ್ರಾಪ್ತಿಗಾಗಿ ಪ್ರಯತ್ನಿಸುತ್ತಿರುತ್ತಾನೆ. ಆದರೆ ಉಳಿದ ಜೀವಿಗಳೆಲ್ಲ ಜನನ ಮರಣ ಚಕ್ರದಲ್ಲಿಯೇ ಸಿಲುಕಿಕೊಂಡಿರುತ್ತಾರೆ. ಭೂಮಂಡಲದಲ್ಲಿ ಪರೀಕ್ಷಿಸಿ, ಪ್ರತೀಕ್ಷಿಸಿ ಬರಿಗೈಯಿಂದ ಬಂದಿದ್ದೇನೆ'' ಎಂಬುದಾಗಿ ನುಡಿದು ನಿರಾಶಾಭಾವನೆಯನ್ನು ವ್ಯಕ್ತ ಮಾಡಿದನು.

ಸಂಸಾರದ ಸಂಬಂಧಗಳು ಇಷ್ಟೊಂದು ಗಟ್ಟಿಮುಟ್ಟಾಗಿರುತ್ತವೆ. ಅಂತಲೇ 'ಸಮ್ಯಕ್ ಬಂಧಃ ಸಂಬಂಧಃ' ಎಂಬ ವ್ಯುತ್ಪತ್ತಿಯ ಮೇರೆಗೆ ಸದೃಢವಾದ ಬಂಧನವೇ ಸಂಬಂಧವು. ಈ ಸಂಬಂಧದಿಂದ ಬಿಡುಗಡೆಯನ್ನು ಹೊಂದಬೇಕಾದರೆ ಗುರುವಿನ ಜೊತೆಗೆ ಸಂಬಂಧವನ್ನು ಬೆಳೆಸಬೇಕಾಗುವುದು. ಗುರು–ಶಿಷ್ಯರ ಸಂಬಂಧವು ಸಾಂಸಾರಿಕ ಬಂಧನಗಳನ್ನು ಬಿಡಿಸುವ ಒಂದು ಶ್ರೇಷ್ಠವಾದ ಸಂಬಂಧವಾಗಿರುತ್ತದೆ. ಗುರು–ಶಿಷ್ಯರ ಈ ಸಂಬಂಧದಲ್ಲಿ ಮೋಹಕವಾದ ರಕ್ತಸಂಬಂಧವಿರದೆ ಮೋಹನಾಶಕ ವಾದ ಬೋಧ್ಯ–ಬೋಧಕಸಂಬಂಧವಿರುತ್ತದೆ. ಗುರು ಬೋಧಕನಾದರೆ ಶಿಷ್ಯನು ಬೋಧ್ಯನಾಗಿರುತ್ತಾನೆ. ಇದೇ ವಿಷಯವನ್ನೇ ಸ್ಪಷ್ಟಪಡಿಸಲೋಸುಗ ಪೂಜ್ಯಪಾದರಾದ ಜಗದ್ಗುರು ರೇಣುಕಾಚಾರ್ಯರು–

ಬೋಧಕೋಽಯಂ ಸಮಾಖ್ಯಾತೋ ಬೋಧ್ಯಾಮೇತದಿತಿ ಸ್ಫುಟಮ್ ।
ಶಿಷ್ಯೇ ನಿಯುಜ್ಯತೇ ಯೇನ ಸ ಶಿಕ್ಷಾಗುರುರುಚ್ಯತೇ ॥

(ಸಿ. ಶಿ. ೧೫–೧೬)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಗುರುವು ಬೋಧಕನು ಹಾಗೂ ಶಿಷ್ಯನು ಬೋಧ್ಯನು, ಅಂದರೆ ಗುರುವಿನ ಬೋಧವನ್ನು ಗ್ರಹಿಸುವವನು ಎಂದರ್ಥ. ಹೀಗೆ ಶಿಷ್ಯನನ್ನು ಬೋಧ್ಯನನ್ನಾಗಿ ನಿಯೋಜಿಸಿ ಅವನಿಗೆ ಉತ್ತಮವಾದ ಆಧ್ಯಾತ್ಮಿಕ ಶಿಕ್ಷಣವನ್ನು ನೀಡುವವನೇ 'ಶಿಕ್ಷಾಗುರು' ಎಂಬುದಾಗಿ ಕರೆಯಲ್ಪಡುತ್ತಾನೆ.

ತಾಯಿಯು ನವಜಾತ ಶಿಶುವಿಗೆ ಕಾಡಿಗೆಯನ್ನು ಹಚ್ಚುವ ನೆಪದಲ್ಲಿ ಆ ಮಗುವಿನ ಮುಚ್ಚಿದ ಕಣ್ಣುಗಳನ್ನು ತನ್ನ ಅಂಗುಲಿಗಳಿಂದ ಮೃದುವಾಗಿ ತೆರೆಯುವಂತೆ ಗುರು ವಾದವನೂ ಸಹ ಅಜ್ಞಾನದಿಂದ ಮುಚ್ಚಲ್ಪಟ್ಟ ಶಿಷ್ಯನ ಅಂತಶ್ಚಕ್ಷುವನ್ನು ಜ್ಞಾನವೆಂಬ ಅಂಜನವನ್ನು ಹಚ್ಚುವುದರ ಮೂಲಕ ತೆರೆಯುತ್ತಾನೆ. ಪರಮಾತ್ಮ ತತ್ತ್ವವು ನಮ್ಮೆಲ್ಲರ ಹೃದಯದಲ್ಲಿಯೇ ಅಡಗಿದ್ದರೂ ಗುರು ಬೋಧೆ ದೊರೆಯದೆ ಅದರ ಸಾಕ್ಷಾತ್ಕಾರ ವಾಗದು. ಅದನ್ನು ಚರ್ಮಚಕ್ಷುವಿನಿಂದ ನೋಡಲಾಗುವುದಿಲ್ಲ.

''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' ಎಂಬ ಉಪನಿಷದ್ವಚನದಲ್ಲಿ ಪರಮಾತ್ಮ ತತ್ತ್ವವು ಬಾಹ್ಯ ಹಾಗೂ ಅಂತರಂಗದ ಅಶುದ್ಧವಾದ ಇಂದ್ರಿಯಗಳಿಗೆ ಅಗೋಚರವೆಂಬುದಾಗಿ ಪ್ರತಿಪಾದಿಸಲಾಗಿದೆ. ಇಂತಹ ಅಗೋಚರ ವಾದ ತತ್ತ್ವವನ್ನು ಶಿಷ್ಯನಿಗೆ ತಿಳಿಸುವುದಕ್ಕಾಗಿ ಗುರುವು ಆತನ ಮನೋಬುದ್ಧಿಗಳಿಗೆ ಪ್ರಶಿಕ್ಷಣವನ್ನು ಕೊಟ್ಟು ಅವುಗಳಿಗೆ ಪರಮಾತ್ಮನನ್ನು ಅರಿಯುವ ಯೋಗ್ಯತೆಯನ್ನು ತಂದು ಕೊಡುತ್ತಾನೆ. ತನಗೆ ಶರಣಾಗತನಾದ ಶಿಷ್ಯನ ಮೇಲೆ ಶಾಸನವನ್ನೂ ಸಹ ಆತನು ಮಾಡಬಲ್ಲನು. ಗುರುವಿನ ಶಾಸನದಿಂದ ಅನುಶಾಸಿತನಾದವನೆ ಯೋಗ್ಯ ಶಿಷ್ಯನಾಗುವನು. ಶ್ರೀ ಭಗವದ್ಗೀತೆಯಲ್ಲಿ ಅರ್ಜುನನು ಶ್ರೀಕೃಷ್ಣನನ್ನುದ್ದೇಶಿಸಿ– ''ಶಿಷ್ಯ ಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್'' ಎಂಬುದಾಗಿ ತನ್ನನ್ನು ಶ್ರೀಕೃಷ್ಣನ ಶಿಷ್ಯನನ್ನಾಗಿ ಒಪ್ಪಿಕೊಂಡು ಅವನ ಅನುಶಾಸನವು ತನಗೆ ಮಾನ್ಯವೆಂಬುದಾಗಿ

ಹೇಳಿದ್ದನ್ನು ಕಾಣುತ್ತೇವೆ. ಗುರುವಾದವನು ಶಾಸನಮೂಲಕ ಶಿಷ್ಯನನ್ನು ಪರೀಕ್ಷಿಸುತ್ತಾನೆ. ಅಧಿಕಾರ ಸಂಪನ್ನನಾದ ಯೋಗ್ಯಶಿಷ್ಯನೆಂಬುದು ಕಂಡುಬಂದಾಗ ಆತನಿಗೆ ಬೋಧಾಮೃತದಿಂದ ತೃಪ್ತಿಗೊಳಿಸುತ್ತಾನೆ. ಶಿಷ್ಯತ್ವ ಸಂಪನ್ನರಾದ, ಗುರುವಿನ ಶಾಸನವನ್ನು ಮನ್ನಿಸುವ, ಯೋಗ್ಯರಾದ ಶಿಷ್ಯರು ಜಗತ್ತಿನಲ್ಲಿ ಬಹುವಿರಳ. ಆದರೆ ಯಾವದೊಂದು ನಿಮಿತ್ತ ಹೇಳಿ ಗುರುವಿನ ಶಾಸನದಿಂದ ತಪ್ಪಿಸಿಕೊಳ್ಳುವವರೇ ಹೇರಳ.

ಒಂದಾನೊಂದು ಊರಲ್ಲಿ ಒಬ್ಬ ವ್ಯಕ್ತಿಯು ವಿದ್ಯಾಧ್ಯಯನಕ್ಕಾಗಿ ಗುರುಕುಲಕ್ಕೆ ಹೋಗಿದ್ದನು. ಮನೆಯಲ್ಲಿ ಯಾವ ಕೆಲಸವನ್ನೂ ಮಾಡದ ಮೈಗಳ್ಳನು ಅವನಾಗಿದ್ದನು. ಗುರುಕುಲದಲ್ಲಿ ಗುರುಗಳು ಆತನಿಗೆ ಬಟ್ಟೆಯನ್ನು ತೊಳೆಯುವ ಸೇವೆಯನ್ನು ವಹಿಸಿ ಕೊಟ್ಟರು. ಹೀಗೆಯೇ ಮಾಡುತ್ತ ಹೋದರೆ ಇದು ನಮ್ಮ ಜೀವನದುದ್ದಕ್ಕೂ ಎಂದೂ ಕೈಬಿಡದು, ಆದ ಕಾರಣ ಈಗಲೇ ಏನಾದರೊಂದು ಉಪಾಯವನ್ನು ಹುಡುಕಬೇಕೆಂದು ವಿಚಾರಿಸುತ್ತಿರಲಾಗಿ ಅವನ ಮನಸ್ಸಿನಲ್ಲಿ ಒಂದು ಯೋಚನೆಯು ಹೊಳೆಯಿತು. ತತ್‌ಕ್ಷಣ ಆತನು ಗುರುವಿನ ಹತ್ತಿರ ಹೋಗಿ ''ಹೇ ಗುರುದೇವಾ ! ನೀವು ನಮಗೆ ಪೂಜ್ಯರು. ನಿಮ್ಮ ಯಾವುದೇ ವಸ್ತುವಿಗೆ ನಮ್ಮ ಪಾದಸ್ಪರ್ಶವಾಗಬಾರದು ಅದರಿಂದ ನಮಗೆ ಪಾಪ ಸಂಭವಿಸುವುದು. ಆದರೆ ನಿಮ್ಮ ಪಾದವು ನಮಗಾಗಲೀ ನಮ್ಮ ವಸ್ತುವಿಗಾಗಲೀ ಹತ್ತಿದರೆ ಅವು ಪಾವನವಾಗುತ್ತವೆ. ಪ್ರತಿದಿನ ನಿಮ್ಮ ಬಟ್ಟೆಯನ್ನು ತೊಳೆಯುವಾಗ ಅವುಗಳಿಗೆ ನಮ್ಮ ಪಾದಸ್ಪರ್ಶವಾಗುತ್ತಿದೆ. ಇದರಿಂದ ಮನದಲ್ಲಿ ಭೀತಿಯುಂಟಾಗಿದೆ. ಕಾರಣ ಇನ್ನು ಮುಂದೆ ನಾನು ನಿಮ್ಮ ಬಟ್ಟೆಯನ್ನು ತೊಳೆಯಲಾರೆ. ಆದರೆ ನೀವೇ ನಮ್ಮ ಬಟ್ಟೆಯನ್ನು ತೊಳೆದರೆ ನಿಮ್ಮ ಪಾದಸ್ಪರ್ಶದಿಂದ ನಮ್ಮ ಬಟ್ಟೆಗಳು ಪಾವನಗಳಾಗುವವಲ್ಲದೆ ನಮ್ಮ ಜನ್ಮವೂ ಸಾರ್ಥಕವಾಗುತ್ತದೆ'' ಎಂದು ನುಡಿದನಂತೆ.

ಜಗತ್ತಿನಲ್ಲಿ ಈ ಪ್ರಕಾರದ ಶಿಷ್ಯರೇ ಬಹಳ. ಇಂಥವರಿಗೆ ಗುರುಕೃಪೆಯು ಲಭಿಸದು. ಗುರುವಿನ ಶಾಸನದಿಂದ ತನಗೆಷ್ಟೇ ತೊಂದರೆಯುಂಟಾದರೂ ಗುರುಸಾನ್ನಿಧ್ಯವನ್ನು ತ್ಯಜಿಸಬಾರದು. ಅಂತೆಯೇ ಸರ್ವಜ್ಞಕವಿಯು–

ಎತ್ತಾಗಿ ತೊತ್ತಾಗಿ ಹಿತ್ತಲದ ಮರವಾಗಿ<br>
ಮತ್ತೆ ಪಾದದಾ ಕೆರವಾಗಿ ಗುರುವಿನ<br>
ಹತ್ತಿರಿರುಯೆಂದ ಸರ್ವಜ್ಞ ॥

ಎಂಬುದಾಗಿ ಹೇಳಿ ಗುರುಸಾನ್ನಿಧ್ಯದ ಮಹತಿಯನ್ನು ಕೊಂಡಾಡಿದ್ದಾನೆ. ಇಂತಹ ಸದ್ಭಾವನೆಯುಳ್ಳ ಶಿಷ್ಯರ ಮೇಲೆಯೇ ಗುರು ಶಾಸನವನ್ನು ಮಾಡುತ್ತಾನೆ. ಗುರುವಿನ ಈ ಶಾಸನದಿಂದ ಶಿಷ್ಯನು ಪರಿಶುದ್ಧನಾಗಿ ಗುರೂಪದೇಶವನ್ನು ಪಡೆಯಲು ಪಾತ್ರನಾಗುತ್ತಾನೆ. ಇಂತಹ ಪ್ರಶಾಸಕನಿಗೇನೇ ಶಿಕ್ಷಾಗುರು ಎನ್ನುವರು.

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಪೂರ್ವೋಕ್ತನಾದ ಶಿಕ್ಷಾಗುರುವು ಆಚಾರ್ಯಪದವಾಚ್ಯನೂ ಆಗುತ್ತಾನೆಂಬುದನ್ನು ತಿಳಿಸಲೋಸುಗ ಪುನಃ

ಸಂಸಾರತಿಮಿರೋನ್ಮಾಥಿಶರಚ್ಚಂದ್ರಮರೀಚಯಃ ।
ವಾಚೋ ಯಸ್ಯ ಪ್ರವರ್ತಂತೇ ತಮಾಚಾರ್ಯಂ ಪ್ರಚಕ್ಷತೇ

(ಸಿ.ಶಿ.೧೫–೧೪)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶರದ್ ಋತುವಿನಲ್ಲಿಯ ಚಂದ್ರನ ಸ್ವಚ್ಛವಾದ ಬೆಳದಿಂಗಳು ಕತ್ತಲೆಯನ್ನು ಕಳೆದು ಶೀತಲವಾದ ಪ್ರಕಾಶವನ್ನು ಕೊಡುವಂತೆ ಸಂಸಾರರೂಪಿಯಾದ ಕತ್ತಲೆಯನ್ನು ಇಲ್ಲದಂತೆ ಮಾಡುವ ಸಾಮರ್ಥ್ಯವು ಯಾರ ವಾಣಿಯಲ್ಲಿರುತ್ತದೆಯೋ ಅವನಿಗೆ ಆಚಾರ್ಯನೆಂದು ಕರೆಯುತ್ತಾರೆ. ಗುರುವಿನ ಅಮೃತವಾಣಿಯು ಶರತ್ಕಾಲದ ಚಂದ್ರನ ಬೆಳದಿಂಗಳಂತೆ ಶೀತಲವಾಗಿರುತ್ತದೆ. ಸಂಸಾರ ತಾಪದಿಂದ ತಪ್ತನಾದ ವ್ಯಕ್ತಿಯು ಗುರು ಸಾನ್ನಿಧ್ಯಕ್ಕೆ ಬಂದಾಗ ಅವರ ದರ್ಶನ ವನ್ನು ಪಡೆದು ವಚನಾಮೃತವನ್ನು ಶ್ರವಣಮಾಡಿದಾಗ ಆತನ ಮನಸ್ಸು ಶೀತಲತೆ ಯನ್ನನುಭವಿಸುತ್ತದೆ. ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಬ್ಬ ವ್ಯಕ್ತಿಗೆ ಆಧ್ಯಾತ್ಮಿಕ, ಆದಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯಗಳು ಯಾವಾಗಲೂ ಅವನಿಗೆ ಸಂತಾಪ ವನ್ನೇ ಕೊಡುತ್ತಲಿರುತ್ತವೆ. ಈ ತಾಪತ್ರಯಗಳು ನಿಶ್ಶೇಷವಾಗಬೇಕಾದರೆ ಗುರುವಿನ ಕೃಪೆ ಹಾಗೂ ಅವರ ಉಪದೇಶವು ಅವಶ್ಯವಾಗಿ ಬೇಕು. ಹೀಗೆ ಶಿಷ್ಯನ ತಾಪವನ್ನು ದೂರ ಮಾಡಿ ಅವನಿಗೆ ಆತ್ಮಜ್ಞಾನದ ಶಿಕ್ಷಣವನ್ನು ಕೊಡುವವನೇ ಶಿಕ್ಷಾಗುರುವು. ಇವನಿಗೇನೇ ಆಚಾರ್ಯನೆಂತಲೂ ಕರೆಯುವರು.

ಈ ಆಚಾರ್ಯನನ್ನೇ ಪೂಜ್ಯಪಾದರು ಪುನಃ –

ದದಾತಿ ಯಃ ಪತಿಜ್ಞಾನಂ ಜಗನ್ಮಾಯಾನಿವರ್ತಕಮ್ ।
ಅದ್ವೈತವಾಸನೋಪಾಯಂ ತಮಾಚಾರ್ಯವರಂ ವಿದುಃ ॥

(ಸಿ. ಶಿ. ೧೫–೧೫)

ಈ ತೆರನಾಗಿ ವರ್ಣಿಸಿದ್ದಾರೆ. ಶ್ರೀಗುರುವು ಶಿಷ್ಯನಿಗೆ ಪತಿ ವಿಷಯಕವಾದ ಜ್ಞಾನವನ್ನು ಉಪದೇಶಿಸುತ್ತಾನೆ. ವೀರಶೈವ ಸಿದ್ಧಾಂತದ ಪ್ರಕಾರವಾಗಿ ಜೀವನಿಗೆ ಪಶುವೆಂತಲೂ ಶಿವನಿಗೆ ಪತಿಯೆಂತಲೂ ಕರೆಯುತ್ತಾರೆ. ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ತ್ರಿವಿಧ ಮಲಗಳಿಂದ ಆವೃತನಾದ ಜೀವಾತ್ಮನಿಗೆ ಪಶುವೆಂಬುದಾಗಿ ಕರೆಯಲಾಗಿದೆ. 'ಪಾಶಬದ್ಧಃ ಪಶುಃ' ಎಂಬ ಉಕ್ತಿಗನುಸಾರವಾಗಿ ಇವನು ತ್ರಿವಿಧಪಾಶಗಳಿಂದ ಬಂಧಿತನಾಗಿರೋಣದರಿಂದ ಪಶುವೆಂಬ ಶಬ್ದವು ಜೀವಾತ್ಮನಿಗೆ ಸಾರ್ಥಕವಾಗಿರುತ್ತದೆ. ಅಂತೆಯೇ ಈ ಜೀವಾತ್ಮನಿಗೆ ಸಂಸಾರದಿಂದ ಬೇಗನೇ ಬಿಡುಗಡೆಯು ದೊರೆಯುವುದಿಲ್ಲ. ಪಾಶವಿಶಿಷ್ಟನಾದ ಈತನು ಯಾವಾಗ ಸದ್ಗುರುವಿಗೆ ಶರಣಾಗತನಾಗುವನೋ ಆಗ ಗುರುವು ಇವನ ಪಾಶಗಳನ್ನು ಕಳೆದು ಜಗತ್ತಿನ ಮಾಯೆಯನ್ನು ದೂರಗೊಳಿಸಿ ಆತನಿಗೆ ಪತಿಜ್ಞಾನವನ್ನು ಉಪದೇಶಿಸುತ್ತಾನೆ. ಈ ಪತಿಜ್ಞಾನದಿಂದಲೇ ಆತನು ಪಶುಭಾವವನ್ನು ಕಳೆದುಕೊಳ್ಳುತ್ತಾನೆ. ಹೀಗೆ ಪಶುಭಾವವು ನಿವೃತ್ತಿಯಾದ ಬಳಿಕ ಇವನಲ್ಲಿಯೂ ಪತಿಭಾವರೂಪವಾದ ಅದ್ವೈತಜ್ಞಾನವು ಅರ್ಥಾತ್ ಶಿವಾದ್ವೈತ ಜ್ಞಾನವು ಉಂಟಾಗುತ್ತದೆ. ಈ ತೆರನಾಗಿ ಶಿಷ್ಯನಿಗೆ ಇಂತಹ ಶಿಕ್ಷಣವನ್ನು ಕೊಡಮಾಡುವ

ಶಿಕ್ಷಾಗುರುವೇ ಇಲ್ಲಿ ಆಚಾರ್ಯಪದವಾಚ್ಯನೂ ಆಗುತ್ತಾನೆ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೯ ಆಗಷ್ಟ್ ೧೯೯೨

(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)

■■

# ಶಿಕ್ಷಾಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀಸಿದ್ಧಾಂತ ಶಿಖಾಮಣಿಯು. ಈ ಸ್ಥಲದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆ ಕ್ರಮಪ್ರಾಪ್ತವಾದ ಶಿಕ್ಷಾಗುರುಸ್ಥಲದ ಬಗ್ಗೆ ಆಶೀರ್ವಚನವನ್ನು ಆಲಿಸಿದ್ದೀರಿ. ಸದ್ಯಃ ಅದೇ ಸ್ಥಲವನ್ನೇ ಪುನಃಮುಂದುವರೆಸುತ್ತಿದ್ದೇವೆ.

ಸದ್ಗುರುಗಳು ಶಿಷ್ಯನನ್ನು ಪರಿಶುದ್ಧಗೊಳಿಸುವುದಕ್ಕಾಗಿ ಅವನಿಗೆ ಸೇವಾಕಾರ್ಯ ವನ್ನು ಮಾಡಲು ಆಜ್ಞಾಪಿಸುತ್ತಾರೆ. ಗುರು–ಹಿರಿಯರ ಸೇವೆಯನ್ನು ಮಾಡುವ ಸುಸಂಧಿಯು ಪ್ರಾಪ್ತವಾಗಬೇಕಾದರೆ ಪ್ರಾಕ್ತನ ಪುಣ್ಯವೇ ಬೇಕು. ''ಸೇವಾಧರ್ಮಃ ಪರಮಗಹನಃ ಯೋಗೀನಾಮಪ್ಯಗಮ್ಯಃ'' ಎಂಬ ಉಕ್ತಿಗನುಸಾರವಾಗಿ ಮಹಾನ್ ಮಹಾನ್ ಯೋಗಿಗಳಿಗೂ ಸಹ ಈ ಭಾಗ್ಯವು ದೊರೆಯುವುದು ದುರ್ಲಭವೆಂತಲೇ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಮನುಷ್ಯನಲ್ಲಿ ಸೇವಾ ಮನೋಭಾವನೆಯು ಜಾಗೃತ ವಾಯಿತೆಂದರೆ ಅವನಲ್ಲಿಯ ಸ್ವಾರ್ಥಾದಿ ಸಂಕುಚಿತ ಭಾವನೆಗಳು ಇಲ್ಲದಂತಾಗುತ್ತವೆ. ಮನುಷ್ಯನು ಎಷ್ಟೆಷ್ಟು ಸ್ವಾರ್ಥಪರನಾಗುವನೋ ಅಷ್ಟಷ್ಟು ಅವನು ಸ್ವತಃ ಅಸ್ವಸ್ಥನಾಗುವನಲ್ಲದೆ ಸಮಾಜದ ಸ್ವಾಸ್ಥ್ಯವನ್ನೂ ಹಾಳುಮಾಡುವನು. ಆದಕಾರಣ ವ್ಯಕ್ತಿ ಹಾಗೂ ಸಮಾಜ ಇವೆರಡೂ ಸ್ವಸ್ಥವಾಗಿರಬೇಕಾದರೆ ಸೇವಾ ಭಾವನೆಯು ಪರಮೋಪಯೋಗಿಯಾಗಿರುವುದು.

ಪ್ರಾಚೀನಕಾಲದಲ್ಲಿ ಗುರುಗಳ ಆಶ್ರಮಗಳಲ್ಲಿಯೇ ಗುರುಕುಲಗಳು ಇರುತ್ತಿದ್ದವು. ಆ ಗುರುಕುಲದಲ್ಲಿ ರಾಜಪುತ್ರನೇ ಇರಲಿ, ದಾಸಪುತ್ರನೇ ಇರಲಿ, ಎಲ್ಲರಿಗೂ ಪ್ರವೇಶವು ದೊರೆಯುತ್ತಿತ್ತು, ಅಲ್ಲಿ ಪ್ರವೇಶಪಡೆದ ಪ್ರತಿಯೊಬ್ಬರೂ ಗುರುಸೇವೆಯನ್ನುಗೈದೇ ವಿದ್ಯಾರ್ಜನೆಯನ್ನು ಮಾಡಿಕೊಳ್ಳುತ್ತಿದ್ದರು. ಗುರುಸೇವೆಯಿಂದ ಬಂದ ವಿದ್ಯೆಯು ಫಲಕಾರಿಯಾಗಿರುತ್ತದೆ. ಮೊದಲು ಗುರುಗಳಿದ್ದಲ್ಲಿಗೆ ಶಿಷ್ಯರು ಹೋಗುತ್ತಿದ್ದರೆ, ಈಗ ಶಿಷ್ಯರಿದ್ದಲ್ಲಿಗೇನೇ ಗುರುಗಳು ಹೋಗುವ ಪದ್ಧತಿಯು ರೂಢಿಯಲ್ಲಿ ಬರುತ್ತಿದೆ. ಸ್ಕೂಲು ಕಾಲೇಜುಗಳಲ್ಲಿಯೂ ಸಹ ವಿದ್ಯಾರ್ಥಿಗಳು ಒಂದೇ ರೂಮಿನಲ್ಲಿ ಇರುತ್ತಿದ್ದು ಅಧ್ಯಾಪಕರೇ ಸಮಯ ಸಮಯಕ್ಕೆ ಬದಲಿಯಾಗಿ ಅವರಿದ್ದಲ್ಲಿಗೆ ಹೋಗಿ ಕಲಿಸುವುದನ್ನು ಕಾಣುತ್ತಿದ್ದೇವೆ. ಇನ್ನೊಂದು ವೈಪರೀತ್ಯವೆಂದರೆ ಶಿಷ್ಯರೆಲ್ಲ ಕುಳಿತು ಪಾಠಕೇಳುತ್ತಿದ್ದರೆ

ಗುರುಗಳಾದವರು ನಿಂತು ಪಾಠಹೇಳುತ್ತಾರೆ. ಅಂತೆಯೇ ಇಂದಿನ ವಿದ್ಯಾರ್ಥಿಗಳು ಗುರುಗಳನ್ನು ಗುರುಗಳೆಂದು ಭಾವಿಸದೆ ಸರಕಾರಿ ನೌಕರರನ್ನಾಗಿ ಭಾವಿಸುತ್ತಿದ್ದಾರೆ. ಅಂದಾಗ ವಿದ್ಯೆ ಅದು ಹೇಗೆ ತಾನೆ ಬಂದೀತು ? ಸ್ಕೂಲು–ಕಾಲೇಜುಗಳೇ ಇರಲಿ ಅಥವಾ ಗುರುಕುಲಗಳೇ ಇರಲಿ ಅಲ್ಲಿ ಕಲಿಸುವ ಗುರುಗಳ ಬಗ್ಗೆ ಶ್ರದ್ಧೆ ಹಾಗೂ ಸೇವಾಭಾವನೆಯನ್ನು ಹೊಂದುವುದು ಇಂದಿಗೂ ಅವಶ್ಯಕವಾಗಿವೆ.

'ನ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್' ಎಂಬ ಉಪನಿಷತ್ಪ್ರಮಾಣದಂತೆ ಆಧ್ಯಾತ್ಮ ಜ್ಞಾನವನ್ನು ಪಡೆಯಬೇಕಾದ ಶಿಷ್ಯನು ಶ್ರೋತ್ರಿಯನೂ ಹಾಗೂ ಬ್ರಹ್ಮನಿಷ್ಠನೂ ಆದ ಗುರುವನ್ನು ಆಶ್ರಯಿಸಬೇಕಾಗುತ್ತದೆ. ಗುರುವಾದವನು ಕೇವಲ ಬ್ರಹ್ಮನಿಷ್ಠನಾದರೆ ಸಾಲದು. ಅವನು ಸಕಲಶಾಸ್ತ್ರ ಪಾರಂಗತನೂ ಆಗಿರಬೇಕು. ಅಂದಾಗಲೇನೇ ಶಿಷ್ಯನ ಮನಸ್ಸಿನಲ್ಲಿ ಬರುವ ಅನೇಕ ಸಂದೇಹಗಳನ್ನು ಆತನು ನಿವಾರಿಸಲು ಸಮರ್ಥನಾಗುವನು. ಇದೇ ವಿಷಯವನ್ನೇ ಪೂಜ್ಯಪಾದರು–

> ಪೂರ್ವಪಕ್ಷಂ ಸಮಾದಾಯ ಜಗದ್ಭೇದವಿಕಲ್ಪನಮ್ ।
> ಅದ್ವೈತಕೃತಸಿದ್ಧಾಂತೋ ಗುರುರೇಷ ಗುಣಾಧಿಕಃ ॥

(ಸಿ.ಶಿ. ೧೫–೧೬)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಜಗತ್ತಿನಲ್ಲಿ ತೋರುವ ಭೇದವಿಕಲ್ಪಾದಿ ಗಳನ್ನು ಪೂರ್ವಪಕ್ಷವಾಗಿ ಗ್ರಹಿಸಿಕೊಂಡು ಅವುಗಳನ್ನು ನಿರಸನಗೊಳಿಸಿ ಶಿವಾದ್ವೈತ ಸಿದ್ಧಾಂತವನ್ನು ಸಿದ್ಧಗೊಳಿಸುವ ಶಿಕ್ಷಾಗುರುವೇ ಗುಣಾಧಿಕನು ಅರ್ಥಾತ್ ಶ್ರೇಷ್ಠನೆಂಬ ಭಾವನೆ.

ಸಾಮಾನ್ಯವಾಗಿ ಜಗತ್ತು ಹಾಗೂ ಅದರಲ್ಲಿರುವ ವೈವಿಧ್ಯತೆಯು ಅರ್ಥಾತ್ ಭೇದವು ಎಲ್ಲರಿಗೂ ಗೋಚರವಾಗುತ್ತಲಿರುತ್ತದೆ. ಆದರೆ ಅತಿಸೂಕ್ಷ್ಮನಾದ, ಜಗತ್ತಿನ ತುಂಬೆಲ್ಲ ವ್ಯಾಪಕನಾಗಿರುವ ಪರಮಾತ್ಮನ ಅನುಭೂತಿಯು ಸರ್ವರಿಗೂ ಆಗುವುದಿಲ್ಲ. ಅಂತೆಯೇ ಶಿಷ್ಯನು ಗುರುವನ್ನುದ್ದೇಶಿಸಿ ''ಹೇ! ಗುರುದೇವಾ ಕಾಣುವ ಜಗತ್ತನ್ನು ಇಲ್ಲೆಂದು ಹೇಳುವ, ಕಾಣದ ಪರಮಾತ್ಮನು ಉಂಟೆಂದು ಹೇಳುವ ಈ ಪದ್ಧತಿಯು ಅದು ಹೇಗೆ ತಾನೆ ಸೂಕ್ತವಾದೀತು? ಮುಂತಾದ ಹಲವಾರು ಪ್ರಶ್ನೆಗಳನ್ನು ಶಿಷ್ಯನು ಮಾಡಿದಾಗ ಅವೆಲ್ಲವುಗಳಿಗೆ ಸಮರ್ಪಕವಾದ ಉತ್ತರವನ್ನಿತ್ತು ಅವನ ಸಂದೇಹವನ್ನೆಲ್ಲ ದೂರ ಮಾಡಬೇಕಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಬ್ಬರು ಪ್ರತ್ಯಕ್ಷ ಪ್ರಮಾಣಕ್ಕೇನೇ ಹೆಚ್ಚಿನ ಮಹತ್ತ್ವವನ್ನು ಕೊಡುವುದುಂಟು. ದೇವರ ಬಗ್ಗೆ ಯಾರಾದರೂ ಏನನ್ನಾದರೂ ಹೇಳುತ್ತಿದ್ದರೆ ಆ ದೇವರನ್ನು ನೀವು ಕಂಡಿದ್ದೀರಾ? ಎಂಬುದಾಗಿ ಎಲ್ಲರೂ ಪ್ರಶ್ನಿಸುತ್ತಾರೆ. ಪ್ರತಿಯೊಂದು ವಸ್ತುವನ್ನು ಪ್ರತ್ಯಕ್ಷ ಪ್ರಮಾಣದಿಂದಲೇ ಸಿದ್ಧಮಾಡಲಾಗುವದಿಲ್ಲ. ಜಗತ್ತನ್ನು ನೋಡುವ ನಮ್ಮ ಕಣ್ಣುಗಳೇ ನಮಗೆ ಪ್ರತ್ಯಕ್ಷವಾಗಿ ಕಾಣುವುದಿಲ್ಲ.

ಪ್ರತ್ಯಕ್ಷಪ್ರಮಾಣವು ಎಲ್ಲಿ ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳುವುದೋ ಅಲ್ಲಿ ಅನುಮಾನ ಪ್ರಮಾಣವನ್ನು ಆಶ್ರಯಿಸಬೇಕಾಗುತ್ತದೆ. ದೂರದ ಪರ್ವತದಲ್ಲಿ

ಊರ್ಧ್ವಮುಖವಾಗಿ ಏಳುತ್ತಿದ್ದ ಧೂಮವನ್ನು ಕಂಡು 'ಪರ್ವತೋ ವಹ್ನಿಮಾನ್' ಅಂದರೆ ಪರ್ವತದಲ್ಲಿ ಅಗ್ನಿ ಇದೆ ಎಂಬ ಜ್ಞಾನವು ಉಂಟಾಗುತ್ತದೆ. ಇಲ್ಲಿ ಅಗ್ನಿಯು ಪ್ರತ್ಯಕ್ಷವಾಗಿ ತೋರದಿದ್ದರೂ ಎಲ್ಲೆಲ್ಲಿ ಹೊಗೆ ಇರುತ್ತದೆಯೋ ಅಲ್ಲಲ್ಲಿ ಬೆಂಕಿಯಿರುತ್ತದೆ ಎಂಬ ಸಾಹಚರ್ಯ ನಿಯಮಾನುಸಾರವಾಗಿ ಅದರ ಅನುಭೂತಿಯುಳ್ಳ ವ್ಯಕ್ತಿಗೆ ಧೂಮವನ್ನು (ಹೊಗೆಯನ್ನು) ನೋಡಿದಾಗ ಅಗ್ನಿಯ ಜ್ಞಾನವಾಗುವುದು. ಇದು ಲೋಕಾನುಭವ ಸಿದ್ಧವಾದುದು. ಅಗ್ನಿಯು ಧೂಮದ ಜನಕವಾಗಿರುತ್ತದೆ. ಅರ್ಥಾತ್ ಅಗ್ನಿಯಿಲ್ಲದೆ ಧೂಮದ ಉತ್ಪತ್ತಿಯು ಆಗುವುದೇ ಇಲ್ಲ. ಅಂದಾಗ ಕಾರ್ಯರೂಪವಾದ ಹೊಗೆಯು ಕಣ್ಣಿಗೆ ಕಾಣುತ್ತಿರುವಾಗ ಅದಕ್ಕೆ ಕಾರಣರೂಪವಾದ ಅಗ್ನಿಯ ಅನುಮಾನಿಕ ಜ್ಞಾನವು ಉಂಟಾಗುತ್ತದೆ. ಇದರಂತೆ ಈ ವಿಶಾಲವಾದ ಜಗತ್ತೂ ಸಹ ಬೃಹತ್ ಪ್ರಮಾಣದ ಕಾರ್ಯವಾಗಿರುವಾಗ ಇದನ್ನು ನಿರ್ಮಿಸಿದ ವ್ಯಕ್ತಿಯು ಇದಕ್ಕಿಂತಲೂ ಬೃಹದಾಕಾರದಲ್ಲಿರುವನು, ಇರಲೇಬೇಕೆಂಬ ಜ್ಞಾನವು ಉಂಟಾಗುತ್ತದೆ. ಇದುವೇ ಅನುಮಾನ ಜ್ಞಾನವು. ಇದೂ ಅಲ್ಲದೆ ಶಬ್ದ, ಉಪಮಾನ, ಅರ್ಥಾಪತ್ತಿ ಮುಂತಾದ ಪ್ರಮಾಣಗಳಿಂದಲೂ ವ್ಯಕ್ತಿ ಇಲ್ಲವೆ ವಸ್ತುವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಶಿಷ್ಯನಾದವನು ತೋರುವ ಜಗತ್ತಿನ ಭೇದವೇ ಸತ್ಯವೆಂಬುದಾಗಿ ಭಾವಿಸಿ ಈ ಭೇದಜ್ಞಾನದ ನಿವೃತ್ತಿಯು ಅದು ಹೇಗಾಗುವುದೆಂಬ ಜಿಜ್ಞಾಸೆಯುಂಟಾದಾಗ ಭೇದವು ವ್ಯಾವಹಾರಿಕವಾಗಿ ತೋರುತ್ತಿದ್ದರೂ ಪಾರಮಾರ್ಥಿಕ ದೃಷ್ಟಿಯಲ್ಲಿ ಇದೆಲ್ಲವೂ ಪರಮಾತ್ಮ ಸ್ವರೂಪವೇ ಆಗಿರುತ್ತದೆ. ''ನೇಹನಾನಾಸ್ತಿ ಕಿಂಚನ'', 'ಲಿಂಗಮಧ್ಯೇ ಜಗತ್ಸರ್ವಮ್', 'ತ್ರೈಲೋಕ್ಯಂ ಸಚರಾಚರಮ್' ಎಂಬ ಉಪನಿಷತ್ ಪ್ರಮಾಣದಂತೆ ಇಲ್ಲಿ ಪರಮಾತ್ಮನ ಹೊರತಾಗಿ ಬೇರಾವುದೂ ಇಲ್ಲವೇ ಇಲ್ಲ. ಎಲ್ಲವೂ ಪರಮಾತ್ಮ ಸ್ವರೂಪವೇ ಆಗಿದೆ. ಮುಂತಾದ ಶಿವಾದ್ವೈತ ಜ್ಞಾನವನ್ನು ಶಿಷ್ಯನಿಗೆ ಉಪದೇಶಿಸಿದ ಗುರುಗಳು ಅವನ ಭೇದಬುದ್ಧಿಯನ್ನು ದೂರಮಾಡಿ ಶಿವಾದ್ವೈತ ಜ್ಞಾನ ಸಂಪನ್ನನಾಗಿ ಮಾಡುತ್ತಾರೆ. ಹೀಗೆ ಶಿಷ್ಯನ ಮನಸ್ಸಿನಲ್ಲುಂಟಾದ ಪೂರ್ವಪಕ್ಷ ರೂಪಗಳಾದ ಸಕಲ ಸಂದೇಹಗಳನ್ನು ದೂರಮಾಡಬಲ್ಲ ಈ ಶಿಕ್ಷಾಗುರುವೇ ಅರ್ಥಾತ್ ಶ್ರೋತ್ರಿಯತ್ವ ಸಂಪನ್ನನಾದ (ಸಕಲಶಾಸ್ತ್ರ ಪಾರಂಗತನಾದ) ಗುರುವೇ ಗುಣಾಧಿಕನು ಅಂದರೆ ಶ್ರೇಷ್ಠನೆಂಬುದಾಗಿ ತಿಳಿದುಕೊಳ್ಳಬೇಕು.

ಶಿಷ್ಯನ ಸಂದೇಹವನ್ನು ದೂರಮಾಡಬಲ್ಲ ಸಾಮರ್ಥ್ಯವುಳ್ಳ ಸದ್ಗುರುವು ಗುರುಗಳಲ್ಲಿಯೇ ಶಿಖಾಮಣಿಯಾಗಿದ್ದಾನೆ ಎಂಬ ವಿಷಯವನ್ನು ಪ್ರಸ್ತಾಪಪಡಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ –

> ಸಂದೇಹವನಸಂದೋಹಸಮುಚ್ಛೇದ ಕುಠಾರಿಕಾ।
> ಯತ್ಸೂಕ್ತಿಧಾರಾ ವಿಮಲಾ ಸ ಗುರೂಣಾಂ ಶಿಖಾಮಣಿಃ॥
>
> (ಸಿ.ಶಿ. ೧೫–೧೭)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಅತ್ಯಂತ ನಿಬಿಡವಾದ ಅರಣ್ಯವನ್ನು ಒಂದು ಹದನವಾದ ಕೊಡಲಿಯಿಂದ ಕಡಿದು ಹಾಕುವಂತೆ ಸದ್ಗುರು

ಗಳಾದವರು ಶಿಷ್ಯನ ಮನಸ್ಸಿನಲ್ಲಿ ಉಂಟಾಗುವ ಸಮಸ್ತ ಸಂದೇಹಗಳನ್ನು ತಮ್ಮ ನಿರ್ಮಲವಾದ ಜ್ಞಾನದ ಮೂಲಕ ಇಲ್ಲದಂತಾಗಿಸುತ್ತಾರೆ. ಅರ್ಥಾತ್ ಇವರ ಜ್ಞಾನ ವೆಂಬ ಕೊಡಲಿಯು ಶಿಷ್ಯನ ಮನದಲ್ಲಿ ಬೆಳೆದಿರುವ ಸಂಶಯವೆಂಬ ಅರಣ್ಯವನ್ನು ಸಮೂಲವಾಗಿ ನಾಶಗೊಳಿಸುತ್ತದೆ. ಹೀಗೆ ಶಿಷ್ಯನ ಸಂಶಯಗಳನ್ನು ದೂರಮಾಡಬಲ್ಲ ಶಾಸ್ತ್ರಕೋವಿದನಾದ ಗುರುವು ಗುರುಗಳಲ್ಲಿಯೇ ಶಿಖಾಮಣಿ ಪ್ರಾಯನಾಗಿರುತ್ತಾನೆ. ಒಂದು ರುದ್ರಾಕ್ಷಿಯ ಮಾಲೆಯಲ್ಲಿ ಎಲ್ಲ ಮಣಿಗಳ ಮೇಲೆ ವಿರಾಜಿಸುವ ಮಣಿಗೆ ಶಿಖಾಮಣಿಯೆಂದು ಕರೆಯುವಂತೆ ಗುರುಗಳ ಸಂದೋಹದಲ್ಲಿ ಇವನೂ ಸಹ ಶಿಖಾಮಣಿಯಂತೆ ಒಪ್ಪುತ್ತಿರುತ್ತಾನೆ.

ಕಾಲೊಳಗಿನ ಮುಳ್ಳು ಮತ್ತು ಕಣ್ಣೊಳಗಿನ ಹರಳು ಇವುಗಳ ಬಗ್ಗೆ ಯಾರೂ ನಿರ್ಲಕ್ಷ್ಯ ವಹಿಸಬಾರದು. ಮುಳ್ಳಿಗೆ ತಾತ್ಸಾರಮಾಡಿದರೆ ಅಂಗಾಲಲ್ಲಿ ಆನೆ ಬೆಳೆದು ಮನುಷ್ಯನಿಗೆ ಸರಳವಾಗಿ ನಡೆಯಲಿಕ್ಕೇನೇ ಆಗುವುದಿಲ್ಲ. ಅದರಂತೆ ಸಂದೇಹದ ಸುಳಿಯಲ್ಲಿ ಸಿಲುಕಿರುವ ಅದಾವನ ಮನವೂ ಸ್ವಸ್ಥವಾಗಿರಲು ಸಾಧ್ಯವಾಗುವುದಿಲ್ಲ. ಕಾಲನ್ನು ಸ್ವಸ್ಥವಾಗಿಟ್ಟುಕೊಳ್ಳಬೇಕಾದರೆ ಅಕಸ್ಮಾತ್ತಾಗಿ ನೆಟ್ಟ ಮುಳ್ಳನ್ನು ತತ್‌ಕ್ಷಣ ದಲ್ಲಿಯೇ ತೆಗೆದುಹಾಕಬೇಕು. ಹೀಗೆಯೇ ಮನಸ್ಸಿನ ಸ್ವಾಸ್ಥ್ಯವನ್ನಪೇಕ್ಷಿಸುವ ವ್ಯಕ್ತಿಯು ಪ್ರಸಂಗಾನುಸಾರವಾಗಿ ತನ್ನ ಮನಸ್ಸಿನಲ್ಲಿ ಮೂಡಿಬಂದ ಶಾಸ್ತ್ರೀಯ ಸಂಶಯಗಳನ್ನು ದೂರಮಾಡಿಕೊಳ್ಳಲೋಸುಗ ಶಾಸ್ತ್ರಪಾರಂಗತನಾದ ಸದ್ಗುರುವಿಗೆ ಶರಣಾಗಿ ಸೇವಾದಿಗಳಿಂದ ಆತನನ್ನು ಸಂತುಷ್ಟಗೊಳಿಸಿಕೊಂಡು ತನ್ನ ಸಂದೇಹಗಳನ್ನು ದೂರಮಾಡಿಕೊಂಡು ಮನಸ್ಸಿನ ಸ್ವಾಸ್ಥ್ಯವನ್ನು ಪಡೆಯಬೇಕು. ಹೀಗೆ ಸ್ವಸ್ಥವಾದ ಮನಸ್ಸುಳ್ಳವನೇ ಸದಾ ಸುಖಿಯಾಗಿರಲು ಸಾಧ್ಯವಾಗುವುದು.

ಇಲ್ಲಿಯವರೆಗೆ ವರ್ಣಿಸಲ್ಪಟ್ಟ ಈ ಶಿಕ್ಷಾಗುರುವಿನಿಂದ ಶಿಷ್ಯನ ಅಜ್ಞಾನವು ದೂರಾಗಿ ಆತನಿಗೆ ಮೋಕ್ಷವು ಲಭಿಸುವುದು. ಶಿಷ್ಯನ ಭವವನ್ನು ಇಲ್ಲದಾಗಿಸುವ ಈ ಗುರುವಿಗೆ ಪೂಜ್ಯಪಾದರು 'ಭವತಾರಕಃ' ಎಂಬುದಾಗಿ ಸಂಬೋಧಿಸುತ್ತ ಪುನಃ –

ಯತ್ಸೂಕ್ತಿದರ್ಪಣಾಭೋಗೇ ನಿರ್ಮಲೇ ದೃಶ್ಯತೇ ಸದಾ ।
ಮೋಕ್ಷಶ್ರೀರ್ಬಿಂಬರೂಪೇಣ ಸ ಗುರುರ್ಭವತಾರಕಃ ॥

(ಸಿ.ಶಿ. ೧೫–೧೮)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ನಿರ್ಮಲವಾದ ದರ್ಪಣದಲ್ಲಿ ಸಮ್ಮುಖ ದಲ್ಲಿರುವ ವ್ಯಕ್ತಿಯ ಪ್ರತಿಬಿಂಬವು ಸ್ಪಷ್ಟವಾಗಿ ತೋರುವಂತೆ ಗುರುವಿನ ಉಪದೇಶ ವೆಂಬ ನಿರ್ಮಲ ಜ್ಞಾನದರ್ಪಣದಲ್ಲಿ ಮೋಕ್ಷಲಕ್ಷ್ಮಿಯು ಪ್ರತಿಬಿಂಬಿಸುತ್ತಾಳೆ. ಅಂದರೆ ಗುರುವಿನ ಉಪದೇಶವನ್ನು ಶ್ರವಣಮಾಡುತ್ತಿರುವಾಗಲೇ ಶಿಷ್ಯನಿಗೆ ಜೀವನ್ಮುಕ್ತಿಯ ಅನುಭವವು ಆಗತೊಡಗುವುದು. ಯಾರಿಗೆ ಇಂತಹ ಅನುಭವವಾಗುವುದೋ ಅವನು ಜನನ–ಮರಣಾತ್ಮಕವಾದ ಭವಸಾಗರವನ್ನು ದಾಟಿ ಹೋಗುವನು. ತನ್ನ ಉಪದೇಶ ದಿಂದ ಶಿಷ್ಯನನ್ನು ಭವಸಾಗರದಿಂದ ದಾಟಿಸುವ ಸದ್ಗುರುವಿಗೆ ಭವತಾರಕನೆಂದು ಕರೆಯುತ್ತಾರೆ. ಘೋರವಾದ ಸಮುದ್ರವನ್ನು ದಾಟಿಸಬಲ್ಲ ಸಮರ್ಥನಾದ ವ್ಯಕ್ತಿಯ

ಸಹಾಯದಿಂದ ವ್ಯಕ್ತಿಗಳು ಸಮುದ್ರವನ್ನು ಸಹಜವಾಗಿ ದಾಟುವಂತೆ ಭವತಾರಕನಾದ ಸದ್ಗುರುವಿನ ಮಾರ್ಗದರ್ಶನವಿದ್ದಾಗಲೇ ಭವಿಗಳೆಲ್ಲ ಭವದಿಂದ ದಾಟಲು ಸಮರ್ಥರಾಗುತ್ತಾರೆ.

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಭವತಾರಕನಾದ ಶಿಕ್ಷಾಗುರುವಿನ ಸ್ವರೂಪವನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ ಬೇರೊಂದು ವಿಧಾನದ ಮೂಲಕವಾಗಿ ಇಲ್ಲಿ –

> ಶಿಷ್ಯಾಣಾಂ ಹೃದಯಾಲೇಖ್ಯಂ ಪ್ರದ್ಯೋತಯತಿ ಯಃ ಸ್ವಯಮ್ ।
> ಜ್ಞಾನದೀಪಿಕಯಾಽನೇನ ಗುರುಣಾ ಕಃ ಸಮೋ ಭವೇತ್ ?
>
> (ಸಿ.ಶಿ. ೧೫–೧೯)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಮಂದಿರದಲ್ಲಿರುವ ಮೂರ್ತಿಯು ಸ್ಪಷ್ಟವಾಗಿ ತೋರಬೇಕಾದರೆ ಅಲ್ಲಿ ದೀಪದ ಅವಶ್ಯಕತೆಯಿರುತ್ತದೆ. ದೇವಸ್ಥಾನದ ಗರ್ಭಗುಡಿಯಲ್ಲಿರುವ ಆ ಮೂರ್ತಿಯು ಸದಾ ಭಕ್ತರಿಗೆ ಕಾಣಬೇಕೆಂಬ ಉದ್ದೇಶದಿಂದಲೇ ಅಲ್ಲೊಂದು ತುಪ್ಪ ಇಲ್ಲವೆ ಎಣ್ಣೆಯ ನಂದಾದೀಪವನ್ನು ಹಚ್ಚಿರುತ್ತಾರೆ. ಆ ದೀಪದ ಪ್ರಕಾಶದಲ್ಲಿ ಅಲ್ಲಿಯ ಮೂರ್ತಿಯು ಸದಾ ಪ್ರಕಾಶಮಾನವಾಗಿದ್ದು ಎಲ್ಲರಿಗೂ ಸ್ಪಷ್ಟವಾಗಿ ತೋರುತ್ತಿರುತ್ತದೆ. ದೇವಸ್ಥಾನದಲ್ಲಿ ದೇವರ ವಿಗ್ರಹವಿರುವಂತೆ ಪ್ರತಿಯೊಬ್ಬ ವ್ಯಕ್ತಿಯ ಹೃದಯವೆಂಬ ಗರ್ಭಗುಡಿಯಲ್ಲಿ ಆ ಪರಶಿವನ ನಿತ್ಯ ನಿವಾಸವಿರುತ್ತದೆ. ''ಬೀಜೇ ಯಥಾಂಕುರಃ ಸಿದ್ಧಃ ತಥಾತ್ಮನಿ ಶಿವಸ್ಥಿತಃ'' ಎಂಬ ಈ ಆಚಾರ್ಯೋಕ್ತಿಯಲ್ಲಿ ಬೀಜದಲ್ಲಿ ಮೊಳಕೆಯಿರುವಂತೆ ಪ್ರತಿಯೊಬ್ಬರ ಹೃದಯದಲ್ಲಿ ಆ ಪರಮಾತ್ಮನ ನಿವಾಸವಿದೆಯೆಂಬುದಾಗಿ ಸಮರ್ಥಿಸಲ್ಪಟ್ಟಿದೆ. ಶಿವನು ಸರ್ವತ್ರವ್ಯಾಪಕನಾಗಿರೋಣದರಿಂದ ಹೊರಗಿನ ಕಣ ಕಣಗಳಲ್ಲಿ ತುಂಬಿಕೊಂಡಿರುವ ಅವನು ಹೃದಯದಲ್ಲೂ ಸಹ ನಿವಾಸಗೈದಿದ್ದಾನೆ. ತನ್ನ ಹೃದಯದಲ್ಲಿಯೇ ದೇವರಿದ್ದರೂ ಅಂತರ್ಮುಖವಾಗುವ ಸಾಮರ್ಥ್ಯವಿಲ್ಲದ ಜೀವಿಗಳು ಅವನನ್ನು ಹೊರಗಿನ ತೀರ್ಥಕ್ಷೇತ್ರಗಳಲ್ಲಿಯೇ ಸದಾ ಹುಡುಕುತ್ತಿರುತ್ತಾರೆ. ಯಾವಾಗ ಯೋಗ್ಯಗುರುವಿನ ಮಾರ್ಗದರ್ಶನವಾಗುವುದೋ ಆಗ ಸಾಧಕನು ಅಂತರ್ಮುಖಿಯಾಗಿ ತನ್ನ ಹೃದಯದಲ್ಲಿರುವ ಆ ಪರಮಾತ್ಮನನ್ನು ಗುರುವಿನ ಜ್ಞಾನೋಪದೇಶ ರೂಪವಾದ ದೀಪದ ಬೆಳಕಿನಲ್ಲಿಯೇ ಅನುಭವಿಸಿ ಆನಂದಿಸುತ್ತಾನೆ. ಹೀಗೆ ಬ್ರಹ್ಮಾಂಡದಲ್ಲೆಲ್ಲ ಶಿವನನ್ನು ಅರಸುತ್ತ ತಿರುಗುತ್ತಿರುವ ವ್ಯಕ್ತಿಗೆ ತನ್ನ ಜ್ಞಾನೋಪದೇಶ ರೂಪವಾದ ದೀಪದ ಬೆಳಕಿನಲ್ಲಿ ಅವನಿಗೆ ಹೃದಯದಲ್ಲಿಯೇ ಶಿವಸಾಕ್ಷಾತ್ಕಾರವನ್ನು ಮಾಡಿಸಿಕೊಡುವ ಗುರುವಿಗೆ ಸರಿಸಮಾನರು ಬೇರಾರೂ ಇರುವುದಿಲ್ಲ. ಇಂತಹ ಗುರುವೇ ಸರ್ವಾಧಿಕನು. ಇಂತಹ ಗುರುವನ್ನುದ್ದೇಶಿಸಿಯೇ ''ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ ಶಿವಶಾಸನತಃ ಶಿವಶಾಸನತಃ ಶಿವಶಾಸನತಃ'' ಎಂಬ ಶಿವಾಗಮೋಕ್ತಿಯು ಸುಪ್ರಸಿದ್ಧವಾಗಿದೆ. ಆದ್ದರಿಂದ ಗುರುವು ಅದ್ವಿತೀಯನೂ ಅನನ್ಯಸಾಧಾರಣನೂ ಆಗಿರುತ್ತಾನೆ.

ಇನ್ನು ಕೊನೆಯದಾಗಿ ಈ ಶಿಕ್ಷಾಗುರುಸ್ಥಲವನ್ನು ಪರಿಸಮಾಪ್ತಿಗೊಳಿಸುವ ಉದ್ದೇಶವನ್ನು ಹೊಂದಿದ ಪೂಜ್ಯಪಾದರು ಇಲ್ಲಿಯವರೆಗೆ ಹೇಳಲ್ಪಟ್ಟ ಲಕ್ಷಣಲಕ್ಷಿತ ನಾದ ಶಿಕ್ಷಾಗುರುವು ದೊರೆಯುವುದು ಅಷ್ಟೊಂದು ಸುಲಭಸಾಧ್ಯವಲ್ಲ ಎಂಬ ವಿಷಯವನ್ನು ಮಂಡಿಸಲೋಸುಗ ಪೂಜ್ಯರು ಪುನಃ –

ಪರಮಾದ್ವೈತ ವಿಜ್ಞಾನಪರಮೌಷಧಿದಾನತಃ।
ಸಂಸಾರರೋಗನಿರ್ಮಾಥೀ ದೇಶಿಕಃ ಕೇನ ಲಭ್ಯತೇ ॥

(ಸಿ.ಶಿ. ೧೫–೨೦)

ಈ ತೆರನಾಗಿ ಉಪದೇಶಿಸಿದ್ದಾರೆ. ಶರೀರದಲ್ಲುಂಟಾಗುವ ವಾತ–ಪಿತ್ತ– ಕಫಜನ್ಯಗಳಾದ ರೋಗಗಳನ್ನು ಸಂಪೂರ್ಣವಾಗಿ ವಾಸಿಮಾಡಿಕೊಳ್ಳಬೇಕಾದರೆ ಓರ್ವ ಶ್ರೇಷ್ಠನಾದ ವೈದ್ಯನಿಗೇನೇ ಶರಣಾಗತರಾಗಬೇಕಾಗುತ್ತದೆ. ಅದರಂತೆ ಜನನ ಮರಣಾತ್ಮಕವಾದ ಈ ಸಂಸಾರವೂ ಸಹ ಒಂದು ಮಹಾರೋಗವಿದ್ದಂತೆ. ಇದು ಇಂದು–ನಿನ್ನೆಯ ರೋಗವಲ್ಲ, ಯುಗ–ಯುಗಗಳಿಂದ ಬೆಂಬತ್ತಿಬಂದಿರುವ ಅಸಾಧ್ಯರೋಗವಾಗಿದೆ. ರೋಗವು ಪ್ರಾರಂಭಿಕಾವಸ್ಥೆಯಲ್ಲಿ ಯೋಗ್ಯ ಉಪಚಾರದಿಂದ ನಿವೃತ್ತಿಯಾಗುವುದು ಸುಲಭ ವಾಗಿದ್ದರೂ ಅದು ಹಳೆಯದಾದಂತೆಲ್ಲ ಅಸಾಧ್ಯವಾಗಿ ಪರಿಣಮಿಸುತ್ತದೆ. ಇಂಥ ಅಸಾಧ್ಯ ವಾದ ರೋಗವನ್ನು ಕಳೆದುಕೊಂಡು ಶಾಶ್ವತವಾದ ಆರೋಗ್ಯವನ್ನು ಪಡೆಯಬೇಕೆನ್ನುವ ಉತ್ಕಟವಾದ ಬಯಕೆಯುಳ್ಳವನು ಶಿವತತ್ತ್ವನಿಷ್ಠನೂ, ಶಿವಶಾಸ್ತ್ರಜ್ಞನೂ ಆದ ಸದ್ಗುರುವಿಗೆ ಶರಣಾಗತನಾಗಿ ಅವರು ಅನುಗ್ರಹಿಸಿದ ಶಿವಾದ್ವೈತ ಜ್ಞಾನರೂಪವಾದ ಉತ್ಕೃಷ್ಟ ಔಷಧಿಯನ್ನು ಸೇವಿಸಿ ಸಂಸಾರ ರೋಗದಿಂದ ಮುಕ್ತನಾಗುತ್ತಾನೆ. ಇಂತಹ ದಿವ್ಯವಾದ ಜ್ಞಾನೌಷಧವನ್ನು ದಯಪಾಲಿಸುವ ದೇಶಿಕೋತ್ತಮನಾದ ಸದ್ಗುರುವಾದರೂ ಸಿಗುವುದು ಅಷ್ಟೊಂದು ಸುಲಭಸಾಧ್ಯವೇನಲ್ಲ. ಯಾರ ಮೇಲೆ ಶಿವಕಾರುಣ್ಯರೂಪ ವಾದ ಶಿವಾನುಗ್ರಹವು ಪ್ರಾಪ್ತವಾಗುವುದೋ ಅವರಿಗೇನೇ ಇಂತಹ ಗುರುವು ಸುಲಭ ಸಾಧ್ಯವಾಗಿರುತ್ತಾನೆ. ಆದಕಾರಣ ಪ್ರತಿಯೊಬ್ಬರೂ ಶಿವಾನುಗ್ರಹವನ್ನು ಸಂಪಾದಿಸಿ ಶಿಕ್ಷಾಗುರುವಿನ ಮೂಲಕ ಶಿವಾದ್ವೈತ ಜ್ಞಾನವನ್ನು ಪಡೆದು ನೀವೆಲ್ಲ ಸುಖಿಗಳಾಗಿರೆಂಬು ದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಆಗಷ್ಟ್ ೧೯೬೨

(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಜ್ಞಾನಗುರುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನ ವನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಶಿಕ್ಷಾಗುರುಸ್ಥಲದ ಬಗ್ಗೆ ಸಂಪೂರ್ಣವಾಗಿ ವಿವೇಚಿಸಲಾಯಿತು. ಇಂದು ಕ್ರಮ ಪ್ರಾಪ್ತವಾದ ಜ್ಞಾನಗುರುಸ್ಥಲದ ಬಗ್ಗೆ ವಿವೇಚಿ ಸೋಣ.

ಇಲ್ಲಿ ಬಂದಿರುವ ದೀಕ್ಷಾಗುರು, ಶಿಕ್ಷಾಗುರು ಹಾಗೂ ಜ್ಞಾನಗುರುವೆಂಬ ಶಬ್ದಗಳನ್ನು ಕೇಳಿದಾಗ ಗುರುಗಳು ಮೂರು ಪ್ರಕಾರವಾಗಿರುತ್ತಾರೆಂಬ ಸಾಮಾನ್ಯ ಬೋಧವು ಸರ್ವರಿಗೂ ಆಗುವುದುಂಟು. ಆದರೆ ಗುರುಗಳು ಮೂರು ಪ್ರಕಾರವಾಗಿರದೆ ಒಬ್ಬನೇ ಆದ ಗುರುವೇ ದೀಕ್ಷೆಯನ್ನು ಅನುಗ್ರಹಿಸಿದಾಗ ದೀಕ್ಷಾಗುರುವೆಂತಲೂ, ಶಾಸ್ತ್ರೀಯ ಶಿಕ್ಷಣವನ್ನು ಕೊಡಮಾಡಿದಾಗ ಶಿಕ್ಷಾಗುರುವೆಂತಲೂ ಹಾಗೂ ಶಿವಾದ್ವೈತ ಜ್ಞಾನವನ್ನು ಉಪದೇಶಿಸಿದಾಗ ಜ್ಞಾನಗುರುವೆಂತಲೂ ಕರೆಯಿಸಿಕೊಳ್ಳುತ್ತಾನೆ. ಹೀಗೆ ಇಲ್ಲಿ ಒಬ್ಬನೇ ಆದ ಗುರುವಿನ ಮೂರು ಕರ್ತವ್ಯಗಳು ಪ್ರತಿಪಾದಿಸಲ್ಪಟ್ಟಿವೆ ಎಂಬುದಾಗಿ ತಿಳಿದುಕೊಳ್ಳಬೇಕು ಈ ಪೂರ್ವದಲ್ಲಿ ಶಾಸ್ತ್ರೀಯ ಶಿಕ್ಷಣವನ್ನು ದಯಪಾಲಿಸಿದ ಗುರುವೇ ಇನ್ನು ಮುಂದೆ ಜ್ಞಾನೋಪದೇಶವನ್ನು ಮಾಡುತ್ತಾನೆ. ಅವನು ಉಪದೇಶಿಸಿದ ಜ್ಞಾನದ ವಿಷಯವನ್ನು ನಿರೂಪಿಸುವ ಸ್ಥಲವೇ ಜ್ಞಾನಗುರುಸ್ಥಲವು.

ಮನುಷ್ಯ ಜನ್ಮದಲ್ಲಿ ಬಂದ ಪ್ರತಿಯೊಬ್ಬ ಜೀವಿಯು ಆತ್ಮ-ಪರಮಾತ್ಮರ ಜ್ಞಾನವನ್ನು ಮಾಡಿಕೊಳ್ಳಬೇಕಾಗುವುದು. ಅದಿಲ್ಲದಿದ್ದರೆ ಅವನು ಮನುಷ್ಯದೇಹ ಧಾರಿ ಯಾಗಿದ್ದರೂ ಪಶುವೆಂಬುದಾಗಿ ಶಾಸ್ತ್ರಕಾರರು ನಿರ್ಣಯಿಸಿದ್ದಾರೆ. ಉಣ್ಣುವ-ತಿನ್ನುವ- ಹಿಂಗುವ-ಹಡೆಯುವ ಮೊದಲಾದ ವ್ಯಾವಹಾರಿಕ ಜ್ಞಾನವು ಮನುಷ್ಯರಿಗಿಂತಲೂ ಪಶುಗಳಿಗೇನೇ ಅಧಿಕವಾಗಿರುತ್ತದೆ. ಅಂತೆಯೇ ಅವುಗಳು ಮನುಷ್ಯನಿಗಿಂತಲೂ ಆರೋಗ್ಯವಂತವಾಗಿರುತ್ತವೆ. ಈ ಮೊದಲು ಹೇಳಿದ ಆ ಲೌಕಿಕ ವ್ಯವಹಾರಗಳನ್ನು ಸರಿಯಾಗಿ ಮಾಡದ ಕಾರಣದಿಂದಾಗಿಯೇ ಮನುಷ್ಯನು ನಾನಾ ರೋಗಗಳಿಂದ ಬಳಲುತ್ತಿರುತ್ತಾನೆ. ಈ ವ್ಯಾವಹಾರಿಕ ಜ್ಞಾನವನ್ನು ಮಾಡಿಕೊಳ್ಳುವುದರ ಜೊತೆಗೆ ಇವನು ಆಧ್ಯಾತ್ಮಿಕ ಜ್ಞಾನದ ಅಧಿಕಾರಿಯೂ ಸಹ ಆಗಿದ್ದಾನೆ. ಆತ್ಮಜ್ಞಾನವನ್ನು ಪಡೆಯುವುದಕ್ಕಾಗಿ ಯೇನೇ ಇವನಿಗೆ ಮನುಷ್ಯ ಜನ್ಮವು ಪ್ರಾಪ್ತವಾಗಿರುತ್ತದೆ. ಆದ್ದರಿಂದ ವೀರಶೈವ

ಧರ್ಮದ ಆಚಾರ್ಯರು ದೀಕ್ಷಾ, ಶಿಕ್ಷಾದಿ ಮೂಲಕವಾಗಿ ಇವನನ್ನು ಸಂಸ್ಕರಿಸಿ ಆತ್ಮಜ್ಞಾನದ ಬೋಧವನ್ನು ಮಾಡಿಕೊಡುತ್ತಾರೆ. ಇದೇ ವಿಷಯವನ್ನೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹರ್ಷಿ ಅಗಸ್ತ್ಯನನ್ನುದ್ದೇಶಿಸಿ–

ಉಪದೇಷ್ಟೋಪದೇಶಾನಾಂ ಸಂಶಯಚ್ಛೇದಕಾರಕಃ।
ಸಮ್ಯಗ್ಜ್ಞಾನಪ್ರದಃ ಸಾಕ್ಷಾದೇಷ ಜ್ಞಾನಗುರುಃ ಸ್ಮೃತಃ॥

(ಸಿ.ಶಿ. ೧೫–೨೧)

ಹೀಗೆ ಉಪದೇಶಿಸಿದ್ದಾರೆ. ಸದ್ಗುರುವಾದವನು ಶಾಸ್ತ್ರದ ರಹಸ್ಯಾರ್ಥವನ್ನು ಹೊರತೆಗೆದು ಶಿಷ್ಯನಿಗೆ ಉಪದೇಶವನ್ನು ಮಾಡುತ್ತಾನೆ. ಇದರ ಜೊತೆಗೇನೇ ಶಿಷ್ಯನ ಮನಸ್ಸಿನಲ್ಲಿ ಬರುವ ಅನೇಕ ಪ್ರಕಾರದ ಸಂಶಯಗಳನ್ನೂ ಸಹ ದೂರಮಾಡುತ್ತಾನೆ. ಇದರಿಂದ ಶಿಷ್ಯನಿಗೆ ನಿಸ್ಸಂದಿಗ್ಧವಾದ ಸಮ್ಯಗ್ಜ್ಞಾನವು ಪ್ರಾಪ್ತವಾಗುತ್ತದೆ. ಇಂತಹ ಜ್ಞಾನೋಪದೇಶವನ್ನು ಮಾಡುವ ಸದ್ಗುರುವೇ ಜ್ಞಾನಗುರು ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ವಾತುಲೋತ್ತರಾಗಮದಲ್ಲಿಯೂ ಸಹ ಜ್ಞಾನಗುರುವಿನ ಲಕ್ಷಣವು ಇದೇ ರೀತಿಯಾಗಿ ಪ್ರತಿಪಾದಿಸಲ್ಪಟ್ಟಿದೆ.

ಯಾವುದೇ ಗುರುವು ಶಿಷ್ಯನಿಗೆ ಈ ಅಮೂಲ್ಯವಾದ ಆತ್ಮಜ್ಞಾನವನ್ನು ಉಪದೇಶ ಮಾಡುವ ಪೂರ್ವದಲ್ಲಿ ಆ ಜ್ಞಾನಕ್ಕೆ ಅವನು ಯೋಗ್ಯನು ಅಹುದೋ ಅಲ್ಲವೋ ಎಂಬುದನ್ನು ಪರೀಕ್ಷಿಸುತ್ತಾನೆ. ವಾಜಶ್ರವನ ಮಗನಾದ ನಚಿಕೇತನು ಯಮಲೋಕಕ್ಕೆ ಹೋದಾಗ ಯಮನನ್ನು ಕುರಿತು ಆತ್ಮವಿದ್ಯೆಯ ಬಗ್ಗೆ ಜಿಜ್ಞಾಸೆಯನ್ನು ಮಾಡುತ್ತಾನೆ. ಈ ಪುಟ್ಟಬಾಲಕನ ಹೃದಯವು ಆ ಜ್ಞಾನಕ್ಕೆ ಪಾತ್ರವು ಅಹುದೋ ಅಲ್ಲವೋ ಎಂಬುದನ್ನು ಪರೀಕ್ಷಿಸಲೋಸುಗ ಯಮಧರ್ಮನು ಅನೇಕ ಪ್ರಲೋಭನೆಗಳನ್ನು ಅವನ ಮುಂದೆ ತಂದೊಡ್ಡುತ್ತಾನೆ. ಆದರೆ ವಿಷಯ ವ್ಯಾಮೋಹವಿಲ್ಲದಿರುವ ಆ ನಚಿಕೇತನು ಅವೆಲ್ಲವುಗಳನ್ನು ತಿರಸ್ಕರಿಸಿ ಕೇವಲ ಆತ್ಮಜ್ಞಾನದ ಅಭಿಲಾಷೆಯನ್ನು ಯಮನ ಮುಂದಿಟ್ಟಾಗ ಸಂತುಷ್ಟನಾದ ಯಮನು ಅವನಿಗೆ ಆತ್ಮಬೋಧೆಯನ್ನು ಮಾಡಿಕೊಟ್ಟ ಕಥೆಯು ಕಠೋಪನಿಷತ್ತಿನಲ್ಲಿ ಬಹು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಇದರಿಂದ ತಿಳಿದು ಬರುವುದೇನೆಂದರೆ ವಿಷಯಾಸಕ್ತಿಯಿಲ್ಲದವನೇ ಆತ್ಮಜ್ಞಾನವನ್ನು ಪಡೆಯಲು ತಕ್ಕ ಅಧಿಕಾರಿಯು. ಇಂತಹ ಅಧಿಕಾರಿಯನ್ನು ಕುರಿತು ಆತ್ಮಜ್ಞಾನ ವಿಷಯಕವಾದ ಜ್ಞಾನವನ್ನು ಉಪದೇಶಿಸುವವನೇ ಜ್ಞಾನಗುರುವೆಂಬುದಾಗಿ ತಿಳಿದುಕೊಳ್ಳಬೇಕು.

ಈ ಜ್ಞಾನವು ಎಂತಹದು? ಅದನ್ನು ಹೇಗೆ ತಾನೇ ಪಡೆಯಲು ಸಾಧ್ಯ? ಎಂಬ ಪ್ರಶ್ನೆಯು ಉದ್ಭವಿಸಲಾಗಿ ಪೂಜ್ಯಪಾದರು–

ನಿರಸ್ತವಿಶ್ವಸಂಭೇದಂ ನಿರ್ವಿಕಾರಂ ಚಿದಂಬರಮ್।
ಸಾಕ್ಷಾತ್ಕರೋತಿ ಯೋ ಯುಕ್ತ್ಯಾ ಸ ಜ್ಞಾನಗುರುರುಚ್ಯತೇ॥

(ಸಿ.ಶಿ. ೧೫–೨೨)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತೋರುವ ವಿಶ್ವವು ಭೇದದಿಂದ ಕೂಡಿಕೊಂಡಿದುದಾಗಿದೆ. ಭೇದವು ಪ್ರಪಂಚರೂಪವಾಗಿದ್ದರೆ ಪರಮಾತ್ಮನು ಅಭೇದರೂಪನಾಗಿದ್ದಾನೆ

ಅರ್ಥಾತ್ ಅದ್ವಿತೀಯನಾಗಿದ್ದಾನೆ. ಜಾಗ್ರದಾವಸ್ಥೆಯಲ್ಲಿ ಅನೇಕ ವಿಧವಾಗಿ ತೋರುವ ಈ ವಿಶ್ವವು ಸುಷುಪ್ತಿ ಅವಸ್ಥೆಯಲ್ಲಿ ಅದೆಲ್ಲವೂ ಇಲ್ಲವಾಗಿ ತಾನೇ ತಾನಾಗಿರುವ ಒಂದು ಆನಂದದ ಸ್ಥಿತಿಯು ಸರ್ವರಿಗೂ ಪ್ರಾಪ್ತವಾಗುತ್ತದೆ. ಇದರಂತೆ ಜ್ಞಾನಿಯಾದವನಿಗೆ ಜಾಗ್ರದವಸ್ಥೆಯಲ್ಲಿಯೇ ಆ ನಿರ್ವಿಕಾರನೂ, ಚಿದಾಕಾಶ ಸ್ವರೂಪನೂ ಆದ ಪರಶಿವನ ಸಾಕ್ಷಾತ್ಕಾರವು ಉಂಟಾಗುತ್ತದೆ. ಈ ಸಾಕ್ಷಾತ್ಕಾರದಿಂದಲೇ ವ್ಯಾವಹಾರಿಕವಾಗಿ ತೋರುವ ಪ್ರಪಂಚದ ಭೇದಜ್ಞಾನವು ಅಡಗಿಹೋಗುತ್ತದೆ. ಹೀಗೆ ಶಿವಾದ್ವೈತ ಶಾಸ್ತ್ರ ಹಾಗೂ ಸ್ವಾನುಭವಗಳ ಮೂಲಕವಾಗಿ ಈ ಶಿವಜ್ಞಾನವನ್ನು ಪಡೆಯಲು ಸಾಧ್ಯ ವಾಗುತ್ತದೆ. ಈ ರೀತಿಯಾಗಿ ಇದನ್ನು ಪಡೆದವನೇ ಜ್ಞಾನಗುರು ಎಂಬುದಾಗಿ ತಿಳಿದುಕೊಳ್ಳಬೇಕು.

ವೀರಶೈವ ಸಿದ್ಧಾಂತದ ಪ್ರಕಾರವಾಗಿ ಪರಮಾತ್ಮನೇ ಪ್ರಪಂಚರೂಪವನ್ನು ಧರಿಸಿ ಕೊಂಡಿದ್ದಾನೆ. ಆದರೂ ಅವನಿಗೆ ಯಾವ ಬಾಧೆಯೂ ಉಂಟಾಗುವದಿಲ್ಲ, ಬಂಗಾರವು ಆಭರಣರೂಪವನ್ನು ಧರಿಸಿದರೂ ಆ ಬಂಗಾರಕ್ಕೆ ಯಾವ ವಿಕಾರವೂ ಹೇಗೆ ಉಂಟಾ ಗುವುದಿಲ್ಲವೋ ಅದರಂತೆ ಪರಮಾತ್ಮನು ದ್ವೈತರೂಪವಾದ ಪ್ರಪಂಚ ಸ್ವರೂಪವನ್ನು ತಾಳಿದ್ದರೂ ಮೂಲಸ್ವರೂಪದಲ್ಲಿ ಯಾವ ವಿಕೃತಿಯು ಉಂಟಾಗಲಾರದು. 'ಅಹಿಕುಂಡಲ' ಮತ್ತು 'ಸಾಗರತರಂಗ–ನ್ಯಾಯ' ಮೂಲಕವಾಗಿ ಇಲ್ಲಿ ಆ ವಿಷಯವನ್ನು ಪ್ರಸ್ತುತಪಡಿಸಿದ್ದಾರೆ. ಅಂದರೆ ಸರ್ಪವು ವೃತ್ತಾಕಾರವಾಗಿ ಶಯನಗೈಯ್ಯುತ್ತಿದ್ದರೂ ಅದು ಮರುಕ್ಷಣದಲ್ಲಿ ಲಂಬಾಯಮಾನವಾಗಿ ಸಂಚರಿಸಲು ಪ್ರಾರಂಭಿಸುತ್ತದೆ. ಹೀಗೆ ವೃತ್ತ ಇಲ್ಲವೆ ಲಂಬಾಕಾರವನ್ನು ತಾಳಿದರೂ ಅದರ ಸ್ವರೂಪದಲ್ಲಿ ಯಾವ ಬದಲಾವಣೆ ಕಂಡು ಬರುವುದಿಲ್ಲ, ಇದರಂತೇನೇ ಗಾಳಿಯ ಹೊಡೆತಕ್ಕೆ ತರಂಗ ತರಂಗವಾಗಿ ತೋರುವ ಸಮುದ್ರವು ಅದಿಲ್ಲದಿದ್ದಾಗ ನಿಸ್ತರಂಗವಾಗಿ ಎಲ್ಲರಿಗೂ ಅನುಭವಗೋಚರವಾಗುತ್ತದೆ. ಇಲ್ಲಿ ಅಹಿಯೇ ಅರ್ಥಾತ್ ಸರ್ಪವೇ ಕುಂಡಲಾಕಾರವನ್ನು ತಾಳಿದ್ದರೂ ಮತ್ತು ಸಮುದ್ರವೇ ತರಂಗಾಕಾರವನ್ನು ಹೊಂದಿದ್ದರೂ, ಅವುಗಳ ಮೂಲ ಸ್ವರೂಪದಲ್ಲಿ ಯಾವ ಬದಲಾಣೆಯೂ ಆಗದಿರುವಂತೆ, ಪರಮಾತ್ಮನೇ ಪ್ರಪಂಚರೂಪವನ್ನು ಧರಿಸಿದ್ದರೂ, ಅವನ ಮೂಲಸ್ವರೂಪಕ್ಕೆ ಯಾವುದೇ ಧಕ್ಕೆ ಉಂಟಾಗುವದಿಲ್ಲ ಎಂಬು ದಾಗಿ ತಿಳಿದುಕೊಳ್ಳಬೇಕು. ಹೀಗೆ ಅನೇಕ ಯುಕ್ತಿ–ಪ್ರಮಾಣಗಳ ಮೂಲಕವಾಗಿ ಶಿವಾದ್ವೈತಜ್ಞಾನವನ್ನು ಉಂಟುಮಾಡುವ ಸದ್ಗುರುವೇ ಜ್ಞಾನಗುರುವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪೂರ್ವದಲ್ಲಿ ಹೇಳಿದ ಜ್ಞಾನವನ್ನು ಕುರಿತು ಪುನಃ–

> ಕಲಂಕವಾನಸೌ ಚಂದ್ರಃ ಕ್ಷಯವೃದ್ಧಿಪರಿಪ್ಲುತಃ ।
> ನಿಷ್ಕಲಂಕಃ ಸ್ಥಿತೋ ಜ್ಞಾನಚಂದ್ರಮಾ ನಿರ್ವಿಕಾರವಾನ್ ॥
>
> ಪಾರ್ಶ್ವಸ್ಥತಿಮಿರಂ ಹಂತಿ ಪ್ರದೀಪೋ ಮಣಿನಿರ್ಮಿತಃ
> ಸರ್ವಗಾಮೀ ತಮೋ ಹಂತಿ ಬೋಧದೀಪೋ ನಿರಂಕುಶಃ
>
> (ಸಿ.ಶಿ. ೧೫–೨೩–೨೪)

ಈ ವಿಧವಾಗಿ ಉಪದೇಶಿಸಿದ್ದಾರೆ. ಇಲ್ಲಿ ಪೂಜ್ಯಪಾದರು ಚಂದ್ರಮನಿಗೂ ಹಾಗೂ

ಜ್ಞಾನಚಂದ್ರನಿಗೂ ಅದರಂತೆ ಪ್ರದೀಪ ಹಾಗೂ ಬೋಧದೀಪಗಳಲ್ಲಿರುವ ವ್ಯತ್ಯಾಸವನ್ನು ಕುರಿತು ಪ್ರತಿಪಾದಿಸಿದ್ದಾರೆ. ಜಗತ್ತಿಗೆ ಶೀತಲವಾದ ಪ್ರಕಾಶವನ್ನು ಬೀರುವ ಚಂದ್ರಮನು ಕಲಂಕವುಳ್ಳವನಾಗಿದ್ದಾನೆ ಹಾಗೂ ಕ್ಷಯ–ವೃದ್ಧಿ ವಿಕಾರವನ್ನೂ ಸಹ ಹೊಂದಿದವ ನಾಗಿದ್ದಾನೆ. ಆಕಾಶದಲ್ಲಿ ಪೌರ್ಣಿಮೆಯ ದಿನದಂದು ಚಂದ್ರನು ಅಖಂಡವಾಗಿ ತೋರುತ್ತಿದ್ದರೂ, ಅವನಲ್ಲಿ ಕಪ್ಪುಕಲೆಗಳು ಮಾತ್ರ ಎದ್ದು ತೋರುತ್ತಲಿರುತ್ತವೆ. ಇದೇ ಪ್ರಕಾರವಾಗಿ ಶುಕ್ಲಪಕ್ಷದಲ್ಲಿ ವೃದ್ಧಿಯೂ, ಕೃಷ್ಣಪಕ್ಷದಲ್ಲಿ ಕ್ಷಯವೂ ಸಹ ಅವನಿಗೆ ಉಂಟಾಗುತ್ತದೆ. ಕೃಷ್ಣಪಕ್ಷದಲ್ಲಿ ಕ್ಷಯಿಸುತ್ತ, ಕ್ಷಯಿಸುತ್ತ ಆ ಚಂದ್ರನು ಅಮಾವಾಸ್ಯೆಯ ದಿನದಂದು ಪೂರ್ಣತಃ ಇಲ್ಲದಂತಾಗಿ ಬಿಡುತ್ತಾನೆ. ಆದರೆ ಶಿವಾದ್ವೈತ ಜ್ಞಾನರೂಪಿಯಾದ ಚಂದ್ರನು ನಿಷ್ಕಲಂಕನೂ ನಿರ್ವಿಕಾರನೂ ಆಗಿರುತ್ತಾನೆ. ಈ ಜ್ಞಾನವು ಅದೆಂದಿಗೂ ಇಲ್ಲದಾಗುವುದಿಲ್ಲ. ಲೌಕಿಕವಾದ ಜ್ಞಾನವು ಒಂದು ವೇಳೆ ಇಲ್ಲದಂತಾಗ ಬಹುದು. ಆದರೆ ಆತ್ಮಜ್ಞಾನಕ್ಕೆ ಅದೆಂದಿಗೂ ಲೋಪವುಂಟಾಗುವುದಿಲ್ಲ. ಎಂಬುದಾಗಿ ಪೂಜ್ಯಪಾದರು ಚಂದ್ರ ಹಾಗೂ ಜ್ಞಾನಚಂದ್ರರ ವ್ಯತ್ಯಾಸವನ್ನಿಲ್ಲಿ ಮಾರ್ಮಿಕವಾಗಿ ಸ್ಪಷ್ಟಪಡಿಸಿದ್ದಾರೆ.

ಪೂಜ್ಯಪಾದರು ಜ್ಞಾನವು ಜ್ಞಾನಚಂದ್ರಮನಿಗಿಂತಲೂ ವಿಲಕ್ಷಣವಾದುದೆಂಬುದಾಗಿ ತಿಳಿಯಪಡಿಸಿ ಇನ್ನುಮುಂದೆ ಮಣಿನಿರ್ಮಿತವಾದ ದೀಪಕ್ಕಿಂತಲೂ ಬೋಧ ದೀಪವು ಉತ್ಕೃಷ್ಟವೆಂಬುದನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ದೀಪವೇ ಇರಲಿ ಮತ್ತು ಮಣಿ ನಿರ್ಮಿತವಾದ ದೀಪವೇ ಇರಲಿ ಇವು ತಮ್ಮ ಸುತ್ತಮುತ್ತಲಿನ ಕತ್ತಲೆಯನ್ನು ಕಳೆಯಲು ಮಾತ್ರ ಸಮರ್ಥವಾಗಿರುತ್ತವೆ. ಆದರೆ ಶಿವಾದ್ವೈತರೂಪವಾದ ಬೋಧದೀಪವು ಅಸೀಮವಾಗಿರೋಣದರಿಂದ ಎಲ್ಲ ಕಡೆಯಲ್ಲಿಯ ಅಜ್ಞಾನರೂಪಿಯಾದ ಅಂಧಕಾರ ವನ್ನು ಇಲ್ಲದಾಗಿ ಮಾಡುತ್ತದೆ. ಬೋಧದೀಪಕ್ಕೂ ಸಾಮಾನ್ಯವಾದ ದೀಪಕ್ಕೂ ಇರುವ ವ್ಯತ್ಯಾಸವು ಇಷ್ಟೇ.

ಒಂದು ಹಳ್ಳಿಯಲ್ಲಿ ಲಗ್ನಕ್ಕಾಗಿ ಬಂದ ಬೀಗರು–ಬಿಜ್ಜರನ್ನು ಆ ಊರಿನ ಪ್ರಾಥಮಿಕ ಶಾಲೆಯಲ್ಲಿ ಇಳಿಸಿದ್ದರು. ಆ ಶಾಲೆಯ ವರ್ಗದ ಕೋಣೆಯಲ್ಲಿ ದೀಪದ ವ್ಯವಸ್ಥೆಯಿರಲಿಲ್ಲ. ಸಾಯಂಕಾಲಕ್ಕೆ ಕತ್ತಲೆಯಾವರಿಸಿದೊಡನೆ ಪ್ರತಿಯೊಂದು ಕೊಠಡಿಯ ಜನರು ಬೆಳಕು ಬೇಕು, ಬೇಕು ಎಂಬುದಾಗಿ ಕೂಗಾಡತೊಡಗಿದರು. ಆಗ ಆ ಲಗ್ನದ ಯಜಮಾನನು ತನ್ನೋರ್ವ ಸೇವಕನನ್ನು ಕರೆದು, ಒಂದು ಪೆಟ್ರೋಮ್ಯಾಕ್ಸ ಗ್ಯಾಸನ್ನು ಹೊತ್ತಿಸಿ ಅದನ್ನು ಅವನ ತಲೆಯ ಮೇಲೆ ಹೊರಸಿ ಹೇಳಿದ್ದೇನೆಂದರೆ ''ಯಾವ ಕೊಠಡಿಯಲ್ಲಿ ಕತ್ತಲೆಯಿದೆಯೋ ಅಲ್ಲಿ ಈ ಗ್ಯಾಸನ್ನು ಇಳಿಸಿ ಬಾ'' ಮಾಲಕನ ಆದೇಶದಂತೆ ಗ್ಯಾಸನ್ನು ಹೊತ್ತ ಆ ಸೇವಕನು ಒಂದು ಕೊಠಡಿಯನ್ನು ಪ್ರವೇಶಿಸಿದನು. ಅಲ್ಲಿ ಅವನಿಗೆ ಎಲ್ಲಿಯೂ ಕತ್ತಲೆಯು ಕಾಣಲಿಲ್ಲ. ಆಗ ಆತನು ಆ ಕೊಠಡಿಯಿಂದ ಹೊರಬಂದು ಇನ್ನೊಂದು ಕೊಠಡಿಯನ್ನು ಪ್ರವೇಶಿಸಿದನು. ಅಲ್ಲಿಯೂ ಸಹ ಅವನಿಗೆ ಕತ್ತಲೆಯು ಗೋಚರಿಸಲಿಲ್ಲ. ಕೊನೆಗೆ ಎಲ್ಲಾ ಕೋಣೆಗಳನ್ನು ತಿರುಗಾಡಿ ಮಾಲಕನ ಹತ್ತಿರ ಹೋಗಿ ''ಎಲೈ ಯಜಮಾನರೇ! ನಿಮ್ಮ ಬೀಗರನ್ನು ಇಳಿಸಿದ ಯಾವ ಕೋಣೆಯಲ್ಲಿಯೂ ಕತ್ತಲೆಯು ಸಿಗಲೇ ಇಲ್ಲ'' ಎಂದು ಹೇಳುವಷ್ಟರಲ್ಲಿ ಆ ಎಲ್ಲ ಕೋಣೆಯಲ್ಲಿ ವಾಸವಾಗಿ

ರುವ ಜನರು ಬೆಳಕಿಗಾಗಿ ಪರಿತಪಿಸುತ್ತ ಓಡಿಬಂದು ಸೇವಕನು ಮಾಡಿದ ಹುಚ್ಚುತನ ವನ್ನು ವಿವರಿಸಿ ಹೇಳಿ ಪ್ರತಿಯೊಂದು ಕೊಠಡಿಗಳಿಗೆ ಒಂದೊಂದು ಗ್ಯಾಸನ್ನು ತೆಗೆದು ಕೊಂಡು ಹೋದರಂತೆ.

ಇಲ್ಲಿ ದೀಪವು ತನ್ನ ಸುತ್ತಲಿನ ಕತ್ತಲೆಯನ್ನು ಮಾತ್ರ ಕಳೆಯಲು ಸಮರ್ಥ ವಾಯಿತೆಂಬುದು ಸಿದ್ಧವಾಗುತ್ತದೆ. ಇದರಿಂದ ದೀಪದ ಸಂಕುಚಿತತ್ವವು ವ್ಯಕ್ತವಾಗುತ್ತದೆ. ಆದರೆ ಶಿವಾದ್ವೈತ ಬೋಧರೂಪವಾದ ದೀಪವು ನಿರಂಕುಶವಾಗಿದ್ದು ಸರ್ವತ್ರ ವ್ಯಾಪಿಸಿರುವ, ಅಜ್ಞಾನರೂಪೀ ಅಂಧಕಾರವನ್ನು ಏಕಕಾಲದಲ್ಲಿಯೇ ಇಲ್ಲದಂತೆ ಮಾಡುತ್ತದೆ. ಆದ್ದರಿಂದ ಮಣಿದೀಪಕ್ಕಿಂತಲೂ ಬೋಧದೀಪವು ಉತ್ಕೃಷ್ಟವೆಂಬುದಾಗಿ ಪೂಜ್ಯರಿಲ್ಲಿ ತಿಳಿಯಪಡಿಸಿದ್ದಾರೆ.

ಇಂತಹ ನಿರಂಕುಶ ಬೋಧವನ್ನು ಅನುಗ್ರಹಿಸುವ ಶ್ರೀ ಗುರುವಿನ ಮಹತಿಯನ್ನು ಪೂಜ್ಯರು–

ಸರ್ವಾರ್ಥಸಾಧಕ ಜ್ಞಾನ ವಿಶೇಷಾದೇಶತತ್ಪರಃ।
ಜ್ಞಾನಾಚಾರ್ಯಃ ಸಮಸ್ತಾನಾಂ ಅನುಗ್ರಹಕರಃ ಶಿವಃ॥

ಕಟಾಕ್ಷಚಂದ್ರಮಾ ಯಸ್ಯ ಜ್ಞಾನಸಾಗರವರ್ಧನಃ।
ಸಂಸಾರತಿಮಿರಚ್ಛೇದೀ ಸ ಗುರುರ್ಜ್ಞಾನಪಾರಗಃ॥

(ಸಿ.ಶಿ. ೧೫–೨೫–೨೬)

ಈ ತೆರನಾಗಿ ಕೊಂಡಾಡಿದ್ದಾರೆ. ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಶಿವಾದ್ವೈತ ಜ್ಞಾನವು ಭೋಗ ಹಾಗೂ ಮೋಕ್ಷಗಳೆಂಬ ಉಭಯವಿಧ ಪ್ರಯೋಜನವನ್ನು ಕೊಡುವಂತಹ ದಾಗಿರುತ್ತದೆ. ಈತನು ಮುಮುಕ್ಷುಗಳ ಮೇಲೆಯೂ ಅನುಗ್ರಹವನ್ನು ಮಾಡುವಂಥವ ನಾಗಿರುತ್ತಾನೆ. ಸಾಕ್ಷಾತ್ ಶಿವಸ್ವರೂಪನಾದ ಇವನಿಗೆ ಜ್ಞಾನಾಚಾರ್ಯನೆಂಬುದಾಗಿ ಕರೆಯುತ್ತಾರೆ.

ಪೌರ್ಣಿಮೆಯ ಚಂದ್ರೋದಯವಾಗಲು ಸಮುದ್ರವು ಉಕ್ಕೇರುವಂತೆ ಗುರುವಿನ ಕರುಣಾಕಟಾಕ್ಷರೂಪವಾದ ಚಂದ್ರೋದಯವಾಗಲು ಶಿಷ್ಯನ ಜ್ಞಾನವೆಂಬ ಸಾಗರವು ಉಕ್ಕೇರಿಬರುತ್ತದೆ. ಸಂಸಾರವೆಂಬ ಕತ್ತಲೆಯನ್ನು ಇಲ್ಲದಾಗಿಸುವ ಆ ಸದ್ಗುರುವು ಜ್ಞಾನಪಾರಗನಾಗಿರುತ್ತಾನೆ. ಅಂದರೆ ಶಿಷ್ಯನ ಜ್ಞಾನಸಾಗರವನ್ನು ವರ್ಧಿಸುವ ಈ ಗುರುವಿಗೆ ಜ್ಞಾನಪಾರಗನೆಂತಲೂ ಕರೆಯುತ್ತಾರೆ.

ಶ್ರೀ ಜಗದ್ಗುರು ರೇಣುಕಭಗವತ್ಪಾದರು ಈ ಜ್ಞಾನಗುರುವನ್ನು ಭಾನುವಿಗೆ ಹೋಲಿಸಿ ವರ್ಣಿಸುತ್ತಾ ಪುನಃ–

ಬಹಿಸ್ತಿಮಿರವಿಚ್ಛೇತ್ತಾ ಭಾನುರೇಷಃ ಪ್ರಕೀರ್ತಿತಃ॥
ಬಹಿರಂತಸ್ತಮಚ್ಛೇದೀ ವಿಭುರ್ದೇಶಿಕ ಭಾಸ್ಕರಃ॥

(ಸಿ.ಶಿ. ೧೫–೨೭)

ಹೀಗೆ ಉಪದೇಶಿಸಿದ್ದಾರೆ. ಹೊರಗಿನ ಸೂರ್ಯನು ಬಹಿರಂಗದ ಕತ್ತಲೆಯನ್ನು ಮಾತ್ರ ದೂರಮಾಡಬಲ್ಲನು, ಆದರೆ ಸದ್ಗುರುವೆಂಬ ಭಾಸ್ಕರನು ಸರ್ವತ್ರವ್ಯಾಪಕ ನಾಗಿದ್ದು ಒಳ

ಹಾಗೂ ಹೊರಗಿನ ತಮಸ್ಸನ್ನು ಅರ್ಥಾತ್ ಅಜ್ಞಾನವನ್ನು ಇಲ್ಲದಾಗಿಸುತ್ತಾನೆ. ನಾಯಂ ಶಿವಃ ಈ ಪ್ರಪಂಚವು ಶಿವಸ್ವರೂಪವಾದುದಲ್ಲ ಹಾಗೂ ನಾಹಂ ಶಿವಃ ನಾನೂ ಸಹ ಶಿವರೂಪನಲ್ಲ ಎಂಬ ಬಹಿರಂಗ ಹಾಗೂ ಅಂತರಂಗದ ಅಜ್ಞಾನಗಳನ್ನು ದೂರ ಮಾಡುವ ಸಾಮರ್ಥ್ಯವು ಸದ್ಗುರುಗಳಿಗೆ ಇರುತ್ತದೆ. ಇವರ ಉಪದೇಶವನ್ನು ಶ್ರವಣ ಮಾಡುತ್ತ ಹೋದಂತೆ ಜಗತ್ತು ಶಿವಸ್ವರೂಪವಾಗಿ ತೋರುವುದಲ್ಲದೆ ತಾನು ಸಹ ಶಿವಸ್ವರೂಪನಾಗುತ್ತಾನೆ. ಅಂತಲೆ ಈ ದೇಶಿಕ ಭಾಸ್ಕರನು ಆಕಾಶದ ಭಾಸ್ಕರನಿಗಿಂತಲೂ ಶ್ರೇಷ್ಠನೆಂಬುದನ್ನು ಪೂಜ್ಯರು ಇಲ್ಲಿ ವಿವರಿಸಿದ್ದಾರೆ.

ಇನ್ನು ಮುಂದೆ ಈ ಜ್ಞಾನಗುರುಸ್ಥಲವನ್ನು ಪರಿಸಮಾಪ್ತಿಗೊಳಿಸುವ ಉದ್ದೇಶದಿಂದ ಪೂಜ್ಯಪಾದರು ಪುನಃ–

ಕಟಾಕ್ಷಲೇಶಮಾತ್ರೇಣ ವಿನಾ ಧ್ಯಾನಾದಿಕಲ್ಪನಮ್ ।
ಶಿವತ್ವಂ ಭಾವಯೇದ್ಯತ್ರ ಸ ವೇದಃ ಶಾಂಭವೋ ಮತಃ ॥

ಶಿವವೇದಕರೇ ಜ್ಞಾನೇ ದತ್ತೇ ಯೇನ ಸುನಿರ್ಮಲೇ ।
ಜೀವನ್ಮುಕ್ತೋ ಭವೇಚ್ಛಿಷ್ಯಃ ಸಗುರುರ್ಜ್ಞಾನಸಾಗರಃ ॥

(ಸಿ.ಶಿ. ೧೫,೨೮–೨೯)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಧ್ಯಾನಧಾರಣಾದಿ ಅಷ್ಟಾಂಗ ಯೋಗಗಳ ಸಾಧನೆಯನ್ನು ಮಾಡದೆ ಕೇವಲ ಗುರುವು ತನ್ನ ಕೃಪಾಕಟಾಕ್ಷ ಮಾತ್ರದಿಂದ ಶಿಷ್ಯನಲ್ಲಿ ಶಿವತ್ವ ಭಾವನೆಯು ಉಂಟಾಗುವಂತೆ ಮಾಡುತ್ತಾನೆ. ಸದ್ಗುರುವಿನ ಈ ಪ್ರಕಾರವಾದ ಜ್ಞಾನವು ಶಾಂಭವ ಜ್ಞಾನವೆಂಬುದಾಗಿ ಕರೆಯಲ್ಪಡುತ್ತದೆ. ಶಿವನನ್ನು ತಿಳಿದುಕೊಳ್ಳುವ ಸುನಿರ್ಮಲವಾದ ಜ್ಞಾನವು ಗುರುವಿನಿಂದ ಅನುಗ್ರಹಿಸಲ್ಪಟ್ಟಾಗ ಶಿಷ್ಯನು ತತ್‌ಕ್ಷಣದಲ್ಲಿ ಜೀವನ್ಮುಕ್ತನಾಗುತ್ತಾನೆ. ಹೀಗೆ ತನ್ನ ಜ್ಞಾನೋಪದೇಶದಿಂದ ಜೀವನ್ಮುಕ್ತಿಯನ್ನನುಗ್ರಹಿಸುವ ಜ್ಞಾನಗುರುವಿಗೆ ಜ್ಞಾನಸಾಗರನೆಂತಲೂ ಕರೆಯುತ್ತಾರೆ. ಸಾಗರದಲ್ಲಿ ಅಗಾಧವಾದ ಜಲವಿರುವಂತೆ ಈ ಜ್ಞಾನಗುರುವಿನಲ್ಲಿ ಅಪಾರವಾದ ಜ್ಞಾನವಿರುತ್ತದೆ. ಯಾರಿಗೆ ಎಷ್ಟು ಕೊಟ್ಟರೂ ಅದೇನೂ ಸವೆಯುವುದಿಲ್ಲ. ಹೀಗೆ ಜ್ಞಾನದ ಅಕ್ಷಯ ನಿಧಿಯಾಗಿರುವ ಗುರುವನ್ನು ಇಲ್ಲಿ ಸಾಗರಕ್ಕೆ ಹೋಲಿಸಿ ಉಪದೇಶಿಸಿದ್ದಾರೆ.

ಶ್ರೋತೃಗಳಾಗಿ ಬಂದ ಸದ್ಭಕ್ತರೇ ಇಲ್ಲಿಯವರೆಗೆ ನೀವೆಲ್ಲ ಜ್ಞಾನಗುರುಸ್ಥಲದ ಬಗ್ಗೆ ಸವಿಸ್ತಾರವಾಗಿ ವಿಷಯವಸ್ತುವನ್ನು ಆಲಿಸಿದ್ದೀರಿ. ಆ ಶ್ರವಣಕ್ಕೆ ತಕ್ಕಂತೆ ಜ್ಞಾನಗುರುವಿಗೆ ಶರಣಾಗತರಾಗಿ ಅವರ ಕೃಪಾಕಟಾಕ್ಷದಿಂದ ದಿವ್ಯಜ್ಞಾನವನ್ನು ಪಡೆದು ನೀವೆಲ್ಲಾ ಜೀವನ್ಮುಕ್ತರಾಗಿರೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಆಗಷ್ಟ್ ೧೯೯೨
(ಸ್ಥಾನ ಭಿಕೂಬಾಯಿ ಮೇನಕುದುಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಕ್ರಿಯಾಲಿಂಗಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಮಹಾಮಹಿಮಾಶಾಲಿಯಾದ ಆಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರಸ್ಥಲಗಳ ಬಗ್ಗೆ ನೀವೆಲ್ಲಾ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಜ್ಞಾನಗುರುಸ್ಥಲದ ಬಗ್ಗೆ ವಿಸ್ತಾರವಾಗಿ ವಿವೇಚಿಸಲಾಯಿತು. ಇಂದು ಕ್ರಮಪ್ರಾಪ್ತವಾದ ಅದರ ಮುಂದಿನ ಸ್ಥಲವಾದ 'ಕ್ರಿಯಾಲಿಂಗ ಸ್ಥಲ'ದ ಬಗ್ಗೆ ವಿವೇಚಿಸೋಣ.

ಜ್ಞಾನಗುರುವಿನಿಂದ ಉಪದೇಶಿಸಲ್ಪಟ್ಟ ಕ್ರಿಯೆಯು ಎಲ್ಲಿ ಲಯವನ್ನು ಹೊಂದುತ್ತದೆಯೋ ಅದಕ್ಕೇನೇ ಕ್ರಿಯಾಲಿಂಗವೆಂದು ಕರೆಯುತ್ತಾರೆ. ಇಲ್ಲಿ ಕ್ರಿಯಾಲಿಂಗವೆಂದರೆ ಇಷ್ಟಲಿಂಗವೆಂದರ್ಥ–

> ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟಪರಿಹಾರಕಮ್ ।
> ಇಷ್ಟಮೂರ್ಜಂ ಸ್ವಭಕ್ತಾನಾಂ ಅನುಯಚ್ಛತಿ ಸರ್ವದಾ ಚ
> ಇಷ್ಟಲಿಂಗಮಿತಿ ಪ್ರಾಹ ತಸ್ಮಾದಾಥರ್ವಣೆ ಶ್ರುತಿಃ ॥

ವಾತುಲಾಗಮದ ಈ ಶ್ಲೋಕದಲ್ಲಿ ಕ್ರಿಯಾಲಿಂಗದ ಲಕ್ಷಣವನ್ನು ಪ್ರತಿಪಾದಿಸಲಾಗಿದೆ. ಭಕ್ತನ ಸಕಲ ಇಷ್ಟಾರ್ಥಗಳನ್ನು ಪೂರ್ತಿಮಾಡಬಲ್ಲ ಹಾಗೂ ಸರ್ವ ಅನಿಷ್ಟಗಳನ್ನು ಪರಿಹರಿಸಬಲ್ಲ ಲಿಂಗವೇ ಇಷ್ಟಲಿಂಗವೆಂಬುದಾಗಿ ಅಥರ್ವಣ ಶ್ರುತಿಯಲ್ಲಿ ಹೇಳಿದ್ದನ್ನೇ ವಾತುಲಾಗಮವು ಸಮರ್ಥಿಸಿದ್ದನ್ನು ಇಲ್ಲಿ ಕಾಣುತ್ತೇವೆ. ಈ ವಾತುಲಾಗಮದ ವಚನವನ್ನೇ ಪ್ರಮಾಣವನ್ನಾಗಿಟ್ಟುಕೊಂಡು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕ್ರಿಯಾಲಿಂಗದ ಲಕ್ಷಣವನ್ನು–

> ಗುರೋರ್ವಿಜ್ಞಾನಯೋಗೇನ ಕ್ರಿಯಾ ಯತ್ರವಿಲೀಯತೇ ।
> ತತ್ಕ್ರಿಯಾಲಿಂಗಮಾಖ್ಯಾತಂ ಸರ್ವೈರಾಗಮಪಾರಗೈಃ ॥
>
> (ಸಿ.ಶಿ. ೧೫–೩೦)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಗುರುವಿನಿಂದ ಪ್ರಾಪ್ತವಾದ ವಿಶೇಷಜ್ಞಾನ ಮೂಲಕವಾಗಿ ಕ್ರಿಯೆಯು ಎಲ್ಲಿ ವಿಲಯವನ್ನು ಹೊಂದುತ್ತದೆಯೋ ಅದಕ್ಕೆ ಆಗಮ ಪಾರಂಗತರಾದ ವೀರಶೈವ ಆಚಾರ್ಯರು ಕ್ರಿಯಾಲಿಂಗವೆಂದು ಕರೆದಿದ್ದಾರೆ. ವಿಜ್ಞಾನವೆಂದರೆ ವಿಶೇಷಜ್ಞಾನವೆಂದರ್ಥ. ಅದು ಭೌತಿಕ, ರಸಾಯನ ಮುಂತಾದ

ವಿಷಯ ಸಂಬಂಧಿಯಾಗಿರಬಹುದು ಅಥವಾ ಆಧ್ಯಾತ್ಮಿಕ ವಿಷಯ ಸಂಬಂಧಿಯಾದರೂ ಆಗಿರಬಹುದು. ಇಲ್ಲಿ ಗುರುವಿನಿಂದ ಪ್ರಾಪ್ತವಾದ ವಿಜ್ಞಾನವು ಆಧ್ಯಾತ್ಮಿಕ ವಿಷಯಕ್ಕೆ ಸಂಬಂಧಪಟ್ಟದ್ದೆಂಬುದಾಗಿ ತಿಳಿದುಕೊಳ್ಳಬೇಕು. ಇಷ್ಟಲಿಂಗದ ಸ್ಥೂಲವಾದ ಪರಿಚಯಕ್ಕೆ ಜ್ಞಾನವೆಂಬುದಾಗಿ ಕರೆದರೆ ಅದರ ವಿಷಯಕವಾದ ಸೂಕ್ಷ್ಮ ತಿಳುವಳಿಕೆಯೇ ವಿಜ್ಞಾನವು. ಅಂಗಷಟ್‌ಸ್ಥಲದಲ್ಲಿ ಬರುವ ಭಕ್ತಸ್ಥಲದಲ್ಲಿ ಇಷ್ಟಲಿಂಗ ವಿಷಯಕವಾದ ಯಾವ ತಿಳುವಳಿಕೆಯು ಹೇಳಲ್ಪಟ್ಟಿದೆಯೋ ಅದು ಜ್ಞಾನವೆಂದು ಕರೆಸಿಕೊಂಡರೆ ಲಿಂಗಷಟ್‌ಸ್ಥಲದಲ್ಲಿ ಅದೇ ಲಿಂಗವಿಷಯಕವಾಗಿ ವಿಶೇಷಜ್ಞಾನವು ಪ್ರತಿಪಾದಿಸಿ ರೋಣದರಿಂದ ಅದಕ್ಕೆ ವಿಜ್ಞಾನವೆಂದು ಹೆಸರಿಸಲಾಗಿದೆ. ಈ ಸ್ಥಲದಲ್ಲಿ ಇಷ್ಟಲಿಂಗ ವಿಷಯಕವಾಗಿ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳು ವಿವರಿಸಲ್ಪಟ್ಟಿವೆ.

ನಾವು ಅನೇಕ ವಿಧವಾದ ಕ್ರಿಯಾಕರ್ಮಗಳನ್ನು ಮಾಡುತ್ತಿರುತ್ತೇವೆ. ಅವುಗಳಲ್ಲಿ ನಿತ್ಯಕರ್ಮವು ಪರಮಾವಶ್ಯಕವಾದುದು. ಪ್ರತಿದಿನ ತಪ್ಪದೇ ಮಾಡುವ ಕರ್ಮಕ್ಕೇನೇ ನಿತ್ಯಕರ್ಮವೆನ್ನುತ್ತಾರೆ. ''ನಿತ್ಯಂ ಯಾವದಾಯುಃ'' ಎಂದರೆ ಆಯುಷ್ಯವಿರುವವರೆಗೆ ಮಾಡಲ್ಪಡುವ ಕರ್ಮವೇ ನಿತ್ಯಕರ್ಮವು. ವೀರಶೈವ ಸಿದ್ಧಾಂತದಲ್ಲಿ ಶಿವ ದೀಕ್ಷೆಯನ್ನು ಹೊಂದಿದ ಭಕ್ತನು ಗುರುವಿನ ಆಣತಿಯಂತೆ ಇಷ್ಟಲಿಂಗಪೂಜಾರೂಪವಾದ ನಿತ್ಯಕರ್ಮ ವನ್ನು ತನ್ನ ಆಯುಷ್ಯದುದ್ದಕ್ಕೂ ಆಚರಿಸುತ್ತಲಿರುತ್ತಾನೆ. ನಿತ್ಯ ಕರ್ಮಕ್ಕೆ ವಿಶೇಷವಾದ ಬೇರಾವ ಫಲವಿರುವುದಿಲ್ಲ, ಆದರೆ ಅದನ್ನು ಆಚರಿಸದಿದ್ದರೆ ಮಾತ್ರ ದುರಿತ ಪ್ರಾಪ್ತಿಯಾಗುತ್ತದೆ. ಅದನ್ನು ಆಚರಿಸುತ್ತಿದ್ದರೆ ಈ ದುರಿತ ಪ್ರಾಪ್ತಿಯು ಆಗದಿರುವುದೇ ಅದರ ಫಲವೆಂಬುದಾಗಿ ತಿಳಿದುಕೊಳ್ಳಬೇಕು.

ವೀರಶೈವರ ಇಷ್ಟಲಿಂಗಪೂಜಾರೂಪವಾದ ಕ್ರಿಯೆಯಲ್ಲಿಯೇ ಉಳಿದೆಲ್ಲ ಕ್ರಿಯೆಗಳು ಸಮಾವಿಷ್ಟವಾಗುತ್ತವೆ. ಅಂತೆಯೇ ಈ ಕ್ರಿಯೆಯೇ ಸರ್ವಶ್ರೇಷ್ಠವಾದುದು. ಇಷ್ಟಲಿಂಗ ಪೂಜೆಯನ್ನು ಮಾಡದ ವೀರಶೈವನು ಉಳಿದ ಯಾವುದೇ ಕ್ರಿಯೆಯನ್ನು ಮಾಡಿದರೂ ಅದು ನಿಷ್ಫಲವಾಗುತ್ತದೆ. ಎಲ್ಲ ಕ್ರಿಯೆಗಳನ್ನು ಪೂರ್ಣಮಾಡುವ ಕ್ರಿಯೆಯೇ ಲಿಂಗಪೂಜಾ ಕ್ರಿಯೆಯಾದ ಕಾರಣ ಅದಿಲ್ಲದ ಎಲ್ಲ ಕ್ರಿಯೆಗಳೂ ಅಪೂರ್ಣಗಳೇ. ಇಷ್ಟಲಿಂಗವು ಕಾಣಲು ಗಾತ್ರದಲ್ಲಿ ಅತಿ ಚಿಕ್ಕದಾಗಿದ್ದರೂ ಅದರ ವ್ಯಾಪ್ತಿಯು ಎಲ್ಲ ಲೋಕಗಳನ್ನು ಆವರಿಸಿಕೊಂಡಿದೆ. ಈ ವಿಷಯವನ್ನು ಬಸವಣ್ಣನವರು ತಮ್ಮ–

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ,
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ,
ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ,
ಕೂಡಲ ಸಂಗಮದೇವಯ್ಯಾ, ಎನ್ನ ಕರಸ್ಥಳಕ್ಕೆ
ಬಂದು ಚುಳುಕಾದಿರಯ್ಯಾ

ಈ ವಚನದಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾರೆ. ಇಂತಹ ವ್ಯಾಪಕ ಸ್ವರೂಪದ ಭಾವನೆಯನ್ನು ಮನದಲ್ಲಿ ಮಾಡುತ್ತ ಇಷ್ಟಲಿಂಗ ಪೂಜೆಯನ್ನು ಗೈದರೆ ಉಳಿದೆಲ್ಲ ದೇವಾನುದೇವರ ಪೂಜೆ–ಯಜ್ಞ–ಯಾಗಾದಿಗಳ ಫಲವು ಇದೊಂದರಿಂದಲೇ ಪ್ರಾಪ್ತವಾಗುತ್ತದೆ. ಕಾಮಧೇನುವು ಮನೆಯಲ್ಲಿದ್ದಾಗ ಹಾಲಿಗಾಗಿ ಮನೆ–ಮನೆಗೆ ತಿರುಗಿದವನ ಗತಿಯು ಏನಾಗುವುದೋ, ಅದೇ ಗತಿಯು ಲಿಂಗಪೂಜೆಯನ್ನು ಬಿಟ್ಟು ಬೇರೆ ಬೇರೆ ಕರ್ಮಗಳನ್ನು ಮಾಡುವವರಿಗೂ ಪ್ರಾಪ್ತವಾಗುತ್ತದೆ. ಆದ್ದರಿಂದ ಇಹಲೋಕದಲ್ಲಿಯ ಎಲ್ಲ ಕ್ರಿಯೆಗಳು ಪರಿಸಮಾಪ್ತಿ ಹೊಂದುವ ಇಷ್ಟಲಿಂಗ ಪೂಜಾರೂಪವಾದ ಕ್ರಿಯೆಯನ್ನು ಪ್ರತಿಯೊಬ್ಬರು ನಿಷ್ಠೆಯಿಂದ ಮಾಡಬೇಕು. ಹೀಗೆ ಎಲ್ಲ ಕ್ರಿಯೆಗಳು ಎಲ್ಲಿ ಪರಿಸಮಾಪ್ತಿ ಹೊಂದುವವೋ ಅದಕ್ಕೇನೆ, ಇಲ್ಲಿ ಆಚಾರ್ಯರು ಕ್ರಿಯಾಲಿಂಗ ಎಂಬುದಾಗಿ ಹೇಳಿದ್ದಾರೆ.

ಪೂಜ್ಯಪಾದರು ಆ ಕ್ರಿಯಾಲಿಂಗದ ಸ್ವರೂಪವನ್ನು ಈ ಮುಂದೆ –

ಪರಾನಂದಚಿದಾಕಾರಂ ಪರಬ್ರಹ್ಮೈವ ಕೇವಲಮ್<br>
ಲಿಂಗಂ ಸದ್ರೂಪತಾಪನ್ನಂ ಲಕ್ಷತೇ ವಿಶ್ವಸಿದ್ಧಯೇ

(ಸಿ. ಶಿ. ೧೫–೩೧)

ಹೀಗೆ ವರ್ಣಿಸಿದ್ದಾರೆ. ನಿತ್ಯಾನಂದ ಸ್ವರೂಪವೂ ಚಿದ್ರೂಪವೂ ಆದ ಕೇವಲ ಸ್ವರೂಪದ ಆ ಪರಬ್ರಹ್ಮವೂ ಈ ಜಗತ್ತಿನಲ್ಲಿ ಭಕ್ತರಿಂದ ಮಾಡಲ್ಪಡುವ ಪೂಜಾದಿ ಕ್ರಿಯೆಗಳನ್ನು ಸಫಲಗೊಳಿಸುವುದಕ್ಕಾಗಿ ಸದ್ರೂಪವಾದ ಇಷ್ಟಲಿಂಗ ಸ್ವರೂಪವನ್ನು ತಾಳಿರುತ್ತದೆ.

ಈ ಜಗತ್ತಿನಲ್ಲಿ ಎಲ್ಲಕ್ಕೂ ದೊಡ್ಡದಾಗಿರುವ ಆ ಪರಾತ್ಪರ ವಸ್ತುವಿಗೆ ಉಪನಿಷತ್ತಿನಲ್ಲಿ ಬ್ರಹ್ಮ ಎಂಬುದಾಗಿ ಕರೆಯಲಾಗಿದೆ. 'ಬೃಹತ್ವಾದ್ ಬ್ರಹ್ಮ' ಎಂಬ ವ್ಯುತ್ಪತ್ತಿಯ ಮೇರೆಗೆ ಯಾವುದು ಎಲ್ಲಕ್ಕೂ ದೊಡ್ಡದಾಗಿರುವುದೋ ಅದುವೇ ಬ್ರಹ್ಮವೆಂದರ್ಥ. ಇದು ಜಗತ್ತಿನ ಒಳಹೊರಗೆಲ್ಲ ವ್ಯಾಪಿಸಿಕೊಂಡಿರುವುದಾಗಿದೆ. ಪ್ರತಿಯೊಬ್ಬರ ಹೃದಯದಲ್ಲಿಯೂ ಸಹ ಇದುವೇ ಆತ್ಮರೂಪದಿಂದ ವಿರಾಜಮಾನವಾದುದಾಗಿದೆ. ಅಂತೆಯೇ ಪ್ರತಿಯೊಬ್ಬರಿಗೂ ನಾನು ಎಲ್ಲರಿಗಿಂತಲೂ ದೊಡ್ಡವನಾಗಬೇಕೆಂಬ ಭಾವನೆಯು ಬರುತ್ತಿರುತ್ತದೆ. ಆದರೆ ದೊಡ್ಡವರಾಗಬೇಕೆನ್ನುವ ಭಾವನೆಯು ಇದ್ದಾಗಲೂ ಆ ಬ್ರಹ್ಮತತ್ವವನ್ನು ಅರಿತು ದೊಡ್ಡವರಾಗಬೇಕೆನ್ನುವ ಜನರು ಬಹು ವಿರಳ. ಆದರೆ ಬಹುತೇಕ ಜನರು ಅಧಿಕಾರ, ಅಂತಸ್ತು, ಸಂಪತ್ತು ಇವುಗಳನ್ನು ಗಳಿಸಿ ಅವುಗಳಿಂದ ತಮ್ಮ ದೊಡ್ಡಸ್ತಿಕೆಯನ್ನು ಹೆಚ್ಚಿಸಿಕೊಳ್ಳಬೇಕೆನ್ನುವವರೇ ಆಗಿದ್ದಾರೆ. ಲೌಕಿಕಗಳಾದ ಈ ಉಪಾಧಿಗಳಿಂದ ಕೆಲಸಮಯ ಯಾರೊಬ್ಬರು ದೊಡ್ಡವರಾಗಿ ತೋರಿದರೂ, ಕಾಲಾಂತರದಲ್ಲಿ ಆ ಉಪಾಧಿಗಳಿಲ್ಲದೇ ಇದ್ದಾಗ ತಮ್ಮನ್ನು ತಾವು ಹೀನರನ್ನಾಗಿ ತಿಳಿದುಕೊಳ್ಳುತ್ತಾರೆ. ಕಾರಣ ಪರಬ್ರಹ್ಮಲಿಂಗವನ್ನರಿತು ತಾನೂ ಲಿಂಗರೂಪನಾದಾಗ ತನಗೆ ಸಮಾನರಾಗಲೀ ಅಥವಾ ತನಗಿಂತಲೂ ದೊಡ್ಡವರಾಗಲೀ ಯಾರೂ ತೋರಲಾರರು. ಒಂದು ನದಿಯು ಪರ್ವತ–ಶಿಖರಗಳಿಂದ ಇಳಿದು ಗುಡ್ಡ–ಬೆಟ್ಟಗಳನ್ನು ತುಳಿದು ಅನೇಕ ಅಡೆ–ತಡೆಗಳನ್ನು ಉಲ್ಲಂಘಿಸಿ ಕೊನೆಗೆ ಸಮುದ್ರವನ್ನು ಸೇರಿ ಸಮುದ್ರವೇ ತಾನಾದಾಗ ತನಗಿಂತಲೂ ಬೇರೊಂದು ದೊಡ್ಡ ಜಲಾಶಯವಾವುದು ಆ

ನದಿಗೆ ತೋರಲಾರದು. ಜೀವಾತ್ಮನು ಪರಾತ್ಪರ ಪರಬ್ರಹ್ಮಲಿಂಗವನ್ನು ತನ್ನ ಆತ್ಮ ರೂಪವನ್ನಾಗಿ ತಿಳಿದುಕೊಂಡಾಗ ಇವನ ಸ್ವರೂಪವೂ ಸಹ ಎಲ್ಲರಿಗಿಂತಲೂ ಬೃಹದಾಕಾರವಾಗಿ ಗೋಚರವಾಗುತ್ತದೆ. ಈ ಸ್ಥಿತಿಯನ್ನು ಪಡೆಯುವುದೇ ಮನುಷ್ಯ ಜೀವನದ ಮುಖ್ಯಗುರಿಯಾಗಿರುತ್ತದೆ.

ಹೀಗೆ ವ್ಯಾಪಕ ಸ್ವರೂಪವನ್ನು ಪಡೆಯಬೇಕಾದರೆ ಆ ವ್ಯಾಪಕ ಸ್ವರೂಪದ ಸಂಕೇತವನ್ನು ಅನುಸರಿಸಬೇಕಾಗುವುದು. ವೀರಶೈವ ಆಚಾರ್ಯರು ಅನುಗ್ರಹಿಸಿದ ಇಷ್ಟಲಿಂಗವು ಅದರ ಸಂಕೇತಸ್ವರೂಪವಾಗಿ ವ್ಯಾಪಕ ತತ್ತ್ವವನ್ನು ಉಪಚಾರಗಳಿಂದ ಪೂಜಿಸಲು ಸಾಧ್ಯವಾಗದ ಕಾರಣ ಅದುವೇ ಭಕ್ತರ ಅನುಗ್ರಹಕ್ಕಾಗಿ ಸದ್ರೂಪವಾದ ಈ ಇಷ್ಟಲಿಂಗರೂಪವನ್ನು ತಾಳಿದೆ. ಅದು ಈ ಸ್ವರೂಪವನ್ನು ತಾಳಲು ಸದ್ಗುರುವೇ ಮೂಲ ಕಾರಣನು ಅರ್ಥಾತ್ ದೀಕ್ಷಾ ಸಮಯದಲ್ಲಿ ಶಿಷ್ಯನ ಹಸ್ತ ಪೀಠದಲ್ಲಿ ಇಷ್ಟಲಿಂಗವನ್ನು ದಯಪಾಲಿಸುವಾಗ ಅದರ ವ್ಯಾಪಕ ಸ್ವರೂಪವನ್ನು ಸದ್ಗುರುವು ತಿಳಿಸಿಕೊಡುತ್ತಾನೆ. ಸರ್ವಾಧಿಷ್ಠಾನವಾದ ಲಿಂಗರೂಪವನ್ನು ಪೂಜೆಮಾಡಿದ ಬಳಿಕ ಬೇರೊಂದು ಪೂಜೆಯೇ ಉಳಿಯುವುದಿಲ್ಲ. ಅಂತೆಯೇ ಈ ಇಷ್ಟಲಿಂಗ ಪೂಜೆಯಲ್ಲಿಯೇ ಸರ್ವಕರ್ಮಗಳು ವಿಲಯವನ್ನು ಹೊಂದುವವು. ಬೇರೆ ಬೇರೆ ಕರ್ಮಗಳನ್ನು ಮಾಡಿದಾಗ ಯಾವ ಯಾವ ಫಲಗಳು ಸಿಗಬೇಕಾಗಿತ್ತೋ ಆ ಎಲ್ಲ ಫಲಗಳು ಇಷ್ಟಲಿಂಗ ಪೂಜೆಯೊಂದರಿಂದಲೇ ದೊರೆಯುತ್ತವೆ. ಅಂದಾಗ ಇಷ್ಟಲಿಂಗಧಾರಿಗೆ ಈ ಇಷ್ಟಲಿಂಗ ಪೂಜೆಯ ಹೊರತಾಗಿ ಬೇರೊಂದು ಕರ್ಮವನ್ನು ಮಾಡುವ ಅವಶ್ಯಕತೆಯೇ ಇರುವುದಿಲ್ಲ ಎಂಬುದಾಗಿ ತಿಳಿದು ಕೊಳ್ಳಬೇಕು.

ಇದೇ ವಿಷಯವನ್ನೇ ಪೂಜ್ಯಪಾದರು ಈ ಮುಂದಿನ ಶ್ಲೋಕಗಳಲ್ಲಿ ಪುನಃ–

ಲಿಂಗಮೇವ ಪರಂ ಜ್ಯೋತಿರ್ಭವತಿ ಬ್ರಹ್ಮಕೇವಲಮ್ ।
ತಸ್ಮಾತ್ ತತ್ಪೂಜನಾದೇವ ಸರ್ವಕರ್ಮಫಲೋದಯಃ ॥

ಪರಿತ್ಯಜ್ಯ ಕ್ರಿಯಾಃ ಸರ್ವಾ ಲಿಂಗಪೂಜೈಕತತ್ಪರಾಃ ।
ವರ್ತಂತೇ ಯೋಗಿನಃ ಸರ್ವೇ ತಸ್ಮಾಲ್ಲಿಂಗಂ ವಿಶಿಷ್ಯತೇ ॥

(ಸಿ. ಶಿ. ೩೨–೩೩)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಲಿಂಗವು ಪರಂಜ್ಯೋತಿ ಸ್ವರೂಪವಾದ ಬ್ರಹ್ಮವೇ ಆಗಿರುತ್ತದೆ. ಆದ್ದರಿಂದ ಅದರ ಪೂಜೆಯಿಂದಲೇ ಉಳಿದೆಲ್ಲ ಕರ್ಮಗಳ ಫಲಗಳೂ ಸಹ ಪ್ರಾಪ್ತವಾಗುತ್ತವೆ. ಇಷ್ಟಲಿಂಗಪೂಜೆಯ ಈ ಮರ್ಮವನ್ನರಿತ ಸನಕ ಸನಂದನಾದಿ ಎಲ್ಲ ಯೋಗಿಗಳು ಬೇರೆ ಬೇರೆ ಕರ್ಮಗಳನ್ನೆಲ್ಲಾ ತ್ಯಜಿಸಿ ಕೇವಲ ಇಷ್ಟಲಿಂಗಪೂಜೆಯಲ್ಲಿಯೇ ತತ್ಪರರಾದರು. ಆದ್ದರಿಂದ ಈ ಕ್ರಿಯಾಲಿಂಗವೇ ಸರ್ವೋತ್ಕೃಷ್ಟವಾದುದು.

ವೇದಾಗಮಗಳಲ್ಲಿ ಶಾಸ್ತ್ರವಿಹಿತವಾದ ಯಜ್ಞಯಾಗಾದಿ ಬೃಹತ್ಪ್ರಮಾಣದ ಕರ್ಮಗಳು ಪ್ರತಿಪಾದಿಸಲ್ಪಟ್ಟಿವೆ. ಈ ಎಲ್ಲ ಕರ್ಮಗಳು ತಮ ತಮಗೆ ನಿಶ್ಚಿತವಾದ ಫಲ ಗಳನ್ನು ಕೊಡುವಂತಹವುಗಳಾಗಿವೆ. ಆದರೆ ಸರ್ವಕರ್ಮಗಳ ಫಲಗಳನ್ನು ಕೊಡುವ ಸಾಮರ್ಥ್ಯವು ಇವ್ಯಾವಕ್ಕೂ ಇರುವುದಿಲ್ಲ. ವೀರಶೈವ ಸಿದ್ಧಾಂತದಲ್ಲಿ ಉಪದೇಶಿಸಲ್ಪಟ್ಟ

ಇಷ್ಟಲಿಂಗ ಪೂಜಾರೂಪವಾದ ಕರ್ಮವು ಉಳಿದೆಲ್ಲ ಕರ್ಮಗಳಿಗಿಂತಲೂ ಸರ್ವೋತ್ಕೃಷ್ಟವಾದುದಾಗಿದೆ. ಆದ್ದರಿಂದ ಯಾರಲ್ಲಿ ಈ ಇಷ್ಟಲಿಂಗ ಪೂಜೆಯ ಬಗ್ಗೆ ರತಿ ಇರುತ್ತದೆಯೋ ಅವರು ಸರ್ವಕರ್ಮಗಳಲ್ಲಿ ಸಿದ್ಧಿಯನ್ನು ಪಡೆಯುತ್ತಾರೆ. ಇಂತಹ ಈ ಕರ್ಮವು ಸಾಮಾನ್ಯರಿಗೆ ದೊರೆಯುವುದಿಲ್ಲ, ಅನೇಕ ಜನ್ಮಗಳ ಸುಕೃತವು ಪರಿಪಾಕಗೊಂಡಾಗ ಆತನು ಈ ಇಷ್ಟಲಿಂಗ ಪೂಜಾಧಿಕಾರವನ್ನು ಪಡೆದುಕೊಳ್ಳುತ್ತಾನೆ. ಇದೇ ವಿಷಯವನ್ನೇ ಉರಿಲಿಂಗಪೆದ್ದಿಯೆಂಬ ಶರಣನು.–

''ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ'' ಎಂದೆನಿಸುವ ಲಿಂಗವು 'ಅತ್ಯತಿಷ್ಠದ್ದಶಾಂಗುಲಮ್' ಎಂದೆನಿಸುವ ಲಿಂಗವು ''ಶ್ರುತಿ ಚಕಿತಮ ಭಿದತ್ತೇ'' ಎಂದೆನಿಸುವ ಲಿಂಗವು, ''ಅಣೋರಣೀಯಾನ್ಮಹತೋ ಮಹೀಯಾನ್'' ಎಂದೆನಿಸುವ ಲಿಂಗವು ''ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ'' ಎಂದೆನಿಸುವ ಲಿಂಗವು, ''ಏಕಮೂರ್ತಿಃ ತ್ರಿಧಾಭಿನ್ನಾ'' ಎಂದೆನಿಸುವ ಲಿಂಗವು, ಶ್ರೀಗುರು ಲಿಂಗಜಂಗಮರೂಪಾಗಿ, ''ಇಷ್ಟಪ್ರಾಣಸ್ತಥಾ ಭಾವಂ ತ್ರಿಧಾ ಏಕಂ ವರಾನನೇ'' ಎಂದುದಾಗಿ ತ್ರಿವಿಧವು ಏಕೀಭವಿಸಿ, ಲಿಂಗರೂಪಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತೈದಾನೆ. ಆಹಾ ಎನ್ನ ಪುಣ್ಯವೆ ! ಆಹಾ ಎನ್ನ ಭಾಗ್ಯವೆ! ಆಹಾ ಎನ್ನ ಸತ್ಯವೇ! ಆಹಾ ಎನ್ನ ನಿತ್ಯವೆ! ಶಿವ ಶಿವಾ ಮಹಾದೇವ! ಮಹಾದೇವ ! ನೀನೇ ಬಲ್ಲೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ!! ಎಂಬ ಈ ವಚನದಲ್ಲಿ ಇಷ್ಟಲಿಂಗದ ಮಹತಿಯನ್ನು ಹಾಗೂ ಅದು ದೊರೆಯಬೇಕಾದರೆ ಪೂರ್ವಜನ್ಮಗಳ ಪುಣ್ಯವು (ಸುಕೃತವು) ಬೇಕೆಂಬುದಾಗಿ ಹೇಳಿದ್ದಾನೆ.

ಅಲ್ಲಮಪ್ರಭುಗಳು ಸಹ ಇಷ್ಟಲಿಂಗದ ಪ್ರಾಪ್ತಿ ಹಾಗೂ ಅದರ ಪೂಜೆ ಸರ್ವೋತ್ಕೃಷ್ಟವಾದುದು. ಅದಕ್ಕಿಂತಲೂ ಮಿಗಿಲಾದುದು ಬೇರೊಂದಿಲ್ಲವೆಂಬುದಾಗಿ ತಮ್ಮ ಈ ವಚನದಲ್ಲಿ ವಿವರಿಸಿದ್ದಾರೆ. –ಅಮೃತ ಸಾಗರದೊಳಗಿದ್ದು ಆಕಳ ಚಿಂತೆಯೇಕೆ? ಮೇರುಮಂದಿರದೊಳಗಿದ್ದು ಜಠರ ತೊಳೆವ ಚಿಂತೆಯೇಕೆ ? ಶ್ರೀ ಗುರುವಿನೊಳಗಿದ್ದು ತತ್ವದ ಚಿಂತೆಯೇಕೆ ? ಪ್ರಸಾದದೊಳಗಿದ್ದು ಮುಕ್ತಿಯ ಚಿಂತೆಯೇಕೆ ? ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಮತ್ತಿನ್ನಾವ ಚಿಂತೆ ಏಕೆ ? ಹೇಳಾ ಗುಹೇಶ್ವರಾ?

ಆದ್ದರಿಂದ ಇಷ್ಟಲಿಂಗ ಪೂಜೆಯೇ ಸರ್ವೋತ್ಕೃಷ್ಟ ಕರ್ಮವೆಂಬುದಾಗಿ ತಿಳಿದು ಕೊಳ್ಳಬೇಕು.

ಸನಕಾದಿ ಋಷಿಗಳು ಯಜ್ಞಾದಿಕ್ರಿಯೆಗಳನ್ನು ಬಿಟ್ಟು ಈ ಇಷ್ಟಲಿಂಗ ಪೂಜಾ ರೂಪವಾದ ಕರ್ಮವನ್ನು ಅದೇಕೆ ತಾನೆ ಅಂಗೀಕರಿಸಿದರು ? ಎಂಬ ಪ್ರಶ್ನೆಯು ಉದ್ಭವಿಸಲು ಪೂಜ್ಯಪಾದರು–

ಯಜ್ಞಾದಯಃ ಕ್ರಿಯಾಃ ಸರ್ವಾ ಲಿಂಗಪೂಜಾಂಶಸಮ್ಮತಾಃ ।
ಇತಿ ಯತ್ಪೂಜ್ಯತೇ ಸಿದ್ಧೈಸ್ತತ್ಕ್ರಿಯಾ ಲಿಂಗಮುಚ್ಯತೇ ॥

(ಸಿ. ಶಿ. ೧೫–೩೪)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಜ್ಞಾದಿಯೆಲ್ಲ ಕ್ರಿಯೆಗಳು

ಲಿಂಗಪೂಜೆಯ ದೃಷ್ಟಿಯಲ್ಲಿ ಒಂದು ಲವಲೇಶವಿದ್ದಂತೆ. ಅಂತೆಯೇ ಸನಕಾದಿಗಳು ಆ ಯಜ್ಞಾದಿಗಳನ್ನು ಬಿಟ್ಟು ಈ ಲಿಂಗಪೂಜೆಯಲ್ಲಿಯೇ ಆಸಕ್ತರಾದರು. ಹೀಗೆ ಸಕಲ ಕ್ರಿಯೆಗಳ ಫಲವನ್ನು ಕೊಡುವ ಈ ಲಿಂಗಕ್ಕೆ ಕ್ರಿಯಾಲಿಂಗವೆಂದು ಕರೆಯುತ್ತಾರೆ.

ಈ ವಿಧವಾದ ಲಿಂಗಪೂಜೆಯಲ್ಲಿ ರತಿಯುಳ್ಳವನಿಗೆ ಯಜ್ಞಾದಿಗಳ ಅವಶ್ಯಕತೆಯಿಲ್ಲ ವೆಂಬುದನ್ನು ಪೂಜ್ಯರು ಪುನಃ–

ಕಿಂ ಯಜ್ಞೈರಗ್ನಿಹೋತ್ರಾದ್ಯೈಃ ಕಿಂ ತಪೋಭಿಶ್ಚದುಶ್ಚರೈಃ।
ಲಿಂಗಾರ್ಚನ ರತಿರ್ಯಸ್ಯ ಸ ಸಿದ್ಧಃ ಸರ್ವಕರ್ಮಸು ॥

(ಸಿ.ಶಿ.೧೫–೩೫)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಇಷ್ಟಲಿಂಗದ ಅರ್ಚನೆ ಯಲ್ಲಿ ಅತಿ ಪ್ರೀತಿಯುಳ್ಳ ವ್ಯಕ್ತಿಗೆ ಅತ್ಯಂತ ಕಠಿಣಗಳಾದ ತಪಸ್ಸನ್ನು ಮಾಡುವುದಾಗಲಿ ಅಥವಾ ಅಗ್ನಿಹೋತ್ರಾದಿ ಯಜ್ಞಗಳನ್ನು ಮಾಡುವುದಾಗಲೀ ಅವಶ್ಯಕತೆಯಿರುವುದಿಲ್ಲ. ಯಾಕೆಂದರೆ ಲಿಂಗಪೂಜೆಯಿಂದಲೇ ಆ ಎಲ್ಲ ಫಲಗಳು ದೊರೆಯುತ್ತಿರಲಿಕ್ಕಾಗಿ ಪುನಃ ಅವುಗಳನ್ನು ಆಚರಿಸುವ ಪ್ರಯೋಜನವೇನು ? ಆದ್ದರಿಂದ ಲಿಂಗಪೂಜಕನು ಅದೊಂದನ್ನೇ ಮನಃಪೂರ್ವಕವಾಗಿ ಮಾಡಿದರೆ ಸಾಕೆಂಬುದೇ ಪೂಜ್ಯಪಾದರ ಆಶಯವಾಗಿದೆ. ಕೊನೆಯದಾಗಿ ಪೂಜ್ಯಪಾದರು ಬ್ರಹ್ಮವಿಷ್ಣುಮೊದಲಾದ ದೇವತೆಗಳು ಈ ಲಿಂಗಪೂಜೆಯ ಮಹಿಮೆಯಿಂದಲೇ ತಮ್ಮ ತಮ್ಮ ಸ್ಥಾನಮಾನಗಳನ್ನು ಪಡೆದು ಕೊಂಡರೆಂಬುದಾಗಿ ತಿಳಿಸಲೋಸುಗ ಪುನಃ–

ಬ್ರಹ್ಮವಿಷ್ಣ್ವಾದಯಃ ಸರ್ವೇ ವಿಬುಧಾ ಲಿಂಗಮಾಶ್ರಿತಾಃ।
ಸಿದ್ಧಾಃ ಸ್ವ ಸ್ವ ಪದೇ ಭಾಂತಿ ಜಗತ್ತಂತ್ರಾಧಿಕಾರಿಣಃ ॥

(ಸಿ.ಶಿ.೧೫–೩೬)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಜಗತ್ತಿನ ಉತ್ಪತ್ತಿ ಹಾಗೂ ಪಾಲನೆಯನ್ನು ಮಾಡುವ ಅಧಿಕಾರವನ್ನು ಪರಮಾತ್ಮನು ಕ್ರಮವಾಗಿ ಬ್ರಹ್ಮ ಹಾಗೂ ವಿಷ್ಣುವಿಗೆ ವಹಿಸಿಕೊಟ್ಟಿದ್ದಾನೆ. ಇದೂ ಅಲ್ಲದೆ ಇನ್ನುಳಿದ ಎಲ್ಲ ದೇವತೆಗಳೂ ಬೇರೆ ಬೇರೆ ಅಧಿಕಾರವನ್ನು ಶಿವನಿಂದ ಪಡೆದುಕೊಂಡಿದ್ದಾರೆ. ಇದೆಲ್ಲವೂ ಅವರು ಮಾಡಿದ ಇಷ್ಟಲಿಂಗಪೂಜೆಯ ಫಲವೆಂದೇ ಭಾವಿಸಬೇಕು. ಇದೆಲ್ಲವನ್ನು ಪರ್ಯಾಲೋಚಿಸಲಾಗಿ ಲಿಂಗಪೂಜೆಯೇ ಸರ್ವೋತ್ಕೃಷ್ಟವೆಂಬುದು ತಿಳಿದುಬರುತ್ತದೆ. ದೇವತೆಗಳೆಲ್ಲ ತಮ್ಮ ಉತ್ತಮಾಂಗದಲ್ಲಿ  ಅರ್ಥಾತ್ ಮಸ್ತಕದಲ್ಲಿ ಇಷ್ಟಲಿಂಗವನ್ನು ಧರಿಸಿಕೊಂಡಿರುತ್ತಿದ್ದ ರೆಂಬುದು ಶಾಸ್ತ್ರದ ಆಧಾರದಿಂದ ತಿಳಿದುಬರುತ್ತದೆ. ಅಂತೆಯೇ ಇಂದಿಗೂ ಸಹ ಪ್ರಾಚೀನ ದೇವ ವಿಗ್ರಹಗಳ ಮಸ್ತಕದಲ್ಲಿ ಇಷ್ಟಲಿಂಗವಿರುವುದು ಕಂಡುಬರುತ್ತದೆ. ಬಾರ್ಶಿ ಶಹರದ ವಿಷ್ಣು ಭಗವಂತನ ಮಸ್ತಕದ ಮೇಲೆ, ಪಂಡರಪುರದ ವಿಠ್ಠಲನ ಮಸ್ತಕದ ಮೇಲೆ, ಕೊಲ್ಲಾಪುರದ ಮಹಾಲಕ್ಷ್ಮಿಯ ಮಸ್ತಕದ ಮೇಲೆ ಹಾಗೂ ತುಳಜಾಪುರದ ಅಂಬಾಭವಾನಿಯ ಮಸ್ತಕದ ಮೇಲೆ ಇಂದಿಗೂ ಅವು ವಿರಾಜ ಮಾನವಾಗಿರುತ್ತವೆ.

ವಿಷ್ಣು ಭಗವಂತನು ಲಿಂಗಪೂಜೆಯಲ್ಲಿ ಸಾವಿರ ಕಮಲಗಳನ್ನು ಧರಿಸುವ ವ್ರತವನ್ನು ಪ್ರಾರಂಭಿಸಿ ಕೊನೆಯದಿನದಂದು ಒಂದು ಪುಷ್ಪವು ಕಡಿಮೆಯಾದಾಗ ತನ್ನ ನೇತ್ರ ಕಮಲವನ್ನೆ ತೆಗೆದು ಧರಿಸಿ ಶಿವನ ಅನುಗ್ರಹದಿಂದ ಕಮಲಾಕ್ಷನಾದನಲ್ಲದೆ ಸುದರ್ಶನ ಚಕ್ರವನ್ನೂ ಪಡೆದನೆಂಬ ಕಥೆಯು ಸುಪ್ರಸಿದ್ಧವಾಗಿದೆ. ಇದೆಲ್ಲವನ್ನು ಪರ್ಯಾಲೋಚಿಸಲಾಗಿ ಕ್ರಿಯಾಲಿಂಗವಾದ ಇಷ್ಟಲಿಂಗವು ಶ್ರೇಷ್ಠವಾದುದು ಮತ್ತು ಬೇರೆ ಬೇರೆ ಯಜ್ಞ-ಯಾಗಾದಿ ಕರ್ಮಗಳನ್ನು ಮಾಡುವುದಕ್ಕಿಂತಲೂ ಆ ಇಷ್ಟಲಿಂಗದ ಪೂಜೆಯೇ ಸರ್ವೋತ್ಕೃಷ್ಟವೆಂಬುದಾಗಿ ತಿಳಿದುಬರುತ್ತದೆ. ಹೀಗೆ ಕ್ರಿಯಾಲಿಂಗಸ್ಥಲದಲ್ಲಿ ಲಿಂಗದ ಮಹತಿ ಹಾಗೂ ಲಿಂಗಪೂಜೆಯ ಮಹತಿ ಪ್ರತಿಪಾದಿಸಲ್ಪಟ್ಟಿದೆಯೆಂದು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಆಗಷ್ಟ್ ೧೯೯೨

(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



# ಭಾವಲಿಂಗಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ಶ್ರೇಷ್ಠಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತ ಭಕ್ತಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕ್ರಿಯಾಲಿಂಗಸ್ಥಲದ ಬಗ್ಗೆ ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಭಾವಲಿಂಗಸ್ಥಲದ ಬಗ್ಗೆ ವಿವೇಚಿಸೋಣ.

''ನಿಷ್ಕಲಂ ಭಾವಲಿಂಗಂ ಸ್ಯಾದ್ ಭಾವಗ್ರಾಹ್ಯಂ ಪರಾತ್ಪರಮ್'' ಎಂಬ ವಾತುಲಾಗಮದ ಈ ಪ್ರಮಾಣೋಕ್ತಿಯಲ್ಲಿ ನಿಷ್ಕಲವೂ ಪರಾತ್ಪರವೂ ಭಾವಗ್ರಾಹ್ಯವೂ ಆದ ಲಿಂಗಕ್ಕೆ ಭಾವಲಿಂಗವೆಂದು ಕರೆಯುತ್ತಾರೆ. ಸಕಲ ಕ್ರಿಯೆಗಳ ಲಯಕ್ಕೆ ಆಶ್ರಯವಾದ ಲಿಂಗಕ್ಕೆ ಕ್ರಿಯಾಲಿಂಗವೆಂದು ಕರೆದಂತೆ ಭಾವನೆಗಳೆಲ್ಲ ಕೊನೆಗೆ ಎಲ್ಲಿ ಲಯ ಹೊಂದುವವೋ ಅದಕ್ಕೆ ಭಾವಲಿಂಗವೆಂದು ಕರೆಯುತ್ತಾರೆ. ಇಲ್ಲಿ ಕ್ರಮ ಪ್ರಾಪ್ತವಾದ ಪ್ರಾಣಲಿಂಗಕ್ಕೇನೇ ಭಾವಲಿಂಗವೆಂಬುದಾಗಿ ಕರೆಯಲಾಗಿದೆ. ಇದೇ ವಿಷಯವನ್ನೆ ಪೂಜ್ಯಪಾದರು–

ಕ್ರಿಯಾ ಯಥಾ ಲಯಂ ಪ್ರಾಪ್ತಾ ತಥಾ ಭಾವೋಽಪಿಲೀಯತೇ ।<br>
ಯತ್ರ ತದ್ದೇಶಿಕೈರುಕ್ತಂ ಭಾವಲಿಂಗಮಿತಿ ಸ್ಫುಟಮ್ ॥

(ಸಿ. ಶಿ. ೧೫–೩೭)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಇಷ್ಟಲಿಂಗ ಪೂಜೆಯ ನಂತರ ಕ್ರಿಯೆಗಳೆಲ್ಲ ಪರಿಸಮಾಪ್ತಿಹೊಂದುವಂತೆ ಅರ್ಥಾತ್ ಎಲ್ಲ ಕ್ರಿಯೆಗಳಿಗೆ ಕ್ರಿಯಾ ಲಿಂಗವೇ ಆಧಾರವಾಗಿರುವಂತೆ ಪರಮೋತ್ಕೃಷ್ಟವಾದ ಭಾವನೆಗೆ ಆಧಾರವಾದದ್ದೇ ಭಾವಲಿಂಗವು. ಇಷ್ಟಲಿಂಗದ ಪೂಜೆಯನ್ನು ಹೊರಗಿನ ಉಪಚಾರಗಳಿಂದ ಮಾಡು ತ್ತೇವೆ. ಆದರೆ ಅಂತರಂಗದಲ್ಲಿರುವ ಭಾವಲಿಂಗ ಅರ್ಥಾತ್ ಪ್ರಾಣಲಿಂಗಕ್ಕೆ ಈ ಬಾಹ್ಯ ಸಾಮಗ್ರಿಗಳು ಉಪಯೋಗವಾಗುವುದಿಲ್ಲ. ಅದರ ಪೂಜೆಯನ್ನು ಭಾವನಾಮಯ ಪದಾರ್ಥಗಳಿಂದಲೇ ಮಾಡಬೇಕಾಗುವುದು.

ಶ್ರೀ ಸಿದ್ಧಾಂತ ಶಿಖಾಮಣಿಯ ಅಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗ ಸ್ಥಲದಲ್ಲಿ ಬರುವ ಪ್ರಾಣಲಿಂಗಾರ್ಚನ ಸ್ಥಲದಲ್ಲಿ ಪ್ರಾಣಲಿಂಗವನ್ನು ಪೂಜಿಸುವ ಭಾವನಾಮಯ ಸಾಮಗ್ರಿಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತವೆ. ಆ ಪ್ರಕರಣದ

ಪ್ರಕಾರವಾಗಿ– ಕ್ಷಮೆಯೇ ಅಭಿಷೇಕ ಜಲವು, ವಿವೇಕವೇ ವಸ್ತ್ರವು, ಸತ್ಯವ ನುಡಿಯುವುದೇ ಲಿಂಗದ ಆಭರಣವು, ವೈರಾಗ್ಯ ಭಾವನೆಯೇ ಆ ಲಿಂಗಕ್ಕೆ ಧರಿಸುವ ಪುಷ್ಪಮಾಲೆಯು, ಮನಸ್ಸಿನ ಸಮಾಧಿ ಸ್ಥಿತಿಯೇ ಗಂಧವು, ನಿರಹಂಕಾರ ಭಾವನೆಯೇ ಅಕ್ಷತೆಯು, ಶ್ರದ್ಧೆಯೇ ಧೂಪವು, ಮಹಾಜ್ಞಾನವೇ ದೀಪವು, ಪ್ರಪಂಚದ ಭ್ರಾಂತಿ ಯನ್ನು ಸಮರ್ಪಿಸುವುದೇ ನೈವೇದ್ಯವು, ಮೌನವೇ ಘಂಟಾನಾದವು, ಶಬ್ದಸ್ಪರ್ಶಾದಿ ವಿಷಯಗಳ ಆಶೆಯನ್ನು ತ್ಯಜಿಸುವುದೇ ತಾಂಬೂಲ ಸಮರ್ಪಣೆಯು, ವಿಷಯಗಳಲ್ಲಿ ಭ್ರಾಂತನಾಗದಿರುವುದೇ ಪ್ರದಕ್ಷಿಣೆಯು, ಆ ಲಿಂಗದಲ್ಲಿಯೇ ಸಮರಸತೆಯನ್ನು ಸಾಧಿಸುವುದೇ ನಮಸ್ಕಾರ ಕ್ರಿಯೆಯು. ಹೀಗೆ ಎಲ್ಲ ಭಾವನೆಗಳು ಪ್ರಾಣಲಿಂಗ ಪೂಜೆಯ ಸಾಮಗ್ರಿಗಳಾಗಿ ಹೇಳಲ್ಪಟ್ಟಿವೆ.

ಪೂಜ್ಯಪಾದರು ಈ ಭಾವಲಿಂಗದ ಬಗ್ಗೇನೇ ಪುನಃ ವಿಶ್ಲೇಷಿಸುತ್ತಾರೆ–

ಭಾವೇನ ಗೃಹ್ಯತೇ ದೇವೋಭಗವಾನ್‌ಪರಮಃ ಶಿವಃ।
ಕಿಂ ತೇನ ಕ್ರಿಯತೇ ತಸ್ಯ ನಿತ್ಯಪೂರ್ಣೋ ಹಿ ಸ ಸ್ಮೃತಃ ॥

(ಸಿ.ಶಿ. ೧೩–೩೮)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ– ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನು ಕೇವಲ ಭಾವನೆಯಿಂದ ಮಾತ್ರ ಗ್ರಾಹ್ಯನಾಗಿದ್ದಾನೆ. ಅವನು ನಿತ್ಯನೂ, ಪರಿಪೂರ್ಣನೂ, ಪರಾತ್ಪರನೂ ಆಗಿರೋಣದರಿಂದ ಬಾಹ್ಯಕಲಾಕ್ರಿಯಾಕಲಾಪಗಳು ಅವನ ಪೂಜೆಯಲ್ಲಿ ನಿಷ್ಪ್ರಯೋಜಕಗಳಾಗುತ್ತವೆ. ಸೂಕ್ಷ್ಮವಾದ ತತ್ತ್ವಗಳನ್ನು ಭಾವನೆ ಯಿಂದ ತಿಳಿದುಕೊಳ್ಳಲು ಬರುವುದೇ ವಿನಃ ಹಸ್ತಾದಿಗಳಿಂದ ಮುಟ್ಟಿಪೂಜಿಸಲಾಗು ವುದಿಲ್ಲ, ಅದಕ್ಕೆ ಅರ್ಪಿಸುವ ಜಲ–ಭಸ್ಮಾದಿ ಪದಾರ್ಥಗಳು ಭಾವನಾತ್ಮಕಗಳೇ ಆಗಿರಬೇಕು. ಹೀಗೆ ಎಲ್ಲ ಭಾವನೆಗಳ ವಿಲಯಸ್ಥಾನವಾದ ಕಾರಣ ಇದಕ್ಕೆ ಭಾವಲಿಂಗವೆಂದು ಕರೆಯುತ್ತಾರೆ ! ಯಾರು ಅಂತಃಕರಣ ಶುದ್ಧಿಯುಳ್ಳವರೋ, ಯಾರ ಭಾವನೆಯಲ್ಲಿ ಸಂಸಾರಿಕ ವ್ಯಾಮೋಹವು ಇಲ್ಲದಾಗಿರುವುದೋ, ಅವರೇ ಈ ಭಾವಲಿಂಗವನ್ನು ಪೂಜಿಸಲು ಅಧಿಕಾರಿಗಳಾಗಿರುತ್ತಾರೆ.

ಪೂಜ್ಯಪಾದರು ಭಾವಲಿಂಗದ ಬಗ್ಗೆ ವಿವರಿಸುತ್ತ ಪುನಃ–

ಅಖಂಡಪರಮಾನಂದಬೋಧರೂಪಃ ಪರಃ ಶಿವಃ।
ಭಕ್ತಾನಾಮುಪಚಾರೇಣ ಭಾವಯೋಗಾತ್ ಪ್ರಸೀದತಿ॥

(ಸಿ.ಶಿ. ೧೩–೩೯)

ಈ ವಿಧವಾಗಿ ಅಪ್ಪಣೆ ಕೊಡಿಸುತ್ತಾರೆ. ಅಪರಿಚ್ಛಿನ್ನನೂ ಅರ್ಥಾತ್ ಅಖಂಡನೂ, ಆನಂದರೂಪನೂ ಮತ್ತು ಜ್ಞಾನರೂಪನೂ ಆದ ಆ ಭಾವಲಿಂಗರೂಪವಾದ ಪರಶಿವನು ಭಕ್ತರು ಮಾಡಿದ ಭಾವನಾಮಯ ಉಪಚಾರಗಳ ಪೂಜೆಯಿಂದ ಪ್ರಸನ್ನನಾಗುತ್ತಾನೆ. ಇಷ್ಟಲಿಂಗವು ಯಾವುದೇ ಒಂದು ಪ್ರಸಂಗದಲ್ಲಿ ಖಂಡಿತವಾಗಬಹುದು. ಏಕೆಂದರೆ ಅದು ಲಿಂಗದ ಸ್ಥೂಲರೂಪವಾಗಿರುತ್ತದೆ. ಆದರೆ ಈ ಚಿದ್ರೂಪವಾದ ಪ್ರಾಣಲಿಂಗವು ಅದೆಂದಿಗೂ ಖಂಡಿತವಾಗಲಾರದು. ತನ್ನ ಚಿದ್ರೂಪದ ಅರಿವೇ ಪ್ರಾಣಲಿಂಗವೆಂಬು

ದಾಗಿ ತಿಳಿದುಕೊಳ್ಳಬೇಕು. ನಮ್ಮೆಲ್ಲರ ಆತ್ಮವು ಸದ್ರೂಪವಾಗಿರುವಂತೆ ಅದು ಚಿದ್ರೂಪವೂ ಆಗಿದೆ. ಅಂದರೆ ಸ್ವಯಂಪ್ರಕಾಶರೂಪವಾಗಿದೆ ಎಂದರ್ಥ. ಜಡ ಪದಾರ್ಥಗಳನ್ನು ನೋಡಬೇಕಾದರೆ ಪ್ರಕಾಶದ ಅವಶ್ಯಕತೆಯಿರುತ್ತದೆ. ಅಂತೆಯೇ ಸೂರ್ಯ, ಚಂದ್ರ, ಅಗ್ನಿ, ನಕ್ಷತ್ರ, ವಿದ್ಯುತ್ತುಮುಂತಾದ ಪ್ರಕಾಶಗಳು ಜಡವಸ್ತುವನ್ನು ತೋರಿಸಲು ಸಹಕಾರಿಗಳಾಗಿರುತ್ತವೆ. ಬಾಹ್ಯಪ್ರಪಂಚದ ವಸ್ತುಗಳು ಈ ಪ್ರಕಾಶದಿಂದ ತೋರಲ್ಪಟ್ಟರೂ ಅಂತರಂಗದ ಸ್ವಾಪ್ನಿಕ ಪದಾರ್ಥಗಳನ್ನು ಇವು ಪ್ರಕಾಶಿಸಲಾರವು. ಅಂತೆಯೇ ಸ್ವಪ್ನಾವಸ್ಥೆಯ ಬಗ್ಗೆ ಉಪನಿಷತ್ತಿನಲ್ಲಿ–

> ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್ ।
> ನೇಮಾ ವಿದ್ಯುತೋ ಭಾಂತಿಕುತೋಽಯಮಗ್ನಿಃ ॥

ಎಂಬುದಾಗಿ ಹೇಳಲಾಗಿದೆ. ಸ್ವಪ್ನಪ್ರಪಂಚದ ಪದಾರ್ಥಗಳು ಸೂರ್ಯ, ಚಂದ್ರ, ನಕ್ಷತ್ರ, ವಿದ್ಯುತ್ತು ಅಗ್ನಿ ಮುಂತಾದವುಗಳಿಂದ ಪ್ರಕಾಶಿಸುವುದಿಲ್ಲ. ಯಾಕೆಂದರೆ ಇವು ಜಾಗ್ರದವಸ್ಥೆಯ ಪದಾರ್ಥಗಳನ್ನು ಪ್ರಕಾಶಿಸಬಲ್ಲವೇ ವಿನಃ ಸ್ವಪ್ನದಲ್ಲಿ ಇವುಗಳಿಗೆ ಗತಿಯೇ ಸಂಭವಿಸುವುದಿಲ್ಲ. ಹಾಗಾದರೆ ಸ್ವಾಪ್ನಿಕ ಪದಾರ್ಥಗಳು ಯಾರ ಪ್ರಕಾಶದಲ್ಲಿ ಪ್ರಕಾಶಿಸುತ್ತವೆ ? ಎಂಬ ಪ್ರಶ್ನೆ ಉದ್ಭವಿಸಿದಾಗ ''ಅತ್ರಾಽಯಂ ಪುರುಷಃ ಸ್ವಯಂ ಜ್ಯೋತಿಃ'' ಎಂಬುದಾಗಿ ಉಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿದೆ. ಇದಕ್ಕೆ ಭಾಷ್ಯವನ್ನು ಬರೆಯುವಾಗ ಶ್ರೀಮಚ್ಛಂಕರಾಚಾರ್ಯರು ಅತ್ರ ಎನ್ನುವ ಪದಕ್ಕೆ ''ಸ್ವಪ್ನಾವಸ್ಥಾಮಧಿ ಕೃತ್ಯ ಇದಮಾಮ್ನಾಯತೇ'' ಎಂಬುದಾಗಿ ಹೇಳಿದ್ದಾರೆ. ಅಂದರೆ ಪ್ರತಿಯೊಬ್ಬರ ಅಂತರಂಗದಲ್ಲಿಯ ಪ್ರಾಣಲಿಂಗವು ಸ್ವಯಂಪ್ರಕಾಶರೂಪವಾಗಿದ್ದು ಅದು ಸ್ವಾಪ್ನಿಕ ಪದಾರ್ಥಗಳನ್ನೇ ಬೆಳಗುತ್ತದೆ. ಅಂದಾಗ ಸ್ವಪ್ನದಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶವಿಲ್ಲದಿರೋಣದರಿಂದ, ಆದರೂ ಅಲ್ಲೊಂದು ಪ್ರಕಾಶವು ಸರ್ವರಿಗೂ ಅನುಭವಗೋಚರ ವಾಗೋಣದರಿಂದ ಆ ಪ್ರಕಾಶವು ಬೇರಾರದೂ ಆಗಿರದೆ ತನ್ನದೇ ಆಗಿರುತ್ತದೆ. ಹೀಗೆ ತನ್ನ ಚಿದ್ರೂಪದ ಚಿಂತನೆಯೇ ಪ್ರಾಣಲಿಂಗವಾಗಿರುತ್ತದೆ. ಈ ಲಿಂಗವನ್ನು ಪೂಜಿಸಲು ಭಾವಮಯ ಸಾಮಗ್ರಿಗಳ ಹೊರತಾಗಿ ಬೇರಾವ ಬಾಹ್ಯಸಾಮಗ್ರಿಗಳು ಪ್ರಯೋಜನ ಕಾರಿಯಾಗುವುದಿಲ್ಲ.

ಪೂಜ್ಯಪಾದರು ಈ ಚಿದ್ರೂಪವಾದ ಪ್ರಾಣಲಿಂಗವೇ ಶ್ರೇಷ್ಠವೆಂಬುದನ್ನು ಪ್ರತಿಪಾದಿಸಲೋಸುಗ ಪುನಃ–

> ಮೃಚ್ಛಿಲಾವಿಹಿತಾಲ್ಲಿಂಗಾದ್ ಭಾವಲಿಂಗಂ ವಿಶಿಷ್ಯತೇ ।
> ನಿರಸ್ತಸರ್ವದೋಷತ್ವಾದ್ ಜ್ಞಾನಮಾರ್ಗಪ್ರವೇಶನಾತ್ ॥

(ಸಿ.ಶಿ. ೧೩–೪೦)

ಈ ತೆರನಾಗಿ ಅಪ್ಪಣೆ ಕೊಡಿಸಿದ್ದಾರೆ. ಶಾಸ್ತ್ರದಲ್ಲಿ ಲಿಂಗವನ್ನು ನಿರ್ಮಾಣಗೊಳಿಸಲು ಅನೇಕ ವಿಧ ಪದಾರ್ಥಗಳನ್ನು ಉಲ್ಲೇಖಿಸಲಾಗಿದೆ. ಮಣ್ಣು ಕಲ್ಲು ಸ್ಫಟಿಕ ಮುಂತಾದ ಜಗತ್ತಿನಲ್ಲಿಯ ಪ್ರತಿಯೊಂದು ಪದಾರ್ಥದಿಂದಲೂ ಲಿಂಗವನ್ನು ನಿರ್ಮಿಸಲು ಬರುತ್ತದೆ. ಮಣ್ಣು ಪಾಷಾಣ ಮತ್ತು ಧಾತುಗಳಿಂದ ನಿರ್ಮಿತವಾದ ಲಿಂಗಗಳಲ್ಲಿ ಒಂದಿಲ್ಲೊಂದು

ಪ್ರಕಾರದ ದೋಷಗಳು ಇದ್ದೇ ಇರುತ್ತವೆ. ಈ ಲಿಂಗಗಳನ್ನು ತಯಾರಿಸುವಾಗ ಶಿಲ್ಪಿಯು ತನ್ನ ಸಾಮಗ್ರಿಗಳಿಂದ ಛೇದನ ಭೇದನಾದಿ ಕ್ರಿಯೆಗಳನ್ನು ಮಾಡಿ ಅದಕ್ಕೊಂದು ಆಕಾರವನ್ನು ತಂದು ಕೊಡುತ್ತಾನೆ. ಇಂತಹ ಶಿವಲಿಂಗಗಳನ್ನು ಮಂದಿರಾದಿಗಳಲ್ಲಿ ಪ್ರತಿಷ್ಠಾಪನೆಗೊಳಿಸುವಾಗ ಅದರಲ್ಲಿಯ ಅನೇಕ ವಿಧಗಳಾದ ದೋಷಗಳ ನಿವೃತ್ತಿಗಾಗಿ ಜಲಾಧಿವಾಸ, ಧಾನ್ಯಾಧಿವಾಸ ಹಾಗೂ ಅಭಿಷೇಕಾದಿ ಕ್ರಿಯೆಗಳನ್ನು ಮಾಡಬೇಕಾಗುತ್ತದೆ. ಆವಾಗ ಅದು ನಿರ್ದಿಷ್ಟವಾಗಿ ಪ್ರಾಣ ಪ್ರತಿಷ್ಠಾಪನೆಗೆ ಯೋಗ್ಯವಾಗಿರುತ್ತದೆ. ಹೀಗೆ ಮಣ್ಣು ಮುಂತಾದವುಗಳಿಂದ ತಯಾರಿಸಿದ ಶಿವಲಿಂಗಗಳಲ್ಲಿ ಒಂದಿಲ್ಲೊಂದು ಪ್ರಕಾರದ ದೋಷವಿರುವುದು ಕಂಡುಬರುತ್ತದೆ. ಆದರೆ ಅಂತರಂಗದಲ್ಲಿಯ ಪ್ರಾಣಲಿಂಗ ರೂಪವಾದ ಭಾವಲಿಂಗಕ್ಕೆ ಯಾವ ದೋಷವೂ ಇರುವುದಿಲ್ಲ. ಅಲ್ಲದೆ ಇದನ್ನು ಆರಾಧಿಸುವವನು ಜ್ಞಾನಮಾರ್ಗದಲ್ಲಿ ಪ್ರವೇಶವನ್ನು ಪಡೆಯುತ್ತಾನೆ. ಆದಕಾರಣ ಬಾಹ್ಯಲಿಂಗಕ್ಕಿಂತಲೂ ಅಂತರಂಗದ ಈ ಪ್ರಾಣಲಿಂಗವೇ ಶ್ರೇಷ್ಠವೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಇಲ್ಲಿಯವರೆಗೆ ವರ್ಣಿಸಿದ ಈ ಭಾವಲಿಂಗವನ್ನು ಯಾರು ಪೂಜಿಸುತ್ತಾರೆಯೋ ಅವರಿಗೆ ಭಾವಲಿಂಗೀ ಎಂಬುದಾಗಿ ಕರೆಯುತ್ತಾರೆಂಬ ವಿಷಯವನ್ನು ಪೂಜ್ಯರು ಪುನಃ–

ವಿಹಾಯ ಬಾಹ್ಯಲಿಂಗಾನಿ ಚಿಲ್ಲಿಂಗಂ ಮನಸಿ ಸ್ಮರನ್ ।
ಪೂಜಯೇದ್ ಭಾವಪುಷ್ಪೈರ್ಯೋ ಭಾವಲಿಂಗೀತಿ ಕಥ್ಯತೇ ॥

( ಸಿ.ಶಿ. ೧೫–೪೧ )

ಹೀಗೆ ಆದೇಶಿಸಿದ್ದಾರೆ. ಮೃಚ್ಛಿಲಾದಿಗಳಿಂದ ನಿರ್ಮಿಸಲ್ಪಟ್ಟ ಬಾಹ್ಯಲಿಂಗವನ್ನು ಬಿಟ್ಟು ''ತತ್ಪ್ರಾಣೇಷ್ವಂತರ್ಮನಸೋಲಿಂಗಮಾಹುಃ'' ಎಂಬ ಅಥರ್ವಣ ಶ್ರುತಿಯ ಪ್ರಮಾಣದಂತೆ ತನ್ನ ಮನಸ್ಸಿನಲ್ಲಿ ಅರ್ಥಾತ್ ಹೃತ್ಕಮಲದಲ್ಲಿ ಚಿದ್ರೂಪವಾದ ಪ್ರಾಣಲಿಂಗವನ್ನು ಸ್ಮರಿಸುತ್ತ ಭಾವಮಯಗಳಾದ ಪುಷ್ಪಗಳಿಂದ ಯಾರು ಆ ಭಾವಲಿಂಗವನ್ನು ಪೂಜಿಸುತ್ತಾರೆಯೋ ಅವರಿಗೆ 'ಭಾವಲಿಂಗೀ' ಎಂಬುದಾಗಿ ಕರೆಯಲಾಗಿದೆ.

ಭಾವಲಿಂಗವು ಅರ್ಥಾತ್ ಪ್ರಾಣಲಿಂಗವು–ಅಂತರಂಗದ ಲಿಂಗವಾಗಿರೋಣದರಿಂದ ಅದರ ಪೂಜೆಗೆ ಆ ಅಂತರಂಗದ ಸಾಮಗ್ರಿಗಳು ಬೇಕೇ ವಿನಃ ಬಹಿರಂಗದ ಸಾಮಗ್ರಿಗಳು ನಡೆಯಲಾರವು. ಒಬ್ಬ ಮನುಷ್ಯನಿಗೆ ಸ್ವಪ್ನದಲ್ಲಿ ಒಂದು ಭಯಾನಕವಾದ ಕಾಳಿಂಗಸರ್ಪವು ಕಚ್ಚಿತಂತೆ, ಆಗ ಗಾಬರಿಗೊಂಡ ಆ ವ್ಯಕ್ತಿಯು ತಡವರಿಸಿ ಎದ್ದು ಕುಳಿತು ಅತ್ತಿತ್ತ ನೋಡಿ ಮನೆಯಿಂದ ಹೊರಗೆ ಓಡಿ ಬಂದು ವೈದ್ಯರ ಕಡೆಗೆ ಹೋದನು. ಅಲ್ಲಿ ಆ ವೈದ್ಯರಿಗೆ, ನೋಡಿ ! ನನಗೆ ಕಾಳಿಂಗಸರ್ಪವು ಕಚ್ಚಿದೆ, ನಾನು ಉಳಿಯುವ ಲಕ್ಷಣಗಳು ಕಂಡುಬರುವುದಿಲ್ಲ, ಕಾರಣ ತಾವು ಬೇಗನೆ ಉಪಚರಿಸಿ ನನಗೆ ಪ್ರಾಣದಾನ ಮಾಡಿರಿ ಎಂದು ಅಂಗಲಾಚಿ ಬೇಡಿಕೊಂಡನು. ಆಗ ವೈದ್ಯರು ಅವನ ಶರೀರವನ್ನು ಪರೀಕ್ಷಿಸುತ್ತ ನಿನ್ನ ದೇಹದಲ್ಲಿ ಎಲ್ಲಿಯೂ ಸರ್ಪದಂಶದ ಚಿಹ್ನೆಗಳೇ ಕಾಣುತ್ತಿಲ್ಲವಲ್ಲ ? ನಿನಗೆ ಆ ಹಾವು ಎಲ್ಲಿ ಕಚ್ಚಿದೆ ? ಎಂಬುದಾಗಿ ಪ್ರಶ್ನಿಸಲು ಆತನು ''ಹೇ ವೈದ್ಯರೇ ರಾತ್ರಿ ನಾನು ಮಲಗಿಕೊಂಡಾಗ ಒಂದು ಸ್ವಪ್ನವು ಬಿದ್ದಿತು. ಆ ಸ್ವಪ್ನದಲ್ಲಿ ನಾನೊಂದು

ಘೋರಾರಣ್ಯದಲ್ಲಿ ಅಲೆಯುತ್ತ ಹೊರಟಿದ್ದೆ, ಆಗ ಕಣ್ಣು ಕಾಣದೆ ಅಲ್ಲಿ ಬಿದ್ದಿರುವ ಸರ್ಪದ ಮೇಲೆ ಕಾಲನಿಟ್ಟೆ. ಆಗ ಅದು ಭೋರ್ಗರೆಯುತ್ತ ನನ್ನ ಕಾಲಿಗೆ ಬಲವಾಗಿ ಕಚ್ಚಿತು'' ಆ ವ್ಯಕ್ತಿಯ ಈ ನುಡಿಗಳನ್ನು ಕೇಳಿದ ವೈದ್ಯರು ನಸುನಕ್ಕು ನಿನಗೆ ಸರ್ಪವು ಸ್ವಪ್ನದಲ್ಲಿ ಕಚ್ಚಿದ ಕಾರಣ ಅದರ ದೋಷವು ಸ್ವಪ್ನದ ವೈದ್ಯರಿಂದಲೇ ಪರಿಹರಿಸಲು ಸಾಧ್ಯವಾಗುವದು ಎಂದು ಹೇಳಿ ಸಮಾಧಾನ ಮಾಡಿ ಕಳುಹಿಸಿ ಕೊಟ್ಟರಂತೆ. ಸ್ವಪ್ನದ ಸರ್ಪದಂಶಕ್ಕೆ ಸ್ವಪ್ನದ ವೈದ್ಯರ ಔಷಧವೇ ಉಪಯುಕ್ತವಾಗು ವುದೇ ವಿನಃ ಜಾಗೃದಾವಸ್ಥೆಯ ವೈದ್ಯರಾಗಲೀ ಅವರ ಔಷಧವಾಗಲೀ ಹೇಗೆ ಪ್ರಯೋಜನಹೀನ ವಾಗುವುದೋ, ಆದರಂತೆ ಅಂತರಂಗದ ಪ್ರಾಣಲಿಂಗಾರ್ಚನೆಗೆ ಅಂತರಂಗದ ಭಾವಮಯ ಪದಾರ್ಥಗಳೇ ಉಪಯೋಗಕ್ಕೆ ಬರುತ್ತವೆ. ಇಂತಹ ಭಾವಮಯ ಪದಾರ್ಥಗಳಿಂದ ಆ ಪ್ರಾಣಲಿಂಗವನ್ನು ಪೂಜಿಸುವವನು 'ಭಾವಲಿಂಗಿ' ಎಂಬುದಾಗಿ ಕರೆಯಲ್ಪಡುತ್ತಾನೆಂಬುದು ಪೂಜ್ಯಪಾದರ ಆಶಯವಾಗಿದೆ.

ಹೀಗೆ ಪ್ರಾಣಲಿಂಗಪೂಜೆಯನ್ನು ಮಾಡುವ ಸಾಧಕನಿಗೆ ಶಿವಯೋಗಿಯೆಂತಲೂ ಕರೆಯುತ್ತಾರೆ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು ಪುನಃ –

ಮೂಲಾಧಾರೇಽಥವಾ ಚಿತ್ತೇ ಭ್ರೂಮಧ್ಯೇ ವಾ ಸುನಿರ್ಮಲಮ್ ।
ದೀಪಾಕಾರಂ ಯಜನ್ ಲಿಂಗಂ ಭಾವದ್ರವ್ಯೈಃ ಸ ಯೋಗವಾನ್ ॥

(ಸಿ.ಶಿ. ೧೫–೪೨)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ಮೂಲಾಧಾರದಲ್ಲಿ, ಹೃದಯ ಮಧ್ಯದಲ್ಲಿ ಮತ್ತು ಭ್ರೂಮಧ್ಯದಲ್ಲಿ ಅತ್ಯಂತ ನಿರ್ಮಲವಾದ ದೀಪಾಕಾರದ ಪ್ರಾಣಲಿಂಗವನ್ನು ಪೂರ್ವೋಕ್ತ ಭಾವದ್ರವ್ಯಗಳಿಂದ ಯಾರು ಪೂಜಿಸುತ್ತಾರೆಯೋ ಅವರಿಗೆ 'ಶಿವಯೋಗಿ'ಯೆಂದು ಕರೆಯುತ್ತಾರೆ.

ನಮ್ಮ ಶರೀರದ ಮೂಲಾಧಾರ ಚಕ್ರ, ಹೃದಯ ಮತ್ತು ಭ್ರೂಮಧ್ಯದಲ್ಲಿ ಪ್ರಾಣಲಿಂಗವು ಕಂಗೊಳಿಸುತ್ತಲಿರುತ್ತದೆ. ಈ ಮೂರು ಸ್ಥಾನಗಳ ಪೈಕಿ ಯಾರಿಗೆ ಯಾವ ಸ್ಥಾನದಲ್ಲಿ ಧ್ಯಾನಮಾಡಲು ಅನುಕೂಲವಾಗುವುದೋ ಆ ಸ್ಥಾನದಲ್ಲಿ ಈ ಜ್ಯೋತಿರ್ಲಿಂಗ ವನ್ನು ಭಾವಿಸಿ ಭಾವದ್ರವ್ಯಗಳಿಂದ ಪೂಜಿಸಬೇಕು. ನಮ್ಮ ಹಸ್ತಪೀಠದಲ್ಲಿರುವ ಇಷ್ಟಲಿಂಗದ ಆಕಾರದ ಜ್ಯೋತಿಯು ಮೇಲಿನ ಕೇಂದ್ರಗಳಲ್ಲಿ ಪ್ರಜ್ವಲಿಸುತ್ತಲಿರುತ್ತದೆ. ಆ ಜ್ಯೋತಿಯ ಧ್ಯಾನಗೈಯುವುದು ಸರ್ವರಿಗೂ ಸಾಧ್ಯವಿಲ್ಲವೆಂತಲೇ ಅದೇ ಆಕಾರದ ಇಷ್ಟಲಿಂಗವನ್ನು ಪ್ರತಿಯೊಬ್ಬರ ವಾಮಹಸ್ತಪೀಠಕ್ಕೆ ಸದ್ಗುರುವು ಅನುಗ್ರಹಿಸುತ್ತಾನೆ. ಈ ಇಷ್ಟಲಿಂಗ ಪೂಜೆಯನ್ನು ಮಾಡುತ್ತ ಮಾಡುತ್ತ ಅದರಲ್ಲಿಯೇ ಏಕಾಗ್ರದೃಷ್ಟಿಯನ್ನಿರಿಸಿದ ಸಾಧಕನಿಗೆ ಕಾಲಾಂತರದಲ್ಲಿ ಪೂರ್ವದಲ್ಲಿ ಹೇಳಿದ ಕೇಂದ್ರಸ್ಥಾನಗಳಲ್ಲಿ ಜ್ಯೋತಿಯ ಅನುಭವವಾಗುವುದು. ಅದನ್ನು ಮುಂದೆ ಭಾವದ್ರವ್ಯಗಳಿಂದ ಪೂಜಿಸತೊಡಗಲು ಆ ಸಾಧಕನೇ ಭಾವಲಿಂಗೀ ಇಲ್ಲವೆ ಶಿವಯೋಗಿ ಎಂದು ಕರೆಯಿಸಿಕೊಳ್ಳುವನು.

ಹೀಗೆ ಭಾವಲಿಂಗಪೂಜಾಸಕ್ತನಾದ ಸಾಧಕನು ತನ್ನ ನಿಷ್ಠೆಯನ್ನು ಆ ಪ್ರಾಣಲಿಂಗ ದಲ್ಲಿ ಇಟ್ಟಿರುವದರಿಂದ ಅವನಿಗೆ ಬಾಹ್ಯಲಿಂಗಪೂಜೆಗಿಂತಲೂ ಅಂತರಂಗದ ಪ್ರಾಣ

ಲಿಂಗಪೂಜೆಯೇ ಹೆಚ್ಚು ಮಹತ್ವದ್ದಾಗಿರುತ್ತದೆ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು ಪುನಃ –

ಸ್ವಾನುಭೂತಿಪ್ರಮಾಣೇನ ಜ್ಯೋತಿರ್ಲಿಂಗೇನ ಸಂಯುತಃ।
ಶಿಲಾಮೃದ್ದಾರುಸಂಭೂತಂ ನ ಲಿಂಗಂ ಪೂಜಯತ್ಯಸೌ ॥

(ಸಿ.ಶಿ. ೧೫–೪೩)

ಈ ತೆರನಾಗಿ ಆದೇಶವಿತ್ತಿದ್ದಾರೆ. ತಾತ್ಪರ್ಯವೇನೆಂದರೆ ಶಿವಯೋಗಿಯಾದವನು ತನ್ನ ಸ್ವಾನುಭೂತಿಗನುಸಾರವಾಗಿ ಚಿನ್ಮಯವಾದ ಪ್ರಾಣಲಿಂಗದೊಂದಿಗೆ 'ಅಹಮಸ್ಮಿ' ಅರ್ಥಾತ್ ಅದು ನಾನೇ ಇದ್ದೇನೆ ಎಂಬ ಅನುಭವವು ಪ್ರಾಪ್ತವಾಗಲು ಅವನಿಗೆ ಬಾಹ್ಯಲಿಂಗಪೂಜಾದಿಗಳಲ್ಲಿ ಅಭಿರುಚಿಯು ತೋರುವುದಿಲ್ಲ.

ಇನ್ನು ಕೊನೆಯದಾಗಿ ಪೂಜ್ಯಪಾದರು ಬಹಿರಂಗಪೂಜೆ ಹಾಗೂ ಅಂತರಂಗ ಪೂಜೆಯ ವ್ಯತ್ಯಾಸವನ್ನು ವಿವರಿಸುತ್ತ –

ಕ್ರಿಯಾರೂಪಾ ತು ಯಾ ಪೂಜಾ ಸಾ ಜ್ಞೇಯಾ ಸ್ವಲ್ಪಸಂವಿದಾಮ್।
ಆಂತರಾ ಭಾವಪೂಜಾತು ಶಿವಸ್ಯ ಜ್ಞಾನಿನಾಂ ಮತಾ ॥

(ಸಿ.ಶಿ. ೧೫–೪೪)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ, ತಾತ್ಪರ್ಯವೇನೆಂದರೆ, ಈ ಜಗತ್ತಿನಲ್ಲಿ ಜನರನ್ನು ಅಜ್ಞರೆಂತಲೂ ಮತ್ತು ಸೂಜ್ಞರೆಂತಲೂ ಎರಡು ವಿಧವಾಗಿ ವಿಂಗಡಿಸಲಾಗಿದೆ. ಅಜ್ಞರಿಗೆ ಅಂತರಂಗದೃಷ್ಟಿಯಿರುವುದಿಲ್ಲ ಕಾರಣ ಅಂಥವರಿಗೆ ಪ್ರಾಣಲಿಂಗಪೂಜೆಯನ್ನು ಮಾಡಲು ಹೇಳಿದರೆ ಅವರು ಅದರಲ್ಲಿ ಸಮರ್ಥರಾಗರು. ಆದರೆ ಆ ಸಾಮರ್ಥ್ಯ ಬರುವವರೆಗೆ ಬಾಹ್ಯವಾದ ಕ್ರಿಯಾಲಿಂಗಪೂಜೆಯನ್ನೇ ಅವರಿಗೆ ವಿಧಿಸಲಾಗುತ್ತದೆ. ಇನ್ನು ಈ ಬಾಹ್ಯಲಿಂಗಪೂಜೆಯನ್ನು ಮಾಡಿ ಅಂತಃಕರಣವನ್ನು ಪರಿಶುದ್ಧಗೊಳಿಸಿಕೊಂಡು ಹೃದಯಸ್ಥವಾದ ಜ್ಯೋತಿರ್ಲಿಂಗದ ಅನುಸಂಧಾನಗೈಯುವ ಸಾಮರ್ಥ್ಯವುಳ್ಳ ಉತ್ತಮಾಧಿಕಾರಿಗೆ ಈ ಪ್ರಾಣಲಿಂಗಪೂಜೆಯು ವಿಧಿಸಲ್ಪಟ್ಟಿದೆ. ಕಾರಣ ಇಷ್ಟಲಿಂಗ ಪೂಜಕರಾದ ಪ್ರತಿಯೊಬ್ಬ ವೀರಶೈವರು ಕೇವಲ ಇಷ್ಟಲಿಂಗಪೂಜೆಯಿಂದಲೇ ಸಂತೃಪ್ತ ರಾಗದೇ ಅಂತರಂಗದ ಪ್ರಾಣಲಿಂಗದ ಕಡೆಗೆ ದೃಷ್ಟಿಯನ್ನು ಹರಿಸಬೇಕೆಂಬು ದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಆಗಷ್ಟ್ ೧೯೯೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಜ್ಞಾನಲಿಂಗಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ಉತ್ತಮ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಭಾವಲಿಂಗಸ್ಥಲದ ಬಗ್ಗೆ ಕೂಲಂಕಷವಾಗಿ ಶ್ರವಣ ಮಾಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಜ್ಞಾನಲಿಂಗಸ್ಥಲದ ಬಗ್ಗೆ ವಿವೇಚಿಸಲಾಗುವುದು. ಸರ್ವರೂ ಸಮಾಹಿತಚಿತ್ತರಾಗಿ ಶ್ರವಣಮಾಡಿರಿ.

ಇಲ್ಲಿ ಬಂದಿರುವ ಜ್ಞಾನಲಿಂಗ ಪದದ ಅರ್ಥವನ್ನು ಭಾವಲಿಂಗವೆಂಬುದಾಗಿ ಮಾಡಿಕೊಳ್ಳಬೇಕು. ವೀರಶೈವ ಸಿದ್ಧಾಂತದಲ್ಲಿ ಕ್ರಮವಾಗಿ ಇಷ್ಟ–ಪ್ರಾಣ ಹಾಗೂ ಭಾವಲಿಂಗಗಳು ಪ್ರತಿಪಾದಿಸಲ್ಪಟ್ಟಿವೆ. ಹಿಂದೆ ತಿಳಿಸಿದ ಭಾವಲಿಂಗವು ಪ್ರಾಣಲಿಂಗ ವೆಂಬುದಾಗಿ ನಿಮ್ಮೆಲ್ಲರಿಗೆ ಮನವರಿಕೆ ಮಾಡಿಕೊಡಲಾಗಿದೆ. ಕೊನೆಯದಾದ ಭಾವ ಲಿಂಗಕ್ಕೆ ಜ್ಞಾನಲಿಂಗ, ಪರಾತ್ಪರಲಿಂಗ ಮತ್ತು ತೃಪ್ತಿಲಿಂಗವೆಂಬುದಾಗಿ ಪರ್ಯಾಯ ಹೆಸರುಗಳುಂಟು.

ಅಚಿಂತ್ಯಂ ಚಾ ಪ್ರಮೇಯಂಚ ವ್ಯಕ್ತಾವ್ಯಕ್ತ ಪರಂಚಯತ್ ।
ಸೂಕ್ಷ್ಮಾತ್‌ಸೂಕ್ಷ್ಮತರಂ ಜ್ಞಾನಂ ತನ್ಮೇ ಮನಃ ಶಿವಸಂಕಲ್ಪಮಸ್ತು ।

ಎಂಬ ಶ್ರುತಿ ವಚನದಂತೆ ಮತ್ತು

ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ।
ಭಾವನಾತೀತಮವ್ಯಕ್ತಂ ಪರಂಬ್ರಹ್ಮ ಶಿವಾಭಿದಮ್ ॥

ಎಂಬ ವಾತುಲೋತ್ತರಾಗಮದ ಮಂತ್ರದ ಆಧಾರದ ಮೇಲೆ ಭಾವಲಿಂಗದ ಪರ್ಯಾಯ ಶಬ್ದಗಳು ತಿಳಿದುಬರುತ್ತವೆ. ಈ ಪ್ರಮಾಣ ವಾಕ್ಯದ ಆಧಾರದ ಮೇಲೆಯೇ ಪೂಜ್ಯಪಾದರು ಇದಕ್ಕೆ ಜ್ಞಾನಲಿಂಗಸ್ಥಲವೆಂಬುದಾಗಿ ಹೆಸರಿಸಿದ್ದಾರೆ. ಈ ಜ್ಞಾನಲಿಂಗದ ಲಕ್ಷಣವನ್ನು ಪುನಃ –

ತದ್ಭಾವಜ್ಞಾಪಕಜ್ಞಾನಂ ಲಯಂ ಯತ್ರ ಸಮಶ್ನುತೇ ।
ತದ್‌ಜ್ಞಾನಲಿಂಗಮಾಖ್ಯಾತಂ ಶಿವತತ್ತ್ವಾರ್ಥಕೋವಿದೈಃ ॥

(ಸಿ. ಶಿ. ೧೫–೪೫)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಭಾವಲಿಂಗದ ಅರಿವನ್ನುಂಟು

ಮಾಡುವ ಜ್ಞಾನವು ಎಲ್ಲಿ ಲಯವಾಗುವುದೋ ಆ ಲಿಂಗಕ್ಕೇನೇ ಶಿವತತ್ತ್ವವನ್ನು ಬಲ್ಲ ಶಿವಯೋಗಿಗಳು ಜ್ಞಾನಲಿಂಗವೆಂಬುದಾಗಿ ಕರೆದಿದ್ದಾರೆ. ಭಾವನೆಗಳ ಲಯಗಳಿಗೆ ಆಶ್ರಯವಾದದ್ದು ಹೇಗೆ ಭಾವಲಿಂಗವೆಂಬುದಾಗಿ ಕರೆಯಲ್ಪಡುತ್ತದೆಯೋ ಅದರಂ ತೇನೇ ಜ್ಞಾನವು ಲಯವಾಗುವ ಲಿಂಗಕ್ಕೆ ಜ್ಞಾನಲಿಂಗ ವೆಂಬುದಾಗಿ ಪರಿಭಾವಿಸಬೇಕು. ಈ ಜ್ಞಾನಲಿಂಗದ ಸ್ವರೂಪವನ್ನು ಪೂಜ್ಯರು ಪುನಃ–

> ತ್ರಿಮೂರ್ತಿಭೇದ ನಿರ್ಮುಕ್ತಂ ತ್ರಿಗುಣಾತೀತವೈಭವಮ್ ।
> ಬ್ರಹ್ಮಯದ್ಬೋಧ್ಯತೆ ತತ್ತು ಜ್ಞಾನಲಿಂಗಮುದಾಹೃತಮ್ ॥
> ಸ್ಥೂಲೇ ಕ್ರಿಯಾಸಮಾಪತ್ತಿಃ ಸೂಕ್ಷ್ಮೇ ಭಾವಸ್ಯ ಸಂಭವಃ ।
> ಸ್ಥೂಲ ಸೂಕ್ಷ್ಮಪದಾತೀತೇ ಜ್ಞಾನಮೇವ ಪರಾತ್ಮನಿ ॥

(ಸಿ.ಶಿ. ೧೫, ೪೬–೪೭)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ಈ ಜ್ಞಾನಲಿಂಗವು ಬ್ರಹ್ಮ ವಿಷ್ಣು ಮತ್ತು ರುದ್ರನೆಂಬ ತ್ರಿಮೂರ್ತಿಗಳಿಗಿಂತಲೂ ಭಿನ್ನವಾದುದಾಗಿದೆ. ಅರ್ಥಾತ್ ಇದು ಅಖಂಡ ವಾಗಿದ್ದು ಇದರಲ್ಲಿ ಯಾವ ಭೇದಗಳೂ ಇರುವುದಿಲ್ಲ. ಇದೂ ಅಲ್ಲದೇ ಸತ್ವ, ರಜ, ಮತ್ತು ತಮಸ್ಸುಗಳ ವೈಭವಕ್ಕಿಂತಲೂ ಉತ್ಕೃಷ್ಟವಾದ ಗುಣಾತೀತ ವೈಭವವನ್ನು ಪಡೆದುದಾಗಿದೆ ಮತ್ತು ಯಾವುದಕ್ಕೆ ಉಪನಿಷತ್ತುಗಳು ಬ್ರಹ್ಮವೆಂಬುದಾಗಿ ಬೋಧಿ ಸುತ್ತವೆಯೋ ಅದಕ್ಕೇನೇ ವೀರಶೈವ–ಆಚಾರ್ಯರು ಜ್ಞಾನಲಿಂಗವೆಂಬುದಾಗಿ ಕರೆದಿ ದ್ದಾರೆ. ಸ್ಥೂಲವಾದ ಕ್ರಿಯಾಲಿಂಗದಲ್ಲಿ ಅಂದರೆ ಇಷ್ಟಲಿಂಗದಲ್ಲಿ ಎಲ್ಲ ಕ್ರಿಯೆಗಳು ಪರಿಸಮಾಪ್ತಿ ಹೊಂದುತ್ತವೆ. ಅದರಂತೆ ಸೂಕ್ಷ್ಮವಾದ ಭಾವಲಿಂಗದಲ್ಲಿ ಅರ್ಥಾತ್ ಪ್ರಾಣಲಿಂಗದಲ್ಲಿ ಎಲ್ಲ ಭಾವನೆಗಳು ಲಯವನ್ನು ಹೊಂದುವ ಕಾರಣದಿಂದಾಗಿ ಆ ಸೂಕ್ಷ್ಮವಾದ ಪ್ರಾಣಲಿಂಗಕ್ಕೆ ಇಲ್ಲಿ ಭಾವಲಿಂಗವೆಂಬುದಾಗಿ ಸಂಬೋಧಿಸಲಾಗಿದೆ. ಇನ್ನು ಸ್ಥೂಲ ಹಾಗೂ ಸೂಕ್ಷ್ಮ ಸ್ವರೂಪದ ಆ ಲಿಂಗಗಳಿಗಿಂತಲೂ ಅತೀತಾವಸ್ಥೆಯಲ್ಲಿ ರುವ ಪರಾತ್ಪರ ಪರಬ್ರಹ್ಮಕ್ಕೆ ಜ್ಞಾನಲಿಂಗವೆಂದು ಹೆಸರಿಸಲಾಗಿದೆ. ಇಲ್ಲಿ ಎಲ್ಲ ಜ್ಞಾನಗಳ ಪರಿಸಮಾಪ್ತಿಯಾಗೋಣದರಿಂದ ಇದಕ್ಕೆ ಜ್ಞಾನಲಿಂಗವೆಂದು ಹೆಸರು. ಹೀಗೆ ಪೂಜ್ಯ ಪಾದರು ಈ ಸರ್ವೋತ್ಕೃಷ್ಟವಾದ ಭಾವಲಿಂಗಕ್ಕೆ ಇಲ್ಲಿ ಜ್ಞಾನಲಿಂಗವೆಂದು ಕರೆದಿದ್ದಾರೆ.

ಈ ಜ್ಞಾನಲಿಂಗದ ಸ್ವರೂಪದ ಬಗ್ಗೇನೇ ಪುನಃ ವಿಶ್ಲೇಷಿಸುತ್ತ ಪೂಜ್ಯರು–

> ಕಲ್ಪಿತಾನಿ ಹಿ ರೂಪಾಣಿ ಸ್ಥೂಲಾನಿ ಪರಮಾತ್ಮನಃ
> ಸೂಕ್ಷ್ಮಾಣ್ಯಪಿ ಚ ತೈಃ ಕಿಂ ವಾ ಪರಬೋಧಂ ಸಮಾಚರೇತ್ ॥

(ಸಿ.ಶಿ. ೧೫–೪೮)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ಪರಶಿವಬ್ರಹ್ಮದಲ್ಲಿ ಕಲ್ಪಿಸಲ್ಪಟ್ಟ ಇಷ್ಟಲಿಂಗ ಮತ್ತು ಪ್ರಾಣಲಿಂಗವೆಂಬ ಭೇದವು ಮಾಯೆಯಿಂದ ಪ್ರಾದುರ್ಭವಿಸಿದುದಾಗಿದೆ. ಸಾಧಕನಿಗೆ ಕ್ರಮವಾಗಿ ಅವನ ಯೋಗ್ಯತೆಯನ್ನು ಹೆಚ್ಚಿಸಲು ಈ ವಿಭಾಗವನ್ನು ಮಾಡಲಾಗಿದೆ. ಹೀಗೆ ಇದರ ಮರ್ಮವನ್ನರಿತ ಮುಮುಕ್ಷುವು ಈ ಸ್ಥೂಲ ಸೂಕ್ಷ್ಮಗಳನ್ನು ಬಿಟ್ಟು ಇವರೆಡಕ್ಕಿಂತಲೂ ಅತೀತಾವಸ್ಥೆಯಲ್ಲಿರುವ ಜ್ಞಾನಲಿಂಗದ ಉಪಾಸನೆಯನ್ನೇ ಮಾಡ ಬೇಕು.

ಈ ಜ್ಞಾನಲಿಂಗವನ್ನು ಉಪಾಸಿಸುವ ಸಾಧಕನಿಗೆ ಜ್ಞಾನಲಿಂಗಿ ಎಂಬುದಾಗಿ ಕರೆಯುವ ವಿಷಯವನ್ನೇ ಪೂಜ್ಯಪಾದರು ಈ ಮುಂದೆ–

ಪರಾತ್ಪರಂ ತು ಯದ್ಬ್ರಹ್ಮ ಪರಮಾನಂದ ಲಕ್ಷಣಮ್ ।
ಶಿವಾಖ್ಯಂ ಜ್ಞಾಯತೇ ಯೇನ ಸ ಜ್ಞಾನಲಿಂಗೀತಿ ಕಥ್ಯತೇ ॥

(ಸಿ. ಶಿ. ೧೫–೪೯)

ಹೀಗೆ ವಿವರಿಸಿದ್ದಾರೆ. ಈ ಜ್ಞಾನಲಿಂಗವು ಪರಾತ್ಪರವಾದ ಪರಬ್ರಹ್ಮವೇ ಆಗಿರುತ್ತದೆ. ಇದು ಪರಮಾನಂದ ಸ್ವರೂಪವಾದುದಾಗಿದೆ. ಪರಶಿವನೆಂಬ ಈ ತತ್ತ್ವಕ್ಕೆ ಶಿವಯೋಗಿಗಳು ಜ್ಞಾನಲಿಂಗವೆಂಬುದಾಗಿ ಕರೆದಿದ್ದಾರೆ. ಇದನ್ನು ಯಾರು ಸ್ವಾತ್ಮ ಸ್ವರೂಪವನ್ನಾಗಿ ಅರಿತಿದ್ದಾರೆಯೋ ಅವರಿಗೆ 'ಜ್ಞಾನಲಿಂಗಿ' ಎಂಬುದಾಗಿ ಸಂಬೋಧಿಸಲಾಗುತ್ತದೆ.

ಇನ್ನು ಕೊನೆಯದಾಗಿ ಈ ಜ್ಞಾನಲಿಂಗಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಪೂಜ್ಯರು–

ಬಾಹ್ಯಕ್ರಿಯಾಂ ಪರಿತ್ಯಜ್ಯ ಚಿಂತಾಮಪಿ ಚ ಮಾನಸೀಮ್ ।
ಅಖಂಡಜ್ಞಾನರೂಪತ್ವಂ ಯೋ ಭಜೇನ್ಮುಕ್ತ ಏವ ಸಃ ॥

(ಸಿ. ಶಿ. ೧೫–೫೦)

ಈ ತೆರನಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ– ಈ ಪೂರ್ವದಲ್ಲಿ ಹೇಳಿದ ಇಷ್ಟಲಿಂಗ ಪೂಜಾರೂಪವಾದ ಬಾಹ್ಯಕ್ರಿಯೆಯನ್ನು ಹಾಗೂ ಭಾವನಾದ್ರವ್ಯಗಳಿಂದ ಅರ್ಚಿಸಲ್ಪಡುವ ಪ್ರಾಣಲಿಂಗಾರ್ಚನೆಯನ್ನು ತ್ಯಜಿಸಿ ಈ ಜ್ಞಾನಲಿಂಗಿಸ್ಥಲದ ಸಾಧಕನು ಅಖಂಡವಾದ ಜ್ಞಾನಲಿಂಗವೊಂದನ್ನೇ ಭಜಿಸುತ್ತ ಕೊನೆಗೆ ಜೀವನ್ಮುಕ್ತನಾಗಿಬಿಡುತ್ತಾನೆ.

ಪೂಜ್ಯಪಾದರು ಸಾಧಕನ ಕ್ರಮಿಕವಿಕಾಸವನ್ನು ತಿಳಿಯಪಡಿಸುತ್ತ ಯಾವಾಗ ಆತನು ಜ್ಞಾನಲಿಂಗೋಪಾಸನೆಯ ಅಧಿಕಾರಿಯಾಗುವನೋ ಆಗ ಅವನು ಅದನ್ನೇ ಮಾಡುತ್ತಿರುವುದು ಸರ್ವೋತ್ಕೃಷ್ಟವಾದುದು ಎಂಬುದಾಗಿ ಇಲ್ಲಿ ತಿಳಿಯಪಡಿಸಿದ್ದಾರೆ. ಇನ್ನು ಯಾವ ವ್ಯಕ್ತಿಯು ಜ್ಞಾನಲಿಂಗಸ್ಥಲದಿಂದ ಕೆಳದರ್ಜೆಯ ಪ್ರಾಣಲಿಂಗ ಹಾಗೂ ಇಷ್ಟಲಿಂಗಾರ್ಚನೆಯ ಅವಸ್ಥೆಗೆ ಬರುತ್ತಾನೆಯೋ ಆಗ ಅವನು ಆಯಾ ಸ್ಥಿತಿಯಲ್ಲಿ ಆಯಾ ಲಿಂಗಗಳ ಉಪಾಸನೆಯನ್ನು ಮಾಡಲೇಬೇಕಾಗುತ್ತದೆ. ಒಂದು ವೇಳೆ ಅವನು ಜ್ಞಾನಲಿಂಗ ಸ್ಥಿತಿಯಿಂದ ಕೆಳಗೆ ಬಾರದೇ ಇದ್ದಾಗ ಅದೊಂದನ್ನೇ ಉಪಾಸಿಸಬೇಕೇ ವಿನಃ ಬೇರೊಂದರ ಉಪಾಸನೆಯು ಅಲ್ಲಿ ಸಲ್ಲುವದಿಲ್ಲವೆಂಬುದನ್ನು ಪೂಜ್ಯಪಾದರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಹೇ ಶ್ರದ್ಧಾಳುಗಳಾದ ಶ್ರೋತೃಗಳೇ ! ಈ ಜ್ಞಾನಲಿಂಗೋಪಾಸನೆಯನ್ನು ಮಾಡಿ ನೀವೆಲ್ಲರೂ ಜೀವನ್ಮುಕ್ತಿ ವಿಲಕ್ಷಣವಾದ ಆನಂದವನ್ನು ಅನುಭವಿಸಿರಿ ಯೆಂಬುದಾಗಿ ಅಪ್ಪಣೆಕೊಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಆಗಷ್ಟ ೧೯೬೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಸ್ವಯಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ಅಪ್ರತಿಮ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರಸ್ಥಲಗಳ ಬಗೆಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಜ್ಞಾನಲಿಂಗಸ್ಥಲದ ಬಗೆಗೆ ಪರಿಪೂರ್ಣವಾಗಿ ಶ್ರವಣಮಾಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಸ್ವಯಸ್ಥಲ ವನ್ನು ಕುರಿತು ವಿವೇಚಿಸಲಾಗುವುದು. ಸರ್ವರೂ ಏಕಾಗ್ರಚಿತ್ತರಾಗಿ ಶ್ರವಣಮಾಡಿರಿ.

ಜ್ಞಾನಲಿಂಗಸ್ಥಲದಲ್ಲಿ ಜ್ಞಾನಲಿಂಗೋಪಾಸನೆಯನ್ನು ಮಾಡುವ ಶಿವಯೋಗಿಯು ಜೀವನ್ಮುಕ್ತಿ ಸ್ಥಿತಿಯನ್ನು ಪಡೆಯುತ್ತಾನೆಂಬುದಾಗಿ ತಿಳಿಸಲಾಗಿದೆ. ಈ ಜೀವನ್ಮುಕ್ತಿಯ ಅವಸ್ಥೆಯನ್ನು ಪಡೆದ ಆತನ ಸ್ಥಿತಿಯು ಇನ್ನು ಮುಂದೆ ಹೇಗಿರುತ್ತದೆಯೆಂಬುದಾಗಿ ಮುಂದಿನ ಸ್ವಯ–ಚರ ಹಾಗೂ ಪರಸ್ಥಲಗಳಲ್ಲಿ ಕ್ರಮವಾಗಿ ಪ್ರತಿಪಾದಿಸಲಾಗಿದೆ. ಸ್ವಯಸ್ಥಲವೆಂದರೆ ತನ್ನಲ್ಲೇ ತಾನಿರುವುದು ಎಂದರ್ಥ. ಗೃಹಸ್ಥ, ವನಸ್ಥ, ಸನ್ಯಸ್ತ ಮುಂತಾದ ಶಬ್ದಗಳನ್ನು ಅನೇಕ ಸಾರೆ ಕೇಳಿದ್ದೀರಿ, ಮನೆಯಲ್ಲಿ ಮಡದಿ–ಮಕ್ಕಳೊಂದಿಗೆ ಇರುವವನು ಗೃಹಸ್ಥ, ತನ್ನ ಪರಿವಾರವನ್ನು ತ್ಯಜಿಸಿ ಕೇವಲ ಧರ್ಮಪತ್ನಿ ಸಮೇತನಾಗಿ ವನದಲ್ಲಿ ವಾಸನಾರಹಿತವಾದ ಜೀವನವನ್ನು ಸಾಗಿಸುವವನು ವನಸ್ಥನು. ಇನ್ನು ಧರ್ಮಪತ್ನಿಯನ್ನೂ ತ್ಯಜಿಸಿ ಸನ್ಯಾಸದೀಕ್ಷೆಯನ್ನು ಹೊಂದಿ ಓರ್ವನೇಯಾಗಿದ್ದು ಸದಾ ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಿಸುವವನೇ ಸನ್ಯಸ್ತನು. ಇದನ್ನು ದಾಟಿದ ನಂತರ ಇನ್ನೊಂದು ಅವಸ್ಥೆ ಬರುತ್ತದೆ. ಅದುವೇ ಸ್ವಸ್ಥಾವಸ್ಥೆ. ಸ್ವಸ್ಮಿನ್ ತಿಷ್ಠತಿ ಇತಿ ಸ್ವಸ್ಥಃ ಎಂದರೆ ಯಾವಾತನು ತನ್ನಲ್ಲಿಯೇ ತಾನು ಆನಂದವನ್ನು ಪಡೆಯುವನೋ ಅವನೇ ಸ್ವಸ್ಥನು. ಅಂದರೆ ಆತ್ಮಾನುಸಂಧಾನದಲ್ಲಿ ಸದಾ ಇರುವವನು ಎಂದರ್ಥ.

ಇಬ್ಬರು ವ್ಯಕ್ತಿಗಳು ಪರಸ್ಪರ ಭೆಟ್ಟಿಯಾದಾಗ ನೀವು ಸ್ವಸ್ಥರಾಗಿದ್ದೀರಾ ? ಅಥವಾ ನಿಮ್ಮ ಸ್ವಾಸ್ಥ್ಯ ಹೇಗಿದೆ ? ಎಂಬುದಾಗಿ ಪ್ರಶ್ನೆಯನ್ನು ಮಾಡುತ್ತಾರೆ. ಲೌಕಿಕವಾಗಿ ಈ ಶಬ್ದದ ಅರ್ಥವು ಶರೀರದ ಆರೋಗ್ಯವನ್ನುದ್ದೇಶಿಸಿ ಇರುವಂಥದ್ದಾದರೂ ಆಧ್ಯಾತ್ಮಿಕ ದೃಷ್ಟಿಯಿಂದ ನೀವು ಆತ್ಮಸ್ವರೂಪದಲ್ಲಿ ಸ್ಥಿರವಾಗಿದ್ದೀರಾ ಎಂಬ ಅರ್ಥವಾಗುತ್ತದೆ. ಪ್ರಾಯಃ ಮನುಷ್ಯನು ತನ್ನಲ್ಲಿ ತಾನಿರದೆ ಅನ್ಯಾಸಕ್ತನಾಗಿಯೇ ಇರುತ್ತಾನೆ. ಸುಖವು ತನ್ನಲ್ಲಿಯೇ ಇದ್ದರೂ ಅಥವಾ ತಾನೇ ಸುಖಸ್ವರೂಪನಾಗಿದ್ದರೂ ಅದರ ಅರಿವಿಲ್ಲದ ಕಾರಣ ಅನ್ಯರಿಂದ ಅಥವಾ ಅನ್ಯವಸ್ತುವಿನಿಂದ ತನಗೆ ಸುಖ ಸಿಗುತ್ತದೆಂಬ ಭ್ರಾಂತಿ

ಯಿಂದ ಸದಾ ಅನ್ಯಾಸಕ್ತನಾಗಿಯೇ ಕಾಲಕಳೆಯುತ್ತಿರುತ್ತಾನೆ. ಹೀಗೆ ಅನ್ಯಾಸಕ್ತನಾದವನು ಬದ್ಧನೆಂತಲೂ, ಸ್ವಸ್ಥನಾದವನು ಮುಕ್ತನೆಂತಲೂ ಕರೆಯಿಸಿಕೊಳ್ಳುತ್ತಾನೆ.

ಸಾಮಾನ್ಯವಾಗಿ ಮನುಷ್ಯನ ಮನೋವೃತ್ತಿಯು ಬಹಿರ್ಮುಖವಾಗಿರುವುದೇ ಹೆಚ್ಚು. ಅದನ್ನು ಅಂತರ್ಮುಖಗೊಳಿಸಬೇಕಾದರೆ ಬಹಳಷ್ಟು ಪ್ರಯತ್ನಿಸಬೇಕಾಗು ವುದು. ಬಹಳಷ್ಟು ಜನರು ಪರ್ವಕಾಲಗಳಲ್ಲಿ ಅಥವಾ ತಮಗೆ ಅವಕಾಶ ದೊರೆತಾಗ ಲೆಲ್ಲ ತೀರ್ಥಕ್ಷೇತ್ರಗಳ ದರ್ಶನಕ್ಕಾಗಿ ಹೋಗುತ್ತಿರುತ್ತಾರೆ. ಇದು ಬಹಿರಂಗಯಾತ್ರೆ ಎಂಬುದಾಗಿ ಕರೆಯಲ್ಪಡುತ್ತದೆ. ಆದರೆ ಇದಕ್ಕಿಂತಲೂ ಹೆಚ್ಚಿನ ಫಲಕಾರಿಯಾದ ಇನ್ನೊಂದು ಯಾತ್ರೆ ಇದೆ. ಅದುವೇ ಅಂತರಂಗಯಾತ್ರೆ. ಅಂದರೆ ತನ್ನ ಮನೋ ವೃತ್ತಿಗಳನ್ನು ಅಂತರ್ಮುಖ ಮಾಡಿಕೊಂಡು ಆತ್ಮಚಿಂತನೆಯಲ್ಲಿ ಲೀನವಾಗುವುದೇ ಅಂತರ್ಯಾತ್ರೆಯು. ಇದುವೇ ಇಲ್ಲಿ ಸ್ವಯಸ್ಥಲ ಎಂಬುದಾಗಿ ಕರೆಯಲ್ಪಟ್ಟಿದೆ. ಈ ಸ್ವಯ ಸ್ಥಲದ ಬಗ್ಗೆ ಪೂಜ್ಯಪಾದರು–

ತದ್ಭಾವಜ್ಞಾಪಕಜ್ಞಾನಂ ಯತ್ರಜ್ಞಾನೇ ಲಯಂ ವ್ರಜೇತ್ ।
ತದ್ಧ್ಯಾನೇಷ ಸಮಾಖ್ಯಾತಃ ಸ್ವಾಭಿಧಾನೋ ಮನೀಷಿಭಿಃ ॥

(ಸಿ. ಶಿ. ೧೫–೫೧)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಈ ಪೂರ್ವಸ್ಥಲದಲ್ಲಿ ಹೇಳಿದ ಜ್ಞಾನಲಿಂಗವನ್ನು ಪ್ರಕಾಶ ಗೊಳಿಸುವ ಜ್ಞಾನವು ಎಲ್ಲಿ ಲಯವನ್ನು ಹೊಂದುತ್ತದೆಯೋ ಅದಕ್ಕೆ ಜ್ಞಾನಲಿಂಗಿಸ್ಥಲ ಎಂಬುದಾಗಿ ಕರೆಯಲಾಗಿದೆ. ಈ ಜ್ಞಾನಲಿಂಗದ ಜ್ಞಾನವನ್ನು ಪಡೆದ ಜ್ಞಾನಲಿಂಗಿಗೇನೇ ಶಿವಜ್ಞಾನಿಗಳು ಸ್ವಯಸ್ಥಲನೆಂಬುದಾಗಿ ಕರೆದಿದ್ದಾರೆ. ಹೀಗೆ ಸ್ವಯಸ್ಥಲವನ್ನು ತಲುಪಿದ ಈ ಶಿವಯೋಗಿಯ ದೈನಂದಿನ ವ್ಯವಹಾರವನ್ನು ಕುರಿತು ಪೂಜ್ಯಪಾದರು ಪುನಃ–

ಸ್ವಚ್ಛಂದಾಚಾರಸಂತುಷ್ಟೋ ಜ್ಯೋತಿರ್ಲಿಂಗಪರಾಯಣ ಃ ।
ಆತ್ಮಸ್ಥಸಕಲಾಕಾರಃ ಸ್ವಾಭಿಧೋ ಮುನಿಸತ್ತಮಃ ॥

ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶ ಪಂಚಕ ಃ ।
ಭಿಕ್ಷಾಶೀ ಸಮಬುದ್ಧಿಶ್ಚ ಮುಕ್ತಪ್ರಾಯೋ ಮುನಿರ್ಭವೇತ್ ॥

(ಸಿ. ಶಿ. ೧೫, ೫೭–೫೮)

ಹೀಗೆ ಉಪದೇಶಿಸಿದ್ದಾರೆ. ಈ ಸ್ವಯಸ್ಥಲದ ಶಿವಯೋಗಿಯು ತನ್ನಂತರಂಗದಲ್ಲಿರುವ ಜ್ಯೋತಿರ್ಲಿಂಗಾನುಸಂಧಾನದಲ್ಲಿಯೇ ಆಸಕ್ತನಾಗಿರುತ್ತಾನೆ. ಇವನು ಸರ್ವತಂತ್ರ ಸ್ವತಂತ್ರನಾಗಿರೋಣದರಿಂದ ತನ್ನ ಮನಸ್ಸಿಗೆ ಬಂದ ರೀತಿಯಲ್ಲಿ ಆಚರಿಸುತ್ತ ಅದರಲ್ಲಿಯೇ ಸದಾ ಸಂತುಷ್ಟನಾಗಿರುತ್ತಾನೆ ಹಾಗೂ ಎಲ್ಲವನ್ನು ತನ್ನ ಆತ್ಮರೂಪ ವನ್ನಾಗಿಯೇ ತಿಳಿದಿರುವ ಈ ಸ್ವಯಸ್ಥಲಿಯು ಸರ್ವಮುನಿಗಳಲ್ಲಿ ಶ್ರೇಷ್ಠನಾಗಿರುತ್ತಾನೆ.

ಯಾರು ಮೌನವನ್ನಾಚರಿಸುವರೋ ಅವರಿಗೆ ಮುನಿಯೆಂಬುದಾಗಿ ಕರೆಯು ತ್ತಾರೆ. ಮನಸ್ಸಿನಲ್ಲಿ ಯಾವುದೇ ಪ್ರಕಾರದ ಇಚ್ಛೆಯ ಉದಯವಾಗದಿರುವಿಕೆಯೇ ನಿಜವಾದ ಮೌನವು, ಕೇವಲ ವಾಗ್ವ್ಯವಹಾರವನ್ನು ಬಂದುಮಾಡಿ ಅಂಗಚೇಷ್ಟೆಗಳ ಮೂಲಕ ಅಥವಾ ಲೇಖನಿಯ ಮೂಲಕ ತಮ್ಮ ಮನೋಭಿಪ್ರಾಯವನ್ನು ಕೆಲವು

ಜನರು ವ್ಯಕ್ತಮಾಡುತ್ತಿರುತ್ತಾರೆ. ಇದು ಆಕಾರ ಮೌನವೇ ವಿನಃ ನಿಜವಾದ ಮೌನವಲ್ಲ. ಆದರೂ ಪರಿಪೂರ್ಣವಾದ ಮೌನವನ್ನು ಸಾಧಿಸಲು ಈ ಆಕಾರ ಮೌನವು ಸಹಾಯಕವಾಗಿರೋಣದರಿಂದ ಇದಕ್ಕೂ ಸಹ ಮೌನವೆಂತಲೇ ಕರೆದಿದ್ದಾರೆ. ಈ ಸ್ವಯಸ್ಥಲದ ಶಿವಯೋಗಿಯ ಮನಸ್ಸಿನಲ್ಲಿ ಬೇರಾವ ಬಯಕೆಗಳೇ ಇಲ್ಲದಿರೋಣದ ರಿಂದ ಅವನ ಸಮಸ್ತ ಮನೋವೃತ್ತಿಗ್ಗಳು ನಿಂತುಹೋಗಿರುತ್ತವೆ. ಅಂತೆಯೇ ಇವನಿಗೆ ಮುನಿಸತ್ತಮಃ ಅಂದರೆ ಮುನಿಶ್ರೇಷ್ಠನೆಂಬುದಾಗಿ ಪೂಜ್ಯಪಾದರು ಸಂಬೋಧಿಸಿದ್ದಾರೆ.

ಈತನು ಅಹಂಕಾರ, ಮಮಕಾರರಹಿತನಾಗಿರುತ್ತಾನೆ. ಈ ಅಹಂಕಾರ ಮಮಕಾರಗಳೇ ಜೀವಾತ್ಮನನ್ನು ಸಂಸಾರದಲ್ಲಿ ಪುನಃ ಪುನಃ ತೆಗೆದುಕೊಂಡು ಬರುತ್ತವೆ. ಇವೆರಡೂ ನಷ್ಟವಾಗದ ಹೊರತಾಗಿ ಮುಕ್ತಿಯು ದೊರೆಯಲಾರದು. ನಾನು ಹಾಗೂ ನನ್ನದೆಂಬ ಶಬ್ದವನ್ನು ಪ್ರಯೋಗಿಸದೆ ಈ ಜಗತ್ತಿನ ವ್ಯವಹಾರವನ್ನೇ ಮಾಡಲಿಕ್ಕಾಗುವು ದಿಲ್ಲ. ಅಂದಾಗ ಈ ಜೀವನ್ಮುಕ್ತನಾದ ಶಿವಯೋಗಿಯು ನಿರ್ಮಮ ಹಾಗೂ ನಿರಹಂಕಾರಿಯಾಗಿ ಅದು ಹೇಗೆ ತಾನೇ ವ್ಯವಹರಿಸಬಲ್ಲನು ? ಎಂಬ ಪ್ರಶ್ನೆಯು ಉದ್ಭವಿಸುವುದು ಸಹಜ. ಆದರೆ ನಾನು–ನನ್ನದೆಂಬ ಶಬ್ದಗಳ ಪ್ರಯೋಗವನ್ನು ಮಾಡಿಯೂ ಸಹ ಅವುಗಳಿಂದ ಅಲಿಪ್ತನಾಗಿರುವ ಕಲೆಯನ್ನು ಶಿವಯೋಗವು ಕಲಿಸಿ ಕೊಡುತ್ತದೆ. ಅಂತೆಯೇ ಈ ಸ್ವಯಸ್ಥಲದ ಶಿವಯೋಗಿಯು ತನ್ನನ್ನು ಮೊದಲುಗೊಂಡು ಸರ್ವವೆಲ್ಲವನ್ನು ಶಿವರೂಪವಾಗಿ ನೋಡುತ್ತಿರುವ ಅಖಂಡಭಾವವಿರುವಾಗ ಈ ಸಂಕುಚಿತಗಳಾದ ಅಹಂಕಾರ – ಮಮಕಾರಗಳು – ತಲೆದೋರಲಾರವು.

ಈ ಶಿವಯೋಗಿಯು ಅವಿದ್ಯಾದಿ ಪಂಚಕ್ಲೇಶರಹಿತನೂ ಆಗಿರುತ್ತಾನೆ. ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಈ ಐದು ಮನುಷ್ಯನ ಮನಸ್ಸಿಗೆ ಸದಾ ದುಃಖವನ್ನುಂಟು ಮಾಡುತ್ತಲಿರುತ್ತವೆ. ಹೀಗೆ ಕ್ಲೇಶದಾಯಕಗಳಾದ ಇವುಗಳಿಗೆ ಪಂಚಕ್ಲೇಶಗಳೆಂದು ಕರೆಯುತ್ತಾರೆ. ಅನಿತ್ಯ ಅಶುಚಿ, ದುಃಖ ಮತ್ತು ಅನಾತ್ಮಗಳಲ್ಲಿ ವಿಪರೀತ ಬುದ್ಧಿಯನ್ನುಂಟು ಮಾಡಿ ಅಂದರೆ ಅನಿತ್ಯವನ್ನು ನಿತ್ಯವನ್ನಾಗಿಯೂ, ಅಶುಚಿಯನ್ನು ಶುಚಿಯನ್ನಾಗಿಯೂ, ದುಃಖವನ್ನು ಸುಖವನ್ನಾಗಿಯೂ, ಮತ್ತು ಅನಾತ್ಮ ವನ್ನು ಆತ್ಮವನ್ನಾಗಿ ತಿಳಿಯಪಡಿಸಿ ಅವಿದ್ಯೆಯು ದುಃಖವನ್ನು ಕೊಡುವುದರಿಂದ ಇದಕ್ಕೆ ಕ್ಲೇಶವೆಂದು ಕರೆಯುತ್ತಾರೆ. ಈ ಜಗತ್ತಿನಲ್ಲಿರುವ ಎಲ್ಲ ವಸ್ತುಗಳು ಕಾಲದ ಪರಿಧಿಯಲ್ಲಿ ಬರುವುದರಿಂದ ಎಲ್ಲವೂ ಅನಿತ್ಯಗಳೇ ಆಗಿರುತ್ತವೆ. ಅಜ್ಞನಾದ ಜೀವಿಯು ತನ್ನ ಶರೀರವನ್ನೇ ಮೊದಲುಗೊಂಡು ಪ್ರಪಂಚದಲ್ಲಿಯ ವಸ್ತುಗಳನ್ನು ನಿತ್ಯಗಳನ್ನಾಗಿ ಭಾವಿಸಿಯೇ ವ್ಯವಹರಿಸುತ್ತಾನೆ. ಇದೆಲ್ಲ ಅವಿದ್ಯೆಯ ಮಹಿಮೆ. ಯಾವುದನ್ನು ಈತನು ನಿತ್ಯವನ್ನಾಗಿ ತಿಳಿದಿದ್ದನೋ ಅದು ತನ್ನೆದುರು ನಾಶವಾದಾಗ ಅನೇಕ ದುಃಖವನ್ನು ಅನುಭವಿಸುತ್ತಾನೆ. ಯಾರು ಇದನ್ನು ಅನಿತ್ಯವಾಗಿ ತಿಳಿದಿರುತ್ತಾರೆಯೋ ಅವರಿಗೆ ಅದು ನಾಶವಾದರೂ ದುಃಖವಾಗುವುದಿಲ್ಲ. ಹೀಗೆ ಅಜ್ಞರಿಗೆ ಅನಿತ್ಯದಲ್ಲಿ ನಿತ್ಯಬುದ್ಧಿಯನ್ನು ಹುಟ್ಟಿಸಿ ಅವಿದ್ಯೆಯು ಕ್ಲೇಶದಾಯಕವಾಗಿರುತ್ತದೆ. ಇದರಂತೆ ಅವಿದ್ಯೆಯು ಅಶುಚಿ ವಸ್ತುಗಳಲ್ಲಿ ಶುಚಿಬುದ್ಧಿಯನ್ನೂ ಸಹ ಹುಟ್ಟಿಸುತ್ತದೆ. ಶರೀರವು ಸ್ವಭಾವತಃ ಅಶುಚಿಯಾಗಿರುವಂಥದ್ದು. ಆದರೂ ಅಜ್ಞ ಜೀವಿಗಳು ಅದನ್ನು ಶುಚಿಯನ್ನಾಗಿ ಭಾವಿಸಿ

ಆದರಿಂದ ಆನಂದವನ್ನು ಪಡೆಯಲು ಹೋಗಿ ಕೊನೆಗೆ ದುಃಖಿಗಳೇ ಆಗುತ್ತಾರೆ. ನಾವು ಮಾಡುವ ಪ್ರತಿದಿನದ ಸ್ನಾನ, ಸುಗಂಧ ದ್ರವ್ಯಗಳ ಲೇಪನ, ಇವೆಲ್ಲವುಗಳು ಶರೀರದ ಅಶುಚಿತ್ವವನ್ನು ಮರೆಮಾಚಲು ಮಾಡಿದ ಪ್ರಯತ್ನಗಳೆಂಬುದಾಗಿ ಭಾವಿಸಬೇಕು. ಎಷ್ಟೇ ಪ್ರಯತ್ನಿಸಿದರೂ ಸ್ವಭಾವವನ್ನು ಮಾತ್ರ ಬದಲಿಸಲಾಗುವದಿಲ್ಲ, ಅಶುಚಿಯಾದ ದೇಹವು ಕೊನೆಗೆ ತನ್ನ ಅಶುಚಿರೂಪವನ್ನು ತಾಳಿಯೇ ತಾಳುವುದು. ಹೀಗೆ ಅಶುಚಿ ಯಾದ ದೇಹದಲ್ಲಿ ಶುಚಿಬುದ್ಧಿಯನ್ನು ಹುಟ್ಟಿಸಿ ಅವಿದ್ಯೆಯು ಕ್ಲೇಶವನ್ನು ಕೊಡುತ್ತದೆ.

ಇನ್ನು ದುಃಖದಲ್ಲಿ ಸುಖಬುದ್ಧಿಯನ್ನು ನಿರ್ಮಾಣಗೊಳಿಸಿ ಇದೇ ಅವಿದ್ಯೆಯೇ ಜೀವನಲ್ಲಿ ಮತ್ತೊಂದು ಬಗೆಯಾಗಿ ದುಃಖವನ್ನು ಕೊಡಲು ಪ್ರಾರಂಭಿಸುತ್ತದೆ. ಶಬ್ದ-ಸ್ಪರ್ಶಾದಿ ವಿಷಯಗಳು ಮೂಲತಃ ದುಃಖರೂಪಗಳಾಗಿರುತ್ತವೆ. ಆದರೆ ಅವಿದ್ಯಾ ಆವೃತರಾದ ಜೀವಿಗಳು ಅವುಗಳನ್ನು ಸುಖಗಳೆಂದು ಭಾವಿಸಿ ಅವುಗಳಿಗಾಗಿಯೇ ಇಡೀ ಆಯುಷ್ಯವನ್ನೇ ವ್ಯಯಮಾಡಿಕೊಳ್ಳುತ್ತಾರೆ. ''ಆಪಾತರಮ್ಯಾವಿಷಯಾಃ ಪರ್ಯಂತರ ಪರಿತಾಪಿನಃ'' ಎಂಬ ಉಕ್ತಿಗನುಸಾರವಾಗಿ ವಿಷಯಗಳಿಂದ ಕ್ಷಣಿಕವಾದ ಸುಖವು ದೊರೆತರೂ ಕೊನೆಯಲ್ಲಿ ಮಾತ್ರ ದುಃಖವೇ ಕೈಗೆ ಸಿಗುವುದು. ಹೀಗೆ ಈ ಅವಿದ್ಯೆಯು ದುಃಖದಾಯಿಗಳಾದ ವಿಷಯಗಳಲ್ಲಿ ಸುಖಭ್ರಾಂತಿಯನ್ನುಂಟು ಮಾಡಿ ಕ್ಲೇಶವನ್ನು ಕೊಡುತ್ತದೆ.

ಇದೇ ರೀತಿ ಅವಿದ್ಯೆಯು ಅನಾತ್ಮ ವಸ್ತುವಿನಲ್ಲಿ ಆತ್ಮಬುದ್ಧಿಯನ್ನುಂಟುಮಾಡಿ ಜೀವಾತ್ಮನಿಗೆ ದುಃಖವೀಯುತ್ತದೆ. ಶರೀರವು ಅನಾತ್ಮವಾಗಿದ್ದರೂ ಅಜ್ಞ ಜೀವಿಗಳು ಇದನ್ನೇ ಆತ್ಮವೆಂದು ಪರಿಭಾವಿಸುತ್ತಾರೆ. ಆದರೆ ಶರೀರವು ಆತ್ಮದ ನಿವಾಸಸ್ಥಾನವು 'ಅದು ಆತ್ಮಕ್ಕಿಂತಲೂ ಭಿನ್ನವಾದ ಅನಾತ್ಮ ಪದಾರ್ಥವಾಗಿರುತ್ತದೆ. ಯಾರು ಇದನ್ನು ಆತ್ಮವೆಂತಲೂ ತಿಳಿಯುತ್ತಾರೆಯೋ ತನ್ನ ಸ್ವಭಾವಕ್ಕೆ ತಕ್ಕಂತೆ ಇದು ನಾಶ ಹೊಂದಿದಾಗ ಅವರಿಗೆ ದುಃಖವಾಗುವುದು ಸಹಜವೇ. ಆದರೆ ಜ್ಞಾನಿಗಳು ಶರೀರಾದಿಗಳನ್ನು ಅನಾತ್ಮ ಹಾಗೂ ಅನಿತ್ಯವೆಂದು ಭಾವಿಸಿರೋಣದರಿಂದ ಇದು ವಿಕಾರ ಹೊಂದಿದರೂ ಕೊನೆಗೆ ನಾಶಹೊಂದಿದರೂ ಅವರಿಗೆ ಯಾವುದೇ ಪ್ರಕಾರದ ದುಃಖವಾಗುವುದಿಲ್ಲ. ಈ ರೀತಿಯಾಗಿ ಈ ಅವಿದ್ಯೆಯು ಅಜ್ಞ ಜೀವಿಗಳಿಗೆ ಅನಿತ್ಯದಲ್ಲಿ ನಿತ್ಯಬುದ್ಧಿಯನ್ನೂ, ಅಶುಚಿ ಯಲ್ಲಿ ಶುಚಿಬುದ್ಧಿಯನ್ನೂ, ದುಃಖದಲ್ಲಿ ಸುಖಬುದ್ಧಿಯನ್ನೂ ಮತ್ತು ಅನಾತ್ಮದಲ್ಲಿ ಆತ್ಮಬುದ್ಧಿಯನ್ನೂ ಹುಟ್ಟಿಸಿ ದುಃಖವನ್ನು ಕೊಡೋಣದರಿಂದ ಇದಕ್ಕೆ ಕ್ಲೇಶವೆಂದು ಕರೆಯುತ್ತಾರೆ.

ಇದೇ ರೀತಿಯಾಗಿ ಅಸ್ಮಿತೆಯು ಸಹ ಒಂದು ಕ್ಲೇಶವೇ ಆಗಿರುತ್ತದೆ. ಅಭಿಮಾನ ಇಲ್ಲವೆ ಅಹಂಕಾರ ಇದು ಅಸ್ಮಿತೆಯ ಸಾಮಾನ್ಯವಾದ ಅರ್ಥವು. ನಾನು ಹೋಗುತ್ತೇನೆ. ನಾನು ಮಾಡುತ್ತೇನೆ, ನಾನು ಕೊಡುತ್ತೇನೆ ಎಲ್ಲಕ್ಕೂ ನಾನೇ ಮೂಲ ಎಂಬ ಶಬ್ದ ವ್ಯವಹಾರದಲ್ಲಿ ನಾನು ನಾನು ಎಂಬುದಾಗಿ ಅಸ್ಮಿತೆಯು ಹೊಮ್ಮುತ್ತಿರುತ್ತದೆ. ಈ ಅಹಂಕಾರವು ಮನುಷ್ಯನಿಗೆ ಅಭಿಮಾನಿತ ಸುಖವನ್ನು ಕ್ಷಣಕಾಲ ಕೊಟ್ಟರೂ ಆ ಅಭಿಮಾನಕ್ಕೆ ಧಕ್ಕೆಯುಂಟಾದಾಗ ಆ ವ್ಯಕ್ತಿಗೆ ದುಃಖವೇ ಪ್ರಾಪ್ತವಾಗುತ್ತದೆ. ಹೀಗೆ ಈ

ಅಸ್ಮಿತೆಯು ಸಹ ದುಃಖಕ್ಕೆ ಕಾರಣವಾಗಿರೋಣದರಿಂದ ಇದನ್ನೂ ಕ್ಲೇಶವೆಂಬುದಾಗಿ ಕರೆಯಲಾಗಿದೆ.

ಇದೇ ರೀತಿಯಾಗಿ ರಾಗವೂ ಸಹ ಒಂದು ಕ್ಲೇಶವೇ ಆಗಿದೆ ''ಸುಖಾನುಶಯೀ ರಾಗಃ'' ಸುಖ ಹಾಗೂ ಸುಖದ ಸಾಧನಗಳ ಬಗ್ಗೆ ಮನಸ್ಸಿನಲ್ಲಿ ಉತ್ಪನ್ನವಾಗುವ ಇಚ್ಛೆಗೇನೇ ರಾಗವೆಂದು ಕರೆಯುತ್ತಾರೆ. ಸಂಸಾರದ ಮೇಲಿನ ರಾಗದಿಂದಾಗಿಯೇ ಜೀವಾತ್ಮನು ಈ ಭವಚಕ್ರದಲ್ಲಿ ಸುತ್ತುತ್ತಲಿದ್ದಾನೆ. ರಾಗವು ಯಾವಾಗಲೂ ರಾಗರೂಪವಾಗಿರದೆ ದ್ವೇಷರೂಪವನ್ನೂ ಸಹ ತಾಳುತ್ತದೆ. ಅರ್ಥಾತ್ ಯಾರ ಜೊತೆಗೆ ನಾವು ರಾಗಾತ್ಮಕ ವ್ಯವಹಾರವನ್ನು ಮಾಡುತ್ತೇವೆಯೋ ಅವರ ಜೊತೆಗೇನೇ ದ್ವೇಷದಿಂದ ವರ್ತಿಸುವ ಅನೇಕ ಸನ್ನಿವೇಶಗಳು ಜೀವನದಲ್ಲಿ ಘಟಿಸಿಹೋಗುತ್ತವೆ. ಅಂದ ಹಾಗೆ ರಾಗ ಬಂದ ಬಳಿಕ ದ್ವೇಷವು ಅದರ ಬೆನ್ನ ಹಿಂದೆಯೇ ಬರುತ್ತದೆಂದು ತಿಳಿದುಬರುತ್ತದೆ. ದುಃಖಾನುಶಯೀ ದ್ವೇಷಃ ಅಂದರೆ ದುಃಖ ಹಾಗೂ ದುಃಖಕ್ಕೆ ಸಾಧನವಾದ ವಿಷಯಗಳ ಬಗ್ಗೆ ಮನಸ್ಸಿನಲ್ಲಿ ಉಂಟಾದ ಅನಿಚ್ಛೆಯೇ ದ್ವೇಷವು. ಈ ರಾಗದ್ವೇಷಗಳೆರಡೂ ದುಃಖಕ್ಕೇನೇ ಕಾರಣೀಭೂತಗಳಾಗಿರೋಣದರಿಂದ ಇವೆರಡನ್ನೂ ಸಹ ಕ್ಲೇಶಗಳೆಂದೇ ಭಾವಿಸಲಾಗಿದೆ.

ಇನ್ನು ಕೊನೆಯದಾದ ಕ್ಲೇಶವೇ ಅಭಿನಿವೇಶವು. ಅಭಿನಿವೇಶವೆಂದರೆ ಮರಣದ ಭಯದಿಂದಾಗಿ ತನಗೆಂದೂ ಮರಣ ಬರಬಾರದೆಂಬ ಪ್ರಬಲ ಇಚ್ಛೆಯೇ ಎಂದರ್ಥ. ಪ್ರತಿಯೊಬ್ಬರಿಗೆ ಮರಣದ ಭೀತಿ ಇದ್ದೇ ಇರುತ್ತದೆ. ಈ ಜನ್ಮದಲ್ಲಿ ಇನ್ನೂ ಮರಣವನ್ನೆ ಹೊಂದಿಲ್ಲವೆಂದ ಬಳಿಕ ಅವನಿಗೆ ಅದರಿಂದ ಭೀತಿಯು ಹೇಗೆ ತಾನೇ ಉಂಟಾಗುವುದು? ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸಬಹುದು. ಆದರೆ ಜೀವಾತ್ಮನು ಅನೇಕಸಾರೆ ಹುಟ್ಟಿ ಅನೇಕ ಸಾರೆ ಸತ್ತಿದ್ದಾನೆ. ಪೂರ್ವ–ಪೂರ್ವಜನ್ಮಗಳಲ್ಲಿ ತಾನು ಅನುಭವಿಸಿದ ಮರಣದ ತ್ರಾಸಿನಿಂದುಂಟಾದ ಸಂಸ್ಕಾರಗಳು ಅಂತಃಕರಣದಲ್ಲಿ ಇರುವುದರಿಂದ ಅವುಗಳ ಮುಖಾಂತರವೇ ಈ ಜನ್ಮದಲ್ಲಿ ಇನ್ನೂ ಮರಣಬರುವ ಪೂರ್ವದಲ್ಲಿಯೇ ಮನುಷ್ಯನ ಮನಸ್ಸಿನಲ್ಲಿ ಭೀತಿಯು ಅವಶ್ಯವಾಗಿ ಉಂಟಾಗುತ್ತದೆ. ಈ ಭೀತಿಯಿಂದಲೇ ತಾನು ಸಾಯಬಾರದೆಂಬ ಭಾವನೆಯು ಒಡಮೂಡುತ್ತದೆ. ಇದುವೇ ಅಭಿನಿವೇಶವು. ಆದರೆ ಸಾಯುವ ದೇಹವನ್ನು ಹಿಡಿದುಕೊಂಡು ನಾನು ಸಾಯಬಾರದೆಂಬ ಇಚ್ಛೆಯುಳ್ಳ ಮನುಷ್ಯನಿಗೆ ದುಃಖದ ಹೊರತಾಗಿ ಮತ್ತೇನು ತಾನೆ ಸಿಗಬಲ್ಲದು? ಹೀಗೆ ಈ ಅಭಿನಿವೇಶವೂ ಸಹ ಒಂದು ವಿಧವಾದ ಕ್ಲೇಶವೇ ಆಗಿರುತ್ತದೆ.

ಇಲ್ಲಿಯವರೆಗೆ ವಿವರಿಸಲ್ಪಟ್ಟ ಈ ಪಂಚಕ್ಲೇಶಗಳು ಅಜ್ಞರಾದ ಜೀವಿಗಳಿಗೆ ಇರುತ್ತವೆಯೇ ವಿನಃ ಈ ಸ್ವಯಸ್ಥಲ ಸಂಪನ್ನನಾದ ಜೀವನ್ಮುಕ್ತನಿಗೆ ಇರುವುದಿಲ್ಲ. ಅಂತೆಯೇ ಪೂಜ್ಯಪಾದರು ಇವನನ್ನು 'ನಿರಸ್ತ ಕ್ಲೇಶ–ಪಂಚಕಃ' ಎಂಬುದಾಗಿ ವರ್ಣಿಸಿದ್ದಾರೆ. ಈ ಶಿವಯೋಗಿಯು ಮನೆ ಮನೆಗೆ ಸಂಚರಿಸಿ ಭಿಕ್ಷಾನ್ನವನ್ನು ಸ್ವೀಕರಿಸುತ್ತಾನೆ. ಇವನ ಬುದ್ಧಿಯಲ್ಲಿ ಯಾರ ಬಗ್ಗೆಯೂ ಮೇಲು ಕೀಳುಗಳೆಂಬ ಭಾವನೆ ಇರುವುದಿಲ್ಲ. ಅಂತೆಯೇ ಈತನು ಸಮಬುದ್ಧಿ ಸಂಪನ್ನನಾಗಿರುತ್ತಾನೆ ಹಾಗೂ ಜೀವನ್ಮುಕ್ತಿಯ ವಿಲಕ್ಷಣಾನಂದವನ್ನು ಅನುಭವಿಸುತ್ತ ಮುನಿಶ್ರೇಷ್ಠನಾಗಿ ಕಾಲಕಳೆಯುತ್ತಿರುತ್ತಾನೆ.

ಈ ಸ್ವಯಸ್ಥಲಿಯ ವಿಲಕ್ಷಣವಾದ ಅವಸ್ಥೆಯನ್ನು ವರ್ಣಿಸಲೋಸುಗ ಪೂಜ್ಯ ಪಾದರು ಪುನಃ –

ಯದೃಚ್ಛಾಲಾಭಸಂತುಷ್ಟೋ ಭಸ್ಮನಿಷ್ಠೋ ಜಿತೇಂದ್ರಿಯಃ ।
ಸಮವೃತ್ತಿರ್ಭವೇದ್ ಯೋಗಿ ಭಿಕ್ಷುಕೇ ವಾ ನೃಪೇಽಥವಾ ॥

ಪಶ್ಯನ್ ಸರ್ವಾಣಿಭೂತಾನಿ ಸಂಸಾರಸ್ಥಾನಿ ಸರ್ವಶಃ ।
ಸ್ಮಯಮಾನಃ ಪರಾನಂದೇ ಲೀನಾತ್ಮಾವರ್ತತೇ ಸುಧೀಃ ॥

(ಸಿ. ಶಿ. ೧೫, ೫೪–೫೫)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ಸ್ವಯಸ್ಥಲದ ಶಿವಯೋಗಿಯು ತನಗೆ ದೊರೆತದ್ದರಲ್ಲಿಯೇ ಸಂತೋಷವನ್ನು ಹೊಂದುತ್ತಾನೆ. ಮನಸ್ಸಿನ ಸಂತೋಷವೇ ಬಹುದೊಡ್ಡ ಲಾಭವು. ವ್ಯಾಪಾರಿಗಳ ದೃಷ್ಟಿಕೋನದ ಲಾಭಕ್ಕೂ, ಶಿವಯೋಗಿಗಳ ದೃಷ್ಟಿಕೋನದ ಲಾಭಕ್ಕೂ ಬಹಳ ವ್ಯತ್ಯಾಸವಿರುತ್ತದೆ. ಲಾಭವು ಸಣ್ಣ ಪ್ರಮಾಣದ್ದೇ ಇರಲಿ ಅಥವಾ ಬೃಹತ್ಪ್ರಮಾಣದ್ದೇ ಇರಲಿ ಅದು ಲಾಭವೇ. ವ್ಯಾವಹಾರಿಕರಾದವರಿಗೆ ಅತಿದೊಡ್ಡ ಲಾಭದ ಬಯಕೆ ಇರೋಣದರಿಂದ ಅವರಿಗೆ ಉಂಟಾದ ಅಲ್ಪಲಾಭವು ಲಾಭವಾಗಿ ತೋರದೇ ಹಾನಿಯಾಗಿಯೇ ತೋರುತ್ತದೆ.

ಓರ್ವ ವ್ಯಾಪಾರಿಯು ವ್ಯಾಪಾರಕ್ಕಾಗಿ ಮುಂಬೈ ಪಟ್ಟಣಕ್ಕೆ ಹೋಗಿದ್ದನಂತೆ. ಅವನ ಜೊತೆಗೆ ಅವನ ಒಬ್ಬ ಮಿತ್ರನೂ ಸಹ ಹೋಗಿದ್ದನು. ಈರ್ವರೂ ಊರಿಗೆ ಮರಳಿ ಬಂದರು. ಈ ವ್ಯಾಪಾರಿಯು ಬಾಡಿದ ಮುಖವುಳ್ಳವನಾಗಿ ಖಿನ್ನಮನಸ್ಕನಾಗಿ ಮನೆಯನ್ನು ಪ್ರವೇಶಿಸಿದಾಗ ಅವನ ಧರ್ಮಪತ್ನಿಯು ಅವನ ಆ ಸ್ಥಿತಿಯನ್ನು ನೋಡಿ ಏನೋ ಅನರ್ಥವಾಗಿದೆಯೆಂದು ಭಾವಿಸಿ ಗಂಡನ ಬಳಿಸಾರಿ ಏನು ನಿಮ್ಮ ಮುಖವೇಕೆ ಬಾಡಿದೆ? ಏನು ಸಮಾಚಾರ ಎಂಬುದಾಗಿ ಪ್ರಶ್ನಿಸಿದಳು. ಆಗ ಆ ವ್ಯಾಪಾರಿಯು ಇಂದಿನ ವ್ಯಾಪಾರದಲ್ಲಿ ನನಗೆ ೫ ಲಕ್ಷರೂಪಾಯಿಗಳ ಹಾನಿಯಾಗಿದೆಯೆಂದು ಅಳತೊಡಗಿದನು. ಗಂಡನ ಜೊತೆಗೆ ಹೆಂಡತಿ ಸಹ ದುಃಖದಲ್ಲಿ ಸಹಭಾಗಿನಿಯಾಗಿ ರೋದಿಸತೊಡಗಿದಳು. ಹೀಗೆ ಗಂಡಹೆಂಡಿರೀರ್ವರೂ ರೋದಿಸುವ ಪ್ರಸಂಗದಲ್ಲಿ ಇವನ ಜೊತೆಗೆ ಮುಂಬೈಗೆ ಹೋಗಿದ್ದ ಮಿತ್ರನೂ ಇವರ ಮನೆಗೆ ಬಂದು ರೋದನದ ಕಾರಣವೇನೆಂಬುದಾಗಿ ಆ ವ್ಯಾಪಾರಿಯ ಪತ್ನಿಯನ್ನು ಕೇಳಿದನು. ಆಗ ಅವಳು ನಮ್ಮ ಯಜಮಾನರಿಗೆ ವ್ಯಾಪಾರದಲ್ಲಿ ೫ ಲಕ್ಷ ರೂಪಾಯಿಗಳ ಹಾನಿಯಾಗಿದೆಯಂದು ಹೇಳಿ ಮತ್ತಿಷ್ಟು ಜೋರಾಗಿ ಅಳಲಾರಂಭಿಸಿದಳು. ಆಗ ಇವಳ ಗಂಡನ ಮಿತ್ರನಾದ ಆ ವ್ಯಕ್ತಿಯು ಇದೇನು ಐದು ಲಕ್ಷ ರೂಪಾಯಿಗಳ ಲಾಭವಾದ ಸತ್ಯಸಂಗತಿಯು ನನಗೆ. ಗುರುತಿರು ವಾಗ ಈ ಹಾನಿಯ ಸುದ್ದಿಯನ್ನು ಹೇಳಿದವರಾರು? ಎಂದು ಕೇಳಿದನು. ಆಗ ಆ ವ್ಯಾಪಾರಿ ಮಿತ್ರನು ಅವನನ್ನುದ್ದೇಶಿಸಿ ಹೇಳಿದ್ದೇನೆಂದರೆ– ' ನಿನ್ನೆ ನಾನು ಮುಂಬಯಿಗೆ ಹೊರಡುವಾಗ ವ್ಯಾಪಾರದಲ್ಲಿ ಹತ್ತು ಲಕ್ಷ ರೂಪಾಯಿಗಳ ಲಾಭವಾಗಿಯೇ ತೀರುವು ದೆಂಬ ಭರವಸೆಯನ್ನು ಇಟ್ಟುಕೊಂಡಿದ್ದೆ, ಆದರೆ ದುರ್ದೈವವಶಾತ್ ಕೇವಲ ಐದೇ ಲಕ್ಷರೂಪಾಯಿಗಳ ಲಾಭವಾಯಿತು. ಅಂದಾಗ ನನ್ನ ದೃಷ್ಟಿಯಲ್ಲಿ ಐದು ಲಕ್ಷ ರೂಪಾಯಿಗಳ ಹಾನಿಯಾದಂತಾಯಿತೋ ಇಲ್ಲವೋ ನೀನೇ ಹೇಳು ಎಂದನಂತೆ.

ನೋಡಿದಿರಾ ! ಲೋಭಿಮನದ ಲಾಭದ ವಿಷಯವನ್ನು. ಲೋಭಿಯಾದವನಿಗೆ ಅದೆಷ್ಟು ಲಾಭವಾದರೂ ಅದು ಹಾನಿಯಾಗಿಯೇ ತೋರುತ್ತದೆ. ಆದರೆ ಈ ಸ್ವಯಸ್ಥಲದ ಶಿವಯೋಗಿಯು ದೊರೆತದ್ದರಲ್ಲಿಯೇ ಸಂತುಷ್ಟನಾಗಿರುತ್ತಾನೆ. ಇದೇ ಮಾತನ್ನೆ ಶ್ರೀಮನ್ನಿಜಗುಣ ಶಿವಯೋಗಿಗಳು–''ದೊರೆಯಲೇನದರೊಳು ಪರಿಣತೆ ದಳೆವುದೇ ಚಂದಮಮ'' ಎಂಬುದಾಗಿ ಹೇಳಿದ್ದನ್ನು ಕಾಣುತ್ತೇವೆ. ಈ ಶಿವಯೋಗಿಯು ಭಸ್ಮ ತತ್ವದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿರುತ್ತಾನೆ. ಇಲ್ಲಿ ಭಸ್ಮವೆಂದರೆ ಗೋಮಯ ದಿಂದ ನಿರ್ಮಿತವಾದ ವಿಭೂತಿಯೆಂಬುದಾಗಿ ಒಂದರ್ಥವಾದರೆ ''ಸ ಏಷ ಭಸ್ಮಜ್ಯೋತಿಃ'' ಎಂಬ ಶ್ರುತಿ ಪ್ರಮಾಣದಿಂದ ಸಾಕ್ಷಾತ್ ಪರಮಾತ್ಮನೇ ಎಂಬುದಾಗಿ ಇನ್ನೊಂದು ಅರ್ಥವಾಗುತ್ತದೆ. ಪೂರ್ವೋಕ್ತನಾದ ಶಿವಯೋಗಿಯು ಬಹಿರಂಗದಲ್ಲಿ ಗೋಮಯ ಭಸ್ಮವನ್ನು ನಿಷ್ಠೆಯಿಂದ ಧರಿಸಿಕೊಂಡವನಾಗಿರುವುದರ ಜೊತೆಗೆ ಜ್ಯೋತಿ ಸ್ವರೂಪನಾದ ಪರಮಾತ್ಮನನ್ನು ತನ್ನಾತ್ಮರೂಪವನ್ನಾಗಿ ಭಾವಿಸಿ ಸದಾ ಚಿಂತಿಸುತ್ತಲಿರು ತ್ತಾನೆ. ಇದುವೆ ಇವನ ಭಸ್ಮನಿಷ್ಠತ್ವವು.

ಈ ಸ್ವಯಸ್ಥಲಿಯು ಭಸ್ಮನಿಷ್ಠನಾಗಿರುವಂತೆ ಜಿತೇಂದ್ರಿಯನೂ ಸಹ ಆಗಿರುತ್ತಾನೆ. ''ಭೋಗೇ ರೋಗಭಯಮ್'' ಅಂದರೆ ವಿಷಯ ಭೋಗಿಯಾದವನಿಗೆ ರೋಗದ ಭಯವಿರುತ್ತದೆ ಎಂಬ ಉಕ್ತಿಗನುಸಾರವಾಗಿ ಈ ಭೋಗ ರೋಗಗಳ ಬಗ್ಗೆ ಅರ್ಥ ಮಾಡಿಕೊಂಡ ಆತನು ಭವರೋಗದಿಂದಲೇ ಮುಕ್ತನಾಗಿರುವಾಗ ಈ ವಾತ– ಪಿತ್ತ– ಕಫಜನ್ಯ ರೋಗಗಳಿಗೆ ಅದು ಹೇಗೆ ತಾನೇ ತುತ್ತಾದಾನು ? ಅಂತೆಯೇ ವಿಷಯ ವ್ಯಾಮೋಹರಹಿತನಾದ ಈತನಿಗೆ ಜಿತೇಂದ್ರಿಯನೆಂದು ಕರೆಯಲಾಗಿದೆ.

ಇದರಂತೆ ಈ ಶಿವಯೋಗಿಯು ಸಮದೃಷ್ಟಿಯುಳ್ಳವನೂ ಸಹ ಆಗಿರುತ್ತಾನೆ. ರಾಜನಿರಲಿ–ರಂಕನಿರಲಿ ಅವರೀರ್ವರಲ್ಲಿಯ ಆತ್ಮತತ್ತ್ವವು ಒಂದೇ ಆಗಿರೋಣದ ರಿಂದ ಆತ್ಮ ದೃಷ್ಟಿಯುಳ್ಳ ಈ ಶಿವಯೋಗಿಯು ಈರ್ವರನ್ನು ಸಮವಾಗಿಯೇ ಭಾವಿಸುತ್ತಾನೆ. ಈ ಸುಧಿಯು ಈ ಸಂಸಾರದಲ್ಲಿರುವ ಎಲ್ಲ ಪ್ರಾಣಿಗಳನ್ನು ನೋಡುತ್ತ ಮಂದಸ್ಮಿತನಾಗಿಯೇ ಪರಮಾನಂದರೂಪವಾದ ಮಹಾಲಿಂಗದಲ್ಲಿ ತಲ್ಲೀನನಾಗಿ ತಾನೇ ತಾನಾಗಿ ಇರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸ್ವಯಸ್ಥಲದ ಪರಿಸಮಾಪ್ತಿಯನ್ನು ಮಾಡುತ್ತ ಕೊನೆಯದಾಗಿ ಈ ಸ್ವಯಸ್ಥಲಿಯ ಮುಖ್ಯವಾದ ನಾಲ್ಕು ಆಚರಣೆಗಳ ಬಗ್ಗೆ ವಿವರಿಸಲೋಸುಗ –

> ಧ್ಯಾನಂ ಶೈವಂ ತಥಾ ಜ್ಞಾನಂ ಭಿಕ್ಷಾ ಚೈಕಾಂತಶೀಲತಾ ।
> ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ ॥

(ಸಿ.ಶಿ. ೧೫–೫೭)

ಹೀಗೆ ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಸ್ವಯಸ್ಥಲದ ಶಿವಯೋಗಿಯು ಶಿವನೇ ಸರ್ವೋತ್ತಮನೆಂಬ ಜ್ಞಾನವನ್ನು ಪಡೆದಿರುತ್ತಾನೆ. ಅದೇ ಪ್ರಕಾರವಾಗಿ ನಿರಂತರ ಅವನ ಧ್ಯಾನವನ್ನು ಸಹ ಮಾಡುತ್ತಿರುತ್ತಾನೆ. ಇದರ ಜೊತೆಗೆ ಶರೀರ ನಿರ್ವಹಣೆಗಾಗಿ

ಭಿಕ್ಷೆಯನ್ನು ಬೇಡುತ್ತಿರುತ್ತಾನೆ. ಏಕಾಂತ ಸ್ಥಾನದಲ್ಲಿ ಓರ್ವನೆ ಕುಳಿತುಕೊಳ್ಳುತ್ತಾನೆ. ಈ ಶಿವಧ್ಯಾನ, ಶಿವಜ್ಞಾನ, ಭಿಕ್ಷಾಟನ ಮತ್ತು ಏಕಾಂತಶೀಲತೆಯನ್ನು ಹೊರತುಪಡಿಸಿ ಬೇರಾವ ಕರ್ಮವನ್ನು ಈತನು ಮಾಡಲಾರನು. ಇದುವೇ ಸ್ವಯಸ್ಥಲಿಯಾದ ಶಿವಯೋಗಿಯ ಲಕ್ಷಣವೆಂದು ಪರಿಭಾವಿಸಬೇಕು.

ಇಲ್ಲಿ ಶಿವಧ್ಯಾನ, ಶಿವಜ್ಞಾನ ಹಾಗೂ ಭಿಕ್ಷಾಟನೆಯ ಜೊತೆಗೆ ಏಕಾಂತವಾಸವು ಪ್ರತಿಪಾದಿಸಲ್ಪಟ್ಟಿದೆ.

ಈ ಜಗತ್ತಿನಲ್ಲಿ ಸಂಗ ಇಲ್ಲವೆ ಸಹವಾಸ ಮೂಲಕವಾಗಿ ಮನುಷ್ಯನು ಸುಧಾರಿಸಲೂಬಹುದು ಹಾಗೂ ಕೆಡಲೂಬಹುದು. ಒಳ್ಳೆಯವರ ಸಹವಾಸದಿಂದ ತನಗೆ ಒಳ್ಳೆಯ ಗತಿಯು ಪ್ರಾಪ್ತವಾದರೆ, ದುರ್ಜನರ ಸಹವಾಸದಿಂದ ದುರ್ಗತಿಯು ಪ್ರಾಪ್ತವಾಗುತ್ತದೆ. ಶಿವಧ್ಯಾನ–ಶಿವಜ್ಞಾನವನ್ನು ಪಡೆದುಕೊಂಡಿದ್ದರೂ ಒಮ್ಮೊಮ್ಮೆ ಕುಸಂಗತಿಯಿಂದಾಗಿ ಆಚಾರಹೀನನಾಗುವ ಸಾಧ್ಯತೆ ಇರುತ್ತದೆ. ಅಂತೆಯೇ ಪೂಜ್ಯರು ಇಲ್ಲಿ ಏಕಾಂತವಾಸದ ಬಗ್ಗೆ ಒತ್ತಿ ಹೇಳಿದ್ದಾರೆ. ಭಿಕ್ಷಾಟನೆಯಿಂದ ಮನುಷ್ಯನ ಅಭಿಮಾನವು ತನ್ನಿಂದ ತಾನೇ ಇಲ್ಲವಾಗಿ ಹೋಗುವುದು. ಹೀಗೆ ನಿರಭಿಮಾನಿಯೂ ಪರಿಶುದ್ಧನೂ, ಆದ ಈ ಸ್ವಯಸ್ಥಲದ ಶಿವಯೋಗಿಯು ಸದಾ ಶಿವಧ್ಯಾನ–ಶಿವಜ್ಞಾನ ಗಳಲ್ಲಿಯೇ ಆಸಕ್ತನಾಗಿರುತ್ತಾನೆ. ಇಂತಹ ಅಪೂರ್ವವಾದ ಜೀವನ್ಮುಕ್ತಿಯ ವಿಲಕ್ಷಣ ವಾದ ಆನಂದವು ಸರ್ವರಿಗೂ ದೊರೆಯುವಂತಾಗಲೆಂಬುದಾಗಿ ಹಾರೈಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಆಗಷ್ಟ್ ೧೯೯೨

(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



# ಚರಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ಉತ್ಕೃಷ್ಟ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಸ್ವಯಸ್ಥಲದ ಬಗೆಗೆ ಮನಂಬುಗುವಂತೆ ಶ್ರವಣಮಾಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಚರಸ್ಥಲವನ್ನು ಕುರಿತು ವಿವೇಚಿಸಲಾಗುವುದು. ಸರ್ವರೂ ಏಕಾಗ್ರಚಿತ್ತರಾಗಿ ಶ್ರವಣಮಾಡಿರಿ.

ಪೂರ್ವದಲ್ಲಿ ಹೇಳಿದ ಸ್ವಯಸ್ಥಲದ ಆ ಶಿವಯೋಗಿಯೇ ಲೋಕ ಕಲ್ಯಾಣಾರ್ಥವಾಗಿ ಯಾವಾಗ, ಎಲ್ಲೆಡೆ ಸಂಚರಿಸತೊಡುಗುವನೋ ಆಗ ಅವನಿಗೆ ಚರಸ್ಥಲಿ ಎಂದು ಕರೆಯಲಾಗುವುದು. 'ಪಾನೀ ಬಹತೇ ರಹನಾ, ಸಾಧೂ ಫಿರತೆ ರಹನಾ' ಎಂಬ ಯುಕ್ತಿಗನುಸಾರವಾಗಿ ನೀರು ಸದಾ ಹರಿಯುತ್ತಿದ್ದರೆ ಅದು ಸ್ವಚ್ಛವಾಗಿರುವುದಲ್ಲದೆ ಬಹುಜನರಿಗೆ ಉಪಯೋಗಕ್ಕೆ ಬರುವುದು. ಅದರಂತೆ ಆತ್ಮಜ್ಞಾನಿಯಾದ ಶಿವಯೋಗಿಯು ಈ ಲೋಕದಲ್ಲಿ ಎಲ್ಲೆಡೆ ಸಂಚರಿಸುತ್ತಿದ್ದರೆ ಅವನಲ್ಲಿ ಯಾವುದೇ ಸ್ಥಾನವಿಷಯಕವಾದ ಮೋಹ ಮಮಕಾರಗಳು ಮನೆಮಾಡಲಾರವಲ್ಲದೆ ಅವನ ಬೋಧಾಮೃತದಿಂದ ಲೋಕೋದ್ಧಾರವೂ ಆಗುವುದು. ಈ ಚರಸ್ಥಲಿಯನ್ನು ಕುರಿತು–

ಆತ್ಮರತಿರಾತ್ಮ ಕ್ರೀಡ ಆತ್ಮ ಮಿಥುನ ಆತ್ಮಾನಂದಃ ಸ ಸ್ವರಾಡ್ಭವತಿ ।
ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥

ಎಂಬ ಛಾಂದೋಗ್ಯ ಶ್ರುತಿ(ಉಪನಿಷತ್)ಯಲ್ಲಿ ಹಾಗೂ

ಅಹಂ ಮಮತ್ವಶೂನ್ಯಾತ್ಮಾ ನಿಜಬೋಧೈಕರೂಪದೃಕ್ ।
ಸ್ವಯಮೇವ ಸ್ವಯಂಭೂತ್ವಾ ಚರತೇತಿ ಚರಃ ಸ್ಮೃತಃ ॥

ಎಂಬ ವಾತುಲೋತ್ತರ ಆಗಮದಲ್ಲಿಯೂ ಸಹ ಈ ಚರಸ್ಥಲದ ಬಗ್ಗೆ ಪ್ರತಿಪಾದಿಸಲಾಗಿದೆ. ತಾತ್ಪರ್ಯವೇನೆಂದರೆ, ಈ ಚರಸ್ಥಲಿಯು ತನ್ನಲ್ಲಿಯೇ ತಾನು ರಮಮಾಣನಾಗಿರುತ್ತಾನೆ. ಈತನಿಗೆ ಆನಂದಾನುಭೂತಿಗೆ ಬೇರೊಬ್ಬರ ಅವಶ್ಯಕತೆ ಇರುವುದಿಲ್ಲ. ಅಂತೆಯೇ ಈತನಿಗೆ ಆತ್ಮರತಿ, ಆತ್ಮಕ್ರೀಡಃ, ಆತ್ಮಮಿಥುನಃ ಮತ್ತು ಆತ್ಮಾನಂದ ಎಂಬ ವಿಶೇಷಣಗಳು. ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಅಹಂಕಾರ–ಮಮಕಾರ ಶೂನ್ಯನಾದ ಈತನು ನಿಜಬೋಧದೃಷ್ಟಿಯುಳ್ಳವನಾಗಿ ತಾನೇ ತಾನಾದ ಸ್ಥಿತಿಯಲ್ಲಿ

ಸಂಚರಿಸುತ್ತಿರೋಣದರಿಂದ ಇವನಿಗೆ ಚರಸ್ಥಲಿಯೆಂದು ಕರೆಯಲಾಗಿದೆ. ಈ ಶಿವಾಗಮೋಕ್ತ ವಿಷಯವನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ–

ಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂ ಮಮತಾಕೃತಿಃ ।
ಸ್ವಯಮೇವ ಸ್ವಯಂ ಭೂತ್ವಾ ಚರತೀತಿ ಚರಾಭಿದಃ ॥

(ಸಿ.ಶಿ. ೧೫–೫೭)

ಈ ರೀತಿಯಾಗಿ ವಿವರಿಸಿದ್ದಾರೆ. ಈ ಚರಸ್ಥಲದ ಶಿವಯೋಗಿಯು ಸ್ವ– ಸ್ವರೂಪಜ್ಞಾನ ಸಂಪನ್ನನಾಗಿರುತ್ತಾನೆ. ಅಂತೆಯೇ ಈತನಿಗೆ ಅಹಂಕಾರ–ಮಮಕಾರ ಭಾವನೆಗಳು ಇರುವುದಿಲ್ಲ, ಅವೆಲ್ಲವುಗಳು ಧ್ವಸ್ತವಾಗಿ ಹೋಗಿರುತ್ತವೆ. ಈತನು ತನ್ನದೇ ಆದ ಆನಂದದ ಸ್ಥಿತಿಯಲ್ಲಿ ಸರ್ವತ್ರ ಸಂಚರಿಸುತ್ತಿರುತ್ತಾನೆ. ಅಂತೆಯೇ ಇವನಿಗೆ 'ಚರ' ಎಂದು ಕರೆಯುತ್ತಾರೆ.

ಈ ಚರಸ್ಥಲಿಯ ಆಚಾರ–ವಿಚಾರಗಳ ಬಗ್ಗೆ ವಿವರಿಸುತ್ತ ಪೂಜ್ಯರು–

ಕಾಮಕ್ರೋಧಾದಿನಿರ್ಮುಕ್ತಃ ಶಾಂತಿದಾಂತಿಸಮನ್ವಿತಃ ।
ಸಮಬುಧ್ಧ್ಯಾ ಚರೇದ್ ಯೋಗೀ ಸರ್ವತ್ರ ಶಿವಬುದ್ಧಿಮಾನ್ ॥

ಇದಂ ಮುಖ್ಯಮಿದಂ ಹೀನಮಿತಿ ಚಿಂತಾಮಕಲ್ಪಯನ್ ।
ಸರ್ವತ್ರ ಸಂಚರೇದ್ ಯೋಗೀ ಸರ್ವಂ ಬ್ರಹ್ಮೇತಿ ಭಾವಯನ್ ॥

ನ ಸಮ್ಮಾನೇಷು ಸಂಪ್ರೀತಿಂ ನಾವಮಾನೇಷು ಚ ವ್ಯಥಾಮ್ ।
ಕುರ್ವಾಣಃ ಸಂಚರೇದ್ ಯೋಗೀ ಕೂಟಸ್ಥಃ ಸ್ವಾತ್ಮನಿ ಸ್ಥಿತಃ ॥

(ಸಿ.ಶಿ. ೧೫–೫೮–೬೦)

ಈ ತೆರನಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ಚರಸ್ಥಲದ ಶಿವಯೋಗಿಯು ಕಾಮಕ್ರೋಧಾದಿ ಅರಿಷಡ್ವರ್ಗಗಳ ಸೋಂಕು ತನಗಾಗದಂತೆ ಸದಾ ಜಾಗರೂಕನಾಗಿರುತ್ತಾನೆ. ಇವುಗಳು ಅಂತರಂಗದಲ್ಲಿಯ ಜ್ಞಾನರತ್ನವನ್ನು ಅಪಹರಿಸುವ ಕಳ್ಳರಿದ್ದಂತೆ. ಧನಿಕನು ನಿಶ್ಚಿಂತನಾಗಿ ಮಲಗಿಕೊಂಡಾಗ ಆತನ ಮನೆಗೆ ನುಗ್ಗಿದ ಕಳ್ಳರು ಅವನಲ್ಲಿಯ ಎಲ್ಲ ಸಂಪತ್ತನ್ನು ದೋಚಿಕೊಂಡು ಹೋಗುವಂತೆ ಮೋಹ ನಿದ್ರೆಯಲ್ಲಿ ಮಲಗಿದ ವ್ಯಕ್ತಿಯ ಜ್ಞಾನವೆಂಬ ರತ್ನವನ್ನು ಈ ಕಾಮಾದಿಗಳೆಂಬ ಕಳ್ಳರು ಅಪಹರಿಸುತ್ತಾರೆ. ಅಂದರೆ ಈ ಕಾಮಾದಿ ವೃತ್ತಿಗಳು ಅಂತಃಕರಣದಲ್ಲಿ ಉದ್ಭವಿಸಿದಾಗ ವಿವೇಕಿಯೂ ಸಹ ಅವಿವೇಕಿಯಂತೆ ವ್ಯವಹರಿಸುತ್ತಾನೆ. ಇದರಿಂದ ಅವನ ವಿವೇಕರತ್ನವು ಅಪಹೃತವಾದದ್ದು ತಿಳಿದು ಬರುತ್ತದೆ. ಅಂತೆಯೇ 'ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ' ಎಂಬ ಉಕ್ತಿಯಲ್ಲಿ ಇದನ್ನು ಸಮರ್ಥಿಸಲಾಗಿದೆ. ಅಂತೆಯೇ ವಿವೇಕ ಸಂಪನ್ನನಾದ ಆತ್ಮನಿಷ್ಠ ನಾದ ಚರಸ್ಥಲದ ಶಿವಯೋಗಿಯು ಈ ಕಾಮಾದಿ ಅರಿಷಡ್ವರ್ಗಗಳ ಬಾಧೆಯಿಂದ ಮುಕ್ತನಾಗಿರುತ್ತಾನೆ.

ಇದೇ ಪ್ರಕಾರವಾಗಿ ಈತನು ಶಾಂತಿ–ದಾಂತಿ ಸಮನ್ವಿತನೂ ಆಗಿರುತ್ತಾನೆ. ಇಲ್ಲಿ ಶಾಂತಿ ಎಂದರೆ ಶಮೆಯೆಂತಲೂ, ದಾಂತಿಯೆಂದರೆ ದಮೆಯೆಂತಲೂ ಅರ್ಥಮಾಡ ಬೇಕು. 'ಶಮೆ'ಯೆಂದರೆ ಅಂತರಿಂದ್ರಿಯ ನಿಗ್ರಹವು. ದಮೆಯೆಂದರೆ ಬಹಿರಿಂದ್ರಿಯ

ನಿಗ್ರಹವು ಇವೆರಡೂ ಒಂದಕ್ಕೊಂದು ಸಹಯೋಗಿಗಳಾಗಿರುತ್ತವೆ. ಅಂತರಿಂದ್ರಿಯ ವಾದ ಮನಸ್ಸನ್ನು ನಿಗ್ರಹಿಸಿದಾಗಲೇ ಬಹಿರಿಂದ್ರಿಯಗಳನ್ನು ನಿಗ್ರಹಿಸಲು ಸಾಧ್ಯವಾಗು ವುದು. ಅದೇ ಪ್ರಕಾರವಾಗಿ ಬಹಿರಿಂದ್ರಿಯಗಳ ಮೇಲೆ ನಿಗ್ರಹವನ್ನು ಸಾಧಿಸಿದಾಗಲೇ ಅಂತರಿಂದ್ರಿಯದ ಮೇಲೆ ನಿಗ್ರಹವನ್ನು ಸಾಧಿಸುವ ಸಾಮರ್ಥ್ಯವು ಪ್ರಾಪ್ತವಾಗುವುದು. ಹೀಗೆ ಇವೆರಡು ಒಂದಕ್ಕೊಂದು ಪೂರಕಗಳಾಗಿರುತ್ತವೆ. ಈ ಚರಸ್ಥಲ ಶಿವಯೋಗಿಯ ಅಂತರಿಂದ್ರಿಯವಾದ ಮನಸ್ಸು ಸದಾ ಆತ್ಮ–ಪರಮಾತ್ಮರಲ್ಲಿಯೇ ತಲ್ಲೀನವಾಗಿ ರೋಣದರಿಂದ ವಿಷಯಗಳ ಅಪೇಕ್ಷೆಯು ಆ ಮನಸ್ಸಿಗೆ ಉಂಟಾಗುವುದಿಲ್ಲ. ಮನಸ್ಸಿನಲ್ಲಿ ವಾಸನೆಯಿಲ್ಲದ ಕಾರಣ ಬಹಿರಿಂದ್ರಿಯಗಳೂ ಸಹ ಶಬ್ದ–ಸ್ಪರ್ಶಾದಿ ವಿಷಯಗಳತ್ತ ಹರಿಯುವುದಿಲ್ಲ. ಹೀಗೆ ಆತನು ಆತ್ಮ ನಿಷ್ಠನಾಗಿರುವುದರಿಂದ ಶಾಂತಿ–ದಾಂತಿ ಸಮನ್ವಿತನೂ ಆಗಿರುತ್ತಾನೆ. ಇದೇ ಪ್ರಕಾರವಾಗಿ ಸರ್ವತ್ರ ಶಿವಬುದ್ಧಿಯುಳ್ಳ ಇವನು ಎಲ್ಲರನ್ನೂ ಸಮಾನವಾಗಿ ಕಾಣುತ್ತಾ ಈ ಲೋಕದಲ್ಲಿ ಸಂಚರಿಸುತ್ತಿರುತ್ತಾನೆ.

ಸಮ ದೃಷ್ಟಿಯ ಈ ಶಿವಯೋಗಿಗೆ ಇದು ಶ್ರೇಷ್ಠ, ಇದು ಕನಿಷ್ಠವೆಂಬ ವಿಕಲ್ಪಗಳು ಮನಸ್ಸಿನಲ್ಲಿ ಒಡಮೂಡುವುದಿಲ್ಲ.'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಉಪನಿಷನ್ಮಂತ್ರ ದಂತೆ ಸರ್ವವೆಲ್ಲವನ್ನು ಪರಶಿವಬ್ರಹ್ಮವನ್ನಾಗಿ ಭಾವಿಸಿ ಈತನು ಎಲ್ಲೆಡೆಯಲ್ಲಿ ಸಂಚರಿಸು ತ್ತಿರುತ್ತಾನೆ.

ಸರ್ವತ್ರ ಸಂಚರಣಶೀಲನಾದ ಇವನು ಮಾನಾಪಮಾನಗಳನ್ನೂ ಸಹ ಲೆಕ್ಕಿಸುವುದಿಲ್ಲ. ಯಾರಾದರೂ ಸಮ್ಮಾನಮಾಡಿದರೆ ಹಿಗ್ಗುವುದಿಲ್ಲ ಮತ್ತು ತನಗೆ ಯಾರಿಂದಲಾದರೂ ಅಪಮಾನವಾದರೆ ಮನಸ್ಸಿನಲ್ಲಿ ಕುಗ್ಗುವುದಿಲ್ಲ. ಸ್ವಾತ್ಮಸ್ಥಿತಿ ಯಲ್ಲಿಯೇ ಕೂಟಸ್ಥನಂತೆ ನಿಶ್ಚಲ ಸ್ವಭಾವವುಳ್ಳವನಾಗಿ ಸರ್ವತ್ರ ಸಂಚರಿಸುತ್ತಿರುತ್ತಾನೆ. ಅಂತೆಯೇ ಇವನ ಮನಸ್ಸಿನಲ್ಲಿ ಯಾವುದೇ ವಿಕಾರಗಳು ಇರುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಚರಸ್ಥಲಿಯ ಆಚಾರ ವಿಚಾರಗಳ ಬಗ್ಗೆ ಮತ್ತಷ್ಟು ವಿಚಾರಿಸುತ್ತ–

ಅಪ್ರಾಕೃತೈರ್ಗುಣೈಃ ಸ್ವೀಯೈಃ ಸರ್ವಂ ವಿಸ್ಮಾಪಯನ್ ಜನಮ್ ।
ಅದ್ವೈತ ಪರಮಾನಂದಮುದಿತೋ ದೇಹಿವಚ್ಚರೇತ್ ॥
ನ ಪ್ರಪಂಚೇ ನಿಜೇ ದೇಹೇ ನ ಧರ್ಮೇನ ಚ ದುಷ್ಕೃತೇ ।
ನ ಚ ವೈಷಮ್ಯ ಧೀರ್ಧೀರೋ ಯತಿಶ್ಚರತಿ ದೇಹಿವತ್ ॥

(ಸಿ.ಶಿ. ೧೫ –೬೧–೬೨)

ಈ ವಿಧವಾಗಿ ವಿವರಿಸಿದ್ದಾರೆ. ಶಿವಾದ್ವೈತದ ಪರಮಾನಂದದಿಂದ ಆನಂದಿತನಾಗಿರುವ ಆ ಶಿವಯೋಗಿಯು ತನ್ನ ಲೋಕೋತ್ತರಗಳಾದ ಉತ್ಕೃಷ್ಟ ಗುಣಗಳಿಂದ ಜಗತ್ತಿನ ಜನರೆಲ್ಲರನ್ನು ವಿಸ್ಮಯಗೊಳಿಸುವಂಥವನಾಗಿ ಒಬ್ಬ ಸಾಮಾನ್ಯ ಜೀವಿಯಂತೆ ಈತನು ಲೋಕದಲ್ಲಿ ಸಂಚರಿಸುತ್ತಿರುತ್ತಾನೆ. ವಿಧಿನಿಷೇಧಾದಿಗಳ ಬಗ್ಗೆ ವಿಷಮ ಬುದ್ಧಿ ಇಲ್ಲದಿರುವ ಅರ್ಥಾತ್ ಇದನ್ನು ಮಾಡಬೇಕು ಇದನ್ನು ಮಾಡಬಾರದೆಂಬ ಯಾವ ನಿಬಂಧನೆಗಳಿಗೂ ಒಳಗಾಗದಿರುವ ಧೀರನಾದ ಅಂದರೆ 'ವಿಕಾರ ಹೇತೌಸತಿ

ವಿಕ್ರಿಯಂತೇ ಏಷಾಂ ನ ಚೇತಾಂಸಿ ತತ, ಏವ ಧೀರಾಃ ಎಂಬ ಕಾಲಿದಾಸನ ಉಕ್ತಿಗನುಸಾರವಾಗಿ ಮನಸ್ಸನ್ನು ವಿಕಾರಗೊಳಿಸುವ ವಿಷಯಗಳು ಎದುರಿಗಿದ್ದಾಗಲೂ ಯಾರ ಮನಸ್ಸು ವಿಕೃತಿಯನ್ನು ಹೊಂದುವುದಿಲ್ಲವೋ ಅವರು ಧೀರರೆಂಬುದಾಗಿ ಕರೆಯಲ್ಪಡುತ್ತಾರೆ. ಹಾಗೆ ಈ ಶಿವಯೋಗಿಯೂ ಸಹ ಧೀರನಾಗಿರುವನಲ್ಲದೆ ದೇಹ ವುಳ್ಳವನಾಗಿದ್ದರೂ ಪ್ರಾಕೃತ ಜನರಂತೆ ಪುಣ್ಯ ಪಾಪಾದಿಗಳನ್ನು ಸಂಪಾದಿಸಲಾರನು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಚರಸ್ಥಲವನ್ನು ಪರಿಸಮಾಪ್ತಿ ಗೊಳಿಸುತ್ತ ಕೊನೆಯದಾಗಿ–

ಪ್ರಾಕೃತೈಶ್ವರ್ಯ ಸಂಪತ್ತಿ ಪರಾಙ್ಮುಖಮನಸ್ಥಿತಿಃ ।
ಚಿದಾನಂದ ನಿಜಾತ್ಮಸ್ಥೋ ಮೋದತೇ ಮುನಿಪುಂಗವಃ ॥

(ಸಿ. ಶಿ. ೧೫–೬೩)

ಹೀಗೆ ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪ್ರಾಕೃತವಾದ ಬ್ರಹ್ಮ–ವಿಷ್ಣು ಮೊದಲಾದ ದೇವತೆಗಳ ಐಶ್ವರ್ಯದಿಂದ ಪರಾಙ್ಮುಖವಾದ ಮನಸ್ಸಿನ ಸ್ಥಿತಿಯುಳ್ಳ ಮತ್ತು ಚಿದಾನಂದ ಸ್ವರೂಪವಾದ ತನ್ನ ಆತ್ಮದಲ್ಲಿಯೇ ಆನಂದವನ್ನು ಪಡೆಯುತ್ತ ಈ ಮುನಿಪುಂಗವನು ಸದಾ ಸಂತುಷ್ಟನಾಗಿರುತ್ತಾನೆ. ಈ ಜಗತ್ತಿನಲ್ಲಿ ಲೌಕಿಕ ಹಾಗೂ ಪಾರಲೌಕಿಕವೆಂಬುದಾಗಿ ಐಶ್ವರ್ಯಗಳು ಎರಡು ವಿಧವಾಗಿ ಇರುತ್ತವೆ. ಇಹ ಲೋಕದಲ್ಲಿ ಚಕ್ರವರ್ತಿ ಪರ್ಯಂತವಾದ ಸ್ಥಾನಮಾನಗಳು ಪ್ರತಿಪಾದಿಸಲ್ಪಟ್ಟಿದ್ದರೆ ಪರಲೋಕದಲ್ಲಿ ಬ್ರಹ್ಮ–ವಿಷ್ಣು–ಇಂದ್ರ ಮೊದಲಾದ ದೇವತೆಗಳ ಸ್ಥಾನಮಾನಗಳು ಇರುತ್ತವೆ. ಸುಕೃತಿಯಾದವನು ಅರ್ಥಾತ್ ಪುಣ್ಯಜೀವಿಯು ಇಹಲೋಕದ ಐಶ್ವರ್ಯ ಗಳನ್ನನುಭವಿಸಿ ಇದರಿಂದಲೇ ತೃಪ್ತನಾಗದೆ ತನ್ನಲ್ಲಿರುವ ಅಧಿಕೃತ ಪುಣ್ಯದಿಂದಾಗಿ ಇಂದ್ರಾದಿ ದೇವತೆಗಳ ಸ್ಥಾನಮಾನವನ್ನು ಪಡೆದು ಸುಖಿಸಬೇಕೆಂದು ಅಭಿಲಾಷೆಯುಳ್ಳ ವನಾಗಿರುತ್ತಾನೆ. ಆ ಪಾರಲೌಕಿಕ ಸುಖವಾದರೂ ಪುಣ್ಯ ಕ್ಷಯಿಸುವವರೆಗೆ ಮಾತ್ರ ದೊರೆಯುವುದು. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂಬ ಪ್ರಮಾಣ ಕ್ಕನುಸಾರವಾಗಿ ಆ ಪುಣ್ಯಕ್ಷಯಿಸಿದೊಡನೆ ಪುನಃ ಭೂಲೋಕದಲ್ಲಿ ಜನ್ಮತಾಳಬೇಕಾಗು ತ್ತದೆ. ಹೀಗೆ ಐಹಿಕ–ಪಾರಲೌಕಿಕ ಸುಖಗಳೆರಡೂ ಕ್ಷಣಿಕಗಳೂ, ಕ್ಷಯ–ಪತನಾದಿ ದೋಷಗಳಿಂದ ಕೂಡಿದವುಗಳೂ ಆಗಿರೋಣದರಿಂದ ಈ ಚರ ಸ್ಥಳದ ಶಿವಯೋಗಿಯು ಆ ಯಾವ ಸುಖದ ಮೋಹಕ್ಕೂ ಒಳಗಾಗುವುದಿಲ್ಲ. ಆ ಎರಡೂ ಸುಖಗಳಿಂದ ವಿರಕ್ತಿ ಭಾವನೆಯನ್ನು ತಳೆದು ಅಂತರ್ಮುಖಿಯಾಗಿ ಮುನಿಪುಂಗವನೆನಿಸಿ ಸಚ್ಚಿದಾನಂದ ಸ್ವರೂಪ ವಾದ ತನ್ನ ಆತ್ಮ ಸ್ಥಿತಿಯಲ್ಲಿಯೇ ನೆಲೆಗೊಂಡು ಸದಾ ಆನಂದವನ್ನೇ ಅನುಭವಿಸುತ್ತಿರು ತ್ತಾನೆ. ಇದುವೇ ಚರಸ್ಥಲಿಯ ಚರಮಸೀಮೆಯೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಆಗಷ್ಟ್ ೧೯೬೨
(ಸ್ಥಾನ ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಪರಸ್ಥಲ

ಮುಮುಕ್ಷುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಪೋನಿಧಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಶ್ರಾವಣ ಮಾಸದ ನಿಮಿತ್ತವಾಗಿ ಈ ಪುಣ್ಯಪತ್ತನದಲ್ಲಿ (ಪುಣೆಯಲ್ಲಿ) ಶ್ರೀ ಕಾಶೀ ಜಗದ್ಗುರು ಮಹಾಸನ್ನಿಧಿಯವರ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮಗಳು ಪ್ರತಿದಿನ ಅವ್ಯಾಹತವಾಗಿ ಸಾಗಿಬರುತ್ತಲಿವೆ. ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಭಕ್ತಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ನೀವೆಲ್ಲ ಚರಸ್ಥಲದ ಬಗ್ಗೆ ಸವಿಸ್ತಾರವಾಗಿ ಶ್ರವಣಮಾಡಿದ್ದೀರಿ. ಇಂದು ಕ್ರಮಪ್ರಾಪ್ತವಾದ ಹಾಗೂ ಈ ಭಕ್ತಸ್ಥಲದ ಕೊನೆಯ ಅವಾಂತರ ಸ್ಥಲವಾದ 'ಪರಸ್ಥಲ'ದ ಬಗ್ಗೆ ವಿವೇಚಿಸೋಣ.

''ತದ್ ಬ್ರಹ್ಮಾಹಮಿತಿ ಜ್ಞಾತ್ವಾ ಬ್ರಹ್ಮ ಸಂಪದ್ಯತೇ ಪರಮ್'' ಎಂಬ ಅಮೃತಬಿಂದೂಪನಿಷತ್ತಿನ ಈ ಪ್ರಮಾಣದಂತೆ ಸರ್ವಶ್ರೇಷ್ಠವಾದ ಬ್ರಹ್ಮಸ್ಥಿತಿಯನ್ನು ಪಡೆಯುವುದೇ 'ಪರ' ಶಬ್ದದ ಅರ್ಥವು. 'ಪರ' ಎಂದರೆ ಸರ್ವಶ್ರೇಷ್ಠವೆಂದರ್ಥ. ಅಂತೆಯೇ ಶಿವ ಹಾಗೂ ಬ್ರಹ್ಮರ ಸರ್ವ ಶ್ರೇಷ್ಠತೆಯನ್ನು ಪ್ರತಿಪಾದಿಸಲೋಸುಗ ಅವುಗಳಿಗೆ 'ಪರ' ಎಂಬ ವಿಶೇಷಣವನ್ನು ಜೋಡಿಸಲಾಗುವುದು. ಆಗ 'ಪರಶಿವ' 'ಪರಬ್ರಹ್ಮ' ಎಂಬುದಾಗಿ ಶಬ್ದಪ್ರಯೋಗವಾಗುವುದುಂಟು. ಪ್ರತಿಯೊಬ್ಬ ಮನುಷ್ಯನ ಮನಸ್ಸಿನಲ್ಲಿ ಸರ್ವೋನ್ನತವಾದ ಸ್ಥಾನವನ್ನು ಪಡೆಯುವ ಹೆಬ್ಬಯಕೆ ಇದ್ದೇ ಇರುತ್ತದೆ. ಲೌಕಿಕ ಜೀವನದಲ್ಲಿ ಒಂದು ಸಮಯದಲ್ಲಿ ಒಬ್ಬ ವ್ಯಕ್ತಿಯು ಮಾತ್ರ ಆ ಸ್ಥಾನವನ್ನು ಪಡೆಯಲು ಸಮರ್ಥನಾಗುವನು. ನಮ್ಮ ದೇಶದಲ್ಲಿ ರಾಷ್ಟ್ರಪತಿ ಪದವು ಲೌಕಿಕ ದೃಷ್ಟಿಯಿಂದ ಸರ್ವೋನ್ನತವಾದುದು, ಆ ಸ್ಥಾನದ ಮೇಲೆ ಐದು ವರ್ಷಗಳವರೆಗೆ ಒಬ್ಬನೇ ಆದ ವ್ಯಕ್ತಿಯು ಕೂಡ್ರಲು ಸಾಧ್ಯವಾಗುವುದು. ರಾಷ್ಟ್ರಪತಿಯಾಗುವ ಯೋಗ್ಯತೆಯು ಅನೇಕ ಜನರಲ್ಲಿದ್ದರೂ ಎಲ್ಲರಿಗೂ ಏಕಕಾಲದಲ್ಲಿಯೇ ರಾಷ್ಟ್ರಪತಿಯಾಗುವ ಅವಕಾಶವಿರುವುದಿಲ್ಲ. ಆದರೆ ಆಧ್ಯಾತ್ಮಿಕ ಕ್ಷೇತ್ರದಲ್ಲಿಯ ಪರಶಿವ ಇಲ್ಲವೆ ಪರಬ್ರಹ್ಮ ಸ್ವರೂಪ ಅಥವಾ ಸ್ಥಾನವನ್ನು ಒಂದೇ ಕಾಲಕ್ಕೆ ಲಕ್ಷ ಲಕ್ಷ ಜನರು ಸಹ ಪಡೆಯಬಹುದು. ಅಲ್ಲಿ ಪರಸ್ಪರವಾದ ಯಾವ ವಿರೋಧವೂ ಕಂಡುಬರುವುದಿಲ್ಲ. ನಾನು ಪರಶಿವ ಸ್ವರೂಪನಾಗಿದ್ದೇನೆ ಎಂಬ ದೃಢ ಜ್ಞಾನವು ಯಾರಲ್ಲಿ ಉಂಟಾಗುವುದೋ ಅವರು ತತ್‌ಕ್ಷಣದಲ್ಲಿಯೇ ತತ್‌ಸ್ವರೂಪರಾಗುತ್ತಾರೆ. ಆದ್ದರಿಂದ ಕ್ಷಣಿಕವಾದ

ಲೌಕಿಕವಾದ ಪದವಿಗಳಿಗಿಂತ ಶಾಶ್ವತವಾದ ಈ ಪರಸ್ಥಲವೇ ಸರ್ವೋತ್ಕೃಷ್ಟವಾದು ದೆಂಬುದಾಗಿ ತಿಳಿದುಕೊಳ್ಳಬೇಕು.

ಪೂಜ್ಯಪಾದರಾದ ಶ್ರೀಜಗದ್ಗುರು ರೇಣುಕ ಭಗವತ್ಪಾದರು ಈ ಪರಸ್ಥಲಿಯ ಸ್ವರೂಪವನ್ನು ತಿಳಿಯಪಡಿಸಲೋಸುಗ–

ಸ್ವಯಮೇವ ಸ್ವಯಂ ಭೂತ್ವಾ ಚರತಃ ಸ್ವಸ್ವರೂಪತಃ ।
ಪರಂ ನಾಸ್ತೀತಿ ಬೋಧಸ್ಯ ಪರತ್ತ್ವಮಭಿಧೀಯತೇ ॥

(ಸಿ.ಶಿ. ೧೫–೬೪)

ಈ ತೆರನಾಗಿ ಅಪ್ಪಣೆ ಕೊಡಿಸಿದ್ದಾರೆ. ಈ ಪೂರ್ವದಲ್ಲಿ ಹೇಳಲ್ಪಟ್ಟ ಸ್ವಯಸ್ಥಲದ ಶಿವಯೋಗಿಯು ತಾನೇ ತಾನಾಗಿ ಸರ್ವತ್ರ ಸಂಚರಿಸುತ್ತಿರುವಾಗ ಅವನಿಗೆ ಎಲ್ಲೆಡೆಯಲ್ಲಿ ತನ್ನ ಹೊರತಾಗಿ ಅನ್ಯವಾವುದು ಗೋಚರವಾಗುವುದಿಲ್ಲ. ಅಂತೆಯೇ ಅವನ ಮನಸ್ಸಿನಲ್ಲಿ 'ಪರಂ ನಾಸ್ತಿ' ಮತ್ತೊಬ್ಬರು ಯಾರೂ ಇಲ್ಲ ಎಂಬ ಬೋಧೆಯುಂಟಾ ಗೋಣದರಿಂದ ಅವನಿಗೆ ಪರಸ್ಥಲಿ ಎಂದು ಕರೆಯಲಾಗಿದೆ.

''ತನ್ನ ತಾನರಿತವಂಗೆ ಭಿನ್ನ ಭೇದಗಳಿಲ್ಲ ತನ್ನವರಿಲ್ಲ ಪರರಿಲ್ಲ–ತ್ರಿಭುವನ ತನ್ನೊಳಗುಂಟು ಸರ್ವಜ್ಞ'' ಎಂಬ ಸರ್ವಜ್ಞನ ಈ ವಚನದಲ್ಲಿ ಪರಸ್ಥಲ ಶಿವಯೋಗಿಯ ಲಕ್ಷಣವು ಯಥಾವತ್ತಾಗಿ ಪ್ರತಿಪಾದಿಸಲ್ಪಟ್ಟಿದೆ. ಶರೀರ, ಇಂದ್ರಿಯ, ಮನ ಹಾಗೂ ಬುದ್ಧಿಗಳು ಇವು ಪ್ರತಿಯೊಬ್ಬ ವ್ಯಕ್ತಿಯಲ್ಲಿ ಭಿನ್ನ ಭಿನ್ನಗಳಾಗಿದ್ದರೂ ಒಳಗಿರುವ ಆತ್ಮವು ಮಾತ್ರ ಒಂದೇ ಆಗಿರುತ್ತದೆ. ಹೂವಿನ ಮಾಲೆಯಲ್ಲಿ ಬಣ್ಣ ಬಣ್ಣದ ಹೂವುಗಳು ಭಿನ್ನ ಭಿನ್ನವಾಗಿ ತೋರುತ್ತಿದ್ದರೂ ಅವೆಲ್ಲವುಗಳನ್ನು ಒಂದೇ ರೇಖೆಯಲ್ಲಿ ಕೂಡಿಸಿರುವುದು ಅದರೊಳಗಿನ ಸೂತ್ರವೂ, ಪುಷ್ಪಮಾಲೆಯಲ್ಲಿ ಒಂದೇ ಒಂದು ಸೂತ್ರವಿರುವಂತೆ ಜಗತ್ತಿನ ಚರಾಚರವಸ್ತುಗಳಲ್ಲೆಲ್ಲಾ ಪರಮಾತ್ಮನು ಸೂತ್ರದಂತೆ ಅನುಸ್ಯೂತನಾಗಿರು ತ್ತಾನೆ. ಅಂತೆಯೇ ಅವನಿಗೆ ಸೂತ್ರಾತ್ಮನೆಂತಲೂ ಕರೆಯುತ್ತಾರೆ. ಇದೇ ಪ್ರಕಾರವಾಗಿ ಈ ಪರಸ್ಥಲದ ಶಿವಯೋಗಿಯು ತನ್ನಲ್ಲಿ ತನ್ನಾತ್ಮರೂಪವನ್ನು ನೋಡುವುದರ ಜೊತೆಗೆ ಇತರರಲ್ಲಿಯೂ ಸಹ ತನ್ನಾತ್ಮವನ್ನೇ ಕಾಣುತ್ತಾನೆ. ಅವನ ದೃಷ್ಟಿಯಲ್ಲಿ ತನಗಿಂತಲೂ 'ಪರ' ಅಂದರೆ ಭಿನ್ನವಾದವರು ಯಾರೂ ತೋರುವದಿಲ್ಲವಾದ್ದರಿಂದ 'ಪರಂ ನಾಸ್ತಿ' ಎಂಬ ಬೋಧೆಯು ಇವನಿಗುಂಟಾದ ಕಾರಣದಿಂದಲೇ ಇವನಿಗೆ 'ಪರಸ್ಥಲಿ' ಎಂದು ಕರೆಯಲಾಗಿದೆ.

ಪೂಜ್ಯಪಾದರು ಈ ಪರಸ್ಥಲಿಯ ವರ್ತನೆಯ ಬಗ್ಗೆ ವಿವರಿಸುತ್ತ ಮುಂದೆ–

ಸ್ವತಂತ್ರಃ ಸರ್ವಕೃತ್ಯೇಷು ಸ್ವಂ ಪರತ್ವೇನ ಭಾವಿತಃ
ತೃಣೀಕುರ್ವನ್ ಜಗಜ್ಜಾಲಂ ವರ್ತತೇ ಶಿವಯೋಗಿರಾಟ್॥

(ಸಿ.ಶಿ. ೧೫–೬೫)

ಹೀಗೆ ಅಪ್ಪಣೆ ಕೊಡಿಸಿದ್ದಾರೆ 'ಸ್ವಂ' ಅಂದರೆ ತನ್ನನ್ನು ' ಪರತ್ವೇನ ಅಂದರೆ ಪರಬ್ರಹ್ಮ ಸ್ವರೂಪವಾಗಿ ಭಾವಿತಃ ಭಾವಿಸಲ್ಪಟ್ಟ ಈ ಶಿವಯೋಗೀಶ್ವರನು ಎಲ್ಲ ಕಾರ್ಯಗಳಲ್ಲಿ ಸರ್ವತಂತ್ರ ಸ್ವತಂತ್ರನಾಗಿರುತ್ತಾನೆ. ಇವನ ಮೇಲೆ ಯಾರ ಶಾಸನವೂ ನಡೆಯು ವುದಿಲ್ಲ, ಈ ಚರಾಚರಾತ್ಮಕವಾದ ಜಗತ್ತು ಇವನಿಗೆ ಒಂದು ಹುಲ್ಲುಕಡ್ಡಿಯೋಪಾದಿಯಲ್ಲಿ

ಪ್ರತೀತವಾಗುತ್ತದೆ. ಅಂದರೆ ಜಗತ್ತಿನಲ್ಲಿ ಯಾವುದೇ ಆಸಕ್ತಿಯು ಇವನಿಗೆ ಉಳಿದಿರುವುದಿಲ್ಲವೆಂಬ ತಾತ್ಪರ್ಯವು.

ಶಿವಯೋಗಿಯಾದವನು ಸದಾಶಿವನೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಂಡಿರುತ್ತಾನೆ. ಇಷ್ಟಲಿಂಗಧಾರಣೆ ಹಾಗೂ ಅದರ ಪೂಜೆಯ ಮೂಲಕ ಸ್ಥೂಲದೇಹಕ್ಕೆ ಶಿವನ ಸಂಬಂಧವಾಗುತ್ತದೆ. ಇನ್ನು ವಾಣಿಯಿಂದ ಪಂಚಾಕ್ಷರ ಮಹಾಮಂತ್ರದ ಜಪವು ಅಖಂಡವಾಗಿ ಸಾಗೋಣದರಿಂದ ಮಂತ್ರಾರ್ಥರೂಪನಾದ ಶಿವನ ಜೊತೆಗೆ ವಾಣಿಯ ಸಂಬಂಧ ಇದ್ದೇ ಇರುತ್ತದೆ. ಇದೇ ಪ್ರಕಾರವಾಗಿ ತನ್ನ ಪರಿಶುದ್ಧವಾದ ಮನಸ್ಸಿನಲ್ಲಿ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅನುಸಂಧಾನವನ್ನು ಈತನು ಮಾಡುತ್ತಿರೋಣದರಿಂದ ಮನಸ್ಸಿ ನೊಂದಿಗೂ ಸಹ ಶಿವಸಂಬಂಧವು ಇದ್ದೇ ಇರುತ್ತದೆ. ಹೀಗೆ ತನು, ವಾಣಿ, ಮನಗಳೆಂಬ ತ್ರಿಕರಣಗಳ ಜೊತೆಗೆ ಶಿವನ ಸಂಬಂಧವನ್ನು ಸ್ಥಾಪಿಸುವುದೇ ಶಿವಯೋಗವು. ಪ್ರಾಯಃ ವೀರಶೈವರೆಲ್ಲರೂ ಶಿವಯೋಗಿ ಪದವಾಚ್ಯರೇ, ಆದರೆ ಎಲ್ಲರೂ ನಿರಂತರವಾದ ಸಂಬಂಧವನ್ನು ಸಾಧಿಸುವುದಿಲ್ಲ, ತಮತಮಗೆ ಅವಕಾಶ ದೊರೆತಾಗಲೆಲ್ಲಾ ಇಷ್ಟಲಿಂಗ ಪೂಜೆ, ಪಂಚಾಕ್ಷರಮಂತ್ರ ಜಪ ಮತ್ತು ಪ್ರಾಣಲಿಂಗ ಭಾವಲಿಂಗಗಳ ಅನುಸಂಧಾನ ವನ್ನು ಮಾಡುತ್ತಿರುತ್ತಾರೆ. ಯಾರು ಎಷ್ಟುಕಾಲ ಈ ಸಂಬಂಧವನ್ನು ಸ್ಥಾಪಿಸುವರೋ ಅವರು ಅಷ್ಟು ಕಾಲದವರೆಗೆ ಶಿವಯೋಗಿಗಳೆನ್ನುವುದರಲ್ಲಿ ಸಂದೇಹವಿಲ್ಲ, ಆದರೆ ಪರಸ್ಥಲದ ಈ ಶಿವಯೋಗಿಯು ಒಂದು ಕ್ಷಣವೂ ಸಹ ಬಿಡದಂತೆ ಶಿವನೊಂದಿಗೆ ಸಂಪೃಕ್ತವಾಗಿರೋಣದರಿಂದ ಪೂಜ್ಯಪಾದರು ಇವನಿಗೆ ಶಿವಯೋಗಿರಾಟ್ ಎಂಬುದಾಗಿ ಕರೆದಿದ್ದಾರೆ.

ಪೂಜ್ಯಪಾದರು ಈ ಪರಸ್ಥಲಿಯು ಅನುಭವಿಸುವ ಆನಂದ ವಿಷಯಕವಾಗಿ ಪುನಃ–

ವರ್ಣಾಶ್ರಮ ಸಮಾಚಾರಮಾರ್ಗನಿಷ್ಠಾಪರಾಙ್ಮುಖಃ ।
ಸರ್ವೋತ್ಕೃಷ್ಟಂ ಸ್ವಮಾತ್ಮಾನಂ ಪಶ್ಯನ್ ಯೋಗೀ ತು ಮೋದತೇ ॥

(ಸಿ.ಶಿ. ೧೫–೭೭)

ಈ ವಿಧವಾಗಿ ನಿರೂಪಿಸಿದ್ದಾರೆ. ಲೌಕಿಕ ಜೀವನದಲ್ಲಿ ಓರ್ವ ವ್ಯಕ್ತಿಯು ಮೋದವನ್ನು ಅರ್ಥಾತ್ ಸಂತೋಷವನ್ನು ಪಡೆಯಬೇಕಾದರೆ ಇನ್ನೊಬ್ಬರನ್ನು ಅಥವಾ ಇನ್ನೊಂದನ್ನು ಅಪೇಕ್ಷಿಸುತ್ತಾನೆ. ವಾಸ್ತವಿಕವಾಗಿ ವಿಚಾರಮಾಡಲಾಗಿ ನಮಗೆ ಸಂತೋಷವು ದೊರೆಯಬೇಕಾದರೆ ಮತ್ತೊಬ್ಬರ ಅವಶ್ಯಕತೆಯೇ ಇರುವುದಿಲ್ಲ. ಸುಖ ಅಥವಾ ಆನಂದವೆನ್ನುವುದು ಹೊರಗಿನಿಂದ ದೊರೆಯುವಂಥಾದ್ದಲ್ಲ. ಪ್ರತಿಯೊಬ್ಬರ ಆತ್ಮವೇ ಸುಖರೂಪವಾಗಿರುವುದರಿಂದ ಯಾವಾಗ ಮನಸ್ಸು ಏಕಾಗ್ರವಾಗಿ ಆತ್ಮದಲ್ಲಿ ವಿಲಯ ಹೊಂದುವುದೋ ಆಗ ಅದಕ್ಕೆ ಆನಂದದ ಅನುಭೂತಿಯಾಗುವುದು. ಯೋಗಿಗಳು ತಮ್ಮ ಯೋಗಸಾಮರ್ಥ್ಯದಿಂದ ಮನಸ್ಸನ್ನು ಸ್ಥಿರಗೊಳಿಸಿ ಆತ್ಮಚಿಂತನೆಯಲ್ಲಿ ವಿಲೀನಗೊಳಿಸಿ ಆತ್ಮಾನಂದವನ್ನು ಅನುಭವಿಸಿದರೆ, ಸಾಂಸಾರಿಕ ಜೀವಿಗಳಿಗೆ ಶಬ್ದ–ಸ್ಪರ್ಶಾದಿ ವಿಷಯಗಳ ಸಂಬಂಧವಾದಾಗ ಮನಸ್ಸು ಶಾಂತಿ ಸ್ಥಿತಿಯನ್ನು ಪಡೆಯುವುದು. ಆಗ ಆ ಶಾಂತವಾದ ಮನಸ್ಸಿನಲ್ಲಿ ಸುಖರೂಪವಾದ ಆತ್ಮದ ಪ್ರತಿಬಿಂಬವು ಬೀಳೋಣದರಿಂದ

ಆ ವಿಷಯದಿಂದ ಆನಂದವು ದೊರೆತಂತೆ ಭಾಸವಾಗುತ್ತದೆ. ಆನಂದವು ವಿಷಯ ದಲ್ಲಿರದೆ ಆತ್ಮದಲ್ಲಿಯೇ ಇರುತ್ತದೆ. ಒಂದು ವೇಳೆ ವಿಷಯದಿಂದಲೇ ಆನಂದವು ದೊರೆಯುತ್ತಿದ್ದರೆ ಓರ್ವ ವ್ಯಕ್ತಿಯನ್ನು ಅತಿಯಾಗಿ ಪ್ರೀತಿಸುವ ವ್ಯಕ್ತಿಯು ಇನ್ನೊಂದು ಕ್ಷಣದಲ್ಲಿ ಅವನೊಂದಿಗೆ ಕಲಹವನ್ನು ಮಾಡುತ್ತಾನೆ. ಅಂದಾಗ ವಿಷಯಗಳು ಸುಖಪ್ರಾಪ್ತಿಯ ಕ್ಷಣಿಕ ಸಾಧನಗಳೇ ವಿನಃ ಅವುಗಳು ಸುಖರೂಪವಾದವುಗಳಲ್ಲ.

ಈ ಪೂರ್ವೋಕ್ತವಾದ ವಿಷಯವಸ್ತುವಿನ ಪರಿಪೂರ್ಣವಾದ ತಿಳುವಳಿಕೆಯು ಈ ಪರಸ್ಥಲದ ಶಿವಯೋಗಿಗೆ ಉಂಟಾಗಿರುವುದರಿಂದ ಇವನು ಅನ್ಯರನ್ನು ನೋಡಿ ಆನಂದ ಪಡದೆ ತನ್ನ ಆತ್ಮವನ್ನೇ ಸರ್ವತ್ರನೋಡಿ ತಾನು ಆನಂದಿಸುತ್ತಿರುತ್ತಾನೆ. ಇವನ ದೃಷ್ಟಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರನೆಂಬ ವರ್ಣಗಳಾಗಲೀ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸವೆಂಬ ನಾಲ್ಕು ಆಶ್ರಮಗಳ ಭೇದಗಳಾಗಲಿ ತೋರುವುದಿಲ್ಲ. ಶಿವಮಯ ದೃಷ್ಟಿ ಸಂಪನ್ನನಾದ ಈ ಶಿವಯೋಗಿಯು ಸರ್ವರಲ್ಲಿಯೂ ತನ್ನನ್ನೇ ತಾನು ಕಾಣುತ್ತಿರುತ್ತಾನೆ ಮತ್ತು ಆದರಿಂದಲೇ ಸದಾ ಮುದಿತನೂ ಆಗಿರುತ್ತಾನೆ.

ಈ ಪರಸ್ಥಲದ ಶಿವಯೋಗಿಯು ತನ್ನ ಸ್ಥಿತಿಯಲ್ಲಿ ಹೇಗೆ ತಾನೇ ಸರ್ವೋತ್ಕೃಷ್ಟನು? ಎಂಬ ವಿಷಯವನ್ನು ತಿಳಿಯಪಡಿಸಲೋಸುಗ ಪೂಜ್ಯಪಾದರು ಪುನಃ–

ವಿಶ್ವಾತೀತಂ ಪರಂ ಬ್ರಹ್ಮ ಶಿವಾಖ್ಯಂ ಚಿತ್ಸ್ವರೂಪಕಮ್ ।
ತದೇವಾಹಮಿತಿ ಜ್ಞಾನೀ ಸರ್ವೋತ್ಕೃಷ್ಟಃ ಸ ಉಚ್ಯತೇ॥

(ಸಿ.ಶಿ. ೧೫–೬೭)

ಈ ರೀತಿಯಾಗಿ ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, 'ದೊಡ್ಡದರ ಜೊತೆಗೆ ಸಮರಸತೆಯನ್ನು ಪಡೆದಾಗ ಸಣ್ಣ ವಸ್ತುವೂ ಸಹ ದೊಡ್ಡದಾಗಿ ಪರಿಣಮಿಸುತ್ತದೆ.'' ಎಂಬ ಸಂಗತಿಯು ಲೋಕದಲ್ಲಿ ಸರ್ವಾನುಭವಸಿದ್ಧವಾದುದು. ಗಂಗೋತ್ರಿಯಿಂದ ಹೊರಟ ಗಂಗಾನದಿಗೆ ಮಧ್ಯದಲ್ಲಿ ಅನೇಕ ಸಣ್ಣ–ಪುಟ್ಟ ನದಿಗಳು ಸೇರಿಕೊಂಡು ಗಂಗಾಸ್ವರೂಪಗಳೇ ಆಗಿರುವುದನ್ನು ನಾವೆಲ್ಲರೂ ನೋಡುತ್ತೇವೆಯಲ್ಲವೆ ? ಇದರಂತೆ ಈ ಪ್ರಪಂಚದಲ್ಲಿ ಸರ್ವೋತ್ಕೃಷ್ಟವಾದವನು ಪರಶಿವನೊಬ್ಬನೆ. ಇವನೊಂದಿಗೆ ಶಿವಯೋಗದ ಮೂಲಕವಾಗಿ ಸಾಮರಸ್ಯವನ್ನು ಪಡೆದು ಶಿವಯೋಗಿ ಗಳೆಲ್ಲಾ ಸರ್ವೋತ್ಕೃಷ್ಟರೇ ಆಗುತ್ತಾರೆ. ಆದ್ದರಿಂದ ಈ ಪರಸ್ಥಲದ ಶಿವಯೋಗಿಯು ವಿಶ್ವಾತೀತವಾದ ಚಿದ್ರೂಪವಾದ ಶಿವ ಹಾಗೂ ಬ್ರಹ್ಮಗಳೆಂಬ ನಾಮವುಳ್ಳ ಆ ಪರತತ್ತ್ವವೇ ನಾನಿದ್ದೇನೆಂಬ ಜ್ಞಾನವನ್ನು ಪಡೆದುಕೊಂಡಿರೋಣದರಿಂದ ಇವನೂ ಸರ್ವೋತ್ಕೃಷ್ಟನೆಂತಲೇ ಹೇಳಲ್ಪಡುತ್ತಾನೆಯೆಂಬುದು ಪೂಜ್ಯರ ಆಶಯವಾಗಿದೆ.

ಹೀಗೆ ಪರಬ್ರಹ್ಮ ಸ್ವರೂಪವನ್ನು ಪಡೆದ ಈ ಶಿವಯೋಗಿಯು ಜೀವನ್ಮುಕ್ತನಾಗಿ ರುತ್ತಾನೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು ಪುನಃ –

ಅಚಲಂ ಧ್ರುವಮಾತ್ಮಾನಮನುಪಶ್ಯನ್ನಿರಂತರಮ್ ।
ನಿರಸ್ತವಿಶ್ವವಿಭ್ರಾಂತಿರ್ಜೀವನ್ಮುಕ್ತೋ ಭವೇನ್ಮುನಿಃ ॥

(ಸಿ.ಶಿ. ೧೫–೬೮)

ಈ ವಿಧವಾಗಿ ಆದೇಶಿಸಿದ್ದಾರೆ. ಅಚಲವೂ, ನಿತ್ಯವೂ ಆದ ತನ್ನ ಆತ್ಮಸ್ವರೂಪ ವನ್ನು ಯಾವಾಗಲೂ ಅಖಂಡವಾಗಿ ಪರಿಭಾವಿಸಿ, ಪರಮಾತ್ಮನೊಂದಿಗೆ ತನ್ನನ್ನು ಅನನ್ಯವಾಗಿ ಅನುಭವಿಸುವ ಈ ಮುನಿಯು ಅರ್ಥಾತ್ ಶಿವಯೋಗಿಯು ಜಗತ್ತಿನ ಎಲ್ಲ ಪ್ರಕಾರದ ಭ್ರಾಂತಿಗಳಿಂದ ಮುಕ್ತನಾದಂಥವನಾಗಿರೋಣದರಿಂದ ಇವನಿಗೆ ಜೀವನ್ಮುಕ್ತ ನೆಂದು ಕರೆಯಲಾಗಿದೆ. ಆಹಾರ–ವ್ಯವಹಾರಾದಿಗಳಿಂದ ಇವನ ಲೌಕಿಕ ಜೀವನವು ಸಾಗುತ್ತಿದ್ದರೂ ಈತನಿಗೆ ಪುನರ್ಜನ್ಮವಿಲ್ಲದಿರೋಣದರಿಂದ ಇವನು ಜೀವಿಸುತ್ತಲೇ ಮುಕ್ತನಾಗಿದ್ದಾನೆ ಎಂಬುದನ್ನು ಲೋಕಕ್ಕೆ ತಿಳಿಯಪಡಿಸಲೋಸುಗ ಪೂಜ್ಯ ಪಾದರು ಪರಸ್ಥಲದ ಈ ಶಿವಯೋಗಿಗೆ ಜೀವನ್ಮುಕ್ತನೆಂಬುದಾಗಿ ಸಂಬೋಧಿಸಿದ್ದಾರೆ.

ಇಹಲೋಕದಲ್ಲಿ ಶರೀರಧಾರಿಯಾಗಿ ಇರುವವರೆಗೆ ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಅನುಕೂಲಗಳಾದ ಕರ್ಮಗಳನ್ನು ಮಾಡುತ್ತ ಆ ಕರ್ಮದ ಫಲವಾದ ಆಯಾ ದೇವರುಗಳ ಅನುಗ್ರಹವನ್ನು ಸರ್ವರೂ ಪಡೆಯಬೇಕಾಗುವುದು. ಹೀಗಿರುವಾಗ ವರ್ಣಾಶ್ರಮಧರ್ಮವನ್ನೆಲ್ಲ ತಿರಸ್ಕರಿಸಿದ ಈ ಪರಸ್ಥಲದ ಶಿವಯೋಗಿಯ ಮೇಲೆ ಆಯಾ ಕರ್ಮಾಧಿಷ್ಠಾತೃಗಳಾದ ದೇವತೆಗಳು ಕುಪಿತರಾಗುವುದಿಲ್ಲವೇ ? ಎಂಬ ಪ್ರಶ್ನೆ ಉದ್ಭವಿಸಲು ಪೂಜ್ಯಪಾದರು ಅದಕ್ಕೆ ಸಮಾಧಾನ ರೂಪವಾಗಿ

> ಬ್ರಹ್ಮಾದ್ಯಾಃ ಕಿಂ ನು ಕುರ್ವಂತಿ ದೇವತಾಃ ಕರ್ಮಮಾರ್ಗಗಾಃ ।
> ಕರ್ಮಾತೀತಪದಸ್ಥಸ್ಯ ಸ್ವಯಂ ಬ್ರಹ್ಮಸ್ವರೂಪಿನಃ ॥
>
> (ಸಿ.ಶಿ. ೧೫–೬೯)

ಹೀಗೆ ನಿರೂಪಿಸಿದ್ದಾರೆ. ಈ ಪರಸ್ಥಲದ ಶಿವಯೋಗಿಯು ತಾನೇ ಪರಬ್ರಹ್ಮಸ್ವರೂಪನಾಗಿ ರೋಣದರಿಂದ ಅವನು ಈ ಲೌಕಿಕ ಕರ್ಮಸ್ಥಾನಕ್ಕಿಂತಲೂ ಅತೀತವಾದ ಉತ್ಕೃಷ್ಟ ಸ್ಥಾನದಲ್ಲಿ ಇರೋಣದರಿಂದ ಕರ್ಮದ ಅಧಿಪತಿಗಳಾದ ಬ್ರಹ್ಮಾದಿದೇವತೆಗಳು ಇವನಿಗೆ ಏನನ್ನು ಮಾಡಲು ಸಮರ್ಥರಾಗರು, ಏಕೆಂದರೆ ಈ ದೇವತೆಗಳೆಲ್ಲ ಪರಬ್ರಹ್ಮದ ಅಧೀನವಾದವರಾಗಿರುತ್ತಾರೆ. ಈ ಶಿವಯೋಗಿಯು ಪರಬ್ರಹ್ಮಸ್ವರೂಪನಾಗಿರೋಣದ ರಿಂದ ಈತನು ಕರ್ಮಕಾಂಡದ ನೇಮಗಳನ್ನು ಪರಿಪಾಲನೆಮಾಡದೇ ಇದ್ದರೂ ಅವರು ಇವನ ಮೇಲೆ ಯಾವುದೇ ಕ್ರಮವನ್ನು ತೆಗೆದುಕೊಳ್ಳಲು ಸಮರ್ಥರಾಗಿರುವುದಿಲ್ಲ.

ಈ ಪೂರ್ವೋಕ್ತನಾದ ಪರಸ್ಥಲ ಶಿವಯೋಗಿಯೇ ಸರ್ವರ ಅಜ್ಞಾನವನ್ನೇ ದೂರಮಾಡಿ ಅವರೆಲ್ಲರಿಗೆ ಮುಕ್ತಿಯನ್ನು ದಯಪಾಲಿಸಲು ಸಾಮರ್ಥ್ಯವುಳ್ಳವ ನಾಗಿರುತ್ತಾನೆ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪುನಃ

> ಸ್ವೇಚ್ಛಯಾ ಸಂಚರೇದ್ ಯೋಗಿ ವಿಮುಂಚನ್ ದೇಹಮಾನಿತಾಮ್ ।
> ದರ್ಶನೈಃ ಸ್ಪರ್ಶನೈಃ ಸರ್ವಾನಜ್ಞಾನಪಿ ವಿಮೋಚಯೇತ್ ॥
>
> (ಸಿ.ಶಿ. ೧೫–೭೦)

ಈ ವಿಧವಾಗಿ ಉಪದೇಶಿಸಿದ್ದಾರೆ. ದೇಹಾಭಿಮಾನವನ್ನು ತ್ಯಜಿಸಿದ ಈ ಶಿವಯೋಗಿಯು ಈ ಜಗತ್ತಿನಲ್ಲಿ ತನ್ನ ಇಚ್ಛೆಗೆ ಬಂದ ಹಾಗೆ ಎಲ್ಲ ಕಡೆಗೆ ಸಂಚರಿಸುತ್ತ ಕೆಲವರನ್ನು ತನ್ನ ದೃಷ್ಟಿ ಪ್ರಕ್ಷೇಪದಿಂದ, ಮತ್ತೆ ಕೆಲವರನ್ನು ಹಸ್ತ ಸ್ಪರ್ಶದಿಂದ ಉದ್ಧಾರಗೈಯುತ್ತ

ಎಲ್ಲರನ್ನೂ ಮುಕ್ತರನ್ನಾಗಿ ಮಾಡುತ್ತಾನೆ. ಇಂತಹ ಅಲೌಕಿಕವಾದ ಶಕ್ತಿಸಾಮರ್ಥ್ಯವನ್ನು ಪಡೆದ ಈ ಶಿವಯೋಗಿಯ ಮೇಲೆ ಮತ್ತಾರ ಶಾಸನವೂ ಇರುವುದಿಲ್ಲ ಎಂಬುದಾಗಿ ಶ್ರೀಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಅಭಿಪ್ರಾಯಪಟ್ಟಿದ್ದಾರೆ.

''ನಿರಂಜನಃ ಪರಮಂ ಸಾಮ್ಯಮುಪೈತಿ ದಿವ್ಯಮ್''

ಎಂಬ ಶ್ರುತಿ ವಚನದಂತೆ ಪರಸ್ಥಲಸಂಪನ್ನನಾದ ಈ ಶಿವಯೋಗೀಶ್ವರನು ಪರಿಪೂರ್ಣವಾದ ಶಿವಭಾವನೆಯನ್ನು ಹೊಂದಿರೋಣದರಿಂದ ಅವನು ಜೀವನ್ಮುಕ್ತನೇ ಆಗಿರುತ್ತಾನೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು ಕೊನೆಯದಾಗಿ

ನಿತ್ಯೇ ನಿರ್ಮಲಭಾವನೇ ನಿರುಪಮೇ ನಿರ್ಧೂತ ವಿಶ್ವಭ್ರಮೇ
ಸತ್ತಾನಂದಚಿದಾತ್ಮಕೇ ಪರಶಿವೇ ಸಾಮ್ಯಂ ಗತಃ ಸಂಯಮೀ ।
ಪ್ರಧ್ವಸ್ತಾಶ್ರಮವರ್ಣಧರ್ಮನಿಗಲಃ ಸ್ವಚ್ಛಂದ ಸಂಚಾರವಾನ್
ದೇಹೀ ವಾಗದ್ಭುತವೈಭವೋ ವಿಜಯತೇ ಜೀವನ್ವಿಮುಕ್ತಃ ಸುಧೀಃ ॥

(ಸಿ.ಶಿ. ೧೫–೭೧)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಪರಸ್ಥಲದ ಶಿವಯೋಗಿಯು ನಿತ್ಯವೂ ನಿರ್ಮಲಸ್ವರೂಪವೂ, ಉಪಮಾತೀತವೂ, ಸರ್ವದೋಷರಹಿತವೂ, ಸಚ್ಚಿದಾನಂದ ಸ್ವರೂಪವೂ ಆದ ಪರಶಿವನೊಂದಿಗೆ ಸಾಮಾನ್ಯವಸ್ಥೆಯನ್ನು ಹೊಂದಿದವನಾಗಿ ವರ್ಣಾಶ್ರಮಗಳ ಕಟ್ಟಳೆಗಳನ್ನು ಕಳಚಿ ಹಾಕಿ, ತಾನು ಸರ್ವತಂತ್ರ ಸ್ವತಂತ್ರನಾಗಿ, ಸರ್ವತ್ರ ಸಂಚರಿಸುವವನಾಗಿ, ದೇಹವನ್ನು ಧರಿಸಿಕೊಂಡಿದ್ದರೂ ಅದ್ಭುತವಾದ ಯೋಗ ಸಾಮರ್ಥ್ಯವನ್ನು ಹೊಂದಿದವನಾಗಿ, ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸುತ್ತ, ಸರ್ವೋತ್ಕೃಷ್ಟನಾಗಿ ವಿರಾಜಿಸುತ್ತಾನೆ.

ಈ ಗ್ರಂಥದಲ್ಲಿ ಬಂದಿರುವ ಸ್ವಯ–ಚರ–ಪರಸ್ಥಲಗಳೆಂದರೆ ಒಬ್ಬನೇ ಆದ ಶಿವಯೋಗಿಯ ಉತ್ತರೋತ್ತರಗಳಾದ ಉತ್ಕೃಷ್ಟ ಅವಸ್ಥೆಗಳೆಂದು ತಿಳಿದುಕೊಳ್ಳಬೇಕು. ಈ ಅವಸ್ಥೆಯ ಚರಮ ಸ್ಥಿತಿಯೇ ಪರಸ್ಥಲವು. ಈ ಸ್ಥಿತಿಯನ್ನು ತಲುಪಿದ ಶಿವಯೋಗಿಯು ಸರ್ವತಂತ್ರ ಸ್ವತಂತ್ರನಾಗಿರೋಣದರಿಂದ ಇವನ ಮೇಲೆ ವರ್ಣಾಶ್ರಮದ ಯಾವ ನಿಬಂಧನೆಗಳೂ ಇರುವುದಿಲ್ಲ. ಈತನು ಮನಸ್ಸಿಗೆ ಬಂದರೆ ಒಂದೇ ಸ್ಥಾನದಲ್ಲಿ ಕುಳಿತಿರಬಹುದು. ಇಲ್ಲವಾದರೆ ಇಚ್ಛೆ ಬಂದ ಕಡೆಗೆ ಸಂಚರಿಸುತ್ತಾನೆ. ಈತನ ಕೃಪಾದೃಷ್ಟಿ ಯಾರ ಮೇಲೆ ಬೀಳುವುದೋ ಅಥವಾ ಯಾರಿಗೆ ಈತನ ಸ್ಪರ್ಶವಾಗುವುದೋ ಅವರೂ ಸಹ ವಿಲಕ್ಷಣವಾದ ಆನಂದವನ್ನು ಪಡೆಯುವರೆಂಬುದಾಗಿ ತಿಳಿಯಪಡಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ. ಇಲ್ಲಿಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಹದಿನೈದನೆಯ ಪರಿಚ್ಛೇದವು ಪರಿಪೂರ್ಣವಾದುದು.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ''
ಗ್ರಂಥದ ಪಂಚದಶ ಪರಿಚ್ಛೇದವು ಪೂರ್ಣವಾದುದು.

ದಿನಾಂಕ ೧೭ ಆಗಷ್ಟ್ ೧೯೯೨
(ಕೈ. ಭಿಕೂಬಾಯಿ ಮೇನಕುದಳೆ, ಮಂಗಲ ಕಾರ್ಯಾಲಯ, ಪುಣೆ.)



ಆಶೀರ್ವಚನ-೧

# ಷೋಡಶ ಪರಿಚ್ಛೇದ

ಶ್ರೀ ಕಾಶೀ ಮಹಾ ಕ್ಷೇತ್ರದಲ್ಲಿ ಶ್ರಾವಣ ಮಾಸದ ನಿಮಿತ್ತವಾಗಿ ಆಯೋಜಿತವಾದ ಇಂದಿನ ಧರ್ಮಸಭೆಯಲ್ಲಿ ಉಪಸ್ಥಿತರಿರುವ ಕಾಶೀ ವೀರಶೈವ ವಿದ್ವತ್ ಸಂಘದ ಸಮಸ್ತವಿದ್ಯಾರ್ಥಿಗಳೇ ! ಹಾಗೂ ಯಾತ್ರಾರ್ಥವಾಗಿ ಬಂದಿರುವ ಭಕ್ತಮುಮುಕ್ಷುಗಳೇ!

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್ ಸ್ಥಲದಲ್ಲಿ ಬರುವ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಇಂದಿನಿಂದ ಆಶೀರ್ವಚನವನ್ನು ಪ್ರಾರಂಭಿಸುತ್ತಿದ್ದೇವೆ. ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯು ಶ್ರೀ ಜಗದ್ಗುರು ರೇಣುಕ ಭಗವತ್ಪಾದರನ್ನು ಉದ್ದೇಶಿಸಿ–

ಸ್ಥಲಾನಾಂ ನವಕಂ ಪ್ರೋಕ್ತಂ ಭಕ್ತಸ್ಥಲ ಸಮಾಶ್ರಯಮ್ ।
ಮಾಹೇಶ್ವರ ಸ್ಥಲೇಸಿದ್ಧಂ ಸ್ಥಲ ಭೇದಂ ವದಸ್ವ ಮೇ ॥

(ಸಿ. ಶಿ. ೧೬–೧)

ಈ ರೀತಿಯಾಗಿ ಪ್ರಶ್ನೆ ಮಾಡುತ್ತಾನೆ. ತಾತ್ಪರ್ಯವೇನೆಂದರೆ– ಈ ಪೂರ್ವದ ಭಕ್ತಸ್ಥಲದಲ್ಲಿ ದೀಕ್ಷಾಗುರುಸ್ಥಲವನ್ನೇ ಮೊದಲು ಮಾಡಿಕೊಂಡು ಪರಸ್ಥಲ ಪರ್ಯಂತವಾದ ಒಂಭತ್ತು ಅವಾಂತರ ಸ್ಥಲಗಳ ಬಗ್ಗೆ ತಾವು ಅಪ್ಪಣೆಕೊಡಿಸಿದ್ದೀರಿ. ಆದರೆ ಮುಂದಿನದಾದ ಮಾಹೇಶ್ವರ ಸ್ಥಲದಲ್ಲಿ ಎಷ್ಟು ಅವಾಂತರ ಸ್ಥಲಗಳಿವೆ ? ಅವುಗಳ ಹೆಸರುಗಳೇನು? ಎಂಬುದರ ಬಗ್ಗೆ ಅಪ್ಪಣೆ ಕೊಡಿಸಬೇಕು.

ಅಗಸ್ತ್ಯ ಮಹರ್ಷಿಯ ಈ ಪ್ರಶ್ನೆಗೆ ಉತ್ತರ ರೂಪವಾಗಿ ಪೂಜ್ಯಪಾದರು–

ಮಾಹೇಶ್ವರ ಸ್ಥಲೇ ಸಂತಿ ಸ್ಥಲಾನಿ ನವ ತಾಪಸ ।
ಕ್ರಿಯಾಗಮಸ್ಥಲಂ ಪೂರ್ವಂ ತತೋ ಭಾವಾಗಮಸ್ಥಲಮ್ ॥

ಜ್ಞಾನಾಗಮಸ್ಥಲಂ ಚಾಥ ಸಕಾಯಸ್ಥಲ ಮೀರಿತಮ್ ।
ತತೋಽ ಕಾಯಸ್ಥಲಂ ಪ್ರೋಕ್ತಂ ಪರಕಾಯಸ್ಥಲಂ ತತಃ ॥

ಧರ್ಮಾಚಾರಸ್ಥಲಂ ಚಾಥ ಭಾವಾಚಾರಸ್ಥಲಂ ತತಃ ॥
ಜ್ಞಾನಾಚಾರ ಸ್ಥಲಂ ಚೇತಿ ಕ್ರಮಾದೇಷಾಂ ಭಿದೋಚ್ಯತೇ ॥

(ಸಿ. ಶಿ. ೧೬, ೨–೪)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಅವರ ಅಪ್ಪಣೆ ಪ್ರಕಾರ ಲಿಂಗ ಷಟ್‌ಸ್ಥಲಾಂತರ್ಗತವಾದ ಈ ಮಾಹೇಶ್ವರ ಸ್ಥಲದಲ್ಲಿಯೂ ಕ್ರಿಯಾಗಮಸ್ಥಲ, ಭಾವಾಗಮಸ್ಥಲ, ಜ್ಞಾನಾಗಮಸ್ಥಲ, ಸಕಾಯಸ್ಥಲ, ಅಕಾಯಸ್ಥಲ, ಪರಕಾಯಸ್ಥಲ, ಧರ್ಮಾಚಾರಸ್ಥಲ, ಭಾವಾಚಾರಸ್ಥಲ ಮತ್ತು ಜ್ಞಾನಾಚಾರಸ್ಥಲವೆಂಬುದಾಗಿ ಒಂಭತ್ತು ಅವಾಂತರಸ್ಥಲಗಳಿರುತ್ತವೆ. ಕ್ರಮವಾಗಿ ಇವುಗಳ ಲಕ್ಷಣ ಹಾಗೂ ಸ್ವರೂಪದ ಬಗ್ಗೆ ವಿವರಿಸಲಾಗುವುದು. ಇವುಗಳಲ್ಲಿ ಮೊದಲನೆಯದಾದ ಸ್ಥಲವೇ ಕ್ರಿಯಾಗಮ ಸ್ಥಲವು. ಇಲ್ಲಿ ಕ್ರಿಯಾ ಎಂದರೆ ಪೂಜಾ ರೂಪವಾದ ಕರ್ಮವು, ಆಗಮವೆಂದರೆ ಅದರ ವಿಧಿವಿಧಾನವನ್ನು ಪ್ರತಿಪಾದಿಸುವ ಶಾಸ್ತ್ರವು, ಅಂದಹಾಗೆ ಪೂಜಾ ವಿಷಯಕವಾದ ವಿಧಿಯನ್ನು ಪ್ರತಿಪಾದಿಸುವ ಸ್ಥಲವೇ ಕ್ರಿಯಾಗಮ ಸ್ಥಲವು. ಇದನ್ನೇ ಪೂಜ್ಯಪಾದರು–

> ಶಿವೋಹಿ ಪರಮ ಃ ಸಾಕ್ಷಾತ್ ಪೂಜಾ ತಸ್ಯಕ್ರಿಯೋಚ್ಯತೇ ।
> ತತ್ಪರಾ ಆಗಮಾ ಯಸ್ಮಾತ್ ತದುಕ್ತೋऽಯಂ ಕ್ರಿಯಾಗಮಃ ॥
>
> (ಸಿ.ಶಿ. ೧೬–೫)

ಹೀಗೆ ಅಪ್ಪಣೆ ಕೊಡಿಸಿದ್ದಾರೆ, ಈ ಪೂರ್ವದಲ್ಲಿ ಹೇಳಿದ ಪರಸ್ಥಲದ ಶಿವಯೋಗಿಯೂ ಸಾಕ್ಷಾತ್ ಶಿವರೂಪನೇ ಆಗಿರುತ್ತಾನೆ. ಆ ಶಿವಯೋಗಿಯಿಂದ ಮಾಡಲ್ಪಡುವ ಇಷ್ಟಲಿಂಗಾದಿ ಪೂಜೆಯೇ ಕ್ರಿಯೆಯೆಂದು ಕರೆಯಿಸಿಕೊಳ್ಳುತ್ತದೆ.

ಅಂತಪ್ಪ ಕ್ರಿಯೆಯು ಲೋಕದ ಜನರಿಗೆ ಅನುಸರಣೀಯವಾಗಿರುತ್ತದೆ. ಈ ಕ್ರಿಯೆಯ ಬಗ್ಗೆ ತಿಳಿಸುವ ಶಾಸ್ತ್ರಕ್ಕೆ ಆಗಮವೆನ್ನುವರು. ಈ ಸ್ಥಲದಲ್ಲಿ ಕ್ರಿಯೆಯ ಬಗ್ಗೆ ಪ್ರತಿಪಾದಿಸಲ್ಪಟ್ಟಿರೋಣದರಿಂದ ಇದಕ್ಕೆ ಕ್ರಿಯಾಗಮ ಸ್ಥಲವೆಂದು ಕರೆದಿದ್ದಾರೆ. ಅಂದರೆ ಜೀವನ್ಮುಕ್ತನಾದ ಶಿವಯೋಗಿಯಿಂದ ಆಚರಿಸಲ್ಪಡುವ ಇಷ್ಟಲಿಂಗ ಪೂಜಾದಿ ವಿಷಯವನ್ನು ತಿಳಿಯಪಡಿಸುವ ಸ್ಥಲವೇ ಕ್ರಿಯಾಗಮಸ್ಥಲವೆಂದು ತಿಳಿದುಕೊಳ್ಳಬೇಕು.

ವೀರಶೈವ ಸಿದ್ಧಾಂತದಲ್ಲಿ ಕೇವಲ ಜ್ಞಾನವೊಂದಕ್ಕೇನೇ ಪ್ರಾಧಾನ್ಯತೆಯನ್ನು ಕೊಡದೆ ಅದರ ಜೊತೆಗೆ ಇಷ್ಟಲಿಂಗ ಪೂಜಾದಿ ರೂಪವಾದ ಕ್ರಿಯೆಗೂ ಸಹ ಪ್ರಾಧಾನ್ಯತೆ ಯನ್ನು ಕೊಡಲಾಗಿದೆ. ಅಂದರೆ ಮುಕ್ತಿಗಾಗಿ ಜ್ಞಾನ ಕರ್ಮಗಳ ಸಮ ಸಮುಚ್ಚಯ ಸಿದ್ಧಾಂತವನ್ನು ಸ್ವೀಕರಿಸಲಾಗಿದೆ. ಆದ್ದರಿಂದ ಜೀವನ್ಮುಕ್ತನಾದ ಶಿವಯೋಗಿಯೂ ಸಹ ತನ್ನ ಆಯುಷ್ಯವಿರುವವರೆಗೆ ಇಷ್ಟಲಿಂಗ ಪೂಜಾದಿ ಸತ್ಕರ್ಮಗಳನ್ನು ಮಾಡುತ್ತಲೇ ಇರಬೇಕು. ಏಕೆಂದರೆ ಜಗತ್ತಿನಲ್ಲಿರುವ ಅದೆಷ್ಟೋ ಸಾಮಾನ್ಯ ಜೀವಿಗಳು ದೊಡ್ಡವರ ಆಚರಣೆಯನ್ನು ಅನುಕರಿಸಲು ಪ್ರಯತ್ನಿಸುತ್ತಾರೆ. ಒಂದು ವೇಳೆ ಜ್ಞಾನಿಗಳಾದವರೂ ಸತ್ಕ್ರಿಯಾ ವಿಮುಖ ರಾದರೆ ಸಾಮಾನ್ಯ ಜನತೆಯೂ ಸಹ ಸತ್ಕರ್ಮ ಹೀನರಾಗಿ ದುರ್ಮಾರ್ಗಿಗಳಾಗುವ ಸಂಭವವಿರುತ್ತದೆ. ಅಂತೆಯೇ ಲೋಕಕಲ್ಯಾಣಕ್ಕಾಗಿ ಮತ್ತು ಲೋಕಸಂಗ್ರಹಕ್ಕಾಗಿ ಜ್ಞಾನಿಗಳೂ ಸಹ ಶಾಸ್ತ್ರೋಕ್ತಗಳಾದ ಕರ್ಮಗಳನ್ನು ಆಚರಿಸುತ್ತಿರಬೇಕೆಂಬುದು ವೀರಶೈವ ಆಚಾರ್ಯರ ಅಭಿಪ್ರಾಯವಾಗಿದೆ. ಅಂತೆಯೇ ಈ ಕ್ರಿಯಾಗಮ ಸ್ಥಲದಲ್ಲಿ ಜೀವನ್ಮುಕ್ತ ರಾದ ಶಿವಯೋಗಿಯಿಂದ ಆಚರಿಸಲ್ಪಡುವ ಕ್ರಿಯೆಗಳ ಬಗ್ಗೆ ಪ್ರತಿಪಾದಿಸಲಾಗಿದೆ.

ಪೂಜ್ಯ ಪಾದರು ಆ ಪೂಜಾಕ್ರಿಯೆಯ ಮಹತ್ತ್ವವನ್ನು ವಿವರಿಸುತ್ತ–

ಪ್ರಕಾಶತೇ ಯಥಾ ನಾಗ್ನಿರರಣ್ಯಾಂ ಮಥನಂ ವಿನಾ ।
ಕ್ರಿಯಾಂ ವಿನಾ ತಥಾಂ ತಸ್ಥೋ ನ ಪ್ರಕಾಶೋ ಭವೇಚ್ಛಿವ ಃ ॥

(ಸಿ. ಶಿ. ೧೬–೬)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅರಣಿ ಮಂಥನವನ್ನು ಮಾಡದೆ ಅಗ್ನಿಯು ಪ್ರಕಟವಾಗದಿರುವಂತೆ ಶಾಸ್ತ್ರೋಕ್ತವಾದ ಶಿವಪೂಜಾದಿ ಕ್ರಿಯೆಗಳನ್ನು ಮಾಡದೆ ತನ್ನೊಳಗಿನ ಶಿವನ ಪ್ರಾಕಟ್ಯತೆಯು ಆಗುವದಿಲ್ಲ. ಪ್ರಾಚೀನ ಕಾಲದಲ್ಲಿ ಯಜ್ಞಕ್ಕಾಗಿ ಅಗ್ನಿಯನ್ನು ಉತ್ಪನ್ನ ಮಾಡಬೇಕಾದರೆ ಅರಣಿ ಮಂಥನವನ್ನು ಮಾಡುತ್ತಿದ್ದರು. ಎರಡು ಶಮೀಕಟ್ಟಿಗೆಗಳನ್ನು ಅರ್ಥಾತ್ ಎರಡು ಬನ್ನಿಯ ಕಟ್ಟಿಗೆಗಳನ್ನು ಒಂದಕ್ಕೊಂದು ಮಸೆಯುವ ಕ್ರಿಯೆಗೆ ಅರಣಿ ಮಂಥನವೆನ್ನುವರು. ಹಿಂದಿನ ಕಾಲದಲ್ಲಿ ಇಷ್ಟೊಂದು ಪರಿಶ್ರಮಿಸಿ ಅಗ್ನಿಯನ್ನು ಪ್ರಕಟಿಸಬೇಕಾಗುತ್ತಿತ್ತು. ಇಂದಿನ ವಿಜ್ಞಾನ ಯುಗದಲ್ಲಿ ಕಡ್ಡಿಯ ಡಬ್ಬಿ, ಲೈಟರ್ ಮುಂತಾದ ಅಲ್ಪಾಯಾಸದ ಅಗ್ನಿ ಉತ್ಪಾದಕ ಸಾಮಗ್ರಿಗಳು ಲಭ್ಯವಾಗುತ್ತಿವೆ.

ಅಗ್ನಿ ತತ್ತ್ವವು ವ್ಯಾಪಕವಾಗಿ ಸರ್ವತ್ರ ವಿದ್ಯಮಾನವಾಗಿದ್ದರೂ ಅದು ಪ್ರಕಟವಾಗ ಬೇಕಾದರೆ ಎರಡು ವಸ್ತುಗಳ ಘರ್ಷಣೆರೂಪೀಕ್ರಿಯೆಯು ಅವಶ್ಯವಾಗಿ ಬೇಕೇಬೇಕು. ಇದೇ ಪ್ರಕಾರವಾಗಿ ಪ್ರತಿಯೊಬ್ಬ ವ್ಯಕ್ತಿಯ ಹೃದಯದಲ್ಲಿ ಹಾಗೂ ವಿಶ್ವದ ತುಂಬೆಲ್ಲ ಪರಮಾತ್ಮನ ನಿತ್ಯನಿವಾಸವಿದ್ದರೂ, ಆತನ ಪ್ರಾಕಟ್ಯತೆಯು ಪೂಜಾರೂಪಿ ಕ್ರಿಯೆಯನ್ನು ಮಾಡದೆ ಸಂಭವಿಸಲಾರದು. ಅಂತೆಯೇ ಜ್ಞಾನದಷ್ಟೇ ಕ್ರಿಯೆಯೂ ಸಹ ಮಹತ್ತ್ವವನ್ನು ಪಡೆದಿರುವುದಾಗಿದೆ. ಇಷ್ಟಲಿಂಗ ಪೂಜಾರೂಪವಾದ ಬಾಹ್ಯ ಕ್ರಿಯೆಯು ಅಂತರ್ಲಿಂಗದ ಚಿಂತನೆಗೆ ಸಹಾಯಕವಾಗುತ್ತದೆ. ಹೊರಗಿನ ಈ ಕ್ರಿಯೆಯು ಒಳಗಿನ ಅಂತಃಕರಣವನ್ನು ಪರಿಪಕ್ವಗೊಳಿಸುತ್ತದೆ. ಅಂತಃಕರಣವು ಪರಿಶುದ್ಧವಾದಾಗ ಅದರಿಂದಲೇ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅನುಸಂಧಾನವು ಸಂಭವಿಸುತ್ತದೆ. ಆದ್ದರಿಂದ ಸಾಧಕನ ಅಂತರ್ಮುಖ ಪ್ರವೃತ್ತಿಗೆ ಬಾಹ್ಯದ ಪೂಜಾರೂಪೀ ಕ್ರಿಯೆಯು ಸಹಾಯಕವಾಗಿದೆ ಯೆಂಬುದಾಗಿ ತಿಳಿದುಕೊಳ್ಳಬೇಕು.

ಈ ಇಷ್ಟಲಿಂಗ ಪೂಜಾರೂಪವಾದ ಬಾಹ್ಯಕ್ರಿಯೆಯನ್ನು ಹೇಗೆ ಆಚರಿಸಬೇಕು? ಎಂಬ ಪ್ರಶ್ನೆಯು ಉದ್ಭವಿಸಿದಾಗ ಪೂಜ್ಯಪಾದರು–

ನ ಯಥಾ ವಿಧಿಲೋಪಃ ಸ್ಯಾದ್ಯಥಾ ದೇವಃ ಪ್ರಸೀದತಿ ।
ಯಥಾಗಮಃ ಪ್ರಮಾಣಂ ಸ್ಯಾತ್ತಥಾಕರ್ಮ ಸಮಾಚರೇತ್ ॥

(ಸಿ. ಶಿ. ೧೬–೭)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಶಿವನಿಂದ ಉಪದೇಶಿಸಲ್ಪಟ್ಟ ಶಿವಾಗಮಗಳಲ್ಲಿ ಶಿವಾರ್ಚನೆಯನ್ನು ಹೀಗೆ ಆಚರಿಸಬೇಕೆಂಬುದಾಗಿ ಉಪದೇಶಿಸಲಾಗಿದೆ. ಅಲ್ಲಿ ಹೇಳಿದ ವಿಧಿ–ವಿಧಾನಗಳಿಗೆ ಲೋಪ ಬರದಂತೆ ಆಚರಿಸಬೇಕು. ಅಂದರೇನೇ ಶಿವನು

ಪ್ರಸನ್ನನಾಗುವನು. ಇಲ್ಲವಾದರೆ ಶಿವನ ಅವಕೃಪೆಗೆ ಪಾತ್ರನಾಗಬೇಕಾಗುತ್ತದೆ. ಆದ ಕಾರಣ ತಾನು ಜೀವನ್ಮುಕ್ತನಾದರೂ, ಆಗಮೋಕ್ತವಾದ ಪ್ರಮಾಣವನ್ನು ಅನುಸರಿಸಿ ಶಿವಪೂಜಾಕರ್ಮವನ್ನು ಆಚರಿಸಬೇಕು.

ಪೂಜಾ ವಿಧಾನವನ್ನು ಮಾಡುವಾಗ ಯೋಗ್ಯವಾದ ರೀತಿ ನೀತಿಗಳನ್ನು ಅನುಸರಿಸಿಯೇ ಮಾಡಬೇಕು. ಮನಸ್ಸಿಗೆ ಬಂದಂತೆ ಹೇಗೋ ಮಾಡಿ ಮುಗಿಸುವ ಗೊಡವೆಗೆ ಹೋಗಬಾರದು. ಹಾಗೇನಾದರೂ ಮಾಡಿದ್ದಾದರೆ ಆ ಮಾಡಿದ ಕರ್ಮವು ಬಲಹೀನವಾಗುತ್ತದೆ. ಅಡಿಗೆಯನ್ನು ಮಾಡುವಾಗ ಪಾತ್ರೆಯಲ್ಲಿ ಯಾವ ಯಾವ ಪದಾರ್ಥಗಳನ್ನು ಯಾವಾಗ ಯಾವಾಗ ಹಾಕಬೇಕು ಎನ್ನುವುದರ ಒಂದು ಪದ್ಧತಿ ಯಿರುತ್ತದೆ. ಆ ಪದ್ಧತಿಗನುಸಾರವಾಗಿ ಮಾಡಿದಾಗ ಸ್ವಾದಿಷ್ಟವಾದ ಭೋಜನವು ತಯಾರಾಗುವುದಲ್ಲದೆ ಉಂಡವನಿಗೆ ಸಂತೃಪ್ತಿಯು ಸಹ ಆಗುವುದು. ಇದಕ್ಕೆ ವಿಪರೀತ ವಾಗಿ ಮೊದಲು ಹಾಕುವ ಪದಾರ್ಥವನ್ನು ಕೊನೆಗೆ, ಕೊನೆಗೆ ಹಾಕಬೇಕಾದ ವಸ್ತುವನ್ನು ಮೊದಲು ಹಾಕಿದರೆ ಅಡಿಗೆಯ ರಚನೆಯು ಕೆಟ್ಟು, ಅದು ಗ್ರಾಹ್ಯವಾಗುವುದಿಲ್ಲ, ಕೊನೆಗೆ ಅದನ್ನು ಯಾರೂ ತಿನ್ನದೆ ಹಾಗೆಯೇ ಚೆಲ್ಲಿಬಿಡುವಂತಹ ಪ್ರಸಂಗವು ಹೇಗೆ ಬರುವುದೋ ಅದರಂತೆ ಪೂಜಾವಿಧಿಯನ್ನು ತಪ್ಪಿದ ಪೂಜೆಯೂ ಸಹ ನಿಷ್ಪ್ರಯೋಜಕ ವಾಗುವ ದೆಂಬುದಾಗಿ ತಿಳಿಯಬೇಕು.

ವೀರಶೈವ ಶಿವಪೂಜಾವಿಧಿಯಲ್ಲಿ ಎರಡು ವಿಧವಾದ ಪದ್ಧತಿಯು ಪ್ರತಿಪಾದಿ ಸಲ್ಪಟ್ಟಿದೆ. ಒಂದು ಸಂಕ್ಷಿಪ್ತ ಶಿವಪೂಜಾ ವಿಧಿಯಾದರೆ, ಇನ್ನೊಂದು ವೈದಿಕ ಶಿವಪೂಜಾ ವಿಧಿಯು. ಯಾರಿಗೆ ವೇಳೆಯ ಅಭಾವವಿದೆಯೋ ಅವರು ಕೊನೆಯ ಪಕ್ಷ ಸಂಕ್ಷಿಪ್ತ ಶಿವ ಪೂಜಾ ವಿಧಿಯಲ್ಲಿ ಹೇಳಲ್ಪಟ್ಟ ವಿಧಿವಿಧಾನದಂತೆ ಪೂಜೆಯನ್ನು ಮಾಡಬೇಕು. ಇನ್ನು ಯಾರಿಗೆ ಸಮಯವು ಸಾಕಷ್ಟು ಇದೆಯೋ ಅವರು ವೈದಿಕ ಶಿವಪೂಜಾವಿಧಿಯಲ್ಲಿ ಹೇಳಿದ ವಿಧಿವಿಧಾನಗಳಂತೆ ಪೂಜೆಯನ್ನಾಚರಿಸಿ ಮನಸ್ಸಿನ ಸಂತೃಪ್ತಿಯನ್ನು ಮಾಡಿಕೊಳ್ಳ ಬೇಕು. ಶಿವಾಗಮಗಳಲ್ಲಿ ಪಂಚೋಪಚಾರ, ಅಷ್ಟೋಪಚಾರ, ಷೋಡಶೋಪಚಾರ ಹಾಗೂ ರಾಜೋಪಚಾರವೆಂಬುದಾಗಿಯೂ ಉಪಚಾರದ ವಿಧಿಯನ್ನು ನಾಲ್ಕು ಪ್ರಕಾರವಾಗಿ ಹೇಳಿದ್ದನ್ನು ಸಹ ಕಾಣಬಹುದು. ಈ ವಿಧಿಗಳಲ್ಲಿ ಯಾವುದು ಯಾರಿಗೆ ಅನುಕೂಲವೋ ಆ ವಿಧಿಯನ್ನು ಅವರವರು ಆಚರಿಸಬೇಕು. ಒಟ್ಟಿನಲ್ಲಿ ವಿಧಿವಿರಹಿತ ವಾದ ಪೂಜೆಯನ್ನು ಯಾರೂ ಮಾಡಬಾರದು.

ಈ ವಿಧಿವಿಧಾನಗಳ ಜೊತೆಗೆ ಭಾವನೆಯೂ ಸಹ ಅವಶ್ಯವಾದುದು. ನಾವು ಅನೇಕ ಉಪಚಾರಗಳಿಂದ ಪೂಜೆ ಮಾಡುತ್ತಿದ್ದರೂ ಆ ದೇವರಲ್ಲಿ ಭಕ್ತಿಭಾವನೆಗಳೇ ಇರದೆ ಹೋದರೆ ದೇವರು ಪ್ರಸನ್ನವಾಗುವದಿಲ್ಲ, ಆದ್ದರಿಂದ ಆತನ ಪ್ರಸನ್ನತೆಯನ್ನು ಪ್ರಾಪ್ತಿ ಮಾಡಿಕೊಡುವ ಭಾವನೆಯೂ ಸಹ ಇಲ್ಲಿ ಬೇಕೆಂಬುದಾಗಿ ತಿಳಿದುಕೊಳ್ಳಬೇಕು. ಹಾಗಾದರೆ ಭಾವನೆಯೊಂದಿದ್ದರೆ ಸಾಕಲ್ಲ! ಈ ಉಪಚಾರಗಳ ಗೊಡವೆ ಏಕೆ ? ಎಂಬ ಪ್ರಶ್ನೆಯೂ ಸಹ ಉದ್ಭವಿಸಬಹುದು. ಈ ಉಪಚಾರಗಳು ನಮ್ಮ ಭಾವನೆಯನ್ನು

ಭಗವಂತನಿಗೆ ಬಹಳ ಹೊತ್ತಿನವರೆಗೆ ಹಿಡಿದಿಡಲು ಸಹಾಯಕವಾಗಿರುತ್ತವೆ. ಆದ್ದರಿಂದ ಭಾವನೆಯೊಂದಿದ್ದರೆ ಸಾಲದು ಉಪಚಾರಗಳೂ ಸಹ ಬೇಕೆಬೇಕು. ಮನೆಗೆ ಬಂದ ಅತಿಥಿಯನ್ನು ಗೌರವದಿಂದ ಬರಮಾಡಿಕೊಂಡು ಆಸನದ ಮೇಲೆ ಕೂಡ್ರಿಸಿ ಅವನಿಗೆ ಯಾವುದೇ ಉಪಚಾರವನ್ನು ಮಾಡದೆ ಕೇವಲ ಭಾವನಾತ್ಮಕವಾಗಿ ನಾವು ನಿಮ್ಮನ್ನು ಬಹಳ ಪ್ರೀತಿಸುತ್ತೇವೆ. ನಿಮ್ಮನ್ನು ನೋಡಿ ನಮ್ಮ ಹೊಟ್ಟೆ ತುಂಬಿ ಹೋಗಿದೆ. ಮುಂತಾದ ಪ್ರೀತಿಯ ಮಾತುಗಳನ್ನು ಮಾತಾಡಿದ ಮಾತ್ರಕ್ಕೆ ಅತಿಥಿಗೆ ಸಂತೋಷವಾಗುವುದಿಲ್ಲ. ಅವನಿಗೆ ನಿಮ್ಮ ಭಾವನೆಯ ಜೊತೆಗೆ ಉಪಚಾರವೂ ಸಹ ಹೇಗೆ ಬೇಕಾಗುವುದೋ ಹಾಗೆ ಶಿವನಿಗೂ ಸಹ ಭಾವನೆಯೊಂದಿಗೆ ಉಪಚಾರಗಳೂ ಸಹ ಅವಶ್ಯವಾಗಿ ಬೇಕೇಬೇಕು. ಆದರೆ ಇಲ್ಲಿರುವ ಸ್ವಲ್ಪ ವ್ಯತ್ಯಾಸವೇನೆಂದರೆ ಅತಿಥಿಯಾದವನು ತನಗೆ ದೊರೆತ ಉಪಚಾರದ ಸಾಮಗ್ರಿಗಳನ್ನು ತಾನೇ ಉಪಯೋಗಿಸುತ್ತಾನೆ. ಆದರೆ ಶಿವನಿಗೆ ಅರ್ಪಿಸಿದ ಯಾವ ಉಪಚಾರದ ವಸ್ತುಗಳನ್ನೂ ಶಿವನು ಉಪಭೋಗಿಸದೇ ಅವುಗಳನ್ನು ನಿರ್ಮಾಲ್ಯವನ್ನಾಗಿಸಿ ಅಥವಾ ಪ್ರಸಾದವನ್ನಾಗಿಸಿ ತನ್ನನ್ನು ಪೂಜಿಸಿದವರಿಗೇನೇ ಮರಳಿ ದಯಪಾಲಿಸುತ್ತಾನೆ. ಹೀಗೆ ಶಿವಸಮರ್ಪಿತವಾಗಿ ಬಂದ ಆ ಪ್ರಸಾದವು ಮನಸ್ಸಿನ ಪ್ರಸನ್ನತೆಗೆ ಕಾರಣೀಭೂತವಾಗೋಣದರಿಂದ ನಾವು ಸಮರ್ಪಿಸಿದ ಉಪಚಾರಗಳ ಅವಶ್ಯಕತೆಯು ಸ್ವತಃ ಶಿವನಿಗೆ ಇರದೇ ಇದ್ದರೂ ಶಿವಪೂಜಕನಿಗೆ ಅವು ಪರಮಾವಶ್ಯಕ ವಾದವುಗಳು. ಆದ್ದರಿಂದ ಶಿವಪೂಜೆಯಲ್ಲಿ ಉಪಚಾರಗಳ ಬಳಕೆಯನ್ನು ಸ್ವಶಕ್ತ್ಯಾನುಸಾರ ವಾಗಿ ಪ್ರತಿಯೊಬ್ಬರು ಮಾಡಬೇಕು. ಹೀಗೆ ವಿಧಿಲೋಪವಾಗದಂತೆ ಆಗಮ ಪ್ರಮಾಣ ವನ್ನನುಸರಿಸಿ ಶಿವನು ಪ್ರಸನ್ನನಾಗುವ ಹಾಗೆ ಶಿವಪೂಜಾ ಕರ್ಮವನ್ನು ಮಾಡಬೇಕೆಂಬು ದಾಗಿ ಪೂಜ್ಯರು ಆದೇಶಿಸಿದ್ದಾರೆ.

ಈ ಶಿವಪೂಜಾ ರೂಪವಾದ ಕರ್ಮವನ್ನು ಏಕೆತಾನೆ ಮಾಡಬೇಕು? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯ ಪಾದರು ಪುನಃ–

> ವಿಧಿಃ ಶಿವನಿಯೋಗೋಽಯಂ ತಸ್ಮಾದ್ ವಿಹಿತಕರ್ಮಣಿ ।
> ಶಿವಾರಾಧನಬುದ್ಧ್ಯೈವನಿರತಃ ಸ್ಯಾದ್ ವಿಚಕ್ಷಣಃ ॥

(ಸಿ.ಶಿ ೧೭–೮)

ಈ ತೆರನಾಗಿ ಉಪದೇಶಿಸಿದ್ದಾರೆ. ಶಾಸ್ತ್ರವಿಹಿತಗಳಾದ ಕರ್ಮಗಳ ಬಗ್ಗೆ ಹೇಳಲ್ಪಟ್ಟ ವಿಧಿವಿಧಾನವು ಶಿವನ ಆಜ್ಞಾರೂಪವಾದುದು. ಆದ್ದರಿಂದ ಬುದ್ಧಿವಂತನಾದವನು ಶಿವನನ್ನು ಆರಾಧಿಸುವ ಬುದ್ಧಿಯಿಂದಲೇ ಆ ಕರ್ಮಗಳಲ್ಲಿ ಆಸಕ್ತನಾಗಬೇಕು. ಒಂದು ವೇಳೆ ಶಾಸ್ತ್ರೋಕ್ತವಿಧಿಯಂತೆ ಕರ್ಮಗಳನ್ನು ಆಚರಿಸದೇ ಹೋದರೆ ಶಿವಾಜ್ಞೆಯನ್ನು ಉಲ್ಲಂಘನೆ ಮಾಡಿದ ಅಪರಾಧದಿಂದಾಗಿ ಆತನು ನರಕಭಾಜನನಾಗುತ್ತಾನೆ. ಆದಕಾರಣ ಶಿವಾಜ್ಞೆಯನ್ನು ಪರಿಪಾಲಿಸುವ ದೃಷ್ಟಿಯಿಂದ ಶಾಸ್ತ್ರವಿಹಿತ ಕರ್ಮಗಳನ್ನು ಅವಶ್ಯವಾಗಿ ಮಾಡಬೇಕು.

ವಿಹಿತಕರ್ಮಗಳ ಬಗ್ಗೆ ಶಿವನ ವಿಧಿಯಾಜ್ಞೆ ಇರುವಂತೆ ನಿಷಿದ್ಧಕರ್ಮಗಳ ಬಗ್ಗೆ ನಿಷೇಧಾಜ್ಞೆಯೂ ಸಹ ಇರುತ್ತದೆ. ಕಾರಣ ''ಮಾ ಹಿಂಸ್ಯಾತ್ ಸರ್ವಾ ಭೂತಾನಿ, ನ ಕಲಂಜಂ ಭಕ್ಷಯೇತ್, ನ ಸುರಾಂ ಪಿಬೇತ್, ಸ್ವಾಧ್ಯಾಯಾನ್ಮಾ ಪ್ರಮದಃ,'' ಅಂದರೆ ಪ್ರಾಣಿ ಹಿಂಸೆಯನ್ನು ಮಾಡಬೇಡ, ಮಾಂಸವನ್ನು ಭಕ್ಷಿಸಬೇಡ ಮದ್ಯಪಾನವನ್ನು ಮಾಡಬೇಡ ಮತ್ತು ಸ್ವಾಧ್ಯಾಯವನ್ನು ತಪ್ಪಿಸಬೇಡ ಮುಂತಾದ ವೇದದಲ್ಲಿ ಬರುವ ಈ ಮಂತ್ರಗಳು ಶಿವನ ನಿಷೇಧಾಜ್ಞೆಗಳಿದ್ದಂತೆ, ಇವುಗಳ ಉಲ್ಲಂಘನೆಯೂ ಸಹ ಶಿವನ ಅವಕೃಪೆಗೆ ಕಾರಣೀಭೂತವಾಗುತ್ತದೆ.

ಶ್ರೀಮನ್ನಿಜಗುಣ ಶಿವಯೋಗಿಗಳೂ ಸಹ.........

ದುರಿತಕರ್ಮವನೊಲ್ಲದಿರು। ಪುಣ್ಯವನೆ ಮಾಡು।
ಹರನಡಿವಿಡಿ। ಶಾಂತರೊಡನಾಡು।
ಕರುಣವಿರಲಿ ಜೀವರೊಳು। ನೀತಿವಿದನಾಗು।
ಪೊರೆ ಪೊರ್ದಿದರನೆಂದು ಬೆಸಸುವ ॥
ನಿಂದಿಸಿ ನುಡಿಯದಿರಾರನು। ಮನಸ್ಸಿಗೆ ಬಂದಂತೆ
ನಡೆಯದಿರಿಹದಲ್ಲಿ ಕುಂದವಡೆಯದಿರು।
ಕಾಮಾದಿಗಳನು ಜಯಿಸೆಂದು
ಕೈವಿಡಿದನುಗ್ರಹಿಸುವ ॥

ತಮ್ಮ ''ಕೈವಲ್ಯ ಪದ್ಧತಿ''ಯ ಈ ಮೇಲಿನ ಪದ್ಯಗಳಲ್ಲಿ ಶಿವನ ವಿಧಿನಿಷೇಧಾಜ್ಞೆಗಳೆರಡನ್ನೂ ಕ್ರೋಢೀಕರಿಸಿ ಉಪದೇಶಿಸಿದ್ದಾರೆ. ಇದೇ ಪ್ರಕಾರ–

ಕಳಬೇಡ, ಕೊಲಬೇಡ; ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ;
ತನ್ನ ಬಣ್ಣಿಸಬೇಡ, ಇದಿರಹಳಿಯಲು ಬೇಡ;
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ।

ಎಂಬ ಈ ವಚನದಲ್ಲಿ ಶ್ರೀಬಸವಣ್ಣನವರು ಶಿವನ ನಿಷೇಧಾಜ್ಞೆಗಳನ್ನೇ ಸಂಗ್ರಹಿಸಿ ಉಪದೇಶಿಸಿದ್ದನ್ನು ಕಾಣುತ್ತೇವೆ.

ಆದ ಕಾರಣ ವಿಹಿತಕರ್ಮಗಳನ್ನು ಮಾಡು ಎಂಬ ವಿಧಿಯನ್ನೇ ಆಗಲಿ, ನಿಷಿದ್ಧಕರ್ಮಗಳನ್ನು ಮಾಡಬೇಡೆನ್ನುವ ನಿಷೇಧಾಜ್ಞೆಯನ್ನೇ ಆಗಲಿ ಪ್ರತಿಯೊಬ್ಬರು ಪಾಲಿಸಲೇಬೇಕು. ಅಂದಾಗಲೇನೇ ಸರ್ವರ ಜೀವನವು ಸುಖಮಯವಾಗುವುದು. ಇಲ್ಲವಾದರೆ ಶಿವಾಜ್ಞೆಯ ಉಲ್ಲಂಘನೆಯ ದೋಷದಿಂದಾಗಿ ಅನಂತ ದುಃಖವನ್ನು ಅನುಭವಿಸಬೇಕಾಗುವುದು. ಆದ್ದರಿಂದ ಶಿವಪೂಜಾ ರೂಪವಾದ ವಿಹಿತಕರ್ಮವು ಶಿವನ ವಿಧಿಮುಖ ಆದೇಶವಾದ್ದರಿಂದ ಪ್ರತಿಯೊಬ್ಬರು ಶಿವನಲ್ಲಿ ಹಾಗೂ ಶಿವನ ಆದೇಶದಲ್ಲಿ

ಶ್ರದ್ಧೆಯುಳ್ಳವರಾಗಿ ಅದನ್ನು ನಿಷ್ಠೆಯಿಂದ ಪರಿಪಾಲಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ಜುಲೈ, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಕ್ರಿಯಾಗಮಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಕಾಶೀ ಮಹಾಕ್ಷೇತ್ರದಲ್ಲಿ ಸಾಗಿಬಂದಿರುವ ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಈ ಸಲದ ಪ್ರಥಮ ಅವಾಂತರಸ್ಥಲವಾದ ಕ್ರಿಯಾಗಮಸ್ಥಲದ ಬಗ್ಗೆ ನಿನ್ನೆಯ ದಿನ ಕೆಲವು ಮಹತ್ತ್ವಪೂರ್ಣಗಳಾದ ವಿಷಯಗಳನ್ನು ಕುರಿತು ಶ್ರವಣ ಮಾಡಿದ್ದೀರಿ. ಇಂದು ಅದೇ ಸ್ಥಲದ ಅವಶಿಷ್ಟ ವಿಷಯಗಳ ಬಗ್ಗೆ ಪರ್ಯಾಲೋಚಿಸೋಣ.

ಇಷ್ಟಲಿಂಗ ಪೂಜೆಯು ವೀರಶೈವರ ಮುಖ್ಯವಾದ ಕ್ರಿಯೆಯು, ಎಂಬುದರ ಬಗ್ಗೆ ಈಗಾಗಲೇ ನೀವು ತಿಳಿದವರಾಗಿದ್ದೀರಿ. ಇನ್ನು ಆ ಶಿವಪೂಜೆಯನ್ನು ಹೇಗೆ ಮಾಡಬೇಕು ? ಹಾಗೂ ಅದನ್ನು ಮಾಡುವ ವಿಧಾನವನ್ನು ಯಾರಿಂದ ತಿಳಿದುಕೊಳ್ಳಬೇಕು? ಎಂಬ ಪ್ರಶ್ನೆಯು ಉದ್ಭವಿಸಿದಾಗ......

ಪೂಜ್ಯಪಾದರು.......

ಗುರೋರಾದೇಶಮಾಸಾದ್ಯ ಪೂಜಯೇತ್ ಪರಮೇಶ್ವರಮ್ ।
ಪೂಜಿತೇ ಪರಮೇಶಾನೇ ಪೂಜಿತಾಃ ಸರ್ವದೇವತಾಃ ॥

(ಸಿ. ಶಿ. ೧೬-೯)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ತಾನು ಮಾಡಬೇಕಾದ ಪೂಜೆಯ ವಿಧಿವಿಧಾನವನ್ನು ತನ್ನ ಗುರುವಿನಿಂದ ತಿಳಿದುಕೊಳ್ಳಬೇಕು. ಆತನಿಂದ ತಿಳಿದೇನೇ ಇಷ್ಟಲಿಂಗವನ್ನು ಪೂಜಿಸಬೇಕು. ಈ ಲಿಂಗ ಪೂಜೆಯೊಂದನ್ನು ಮಾಡಿದರೆ ಎಲ್ಲ ದೇವತೆಗಳ ಪೂಜೆಯನ್ನು ಮಾಡಿದಂತೆಯೇ ಎಂಬುದು ಪೂಜ್ಯರ ಆದೇಶದ ತಾತ್ಪರ್ಯವಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಸದ್ಗುರುಗಳು ಶಿಷ್ಯನಿಗೆ ದೀಕ್ಷಾ ಸಂಸ್ಕಾರವನ್ನು ಕೊಟ್ಟು ಅವನ ವಾಮಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿರಿಸಿ, ಮಹಾಮಂತ್ರವನ್ನು ಉಪದೇಶಿಸುತ್ತಾರೆ. ಇಷ್ಟು ಸಂಸ್ಕಾರವನ್ನು ಹೊಂದಿದ ಮೇಲೆಯೇ ಶಿವಪೂಜೆಯ ಅಧಿಕಾರವು ಶಿಷ್ಯನಿಗೆ ಪ್ರಾಪ್ತವಾಗುತ್ತದೆ. ಹೀಗೆ ಗುರುದೀಕ್ಷಾ ದೀಕ್ಷಿತನಾದ ಶಿಷ್ಯನು ಶಿವಪೂಜಾ

ವಿಧಿವಿಧಾನಗಳನ್ನು ಸಹ ತನ್ನ ಗುರುಮುಖದಿಂದಲೇ ಕೇಳಿ ತಿಳಿದುಕೊಳ್ಳಬೇಕು. ಶಿವಪೂಜಾ ಸಂಬಂಧವಾದ ಗ್ರಂಥಗಳು ಬೇರೆ ಬೇರೆಯವರಿಂದ ಸಂಪಾದಿಸಲ್ಪಟ್ಟಿರೋಣದರಿಂದ ಎಲ್ಲ ಪುಸ್ತಕಗಳಲ್ಲಿ ಒಂದೇ ಪದ್ಧತಿಯಿರದೆ ಕೆಲವೊಂದು ವ್ಯತ್ಯಾಸಗಳು ಕಂಡುಬರುತ್ತಿರುತ್ತವೆ. ಇಂಥ ಪ್ರಸಂಗದಲ್ಲಿ ಗ್ರಂಥ ಗ್ರಂಥಗಳ ವಿಚಾರವನ್ನು ತಿಳಿದು ಭ್ರಮಿತನಾಗುವುದಕ್ಕಿಂತ ಗುರುವಿನ ಆದೇಶದಂತೆ ನಡೆಯುವುದೇ ಹೆಚ್ಚು ಸೂಕ್ತವಾದುದು. ಗುರುವಿನ ನಿರ್ಣಯವೇ ಕೊನೆಯ ನಿರ್ಣಯವಾದ್ದರಿಂದ ಅವರ ನಿರ್ಣಯಾನುಸಾರವಾಗಿಯೇ ಇಷ್ಟಲಿಂಗ ಪೂಜೆಯನ್ನು ಮಾಡಬೇಕೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಈ ಜಗತ್ತಿನಲ್ಲಿ ಅನೇಕ ದೇವತೆಗಳಿರುವಾಗ ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ದೇವರ ಪೂಜಾದಿಗಳನ್ನು ಮಾಡುವ ಪದ್ಧತಿಯು ರೂಢಿಯಲ್ಲಿರುವಾಗ ಎಲ್ಲಾ ದೇವರನ್ನು ಬಿಟ್ಟು ಕೇವಲ ಇಷ್ಟಲಿಂಗ ಪೂಜೆಯೊಂದನ್ನೇ ಅದು ಹೇಗೆ ತಾನೆ ಮಾಡಲಾದೀತು? ಎಂಬ ಶಂಕೆಗೆ ಸಮಾಧಾನವಾಗಿ ಪೂಜ್ಯಪಾದರು........''ಪೂಜಿತೇ ಪರಮೇಶಾನೇ ಪೂಜಿತಾಃ ಸರ್ವದೇವತಾಃ'' ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವನೊಬ್ಬನನ್ನು ಪೂಜಿಸಿದರೆ ಎಲ್ಲ ದೇವರನ್ನೂ ಪೂಜಿಸಿದಂತೆಯೇ. ಏಕೆಂದರೆ ಶಿವನು ದೇವಾನುದೇವನಾಗಿರುವುದರಿಂದ ಎಲ್ಲ ದೇವರುಗಳು ಅವನಲ್ಲಿಯೇ ಸಮಾವೇಶಗೊಂಡಿರುತ್ತಾರೆ. ಇನ್ನೂ ಎಲ್ಲ ದೇವತೆಗಳು ಶಿವನನ್ನೇ ಪೂಜಿಸುತ್ತಿರುವಾಗ ಸಾಕ್ಷಾತ್ ಆ ಶಿವನನ್ನೇ ಪೂಜಿಸಿದ ಬಳಿಕ ಬೇರೆ ದೇವರ ಪೂಜೆಯ ಅವಶ್ಯಕತೆಯೇ ಅಲ್ಲಿ ಉಳಿಯುವುದಿಲ್ಲ. ''ಲಿಂಗ ಮಧ್ಯೇ ಜಗತ್ಸರ್ವಮ್'' ಎಂಬ ಉಕ್ತಿಗನುಸಾರವಾಗಿ ಸಚರಾಚರ ಪ್ರಪಂಚವೆಲ್ಲವೂ ಅರ್ಥಾತ್ ಚತುರ್ದಶಭುವನ ಬ್ರಹ್ಮಾಂಡಗಳೆಲ್ಲವೂ ಲಿಂಗದಲ್ಲಿಯೇ ಅಡಕವಾಗಿರೋಣದರಿಂದ ಅದೊಂದರ ಪೂಜೆಯನ್ನು ಮಾಡಿದಾಗ ಎಲ್ಲ ದೇವರ ಪೂಜೆಯು ಅದರಲ್ಲಿಯೇ ಅಂತರ್ಹಿತವಾಗುತ್ತದೆ ಎಂದು ತಿಳಿದುಕೊಳ್ಳಬೇಕು. ಆದ್ದರಿಂದ ಪೂಜ್ಯಪಾದರು ಗುರುವಿನ ಮಾರ್ಗದರ್ಶನದಂತೆ ಲಿಂಗಪೂಜೆಯೊಂದನ್ನೇ ಮಾಡಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಈ ಇಷ್ಟಲಿಂಗ ಪೂಜೆಯ ಫಲವಾವುದು ? ಎಂಬ ಜಿಜ್ಞಾಸೆಯುಂಟಾದಾಗ ಅದಕ್ಕೆ ಸಮಾಧಾನರೂಪವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು...........

ಸದಾ ಶಿವಾರ್ಚನೋಪಾಯ ಸಾಮಗ್ರೀವ್ಯಗ್ರಮಾನಸಃ ।
ಶಿವಯೋಗರತೋ ಯೋಗೀ ಮುಚ್ಯತೇ ನಾತ್ರಸಂಶಯಃ ॥

(ಸಿ. ಶಿ. ೧೭–೧೦)

ಈ ತೆರನಾಗಿ ಆದೇಶಿಸಿದ್ದಾರೆ. ಯಾವಾಗಲೂ ಶಿವಲಿಂಗಪೂಜೆಯ ಸಾಧನ ಸಾಮಗ್ರಿಗಳನ್ನು ಸಂಪಾದಿಸುವುದರಲ್ಲಿಯೇ ದತ್ತಚಿತ್ತನಾದ ಶಿವಯೋಗಿಯು ತಾನು ಮಾಡಿದ ಆ ಶಿವಪೂಜೆಯ ಫಲದಿಂದಾಗಿ ಸಾಂಸಾರಿಕ ಮಲ–ಮಾಯಾದಿ ಪಾಶದಿಂದ ಮುಕ್ತನಾಗುತ್ತಾನೆ ಇದರಲ್ಲಿ ಯಾವ ಸಂದೇಹವೂ ಇಲ್ಲವೆಂಬುದು ಪೂಜ್ಯರ ಆಶಯವಾಗಿದೆ.

ಶಿವಪೂಜೆಯೂ ಸಹ ಶಿವಯೋಗವೇ. ಶಿವಯೋಗವೆಂದರೆ ಶಿವನೊಂದಿಗೆ ಸಂಬಂಧವನ್ನು ಸ್ಥಾಪಿಸುವುದೆಂದರ್ಥ. ಇಷ್ಟಲಿಂಗವನ್ನು ಹಸ್ತಪೀಠದಲ್ಲಿ ಇರಿಸಿಕೊಂಡು ಅದನ್ನು ಏಕಾಗ್ರವಾದ ಮನಸ್ಸಿನಿಂದ ಪೂಜಿಸುವುದು ಮತ್ತು ಈ ಶಿವಪೂಜೆಗೆ ಬೇಕಾಗುವ ಸಾಮಗ್ರಿಗಳನ್ನು ಸಂಪಾದನೆ ಮಾಡುವುದು ಮುಂತಾದ ಸಂದರ್ಭಗಳಲ್ಲಿ ಮನಸ್ಸು ಸದಾ ಶಿವಧ್ಯಾನದಲ್ಲಿಯೇ ಲೀನವಾಗಿರುತ್ತದೆ. ಆದ್ದರಿಂದ ಇದೆಲ್ಲವೂ ಶಿವಯೋಗವೆಂದೇ ಭಾವಿಸಬೇಕು. ಹೀಗೆ ಶಿವಪೂಜೆಯಲ್ಲಿ ಹಾಗೂ ಶಿವಪೂಜಾ ಸಾಮಗ್ರಿಗಳನ್ನು ಸಂಪಾದಿಸುವುದರಲ್ಲಿ ಆಸಕ್ತವಾದ ಮನಸ್ಸುಳ್ಳವನು ಆ ಪುಣ್ಯದ ಪ್ರಭಾವದಿಂದ ಮುಕ್ತನಾಗುತ್ತಾನೆ. ಅರ್ಥಾತ್ ಶಿವಸ್ವರೂಪನೇ ಆಗುತ್ತಾನೆ. ಇದುವೇ ಶಿವಪೂಜೆಯ ಮುಖ್ಯವಾದ ಫಲವು.

''ಜ್ಞಾನಾದೇವ ತು ಕೈವಲ್ಯಂ ಋತೇ ಜ್ಞಾನಾನ್ನ ಮುಕ್ತಿ''. ಎಂಬ ಶ್ರುತಿಯಲ್ಲಿ ಮೋಕ್ಷಕ್ಕೆ ಜ್ಞಾನವೇ ಕಾರಣವೆಂಬುದಾಗಿ ಪ್ರತಿಪಾದಿತವಾಗಿರುವಾಗ ಶಿವಪೂಜಾ ಕರ್ಮದಿಂದ ಅದು ಹೇಗೆ ತಾನೆ ಮುಕ್ತಿಯು ಲಭಿಸಬಲ್ಲದು ? ಎಂಬ ಜಿಜ್ಞಾಸೆ ಯುಂಟಾದಾಗ ಕೇವಲ ಜ್ಞಾನವಾಗಲೀ, ಕೇವಲ ಕರ್ಮವಾಗಲೀ, ಮುಕ್ತಿಗೆ ಸಾಧನ ವಾಗಿರದೆ ಜ್ಞಾನಕರ್ಮಗಳೆರಡೂ ಸಾಧನೆಗಳಾಗಿವೆ ಎಂಬ ವಿಷಯವನ್ನು ಪ್ರತಿಪಾದಿಸ ಲೋಸುಗ ಪೂಜ್ಯಪಾದರು ಪುನಃ –

ಅಂಧಪಂಗುವದನ್ಯೋನ್ಯಸಾಪೇಕ್ಷೇ ಜ್ಞಾನಕರ್ಮಣಿ
ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ ತದ್ದ್ವಯಮಾಚರೇತ್ ||

(ಸಿ. ಶಿ. ೧೬–೧೧)

ಹೀಗೆ ಉಪದೇಶಿಸಿದ್ದಾರೆ. ಕುರುಡ ಹಾಗೂ ಕುಂಟ ಇವರೀರ್ವರೂ ಪರಸ್ಪರ ಸಹಕಾರವನ್ನು ಪಡೆದಾಗ ಯಾವುದೊಂದು ವಿಪತ್ತಿನಿಂದ ಪಾರಾಗಿ ಗಂತವ್ಯವನ್ನು ತಲುಪುವಂತೆ, ಮುಕ್ತಿಗೆ ಜ್ಞಾನಕರ್ಮಗಳೆರಡೂ ಸಾಪೇಕ್ಷಗಳಾಗಿರುತ್ತವೆ. ಆದಕಾರಣ ವೈರಾಗ್ಯ ಸಂಪನ್ನನೂ ಪರಾಪರ ಮುಕ್ತಿರೂಪವಾದ ಫಲವನ್ನು ಪಡೆಯಲೋಸುಗ ಜ್ಞಾನಕರ್ಮಗಳೆರಡನ್ನೂ ಆಚರಿಸಬೇಕು ಎಂಬುದು ಪೂಜ್ಯರ ಆಶಯವಾಗಿದೆ.

ವೀರಶೈವ ಆಚಾರ್ಯರು ಮುಕ್ತಿಗೆ ಜ್ಞಾನ ಕರ್ಮಗಳೆರಡನ್ನೂ ಕಾರಣಗಳ ನ್ನಾಗಿ ಒಪ್ಪಿದ್ದಾರೆ. ಅಂತೆಯೇ ಇಲ್ಲಿ ಅಂಧ–ಪಂಗುನ್ಯಾಯವನ್ನು ಸ್ವೀಕರಿಸಲಾಗಿದೆ. 'ಶಿವರಹಸ್ಯ' ಎಂಬ ಗ್ರಂಥದಲ್ಲಿ–

ನ ಕ್ರಿಯಾ ರಹಿತಂ ಜ್ಞಾನಂ ನ ಜ್ಞಾನರಹಿತಾಕ್ರಿಯಾ ।
ಅಪಶ್ಯನ್ನಂಧಕೋ ದಗ್ಧೋಽಗಚ್ಛನ್ ಪಂಗುಶ್ಚ ದಹ್ಯತೇ ॥

ಹೀಗೆ ಆ ಅಂಧ–ಪಂಗುನ್ಯಾಯವು ವಿವರಿಸಲ್ಪಟ್ಟಿದೆ. ತಾತ್ಪರ್ಯವೇನೆಂದರೆ ಕುರುಡ ಹಾಗೂ ಕುಂಟರೀರ್ವರು ಒಂದು ಅಡವಿಯಲ್ಲಿ ವಾಸವಾಗಿರುತ್ತಿದ್ದರು. ಆದರೆ ಇಬ್ಬರೂ ಸ್ವತಂತ್ರವಾಗಿದ್ದು ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಿದ್ದರು. ಇಬ್ಬರೂ ಕೂಡಿಕೊಂಡು ಒಂದು ಕೆಲಸವನ್ನು ಮಾಡುವ ಪ್ರಸಂಗವು ಅವರಿಗೆ ಬಂದಿರಲಿಲ್ಲ. ಒಂದಾನೊಂದು ದಿವಸ ಆ ಅಡವಿಗೆ ಬೆಂಕಿ ಹತ್ತಿ ಎಲ್ಲೆಡೆಗೆ ಧಗಧಗಿಸಿ

ಉರಿಯ ತೊಡಗಿತು. ಈ ದೃಶ್ಯವನ್ನು ಕಣ್ಣಿದ್ದರೂ ಹೆಳವನಾದ ಆ ವ್ಯಕ್ತಿಯು ನೋಡಿದನು. ಆಗ ತನ್ನ ಸಮೀಪದಲ್ಲಿರುವ ಕಾಲುಳ್ಳ ಕುರುಡನನ್ನು ಉದ್ದೇಶಿಸಿ ಹೇಳಿದ್ದೇನೆಂದರೆ, ಸದ್ಯಃ ನಾವೀರ್ವರೂ ಪ್ರಾಣಾಪಾಯದ ವಿಪತ್ತಿನಲ್ಲಿ ಸಿಲುಕಿಕೊಂಡಿದ್ದೇವೆ. ನಾವೀರ್ವರೂ ಒಬ್ಬೊಬ್ಬರಾಗಿ ಈ ವಿಪತ್ತಿನಿಂದ ಪಾರಾಗಲೂ ಸಾಧ್ಯವಾಗುವದಿಲ್ಲ. ನಾವೀರ್ವರೂ ಪರಸ್ಪರ ಸಹಕಾರವನ್ನು ಪಡೆದಾಗ ಸುರಕ್ಷಿತವಾಗಿ ಇಬ್ಬರೂ ಈ ವಿಪತ್ತಿನಿಂದ ಪಾರಾಗಬಹುದು. ಕುಂಟನ ಈ ಮಾತನ್ನು ಕೇಳಿದ ಕುರುಡನಿಗೆ ಇವನು ಹೇಳುವುದು ಸರಿಯೆನಿಸಿತು. ಆಗ ಈರ್ವರು ಪರಸ್ಪರ ಸಮೀಪಕ್ಕೆ ಬಂದು ಕುರುಡನು ಕುಂಟನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡನು. ಮೇಲೆ ಕುಳಿತುಕೊಂಡು ಹೆಳುವನು ತನ್ನ ಕಣ್ಣಿನಿಂದ ನೋಡುತ್ತ ಬೆಂಕಿಯಿಲ್ಲದ ದಿಕ್ಕಿನೆಡೆಗೆ ಹೀಗೆ ನಡೆ ಎಂದು ಮಾರ್ಗದರ್ಶನ ಮಾಡಿದಂತೆ ಇವನನ್ನು ಹೊತ್ತುಕೊಂಡು ಕುರುಡನು ಇವನ ನಿರ್ದೇಶದಂತೆ ಮುನ್ನಡೆಯುತ್ತ ಈರ್ವರೂ ಕೂಡಿ ಆ ದಾವಾನಲದಿಂದ ಪಾರಾಗಿ ಸುರಕ್ಷಿತ ಸ್ಥಾನವನ್ನು ತಲುಪಿದರು. ಒಂದು ವೇಳೆ ಹೀಗೆ ಮಾಡದೆ ಹೋಗಿದ್ದರೆ ಕಣ್ಣುಕಾಣದ ಕುರುಡನು ಸುಟ್ಟುಕೊಂಡು ಸಾಯುತ್ತಿದ್ದನಲ್ಲದೆ ಕಂಡರೂ ಓಡಿಹೋಗುವ ಸಾಮರ್ಥ್ಯವಿಲ್ಲದ ಹೆಳುವನೂ ಸಹ ದಹಿಸಿ ಹೋಗುತ್ತಿದ್ದನು. ಆದರೆ ಪರಸ್ಪರ ಸಹಕಾರದಿಂದ ಇಬ್ಬರೂ ಸುರಕ್ಷಿತವಾಗಿ ಬದುಕಿ ಕೊಂಡರು. ಇದುವೇ ಅಂಧ–ಪಂಗುನ್ಯಾಯವು.

ಈ ನ್ಯಾಯದಂತೆ ಕೇವಲ ಕರ್ಮದಿಂದಾಗಲೀ ಅಥವಾ ಕೇವಲ ಜ್ಞಾನ ದಿಂದಾಗಲೀ ಮುಕ್ತಿಯು ಲಭಿಸಲಾರದು. ಕರ್ಮವು ಕುರುಡನಿದ್ದಂತೆ, ಜ್ಞಾನವು ಕುಂಟನಿದ್ದಂತೆ. ಅವರೀರ್ವರೂ ಪರಸ್ಪರ ಸಹಕಾರವನ್ನು ಹೊಂದಿದಂತೆ ಶಿವಯೋಗ ಸಾಧಕನು ಜ್ಞಾನಕರ್ಮಗಳೆರಡನ್ನೂ ಆಚರಿಸಿದಾಗ ಮುಕ್ತಿಯೆಂಬ ಫಲವನ್ನು ಪಡೆದು ಕೊಳ್ಳುತ್ತಾನೆ ಆದ್ದರಿಂದ ಮುಕ್ತಿಗೆ ಇವೆರಡೂ ಪರಸ್ಪರ ಸಾಪೇಕ್ಷವೆಂಬುದಾಗಿ ಪ್ರತಿ ಯೊಬ್ಬರೂ ತಿಳಿದುಕೊಳ್ಳಬೇಕು.

ಜ್ಞಾನಸಿದ್ಧಿಯನ್ನು ಪಡೆದ ಜ್ಞಾನಿಗೆ ಕರ್ಮದ ಪ್ರಯೋಜನವಾದರೂ ಏನು ? ಎಂಬ ಪ್ರಶ್ನೆಯು ಉದ್ಭವಿಸಿದಾಗ ಪೂಜ್ಯಪಾದರು–

ಜ್ಞಾನೇ ಸಿದ್ಧೇಽ ಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೇ ।
ಫಲಾಭಿ ಸಂಧಿರಹಿತಂ ತಸ್ಮಾತ್ ಕರ್ಮ ನ ಸಂತ್ಯಜೇತ್ ॥

(ಸಿ.ಶಿ. ೧೬–೧೨)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಜ್ಞಾನ ಪ್ರಾಪ್ತಿಯಾದರೂ ಸಹ ಜ್ಞಾನಿಯಾದವನು ಕರ್ಮವನ್ನು ಮಾಡಲೇಬೇಕು. ತಮ್ಮ ತಮ್ಮ ಆಶ್ರಮೋಚಿತಗಳಾದ ವಿಹಿತಕರ್ಮ ಗಳನ್ನು ಪರಿತ್ಯಾಗ ಮಾಡಿದರೆ ಆತನು ಪತಿತನಾಗುತ್ತಾನೆ. ಆದ್ದರಿಂದ ಕರ್ಮದ ಫಲದಲ್ಲಿ ಆಸಕ್ತಿಯನ್ನು ಹೊಂದದೆ ನಿಷ್ಕಾಮಬುದ್ಧಿಯಿಂದ ಕರ್ಮವನ್ನು ಮಾಡುತ್ತಲೇ ಇರಬೇಕು. ಜ್ಞಾನವಿಲ್ಲದ ಕರ್ಮ ಮತ್ತು ಕರ್ಮವಿಲ್ಲದ ಜ್ಞಾನ ಇವೆರಡೂ ಸಾಮರ್ಥ್ಯಹೀನ ಗಳಾಗಿರುತ್ತವೆ. ಆದರೆ ಇವೆರಡೂ ಸೇರಿದಾಗ ಅಲ್ಲಿ ಫಲವನ್ನು ಕೊಡುವ ಸಾಮರ್ಥ್ಯವು ಪ್ರಾಪ್ತವಾಗುತ್ತದೆ. ''ನಹ್ಯೇಕ ಪಕ್ಷೋ ವಿಹಗಃಪ್ರಯಾತಿ'' ಎಂಬ ಉಕ್ತಿಗನುಸಾರವಾಗಿ

ಪಕ್ಷಿಯು ಆಕಾಶದಲ್ಲಿ ಸ್ವಚ್ಛಂದವಾಗಿ ಹಾರಾಡಬೇಕಾದರೆ ಅದಕ್ಕೆ ಎರಡು ರೆಕ್ಕೆಗಳು ಹೇಗೆ ಬೇಕಾಗುವುವೋ ಹಾಗೆ ಮುಕ್ತಿಯನ್ನು ಪಡೆಯಬೇಕಾದರೆ ಜ್ಞಾನಕರ್ಮಗಳೆರಡೂ ಅವಶ್ಯವಾಗಿ ಬೇಕೇಬೇಕು. ಕಾರಣ ಜ್ಞಾನಿಯಾದವನು ಸಹ ಇಷ್ಟಲಿಂಗ ಪೂಜಾರೂಪ ವಾದ ತನ್ನ ನಿತ್ಯ ಕರ್ಮವನ್ನು ಎಂದೂ ತ್ಯಜಿಸಕೂಡದು.

ಇನ್ನೂ ಕೊನೆಯದಾಗಿ ಈ ಕ್ರಿಯಾಗಮಸ್ಥಲವನ್ನು ಪೂರ್ಣಗೊಳಿಸುತ್ತ ಆಚಾರದ ಮಹತಿಯನ್ನು ಹಾಗೂ ಆಚಾರಯುಕ್ತವಾದ ಜ್ಞಾನವಿದ್ದಾಗಲೇನೇ ಶಿವನ ಕೃಪೆಯು ದೊರೆಯುವದೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು–

ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪ್ಯತೇ ।
ಆಚಾರ ಹೀನ ಃ ಪುರುಷೋ ಲೋಕೇ ಭವತಿ ನಿಂದಿತಃ ॥

ಜ್ಞಾನಾಚಾರಯುಕ್ತೇನ ಪ್ರಸೀದತಿ ಮಹೇಶ್ವರ ಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹ ಪಾತನಮ್ ॥

(ಸಿ. ಶಿ. ೧೬–೧೩–೧೪)

ಈ ವಿಧವಾಗಿ ಉಪದೇಶಿಸಿದ್ದಾರೆ. ಆಚರಣೆಯು ಎಲ್ಲರಿಗೂ ಒಂದು ಆಭರಣವಿದ್ದಂತೆ ಉತ್ತಮ ಆಚರಣೆಯಿಲ್ಲದ ವ್ಯಕ್ತಿಯು ಈ ಜಗತ್ತಿನಲ್ಲಿ ನಿಂದೆಗೆ ಪಾತ್ರನಾಗುತ್ತಾನೆ. ಆಚಾರ ಯುಕ್ತವಾದ ಜ್ಞಾನವಿದ್ದರೆ, ಶಿವನು ಪ್ರಸನ್ನನಾಗುವನು. ಆದ್ದರಿಂದ ಜ್ಞಾನಿಯಾದವನು ತನ್ನ ದೇಹಪಾತವಾಗುವವರೆಗೆ ಅರ್ಥಾತ್ ಮೃತ್ಯುಪರ್ಯಂತರವಾಗಿ ತನ್ನ ಉತ್ತಮ ಆಚರಣೆಯನ್ನು ಎಂದೂ ಬಿಡಕೂಡದೆಂಬುದೇ ಪೂಜ್ಯರ ಆಶಯವಾಗಿದೆ. ಜ್ಞಾನ ಮತ್ತು ಆಚರಣೆ ಇವೆರಡೂ ಪರಸ್ಪರ ಪೂರಕಗಳಾಗಿವೆ. ಜ್ಞಾನಕ್ಕೆ ಎಷ್ಟೊಂದು ಮಹತ್ವವಿದೆಯೋ ಅಷ್ಟೇ ಮಹತ್ವವು ಆಚರಣೆಗೂ ಇರುತ್ತದೆ. ಅಂತೆಯೇ ಪೂಜ್ಯಪಾದರು ಇಲ್ಲಿ ಆಚರಣೆಯನ್ನು ಆಭೂಷಣಕ್ಕೆ ಹೋಲಿಸಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯೂ ಅಲಂಕಾರ ಪ್ರಿಯನಾಗಿರುತ್ತಾನೆ. ತನ್ನ ಶರೀರವು ಸುಂದರವಾಗಿ ತೋರಬೇಕೆನ್ನುವ ಉದ್ದೇಶದಿಂದ ಬೆಲೆಬಾಳುವ ವಸ್ತ್ರ ಹಾಗೂ ಒಡವೆಗಳಿಂದ ಅದನ್ನು ಅಲಂಕರಿಸಲು ಪ್ರಯತ್ನಿಸುತ್ತಾನೆ. ಸ್ಥೂಲದೇಹವನ್ನು ನಾವು ಈ ಬಾಹ್ಯಗಳಾದ ವಸ್ತ್ರ ಆಭೂಷಣಾದಿಗಳಿಂದ ಅಲಂಕರಿಸ ಬಹುದು. ಆದರೆ ಇದರೊಳಗಿರುವ ಸೂಕ್ಷ್ಮ ದೇಹವನ್ನು ಸುಂದರಗೊಳಿಸಲು ಇವು ಯಾವುಗಳೂ ಪ್ರಯೋಜನಕಾರಿಯಾಗಲಾರವು. ನಮ್ಮ ಶುದ್ಧವಾದ ನಡತೆಯೇ ಅರ್ಥಾತ್ ಆಚರಣೆಯೇ ಆಭೂಷಣವು. ಅನಾಚಾರಿಯಾದ ಮನುಷ್ಯನು ಬಹಿರಂಗ ದಲ್ಲಿ ಅದೆಷ್ಟೇ ಬೆಲೆಬಾಳುವ ಆಭೂಷಣಗಳನ್ನು ಧರಿಸಿದ್ದರೂ ಲೋಕದಲ್ಲಿ ಅವನಿಗೆ ಮನ್ನಣೆ ದೊರೆಯದು. ಶಿವನ ದೇಹದ ಮೇಲೆ ಒಂದೂ ಆಭರಣವೇ ಇಲ್ಲ, ಇಷ್ಟೇ ಏಕೆ ಸರಿಯಾದ ವಸ್ತ್ರವೂ ಸಹ ಇಲ್ಲ. ಅಂತಲೇ ಅವನಿಗೆ ದಿಗಂಬರನೆಂದು ಕರೆದಿದ್ದಾರೆ. ದಿಗಂಬರನಾಗಿದ್ದರೂ ಅವನಷ್ಟು ಸುಂದರರು ಜಗತ್ತಿನಲ್ಲಿ ಬೇರೊಬ್ಬರಿಲ್ಲ. ಅಂತೆಯೇ ಅವನೊಬ್ಬನನ್ನು ಕುರಿತು, 'ಸತ್ಯಂ ಶಿವಂ ಸುಂದರಮ್' ಎಂದು ಕರೆಯಲಾಗಿದೆ.

ಶಿವನ ಭಾವನೆಗಳು ಸುಂದರಗಳು, ಲೋಕ ಕಲ್ಯಾಣಕಾರಿಗಳೂ ಆಗಿರೋಣದ ರಿಂದ ಅವನು ಸುಂದರವಾಗಿ ತೋರುವಂತೆ ವ್ಯಕ್ತಿಯು ಒಳ್ಳೆಯ ಆಚಾರಸಂಪನ್ನನಾದರೆ

ಅದುವೇ ಅವನ ಅಂತರಂಗ ಸೌಂದರ್ಯವನ್ನು ವರ್ಧಿಸಲು ಕಾರಣವಾಗುತ್ತದೆ. ನಶ್ವರಗಳಾದ ವಸ್ತ್ರ–ಆಭೂಷಣಾದಿ ಅಲಂಕಾರಗಳನ್ನು ಸಂಪಾದಿಸುವುದರಲ್ಲಿಯೇ ವ್ಯರ್ಥ ಜೀವನವನ್ನು ಕಳೆಯುವುದಕ್ಕಿಂತ ಉತ್ತಮ ಆಚಾರ–ವಿಚಾರಗಳೆಂಬ ಅಲಂಕಾರಗಳನ್ನು ಹೊಂದಿ ತಾನು ಆಚಾರಸುಂದರನಾಗಲು ಪ್ರಯತ್ನಿಸಬೇಕೆಂಬುದಾಗಿ ಪೂಜ್ಯರು ಇಲ್ಲಿ ಆದೇಶಿಸಿದ್ದಾರೆ.

ಶುಷ್ಕವಾದ ಜ್ಞಾನವನ್ನು ಪಡೆದ ಮಾತ್ರಕ್ಕೆ ಶಿವನ ಕೃಪೆಯು ಪ್ರಾಪ್ತವಾಗಲಾರದು. ಅವನ ಕೃಪೆಯನ್ನು ಪಡೆಯಬೇಕಾದರೆ ಸದಾಚಾರಯುಕ್ತನಾದ ಜ್ಞಾನಯುಳ್ಳವನಾಗಿರಬೇಕು. ಹಾಗಾದರೆ ಈ ಸದಾಚಾರವನ್ನು ಎಷ್ಟು ದಿನ ಪರಿಪಾಲಿಸಬೇಕು ? ಎಂಬ ಪ್ರಶ್ನೆಯುದ್ಭವಿಸಲು ಪ್ರಾಣವಿರುವವರೆಗೆ ಆಚಾರವನ್ನು ಬಿಡಕೂಡದೆಂಬುದಾಗಿ ಪೂಜ್ಯರ ಆದೇಶವಿರುತ್ತದೆ.

ಹೀಗೆ ಈ ಕ್ರಿಯಾಗಮ ಸ್ಥಲದಲ್ಲಿ ಕ್ರಿಯೆಯ ಮಹತ್ವವನ್ನು ವರ್ಣಿಸಲಾಗಿದೆ. ಇಷ್ಟಲಿಂಗ ಪೂಜೆಯು ವೀರಶೈವರ ಮುಖ್ಯಕ್ರಿಯೆಯಾಗಿರೋಣದರಿಂದ ಜ್ಞಾನವಾದರೂ ಸಹ ಇದನ್ನು ಆಮರಣಪರ್ಯಂತರವಾಗಿ ಪರಿಪಾಲಿಸಬೇಕು. ಅಂದಾಗಲೇನೇ ಶಿವನ ಪೂರ್ಣ ಕೃಪೆಯು ಪ್ರಾಪ್ತವಾಗುವುದು. ಈ ಜ್ಞಾನ ಮತ್ತು ಆಚರಣೆಗಳು ಮುಕ್ತಿ ದೊರೆಯಲು ಸಮಾನ ಕಾರಣಗಳಾಗಿರುತ್ತವೆ. ಒಂದು ಪಕ್ಷಿಗೆ ಎರಡು ರೆಕ್ಕೆಗಳು ಬೇಕಾಗಿರುವಂತೆ, ಒಂದು ರಥಕ್ಕೆ ಎರಡು ಗಾಲಿಗಳ ಅವಶ್ಯಕತೆ ಇರುವಂತೆ ಮುಕ್ತಿಗೆ ಜ್ಞಾನ–ಕರ್ಮಗಳೆರಡೂ ಅವಶ್ಯಕವಾಗಿರುತ್ತವೆ. ಕಾರಣ ಪ್ರತಿಯೊಬ್ಬರೂ ಇವೆರಡಕ್ಕೂ ಸಮಾನ ಮಾನ್ಯತೆಯನ್ನು ಕೊಟ್ಟು ಅವೆರಡನ್ನೂ ಸಂಪಾದಿಸಿ ಮುಕ್ತಿಯನ್ನು ಪಡೆಯುವರಾಗಿರೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೯ ಜುಲೈ, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಭಾವಾಗಮಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ ಶ್ರೀಮಹಾ ಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ನೆರವೇರುತ್ತಲಿವೆ. ಕಾಶಿಯು ಇದೊಂದು ಪವಿತ್ರವಾದ ಕ್ಷೇತ್ರವು. ಸದ್ಯಃ ಪ್ರಾರಂಭವಾದ ಶ್ರಾವಣಮಾಸವೂ ಸಹ ಅತ್ಯಂತ ಪಾವನವಾದುದು. ಇದರ ಜೊತೆಗೆ ಈ ಧರ್ಮ ಸಭೆಯಲ್ಲಿ ಸಮ್ಮಿಲಿತರಾದ ನಿಮ್ಮೆಲ್ಲರ ಭಾವನೆಗಳೂ ಸಹ ಪಾವನಗಳೇ ಆಗಿವೆ. ಹೀಗೆ ಪವಿತ್ರ ಕ್ಷೇತ್ರ, ಪವಿತ್ರಮಾಸ, ಭಕ್ತರ ಪವಿತ್ರಭಾವನೆಗಳೆಂಬ ತ್ರಿವೇಣಿ ಸಂಗಮವೇ ಇಲ್ಲಿ ಕೂಡಿದಂತಾಗಿದೆ. ನಮ್ಮ ದೃಷ್ಟಿಯಲ್ಲಿ ಇದುವೇ ಸರ್ವಶ್ರೇಷ್ಠವಾದ ಪ್ರಯಾಗವು. ಇಂಥ ಈ ಪ್ರಯಾಗದಲ್ಲಿ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕ್ರಿಯಾಗಮಸ್ಥಲದ ಬಗ್ಗೆ ಸವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ಇಂದು ಕ್ರಮ ಪ್ರಾಪ್ತವಾದ ಭಾವಾಗಮಸ್ಥಲದ ಬಗ್ಗೆ ವಿವರವಾಗಿ ವಿಶ್ಲೇಷಿಸೋಣ.

ಈ ಪೂರ್ವದಲ್ಲಿ ಹೇಳಲ್ಪಟ್ಟ ಕ್ರಿಯಾಗಮ ಸ್ಥಲದ ಸಾಧಕನ ಮನಸ್ಸಿನಲ್ಲಿ ಬರುವ ಭಾವನೆಗಳ ಬಗ್ಗೆ ಪ್ರತಿಪಾದಿಸುವ ಸ್ಥಲವೇ ಭಾವಾಗಮ ಸ್ಥಲವು. ''ಭಾವೋ ಮಾನಸ ಚೇಷ್ಟಾತ್ಮಾ ಪರಿಪೂರ್ಣಃ ಶಿವಾತ್ಮಕ ಃ'' ಎಂಬ ಪೂಜ್ಯಪಾದರ ಆದೇಶದ ಮೇರೆಗೆ ಸಂಪೂರ್ಣ ಶಿವಮಯವಾದ ಮನೋವೃತ್ತಿಗೇನೇ ಭಾವ ಅಥವಾ ಭಾವನೆ ಎಂಬುದಾಗಿ ಕರೆಯುತ್ತಾರೆ. ಯಾವುದೇ ಕ್ರಿಯೆಯನ್ನು ಮಾಡಬೇಕಾದರೆ ಅದರ ಜೊತೆಗೆ ಭಾವನೆಯೂ ಸಹ ಬೇಕಾಗುತ್ತದೆ. ಅಂತೆಯೇ 'ಕ್ರಿಯಾಗಮಸ್ಥಲ' ಮುಗಿದೊಡನೆ ಪೂಜ್ಯರು ಭಾವಾಗಮ ಸ್ಥಲವನ್ನು ಪ್ರಾರಂಭಿಸಿದ್ದಾರೆ. ಈ ಸ್ಥಲದ ಬಗ್ಗೆ ಅಪ್ಪಣೆ ಕೊಡಿಸುತ್ತಾ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭಾವಚಿಹ್ನಾನಿ ವಿದುಷೋ ಯಾನಿಸಂತಿ ವಿರಾಗಿಣಃ ।
ತಾನಿ ಭಾವಾಗಮತ್ವೇನ ವರ್ತಂತೇ ಸರ್ವದೇಹಿನಾಮ್ ॥

(ಸಿ. ಶಿ. ೧೬–೧೫)

ಹೀಗೆ ಉಪದೇಶಿಸಿದ್ದಾರೆ. ಈ ಪೂರ್ವದಲ್ಲಿ ಹೇಳಿದ ನಿಷ್ಕಾಮ ಕರ್ಮಿಯಾದ ಶಿವಯೋಗಿಯ ಮನಸ್ಸಿನಲ್ಲಿಯಾವ ಭಾವನೆಗಳು ಉದಯಿಸುತ್ತವೆಯೋ ಆ ಭಾವನೆಗಳು ಉಳಿದ ಸಾಮಾನ್ಯ ಜನರಿಗೂ ಸಹ ಅನುಕರಣೀಯಗಳಾಗಿರುತ್ತವೆ. ಅಂತೆಯೇ ಆ

ಶಿವಯೋಗಿಯ ಭಾವನೆಗಳನ್ನು ಕುರಿತು ಉಪದೇಶಿಸಲ್ಪಡುವ ಈ ಸ್ಥಲಕ್ಕೆ ಭಾವಾಗಮ ಸ್ಥಲವೆಂದು ಕರೆಯಲಾಗಿದೆ. ''ಯಂ ಯಥೋಪಾಸತೇ ತದೇವ ಭವತಿ'' ಎಂಬ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹಾಗೂ ''ಶಿವಭಾವಾನುಸಂಧಾನಾಚ್ಛಿವೋ ಭಾವೇ ಪ್ರಕಾಶತೇ'' ಎಂಬ 'ಯೋಗಜ ಆಗಮ'ದ ಈ ಮಂತ್ರದಲ್ಲಿ ಭಾವನೆಯ ಬಗ್ಗೆ ಪ್ರತಿಪಾದಿಸಲಾಗಿದೆ. ಯಾರು ಯಾವುದನ್ನು ಹೇಗೆ ಉಪಾಸನೆಗೈಯ್ಯುತ್ತಾರೆಯೋ ಅವರು ಅದೇ ಆಗುತ್ತಾರೆ. ಶಿವನನ್ನು ಭಾವನಾಪೂರ್ವಕವಾಗಿ ಸದಾ ಚಿಂತನೆಗೈಯ್ಯುತ್ತಿದ್ದರೆ ಆತನು ನಮ್ಮ ಭಾವನೆಯಲ್ಲಿ ಪ್ರಕಟವಾಗುವನು. ಹೀಗೆ ಉಪನಿಷತ್ ಹಾಗೂ ಆಗಮ ಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಇದನ್ನು ಆಧಾರವಾಗಿಟ್ಟುಕೊಂಡೇ ಪೂಜ್ಯಪಾದರು ಈ ಭಾವಾಗಮಸ್ಥಲವನ್ನು ಪ್ರಾರಂಭಿಸಿದ್ದಾರೆ. ಈ ಸ್ಥಲದ ವಿಷಯ ವಸ್ತುವನ್ನೇ ಸ್ಪಷ್ಟಪಡಿಸ ಲೋಸುಗ ಪೂಜ್ಯರು ಪುನಃ –

ಶಿವೋಽಹಮಿತಿ ಭಾವೋಽಪಿ ಶಿವತಾಪತ್ತಿ ಕಾರಣಮ್ ।
ನ ಜ್ಞಾನಮಾತ್ರಂ ನಾಚಾರೋ ಭಾವಯುಕ್ತಃ ಶಿವೋ ಭವೇತ್ ॥

(ಸಿ. ಶಿ. ೧೬–೧೬)

ಈ ವಿಧವಾಗಿ ಆದೇಶಿಸಿದ್ದಾರೆ. ಶಿವಯೋಗಿಯ ಮನಸ್ಸಿನಲ್ಲಿ ನಿರಂತರವಾಗಿ 'ಶಿವೋಽಹಂ' ಅರ್ಥಾತ್ ನಾನು ಶಿವನಿದ್ದೇನೆ ಎಂಬ ಭಾವನೆಯು ಉದಿಸುತ್ತಿದ್ದರೆ ಅದರಿಂದಲೇ ತನ್ನಲ್ಲಿ ಶಿವತ್ವವು ಪ್ರಾಪ್ತವಾಗುವುದು. ಈ ಭಾವನೆಯ ಹೊರತಾಗಿ ಕೇವಲ ಶುಷ್ಕವಾದ ಶಿವಜ್ಞಾನದಿಂದಾಗಲೀ ಅಥವಾ ಕೇವಲ ಸದಾಚಾರದಿಂದಲೇ ಶಿವತ್ವವು ಪ್ರಾಪ್ತಿಯಾಗುವ ದಿಲ್ಲ. ಆದ್ದರಿಂದಲೇ ಶಿವತ್ವವನ್ನು ಪಡೆಯಲು ಶಿವಯೋಗಿಯು ಶಿವಭಾವನೆಯಿಂದ ಯುಕ್ತನಾಗಿರಬೇಕು.

ಶಿವತ್ತ್ವವನ್ನು ಪಡೆಯುವುದು ಸರ್ವಜೀವರ ಜೀವನದ ಪರಮ ಧ್ಯೇಯವಾಗಿದೆ. ಸಂಸಾರದಲ್ಲಿಯ ಎಲ್ಲ ಭೋಗೋಪಭೋಗಗಳನ್ನು ಅನುಭವಿಸಿ ಇದೆಲ್ಲವೂ ನಿಸ್ಸಾರ ವೆಂಬುದಾಗಿ ತಿಳಿದುಬಂದಾಗ ಜೀವಿಯು ಶಿವನ ಕಡೆಗೆ ಸಮ್ಮುಖನಾಗುತ್ತಾನೆ. ಆಗ ಶಿವಧ್ಯಾನಾದಿಗಳನ್ನು ಮಾಡಿ ಶಿವತ್ತ್ವವನ್ನು ಪಡೆಯುವ ಉದ್ದೇಶದಿಂದ ಗುರುಸಾನ್ನಿಧ್ಯಕ್ಕೆ ಹೋಗಿ ಪ್ರಾರ್ಥಿಸಿಕೊಂಡಾಗ ಗುರುವರ್ಯರು ಇವನಲ್ಲಿಯ ಸಂಸಾರವಿಮುಖತೆ ಯನ್ನು ಕಂಡು ಜ್ಞಾನಕ್ಕೆ ಯೋಗ್ಯನೆಂಬುದಾಗಿ ತಿಳಿದು ತತ್ತ್ವಮಸಿ ಎಂಬ ಮಹಾ ವಾಕ್ಯವನ್ನು ಉಪದೇಶಿಸುತ್ತಾರೆ. ಅಂದರೆ ನಿನ್ನಾತ್ಮವೇ ಪರಮಾತ್ಮಸ್ವರೂಪವಾಗಿದೆ. ಅದುವೇ ಪರಮಾನಂದ ರೂಪವಾದುದು ಮುಂತಾಗಿ ಉಪದೇಶಮಾಡಲು ಶಿಷ್ಯನ ಮನಸ್ಸಿನಲ್ಲಿ 'ಶಿವೋಽಹಂ' ನಾನು ಶಿವನಿದ್ದೇನೆ ಎಂಬ ಭಾವನಾತ್ಮಕವಾದ ವೃತ್ತಿಯು ಉತ್ಪನ್ನವಾಗುವುದು. ಈ ಭಾವನೆಯನ್ನೇ ನಿರಂತರವಾಗಿ ಅನುಸಂಧಾನಮಾಡಿದಾಗ ಆತನು ಶಿವರೂಪನೇ ಆಗುತ್ತಾನೆ. ಈ ಭಾವನೆಯನ್ನು ಹೊರತುಪಡಿಸಿ ಕೇವಲ ಶಿವಜ್ಞಾನ ಹಾಗೂ ಕೇವಲ ಶಿವಪೂಜಾ ರೂಪವಾದ ಕರ್ಮವು ಈ ಶಿವತ್ತ್ವಪ್ರಾಪ್ತಿಗೆ ಸಾಧನಗಳಾಗಲಾರವು. ಅಂತೆಯೇ ಈ ಶಿವೋಽಹಂ ಭಾವನೆಯಿಂದ ಯುಕ್ತನಾಗಿರ ಬೇಕೆಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ.

ಇನ್ನು ಜ್ಞಾನ ಹಾಗೂ ಭಾವನೆಗಳಲ್ಲಿ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸುತ್ತ ಪೂಜ್ಯರು ಪುನಃ –

ಜ್ಞಾನಂ ವಸ್ತು ಪರಿಚ್ಛೇದೋ ಧ್ಯಾನಂ ತದ್ಭಾವಕಾರಣಮ್ ।
ತಸ್ಮಾದ್ ಜ್ಞಾತೇ ಮಹಾದೇವೇ ಧ್ಯಾನಯುಕ್ತೋ ಭವೇತ್ ಸುಧೀಃ ॥
(ಸಿ. ಶಿ. ೧೬–೧೭)

ಈ ತೆರನಾಗಿ ಉಪದೇಶಿಸಿದ್ದಾರೆ. ಜ್ಞಾನವು ವಸ್ತುವಿನ ಸ್ವರೂಪವನ್ನು ತಿಳಿಸಿಕೊಡುತ್ತದೆ. ಆದರೆ ಧ್ಯಾನವು ಅರ್ಥಾತ್ ಭಾವನೆಯು ತದಾಕಾರ ಚಿಂತನೆಯನ್ನು ಮಾಡಲು ಸಹಾಯಕವಾಗುತ್ತದೆ. ಪರಮಾತ್ಮನು ಸಚ್ಚಿದಾನಂದ ರೂಪನಾಗಿದ್ದಾನೆ ಎಂಬ ಬೋಧೆಯನ್ನು ಕೇಳಿದಾಗ ಪರಮಾತ್ಮನ ಆ ಸ್ವರೂಪದ ಬಗ್ಗೆ ಜ್ಞಾನವುಂಟಾಗುತ್ತದೆ. ಅವನ ಆ ಸ್ವರೂಪ ಜ್ಞಾನಮಾತ್ರದಿಂದ ನಮಗೆ ಅದಾವ ವಿಶೇಷವಾದ ಆನಂದವು ಆಗುವುದಿಲ್ಲ. ಆದರೆ ಆ ಶಿವನನ್ನು ತನ್ನ ಅಂತರಾತ್ಮದೊಂದಿಗೆ ತಾದಾತ್ಮ್ಯಾನು ಸಂಧಾನವನ್ನು ಮಾಡಿದಾಗ ಆ ವ್ಯಕ್ತಿಯ ಮನಸ್ಸಿನಲ್ಲಿ ಶಿವತ್ತ್ವ ಭಾವನೆಯು ಒಡಮೂಡಿ ಒಂದು ವಿಲಕ್ಷಣವಾದ ಆನಂದಾನುಭೂತಿಯು ಉಂಟಾಗುವುದು.

ಒಂದು ಬೆಲೆಬಾಳುವ ಉಂಗುರವನ್ನು ಒಬ್ಬ ವ್ಯಕ್ತಿಯ ಮುಂದಿರಿಸಿ ಇಗೋ ನೋಡು ಈ ಉಂಗುರವು ಹೇಗೆ ಕಾಣುತ್ತಿದೆ ಎಂಬುದಾಗಿ ಕೇಳಲು ಆ ವ್ಯಕ್ತಿಯು ಅದನ್ನು ಕೈಯಲ್ಲಿ ತೆಗೆದುಕೊಂಡು, ಅತ್ತಿತ್ತ ಹೊರಳಿಸಿ ನೋಡಿ ಈ ವಜ್ರದ ಉಂಗುರವು ಬಹಳೇ ಸುಂದರವಾಗಿದೆ ಎಂಬುದಾಗಿ ತಾನು ತಟಸ್ಥನಾಗಿದ್ದು ತನಗುಂಟಾದ ಅದರ ಜ್ಞಾನವನ್ನು ವ್ಯಕ್ತಪಡಿಸುತ್ತಾನೆ. ಆದರೆ ಈ ಉಂಗುರವನ್ನು ನಿನಗಾಗಿಯೇ ತಂದಿದ್ದೇವೆ ಸ್ವೀಕರಿಸು ಎಂದು ಕೈಗಿತ್ತಾಗ ಆ ಉಂಗುರದೊಂದಿಗೆ ಸ್ವತ್ವರೂಪವಾದ ತಾದಾತ್ಮ್ಯ ಭಾವನೆಯನ್ನು ತಿಳಿದಾಗ ಅವನ ಮನಸ್ಸಿನಲ್ಲಿ ಒಂದು ವಿಲಕ್ಷಣವಾದ ಆನಂದಾನುಭೂತಿಯು ಉಂಟಾಗಿ ಒಂದು ಕ್ಷಣದಲ್ಲಿ ಅವನ ಮುಖವು ಕಮಲದಂತೆ ಅರಳಿ ಪ್ರಸನ್ನಮುದ್ರೆಯಲ್ಲಿ ಆತನು ಕಂಗೊಳಿಸಲಾರಂಭಿಸುತ್ತಾನೆ. ಪೂರ್ವದಲ್ಲಿ ಉಂಗುರದ ಬರೀ ಜ್ಞಾನಮಾತ್ರ ಆಗಿತ್ತು, ಆಗ ಅವನ ಮುಖದಲ್ಲಿ ಅದಾವ ಆನಂದಸ್ಫೂರ್ತಿಯ ಚಿಹ್ನೆಗಳು ಕಂಡುಬರಲಿಲ್ಲ, ಆ ವಸ್ತುವು ತನ್ನದೆಂಬ ಭಾವನೆಯು ಮನಸ್ಸಿನಲ್ಲಿ ಒಡಮೂಡಿದೊಡನೆಯೇ ಎಷ್ಟೊಂದು ಬದಲಾವಣೆಯು ಆಯಿತು ನೋಡಿದಿರಾ? ಹೀಗೆಯೇ ಶಿವಜ್ಞಾನ ಹಾಗೂ ಶಿವಭಾವನೆಗಳಲ್ಲಿರುವ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು. ಶಿವಜ್ಞಾನವನ್ನು ಪಡೆದ ನಂತರ ಶಿವ ಭಾವನೆಯಿಂದ ಯುಕ್ತನಾದಾಗಲೇ ಅವನಿಗೆ ತೃಪ್ತಿ–ಸಂತೃಪ್ತಿಗಳು ಉಂಟಾಗುವುವು.

''ಆತ್ಮಾವಾ ಅರೇ ದೃಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ'' ಎಂಬ ಉಪನಿಷದ್ವಾಕ್ಯದಲ್ಲಿ ದರ್ಶನಿಷೇಯವಾದ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಶ್ರವಣ ಮನನ ಹಾಗೂ ನಿದಿಧ್ಯಾಸನಗಳನ್ನು ಮಾಡಬೇಕೆಂಬುದಾಗಿ ತಿಳಿಸಲಾಗಿದೆ. ಇಲ್ಲಿ ಶ್ರವಣದಿಂದ ಆತ್ಮಜ್ಞಾನವು ಉಂಟಾಗುತ್ತದೆ. ಆದರೆ ಕೇವಲ ಶುಷ್ಕಜ್ಞಾನದಿಂದ ಆನಂದ ಪ್ರಾಪ್ತಿಯಾಗುವದಿಲ್ಲವೆಂತಲೇ ಮುಂದಿನ ಮನನ ಹಾಗೂ ನಿದಿಧ್ಯಾಸಗಳನ್ನು ಉಪದೇಶಿ

ಸಲಾಗಿದೆ. ಎಲ್ಲಿಯವರೆಗೆ ಆತ್ಮಾಕಾರದ ಅಖಂಡ ವೃತ್ತಿಯು ಪ್ರಾದುರ್ಭವಿಸುವುದಿಲ್ಲವೋ ಅಲ್ಲಿಯವರೆಗೆ ಆತ್ಮಾನಂದದ ಅನುಭೂತಿಯು ಉಂಟಾಗುವುದಿಲ್ಲ. ಆದ ಕಾರಣ ಆತ್ಮಜ್ಞಾನವಾದ ಬಳಿಕ ಮನೋವೃತ್ತಿಯನ್ನು ತದಾಕಾರಗೊಳಿಸುವುದಕ್ಕಾಗಿ ಮನನ ಹಾಗೂ ನಿದಿಧ್ಯಾಸಗಳ ಸಹಾಯತೆಯನ್ನು ಪಡೆಯಬೇಕಾಗುವುದು. ಇವುಗಳು ಮನಸ್ಸಿನಲ್ಲಿ ಬರುವ ಅನ್ಯಾಕಾರ ವೃತ್ತಿಗಳನ್ನು ದೂರಮಾಡಿ ಆತ್ಮಾಕಾರ ವೃತ್ತಿಯನ್ನು ಅಖಂಡವಾಗಿ ಇರಿಸುತ್ತವೆ. ಯಾರೊಬ್ಬರು ಆತ್ಮ –ಪರಮಾತ್ಮರ ಚಿಂತನೆಯಲ್ಲಿ ಕುಳಿತಾಗ ಅನ್ಯಾನ್ಯ ವಿಷಯಗಳು ಚಿತ್ತದಲ್ಲಿ ಸೇರಿ ಆ ಚಿಂತನೆಗೆ ವಿಘ್ನವನ್ನುಂಟು ಮಾಡುತ್ತಿರುತ್ತವೆ. ಆದರೂ ಧೀರನಾದ ಶಿವಯೋಗಿಯು ಆ ವೃತ್ತಿಗಳನ್ನು ಪುನಃ ಪುನಃ ಬದಿಗಿರಿಸುತ್ತ ತನ್ನ ಪೂರ್ವದ ವೃತ್ತಿಯನ್ನು ಅಖಂಡವಾಗಿಡಲು ಪ್ರಯತ್ನಿಸುತ್ತಿರುತ್ತಾನೆ. ಹೀಗೆ ತನಗಾದ ಜ್ಞಾನವು ಬಲಗೊಳ್ಳುವವರೆಗೆ ಅನ್ಯಾಕಾರ ವೃತ್ತಿಯನ್ನು ತಡೆಯುವ ಜ್ಞಾನರೂಪವಾದ ನಿದಿಧ್ಯಾಸನವನ್ನು ಮಾಡಬೇಕಾಗುವುದು. ತದಾಕಾರಾತ್ಮಕವಾದ ಧ್ಯಾನದಲ್ಲಿ ಮಗ್ನ ವಾಗಿರುವಾಗಲೂ ಸಾಂಸಾರಿಕ ವೃತ್ತಿಗಳು ಮನಸ್ಸಿನಲ್ಲಿ ಸೇರಿ ಒಮ್ಮೊಮ್ಮೆ ದುಃಖವನ್ನುಂಟು ಮಾಡುತ್ತಿರುತ್ತವೆ.

ಮಹಾಭಾರತದಲ್ಲಿ ಈ ಸಂದರ್ಭವಾದ ಒಂದು ಮಾರ್ಮಿಕವಾದ ಕಥೆ ಯುಂಟು. ಪಾಂಡವರು ವನವಾಸದಲ್ಲಿರುವಾಗ ಯಾವುದೊಂದು ಕಾರ್ಯನಿಮಿತ್ತವಾಗಿ ಅರ್ಜುನನು ಹಿಮಾಲಯಕ್ಕೆ ಹೋಗಿದ್ದನು. ಅವನು ಹೋದ ಎರಡು ಮೂರು ದಿನಗಳ ನಂತರ 'ಬೃಹದಶ್ವಾ' ಎಂಬ ಮಹರ್ಷಿಯು ಪಾಂಡವರ ಕುಟೀರಕ್ಕೆ ದಯ ಮಾಡಿಸುತ್ತಾನೆ. ಆಗ ಯುಧಿಷ್ಠಿರ ಮುಂತಾದವರು ಆ ಋಷಿಯನ್ನು ಆದರದಿಂದ ಬರಮಾಡಿಕೊಂಡು ಯಥೋಚಿತವಾದ ಆಸನದ ಮೇಲೆ ಕೂಡ್ರಿಸಿ ಫಲಾಹಾರಾದಿ ಗಳನ್ನು ಮಾಡಿಸಿದರು. ಮಹರ್ಷಿಯು ಬಹುದೂರದಿಂದ ಬರಿಗಾಲಿನಿಂದ ಪ್ರಯಾಣ ಮಾಡಿ ಬಂದದ್ದನ್ನು ತಿಳಿದ ಯುಧಿಷ್ಠಿರನು ಆತನ ಪಾದ ಸೇವೆಯನ್ನು ಮಾಡತೊಡಗಿದನು. ಕೆಲವು ಸಮಯದ ನಂತರ ಯುಧಿಷ್ಠಿರನ ಕಣ್ಣುಗಳಿಂದ ಅಕಸ್ಮಾತ್ ಕಣ್ಣೀರು ಹೊರ ಚಿಮ್ಮಿ ಋಷಿಯ ಪಾದಗಳ ಮೇಲೆ ಬಿದ್ದವು. ಆಗ ಇದನ್ನು ಗಮನಿಸಿದ ಋಷಿಯು ಇದೇನು ಅತಿಥಿ ಸೇವೆಯನ್ನು ಮಾಡುತ್ತ ಆನಂದ ಹೊಂದುವ ಬದಲಾಗಿ ಈತನು ದುಃಖಿಸುತ್ತಿದ್ದಾನಲ್ಲ? ಈ ದುಃಖದ ಕಾರಣವೇನಿರಬಹುದು ಎಂದು ಮನಸ್ಸಿನಲ್ಲಿ ವಿಚಾರಿಸುತ್ತ ಎದ್ದು ಕುಳಿತು ಯುಧಿಷ್ಠಿರನ ಬೆನ್ನ ಮೇಲೆ ಕೈಯ್ಯಾಡಿಸುತ್ತ ಎಲೈ ಯುಧಿಷ್ಠಿರನೇ ! ಜ್ಞಾನಿಯಾದ ನಿನಗೆ ಕಣ್ಣಲ್ಲಿ ಕಂಬನಿಗಳೇಕೆ ? ಎಂಬುದಾಗಿ ವಿಚಾರಿಸಿ ದನು. ಆಗ ಯುಧಿಷ್ಠಿರನು ಮಹರ್ಷಿಗಳೇ ಇಂದು ಪ್ರಾತಃಕಾಲ ನನ್ನ ಪ್ರೀತಿಯ ತಮ್ಮನಾದ ಅರ್ಜುನನು ಹಿಮಾಲಯದ ಕಡೆಗೆ ಹೋಗಿ ಇಂದಿಗೆ ಮೂರುದಿನಗಳಾದವು. ಆದ ಕಾರಣ ಮನಸ್ಸಿನಲ್ಲಿ ಅವನ ಸ್ಮರಣೆ ಯುಂಟಾಗಿ ಆತನು ಏಕೆ ತಾನೆ ಬರಲಿಲ್ಲ ? ಅವನಿಗೆ ಏನಾದರೂ ಆಪತ್ತು ಬಂದೊದಗಿದೆಯೋ ಏನೋ ಎಂಬ ಕಳವಳದಿಂದ ಈ ಕಣ್ಣೀರು ಬಂದಿವೆ. ಆದ್ದರಿಂದ ಕ್ಷಮಿಸಿ'' ಎಂಬುದಾಗಿ ವಿನಂತಿಸಿಕೊಂಡನು. ಯುಧಿಷ್ಠಿರನ ಈ ಮಾತನ್ನು ಕೇಳಿದ ಮಹರ್ಷಿಗಳು ''ಎಲೈ ಧರ್ಮರಾಜನೇ ! ಸಂಸಾರದ ಸ್ಮರಣೆಯು ಮನುಷ್ಯನಿಗೆ ಸದಾ ದುಃಖವನ್ನೇ ತಂದೊಡ್ಡುತ್ತದೆ. ಅಳಿಸುವುದು ಸಂಸಾರದ

ಸ್ವಭಾವವಾಗಿದೆ. ಮನಸ್ಸಿನಲ್ಲಿ ಸಾಂಸಾರಿಕ ಭಾವನೆಯು ಬಂದಿತೆಂದರೆ ಅವನು ಅಳದೇ ಇರಲು ಸಾಧ್ಯವಾಗುವುದಿಲ್ಲ. ಇಲ್ಲಿದ್ದೂ ಅಳಬಾರದೆಂಬ ಇಚ್ಛೆಯಿದ್ದರೆ ಈ ಸಂಸಾರವನ್ನು ನಿನ್ನ ಭಾವನೆಯಲ್ಲಿ ಪ್ರವೇಶಮಾಡಗೊಡಬೇಡ. ನೀನು ಸಂಸಾರ ದಲ್ಲಿದ್ದರೂ ನಿನ್ನಲ್ಲಿ ಸಂಸಾರ ಪ್ರವೇಶಿಸದಿರಲಿ ಅಂದಾಗಲೇನೇ ನೀನು ಸುಖಿಯಾಗಲು ಸಾಧ್ಯ'' ಆಗ ಯುಧಿಷ್ಠಿರನು ''ಹೇ ಮಹರ್ಷಿಗಳೇ ಸಂಸಾರವು ನಮ್ಮ ಮನಸ್ಸಿನಲ್ಲಿ ಪ್ರವೇಶಿಸಿ ಅದು ದುಃಖ ಕೊಡದ ಹಾಗೆ ಮಾಡಬೇಕಾದರೆ ಏನು ಮಾಡಬೇಕು ?'' ಆಗ ಮಹರ್ಷಿಗಳು ಪರಮಾತ್ಮನ ಧ್ಯಾನದ ಹೊರತಾಗಿ ಇದಕ್ಕೆ ಬೇರೊಂದು ಉಪಾಯವಿಲ್ಲ. ಕಾರಣ ಸದಾ ಶಿವಧ್ಯಾನದಲ್ಲಿದ್ದು ಸುಖಿಯಾಗು'' ಎಂಬುದಾಗಿ ಆಶೀರ್ವದಿಸಿದರಂತೆ.

ಹೀಗೆ ಶಿವಧ್ಯಾನವು ಶಿವತ್ತ್ವವನ್ನು ತಂದು ಕೊಟ್ಟು ಅಶಿವವಾದ ಸಂಸಾರವು ಮನಸ್ಸಿನಲ್ಲಿ ಪ್ರವೇಶಿಸದಂತೆ ತಡೆ ಹಿಡಿಯುತ್ತದೆ. ಆದ ಕಾರಣ ಶಿವಜ್ಞಾನ ಸಂಪನ್ನ ನಾದರೂ ಶಿವಧ್ಯಾನವನ್ನು ಮಾಡುತ್ತಲೇ ಇರಬೇಕು. ಈ ಶಿವಧ್ಯಾನವೇ ಈ ಭಾವಾಗಮ ಸ್ಥಲದಲ್ಲಿ ಶಿವಭಾವನೆ ಎಂಬುದಾಗಿ ಕರೆಯಲ್ಪಟ್ಟಿದೆ. ಆದ ಕಾರಣ ಪ್ರತಿಯೊಬ್ಬರು ಶಿವಭಾವನೆಯುಳ್ಳವರಾಗಿರಬೇಕೆಂಬುದೇ ಪೂಜ್ಯಪಾದರ ಉಪದೇಶದ ಆಶಯ ವಾಗಿದೆ.

ಶಿವಭಾವನೆಯನ್ನು ಯಾವ ತೆರನಾಗಿ ಮಾಡಬೇಕು ? ಎಂಬ ಪ್ರಶ್ನೆಯುದ್ಭ ವಿಸಿದಾಗ ಪೂಜ್ಯಪಾದರು ಅದರ ವಿಧಾನವನ್ನು ತಿಳಿಸುತ್ತ ಪುನಃ –

ಅಂತರ್ಬಹಿಶ್ಚ ಸರ್ವತ್ರ ಪರಿಪೂರ್ಣಂ ಮಹೇಶ್ವರಮ್ ।
ಭಾವಯೇತ್ ಪರಮಾನಂದಲಬ್ಧಯೇ ಪಂಡಿತೋತ್ತಮಃ ॥

(ಸಿ. ಶಿ. ೧೬–೧೮)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಪಂಡಿತ ಶ್ರೇಷ್ಠನು ಪರಮಾನಂದದ ಪ್ರಾಪ್ತಿಗಾಗಿ ಪಿಂಡಾಂಡ–ಬ್ರಹ್ಮಾಂಡಗಳಲ್ಲೆಲ್ಲ ಒಳಹೊರಗು ಮಹೇಶ್ವರನು ಪರಿಪೂರ್ಣನಾಗಿದ್ದಾನೆ ಎಂಬುದಾಗಿ ಭಾವಿಸಬೇಕು ಎಂಬುದು ಪೂಜ್ಯರ ಆಶಯವಾಗಿದೆ.

ಪರಮಾನಂದವು ಪರಬ್ರಹ್ಮದ ಸ್ವರೂಪವಾಗಿದೆ. ಅದನ್ನು ಪಡೆಯುವ ಅಭಿಲಾಷೆಯು ಎಲ್ಲರಿಗಿರುತ್ತದೆ. ಆದರೂ ಜೀವಿಗಳು ಅಖಂಡವಾದ ಆನಂದವನ್ನು ಪಡೆಯಲಸಮರ್ಥರಾಗಿ ವಿಷಯದಲ್ಲಿಯೇ ಆನಂದವನ್ನು ಕಂಡು ತೃಪ್ತರಾಗುತ್ತಾರೆ. ವಿಷಯವಾದರೂ ಸದಾ ಸರ್ವದಂ ಎಲ್ಲರಿಗೂ ಆನಂದವನ್ನು ಕೊಡಲು ಸಮರ್ಥವಾಗು ವದಿಲ್ಲ. ಯಾರಿಗೆ ಅದು ಅನುಕೂಲವಾಗುವುದೋ ಅವರಿಗೆ ಅದು ಪ್ರಿಯವಾಗಿ ತೋರಿದರೂ ಅದುವೇ ಪ್ರತಿಕೂಲವೆಂದಾಗ ಅಪ್ರಿಯವಾಗಿ ತೋರುತ್ತದೆ. ಆದರೆ ಪರಬ್ರಹ್ಮದ ಪರಮಾನಂದವು ಸರ್ವರಿಗೂ ಸದಾ ಆನಂದವನ್ನೇ ಕೊಡುವಂಥದಾಗಿ ರುತ್ತದೆ. ಆದರೆ ಇದನ್ನು ಪಡೆಯಬೇಕಾದರೆ ಸಂಸಾರದಿಂದ ವಿಮುಖನಾಗಿ ಜಗತ್ತಿನ ಒಳಹೊರಗೆಲ್ಲ ಪರಮಾತ್ಮನನ್ನು ಭಾವಿಸಿ ಸಮರಸ ಭಾವನೆಯಿಂದ ಅದನ್ನು

ಅನುಸಂಧಾನ ಮಾಡಿದಾಗಲೇ ಆ ಪರಮಾನಂದವು ದೊರೆಯಲು ಸಾಧ್ಯವಾಗುತ್ತದೆ. ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೦ ಜುಲೈ, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೨

# ಭಾವಾಗಮಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶಿ ಮಹಾ ಕ್ಷೇತ್ರದಲ್ಲಿ ಶ್ರೀಕಾಶೀಜಗದ್ಗುರುಗಳವರ ಶ್ರಾವಣ ಮಾಸದ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯ ಕ್ರಮಗಳು ಅವ್ಯಾಹತವಾಗಿ ಸಾಗುತ್ತಲಿವೆ. ಶ್ರೀಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಭಾವಾಗಮಸ್ಥಲದ ಬಗ್ಗೆ ಕೆಲವೊಂದು ವಿಚಾರಗಳನ್ನು ನಿಮಗೆಲ್ಲ ತಿಳಿಸಲಾಗಿದೆ. ಸದ್ಯಃ ಈ ಭಾವಾಗಮಸ್ಥಲದ ಅವಶಿಷ್ಟ ವಿಷಯಗಳ ಬಗ್ಗೆ ವಿವೇಚಿಸಲಾಗುವುದು.

ಈ ಭಾವಾಗಮಸ್ಥಲದಲ್ಲಿ ಭಾವನೆಯ ಅವಶ್ಯಕತೆ ಹಾಗೂ ಅದರ ಮಹತ್ವ ವನ್ನು ಕುರಿತು ಪೂಜ್ಯಪಾದರು ಉಪದೇಶಿಸುತ್ತಿದ್ದಾರೆ. ಈ ಪೂರ್ವದಲ್ಲಿ ಪರಮಾತ್ಮನ ಬಗ್ಗೆ ಮನಸ್ಸಿನಲ್ಲಿ ಭಾವಿಸಬೇಕಾದಾಗ ಆತನನ್ನು ಸರ್ವತ್ರ ವ್ಯಾಪಕನನ್ನಾಗಿ ಭಾವಿಸುವದಾಗಿ ಉಪದೇಶಿಸಲಾಗಿದೆ. ಪರಮಾತ್ಮನು ಆಕಾಶದಂತೆ ವ್ಯಾಪಕನಾಗಿರೋಣದರಿಂದ ಅವನು ಒಳಗೂ ಹೊರಗೂ ಎಲ್ಲ ಕಡೆ ಇರುವುದು ಸಾಧ್ಯವಾಗುತ್ತಿದೆ. ಇಂತಹ ವ್ಯಾಪಕ ನಾದ ಪರಮಾತ್ಮನನ್ನು ತನ್ನ ಆತ್ಮರೂಪವನ್ನಾಗಿ ಧ್ಯಾನ ಮಾಡಬೇಕು. ಅಂದಾಗಲೇನೇ ಪರಮಾನಂದದ ಪ್ರಾಪ್ತಿಯಾಗುವುದು. ಪರಮಾನಂದ ಅಪೇಕ್ಷೆಯು ಎಲ್ಲರಿಗೂ ಇದ್ದರೂ ಯಾರು ಪೂರ್ವದಲ್ಲಿ ಹೇಳಿದಂತೆ ಭಾವನೆಯನ್ನು ದೃಢಪಡಿಸಿಕೊಳ್ಳುವರೋ ಅವರಿಗೇನೆ ಆ ಆನಂದದ ಪ್ರಾಪ್ತಿಯಾಗುವುದು. ಕಾರಣ ಪ್ರತಿಯೊಬ್ಬರೂ ಈ ಭಾವನೆಯನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು.

ಶ್ರೀಜಗದ್ಗುರು ರೇಣುಕಭಗವತ್ಪಾದರು ಭಾವನೆಯಿಲ್ಲದೆ ಮಾಡಿದ ಕ್ರಿಯೆಗಳೆಲ್ಲ ವ್ಯರ್ಥವಾಗುತ್ತವೆ ಎಂಬುದನ್ನು ಪ್ರತಿಪಾದಿಸಲೋಸುಗ ಅನೇಕ ಉಪಮೆಗಳ ಮೂಲಕ ಈ ಮುಂದೆ ಪುನಃ-

ಅರ್ಥಹೀನಾ ಯಥಾ ವಾಣೀ ಪತಿಹೀನಾ ಯಥಾ ಸತೀ ।
ಶ್ರುತಿಹೀನಾ ಯಥಾ ಬುದ್ಧಿರ್ಭಾವಹೀನಾ ತಥಾ ಕ್ರಿಯಾ ॥

(ಸಿ. ಶಿ. ೧೭-೧೯)

ಹೀಗೆ ವಿವರಿಸಿದ್ದಾರೆ. ಅರ್ಥವಿಲ್ಲದ ಶಬ್ದವು, ಪತಿಯನ್ನು ಕಳೆದುಕೊಂಡ ಸತಿಯು, ಶಾಸ್ತ್ರವನ್ನು ಅಭ್ಯಾಸ ಮಾಡದ ಬುದ್ಧಿಯು ಇವು ಹೇಗೆ ನಿಷ್ಪ್ರಯೋಜಕಗಳಾಗುವವೋ

ಅದರಂತೆ ಭಾವನೆಯಿಲ್ಲದೆ ಮಾಡಿದ ಎಂತಪ್ಪ ಕ್ರಿಯೆಯೂ ಸಹ ನಿರರ್ಥಕವಾಗುತ್ತದೆ ಎಂಬುದು ಪೂಜ್ಯರ ಅಭೀಪ್ಸೆಯಾಗಿರುತ್ತದೆ.

ಈ ಶ್ಲೋಕದಲ್ಲಿ ಮೂರು ಉದಾಹರಣೆಗಳ ಮೂಲಕ ಪ್ರಸ್ತುತವಾದ ವಿಷಯ ವಸ್ತುವನ್ನು ಸಮರ್ಥಿಸಲಾಗಿದೆ. ಮೊದಲನೆಯ ಉದಾಹರಣೆಯೆಂದರೆ ಅರ್ಥ ಹೀನವಾದ ವಾಣಿಯು. ನಾವು ಯಾವುದೇ ಶಬ್ಧಪ್ರಯೋಗವನ್ನು ಮಾಡಿದಾಗ ಅದಕ್ಕೆ ಒಂದಿಲ್ಲೊಂದು ರೀತಿಯ ಅರ್ಥವಿರಬೇಕು. ಅಂದಾಗಲೇನೇ ಆ ವಾಗ್ ವ್ಯವಹಾರಕ್ಕೆ ಮಹತ್ವ ಬರುತ್ತದೆ. ಹುಚ್ಚನಾದ ವ್ಯಕ್ತಿಯ ಮುಖದಿಂದ ದಿನವಿಡೀ ಶಬ್ದಗಳು ಹೊರಡುತ್ತಿದ್ದರೂ ಅವುಗಳು ಅರ್ಥಹೀನಗಳಾಗಿರೋಣದರಿಂದ ಆ ಶಬ್ದಗಳ ಕಡೆಗೆ ಯಾರೂ ಗಮನಹರಿಸುವುದಿಲ್ಲ. ಇದೇ ಪ್ರಕಾರವಾಗಿ ಇಲ್ಲಿ ಬಂದಿರುವ ಎರಡನೇ ಉದಾಹರಣೆಯೆಂದರೆ 'ಪತಿಹೀನಾ ಯಥಾ ಸತೀ'. ಅಂದರೆ ಪತಿಯಿಲ್ಲದ ಸತಿಯು ಎಂದರ್ಥ. ಸತಿಯು ತನ್ನ ಪತಿಯು ಮಡಿದು ಹೋದಾಗ ಇಲ್ಲವೆ ತನ್ನನ್ನು ಸಂಪೂರ್ಣ ವಾಗಿ ತ್ಯಜಿಸಿದಾಗ ಅವಳು ಪತಿಹೀನಳೆಂದು ಕರೆಯಿಸಿಕೊಳ್ಳುತ್ತಾಳೆ. ಹೀಗೆ ಪತಿಯಿಲ್ಲದ ಸತಿಯ ಜೀವನವೆಂದರೆ ಅರ್ಧ ಭಗ್ನವಾದ ಜೀವನವಿದ್ದಂತೆ. ಒಂದು ಅಖಂಡವಾದ ವಸ್ತುವನ್ನು ಒಡೆದು ಎರಡು ಭಾಗಗಳನ್ನು ಮಾಡಿದಾಗ ಅವೆರಡೂ ನಿಷ್ಪ್ರಯೋಜಕ ಗಳಾಗುವಂತೆ ಪತಿಯಿಲ್ಲದ ಸತಿ ಹಾಗೂ ಸತಿಯಿಲ್ಲದ ಪತಿಯ ಜೀವನವು ಇದೇ ತೆರನಾಗಿ ಆಗುತ್ತದೆ.

ಇದೇ ಪ್ರಕಾರವಾಗಿ ಇಲ್ಲಿ ಹೇಳಿರುವ ಇನ್ನೊಂದು ಉದಾಹರಣೆಯೆಂದರೆ ''ಶ್ರುತಿ ಹೀನಾ ಯಥಾ ಬುದ್ಧಿಃ'' ಅಂದರೆ ವೇದಾಧ್ಯಯನ ಸಂಸ್ಕಾರವಿಲ್ಲದ ಬುದ್ಧಿ ಯೆಂದರ್ಥ. ಭಗವಂತನು ಕೊಟ್ಟ ಬುದ್ಧಿಗೆ ಸ್ವಾಧ್ಯಾಯದ ಮೂಲಕ ದಿನಾಲೂ ಸಂಸ್ಕಾರವನ್ನು ಕೊಡುತ್ತಿರಬೇಕು. ಹಾಗೆ ಸಂಸ್ಕಾರವನ್ನು ಕೊಡದೇ ಹೋದರೆ ಆ ಬುದ್ಧಿಯು ಅಸಂಸ್ಕೃತವಾಗಿ ಅಧರ್ಮಮಾರ್ಗದತ್ತ ಹರಿದು ಹೋಗುವುದು. ಮುಂದೆ ಆ ವ್ಯಕ್ತಿಯ ಜೀವನವೂ ಸಹ ಪತಿತವಾಗಿ ವ್ಯರ್ಥವಾಗುವುದು. ಆದಕಾರಣ ನಮ್ಮ ಬುದ್ಧಿಯು ಸುಸಂಸ್ಕಾರದಿಂದ ಕೂಡಿದ್ದರೆ ನಮ್ಮ ಜೀವನವು ಸಫಲವಾಗುವುದು. ಇಲ್ಲವಾದರೆ ವ್ಯರ್ಥವೇ ಸರಿ. ಹೀಗೆ ಅರ್ಥವಿಲ್ಲದ ವಾಣಿ, ಪತಿಯಿಲ್ಲದ ಸತಿ ಮತ್ತು ವೇದಾಧ್ಯಯನ ಸಂಸ್ಕಾರವಿಲ್ಲದ ಬುದ್ಧಿಗಳು ನಿರರ್ಥಕವಾಗಿರುವಂತೆ ಭಾವನಾಶೂನ್ಯ ವಾದ ವ್ಯಕ್ತಿಯ ಕ್ರಿಯೆಯೂ ಸಹ ನಿರರ್ಥಕವೆಂದೇ ಭಾವಿಸಬೇಕು.

ಈ ಲೋಕದಲ್ಲಿ ಅನೇಕ ಜನರು ಕರ್ಮಗಳನ್ನು ಮಾಡಿಯೂ ಅವುಗಳ ಪ್ರಯೋಜನವನ್ನು ಪಡೆಯದಿರುವುದಕ್ಕೆ ಅವರ ಭಾವಹೀನತೆಯೇ ಕಾರಣವು. ಅಂತೆಯೇ–

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ ।
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ ॥
ಮಾಡುವ ನೀಡುವ ನಿಜಗುಣವುಳ್ಳೊಡೆ ।
ಕೂಡಿಕೊಂಬ ನಮ್ಮ ಕೂಡಲಸಂಗಮದೇವ ॥

ಎಂಬ ಈ ವಚನದಲ್ಲಿ ಶ್ರೀ ಬಸವಣ್ಣನವರು ಏನೇ ಮಾಡಿದರೂ ಭಾವಪೂರ್ಣವಾಗಿ ಮಾಡಬೇಕೆಂಬುದಾಗಿ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ. ನಾವು ಏನನ್ನು ಮಾಡುತ್ತೇವೆ ಎಂಬುವುದು ಮುಖ್ಯವಲ್ಲ ಯಾವ ಭಾವನೆಯಿಂದ ಮಾಡುತ್ತೇವೆಯೆಂಬುದು ಬಹು ಮುಖ್ಯವಾದುದು. ಅನೇಕ ಜನರು ದಾನಾದಿಗಳನ್ನು ಮಾಡಿಯೂ ಪಾಪಭಾಜನರಾಗುತ್ತಾರೆ. ಕಾರಣ ಆ ಸಮಯದಲ್ಲಿ ಅವರಲ್ಲಿ ಉದಿಸಿರುವ ದುರ್ಭಾವನೆಯಿಂದೇ ತಿಳಿದುಕೊಳ್ಳಬೇಕು. ಭಾವನೆಯು ಚೆನ್ನಾಗಿ ಇದ್ದಾಗ ಮುಖದಿಂದ ಹೊರಡುವ ಭಾಷೆಯೂ ಸಹ ಮಧುರವೂ ಪ್ರಿಯಕರವೂ ಆಗಿರುತ್ತದೆ. ಭಾವ ಕೆಟ್ಟಿತೆಂದರೆ ಭಾಷೆಯೂ ಸಹ ಅಪ್ರಿಯ ಹಾಗೂ ಅಶ್ಲೀಲರೂಪವನ್ನು ತಾಳುತ್ತದೆ. ಮನೆಯ ಮುಂದೆ ಭಿಕ್ಷುಕನೋರ್ವನು ಭಿಕ್ಷೆಗೆ ಬಂದಾಗ ಅವನಿಗೆ ಅಸಹ್ಯಶಬ್ದಗಳನ್ನು ಪ್ರಯೋಗಿಸಿ, ಅಪಮಾನಗೊಳಿಸಿ, ತಿರಸ್ಕಾರಭಾವನೆಗಳನ್ನು ಪ್ರಯೋಗಿಸಿ, ತಿರಸ್ಕಾರ ಭಾವನೆಯಿಂದ ''ಇಗೋ ಇದನ್ನು ತೆಗೆದುಕೊಂಡು ಹಾಳಾಗಿ ಹೋಗು'' ಎಂಬುದಾಗಿ ಗೊಣಗುತ್ತ ಅನ್ನದಾನಾದಿಗಳನ್ನು ಮಾಡಿದರೆ ಆದರಿಂದ ಪುಣ್ಯದ ಬದಲು ಪಾಪವೇ ಲಭಿಸುವುದು. ಅಂತೆಯೇ ಶಾಸ್ತ್ರಕಾರರು ''ದಾನಂ ಪ್ರಿಯಾ ವಾಕ್‌ಸಹಿತಮ್'' ಎಂಬುದಾಗಿ ಉಪದೇಶಿಸಿದ್ದಾರೆ. ತಾನು ದಾನ–ಧರ್ಮಾದಿಗಳನ್ನು ಮಾಡುವಾಗ ಪ್ರೀತಿಯ ಶಬ್ದಗಳನ್ನು ಪ್ರಯೋಗಿಸಿ ಆದರದಿಂದ ದಾನ ಮಾಡಬೇಕೆಂಬುದಾಗಿ ಹೇಳಲಾಗಿದೆ. ಹೀಗೆ ನಾವು ಮಾಡುವ ಪ್ರತಿಯೊಂದು ಕ್ರಿಯೆಯು ಭಾವಪೂರ್ಣವಾಗಿದ್ದಾಗಲೇ ಅದು ಒಳ್ಳೆಯ ಫಲವನ್ನು ಕೊಡುವುದೆಂಬುದಾಗಿ ತಿಳಿದುಕೊಳ್ಳಬೇಕು. ಆದುದರಿಂದಲೇ ಪೂಜ್ಯರು ಕ್ರಿಯೆಗೆ ಭಾವನೆಯು ಬಹುಮುಖ್ಯವೆಂಬುದನ್ನು ಮೂರು ಉದಾಹರಣೆಗಳ ಮೂಲಕ ಸಮರ್ಥಿಸಿದ್ದನ್ನು ಇಲ್ಲಿ ಕಾಣುತ್ತೇವೆ.

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಇನ್ನು ಮುಂದೆ ಭಾವಹೀನವಾದ ವ್ಯಕ್ತಿಯು ಶಿವನನ್ನು ಕಾಣಲು ಸಮರ್ಥನಾಗುವದಿಲ್ಲ ಎಂಬುದನ್ನು ಬೇರೊಂದು ಉದಾಹರಣೆಯ ಮೂಲಕ ಸಮರ್ಥಿಸಲೋಸುಗ ಪುನಃ–

ಚಕ್ಷುರ್ಹೀನೋ ಯಥಾ ರೂಪಂ ನ ಕಿಂಚಿದ್ವೀಕ್ಷಿತುಂ ಕ್ಷಮಃ ।
ಭಾವಹೀನಸ್ತಥಾ ಯೋಗೀ ನ ಶಿವಂ ದ್ರಷ್ಟುಮೀಶ್ವರಃ ॥

(ಸಿ. ಶಿ. ೧೬–೨೦)

ಈ ತೆರನಾಗಿ ಉಪದೇಶಿಸಿದ್ದಾರೆ. ಕಣ್ಣಿಲ್ಲದ ಮನುಷ್ಯನು ರೂಪವನ್ನು ನೋಡಲು ಅಸಮರ್ಥನಾಗಿರುವಂತೆ ಭಾವಹೀನನಾದ ಯೋಗಿಯು ಶಿವನನ್ನು ನೋಡಲು ಸಮರ್ಥನಾಗಲಾರನು ಎಂಬುದು ಪೂಜ್ಯರ ಆಶಯವಾಗಿದೆ.

ಇಲ್ಲಿ ಬಹು ಸುಂದರವಾದ ಹಾಗೂ ಸಮರ್ಥವಾದ, ಉಪಮೆಯನ್ನು ಕೊಟ್ಟು ಪೂಜ್ಯರು ತಮ್ಮ ಆಶಯವನ್ನು ವ್ಯಕ್ತಗೊಳಿಸಿದ್ದಾರೆ. ಬಹಿರಂಗದ ವಸ್ತುಗಳನ್ನು ನೋಡಬೇಕಾದರೆ ಕಣ್ಣುಗಳು ಬೇಕೇ ಬೇಕು. ಅವಿಲ್ಲದೆ ಯಾರೂ ರೂಪವನ್ನು ನೋಡಲು ಸಮರ್ಥರಾಗರು. ಕುರುಡನಾದ ವ್ಯಕ್ತಿಯು ತನಗೆ ಏನೂ ಕಾಣದ ಕಾರಣದಿಂದಾಗಿ ಅನ್ಯರ ಹಸ್ತವನ್ನು ಹಿಡಿದುಕೊಂಡು ಅವರ ಹಿಂದೆ ಹಿಂದೆ ಹಿಂಬಾಲಿಸುತ್ತಿರುತ್ತಾನೆ.

ಆತನು ಸ್ವತಂತ್ರವಾಗಿ ಹೋಗುವ ಬರುವ ಯೋಗ್ಯತೆಯನ್ನು ಕಳೆದುಕೊಂಡಿರುತ್ತಾನೆ. ಅದರಂತೆಯೇ ಭಾವಶೂನ್ಯನಾದ ಮನುಷ್ಯನು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲಾರನು. ದೇವನನ್ನು ಕಾಣಲು ಭಾವಮಯ ದೃಷ್ಟಿಯ ಅವಶ್ಯಕತೆಯಿದೆ. ಅದಿಲ್ಲದೆ ಹೋದರೆ ಅವನಿಗೆ ಯಾವ ಅನುಭವವೂ ಆಗಲು ಸಾಧ್ಯವಾಗುವುದಿಲ್ಲ. ಅಂತೆಯೇ ಪೂಜ್ಯರು 'ಭಾವನಾ ವಿಹಿತಂಕರ್ಮಪಾಪಾನಾಮಪಿ ಪಾವನಮ್' ಎಂಬುದಾಗಿ ತಿಳಿಸಿ ಭಾವನೆಯಿಂದ ಮಾಡಿದ ಕರ್ಮವೇ ಪರಮಪಾವನವೆಂದು ಸಮರ್ಥಿಸಿದ್ದಾರೆ.

ಪರಮೇಶ್ವರನನ್ನು ಪೂಜಿಸಬೇಕಾದರೆ ಭಾವನೆಯೇ ಮುಖ್ಯ ಎಂಬುದನ್ನು ಪೂಜ್ಯಪಾದರು ಪುನಃ–

ಭಾವಶುದ್ಧೇನ ಮನಸಾ ಪೂಜಯೇತ್ ಪರಮೇಷ್ಠಿನಮ್ ।
ಭಾವಹೀನಾಂ ನ ಗೃಹ್ಣಾತಿ ಪೂಜಾಂ ಸುಮಹತೀಮಪಿ ॥

(ಸಿ. ಶಿ. ೧೬–೨೧)

ಈ ವಿಧವಾಗಿ ಉಪದೇಶಿಸಿದ್ದಾರೆ. ಪರಮೇಶ್ವರನನ್ನು ಪೂಜಿಸುವಾಗ ಪರಿಶುದ್ಧವಾದ ಮನಸ್ಸನ್ನು ಹೊಂದಿರಬೇಕು. ಅರ್ಥಾತ್ ಪರಿಶುದ್ಧವಾದ ಮನಸ್ಸಿನಿಂದಲೇ ಶಿವನನ್ನು ಪೂಜಿಸಬೇಕು. ಹೀಗೆ ಪರಿಶುದ್ಧ ಭಾವನೆಯಿಲ್ಲದ ಪೂಜೆಯು ಅದೆಷ್ಟೇ ದೊಡ್ಡದಿದ್ದರೂ ಶಿವನು ಆ ಪೂಜೆಯನ್ನು ಸ್ವೀಕರಿಸುವುದಿಲ್ಲ ಎಂಬುದು ಪೂಜ್ಯರ ಅಭಿಪ್ರಾಯವಾಗಿದೆ.

ಸಾಮಾನ್ಯವಾಗಿ ಶಿವಪೂಜೆಯನ್ನು ಮಾಡಬೇಕಾದರೆ ಶುಚಿರ್ಭೂತನಾಗಿ ಮಾಡಬೇಕೆಂಬುದು ಒಂದು ಸಾಮಾನ್ಯವಾದ ನಿಯಮವು. ಮಂಗಲಸ್ನಾನವನ್ನು ಮಾಡಿ ಶುಚಿಯಾದ ಬಟ್ಟೆಗಳನ್ನು ಧರಿಸಿಕೊಂಡು ಶುದ್ಧವಾಗುವುದು ಬಹಿರಂಗ ಶುದ್ಧಿಯಾದರೆ, ಮನಸ್ಸನ್ನು ಪವಿತ್ರವಾಗಿಟ್ಟುಕೊಳ್ಳುವುದು ಅಂತರಂಗಶುದ್ಧಿಯೆಂದು ಕರೆಯಲ್ಪಡುವುದು. ಶಿವಪೂಜೆಗೆ ಬಹಿರಂಗ ಶುದ್ಧಿಯಂತೂ ಬೇಕೇ ಬೇಕು. ಅದರ ಜೊತೆಗೆ ಅಂತರಂಗವೂ ಸಹ ಪರಿಶುದ್ಧವಾಗಿದ್ದರೆ ಆ ಪರಿಶುದ್ಧವಾದ ಅಂತಃಕರಣವುಳ್ಳವರ ಪೂಜಾಕೈಂಕರ್ಯವನ್ನು ಶಿವನು ಸ್ವೀಕರಿಸುತ್ತಾನೆ. ಹೀಗೆ ಭಾವಶುದ್ಧವಿಲ್ಲದ ವ್ಯಕ್ತಿಯು ಅದೆಷ್ಟೇ ಮಹಾಪೂಜೆಯನ್ನು ಮಾಡಿದರೂ ಅದನ್ನು ಶಿವನು ಸ್ವೀಕರಿಸಲಾರನು. ಶಿವನಿಗೆ ಬಹಿರಂಗದ ಆಡಂಬರ ಹಾಗೂ ಬಾಹ್ಯಶುದ್ಧಿಗಿಂತ ಅಂತರಂಗಶುದ್ಧಿಯು ಹೆಚ್ಚು ಪ್ರಿಯಕರವಾದುದು. ಪೂಜಾ ಸಮಯದಲ್ಲಿ ಶಿವನಿಗೆ ಅರ್ಪಿಸುತ್ತಿರುವ ಗಂಗಾಜಲ, ಪತ್ರಿಪುಷ್ಪಗಳು ಹಾಗೂ ಫಲ–ತಾಂಬೂಲಾದಿಗಳು ಅವನ ಸೃಷ್ಟಿಯಲ್ಲಿಯೇ ನಿರ್ಮಿತಗಳಾದ ಪದಾರ್ಥಗಳು. ಪೂಜಾ ಸಮಯದಲ್ಲಿ ಅವನ ಪದಾರ್ಥಗಳನ್ನೇ ಅವನಿಗರ್ಪಿಸುತ್ತಿರುತ್ತೇವೆ. ಅಲ್ಲಿ ನಮ್ಮದೆನ್ನುವದೇನೂ ಇರುವುದಿಲ್ಲ. ಅಲ್ಲಿ ನಮ್ಮದಾದ ಪರಿಶುದ್ಧವಾದ ಭಾವನೆಯೊಂದನ್ನು ಆ ವಸ್ತುಗಳ ಜೊತೆಗೆ ಬೆರೆಸಿ ಸಮರ್ಪಿಸಿದಾಗ ಶಿವನು ಸಂತುಷ್ಟನಾಗಿ ಅನುಗ್ರಹಿಸುತ್ತಾನೆ. ಆದ್ದರಿಂದ ಶಿವನ ಬಾಹ್ಯಪೂಜೆಯಲ್ಲಿ ಶುದ್ದವಾದ ಭಾವನೆಯು ಪರಮಾವಶ್ಯಕವೆಂಬುದು ತಿಳಿದು ಬರುತ್ತದೆ.

ಪೂಜ್ಯಪಾದರು ಭಾವನೆಯ ಮಹತ್ತ್ವವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತ ಕೀಟ–ಭ್ರಮರನ್ಯಾಯವನ್ನು ಉದಾಹರಿಸುತ್ತ ಪುನಃ–

ನೈರಂತರ್ಯೇಣ ಸಂಪನ್ನೇ ಭಾವೇ ಧ್ಯಾತುಂ ಶಿವಂ ಪ್ರತಿ ।
ತದ್ಭಾವೋ ಜಾಯತೇಯದ್ವತ್ ಕ್ರಿಮೇಃ ಕೀಟಸ್ಯ ಚಿಂತನಾತ್ ॥
(ಸಿ .ಶಿ. ೧೬–೨೨)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಕ್ರಿಮಿಯು ನಿರಂತರವಾಗಿ ಭ್ರಮರದ ಚಿಂತನೆಯನ್ನು ಮಾಡುತ್ತ ಕೊನೆಗೆ ಭ್ರಮರವೇ ಆಗುವಂತೆ ಶಿವನನ್ನು ನಿರಂತರವಾಗಿ ಧ್ಯಾನಿಸುವ ಶಿವಯೋಗಿಯೂ ಸಹ ಶಿವಸ್ವರೂಪನೇ ಆಗುತ್ತಾನೆ ಎಂಬುವುದು ಪೂಜ್ಯರ ಆಶಯ ವಾಗಿದೆ.

ಭಾವನೆಯಿಂದ ಏನೆಲ್ಲವೂ ಸಾಧ್ಯವೆಂಬುದಕ್ಕೆ ಪೂಜ್ಯಪಾದರು ಕೀಟ–ಭ್ರಮರದ ನ್ಯಾಯವನ್ನು ಉದಾಹರಿಸಿದ್ದಾರೆ. ಒಂದು ಸಾಮಾನ್ಯವಾದ ಕೀಟವು ಭ್ರಮರದ ಚಿಂತನೆಯನ್ನು ಮಾಡುತ್ತ ಮಾಡುತ್ತ ಕೊನೆಗೆ ಭ್ರಮರವೇ ಆಗುತ್ತದೆ. ಆ ಚಿಂತನೆಯ ಸಾಮರ್ಥ್ಯವು ಇದರ ದೇಹದ ರಚನೆಯನ್ನೇ ಪರಿವರ್ತಿಸಿ ಕೀಟರೂಪವನ್ನು ಕಳೆದು ಭ್ರಮರ ರೂಪವನ್ನು ತಂದುಕೊಡುತ್ತದೆ. ಇದೇ ಪ್ರಕಾರವಾಗಿ ಜೀವಾತ್ಮನು ನಿರಂತರವಾಗಿ ಪರಮಾತ್ಮನ ಚಿಂತನೆಯನ್ನು ಮಾಡುತ್ತಿದ್ದರೆ ಆ ಶಿವಚಿಂತನೆಯ ಸಾಮರ್ಥ್ಯದಿಂದ ಜೀವನೂ ಸಹ ಶಿವನೇ ಆಗುತ್ತಾನೆ. ಪ್ರಪಂಚದ ಚಿಂತೆಯನ್ನು ಮಾಡಿ ಚಿಂತಾರೂಪವಾದ ಚಿದಾಗ್ನಿಯಲ್ಲಿ ದಹಿಸಿ ಹೋಗುವುದಕ್ಕಿಂತ ಶಿವಚಿಂತನೆಯನ್ನು ಮಾಡಿ ಶಿವಸ್ವರೂಪವನ್ನು ಪಡೆದು ಪರಮಾನಂದವನ್ನು ಹೊಂದುವುದೇ ಜೀವನದ ಮುಖ್ಯ ಲಕ್ಷಣವಾಗಿರಬೇಕು.

ನಿಷ್ಕಲನೂ, ನಿರಾಕಾರನೂ ಆದ ಪರಶಿವನನ್ನು ಚಿಂತಿಸುವ ಸಾಮರ್ಥ್ಯ ವಿರದಿದ್ದರೆ ಏನು ಮಾಡಬೇಕು? ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರು ಅದಕ್ಕೆ ಸೂಕ್ತವಾದ ಪರಿಹಾರವನ್ನು ಹುಡುಕಿ ಪುನಃ–

ನಿಷ್ಕಲಂಕಂ ನಿರಾಕಾರಂ ಪರಬ್ರಹ್ಮ ಶಿವಾಭಿದಮ್ ।
ನಿರ್ಧ್ಯಾತುಮಸಮರ್ಥೋಽಪಿ ತದ್ವಿಭೂತಿಂ ವಿಭಾವಯೇತ್ ॥
(ಸಿ. ಶಿ. ೧೬–೨೩)

ಈ ವಿಧವಾಗಿ ಉಪದೇಶಿಸಿದ್ದಾರೆ. ಭಗವಂತನ ಚಿಂತನೆಯನ್ನು ಮಾಡುವುದು ಯೋಗ್ಯವಾಗಿದ್ದರೂ ಅವನು ನಿಷ್ಕಲಂಕನೂ ಮತ್ತು ನಿರಾಕಾರನೂ ಆಗಿರುವುದರಿಂದ ಅವನ ಧ್ಯಾನವನ್ನು ಮಾಡುವುದು ಸಾಧ್ಯವಿಲ್ಲದೇಯಿದ್ದಾಗ ಅವನ ಐಶ್ವರ್ಯಗಳಾದ ಸರ್ವಜ್ಞತ್ವ, ನಿತ್ಯತ್ವ ಮುಂತಾದ ಅವನ ಅಲೌಕಿಕ ಗುಣಗಳನ್ನು ಧ್ಯಾನಿಸಬೇಕು ಎಂಬುದು ಆಚಾರ್ಯರ ಆಶಯವಾಗಿದೆ.

ಶಿವನು ನಿರ್ಗುಣ ನಿರಾಕಾರನಾಗಿರುವಂತೆ ಸಗುಣ–ಸಾಕಾರನೂ ಸಹ ಆಗಿರುತ್ತಾನೆ. ಯಾರಿಗೆ ನಿಷ್ಕಲ ಸ್ವರೂಪದ ಧ್ಯಾನವನ್ನು ಮಾಡುವ ಸಾಮರ್ಥ್ಯವಿದೆಯೋ ಅವರು ನೇರವಾಗಿ ಆ ಸ್ವರೂಪದ ಚಿಂತನೆಯನ್ನು ಮಾಡಬಹುದು. ಇನ್ನು ಯಾರಿಗೆ ಆ ಸೂಕ್ಷ್ಮ ಸ್ವರೂಪದ ಚಿಂತನೆಯನ್ನು ಮಾಡುವ ಸಾಮರ್ಥ್ಯವಿರುವುದಿಲ್ಲವೋ

ಅವರು ಶಿವನ ಐಶ್ವರ್ಯಯುಕ್ತವಾದ ಸಗುಣಸ್ವರೂಪವನ್ನು ಧ್ಯಾನಿಸಬಹುದು. ಅವನ ಐಶ್ವರ್ಯದ ಚಿಂತನೆಯೂ ಸಹ ಕೊನೆಗೆ ಶಿವಸ್ವರೂಪವನ್ನೇ ಪ್ರಾಪ್ತಿಮಾಡಿಕೊಡುವುದು.

ಈ ಭಾವಾಗಮ ಸ್ಥಲದಲ್ಲಿ ಪೂಜ್ಯಪಾದರು ಭಾವನೆಯ ಲಕ್ಷಣ, ಅದರ ಮಹತ್ತ್ವ, ಹಾಗೂ ಅದರ ಉಪಯೋಗಾದಿಗಳ ಬಗ್ಗೆ ಬಹು ವಿಸ್ತಾರವಾಗಿ ಪ್ರತಿಪಾದಿಸಿದ್ದನ್ನು ನೀವೆಲ್ಲ ಕೇಳಿದ್ದೀರಿ. ಯಾವುದೇ ಕ್ರಿಯಾದಿಗಳನ್ನು ಮಾಡುವಾಗ ಅದರ ಜೊತೆಗೆ ಆ ವ್ಯಕ್ತಿಯ ಪರಿಶುದ್ಧವಾದ ಭಾವನೆಯು ಕೂಡಿಕೊಂಡರೆ ಅದು ಹೆಚ್ಚು ಹಾಗೂ ಶೀಘ್ರ ಫಲಕಾರಿಯಾಗುವುದೆಂಬುದು ತಿಳಿದುಬಂದಿದೆ. ಕಾರಣ ಪ್ರತಿಯೊಬ್ಬರೂ ತಮ್ಮ ತಮ್ಮ ವ್ಯವಹಾರವನ್ನು ಭಾವಪೂರ್ಣವಾಗಿ ನೆರವೇರಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೧ ಜುಲೈ, ೧೯೯೩
(ಸ್ಥಳ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಜ್ಞಾನಾಗಮಸ್ಥಲ

ಧರ್ಮಾಭಿಮಾನಿ ಸದ್ಭಕ್ತರೇ !

ಶ್ರೀಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ ಶ್ರೀಮಹಾಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್ ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನ ಗಳನ್ನು ನೀವೆಲ್ಲ ಆಲಿಸುತ್ತಿದ್ದೀರಿ. ನಿನ್ನೆಯ ದಿನ ಭಾವಾಗಮಸ್ಥಲದ ಬಗ್ಗೆ ನೀವೆಲ್ಲ ಸಾಕಷ್ಟು ತಿಳಿದು ಕೊಂಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಜ್ಞಾನಾಗಮಸ್ಥಲದ ಬಗ್ಗೆ ವಿವೇಚಿಸೋಣ.

ಕರ್ಮ, ಭಾವ ಮತ್ತು ಜ್ಞಾನಗಳು ಭಗವತ್‌ಪ್ರಾಪ್ತಿಯ ಮೂರು ಸಾಧನಗಳಾಗಿ ರುತ್ತವೆ. ಇವುಗಳಲ್ಲಿ ಭಾವನೆಯು ಉಭಯಾನ್ವಯೀಯಾಗಿರುವಂಥದ್ದು. ಅಂದರೆ ಕರ್ಮವನ್ನು ಮಾಡುವಾಗಲೂ ಭಾವನೆಯು ಬೇಕು ಹಾಗೂ ಜ್ಞಾನವನ್ನು ಸಂಪಾದಿಸು ವಾಗಲೂ ಸಹ ಭಾವನೆಯು ಬೇಕೇ ಬೇಕು. ಈ ಭಾವನೆಯು ಕರ್ಮದೊಂದಿಗೆ ಕೂಡಿದಾಗ ಭಕ್ತಿ ಅಥವಾ ಶ್ರದ್ಧೆಯೆಂದು ಕರೆಯಿಸಿಕೊಂಡರೆ, ಅದು ಜ್ಞಾನದ ಜೊತೆಗೆ ಕೂಡಿದಾಗ ನಿದಿಧ್ಯಾಸನವೆಂದು ಕರೆಯಲ್ಪಡುವುದು. ಹೀಗೆ ಕರ್ಮ-ಜ್ಞಾನಗಳೆರಡಕ್ಕೂ ಇದು ಬೇಕಾಗಿರೋಣದರಿಂದ ಪೂಜ್ಯಪಾದರು ಕ್ರಿಯಾಗಮ ಹಾಗೂ ಜ್ಞಾನಾಗಮ ಸ್ಥಲಗಳ ಮಧ್ಯದಲ್ಲಿ ಭಾವಾಗಮಸ್ಥಲವನ್ನು ಪ್ರತಿಪಾದಿಸಿದ್ದಾರೆ.

ಈ ಪೂರ್ವದಲ್ಲಿ ಪ್ರತಿಪಾದಿಸಲ್ಪಟ್ಟ ಭಾವಾಗಮಸ್ಥಲದ ಶಿವಯೋಗಿಯಲ್ಲಿ ಕಂಡುಬರುವ ಜ್ಞಾನದ ಲಕ್ಷಣಗಳನ್ನು ಪ್ರತಿಪಾದಿಸುವ ಸ್ಥಲವೇ ಜ್ಞಾನಾಗಮಸ್ಥಲವೆಂದು ತಿಳಿಸಲೋಸುಗ ಪೂಜ್ಯಪಾದರು ಜ್ಞಾನಾಗಮ ಸ್ಥಲದ ಬಗೆಗೆ-

ಪರಸ್ಯ ಜ್ಞಾನಚಿಹ್ನಾನಿ ಯಾನಿ ಸಂತಿ ಶರೀರಣಾಮ್ ।
ತಾನಿ ಜ್ಞಾನಾಗಮತ್ವೇನ ಪ್ರವರ್ತಂತೇ ವಿಮುಕ್ತಯೇ ॥

(ಸಿ. ಶಿ. ೧೬-೨೪)

ಹೀಗೆ ವಿವರಿಸಿದ್ದಾರೆ. ಪೂರ್ವೋಕ್ತದ ಭಾವಾಗಮಸ್ಥಲದ ಶಿವಯೋಗಿಯಲ್ಲಿ ಕಂಡು ಬರುವ ಜ್ಞಾನದ ಚಿಹ್ನೆಗಳ ಬಗ್ಗೆ ಈ ಸ್ಥಲದಲ್ಲಿ ವಿಶೇಷವಾಗಿ ಪ್ರತಿಪಾದನೆ ಮಾಡಿರೋಣದರಿಂದ ಇದಕ್ಕೆ ಜ್ಞಾನಾಗಮಸ್ಥಲವೆನ್ನುವರು.

''ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ ಏಕಮೇವಾಮುತ್ರ ಪುಣ್ಯ ಚಿತೋ ಲೋಕಃ ಕ್ಷೀಯತೇ'', ''ಜ್ಞಾತ್ವಾದೇವಂ ಮೃತ್ಯು ಪಾಶಾನ್ ಛಿನತ್ತಿ'' ಎಂಬ ಶ್ರುತಿ ವಾಕ್ಯಾನುಸಾರವಾಗಿ ಕರ್ಮದಿಂದ ಸಂಪಾದಿಸಲ್ಪಟ್ಟಿದ್ದೆಲ್ಲವೂ ಕ್ಷಯಿಸಿ ಹೋಗುತ್ತದೆ. ಅದು ಇಹಲೋಕದ್ದೇ ಇರಬಹುದು ಅಥವಾ ಪರಲೋಕದ್ದೇ ಇರಬಹುದು. ಆದರೆ ಪರಮಾತ್ಮನನ್ನು ತಿಳಿದುಕೊಂಡಾಗ ಮೃತ್ಯುಪಾಶಗಳನ್ನು ಕತ್ತರಿಸಿ ಹಾಕಬಹುದು. ಇದರಿಂದ ಕರ್ಮಕ್ಕಿಂತಲೂ ಜ್ಞಾನವು ಶ್ರೇಷ್ಠವೆಂಬುದು ತಿಳಿದುಬರುತ್ತದೆ. ಆದ್ದರಿಂದ ಕೇವಲ ಕರ್ಮವಾಗಲಿ ಅಥವಾ ಕೇವಲ ಭಾವನೆಯಾಗಲಿ ಮನುಷ್ಯನಿಗೆ ಸದ್ಗತಿಯನ್ನು ಕೊಡಲು ಸಮರ್ಥಗಳಾಗಲಾರವು. ಆದ್ದರಿಂದ ಭಾವ ಹಾಗೂ ಕರ್ಮಗಳ ಜೊತೆಗೆ ಜ್ಞಾನವನ್ನೂ ಸಹ ಪಡೆಯುವದು ಅತ್ಯಾವಶ್ಯಕವಾದುದು ಎಂಬುದನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು ಪುನಃ–

ಭಾವೇನ ಕಿಂ ಫಲಂ ಪುಂಸಾಂ ಕರ್ಮಣಾ ವಾ ಕಿಮಿಷ್ಯತೇ ।
ಭಾವ ಕರ್ಮಸಮಾಯುಕ್ತಂ ಜ್ಞಾನಮೇವ ವಿಮುಕ್ತಿದಮ್ ॥

ಕೇವಲಂ ಕರ್ಮ ಮಾತ್ರೇಣ ಜನ್ಮಕೋಟಿ ಶತೈರಪಿ ।
ನಾತ್ಮನಾಂ ಜಾಯತೇ ಮುಕ್ತಿರ್ಜ್ಞಾನಂ ಮುಕ್ತೇರ್ಹಿಕಾರಣಮ್ ॥

ಜ್ಞಾನ ಹೀನಂ ಸದಾಕರ್ಮ ಪುಂಸಾಂ ಸಂಸಾರಕಾರಣಮ್ ।
ತದೇವ ಜ್ಞಾನಯೋಗೇನ ಸಂಸಾರವಿನಿವರ್ತಕಮ್ ॥

(ಸಿ. ಶಿ. ೧೬–೨೫–೨೭)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಕೇವಲ ಕರ್ಮದಿಂದ ಇಲ್ಲವೆ ಕೇವಲ ಭಾವನೆಯಿಂದ ಮುಕ್ತಿಯು ದೊರೆಯಲಾರದು. ಆದರೆ ಭಾವ–ಕರ್ಮಗಳಿಂದ ಕೂಡಿದ ಜ್ಞಾನವೇ ಮುಕ್ತಿಯನ್ನು ಕೊಡಲು ಸಮರ್ಥವಾಗುವುದು.

ಕರ್ಮದಿಂದಲೇ ಮುಕ್ತಿಯನ್ನು ಪಡೆಯಲು ಪ್ರಯತ್ನಿಸಿ ಒಂದು ನೂರು ಕೋಟಿ ಜನ್ಮಗಳನ್ನು ಕಳೆದರೂ ಅದು ದೊರೆಯುವದಿಲ್ಲ. ಮುಕ್ತಿಗೆ ಅಮೋಘವಾದ ಸಾಧನವೆಂದರೆ ಜ್ಞಾನವೇ ! ಜ್ಞಾನಹೀನನಾದ ವ್ಯಕ್ತಿಯು ಮಾಡಿದ ಕರ್ಮಗಳು ಅವನನ್ನು ಈ ಸಂಸಾರದಲ್ಲಿ ಕಟ್ಟಿಹಾಕುತ್ತವೆ. ಆದರೆ ಅವೇ ಕರ್ಮಗಳೇ ಜ್ಞಾನಿಯಿಂದ ಆಚರಿಸಲ್ಪಟ್ಟರೆ ಜ್ಞಾನದ ಸಂಬಂಧದಿಂದ ಅವುಗಳೇ ಮುಕ್ತಿಯ ಸಾಧನಗಳಾಗುತ್ತವೆ. ಕಾರಣ ಕೇವಲ ಕರ್ಮವನ್ನಾಗಲಿ ಕೇವಲ ಭಾವನೆಯನ್ನಾಗಲಿ ತಳೆಯದೆ ಭಾವ–ಕರ್ಮಗಳೆರಡನ್ನೂ ಕೂಡಿಸಿಕೊಂಡು ಜ್ಞಾನದ ಸಹಾಯದಿಂದ ಮುಕ್ತಿಯನ್ನು ಪಡೆಯಬೇಕೆಂಬುದಾಗಿ ಪೂಜ್ಯರು ಇಲ್ಲಿ ಆದೇಶಿಸಿದ್ದಾರೆ.

ಪೂಜ್ಯರ ಈ ಉಪದೇಶದಲ್ಲಿ ಜ್ಞಾನ, ಕರ್ಮ ಹಾಗೂ ಭಾವನೆಗಳ ಒಂದು ಸುಂದರವಾದ ತ್ರಿವೇಣಿಸಂಗಮವು ನಿರೂಪಿತವಾಗಿದೆ. ಈ ಸಂಗಮದಲ್ಲಿ ಮಿಂದವರೆಲ್ಲರೂ ಅವಶ್ಯವಾಗಿ ಮುಕ್ತರಾಗುತ್ತಾರೆ. ಭಾವವಿಲ್ಲದ ಕರ್ಮ ಹಾಗೂ ನಿದಿಧ್ಯಾಸನವಿಲ್ಲದ ಜ್ಞಾನ ಇವೆರಡೂ ನಿಷ್ಪ್ರಯೋಜಕಗಳಾಗಿರುತ್ತವೆ. ಈ ಕರ್ಮ–ಜ್ಞಾನಗಳೆರಡನ್ನೂ ಸಫಲಗೊಳಸುವಂಥದ್ದು ಭಾವನೆ ಎಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಕರ್ಮ,

ಭಾವ ಮತ್ತು ಅಜ್ಞಾನಗಳು ಒಂದೆಡೆ ಸೇರಿದಾಗ ಮುಪ್ಪುರಿಯಾದ ಹಗ್ಗವು ಅತಿ ಸಬಲ ವಾಗಿರುವಂತೆ ಇವು ಮೂರು ಒಂದೆಡೆ ಸೇರಿ ಸಾಧಕನಿಗೆ ಮುಕ್ತಿಯನ್ನು ದೊರಕಿಸಿ ಕೊಡುವುದರಲ್ಲಿ ಸಮರ್ಥಶಾಲಿಗಳಾಗುತ್ತವೆ.

ಇನ್ನು ಕೇವಲ ಕರ್ಮವಾದಿಯಾದವರು ಕರ್ಮವೊಂದರಿಂದಲೇ ನಾವು ಮುಕ್ತಿಯನ್ನು ಪಡೆಯಬಲ್ಲೆವು ಎಂಬ ಅಭಿಮಾನವನ್ನು ತಾಳಿದ್ದರೆ, ಅದು ಅವರ ವ್ಯರ್ಥವಾದ ಅಭಿಮಾನವೆಂದೇ ಹೇಳಬಹುದು. ಏಕೆಂದರೆ ಕೇವಲ ಕರ್ಮವನ್ನೇ ಮಾಡುತ್ತ ನೂರು ಕೋಟಿ ಜನ್ಮಗಳನ್ನು ತಳೆದರೂ ಸಹ ಅದು ಪ್ರಯೋಜನಕಾರಿ ಯಾಗುವುದಿಲ್ಲ, ಯಾಕೆಂದರೆ ಕರ್ಮಚಕ್ರವು ಬಹು ವಿಚಿತ್ರವಾದುದು. ಕರ್ಮಗಳು ಸಂಚಿತ, ಪ್ರಾರಬ್ಧ ಮತ್ತು ಆಗಾಮಿ ಎಂಬುದಾಗಿ ಮೂರು ಪ್ರಕಾರವಾಗಿರುತ್ತವೆ. ಈ ಮೂರು ಕರ್ಮಗಳು ಪರಸ್ಪರ ಸಂಬಂಧಿಯಾಗಿರುತ್ತವೆ. ಜನ್ಮ ಜನ್ಮಾಂತರಗಳಲ್ಲಿ ಸಂಗ್ರಹಿತವಾದ ಕರ್ಮಕ್ಕೆ ಸಂಚಿತ ಕರ್ಮಗಳೆನ್ನುವರು ಸದ್ಯಃ ಸುಖ–ದುಃಖಾದಿ ಫಲವನ್ನು ಕೊಡಲು ಪ್ರಾರಂಭವಾದ ಕರ್ಮಕ್ಕೆ ಪ್ರಾರಬ್ಧಕರ್ಮವೆನ್ನುವರು. ಇನ್ನು ಈ ಕರ್ಮಫಲವನ್ನು ಅನುಭವಿಸುತ್ತ ಮತ್ತೆ ಮಾಡಲ್ಪಡುವ ಕರ್ಮಗಳಿಗೆ ಆಗಾಮಿ ಕರ್ಮ ಗಳೆನ್ನುತ್ತಾರೆ.

ಜೀವಿಯು ತಾನು ಜನ್ಮ ಜನ್ಮಾಂತರದಲ್ಲಿ ಸಂಗ್ರಹಿಸಿದ ಸಂಚಿತ ಕರ್ಮದಲ್ಲಿ ಯಾವ ಕರ್ಮವು ಫಲವನ್ನು ಕೊಡಲು ಪಕ್ವಾವಸ್ಥೆಯನ್ನು ಹೊಂದಿರುತ್ತದೆಯೋ ಅದನ್ನು ತೆಗೆದುಕೊಂಡು ಇಹಲೋಕದಲ್ಲಿ ಜನ್ಮ ತಾಳುತ್ತದೆ. ಹೀಗೆ ಜನ್ಮತಾಳಿದ ಬಳಿಕ ತಾನು ತೆಗೆದುಕೊಂಡು ಬಂದ ಈ ಪಕ್ವವಾದ ಪ್ರಾರಬ್ಧ ಕರ್ಮವು ಮುಗಿಯುವವರೆಗೆ ಸುಖ–ದುಃಖಗಳನ್ನು ಅನುಭವಿಸುತ್ತ ಪುನಃ ಪ್ರಾಕ್ತನ ಸಂಸ್ಕಾರಾನುಸಾರವಾಗಿ ಪುಣ್ಯ–ಪಾಪ ಕರ್ಮಗಳನ್ನು ಮಾಡುತ್ತಿರುತ್ತದೆ. ಹೀಗೆ ಮಾಡಿದ ಈ ಕರ್ಮಗಳೆಲ್ಲ ಪುನಃ ಸಂಚಿತದಲ್ಲಿ ಸೇರ್ಪಡೆಯಾಗುತ್ತವೆ. ಆ ಸಂಚಿತದಿಂದ ಪುನಃ ಆ ಪ್ರಾರಬ್ಧ, ನಂತರ ಆಗಾಮೀ, ಪುನಃ ಸಂಚಿತ ಹೀಗೆ ಇದೊಂದು ಕರ್ಮದ ಚಕ್ರವು ತಯಾರಾಗುತ್ತದೆ. ಇದು ಎಂದೂ ನಿಲ್ಲದ ಕರ್ಮಚಕ್ರವು. ಜೀವಾತ್ಮನು ಒಮ್ಮೆ ಈ ಚಕ್ರದಲ್ಲಿ ಸಿಲುಕಿ ಕೊಂಡನೆಂದರೆ ಹೊರ ಬರುವುದು ಅಷ್ಟೊಂದು ಸುಲಭ ಸಾಧ್ಯವಾಗುವುದಿಲ್ಲ, ಅಂತೆಯೇ ''ಗಹನಾ ಕರ್ಮಣೋ ಗತಿಃ'' ಎಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸಿವೆ. ಹೀಗೆ ಕೇವಲ ಕರ್ಮವನ್ನು ಮಾಡುವವನು ಆ ಕರ್ಮಜಾಲದಲ್ಲಿಯೇ ಸಿಲುಕಿ ಹೋಗೋಣದರಿಂದ ಅವನು ಅದೆಷ್ಟು ಜನ್ಮಗಳನ್ನು ಪಡೆದು ಆ ಕರ್ಮಗಳನ್ನು ಉಪಭೋಗಿಸಿ ಮುಗಿಸಲು ಸಾಧ್ಯವಾಗುವದಿಲ್ಲ. ಏಕೆಂದರೆ ಒಂದು ಕರ್ಮದ ಫಲ ವನ್ನು ಅನುಭವಿಸುತ್ತಿರುವಾಗಲೇ ಮತ್ತೊಂದು ಹೊಸಕರ್ಮವು ತಯಾರಾಗುತ್ತಲಿರು ತ್ತದೆ. ಅಂದಾಗ ಅದು ಮುಗಿಯುವದೆಂದು ? ಈ ಕರ್ಮಜಾಲದಿಂದ ಮುಕ್ತನಾಗ ಬೇಕಾದರೆ ಸಂಚಿತಕರ್ಮವನ್ನೆಲ್ಲ ಮೊದಲು ನಷ್ಟಗೊಳಿಸಬೇಕು. ಆಗಾಮಿಕರ್ಮಗಳು ಆಗದಂತೆ ಎಚ್ಚರಿಕೆ ವಹಿಸಬೇಕು. ಇನ್ನು ಉಳಿದಿರುವ ಪ್ರಾರಬ್ಧಕರ್ಮವೊಂದನ್ನು ಅನುಭವಿಸಿ ಮುಗಿಸಿದರೆ ಆ ಜೀವನಿಗೆ ಮುಕ್ತಿಯು ದೊರೆಯುವುದು.

ಸಂಚಿತ ಕರ್ಮವನ್ನು ನಷ್ಟಗೊಳಿಸಲು ಜ್ಞಾನವೊಂದೇ ಪ್ರಬಲವಾದ ಸಾಧನವು. ಶಾಸ್ತ್ರದಲ್ಲಿ ಈ ಜ್ಞಾನಕ್ಕೆ ಅಗ್ನಿಯೆಂಬುದಾಗಿ ಸಂಬೋಧಿಸಿದ್ದಾರೆ. ''ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ'' ಎಂಬ ಈ ಗೀತೋಕ್ತಿಯಲ್ಲಿ ಭಗವಂತನು ಆತ್ಮಜ್ಞಾನಕ್ಕೆ ಅಗ್ನಿಯ ಹೋಲಿಕೆಯನ್ನು ಕೊಟ್ಟು ಅದು ಸಂಚಿತ ಕರ್ಮವನ್ನೆಲ್ಲ ಸುಟ್ಟು ಹಾಕುವುದೆಂಬುದಾಗಿ ತಿಳಿಸಲಾಗಿದೆ. ಹೀಗೆ ಜ್ಞಾನಿಯಾದವನ ಸಂಚಿತ ಕರ್ಮಗಳು ನಷ್ಟವಾದ ಮೇಲೆ ಅವನು ತನ್ನನ್ನು ಅಕರ್ತಾ, ಅಭೋಕ್ತಾ ಎಂಬುದಾಗಿ ತಿಳಿದು ಕೊಂಡಿರೋಣದರಿಂದ ಅವನಿಗೆ ಹೊಸದಾದ ಆಗಾಮಿಕರ್ಮಗಳು ಸಂಭವಿಸಲಾರವು. ಇನ್ನು ಉಳಿದಿರುವ ಕರ್ಮವೆಂದರೆ ಪ್ರಾರಬ್ಧವು. ''ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ'' ಎಂಬ ಶಾಸ್ತ್ರೋಕ್ತಿಗನುಸಾರವಾಗಿ ಪ್ರಾರಬ್ಧಕರ್ಮವನ್ನು ಉಪ ಭೋಗಿಸಿಯೇ ಮುಗಿಸಬೇಕಾಗುವುದು. ಈ ಕರ್ಮವು ಜ್ಞಾನಿ–ಅಜ್ಞಾನಿಗಳಿಬ್ಬರಿಗೂ ಸಮಾನವಾಗಿಯೇ ಇರುತ್ತದೆ. ಅಜ್ಞನಾದ ಜೀವಿಯು ಪ್ರಾರಬ್ಧಕರ್ಮದ ಸುಖ–ದುಃಖ ವನ್ನು ಅನುಭವಿಸುವಂತೆ ಜ್ಞಾನಿಯೂ ಸಹ ತನ್ನ ಪ್ರಾರಬ್ಧದ ಫಲವನ್ನು ಅನುಭವಿಸಲೇ ಬೇಕಾಗುತ್ತದೆ. ಅಂತೆಯೇ ಲೋಕದಲ್ಲಿ ಬಹುದೊಡ್ಡ ದೊಡ್ಡ ಜ್ಞಾನೀಪುರುಷರೂ ಸಹ ಅನೇಕ ರೋಗರುಜಿನಗಳಿಂದ ಬಳಲಿ ದುಃಖವನ್ನು ಅನುಭವಿಸುವದನ್ನೂ ಸಹ ನೋಡುತ್ತೇವೆ. ಇನ್ನು ಕೆಲಜ್ಞಾನಿಗಳು ಆರೋಗ್ಯವಂತರಾಗಿ ಕೊನೆಯುಸಿರಿನವರೆಗೆ ಆನಂದವಾಗಿಯೇ ಇದ್ದು ದೇಹಬಿಡುವುದನ್ನೂ ಸಹ ಕಾಣುತ್ತೇವೆ. ಯಾರು ರೋಗಾದಿ ಗಳಿಂದ ನರಳುತ್ತಿದ್ದಾರೆಯೋ ಅದು ಪ್ರಾರಬ್ಧದಲ್ಲಿಯ ಪಾಪದ ಫಲವೆಂಬುದಾಗಿ ಭಾವಿಸಬೇಕು. ಇನ್ನು ರೋಗರುಜಿನಗಳಿಲ್ಲದೆ ಆನಂದವಾಗಿ ಕಾಲಕಳೆಯುತ್ತಿದ್ದರೆ ಅದು ಅವರ ಪ್ರಾರಬ್ಧದೊಳಗಿನ ಪುಣ್ಯದ ಫಲವೆಂದು ತಿಳಿದುಕೊಳ್ಳಬೇಕು. ಹೀಗೆ ಯಾರ ಯಾರ ಕರ್ಮಗಳು ಹೇಗೆ ಹೇಗೆ ಇರುತ್ತವೆಯೋ ಆ ರೀತಿಯಾದ ಫಲವನ್ನು ಎಲ್ಲರೂ ಅನುಭವಿಸಬೇಕಾಗುತ್ತದೆ. ಜ್ಞಾನಿಯು ಪ್ರಾರಬ್ಧಕರ್ಮವೊಂದನ್ನು ಅನುಭವಿಸಿ ಮುಗಿಸಿದ ಬಳಿಕ ಅವನಿಗೆ ಸಂಚಿತ ಮತ್ತು ಆಗಾಮಿಕರ್ಮಗಳೆರಡೂ ಇಲ್ಲದಾಗಿ ಹೋಗಿರೋಣದರಿಂದ ಅವನಿಗೆ ಪುನರ್ಜನ್ಮವು ದೊರೆಯಲಾರದು. ಅಂತೆಯೇ ಪೂಜ್ಯಪಾದರು ಕೇವಲ ಕರ್ಮವೊಂದರಿಂದ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ ವೆಂಬುದಾಗಿ ತಿಳಿಯಪಡಿಸಿ ಜ್ಞಾನಹೀನವಾದ ಕರ್ಮವು ಸಂಸಾರಕ್ಕೆ ಕಾರಣವಾದರೂ ಅದುವೇ ಜ್ಞಾನದಿಂದ ಕೂಡಿಕೊಂಡಾಗ ಸಂಸಾರದಿಂದ ಮುಕ್ತಿಯನ್ನೊದಗಿಸಲು ಸಾಧನವಾಗುತ್ತದೆ ಎಂಬುದಾಗಿ ಆದೇಶಿಸಿದ್ದಾರೆ.

ಒಂದು ತುಂಬಿದ ನದಿಯಲ್ಲಿ ಬಹುಭಾರದ ಒಂದು ಕಬ್ಬಿಣ ಗುಂಡನ್ನು ತಲೆಯ ಮೇಲೆ ಹೊತ್ತು ಜಿಗಿದರೆ, ಅದು ಆತನನ್ನು ಮುಳುಗಿಸಿ ಕೊಂದು ಹಾಕುತ್ತದೆ. ಆದರೆ ಅದೇ ಗುಂಡನ್ನೇ ಕಾಯಿಸಿ ಬಡೆದು ತಗಡನ್ನಾಗಿ ಮಾಡಿ ಅದರಿಂದ ಒಂದು ನೌಕೆಯನ್ನು ತಯಾರಿಸಿ ಅದರಲ್ಲಿ ಕುಳಿತು ನದಿಯಲ್ಲಿ ಪ್ರಯಾಣಮಾಡಿದರೆ ಈ ದಡದಿಂದ ಆ ದಡವನ್ನು ಸುರಕ್ಷಿತವಾಗಿ ತಲುಪಬಹುದು. ಹೀಗೆ ಕೇವಲ ಕರ್ಮವನ್ನು ಮಾಡುವವನು ಸಂಸಾರದಲ್ಲಿ ಮುಳುಗಿ ಹೋದರೂ, ಜ್ಞಾನಿಯಾಗಿ ಕರ್ಮವನ್ನು ಮಾಡಿದರೆ ಅವನು ಸಂಸಾರದಿಂದ ಪಾರಾಗಬಲ್ಲನು. ಅಜ್ಞನಾದ ಜೀವಿಯು ಕರ್ತೃತ್ವ

ಭಾವನೆಯಿಂದ ಕೂಡಿ ಕೊಂಡಿರೋಣದರಿಂದ ಅವನು ಸಂಸಾರದಲ್ಲಿ ಬದ್ಧಿತ ನಾದರೂ, ಜ್ಞಾನಿಯು ಅಕರ್ತೃರ್ತ್ವ ಭಾವನೆಯಿಂದ ಕರ್ಮಗಳನ್ನು ಮಾಡುತ್ತಿರುವುದ ರಿಂದ ಇವನಿಗೆ ಯಾವುದೇ ವಿಧವಾದ ಬಂಧನವಾಗುವುದಿಲ್ಲವೆಂಬ ಭಾವನೆಯು. ಅಂತೆಯೇ ಭಗವದ್ಗೀತೆಯಲ್ಲಿ ಭಗವಂತನು ಅರ್ಜುನನಿಗೆ ಆತ್ಮಜ್ಞಾನವನ್ನು ಮಾಡಿ ಕೊಟ್ಟು, ಪುನಃ ಅವನನ್ನು ಕರ್ತವ್ಯಕರ್ಮದಲ್ಲಿ ತೊಡಗಿಸಿದ್ದನ್ನು ನಾವು ನೋಡುತ್ತೇವೆ. ಇದರಿಂದ ತಿಳಿದುಬರುವುದೇನೆಂದರೆ ಕೇವಲ ಕರ್ಮವು ಬಂಧನಕಾರಿಯಾದರೆ ಅದುವೇ ಜ್ಞಾನದಿಂದ ಕೂಡಿಕೊಂಡಾಗ ಮುಕ್ತಿಯ ಸಾಧನವಾಗುತ್ತದೆ.

ಜ್ಞಾನಹೀನವಾದ ಕರ್ಮವು ಹೇಗೆ ಬಂಧನಕಾರಿಯಾಗುವುದು ? ಎಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು ಪುನಃ–

ಫಲಂ ಕ್ರಿಯಾವತಾಂ ಪುಂಸಾಂ ಸ್ವರ್ಗಾದ್ಯಂ ನಶ್ವರಂ ಯತಃ।
ತಸ್ಮಾತ್ ಸ್ಥಾಯಿಫಲ ಪ್ರಾಪ್ತ್ಯೈ ಜ್ಞಾನಮೇವ ಸಮಭ್ಯಸೇತ್ ॥

(ಸಿ. ಶಿ.೧೬–೨೮)

ಹೀಗೆ ವಿವರಿಸಿದ್ದಾರೆ. ಕೇವಲ ಕರ್ಮದ ಫಲವಾದ ಸ್ವರ್ಗಾದಿ ಲೋಕಗಳು ನಶ್ವರ ವಾದವುಗಳು. ಆದ್ದರಿಂದ ಶಾಶ್ವತವಾದ ಫಲವನ್ನು ಪಡೆಯುವುದಕ್ಕೋಸ್ಕರ ಜ್ಞಾನ ವನ್ನೇ ಚೆನ್ನಾಗಿ ಅಭ್ಯಾಸ ಮಾಡಬೇಕು ಎಂಬುದು ಪೂಜ್ಯರ ಆಶಯವಾಗಿದೆ. ಶಾಸ್ತ್ರ ದಲ್ಲಿ ಕರ್ಮಗಳು ಎರಡು ಪ್ರಕಾರವಾಗಿ ವಿಭಾಗಿಸಲ್ಪಟ್ಟಿರುತ್ತವೆ. ಅವುಗಳಲ್ಲಿ ಮೊದಲನೆ ಯದು 'ಪತಿಕರ್ಮವು' ಎರಡನೆಯದು 'ಪಶುಕರ್ಮವು'. ಇಷ್ಟಲಿಂಗ ಪೂಜಾರೂಪ ವಾದ ಕರ್ಮವು ಪತಿಯಾದ ಪರಮಾತ್ಮನ ಪ್ರಾಪ್ತಿಗೆ ಸಹಾಯಕವಾಗಿರುವುದರಿಂದ ಅದಕ್ಕೆ ಪತಿಕರ್ಮವೆಂದು ಕರೆದಿದ್ದಾರೆ. ಇನ್ನು ಸ್ವರ್ಗಾದಿಗಳಿಗೆ ಸಾಧನವಾದ ಯಜ್ಞ ಯಾಗಾದಿಗಳಿಗೆ ಪಶುಕರ್ಮವೆನ್ನುತ್ತಾರೆ. ಈ ಪಶು ಕರ್ಮಗಳನ್ನು ಮಾಡುವುದರಿಂದ ಜೀವಾತ್ಮನು ಈ ಸಂಸಾರದಲ್ಲಿ ಪುನಃ ಪುನಃ ಬರುತ್ತಿರುತ್ತಾನೆ. ಇದರಿಂದ ಎಂದಿಗೂ ಪತಿಯಾದ ಪರಮಾತ್ಮನ ಪ್ರಾಪ್ತಿಯು ಉಂಟಾಗುವುದಿಲ್ಲ, ''ತೇ ತಂ ಭುಕ್ತ್ವಾ ಸ್ವರ್ಗ ಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'', ಎಂಬ ಉಕ್ತಿಗನು ಸಾರವಾಗಿ ಯಜ್ಞಾದಿ ಕರ್ಮಗಳ ಫಲವಾದ ಸ್ವರ್ಗಾದಿಗಳನ್ನು ಅನುಭವಿಸಿ, ಆ ಪುಣ್ಯವು ತೀರಿದ ಬಳಿಕ ಪುನಃ ಜೀವಿಯು ಮರ್ತ್ಯ ಲೋಕಕ್ಕೆ ಬರುತ್ತಾನೆ. ಇಲ್ಲಿ ಪುನಃ ಆ ಕರ್ಮಗಳನ್ನೇ ಮಾಡಿ ಮತ್ತೆ ಸ್ವರ್ಗಾದಿಲೋಕಗಳಿಗೆ ಹೋಗುತ್ತಾನೆ. ಹೀಗೆ ಇವನ ಗಮನಾಗಮನ ಪರಂಪರೆಯು ಅಖಂಡವಾಗಿ ಸಾಗುತ್ತಲೇ ಇರುತ್ತದೆ. ಅದೆಷ್ಟು ಸಾರೆ ಕ್ಷಯ ಪತನಾದಿಗಳನ್ನು ಅನುಭವಿಸಿಯೂ ಅವುಗಳ ಬಗ್ಗೆ ನಿಸ್ಪೃಹ ಭಾವನೆಯು ಮೂಡುವುದಿಲ್ಲ, ಅಂತೆಯೇ ಆ ವ್ಯಕ್ತಿಗೆ ಪಶುವೆಂತಲೂ, ಅವನು ಮಾಡುವ ಆ ಕರ್ಮಗಳಿಗೆ ಪಶುಕರ್ಮವೆಂತಲೂ ಕರೆಯುತ್ತಾರೆ. ಕಾಯಿಪಲ್ಲೆಯ ಮಾರುಕಟ್ಟೆಯಲ್ಲಿ ಕೆಲವೊಂದು ಪಶುಗಳು ದಿನಾಲೂ ಹೋಗಿ ಭಾಗವಾನರ ಬುಟ್ಟಿಯಲ್ಲಿ ಬಾಯಿ ಹಾಕಿ ಕಾಯಿಪಲ್ಲೆಯನ್ನು ತಿನ್ನುತ್ತಿರುತ್ತವೆ. ಆಗ ಭಾಗವಾನನು ಒಂದು ದೊಣ್ಣೆಯಿಂದ ಅದರ ಬೆನ್ನಿಗೆ ಚೆನ್ನಾಗಿ ಏಟು ಕೊಡುತ್ತಾನೆ. ಭಯಭೀತವಾದ ಆ ಪಶುವು ಮುಂದೆ ಹೋಗಿ

ಮತ್ತೊಬ್ಬ ಭಾಗವಾನನ ಬುಟ್ಟಿಯಲ್ಲಿ ಬಾಯಿ ಹಾಕುತ್ತದೆ. ಅಲ್ಲಿಯೂ ಅದಕ್ಕೆ ಮೊದಲಿನ ಗತಿಯೇ ಉಂಟಾಗುವುದು. ಈ ಪಶುವಿನ ಈ ವ್ಯವಹಾರವು ಅದರ ದೈನಂದಿನ ದಿನಚರಿಯಾಗಿರುತ್ತದೆ. ಬಡಿಸಿಕೊಳ್ಳುವದನ್ನೂ ಬಿಡುವದಿಲ್ಲ ಮತ್ತು ಬುಟ್ಟಿಯಲ್ಲಿ ಬಾಯಿ ಹಾಕುವುದನ್ನು ಸಹ ಬಿಡುವುದಿಲ್ಲ. ಇಷ್ಟೊಂದು ಪೆಟ್ಟು ಬಿದ್ದರೂ ಬುಟ್ಟಿಯಲ್ಲಿ ಬಾಯಿ ಹಾಕಬಾರದೆಂಬ ತಿಳುವಳಿಕೆಯು ಅದಕ್ಕೆ ಬರದಿರಲು ಕಾರಣ ವೇನೆಂದರೆ ಅದು ಅಜ್ಞವಾದ ಪಶುವಾಗಿರುತ್ತದೆ. ಇದೇ ಪ್ರಕಾರವಾಗಿ ಯಜ್ಞ-ಯಾಗಾದಿಗಳನ್ನು ಮಾಡಿ ಸ್ವರ್ಗವನ್ನು ಪಡೆದು ಪುನಃ ಅದರಿಂದ ಕ್ಷಯ-ಪತನಾದಿಗಳನ್ನು ಅನುಭವಿಸಿದರೂ ಅದರಿಂದ ವಿಮುಖನಾಗದ ಮನುಷ್ಯನು ಪೂರ್ವೋಕ್ತವಾದ ಪಶುವಿಗೆ ಸಮಾನನಾಗಿರುತ್ತಾನೆ. ಅಂತೆಯೇ ಯಜ್ಞಾದಿಗಳಿಗೆ ಪಶುಕರ್ಮವೆಂದು ಕರೆದಿದ್ದಾರೆ.

ಇದೂ ಅಲ್ಲದೆ ಪ್ರತಿಯೊಬ್ಬ ಜೀವನು ಆಣವ, ಮಾಯಾ ಮತ್ತು ಕಾರ್ಮಿಕ ಗಳೆಂಬ ಮೂರು ವಿಧ ಪಾಶದಿಂದ ಬಂಧಿತನಾಗಿರುತ್ತಾನೆ. ಅಂತೆಯೇ ಇವನಿಗೆ ಪಶುವೆಂದು ಕರೆದಿದ್ದಾರೆ. ಆದೆಷ್ಟು ಸಾರೆ ಯಜ್ಞಯಾಗಾದಿಗಳನ್ನು ಮಾಡಿದರೂ ಈ ಪಾಶಗಳು ಕತ್ತರಿಸಿ ಹೋಗಲಾರವು. ಈ ಯಜ್ಞಾದಿಗಳಿಂದ ಭೋಗಪ್ರವೃತ್ತಿಯೇ ಹೆಚ್ಚು ಬೆಳೆಯುತ್ತ ಹೋಗುವುದರಿಂದ ಇವುಗಳಿಗೆ ಪಶುಕರ್ಮವೆನ್ನುವುದು ಸಾರ್ಥಕವೆಂಬು ದಾಗಿ ತಿಳಿದು ಬರುತ್ತದೆ.

ಮನುಷ್ಯನಲ್ಲಿರುವ ಭೋಗಲಾಲಸೆಯು ಬಹು ವಿಚಿತ್ರವಾದುದು. ಎಷ್ಟೇ ಭೋಗ ಭಾಗ್ಯಗಳು ದೊರೆತರೂ ಸಂತೃಪ್ತಿಯೆನ್ನುವುದು ಆಗುವುದಿಲ್ಲ. ಒಮ್ಮೆ ಒಬ್ಬ ರಾಜನ ದರ್ಬಾರದಲ್ಲಿ ಬಾಲ ಕವಿಯೋರ್ವನು ಬಂದು ತನ್ನ ಕವಿತಾಚಾತುರ್ಯದಿಂದ ರಾಜನ ಮನವನ್ನು ಸೂರೆಗೊಂಡನು. ಆಗ ರಾಜನು ಅತ್ಯಂತ ಸಂತುಷ್ಟನಾಗಿ ತನ್ನ ಮುಖ್ಯ ಮಂತ್ರಿಯನ್ನು ಕರೆದು ಆದೇಶಿಸಿದ್ದೇನೆಂದರೆ ''ಈ ಬಾಲ ಕವಿಯನ್ನು ನಮ್ಮ ಖಜಾನೆಗೆ ಕರೆದುಕೊಂಡು ಹೋಗಿ ಅಲ್ಲಿ ಇವನಿಗೆ ಏನು ಬೇಕೋ ಮತ್ತು ಎಷ್ಟು ಬೇಕೋ ಅಷ್ಟನ್ನು ತೆಗೆದುಕೊಳ್ಳಲು ಸ್ವಾತಂತ್ರ್ಯವನ್ನು ಕೊಟ್ಟು ಬಿಡಿ. ಆದರೆ ಅವನಿಗೆ ಕೊಟ್ಟ ಈ ಸ್ವಾತಂತ್ರ್ಯವು ಒಂದು ತಾಸಿನವರೆಗೆ ಮಾತ್ರ ಇರತಕ್ಕದ್ದು. ಒಂದು ತಾಸು ವೇಳೆ ಮುಗಿದೊಡನೆ ಖಜಾನೆಯನ್ನು ಬಂದು ಮಾಡಬೇಕು.''

ರಾಜನ ಆದೇಶದಂತೆ ಮಂತ್ರಿಯು ಆ ಬಾಲ ಕವಿಯನ್ನು ಕರೆದುಕೊಂಡು ಖಜಾನೆಯ ಕಡೆಗೆ ಹೋಗಿ ಅದರ ಕೀಲಿಯನ್ನು ತೆರೆದು ಅವನನ್ನು ಒಳಗೆ ಬಿಟ್ಟನು. ಅಲ್ಲಿರುವ ಮುತ್ತು, ಮಾಣಿಕ್ಯ, ರತ್ನ, ವಜ್ರ, ವೈಢೂರ್ಯ ಬೆಳ್ಳಿ-ಬಂಗಾರಗಳ ರಾಶಿಯನ್ನು ನೋಡಿ ಬಾಲಕನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಈ ಸಾಮಾನುಗಳನ್ನು ಹೇಗೆ ಒಯ್ಯಬೇಕು ? ಎಂದು ಆಲೋಚಿಸಿ ಮಂತ್ರಿಯನ್ನು ಕರೆದು ಕೇಳಿದ್ದೇನೆಂದರೆ, ''ನಾನು ಮನೆಯಿಂದ ಬರುವಾಗ ಬರಿಗೈಯಿಂದ ಬಂದಿದ್ದೇನೆ. ನನ್ನ ಹತ್ತಿರ ಈ ವಸ್ತುಗಳನ್ನು ಒಯ್ಯಲು ಯಾವ ಪಾತ್ರೆಯೂ ಇಲ್ಲ. ಕಾರಣ ನಿಮ್ಮಲ್ಲಿಯೇ ಇದ್ದ ಒಂದು ದೊಡ್ಡ ಪಾತ್ರೆಯನ್ನು ನನಗೆ ಕೊಡಿ'' ಆಗ ಮಂತ್ರಿಯು ಬಾಲಕನ ಇಚ್ಛೆಯಂತೆ

ಒಂದು ದೊಡ್ಡ ತಾಮ್ರದ ಹಂಡೆಯನ್ನು ತಂದಿರಿಸಿದನು. ಬಾಲ ಕವಿಯು ಆ ಪಾತ್ರೆಯಲ್ಲಿ ಮೊದಲು ಮುತ್ತುಗಳನ್ನು ತುಂಬಿದನು. ಅದನ್ನು ತುಂಬಿದ ಬಳಿಕ ಪಕ್ಕದಲ್ಲಿರುವ ಮಾಣಿಕ್ಯದ ರಾಶಿಯನ್ನು ಕಂಡು ಅಯ್ಯೋ ಮಾಣಿಕ್ಯವನ್ನು ಬಿಟ್ಟು ಕೇವಲ ಮುತ್ತುಗಳನ್ನೇ ತುಂಬಿಕೊಂಡೆನಲ್ಲ ಎಂದು ಅಸಮಾಧಾನಪಟ್ಟು ಪಾತ್ರೆಯಲ್ಲಿಯ ಮುತ್ತುಗಳನ್ನೆಲ್ಲ ಸುರಿದು ಅದರಲ್ಲಿ ಮಾಣಿಕ್ಯಗಳನ್ನು ತುಂಬತೊಡಗಿದನು. ಸ್ವಲ್ಪ ಹೊತ್ತಿನಲ್ಲಿಯೇ ಪಾತ್ರೆಯು ತುಂಬಿತೇನೋ ನಿಜ. ಈತನ ಮನಸ್ಸು ಮಾತ್ರ ತುಂಬದೇ ಹೋಯಿತು. ಮಾಣಿಕ್ಯದ ಪಕ್ಕದಲ್ಲಿರುವ ವಜ್ರದ ರಾಶಿಯನ್ನು ನೋಡಿ ಬೆಚ್ಚನೆ ಬೆರಗಾದ. 'ಅಯ್ಯೋ ನನ್ನ ದಡ್ಡತನವೇ ! ಇದೇನು ಮಾಡಿದೆ. ಬೆಲೆಬಾಳುವ ವಜ್ರವನ್ನು ಬಿಟ್ಟು ಕೇವಲ ಮಾಣಿಕ್ಯವನ್ನೇ ತುಂಬಿದೆನಲ್ಲಾ !'' ಎಂದು ಪಶ್ಚಾತ್ತಾಪ ಪಟ್ಟು ಪಾತ್ರೆಯಿಂದ ಮಾಣಿಕ್ಯವೆಲ್ಲವನ್ನೂ ತೆಗೆದು ಆ ಪಾತ್ರೆಯನ್ನು ಪುನಃ ಖಾಲಿ ಮಾಡಿದನು. ಅದರಲ್ಲಿ ವಜ್ರದ ಹರಳುಗಳನ್ನು ತುಂಬಿದನು. ಅಲ್ಲಿರುವ ಒಂದಕ್ಕಿಂತಲೂ ಒಂದು ಹೆಚ್ಚು ಬೆಲೆಬಾಳುವ ಆಕರ್ಷಕ ವಸ್ತುಗಳಿಂದ ಆಕರ್ಷಿತ ಚಿತ್ತವುಳ್ಳ ಆತನು ಅಲ್ಲಿರುವ ಅಮೌಲ್ಯ ವಸ್ತುಗಳನ್ನು ಪಾತ್ರೆಯಲ್ಲಿ ತುಂಬುವ ಹಾಗೂ ಖಾಲಿಮಾಡುವ ಉದ್ಯೋಗದಲ್ಲಿ ಆಸಕ್ತನಾಗಿ ವೇಳೆಯ ಕಡೆಗೆ ಗಮನಹರಿಸಲಿಲ್ಲ, ಅಷ್ಟರಲ್ಲಿ ಒಂದು ಘಂಟೆಕಾಲ ಪೂರ್ಣವಾಗಿತ್ತು. ಆಗ ಮಂತ್ರಿಯು ಬಂದು ''ಎಲೈ ಬಾಲಕನೇ ! ನಿನಗೆ ಕೊಟ್ಟ ಅವಧಿಯು ಮುಗಿದುಹೋಗಿದೆ. ನೀನು ಪಾತ್ರೆಯಲ್ಲಿ ಏನನ್ನು ತುಂಬಿದೆಯೋ ಅಷ್ಟನ್ನು ನಿನ್ನ ಮನೆಗೆ ಕಳಿಸುವ ವ್ಯವಸ್ಥೆಮಾಡುತ್ತೇವೆ ನೀನು ಹೊರಗೆ ಬಾ'' ಎಂಬುದಾಗಿ ಅವನನ್ನು ಕರೆದನು. ಬಾಲಕನು ಹೊರಬಂದ ಬಳಿಕ ಮಂತ್ರಿಯು ಒಳಹೋಗಿ ನೋಡಲು ಇವನಿಗೆ ಕೊಟ್ಟ ಆ ಪಾತ್ರೆಯು ಬರಿದಾಗಿತ್ತು, ಅದನ್ನು ನೋಡಿ ಆಶ್ಚರ್ಯಪಟ್ಟ ಮಂತ್ರಿಯು ಆ ಬಾಲಕನನ್ನುದ್ದೇಶಿಸಿ ''ಎಲೈ ಬಾಲಕನೇ ! ಈ ಪಾತ್ರೆಯಲ್ಲಿ ಏನನ್ನೂ ತುಂಬಿಲ್ಲವಲ್ಲ ? ಒಂದು ಘಂಟೆಯವರೆಗೆ ನೀನು ಏನು ಮಾಡಿದೆ ?'' ಎಂದು ಪ್ರಶ್ನಿಸಿದನು. ಆಗ ಬಾಲಕನು ತಾನು ಮಾಡಿದ ವ್ಯವಹಾರವನ್ನು ಹೇಳಲಾಗಿ ರಾಜ ಹಾಗೂ ಮಂತ್ರಿ ಗಳೀರ್ವರೂ ಗಹಗಹಿಸಿ ನಗತೊಡಗಿದರು. ಕೊನೆಗೆ ಬಾಲಕನನ್ನುದ್ದೇಶಿಸಿ ''ಎಲೈ ಬಾಲಕನೇ ! ನೀನು ನೋಡಲು ಇಷ್ಟೊಂದು ಚಿಕ್ಕವನಾಗಿರುವೆ. ಆದರೆ ನಿನ್ನೊಳಗೆ ತುಂಬಿಕೊಂಡಿರುವ ಲೋಭವು ಬಹು ಭಯಾನಕವಾದುದು. ಇದರ ವಶೀಭೂತನಾದ ನೀನು ಏನೆಲ್ಲ ಪದಾರ್ಥಗಳು ಎದುರಿಗಿದ್ದರೂ, ಏನನ್ನೂ ಒಯ್ಯದೆ ಬರಿಗೈಯ್ಯಿಯಿಂದ ಹೋಗುವಂತೆ ಮಾಡಿತು ಈ ನಿನ್ನ ಲೋಭ. ಇನ್ನು ಮುಂದೆಯಾದರೂ ಈ ಭೋಗ ಲಾಲಸೆಯನ್ನು ಕಡಿಮೆಮಾಡಿಕೊಂಡು ಸುಖವಾಗಿರಲು ಪ್ರಯತ್ನಿಸು ಎಂಬುದಾಗಿ ರಾಜನು ಬಾಲಕನಿಗೆ ಬುದ್ಧಿವಾದವನ್ನು ಹೇಳಿ ಕಳಿಸಿದನು.

ಕೇಳಲು ಇದೊಂದು ಕಾಲ್ಪನಿಕ ಕಥೆಯಾಗಿದ್ದರೂ ಭೋಗಲಾಲಸೆಯ ಕುಪರಿಣಾಮವನ್ನು ವ್ಯಕ್ತಗೊಳಿಸುವ ಇದೊಂದು ಪ್ರತಿಯೊಬ್ಬರ ಜೀವನದ ವಾಸ್ತವಿಕ ಕಥೆಯಾಗಿದೆ. ಮನುಷ್ಯನು ತನ್ನ ಹೃದಯವೆಂಬ ಪಾತ್ರೆಯಲ್ಲಿ ಜ್ಞಾನರತ್ನವನ್ನು ತುಂಬಿಕೊಂಡು ಶಾಶ್ವತ ಸುಖವನ್ನು ಹೊಂದುವುದನ್ನು ಬಿಟ್ಟು ವಿಷಯಾಸಕ್ತನಾಗಿ ಒಂದನ್ನು ಬಿಟ್ಟು ಮತ್ತೊಂದನ್ನು ಹಿಡಿದು ಅದನ್ನು ಬಿಟ್ಟು ಇನ್ನೊಂದನ್ನು ಹಿಡಿಯುವ ಈ

ವ್ಯರ್ಥ ವ್ಯವಹಾರದಲ್ಲಿಯೇ ಕಾಲಕಳೆಯುತ್ತಿರುತ್ತಾನೆ. ಅಂತೆಯೇ ಪೂಜ್ಯಪಾದರು ಜನನ–ಮರಣಕ್ಕೆ ಕಾರಣೀಭೂತಗಳಾದ ಯಜ್ಞಯಾಗಾದಿ ಪಶುಕರ್ಮಗಳನ್ನಾಚರಿಸಿ ನಶ್ವರವಾದ ಸ್ವರ್ಗಾದಿ ಸುಖವನ್ನು ಪಡೆಯುವದಕ್ಕಿಂತ ಆತ್ಮಜ್ಞಾನವನ್ನು ಪಡೆದು ಮೋಕ್ಷರೂಪವಾದ ಶಾಶ್ವತ ಫಲವನ್ನು ಪಡೆಯಬೇಕು. ಅದಕ್ಕಾಗಿ ಜ್ಞಾನಾಭ್ಯಾಸವನ್ನು ಮಾಡಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಆದ್ದರಿಂದ ಪೂಜ್ಯರ ಆದೇಶದ ಬಗ್ಗೆ ಸರಿಯಾಗಿ ವಿಚಾರಮಾಡಿ ಜ್ಞಾನಯುಕ್ತವಾದ ಪತಿ ಕರ್ಮವನ್ನಾಚರಿಸಿ ತನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳಲು ಪ್ರಯತ್ನಿಸಬೇಕೆಂಬುದಾಗಿ ಹಾರೈಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ಆಗಸ್ಟ್, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಜ್ಞಾನಾಗಮಸ್ಥಲ

ಮುಮುಕ್ಷುಗಳೇ !

ಶ್ರೀಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ ಶ್ರೀಮಹಾ ಸನ್ನಿಧಿಯ ತಪೋಽನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್ ಸ್ಥಲಾಂತರ್ಗತ ವಾದ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಜ್ಞಾನಾಗಮ ಸ್ಥಲದ ಕೆಲವು ವಿಚಾರಗಳನ್ನು ಶ್ರವಣ ಮಾಡಿದ್ದೀರಿ. ಇಂದು ಅದೇ ಸ್ಥಲದ ಅವಿಶಿಷ್ಟ ಭಾಗವನ್ನು ಕುರಿತು ವಿವೇಚಿಸ ಲಾಗುವುದು.

ಮನುಷ್ಯನ ಜೀವನದಲ್ಲಿ ಜ್ಞಾನವು ಪರಮಾವಶ್ಯಕವಾದುದು. ಲೌಕಿಕ ಜ್ಞಾನದಿಂದ ಜೀವಾತ್ಮನು ಜಗತ್ತಿನಲ್ಲಿ ಸುಖವನ್ನು ಅನುಭವಿಸಿದರೆ, ಆಧ್ಯಾತ್ಮಿಕ ದಿವ್ಯಜ್ಞಾನದಿಂದ ಇವನಿಗೆ ಮುಕ್ತಿಯು ಪ್ರಾಪ್ತವಾಗುವುದು. ಲೌಕಿಕ ಇಲ್ಲವೆ ಆಧ್ಯಾತ್ಮಿಕ ಜ್ಞಾನವಿಲ್ಲದವನು ''ಜ್ಞಾನೇನ ಹೀನಃ ಪಶುಭಿಃ ಸಮಾನಃ'' ಎಂಬ ಉಕ್ತಿಗನುಸಾರವಾಗಿ ಪಶುವಿಗೆ ಸಮಾನ ನಾಗಿರುತ್ತಾನೆ. ನೋಡಲಿಕ್ಕೆ ಶರೀರವು ಮನುಷ್ಯನದಾಗಿದ್ದರೂ, ಆತನು ಜ್ಞಾನಶೂನ್ಯನಾಗಿ ರೋಣದರಿಂದ ಅವನನ್ನು ಪಶುವಿನಲ್ಲಿಯೇ ಪರಿಗಣಿಸಲಾಗಿದೆ. ನಮ್ಮ ಜೀವನದಲ್ಲಿ ವ್ಯವಹಾರಕ್ಕೆ ಲೌಕಿಕ ಜ್ಞಾನವು ಎಷ್ಟು ಮಹತ್ವದ್ದೊ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಆತ್ಮಜ್ಞಾನಕ್ಕೆ ಬಹಳಷ್ಟು ಪ್ರಾಶಸ್ತ್ಯವಿದೆ. ಅಂತೆಯೇ ಪೂಜ್ಯಪಾದರು ಈ ಜ್ಞಾನಾಗಮಸ್ಥಲದಲ್ಲಿ ಆತ್ಮ ಜ್ಞಾನದ ಮಹತಿಯನ್ನು ಪ್ರತಿಪಾದಿಸುತ್ತ ಆ ಜ್ಞಾನವನ್ನು ಹೇಗೆ ಪಡೆಯಬೇಕು ಎಂಬ ಪ್ರಶ್ನೆಯುದ್ಭವಿಸಿದಾಗ ಅದಕ್ಕೆ ಸಮಾಧಾನ ರೂಪವಾಗಿ ಪುನಃ–

ಶಾಸ್ತ್ರಾಭ್ಯಾಸಾದಿಯತ್ನೇನ ಸದ್ಗುರೋರುಪದೇಶತಃ ।
ಜ್ಞಾನಮೇವ ಸಮಭ್ಯಸ್ಯೇತ್ ಕಿಮನ್ಯೇನ ಪ್ರಯೋಜನಮ್ ॥

(ಸಿ. ಶಿ. ೧೬–೨೯)

ಹೀಗೆ ತಿಳಿಯಪಡಿಸಿದ್ದಾರೆ. ಸದ್ಗುರುಗಳ ಅನುಗ್ರಹದಿಂದ ನಿಗಮಾಗಮಾಂತಗಳಾದ ವೀರಶೈವ ಶಾಸ್ತ್ರಗಳನ್ನು ಪ್ರಯತ್ನಪೂರ್ವಕವಾಗಿ ಅಭ್ಯಾಸಮಾಡಿ ಜ್ಞಾನವನ್ನು ಸಂಪಾದಿಸ ಬೇಕು. ಇದನ್ನು ಬಿಟ್ಟು ಬೇರೆ ಏನನ್ನೇ ಮಾಡಿದರೂ ಅದೆಲ್ಲವೂ ಪ್ರಯೋಜನ ಹೀನ ವಾಗುತ್ತದೆ ಎಂಬುದು ಪೂಜ್ಯರ ಆಶಯವಾಗಿರುತ್ತದೆ.

ಜ್ಞಾನವು ಕೇವಲ ಬೇಕು ಬೇಕು ಎಂದು ಬಯಸಿದ ಮಾತ್ರಕ್ಕೆ ಸಿಗುವ ವಸ್ತುವಲ್ಲ. ಅದಕ್ಕಾಗಿ ಸದ್ಗುರುಗಳಿಗೆ ಶರಣಾಗತರಾಗಿ ಶಾಸ್ತ್ರಾಭ್ಯಾಸವನ್ನು ಮಾಡಬೇಕಾಗುವುದು. ಶಾಸ್ತ್ರಗಳು ಅನೇಕಗಳಾಗಿರೋಣದರಿಂದ ಅವುಗಳ ತಾತ್ಪರ್ಯವನ್ನು ಗ್ರಹಿಸಬೇಕಾದರೆ ಸದ್ಗುರುವಿನ ಮಾರ್ಗದರ್ಶನವು ಬೇಕೇ ಬೇಕು. ಇಲ್ಲವಾದರೆ ''ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಮ್'' ಎಂಬ ಉಕ್ತಿಗನುಸಾರವಾಗಿ ಗುರುವಿಲ್ಲದೆ ಶಾಸ್ತ್ರಾಭ್ಯಾಸವನ್ನು ಮಾಡುವ ವ್ಯಕ್ತಿಯು ಶಬ್ದಜಾಲವೆಂಬ ಮಹಾರಣ್ಯದಲ್ಲಿ ಸಿಲುಕಿ ಚಿತ್ತಭ್ರಮೆಯನ್ನು ಮಾಡಿಕೊಳ್ಳುತ್ತಾನೆ. ಒಂದೊಂದು ಶಾಸ್ತ್ರವನ್ನು ಅಭ್ಯಾಸಮಾಡಲು ನಮಗೆ ದೊರೆತ ಆಯುಷ್ಯವೇ ಸಾಲುವುದಿಲ್ಲ. ಅಂದಾಗ ಯಾವಾಗ ಏನನ್ನು ಅರಿತು ಕೊಳ್ಳಬೇಕು ಎಂಬುದಕ್ಕೆ ಗುರುಗಳ ಮಾರ್ಗದರ್ಶನವು ಅವಶ್ಯವಾಗಿರಬೇಕು.

ಆದ್ಯ ಶಂಕರಾಚಾರ್ಯರು ಒಮ್ಮೆ ಕಾಶಿಯ ಬೀದಿಗಳಲ್ಲಿ ಸಂಚರಿಸುವಾಗ ಒಂದು ಮನೆಯ ಕಿಡಕಿಯಿಂದ ವ್ಯಾಕರಣ ಸೂತ್ರವನ್ನು ಅಭ್ಯಾಸಮಾಡುವ ಒಬ್ಬ ವಯೋವೃದ್ಧನ ಧ್ವನಿಯು ಕೇಳಿಬಂದಿತು. ಆಗ ಶ್ರೀ ಶಂಕರಾಚಾರ್ಯರು ಆ ಧ್ವನಿಯ ಸುಳಿವನ್ನು ಹಿಡಿದು ಮನೆಯನ್ನು ಪ್ರವೇಶಿಸಿ ನೋಡಲಾಗಿ ತೊಂಭತ್ತು ವರ್ಷದ ಯಜಮಾನನೊಬ್ಬ ''ಡುಕೃಞಕರಣೇ'' ಎಂಬ ಪಾಣಿನಿಯ ವ್ಯಾಕರಣ ಸೂತ್ರವನ್ನು ಕಂಠಪಾಠ ಮಾಡುತ್ತಿದ್ದನು. ಅವನ ಜರಾಜೀರ್ಣವಾದ ಶರೀರದ ಕಡೆಗೆ ನೋಡಿ ಶಂಕರರು ತಮ್ಮ ಮನಸ್ಸಿನಲ್ಲಿ ಯೋಚಿಸಿದ್ದೇನೆಂದರೆ ಅಯ್ಯೋ ಪಾಪ ಮೃತ್ಯುವಿನ ದವಡೆಯಲ್ಲಿ ಕುಳಿತಿರುವ ಈ ಮುದುಕ ಮಹಾದೇವನನ್ನು ಕುರಿತು ಚಿಂತಿಸದೆ ವ್ಯಾಕರಣ ಸೂತ್ರವನ್ನು ಕಂಠಪಾಠ ಮಾಡುತ್ತಿದ್ದಾನೆ. ಬಾಲ್ಯಾವಸ್ಥೆಯಲ್ಲಿ ಮಾಡಬೇಕಾಗಿದ್ದ ಆ ಅಭ್ಯಾಸವನ್ನು ಈಗ ಮಾಡುತ್ತಲಿದ್ದಾನೆ. ಇದು ವ್ಯಾಕರಣವನ್ನು ಅಭ್ಯಾಸ ಮಾಡುವ ವಯಸ್ಸಲ್ಲ ಎಂದು ಯೋಚಿಸಿ ಅವನ ಬಳಿ ಸಾರಿ ''ಹೇ ಯಜಮಾನ! ನಹಿ ನಹಿ ರಕ್ಷತಿ ಡುಕೃಞಕರಣೇ'' ನಿನ್ನ ಅಂತಿಮ ಸಮಯದಲ್ಲಿ ನೀನು ಪಠಿಸುವ ಈ ವ್ಯಾಕರಣ ಸೂತ್ರವು ನಿನ್ನನ್ನು ರಕ್ಷಿಸುವದಿಲ್ಲ. ಆದ್ದರಿಂದ ಹೇ ! ಮೂಢಮತಿಯೇ ನೀನು ಈಶ್ವರ ಭಜನೆಯನ್ನು ಮಾಡು. ಅದರಿಂದಲೇ ನಿನ್ನ ಜೀವನಕ್ಕೆ ಕಲ್ಯಾಣವಾಗುವುದು ಎಂಬುದಾಗಿ ಉಪದೇಶಿಸಿದರು.

ಹೀಗೆ ಯಾವಾಗ ಏನು ಮಾಡಬೇಕೆಂಬುದರ ಅರಿವು ಸರ್ವರಿಗೂ ಇರುವದಿಲ್ಲ. ಅಂತೆಯೇ ಯೋಗ್ಯ ಸದ್ಗುರುವಿನ ಮಾರ್ಗದರ್ಶನವು ನಿರಂತರವಾಗಿ ಬೇಕಾಗುತ್ತದೆ. ಪ್ರತಿದಿನ ಪೂಜಾ ಪಾಠಾದಿಗಳನ್ನು ಮಾಡುವಂತೆ ಶಾಸ್ತ್ರೀಯಗಳಾದ ಧರ್ಮಗ್ರಂಥಗಳ ಸ್ವಾಧ್ಯಾಯವನ್ನೂ ಸಹ ಮಾಡಬೇಕಾಗುವುದು. ಸ್ವಾಧ್ಯಾಯವನ್ನು ಮಾಡದೇ ಹೋದರೆ ಅದೊಂದು ಬಹುದೊಡ್ಡ ಪ್ರಮಾದವನ್ನು ಎಸಗಿದಂತಾಗುವುದು. ಕಾರಣ ಸ್ವಾಧ್ಯಾಯ ವಿಷಯದಲ್ಲಿ ಆಲಸ್ಯವನ್ನು ಮಾಡಕೂಡದು. ಪ್ರತಿದಿನ ಸ್ವಾಧ್ಯಾಯವನ್ನು ಮಾಡುತ್ತ ಹೋದರೆ ಜ್ಞಾನವು ಸುಲಭಸಾಧ್ಯವಾಗುವುದು, ಸ್ವಾಧ್ಯಾಯದ ಬಲದಿಂದ ಮಂದಬುದ್ಧಿಯ ವ್ಯಕ್ತಿಯೂ ಸಹ ಸೂಕ್ಷ್ಮ ಬುದ್ಧಿಯುಳ್ಳವನಾಗುವನು. ಅಂತೆಯೇ ತುಳಸೀದಾಸರು-''ಕರತ ಕರತ ಅಭ್ಯಾಸ ಜಡಮತಿ ಹೋತ ಸುಜಾನ'' ಎಂಬುದಾಗಿ ಹೇಳಿದ್ದಾರೆ.

ಶಾಸ್ತ್ರಗಳಲ್ಲಿ ವೇದಾಂತ ಮತ್ತು ಸಿದ್ಧಾಂತಗಳೆಂಬ ಎರಡು ಮುಖ್ಯವಾದ ಭಾಗಗಳಿವೆ. ವೇದಗಳ ಕೊನೆಯದಾದ ನಿರ್ಣಯಕ್ಕೆ ವೇದಾಂತವೆಂದು ಕರೆದರೆ, ಶಿವಾಗಮಗಳ ಅಂತಿಮ ನಿರ್ಣಯಕ್ಕೆ ಸಿದ್ಧಾಂತವೆಂದು ಕರೆದಿದ್ದಾರೆ. ಇವುಗಳಲ್ಲಿ ಯಾರಿಗೆ ವೇದಾಂತದಲ್ಲಿ ನಿಷ್ಠೆ ಇದೆಯೋ ಅವರು ಅದನ್ನು ಅಭ್ಯಸಿಸಬೇಕು. ಇನ್ನು ಯಾರಿಗೆ ಸಿದ್ಧಾಂತದಲ್ಲಿ ಶ್ರದ್ಧೆಯಿದೆಯೋ ಅವರು ಆಗಮಗ್ರಂಥಗಳನ್ನು ಅಭ್ಯಾಸಗೈಯ್ಯಬೇಕು. ವೇದಾಂತವನ್ನೋದಿ ಯಾವುದನ್ನು ತಿಳಿದುಕೊಳ್ಳಲಾಗುವುದೋ, ಸಿದ್ಧಾಂತವನ್ನೋದಿಯೂ ಸಹ ಅದನ್ನೇ ತಿಳಿದುಕೊಳ್ಳಲಾಗುವುದು. ಆದರೆ ಒಂದೇ ಆದ ಆ ಪರವಸ್ತುವಿಗೆ ವೇದಾಂತಿಗಳು 'ಬ್ರಹ್ಮ'ವೆಂದು ಕರೆದರೆ ಸಿದ್ಧಾಂತಿಗಳು ಅದಕ್ಕೆ 'ಲಿಂಗ'ವೆಂದು ಕರೆಯುತ್ತಾರೆ. ವಾಸ್ತವಿಕವಾಗಿ ಈ ಬ್ರಹ್ಮ-ಲಿಂಗಗಳೆರಡೂ ಭಿನ್ನಗಳಲ್ಲ ಒಂದೇ ತತ್ತ್ವದ ಎರಡು ಪರ್ಯಾಯನಾಮಗಳೆಂದು ತಿಳಿದುಕೊಳ್ಳಬೇಕು.

ಆದ್ದರಿಂದ ಪ್ರತಿಯೊಬ್ಬರೂ ತತ್ತ್ವಜ್ಞಾನಕ್ಕಾಗಿ ಶಾಸ್ತ್ರಾಭ್ಯಾಸವನ್ನು ಮಾಡಬೇಕು. ಶಾಸ್ತ್ರಾಭ್ಯಾಸದಲ್ಲಿ ಪ್ರಯತ್ನ ಮಾಡಿಯೂ ತಲೆಗೆ ಅದರ ವಾಸ್ತವಿಕವಾದ ಅರ್ಥವು ತಿಳಿಯದೇ ಇದ್ದಾಗ ಸದ್ಗುರುಗಳಿಗೆ ಶರಣಾಗತನಾಗಬೇಕು. ತನ್ನ ಅಭ್ಯಾಸದ ಬಲದಿಂದ ತಿಳಿಯದೇ ಇರುವ ರಹಸ್ಯಾರ್ಥವು ಗುರುವಿನ ಉಪದೇಶದಿಂದ ಸಹಜವಾಗಿ ಬುದ್ಧಿ ಗೋಚರವಾಗುವುದು. ಹೃದಯಗ್ರಂಥಿ ಹಾಗೂ ಶಾಸ್ತ್ರಗ್ರಂಥಿಗಳನ್ನು ಬಿಡಿಸುವ ಸಾಮರ್ಥ್ಯವು ಸದ್ಗುರುವಿಗೇನೇ ಇರುತ್ತದೆ. ತನ್ನ ಮನಸ್ಸಿನಲ್ಲಿ ಬಂದಿರುವ ಯಾವುದೇ ಸಂಶಯವಿದ್ದರೂ ಗುರುಸಾನ್ನಿಧ್ಯದಲ್ಲಿ ಅದು ನಿರಸನ ಹೊಂದುವುದು.

ಸಕಲಶಾಸ್ತ್ರಗಳಲ್ಲಿ ಪಾರಂಗತನಾದ ಅಗಸ್ತ್ಯ ಮಹರ್ಷಿಯ ಮನಸ್ಸಿನಲ್ಲಿಯೂ ಸಹ ಸಂಶಯಗಳು ಉದ್ಭವಿಸಿದ್ದವು. ಜಗದ್ಗುರು ರೇಣುಕರ ಕೃಪೆಯಿಂದ ಆತನು ತನ್ನೆಲ್ಲ ಸಂದೇಹಗಳನ್ನು ದೂರ ಮಾಡಿಕೊಂಡು ತಾನು ಕೃತಕೃತ್ಯನಾದೆನೆಂದು ಉದ್ಗಾರವನ್ನು ತೆಗೆದು ತನ್ನ ಕೃತಜ್ಞತೆಯನ್ನು ಪೂಜ್ಯರಿಗೆ ಸಮರ್ಪಿಸಿದ್ದನ್ನು ಕೇಳುತ್ತೇವೆ. ಅಂದು ಅಗಸ್ತ್ಯನಿಗೆ ಉಪದೇಶ ಮಾಡಿದ ಆ ಉಪದೇಶವೇ ಇಂದು ಸಿದ್ಧಾಂತ ಶಿಖಾಮಣಿಯ ರೂಪದಲ್ಲಿ ಪ್ರತಿಯೊಬ್ಬರ ಹಸ್ತವನ್ನು ತಲುಪಿದೆ. ಇದು ಗುರುಕಾರುಣ್ಯದ ಶ್ರೇಷ್ಠವಾದ ಫಲವು. ಆದ್ದರಿಂದ ಪ್ರತಿಯೊಬ್ಬರು ಗುರುವಿನಲ್ಲಿ ಶ್ರದ್ಧೆಯುಳ್ಳವರಾಗಿ, ಸ್ವಾಧ್ಯಾಯಾದಿಗಳನ್ನು ಮಾಡುತ್ತಿದ್ದರೆ ಕೇವಲ ಸ್ವಾಧ್ಯಾಯದಿಂದ ಅರ್ಥವಾಗದೇ ಇದ್ದದ್ದು ಗುರುವಿನ ಕೃಪೆಯಿಂದ ಸುಲಭವಾಗುವುದು. ಹೀಗೆ ಗುರುಕಾರುಣ್ಯ ಮತ್ತು ಸ್ವಪ್ರಯತ್ನ ಇವೆರಡರ ಮೂಲಕವಾಗಿ ಜ್ಞಾನವನ್ನು ಪಡೆದುಕೊಳ್ಳುವುದೇ ಜೀವನದ ಪರಮಗುರಿಯಾಗಿರುತ್ತದೆ.

ನಾವು ಪಡೆದುಕೊಳ್ಳಬೇಕಾದ ಜ್ಞಾನದ ಸ್ವರೂಪವೇನು? ಮತ್ತು ಅದರ ಮಹತ್ತ್ವವೇನು? ಎಂಬುದನ್ನು ತಿಳಿಸಲೋಸುಗ ಪೂಜ್ಯಪಾದರು ಪುನಃ-

ಜ್ಞಾನಂ ಪರಶಿವಾದ್ವೈತ ಪರಿಪಾಕವಿನಿಶ್ಚಯಃ।
ಯೇನ ಸಂಸಾರ ಸಂಬಂಧವಿನಿ ವೃತ್ತಿರ್ಭವೇತ್ಸತಾಮ್ ॥

ಶಿವಾತ್ಮಕಮಿದಂ ಸರ್ವಂ ಶಿವಾದನ್ಯಂನವಿದ್ಯತೇ।
ಶಿವೋऽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಮ್ ॥

(ಸಿ. ಶಿ. ೧೬-೩೦-೩೧)

ಜ್ಞಾನವು ಕೇವಲ ಬೇಕು ಬೇಕು ಎಂದು ಬಯಸಿದ ಮಾತ್ರಕ್ಕೆ ಸಿಗುವ ವಸ್ತುವಲ್ಲ, ಅದಕ್ಕಾಗಿ ಸದ್ಗುರುಗಳಿಗೆ ಶರಣಾಗತರಾಗಿ ಶಾಸ್ತ್ರಾಭ್ಯಾಸವನ್ನು ಮಾಡಬೇಕಾಗುವುದು. ಶಾಸ್ತ್ರಗಳು ಅನೇಕಗಳಾಗಿರೋಣದರಿಂದ ಅವುಗಳ ತಾತ್ಪರ್ಯವನ್ನು ಗ್ರಹಿಸಬೇಕಾದರೆ ಸದ್ಗುರುವಿನ ಮಾರ್ಗದರ್ಶನವು ಬೇಕೇ ಬೇಕು. ಇಲ್ಲವಾದರೆ ''ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಮ್'' ಎಂಬ ಉಕ್ತಿಗನುಸಾರವಾಗಿ ಗುರುವಿಲ್ಲದೆ ಶಾಸ್ತ್ರಾಭ್ಯಾಸವನ್ನು ಮಾಡುವ ವ್ಯಕ್ತಿಯು ಶಬ್ದಜಾಲವೆಂಬ ಮಹಾರಣ್ಯದಲ್ಲಿ ಸಿಲುಕಿ ಚಿತ್ತಭ್ರಮೆಯನ್ನು ಮಾಡಿಕೊಳ್ಳುತ್ತಾನೆ. ಒಂದೊಂದು ಶಾಸ್ತ್ರವನ್ನು ಅಭ್ಯಾಸಮಾಡಲು ನಮಗೆ ದೊರೆತ ಆಯುಷ್ಯವೇ ಸಾಲುವುದಿಲ್ಲ. ಅಂದಾಗ ಯಾವಾಗ ಏನನ್ನು ಅರಿತು ಕೊಳ್ಳಬೇಕು ಎಂಬುದಕ್ಕೆ ಗುರುಗಳ ಮಾರ್ಗದರ್ಶನವು ಅವಶ್ಯವಾಗಿರಬೇಕು.

ಆದ್ಯ ಶಂಕರಾಚಾರ್ಯರು ಒಮ್ಮೆ ಕಾಶಿಯ ಬೀದಿಗಳಲ್ಲಿ ಸಂಚರಿಸುವಾಗ ಒಂದು ಮನೆಯ ಕಿಡಕಿಯಿಂದ ವ್ಯಾಕರಣ ಸೂತ್ರವನ್ನು ಅಭ್ಯಾಸಮಾಡುವ ಒಬ್ಬ ವಯೋವೃದ್ಧನ ಧ್ವನಿಯು ಕೇಳಿಬಂದಿತು. ಆಗ ಶ್ರೀ ಶಂಕರಾಚಾರ್ಯರು ಆ ಧ್ವನಿಯ ಸುಳಿವನ್ನು ಹಿಡಿದು ಮನೆಯನ್ನು ಪ್ರವೇಶಿಸಿ ನೋಡಲಾಗಿ ತೊಂಭತ್ತು ವರ್ಷದ ಯಜಮಾನನೊಬ್ಬ ''ಡುಕೃಞ್‌ಕರಣೇ'' ಎಂಬ ಪಾಣಿನಿಯ ವ್ಯಾಕರಣ ಸೂತ್ರವನ್ನು ಕಂಠಪಾಠ ಮಾಡುತ್ತಿದ್ದನು. ಅವನ ಜರಾಜೀರ್ಣವಾದ ಶರೀರದ ಕಡೆಗೆ ನೋಡಿ ಶಂಕರರು ತಮ್ಮ ಮನಸ್ಸಿನಲ್ಲಿ ಯೋಚಿಸಿದ್ದೇನೆಂದರೆ ಅಯ್ಯೋ ಪಾಪ ಮೃತ್ಯುವಿನ ದವಡೆಯಲ್ಲಿ ಕುಳಿತಿರುವ ಈ ಮುದುಕ ಮಹಾದೇವನನ್ನು ಕುರಿತು ಚಿಂತಿಸದೆ ವ್ಯಾಕರಣ ಸೂತ್ರವನ್ನು ಕಂಠಪಾಠ ಮಾಡುತ್ತಿದ್ದಾನೆ. ಬಾಲ್ಯಾವಸ್ಥೆಯಲ್ಲಿ ಮಾಡಬೇಕಾಗಿದ್ದ ಆ ಅಭ್ಯಾಸವನ್ನು ಈಗ ಮಾಡುತ್ತಲಿದ್ದಾನೆ. ಇದು ವ್ಯಾಕರಣವನ್ನು ಅಭ್ಯಾಸ ಮಾಡುವ ವಯಸ್ಸಲ್ಲ ಎಂದು ಯೋಚಿಸಿ ಅವನ ಬಳಿ ಸಾರಿ ''ಹೇ ಯಜಮಾನ! ನಹಿ ನಹಿ ರಕ್ಷತಿ ಡುಕೃಞ್‌ಕರಣೇ'' ನಿನ್ನ ಅಂತಿಮ ಸಮಯದಲ್ಲಿ ನೀನು ಪಠಿಸುವ ಈ ವ್ಯಾಕರಣ ಸೂತ್ರವು ನಿನ್ನನ್ನು ರಕ್ಷಿಸುವದಿಲ್ಲ, ಆದ್ದರಿಂದ ಹೇ ! ಮೂಢಮತಿಯೇ ನೀನು ಈಶ್ವರ ಭಜನೆಯನ್ನು ಮಾಡು. ಅದರಿಂದಲೇ ನಿನ್ನ ಜೀವನಕ್ಕೆ ಕಲ್ಯಾಣವಾಗುವುದು ಎಂಬುದಾಗಿ ಉಪದೇಶಿಸಿದರು.

ಹೀಗೆ ಯಾವಾಗ ಏನು ಮಾಡಬೇಕೆಂಬುದರ ಅರಿವು ಸರ್ವರಿಗೂ ಇರುವದಿಲ್ಲ. ಅಂತೆಯೇ ಯೋಗ್ಯ ಸದ್ಗುರುವಿನ ಮಾರ್ಗದರ್ಶನವು ನಿರಂತರವಾಗಿ ಬೇಕಾಗುತ್ತದೆ. ಪ್ರತಿದಿನ ಪೂಜಾ ಪಾಠಾದಿಗಳನ್ನು ಮಾಡುವಂತೆ ಶಾಸ್ತ್ರೀಯಗಳಾದ ಧರ್ಮಗ್ರಂಥಗಳ ಸ್ವಾಧ್ಯಾಯವನ್ನೂ ಸಹ ಮಾಡಬೇಕಾಗುವುದು. ಸ್ವಾಧ್ಯಾಯವನ್ನು ಮಾಡದೇ ಹೋದರೆ ಅದೊಂದು ಬಹುದೊಡ್ಡ ಪ್ರಮಾದವನ್ನು ಎಸಗಿದಂತಾಗುವುದು. ಕಾರಣ ಸ್ವಾಧ್ಯಾಯ ವಿಷಯದಲ್ಲಿ ಆಲಸ್ಯವನ್ನು ಮಾಡಕೂಡದು. ಪ್ರತಿದಿನ ಸ್ವಾಧ್ಯಾಯವನ್ನು ಮಾಡುತ್ತ ಹೋದರೆ ಜ್ಞಾನವು ಸುಲಭಸಾಧ್ಯವಾಗುವುದು, ಸ್ವಾಧ್ಯಾಯದ ಬಲದಿಂದ ಮಂದಬುದ್ಧಿಯ ವ್ಯಕ್ತಿಯೂ ಸಹ ಸೂಕ್ಷ್ಮ ಬುದ್ಧಿಯುಳ್ಳವನಾಗುವನು. ಅಂತೆಯೇ ತುಳಸೀದಾಸರು–''ಕರತ ಕರತ ಅಭ್ಯಾಸ ಜಡಮತಿ ಹೋತ ಸುಜಾನ'' ಎಂಬುದಾಗಿ ಹೇಳಿದ್ದಾರೆ.

ಶಾಸ್ತ್ರಗಳಲ್ಲಿ ವೇದಾಂತ ಮತ್ತು ಸಿದ್ಧಾಂತಗಳೆಂಬ ಎರಡು ಮುಖ್ಯವಾದ ಭಾಗಗಳಿವೆ. ವೇದಗಳ ಕೊನೆಯದಾದ ನಿರ್ಣಯಕ್ಕೆ ವೇದಾಂತವೆಂದು ಕರೆದರೆ, ಶಿವಾಗಮಗಳ ಅಂತಿಮ ನಿರ್ಣಯಕ್ಕೆ ಸಿದ್ಧಾಂತವೆಂದು ಕರೆದಿದ್ದಾರೆ. ಇವುಗಳಲ್ಲಿ ಯಾರಿಗೆ ವೇದಾಂತದಲ್ಲಿ ನಿಷ್ಠೆ ಇದೆಯೋ ಅವರು ಅದನ್ನು ಅಭ್ಯಸಿಸಬೇಕು. ಇನ್ನು ಯಾರಿಗೆ ಸಿದ್ಧಾಂತದಲ್ಲಿ ಶ್ರದ್ಧೆಯಿದೆಯೋ ಅವರು ಆಗಮಗ್ರಂಥಗಳನ್ನು ಅಭ್ಯಾಸಗೈಯ್ಯಬೇಕು. ವೇದಾಂತವನ್ನೋದಿ ಯಾವುದನ್ನು ತಿಳಿದುಕೊಳ್ಳಲಾಗುವುದೋ, ಸಿದ್ಧಾಂತವನ್ನೋದಿಯೂ ಸಹ ಅದನ್ನೇ ತಿಳಿದುಕೊಳ್ಳಲಾಗುವುದು. ಆದರೆ ಒಂದೇ ಆದ ಆ ಪರವಸ್ತುವಿಗೆ ವೇದಾಂತಿಗಳು 'ಬ್ರಹ್ಮ'ವೆಂದು ಕರೆದರೆ ಸಿದ್ಧಾಂತಿಗಳು ಅದಕ್ಕೆ 'ಲಿಂಗ'ವೆಂದು ಕರೆಯುತ್ತಾರೆ. ವಾಸ್ತವಿಕವಾಗಿ ಈ ಬ್ರಹ್ಮ-ಲಿಂಗಗಳೆರಡೂ ಭಿನ್ನಗಳಲ್ಲಿ ಒಂದೇ ತತ್ತ್ವದ ಎರಡು ಪರ್ಯಾಯನಾಮಗಳೆಂದು ತಿಳಿದುಕೊಳ್ಳಬೇಕು.

ಆದ್ದರಿಂದ ಪ್ರತಿಯೊಬ್ಬರೂ ತತ್ತ್ವಜ್ಞಾನಕ್ಕಾಗಿ ಶಾಸ್ತ್ರಾಭ್ಯಾಸವನ್ನು ಮಾಡಬೇಕು. ಶಾಸ್ತ್ರಾಭ್ಯಾಸದಲ್ಲಿ ಪ್ರಯತ್ನ ಮಾಡಿಯೂ ತಲೆಗೆ ಆದರ ವಾಸ್ತವಿಕವಾದ ಅರ್ಥವು ತಿಳಿಯದೇ ಇದ್ದಾಗ ಸದ್ಗುರುಗಳಿಗೆ ಶರಣಾಗತನಾಗಬೇಕು. ತನ್ನ ಅಭ್ಯಾಸದ ಬಲದಿಂದ ತಿಳಿಯದೇ ಇರುವ ರಹಸ್ಯಾರ್ಥವು ಗುರುವಿನ ಉಪದೇಶದಿಂದ ಸಹಜವಾಗಿ ಬುದ್ಧಿ ಗೋಚರವಾಗುವುದು. ಹೃದಯಗ್ರಂಥಿ ಹಾಗೂ ಶಾಸ್ತ್ರಗ್ರಂಥಿಗಳನ್ನು ಬಿಡಿಸುವ ಸಾಮರ್ಥ್ಯವು ಸದ್ಗುರುವಿಗೇನೇ ಇರುತ್ತದೆ. ತನ್ನ ಮನಸ್ಸಿನಲ್ಲಿ ಬಂದಿರುವ ಯಾವುದೇ ಸಂಶಯವಿದ್ದರೂ ಗುರುಸಾನ್ನಿಧ್ಯದಲ್ಲಿ ಅದು ನಿರಸನ ಹೊಂದುವುದು.

ಸಕಲಶಾಸ್ತ್ರಗಳಲ್ಲಿ ಪಾರಂಗತನಾದ ಅಗಸ್ತ್ಯ ಮಹರ್ಷಿಯ ಮನಸ್ಸಿನಲ್ಲಿಯೂ ಸಹ ಸಂಶಯಗಳು ಉದ್ಭವಿಸಿದ್ದವು. ಜಗದ್ಗುರು ರೇಣುಕರ ಕೃಪೆಯಿಂದ ಆತನು ತನ್ನೆಲ್ಲ ಸಂದೇಹಗಳನ್ನು ದೂರ ಮಾಡಿಕೊಂಡು ತಾನು ಕೃತಕೃತ್ಯನಾದೆನೆಂದು ಉದ್ಗಾರವನ್ನು ತೆಗೆದು ತನ್ನ ಕೃತಜ್ಞತೆಯನ್ನು ಪೂಜ್ಯರಿಗೆ ಸಮರ್ಪಿಸಿದ್ದನ್ನು ಕೇಳುತ್ತೇವೆ. ಅಂದು ಅಗಸ್ತ್ಯನಿಗೆ ಉಪದೇಶ ಮಾಡಿದ ಆ ಉಪದೇಶವೇ ಇಂದು ಸಿದ್ಧಾಂತ ಶಿಖಾಮಣಿಯ ರೂಪದಲ್ಲಿ ಪ್ರತಿಯೊಬ್ಬರ ಹಸ್ತವನ್ನು ತಲುಪಿದೆ. ಇದು ಗುರುಕಾರುಣ್ಯದ ಶ್ರೇಷ್ಠವಾದ ಫಲವು. ಆದ್ದರಿಂದ ಪ್ರತಿಯೊಬ್ಬರು ಗುರುವಿನಲ್ಲಿ ಶ್ರದ್ಧೆಯುಳ್ಳವರಾಗಿ, ಸ್ವಾಧ್ಯಾಯಾದಿಗಳನ್ನು ಮಾಡುತ್ತಿದ್ದರೆ ಕೇವಲ ಸ್ವಾಧ್ಯಾಯದಿಂದ ಅರ್ಥವಾಗದೇ ಇದ್ದದ್ದು ಗುರುವಿನ ಕೃಪೆಯಿಂದ ಸುಲಭವಾಗುವುದು. ಹೀಗೆ ಗುರುಕಾರುಣ್ಯ ಮತ್ತು ಸ್ವಪ್ರಯತ್ನ ಇವೆರಡರ ಮೂಲಕವಾಗಿ ಜ್ಞಾನವನ್ನು ಪಡೆದುಕೊಳ್ಳುವುದೇ ಜೀವನದ ಪರಮಗುರಿಯಾಗಿರುತ್ತದೆ.

ನಾವು ಪಡೆದುಕೊಳ್ಳಬೇಕಾದ ಜ್ಞಾನದ ಸ್ವರೂಪವೇನು? ಮತ್ತು ಅದರ ಮಹತ್ತ್ವವೇನು? ಎಂಬುದನ್ನು ತಿಳಿಸಲೋಸುಗ ಪೂಜ್ಯಪಾದರು ಪುನಃ-

ಜ್ಞಾನಂ ಪರಶಿವಾದ್ವೈತ ಪರಿಪಾಕವಿನಿಶ್ಚಯಃ।
ಯೇನ ಸಂಸಾರ ಸಂಬಂಧವಿನಿ ವೃತ್ತಿರ್ಭವೇತ್ಸತಾಮ್ ॥

ಶಿವಾತ್ಮಕಮಿದಂ ಸರ್ವಂ ಶಿವಾದನ್ಯಂನವಿದ್ಯತೇ।
ಶಿವೋಽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಮ್ ॥

(ಸಿ. ಶಿ. ೧೭-೩೦-೩೧)

ಈ ವಿಧವಾಗಿ ಆದೇಶಿಸಿದ್ದಾರೆ. ಈ ಜಗತ್ತಿನಲ್ಲಿ ಪರಶಿವಬ್ರಹ್ಮಕ್ಕಿಂತಲೂ ಭಿನ್ನವಾದದ್ದು ಬೇರೊಂದಾವುದೂ ಇಲ್ಲ ಎಂಬ ನಿಶ್ಚಯಕ್ಕೇನೇ ಇಲ್ಲಿ ಜ್ಞಾನವೆಂದು ಕರೆದಿದ್ದಾರೆ. ಈ ಜ್ಞಾನದಿಂದಲೇ ಸಂಸಾರದ ಬಂಧನದಿಂದ ನಿವೃತ್ತಿಯು ಲಭ್ಯವಾಗುತ್ತದೆ. ಈ ಜಗತ್ತೆಲ್ಲವೂ ಶಿವಸ್ವರೂಪವಾಗಿದೆ. ಶಿವನಿಗಿಂತಲೂ ಭಿನ್ನವಾದದ್ದು ಬೇರೊಂದಿಲ್ಲ, ಇದೂ ಅಲ್ಲದೆ ನಾನೂ ಸಹ ಶಿವಸ್ವರೂಪನೇ ಆಗಿದ್ದೇನೆ ಎಂಬ ತಿಳುವಳಿಕೆಯೇ ಉತ್ತಮವಾದ ಜ್ಞಾನವು ಎಂಬುದು ಪೂಜ್ಯಪಾದರ ಆಶಯವಾಗಿದೆ.

ಸಾಧಕನ ಲಕ್ಷಣವು ಸಂಪೂರ್ಣವಾಗಿ ಶಿವನ ಕಡೆಯಿದ್ದಾಗ ಅವನ ಸಂಸಾರದ ಸಂಬಂಧಗಳೆಲ್ಲ ಕಳಚಿ ಹೋಗುತ್ತವೆ. ನಮ್ಮ ಚಿತ್ತವು ಎಲ್ಲಿರುತ್ತದೆಯೋ ಅಲ್ಲಿಯೇ ನಮ್ಮ ನಿಜವಾದ ವಾಸ್ತವ್ಯವು ಇರುತ್ತದೆ. ನಮ್ಮ ಶರೀರವು ಮನೆಯಲ್ಲಿದ್ದು, ಚಿತ್ತವು ಬಜಾರ ದಲ್ಲಿದ್ದರೆ ನಾವು ಬಾಜಾರದಲ್ಲಿದ್ದಂತೆಯೇ. ಹಾಗೆಯೇ ನಾವು ಪ್ರಪಂಚದಲ್ಲಿದ್ದು ನಮ್ಮ ಮನಸ್ಸನ್ನು ಶಿವನ ಚಿಂತನೆಯಲ್ಲಿ ತೊಡಗಿಸಿದಾಗ ನಾವು ಶಿವರೂಪವಾಗುತ್ತೇವೆ. ಅಷ್ಟೇ ಅಲ್ಲ ಪ್ರಪಂಚವೆಲ್ಲವೂ ಶಿವಮಯವಾಗಿಯೇ ತೋರುತ್ತದೆ. ಆಗ ಪ್ರಪಂಚದೊಂದಿಗೆ ಇರುವ ಮೊದಲಿನ ಸಂಬಂಧಗಳೆಲ್ಲ ಇಲ್ಲದಾಗಿ ಹೋಗುತ್ತವೆ. ಹೀಗೆ ಈ ಶಿವಾದ್ವೈತ ಜ್ಞಾನದಿಂದ ಸಾಧಕನು ಮುಕ್ತಿಯನ್ನು ಪಡೆಯುತ್ತಾನೆ.

ಪ್ರಪಂಚದ ಸಂಬಂಧವನ್ನು ಏಕೆ ತಾನೆ ಕಡಿದುಕೊಳ್ಳಬೇಕು? ಎಂಬ ಪ್ರಶ್ನೆಯು ಉತ್ಪನ್ನವಾದಾಗ ಅದರ ಸಮಾಧಾನ ಏನೆಂದರೆ ಎಲ್ಲಿಯವರೆಗೆ ನಮ್ಮ ಮನಸ್ಸು ಪ್ರಪಂಚದೊಂದಿಗೆ ಸಂಬಂಧವಾಗಿರುತ್ತದೆಯೋ ಅಲ್ಲಿಯವರೆಗೆ ಪ್ರಾಪಂಚಿಕವಾದ ಕ್ಷಣಿಕವಾದ ಸುಖದ ಲಾಭವಾಗಬಹುದೇ ವಿನಃ ಅಖಂಡವಾದ ಪರಮಾನಂದದ ಪ್ರಾಪ್ತಿಯು ಆಗಲಾರದು. ಅಖಂಡವಾದ ಆನಂದವು ಯಾರಿಗೆ ತಾನೆ ಬೇಕಾಗಿಲ್ಲ? ಅರ್ಥಾತ್ ಎಲ್ಲರಿಗೂ ಬೇಕೇ ಬೇಕು. ಅಂದಾಗ ಪ್ರಪಂಚದ ಸಂಬಂಧವನ್ನು ಬಿಟ್ಟು ಪರಮಾತ್ಮನೊಂದಿಗೆ ಸಂಬಂಧವನ್ನು ಬೆಳೆಯಿಸಿಕೊಳ್ಳಬೇಕು. ಸಾಂಸಾರಿಕ ವಸ್ತು ಇಲ್ಲವೆ ವ್ಯಕ್ತಿಯ ಸಂಬಂಧವಾದರೆ ಒಂದು ಕ್ಷಣ ಕಾಲ ಸುಖ ದೊರೆತರೂ, ಆ ವಸ್ತು ಇಲ್ಲವೆ ವ್ಯಕ್ತಿಯು ನಮ್ಮಿಂದ ದೂರವಾದಾಗ ದುಃಖವೇ ಪ್ರಾಪ್ತವಾಗುತ್ತದೆ. ಹೀಗೆ ಸಂಸಾರದಲ್ಲಿ ಸುಖವು ಸಾಸಿವೆಕಾಳಿನಷ್ಟಿದ್ದರೆ ದುಃಖವು ಸಾಗರದಷ್ಟಿರುತ್ತದೆ. ಪರಮಾತ್ಮನೊಂದಿಗೆ ಒಮ್ಮೆ ಮನಸ್ಸು ಸಮರಸವಾಯಿತೆಂದರೆ ಎಂದೂ ಅದರ ವಿಯೋಗವಾಗುವುದಿಲ್ಲ, ಅಂತೆಯೇ ಅಖಂಡವಾದ ಆನಂದವು ನಿರಂತರವಾಗಿ ಪ್ರಾಪ್ತವಾಗುತ್ತಿರುತ್ತದೆ. ಆದ್ದರಿಂದಲೇ ಸಂಸಾರದ ಸಂಬಂಧವನ್ನು ಬಿಟ್ಟು ಪರಮಾತ್ಮನೊಂದಿಗೆ ಸಂಬಂಧವನ್ನು ಬೆಳೆಸಬೇಕೆಂಬು ದಾಗಿ ಪೂಜ್ಯರು ಆದೇಶಿಸಿದ್ದಾರೆ.

ಈ ಪ್ರಪಂಚದಲ್ಲಿ ವಿಚಾರಣೀಯಗಳಾದ ವಸ್ತುಗಳೆಂದರೆ ಮೂರೇ ಮೂರು. ಜೀವ, ಜಗತ್ತು ಮತ್ತು ಈಶ್ವರ. ಇವು ನೋಡಲಿಕ್ಕೆ ಮೂರಾಗಿ ಕಂಡರೂ ಮೂರೂ ಒಂದೇ ಆಗಿರುತ್ತವೆ. ಶಿವನೋರ್ವನೇ ಜೀವ ಮತ್ತು ಜಗತ್ತಿನ ಸ್ವರೂಪವನ್ನು ತಾಳಿರುತ್ತಾನೆ. ಇದರ ರಹಸ್ಯವು ಯಾರಿಗೆ ತಿಳಿಯುವುದೋ ಅವರು ಇದೆಲ್ಲವೂ ಶಿವರೂಪವಾಗಿದೆ. ಶಿವನಿಗಿಂತಲೂ ಭಿನ್ನವಾದುದು ಬೇರೊಂದಿಲ್ಲ ಮತ್ತು ನಾವೂ ಸಹ

ಶಿವಸ್ವರೂಪವೇ ಆಗಿದ್ದೇವೆ ಎಂಬುದಾಗಿ ಅನುಭವಾತ್ಮಕವಾದ ಜ್ಞಾನವನ್ನು ಪಡೆದು ಕೊಳ್ಳುತ್ತಾರೆ. ಇದುವೇ ಉತ್ತಮ ಜ್ಞಾನವು. ಇದರಿಂದಲೇನೆ ಜೀವಾತ್ಮನಿಗೆ ಮುಕ್ತಿಯು ಪ್ರಾಪ್ತವಾಗುವುದು.

ಪೂಜ್ಯಪಾದರು ಈ ಜ್ಞಾನದ ಮಹತ್ತ್ವವನ್ನು ವಿವರಿಲೋಸುಗ ಪುನಃ–

ಅಂಧೋ ಯಥಾ ಪುರಸ್ಥಾನಿ ವಸ್ತೂನಿ ಚ ನ ಪಶ್ಯತೇ ।
ಜ್ಞಾನಹೀನಸ್ತಥಾ ದೇಹೀ ನಾತ್ಮಸ್ಥಂ ವೀಕ್ಷತೇ ಶಿವಮ್ ॥

(ಸಿ. ಶಿ. ೧೬–೩೨)

ಹೀಗೆ ಉಪದೇಶಿಸಿದ್ದಾರೆ. ಕುರುಡನಾದ ವ್ಯಕ್ತಿಯು ತನ್ನ ಎದುರಿಗಿರುವ ವಸ್ತುಗಳನ್ನು ನೋಡಲು ಅಸಮರ್ಥನಾಗಿರುವಂತೆ ಜ್ಞಾನಹೀನನಾದ ಜೀವಿಯು ಸಹ ತನ್ನೊಳಗಿರುವ ಪರಮಾತ್ಮನನ್ನು ನೋಡಲು ಸಮರ್ಥನಾಗಿರುವುದಿಲ್ಲ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಜೀವ ಹಾಗೂ ಪರಮಾತ್ಮರು ವಸ್ತುತಃ ಭಿನ್ನರಲ್ಲ. ಆದರೂ ಅಜ್ಞರಾದ ಜೀವಿಗಳು ಜೀವ ಈಶ್ವರರನ್ನು ಭಿನ್ನವಾಗಿ ತಿಳಿಯುವರಷ್ಟೇ ಅಲ್ಲ, ಒಬ್ಬನೇ ಆದ ಈಶ್ವರನನ್ನು ಅನೇಕ ನಾಮರೂಪಗಳಿಂದ ಪೂಜಿಸುವರು. ಇದೂ ಅಲ್ಲದೆ ತಮ್ಮ ತಮ್ಮ ದೇವರ ನಾಮರೂಪಗಳಲ್ಲಿ ಅಭಿಮಾನವನ್ನು ತಾಳಿ ಬೇರೊಬ್ಬ ದೇವರ ಭಕ್ತರೊಂದಿಗೆ ಕಲಹವನ್ನು ಮಾಡುತ್ತಿರುತ್ತಾರೆ.

ಒಂದು ಊರಿನಲ್ಲಿ ಊರಿನ ಪ್ರಮುಖರೆಲ್ಲ ಸೇರಿ ಒಂದು ಮಂದಿರವನ್ನು ನಿರ್ಮಾಣ ಮಾಡುವ ಉದ್ದೇಶದಿಂದ ವಿಶ್ವಸ್ಥಮಂಡಳಿಯೊಂದನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮುಖಾಂತರ ಮಂದಿರ ನಿರ್ಮಾಣಕ್ಕಾಗಿ ಧನವನ್ನು ಸಂಗ್ರಹಿಸಿ ಬಹು ಸುಂದರವಾದ ಮಂದಿರವನ್ನು ನಿರ್ಮಾಣಗೊಳಿಸಿದರು. ಆದರ ಒಳ ಆವರಣವನ್ನು ಹಾಲುಗಲ್ಲಿನಿಂದ (ಸಂಗಮುಮರಿ) ಅಲಂಕರಿಸಿದರು. ಇನ್ನು ಇದರಲ್ಲಿ ಯಾವ ಮೂರ್ತಿಯನ್ನು ಪ್ರತಿಷ್ಠಾಪಿಸಬೇಕು ಎಂಬ ವಿಚಾರಕ್ಕಾಗಿ ಊರಿನ ಭಕ್ತರೆಲ್ಲರನ್ನು ಕೂಡಿಸಿ ಸಮಾಲೋಚನಾ ಸಭೆಯನ್ನು ಕರೆದರು. ಸಭೆಯಲ್ಲಿ ಮುಖ್ಯಸ್ಥನು ಮೂರ್ತಿಯ ಬಗ್ಗೆ ಪ್ರಸ್ತಾಪ ಮಾಡಲಾಗಿ ಕೂಡಿದ ಜನರಲ್ಲಿ ಕೆಲವರು ಶಿವಲಿಂಗವನ್ನು ಪ್ರತಿಷ್ಠಾಪಿಸಬೇಕೆಂದು ಹೇಳಿದರೆ ಮತ್ತೆ ಕೆಲವರು ರಾಮ ವಿಗ್ರಹವನ್ನು ಪ್ರತಿಸ್ಥಾಪಿಸುವಂತೆ ಆಗ್ರಹಪಡಿಸಿದರು. ಮತ್ತೆ ಕೆಲವರು ಶ್ರೀಕೃಷ್ಣನ ಮೂರ್ತಿಯನ್ನು ಸ್ಥಾಪಿಸಬೇಕೆಂದು ಸಲಹೆ ಇತ್ತರು. ಎಲ್ಲರ ಮಾತನ್ನು ಕೇಳಿದ ನಂತರ ವಿಶ್ವಸ್ಥ ಮಂಡಳಿಯವರು ಒಂದು ಶಿವಲಿಂಗವನ್ನು ಸ್ಥಾಪಿಸುವುದಾಗಿ ನಿರ್ಣಯಿಸಿ ಶುಭ ಮುಹೂರ್ತದಲ್ಲಿ ಶಿವಲಿಂಗದ ಪ್ರಾಣ ಪ್ರತಿಷ್ಠೆಯನ್ನು ಮಾಡಿಸಿದರು. ಆಗ ಆ ಮಂದಿರಕ್ಕೆ ಕೇವಲ ಶಿವಭಕ್ತರೇ ಬರತೊಡಗಿದರೇ ವಿನಃ ಬೇರೆ ದೇವರ ಭಕ್ತರು ಒಬ್ಬರೂ ಬರಲಿಲ್ಲ, ಕೆಲವು ದಿನಗಳ ನಂತರ ವಿಶ್ವಸ್ಥ ಮಂಡಳದವರು ಪುನಃ ತಮ್ಮೊಳಗೇ ವಿಚಾರವಿನಿಮಯ ಮಾಡಿಕೊಂಡು ಆ ಶಿವಲಿಂಗವನ್ನು ವಿಸರ್ಜಿಸಿ ಮಂದಿರದಲ್ಲಿ ಶ್ರೀರಾಮನ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಅಂದಿನಿಂದ ಆ ಮಂದಿರಕ್ಕೆ ರಾಮಭಕ್ತರ ಆಗಮನವು ಅಧಿಕವಾಯಿತು. ಆದರೆ ಉಳಿದವರಾರೂ ಬರಲೇ ಇಲ್ಲ, ಆಗ

ವಿಶ್ವಸ್ಥಮಂಡಳಿಯವರು ಪುನಃ ವಿಚಾರವಿನಿಮಯವನ್ನು ಮಾಡಿ ಆ ರಾಮಮೂರ್ತಿಯನ್ನು ವಿಸರ್ಜಿಸಿ ಬಾಲಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಆಗ ಆ ಮಂದಿರಕ್ಕೆ ಕೇವಲ ಕೃಷ್ಣ ಭಕ್ತರೇ ಬರತೊಡಗಿದರು. ಬೇರಾರೂ ಆ ಕಡೆಗೆ ಹಣಿಕಿ ಸಹ ಹಾಕಲಿಲ್ಲ. ಊರಿನ ಜನರ ಈ ವಿಚಿತ್ರವಾದ ವರ್ತನೆಯನ್ನು ಕಂಡು ಮಂದಿರದ ವಿಶ್ವಸ್ಥರೆಲ್ಲ ಬೇಸರಗೊಂಡರು. ಎಲ್ಲರೂ ಈ ಮಂದಿರಕ್ಕೆ ಬರಲೆಂಬ ಉದ್ದೇಶದಿಂದ ಇದನ್ನು ನಿರ್ಮಿಸಿದರೆ ಕೆಲವರು ಬಂದರೆ ಬೇರೆ ಕೆಲವರು ಬರುತ್ತಿಲ್ಲ. ಹಾಗಾದರೆ ಈ ಮಂದಿರಕ್ಕೆ ಎಲ್ಲರೂ ಬರುವ ಹಾಗೆ ಮಾಡಬೇಕಾದರೆ ಏನು ಮಾಡಬೇಕು ಎಂಬುದಾಗಿ ಆಲೋಚಿಸಿ ಕೊನೆಗೆ ಆ ಕೃಷ್ಣನ ವಿಗ್ರಹವನ್ನು ತೆಗೆದುಹಾಕಿ ಆ ಮಂದಿರವನ್ನು ಸುಂದರವಾದ ಹೋಟೆಲನ್ನಾಗಿ ಪರಿವರ್ತಿಸಿದರಂತೆ. ಆಗ ಊರಿನ ಎಲ್ಲ ಕೋಮುಗಳ ಜನರು ಆ ಹೋಟಲಿನತ್ತ ತಂಡ ತಂಡವಾಗಿ ಬಂದು ಅಲ್ಲಿಯ ತಿಂಡಿ ತಿನಿಸುಗಳನ್ನು ತಿಂದು ಆನಂದ ಪಡತೊಡಗಿದರು.

ನೋಡಿದಿರಾ ಅಜ್ಞಜೀವಿಗಳ ಈ ಸ್ಥಿತಿಯನ್ನು ! ''ಏಕಂ ಸತ್ ವಿಪ್ರಾಃ ಬಹುಧಾ ವದಂತಿ'' ಅಂದರೆ ದೇವನೊಬ್ಬ ನಾಮ ಹಲವು ಎಂಬುದಾಗಿ ವೇದ ಶಾಸ್ತ್ರಗಳು ಅನಾದಿಕಾಲದಿಂದ ಘೋಷಣೆಯನ್ನು ಮಾಡುತ್ತ ಬಂದಿದ್ದರೂ, ಅಜ್ಞ ಜೀವಿಗಳ ಮನಸ್ಸಿನಲ್ಲಿ ಆ ಮಾತು ಇನ್ನೂ ಪ್ರವೇಶಿಸಿಯೇ ಇಲ್ಲ. ಜೀವಿ ಜೀವಿಗಳಂತೂ ಜಗಳಾಡುತ್ತಲೇ ಇರುತ್ತವೆ. ಅದರ ಜೊತೆಗೆ ಇವರು ದೇವರ ಹೆಸರಿನಲ್ಲಿಯೂ ಸಹ ಜಗಳ ಮಾಡುತ್ತಲಿದ್ದಾರೆ. ಅಂತೆಯೇ ಪೂಜ್ಯಪಾದರು ಈ ಅಜ್ಞರನ್ನು ಅಂಧರಿಗೆ ಹೋಲಿಸಿದ್ದನ್ನು ಕಾಣುತ್ತೇವೆ. ಅಂಧರು ಎದುರಿಗಿರುವ ವಸ್ತುವನ್ನು ಕಾಣದಿರುವಂತೆ ಅಜ್ಞನಾದವನು ಜಗತ್ತಿನ ಒಳಹೊರಗೆಲ್ಲ ತುಂಬಿಕೊಂಡಿರುವ ಪರಮಾತ್ಮನನ್ನು ಕಾಣಲು ಅಸಮರ್ಥನಾಗಿದ್ದಾನೆ. ದೇವರ ಯಥಾರ್ಥ ಜ್ಞಾನವಿಲ್ಲದ ಮೂಲಕ ದೇವರ ನಾಮರೂಪಗಳಲ್ಲಿ ಇವರು ಕಲಹವನ್ನು ಮಾಡುತ್ತಿರುತ್ತಾರೆ. ಜ್ಞಾನಿಯಾದ ವ್ಯಕ್ತಿಗೆ ಪರಮಾತ್ಮನ ಅನೇಕ ರೂಪಗಳಲ್ಲಿ ಒಂದೇ ಆದ ತತ್ತ್ವವು ಅನುಭವ ಗೋಚರವಾಗುತ್ತಿರುತ್ತದೆ.

ಶಿವದರ್ಶನದಿಂದ ಆಗುವ ಪ್ರಯೋಜನವೇನು? ಎಂಬ ವಿಷಯವನ್ನು ಕುರಿತು ಪೂಜ್ಯಪಾದರು ಪುನಃ–

> ಶಿವಸ್ಯದರ್ಶನಾತ್ ಪುಂಸಾಂ ಜನ್ಮರೋಗನಿವರ್ತನಮ್ ।
> ಶಿವದರ್ಶನಮಪ್ಯಾಹುಃ ಸುಲಭಂ ಜ್ಞಾನಚಕ್ಷುಷಾಮ್ ॥
>
> (ಸಿ. ಶಿ. ೧೬–೩೩)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವಜ್ಞಾನದಿಂದ ಶಿವದರ್ಶನವು ಉಂಟಾಗುತ್ತದೆ. ಅದರಿಂದ ಜನ್ಮ–ಮರಣವೆಂಬ ರೋಗವು ನಿರ್ಮೂಲವಾಗುತ್ತದೆ. ಈ ಶಿವದರ್ಶನವು ಜ್ಞಾನಚಕ್ಷುಗಳಿಗೆ ಸಾಧ್ಯವೇ ವಿನಃ ಚರ್ಮಚಕ್ಷುಗಳಿಗೆ ಅದು ಅಸಾಧ್ಯವೇ ಸರಿ ಎಂಬುದು ಪೂಜ್ಯರ ಆಶಯವಾಗಿದೆ.

ಜನ್ಮ ಮತ್ತು ಮರಣಗಳು ಬಹು ದೊಡ್ಡದಾದ ರೋಗಗಳು. ಇವು ಜೀವಾತ್ಮನಿಗೆ ಸೃಷ್ಟಿಯ ಆರಂಭದಿಂದಲೇ ಪ್ರಾಪ್ತವಾಗಿವೆ. ಇವುಗಳಿಗೆ ಅಸಾಧ್ಯರೋಗವೆಂದು

ಕರೆದಿದ್ದಾರೆ. ಜನ್ಮದ ನಂತರ ಮರಣ, ಮರಣದ ನಂತರ ಜನ್ಮ ಇದೊಂದು ಎಂದೂ ನಿಲ್ಲದಿರುವ ಭವಚಕ್ರವು. ಅಂತೆಯೇ ಪೂಜ್ಯಪಾದರು–

ಜಾತಸ್ಯ ಹಿ ಧ್ರುವೋಮೃತ್ಯುಃ ಧ್ರುವಂಜನ್ಮ ಮೃತಸ್ಯಚ ।
ಜಂತುರ್ಮರಣ ಜನ್ಮಾಭ್ಯಾಂ ಪರಿಭ್ರಮತಿ ಚಕ್ರವತ್ ॥

(ಸಿ. ಶಿ. ೫–೬೪)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಈ ಚಕ್ರದಿಂದ ಅಥವಾ ಈ ಭವರೋಗದಿಂದ ಬಿಡುಗಡೆಯಾಗಬೇಕಾದರೆ ಭವರೋಗ ವೈದ್ಯನಾದ ಸದ್ಗುರುವಿಗೆ ಶರಣಾಗತನಾಗಿ ಅವನಿಂದ ಶಿವಾದ್ವೈತ ಜ್ಞಾನವನ್ನು ಪಡೆದು ಶಿವದರ್ಶನವನ್ನು ಮಾಡಿಸಿಕೊಳ್ಳಬೇಕು. ಶಿವದರ್ಶನವಾದಾಗಲೇನೇ ಈ ರೋಗವು ಸಂಪೂರ್ಣವಾಗಿ ಇಲ್ಲವಾಗುವುದು.

ಜ್ಞಾನದ ಹೊರತಾಗಿ ಅಜ್ಞಾನವು ನಿವೃತ್ತಿಯಾಗದು ಎಂಬುದನ್ನು ದೃಷ್ಟಾಂತ ಮೂಲಕವಾಗಿ ಪ್ರತಿಪಾದಿಸಿ ಈ ಜ್ಞಾನಾಗಮ ಸ್ಥಲವನ್ನು ಪರಿಸಮಾಪ್ತಿಗೊಳಿಸಲೋಸುಗ ಪೂಜ್ಯಪಾದರು ಪುನಃ

ದೀಪಂ ವಿನಾ ಯಥಾ ಗೇಹೇನಾಂಧಕಾರೋ ನಿವರ್ತತೇ ।
ಜ್ಞಾನಂವಿನಾ ತಥಾ ಚಿತ್ತೇ ಮೋಹೋಽಪಿ ನ ನಿವರ್ತತೇ ॥

(ಸಿ. ಶಿ. ೧೬–೩೪)

ಈ ವಿಧವಾಗಿ ಉಪದೇಶಿಸಿದ್ದಾರೆ. ಮನೆಯೊಳಗಿನ ಕತ್ತಲೆಯು ದೀಪವಿಲ್ಲದೆ ನಿವೃತ್ತಿ ಯಾಗದಿರುವಂತೆ ಶಿವಾದ್ವೈತ, ಜ್ಞಾನವಿಲ್ಲದೆ ಚಿತ್ತದೊಳಗಿನ ಮೋಹವು ನಿವೃತ್ತಿಯಾಗ ಲಾರದು ಎಂಬುದು ಪೂಜ್ಯರ ಆಶಯವಾಗಿದೆ.

ಕತ್ತಲೆಯು ಮನುಷ್ಯನಿಗೆ ಸಹನವಾಗುವುದಿಲ್ಲ, ಸೂರ್ಯಾಸ್ತವಾದೊಡನೆ ಮನೆಯಲ್ಲಿ ದೀಪವನ್ನು ಹಚ್ಚಿ ಬೆಳಕನ್ನು ಮಾಡಿಕೊಳ್ಳುತ್ತಾನೆ. ವಿದ್ಯುದ್ದೀಪಗಳ ಬಳಕೆಯಾ ಗುತ್ತಿರುವ ಇಂದಿನ ವಿಜ್ಞಾನಯುಗದಲ್ಲಿ ವಿದ್ಯುತ್ಪ್ರವಾಹವು ನಿಂತುಹೋಗಿ ಮನೆಯಲ್ಲಿ ಕತ್ತಲೆಯು ಆವರಿಸಿದಾಗ ಮನೆಯೊಳಗಿನವರು ಸುಮ್ಮನೆ ಕೂಡ್ರುವುದಿಲ್ಲ, ಆಗಿಂದಾಗಲೇ ಪರ್ಯಾಯ ವ್ಯವಸ್ಥೆಯನ್ನು ಮಾಡಿ, ಎಣ್ಣೆಯ ದೀಪವನ್ನೋ, ಮೇಣಬತ್ತಿಯ ದೀಪವನ್ನೋ ಇಲ್ಲವೆ ಗ್ಯಾಸನ್ನೋ ಹೊತ್ತಿಸಿ ಮನೆಯಲ್ಲಿ ಬೆಳಕು ಮಾಡಿಕೊಳ್ಳುತ್ತಾರೆ. ಒಂದು ಆಶ್ಚರ್ಯವೆಂದರೆ ಹೊರಗಿನ ಈ ಕತ್ತಲೆಯನ್ನು ಒಂದು ಕ್ಷಣ ಮಾತ್ರ ಸಹಿಸದ ವ್ಯಕ್ತಿಯು, ಮನದೊಳಗಿನ ಮೋಹವೆಂಬ ಕತ್ತಲೆಯನ್ನು ಯುಗ ಯುಗಗಳಿಂದ ಸಂರಕ್ಷಿಸಿ ಕೊಂಡು ಬಂದಿದ್ದಾನೆ.

ಈ ಮೋಹಕತ್ತಲೆಯಿಂದಾಗಿಯೇ ಇವನಿಗೆ ಭವರೋಗವು ಅಂಟಿಕೊಂಡಿದೆ. ಇದರ ನಿವೃತ್ತಿಯಾಗಬೇಕಾದರೆ ಶಿವಾದ್ವೈತ ಜ್ಞಾನವೇ ಬೇಕು. ದೀಪವಿಲ್ಲದೆ ಹೊರಗಿನ ಕತ್ತಲೆಯು ಹರಿದುಹೋಗದಂತೆ, ಶಿವಾದ್ವೈತ ಜ್ಞಾನವಿಲ್ಲದೆ ಈ ಚಿತ್ತದಲ್ಲಿಯ ಮೋಹವು ನಿವೃತ್ತಿಯಾಗುವುದಿಲ್ಲ, ಯಾವ ಕ್ಷಣದಲ್ಲಿ ಆ ಜ್ಞಾನವು ಉದಿಸುವುದೋ ಅದೇ ಕ್ಷಣದಲ್ಲಿ ಈ ಮೋಹವು ಹೇಳಹೆಸರಿಲ್ಲದಂತಾಗುತ್ತದೆ. ಮೋಹವು ಅದೆಷ್ಟೇ ದೀರ್ಘಕಾಲ

ದ್ದಾಗಿದ್ದರೂ ಒಂದು ಕ್ಷಣಾರ್ಧದಲ್ಲಿ ಉದಿಸಿದ ಜ್ಞಾನವು ಅದನ್ನು ಇಲ್ಲದಾಗಿಸುತ್ತದೆ. ಏಕೆಂದರೆ ಜ್ಞಾನ ಮತ್ತು ಮೋಹಗಳಲ್ಲಿ ಬೆಳಕು ಮತ್ತು ಕತ್ತಲೆಗಳಲ್ಲಿ ''ಸಹ ಅನವಸ್ಥಾಯಿ ವಿರೋಧ'' ವಿರುತ್ತದೆ. ಅಂದರೆ ಅವೆರಡೂ ಕೂಡಿರಲು ಸಾಧ್ಯವಾಗುವುದಿಲ್ಲ. ಕತ್ತಲೆಯು ಎಷ್ಟು ದಿನ ಹಳೆಯದಾಗಿದ್ದರೂ ಒಂದು ಕಾಲದಲ್ಲಿ ಉದಿಸಿದ ಚಿಕ್ಕದಾದ ಬೆಳಕಿನಿಂದ ಪಲಾಯನಗೊಳ್ಳುವುದು. ಆದ್ದರಿಂದ ಸಣ್ಣದೀಪದಿಂದ ದೊಡ್ಡ ಕತ್ತಲೆಯು, ಸದ್ಯಃ ಉದಿತವಾದ ಜ್ಞಾನದಿಂದ ಅನಾದಿಮೋಹವು ಅದು ಹೇಗೆ ತಾನೆ ದೂರವಾಗಬಲ್ಲದು? ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ. ಇದೇ ವಿಷಯವನ್ನೇ ಶ್ರೀ ಬಸವಣ್ಣನವರು ತಮ್ಮ–

> ಕರಿಘನ, ಅಂಕುಶ ಕಿರಿದೆನ್ನಬಹುದೇ ? ಬಾರದಯ್ಯಾ,
> ಗಿರಿಘನ, ವಜ್ರ ಕಿರಿದೆನ್ನಬಹುದೇ ? ಬಾರದಯ್ಯ,
> ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ? ಬಾರದಯ್ಯಾ.
> ಮರಹು ಘನ, ನಿಮ್ಮ ನೆನೆವ ಮನ ಕಿರಿದೆನ್ನ ಬಹುದೇ?
> ಬಾರದಯ್ಯಾ, ಕೂಡಲಸಂಗಮದೇವಾ,

ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ. ಹೀಗೆ ಅನಾದಿಮೋಹನಿವೃತ್ತಿಗೆ ಜ್ಞಾನವೇ ಅಮೋಘ ವಾದ ಉಪಾಯವಾದ ಕಾರಣ ಈ ಜ್ಞಾನಾಗಮ ಸ್ಥಲದಲ್ಲಿ ಶ್ರೀಜಗದ್ಗುರು ರೇಣುಕ ಭಗವತ್ಪಾದರು ಅನೇಕ ಯುಕ್ತಿ ಪ್ರಮಾಣ ಮತ್ತು ದೃಷ್ಟಾಂತಗಳ ಮೂಲಕವಾಗಿ ಜ್ಞಾನದ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ. ಪೂಜ್ಯರ ಆದೇಶದಂತೆ ಪ್ರತಿಯೊಬ್ಬರೂ ಆ ಶಿವಾದ್ವೈತ ಜ್ಞಾನವನ್ನು ಪಡೆದು ಮೋಹ ಮುಕ್ತರಾಗಿ ಸರ್ವವಿಧದ ದುಃಖಗಳಿಂದ ಬಿಡುಗಡೆಯಾಗಿ ಅಖಂಡವಾದ ಆನಂದವನ್ನು ಅನುಭವಿಸಿ ಸುಖಿಗಳಾಗಿರೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಆಗಸ್ಟ್, ೧೯೮೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಸಕಾಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ ಶ್ರೀಮಹಾಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶ್ರೀಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿ ಕೊಂಡು, ಜಗತ್ತಿನ ಸಮಸ್ತ ಮಾನವಕುಲಕೋಟಿಯನ್ನು ಕುರಿತು ಉಪದೇಶ ಮಾಡಿದ ಅನುಪಮಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗ ಷಟ್ ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಜ್ಞಾನಾಗಮಸ್ಥಲದ ಅವಶಿಷ್ಟ ಭಾಗದ ಕೆಲವು ವಿಷಯಗಳನ್ನು ಕೂಲಂಕಷವಾಗಿ ಕೇಳಿ ತಿಳಿದಿದ್ದೀರಿ. ಇಂದು ಕ್ರಮಪ್ರಾಪ್ತವಾದ ಸಕಾಯಸ್ಥಲದ ಬಗೆಗೆ ವಿವೇಚಿಸೋಣ.

ಮನುಷ್ಯ ಜನ್ಮದ ಸಾರ್ಥಕತೆಯಾಗಬೇಕಾದರೆ ಆತ್ಮಜ್ಞಾನವನ್ನು ಮಾಡಿಕೊಳ್ಳ ಬೇಕೆಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಹೀಗೆ ಆತ್ಮಜ್ಞಾನವನ್ನು ಪಡೆದ ಬಳಿಕ ಈ ಶರೀರದ ಪ್ರಯೋಜನವೇನು? ಜ್ಞಾನವಾದ ಮೇಲೆ ಈ ದೇಹವನ್ನು ಸಂರಕ್ಷಿಸಬೇಕೋ ಅಥವಾ ತ್ಯಾಗಮಾಡಿ ಬಿಡಬೇಕೋ ಎಂಬ ಪ್ರಶ್ನೆಯುದ್ಭವಿಸಿದಾಗ ಜ್ಞಾನಿಯು ಸಹ ದೇಹ ವನ್ನು ಸಂರಕ್ಷಿಸಬೇಕು ಎಂಬ ವಿಷಯಗಳನ್ನು ಪ್ರತಿಪಾದಿಸುವ ಸ್ಥಲವೇ ಸಕಾಯಸ್ಥಲವು. ಈ ವಿಷಯವನ್ನು ಪ್ರಸ್ತಾಪಿಸಲೋಸುಗ ಪೂಜ್ಯಪಾದರು–

> ಪರಸ್ಯ ಯಾ ತನುರ್ಜ್ಞೇಯಾಽದೇಹಕರ್ಮಾಭಿಮಾನಿನಃ|
> ತಯಾ ಸಕಾಯೋ ಲೋಕೋಽಯಂ ತದಾತ್ಮತ್ವನಿರೂಪಣಾತ್||
>
> (ಸಿ. ಶಿ. ೧೬–೩೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಪೂರ್ವದಲ್ಲಿ ಹೇಳಿದ ಜ್ಞಾನಾಗಮಸಂಪನ್ನನಾದ ಶಿವಯೋಗಿಯು ದೇಹವನ್ನು ಧರಿಸಿದವನಾಗಿದ್ದರೂ ನಾನು ಸ್ಥೂಲನು, ನಾನು ಮಾಡುವ ವನು ಎಂದು ಮೊದಲಾದ ದೇಹ ಹಾಗೂ ಅದರ ಕರ್ಮದ ಅಭಿಮಾನವನ್ನು ಸಾಮಾನ್ಯ ಜನರಂತೆ ಈತನು ಮಾಡಿಕೊಳ್ಳುವುದಿಲ್ಲ ಹೀಗೆ ದೇಹಾಭಿಮಾನವನ್ನು ಮಾಡಿಕೊಳ್ಳದಿ ದ್ದರೂ, ದೇಹವನ್ನು ಧರಿಸಿರೋಣದರಿಂದ ಇವನು ಸಕಾಯನೆಂದೇ ಕರೆಯಲ್ಪಡುತ್ತಾನೆ. ಯೋಗಿಯ ಈ ದೇಹವು ಸಾಮಾನ್ಯಜನರಿಗೆ ಆತ್ಮದಷ್ಟೇ ಪೂಜ್ಯವಾಗಿರುತ್ತದೆ. ಎಂಬುದು ಪೂಜ್ಯರ ಅಭಿಪ್ರಾಯವಾಗಿದೆ.

ದೇಹಾಭಿಮಾನವಿಲ್ಲದೇ ಇರುವ ಶಿವಯೋಗಿಗೆ ಈ ಕಾಯದ ಅಪೇಕ್ಷೆಯಾದರೂ ಏಕೆ ? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯಪಾದರು ಅದಕ್ಕೆ ಉತ್ತರ ರೂಪವಾಗಿ–

ಕಾಯಂ ವಿನಾ ಸಮಸ್ತಾನಾಂ ನ ಕ್ರಿಯಾ ನ ಚ ಭಾವನಾ ।
ನ ಜ್ಞಾನಂ ಯತ್ತತೋ ಯೋಗೀ ಕಾಯವಾನೇವ ಸಂಚರೇತ್ ॥

(ಸಿ.ಶಿ.೧೬–೩೬)

ಹೀಗೆ ಉಪದೇಶಿಸಿದ್ದಾರೆ. ಈ ಜಗತ್ತಿನಲ್ಲಿರುವ ಪ್ರತಿಯೊಬ್ಬರಿಗೂ ಕಾಯವು ಬೇಕೇ ಬೇಕು. ಅದಿಲ್ಲದಿದ್ದರೆ ಕ್ರಿಯೆಯಾಗಲಿ, ಧ್ಯಾನವಾಗಲಿ ಮತ್ತು ಜ್ಞಾನವಾಗಲಿ ಇವು ಯಾವುಗಳೂ ಸಂಭವಿಸಲಾರವು. ಇವುಗಳಲ್ಲಿ ಯಾವುದನ್ನೇ ಸಾಧಿಸಬೇಕಾದರೂ ಕಾಯವು ಬೇಕೇ ಬೇಕು. ಆದಕಾರಣ ಶಿವಯೋಗಿಗೂ ಸಹ ಶರೀರವು ಅವಶ್ಯವಾಗಿ ಬೇಕೆಂಬುದು ಪೂಜ್ಯರ ತಾತ್ಪರ್ಯವಾಗಿದೆ.

''ಶರೀರಮಾದ್ಯಂ ಖಲು ಧರ್ಮ ಸಾಧನಮ್'' ಎಂಬ ಈ ಕಾಲಿದಾಸೋಕ್ತಿಯಲ್ಲಿ ಶರೀರವು ಧರ್ಮ ಸಂಪಾದನೆಯ ಸಾಧನವಾಗಿರುತ್ತದೆ. ಆದ್ದರಿಂದ ಇದನ್ನು ರಕ್ಷಿಸಿ ಕೊಂಡು ಇದರಿಂದ ಲೌಕಿಕ ಹಾಗೂ ಪಾರಲೌಕಿಕ ಕಾರ್ಯಗಳನ್ನು ಸಾಧಿಸಬೇಕೆಂಬುದಾಗಿ ಉಪದೇಶಿಸಲಾಗಿದೆ. ಜ್ಞಾನದ ಪ್ರಾಪ್ತಿಯಾಗುವವರೆಗೆ ಶರೀರದ ಪ್ರಯೋಜನವು ನಮಗಾಗಿ ಇದ್ದರೆ ಜ್ಞಾನೋತ್ತರದಲ್ಲಿ ತಾನು ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸಲು ತನಗೆ ಅನುಕೂಲವಾಗುವುದರ ಜೊತೆಗೆ ಅನ್ಯರ ಉದ್ಧಾರಕ್ಕಾಗಿಯೂ ಅದು ಉಪಯೋಗವಾಗುವುದು. ಜ್ಞಾನಿಯಾದ ವ್ಯಕ್ತಿಯು ತನ್ನ ಸನ್ನಿಧಿಗೆ ಬಂದ ಅನೇಕ ಜನರಿಗೆ ಮಾರ್ಗದರ್ಶನ ಮಾಡಿ ಅವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಉಪದೇಶಿಸಿ ಕೊನೆಗೆ ಅವರನ್ನೂ ಸಹ ಜ್ಞಾನಿಗಳನ್ನಾಗಿ ಮಾಡುತ್ತಾನೆ. ಹೀಗೆ ಜ್ಞಾನಿಯ ಶರೀರವು ಹೆಚ್ಚು ಹೆಚ್ಚು ಪರೋಪಕಾರಕ್ಕಾಗಿ ಉಪಯೋಗವಾಗುತ್ತಿರುತ್ತದೆ. ಮಹರ್ಷಿವ್ಯಾಸನು ಸ್ಕಂದ ಪುರಾಣದ–

ಆಕಾಶಗಮನಾದೀನಿ ಸರ್ವಜ್ಞಾನ ಸಮೃದ್ಧಯೇ ।
ಭಾವಂತ್ಯೇವ ಸ ಕಾಯಸ್ಯ ಶಿವಸಂಸಕ್ತಚೇತಸಃ ॥

ಈ ಶ್ಲೋಕದಲ್ಲಿ ಜ್ಞಾನಿಯಾದ ಶಿವಯೋಗಿಯು ಕಾಯವಂತನಾಗಿದ್ದರೆ ಆಕಾಶ ಗಮನಾದಿ ಅಲೌಕಿಕ ಕ್ರಿಯೆಗಳನ್ನು ಮಾಡಬಹುದಲ್ಲದೆ ಸರ್ವಜ್ಞತ್ವಾದಿ ಸದ್ಗುಣಗಳ ಸಮೃದ್ಧಿಯನ್ನು ಅಭಿವ್ಯಕ್ತಗೊಳಿಸಲು ಸಹಾಯಕವಾಗುವುದೆಂಬುದಾಗಿ ಅಭಿಪ್ರಾಯ ಪಟ್ಟಿದ್ದಾನೆ. ಆದ್ದರಿಂದ ಅಜ್ಞ ಜೀವಿಗಳಿಗೆ ಕಾಯವು ಬೇಕಾಗಿರುವಂತೆ ಜ್ಞಾನಿಗೂ ಸಹ ಅದು ಅವಶ್ಯಕವಾದುದು. ಲಿಂಗಪೂಜಾದಿ ಸತ್ಕರ್ಮಗಳನ್ನು ಮಾಡಲಿಕ್ಕೆ ಮತ್ತು ಧ್ಯಾನ–ಧಾರಣಾದಿಗಳನ್ನು ಅಭ್ಯಸಿಸಲಿಕ್ಕೆ ಮತ್ತು ಜ್ಞಾನವನ್ನು ಸಂಪಾದಿಸಲಿಕ್ಕೆ ಕಾಯವು ಅವಶ್ಯವಾಗಿರೋಣದರಿಂದ ಜ್ಞಾನಿಯೂ ಸಹ ಕಾಯವಂತನಾಗಿರಬೇಕೆಂಬುದೇ ಆಚಾರ್ಯರ ಆಶಯವಾಗಿದೆ.

ಶಿವಜ್ಞಾನ ಸಂಪನ್ನನಾದ ಶಿವಯೋಗಿಗೆ ಭೋಗಮೋಕ್ಷಾದಿ ಸ್ಥಲಗಳು ದೊರೆಯಬೇಕಾದರೆ ಕಾಯವೇ ಬೇಕೆನ್ನುವ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯರು ಪುನಃ–

ಶಿವೈಕ ಜ್ಞಾನಯುಕ್ತಸ್ಯ ಯೋಗಿನೋಽ ಪಿ ಮಹಾತ್ಮನಃ।
ಕಾಯಯೋಗೇನ ಸಿದ್ಧ್ಯಂತಿ ಭೋಗಮೋಕ್ಷಾದಯಃ ಸದಾ ॥

(ಸಿ.ಶಿ.೧೬–೩೭)

ಈ ವಿಧವಾಗಿ ಉದ್ದೇಶಿಸಿದ್ದಾರೆ. ಶಿವಾದ್ವೈತ ಜ್ಞಾನ ಸಂಪನ್ನನೂ ಯೋಗಿಯೂ ಮಹಾತ್ಮನೂ ಆದ ಆ ಜ್ಞಾನಿಗೆ ಕಾಯವಿದ್ದಾಗಲೇನೇ ಭೋಗ ಹಾಗೂ ಮೋಕ್ಷಗಳು ಸಿದ್ಧಿಸುವುವು. ಆದ್ದರಿಂದ ಜ್ಞಾನಸಂಪನ್ನನಿಗೂ ಸಹ ದೇಹ ಸಂಬಂಧವು ಬೇಕೆ ಬೇಕೆಂಬುದು ಪೂಜ್ಯರ ಆಶಯವಾಗಿದೆ.

ಶಾಸ್ತ್ರದಲ್ಲಿ ಸ್ಥೂಲ ಶರೀರಕ್ಕೆ ಭೋಗಾಯತನವೆಂದು ಕರೆದಿದ್ದಾರೆ. ಅಂದರೆ ಸುಖದುಃಖಾದಿಗಳನ್ನು ಉಪಭೋಗಿಸಲು ಶರೀರವು ಮಾಧ್ಯಮವಾಗಿದೆ; ಇದಿಲ್ಲದೆ ಸುಖದುಃಖಗಳ ಭೋಗವನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಇದೂ ಅಲ್ಲದೆ ಶಾಶ್ವತವಾದ ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸಬೇಕಾದರೂ ಶರೀರವು ಅತ್ಯವಶ್ಯವು. ಜ್ಞಾನಿಯಾದವನು ತನ್ನ ಪ್ರಾರಬ್ಧಕರ್ಮವನ್ನು ಅನುಭವಿಸಲೇ ಬೇಕಾದ್ದರಿಂದ ಶರೀರವಿರದಿದ್ದರೆ ಅದು ಹೇಗೆ ಸಾಧ್ಯವಾಗಬಲ್ಲದು ? ಆದ್ದರಿಂದ ಪ್ರಾರಬ್ಧಕರ್ಮದ ಭೋಗ ಹಾಗೂ ಜೀವನ್ಮುಕ್ತಿಯ ವಿಲಕ್ಷಣವಾದ ಆನಂದ ಇವೆರಡನ್ನೂ ಅನುಭವಿಸಲು ಜ್ಞಾನಿಗೂ ಸಹ ಶರೀರವು ಬೇಕೆಂಬುದಾಗಿ ತಿಳಿಯಬೇಕು.

ಆತ್ಮತತ್ತ್ವವು ಪ್ರಕಟವಾಗಿ ತೋರಬೇಕಾದರೂ ಶರೀರವೇ ಬೇಕೆಂಬ ವಿಷಯ ವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯರು ದೃಷ್ಟಾಂತ ಮೂಲಕ ಪುನಃ –

ಕಾಷ್ಠಂವಿನಾ ಯಥಾ ವಹ್ನಿರ್ಜಾಯತೇ ನ ಪ್ರಕಾಶವಾನ್।
ಮೂರ್ತಿಂ ವಿನಾ ತಥಾಯೋಗಿ ನಾತ್ಮತತ್ವಪ್ರಕಾಶವಾನ್ ॥
ಮೂರ್ತ್ಯಾತ್ಮನ್ಯೆವದೇವಸ್ಯ ಯಥಾ ಪೂಜ್ಯತ್ವ ಕಲ್ಪನಾ।
ತಥಾ ದೇಹಾತ್ಮನ್ಯೆವಾಸ್ಯ ಪೂಜ್ಯತ್ವಂ ಪರಯೋಗಿನ ಃ॥

(ಸಿ.ಶಿ.೧೬,೩೮–೩೯)

ಈ ತೆರನಾಗಿ ಉಪದೇಶಿಸಿದ್ದಾರೆ. ವ್ಯಾಪಕವಾದ ಅಗ್ನಿಯು ಪ್ರಕಾಶಮಾನವಾಗಿ ತೋರಬೇಕಾದರೆ ಅದಕ್ಕೆ ಆಲಂಬನರೂಪವಾದ ಕಟ್ಟಿಗೆ ಮುಂತಾದ ಇಂಧನವು ಅವಶ್ಯವಾಗಿ ಬೇಕಾಗುವಂತೆ ಶಿವಯೋಗಿಯ ಶರೀರವಿಲ್ಲದೆ ಆತ್ಮವು ಪ್ರಕಾಶಮಾನವಾಗಿ ತೋರಲಾರದು. ತನ್ನ ಇಷ್ಟದೇವರ ಪೂಜೆಯನ್ನು ಮಾಡಬೇಕಾದರೆ ಆ ದೇವರ ವಿಗ್ರಹವು ಅವಶ್ಯವಾಗಿರುವಂತೆ ಪರಶಿವಯೋಗಿಯ ಪೂಜೆಯಾಗಬೇಕಾದರೂ ಅವನ ದೇಹವು ಸಹ ಬೇಕೆ ಬೇಕೆಂಬುದು ಪೂಜ್ಯರ ಆಶಯವಾಗಿದೆ.

ಕಟ್ಟಿಗೆ, ಗ್ಯಾಸು, ಕಲ್ಲಿದ್ದಲು, ಇದ್ದಿಲು, ಕುಳ್ಳು, ಡೀಜೇಲ್ ಮತ್ತು ಪೆಟ್ರೋಲು ಮುಂತಾದ ಇಂಧನಗಳ ಆಲಂಬನವಿದ್ದಾಗ ಅಗ್ನಿಯು ಪ್ರಕಟವಾಗಿ ತೋರುವಂತೆ ದೇಹವಿಲ್ಲದೆ ಆತ್ಮದ ಪ್ರಾಕಟ್ಯವೂ ಸಹ ಆಗುವುದಿಲ್ಲ. ಇದೇ ಪ್ರಕಾರವಾಗಿ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ದೇವ ಹಾಗೂ ಗುರುಗಳ ಪೂಜೆಯು ವಿಧಿಸಲ್ಪಟ್ಟಿದೆ. ಹಿಂದೂ ಸಂಸ್ಕೃತಿಯಲ್ಲಿ ಅನೇಕ ದೇವೋಪಾಸನ ಪದ್ಧತಿಯು ರೂಢಿಯಲ್ಲಿದೆ. ಭಕ್ತಾದಿಗಳು ತಮ ತಮಗೆ ಅಭೀಷ್ಟವಾದ ದೇವರನ್ನು ಪೂಜಿಸಬೇಕಾದರೆ ಆಯಾ ದೇವರುಗಳ ವಿಗ್ರಹಗಳನ್ನು ನಿರ್ಮಿಸಿ ಪ್ರತಿಷ್ಠಾಪಿಸಿ ಪೂಜೆಮಾಡುವುದನ್ನು ಲೋಕದಲ್ಲಿ ಕಾಣುತ್ತೇವೆ. ನಿರ್ಗುಣ ನಿರಾಕಾರನಾದ ದೇವರನ್ನು ಪೂಜಿಸುವುದು ಸಾಧ್ಯವಾಗದ ಕಾರಣ ಅದಕ್ಕೊಂದು ಆಕಾರವನ್ನು ಕೊಟ್ಟು ಆ ಆಕಾರದ ಮೂರ್ತಿಯಲ್ಲಿ ಹೇಗೆ ದೇವರನ್ನು ಪೂಜೆಮಾಡಲಾಗುವುದೋ ಅದರಂತೆ ''ಹ್ಯಾತ್ಮಜ್ಞಮರ್ಚಯೇತ್ ಭೂತಿಕಾಮಃ '' ಎಂಬ ಉಕ್ತಿಗನುಸಾರವಾಗಿ ಆತ್ಮಜ್ಞನಾದ ಸದ್ಗುರುವನ್ನು ಸಹ ಪೂಜೆಮಾಡಬೇಕಾಗುತ್ತದೆ. ಇಲ್ಲಿ ಗುರುವಿನ ಪೂಜೆಯೆಂದರೆ ಆತನ ಪಾದ ಪೂಜೆಯೇ ಪ್ರಮುಖವಾದುದು. ಆತನು ಶರೀರಧಾರಿಯಾಗಿದ್ದಾಗಲೇ ಪಾದ ಪೂಜೆಯು ಸಂಭವಿಸುವುದು. ಹೀಗೆ ದೇವರ ಪೂಜೆಯನ್ನು ಆತನ ಶರೀರದ ಮುಖಾಂತರ ಮಾಡಲಾಗುವುದು. ಆ ಸದ್ಗುರುವು ಶರೀರವನ್ನು ತ್ಯಾಗ ಮಾಡಿದಾಗಲೂ ಅವನ ಆ ಶರೀರಕ್ಕೆ ಆದರಪೂರ್ವಕವಾಗಿ ಕ್ರಿಯಾಸಮಾಧಿಯನ್ನು ನಿರ್ಮಿಸಿ ಅದನ್ನೂ ಸಹ ಪೂಜೆ ಮಾಡುವ ಪದ್ಧತಿಯು ಲೋಕದಲ್ಲಿ ಇದೆ.

ನಿಷ್ಕಲನಾದ ಶಿವನೂ ಸಹ ಸೃಷ್ಟ್ಯಾದಿ ಕ್ರಿಯೆಗಳನ್ನು ಮಾಡಲೋಸುಗ ಸಾಕಾರ ರೂಪವನ್ನು ತಾಳುತ್ತಾನೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು ಪುನಃ –

ನಿಷ್ಕಲೋಹಿ ಮಹಾದೇವಃ ಪರಿಪೂರ್ಣಃ ಸದಾಶಿವಃ ।
ಜಗತ್ ಸೃಷ್ಟ್ಯಾದಿಸಂಸಿದ್ಧ್ಯೈಮೂರ್ತಿಮಾನೇವ ಭಾಸತೇ ॥

(ಸಿ. ಶಿ. ೧೬–೪೦)

ಹೀಗೆ ಉಪದೇಶಿಸಿದ್ದಾರೆ. ನಿಷ್ಕಲನೂ, ಪರಿಪೂರ್ಣನೂ, ಸದಾ ಕಲ್ಯಾಣಕಾರನೂ ಆದ ಮಹಾದೇವನು ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಕಾರ್ಯವನ್ನು ಮಾಡಲೋಸುಗ ದಿವ್ಯ ದೇಹಗಳನ್ನು ಧರಿಸುತ್ತಾನೆ. ಸಾಕಾರವಾದ ದಿವ್ಯ ದೇಹವನ್ನು ಧರಿಸದೆ ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳನ್ನು ಮಾಡಲಿಕ್ಕೆ ಬರುವದಿಲ್ಲೆಂಬುದು ಪೂಜ್ಯರ ಆಶಯವಾಗಿದೆ. ಆದ್ದರಿಂದ ಏನೇ ವ್ಯವಹಾರವನ್ನು ಯಾರೇ ಮಾಡಬೇಕಾದರೂ ಅವರಿಗೆ ಶರೀರವು ಅವಶ್ಯವಾಗಿ ಬೇಕೆಂಬುದು ತಿಳಿದುಬರುತ್ತದೆ.

ಬ್ರಹ್ಮಾದಿ ದೇವತೆಗಳು ಮತ್ತು ಮುಮುಕ್ಷುಗಳಾದ ಮುನಿಗಳೂ ಸಹ ತಮ್ಮ ತಮ್ಮ ವ್ಯವಹಾರ ನಿರ್ವಹಣೆಗೆ ಶರೀರವನ್ನು ಧರಿಸಿಗೊಂಡಿರುತ್ತಾರೆಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯರು ಪುನಃ –

ಬ್ರಹ್ಮಾದ್ಯಾ ದೇವತಾಃ ಸರ್ವಾ ಮುನಯೋಽಪಿ ಮುಮುಕ್ಷವಃ ।
ಕಾಯವಂತೋ ಹಿ ಕುರ್ವಂತಿ ತಪಃ ಸರ್ವಾರ್ಥಸಾಧಕಮ್ ॥

ತಪೋಹಿಮೂಲಂ ಸರ್ವಾಸಾಂ ಸಿದ್ಧೀನಾಂ ಯಜ್ಜಗತ್ರಯೇ ।
ತಪಸ್ತತ್ಕಾಯ ಮೂಲಂ ಹಿ ತಸ್ಮಾತ್ಕಾಯಂ ನ ಸಂತ್ಯಜೇತ್ ॥

(ಸಿ. ಶಿ. ೧೬, ೪೧-೪೨)

ಈ ತೆರನಾಗಿ ಉಪದೇಶಿಸಿದ್ದಾರೆ. ಬ್ರಹ್ಮ-ವಿಷ್ಣು ಮೊದಲಾದ ದೇವತೆಗಳು ಮತ್ತು ಮೋಕ್ಷಾಪೇಕ್ಷಿಗಳಾದ ಸಕಲ ಮಹರ್ಷಿಗಳು ತಮ್ಮ ತಮ್ಮ ಮನೋರಥದ ಪೂರ್ತಿಗಾಗಿ ಶರೀರಗಳನ್ನು ಧರಿಸಿಕೊಂಡು ತಪಸ್ಸನ್ನು ಮಾಡುತ್ತಿರುತ್ತಾರೆ. ಈ ಮೂರು ಲೋಕಗಳಲ್ಲಿ ಯಾವುದೇ ಸಿದ್ಧಿಯನ್ನು ಪಡೆಯಬೇಕಾದರೂ ಅದಕ್ಕಾಗಿ ತಪಸ್ಸನ್ನು ಆಚರಿಸಬೇಕಾಗು ವುದು. ತಪಸ್ಸನ್ನಾಚರಿಸಬೇಕಾದರೆ ಕಾಯವು ಬೇಕೇ ಬೇಕು, ಅಂದಾಗ ಆ ಶರೀರದ ಬಗ್ಗೆ ವೈರಾಗ್ಯವನ್ನು ತಾಳಿ ಯಾರೂ ಇದನ್ನು ತ್ಯಾಗ ಮಾಡಲು ಪ್ರಯತ್ನ ಮಾಡಬಾರದೆಂಬು ದಾಗಿ ಪೂಜ್ಯರ ಆಶಯವಾಗಿದೆ.

ಯೋಗ ಶಾಸ್ತ್ರದಲ್ಲಿ ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ಮತ್ತು ವಶಿತ್ವಗಳೆಂಬ ಅಷ್ಟ ಸಿದ್ಧಿಗಳು ವರ್ಣಿಸಲ್ಪಟ್ಟಿವೆ. ಇವುಗಳಲ್ಲಿ ಯಾವುದೇ ಸಿದ್ಧಿಯನ್ನು ಪಡೆಯಬೇಕಾದರೆ ಕಠೋರವಾದ ತಪಶ್ಚರ್ಯವನ್ನು ಆಚರಿಸ ಬೇಕಾಗುವುದು. ಈ ತಪಶ್ಚರ್ಯವನ್ನು ಆಚರಿಸಲಿಕ್ಕೆ ಶರೀರವು ಸಹಾಯಕವಾಗುತ್ತದೆ. ಶರೀರವೇ ಇಲ್ಲದೇ ಹೋದರೆ ತಪಶ್ಚರ್ಯವೂ ಇಲ್ಲ ಮತ್ತು ಸಿದ್ಧಿಗಳೂ ಸಹ ದೊರೆಯಲಾರವು. ಕಾಶಿಗೆ ಬಂದಿರುವ ನಿಮ್ಮೆಲ್ಲರಲ್ಲಿ ಅನೇಕ ಜನರು ತಪಸ್ಸನ್ನಾಚರಿಸ ಲೋಸುಗ ಕಾಶೀ ಕ್ಷೇತ್ರಕ್ಕೆ ಬಂದವರಾಗಿದ್ದೀರಿ. ನಿಮ್ಮ ಊರಿನಲ್ಲಿ ಮಾಡುವ ತಪಶ್ಚರ್ಯಕ್ಕಿಂತಲೂ ಈ ಸ್ಥಾನದಲ್ಲಿ ಮಾಡಿದ ತಪಶ್ಚರ್ಯಕ್ಕೆ ಒಂದು ನೂರು ಪಟ್ಟು ಹೆಚ್ಚು ಫಲವು ಪ್ರಾಪ್ತಿಯಾಗುತ್ತದೆ. ಏಕೆಂದರೆ ಈ ಸ್ಥಾನದಲ್ಲಿ ಅನಾದಿಕಾಲದಿಂದಲೂ ಆಚಾರ್ಯರು ಋಷಿಮುನಿಗಳು ತಪಶ್ಚರ್ಯವನ್ನು ಮಾಡಿ ಸ್ಥಾನವನ್ನು ಪಾವನ ಗೊಳಿಸಿದ್ದಾರೆ. ಆ ಪುಣ್ಯಪ್ರಭಾವದಿಂದ ಇಲ್ಲಿ ಚಿತ್ತವು ಹೆಚ್ಚುಕಾಲದವರೆಗೆ ಏಕಾಗ್ರವಾಗಿ ರುತ್ತದೆ ಹಾಗೂ ಅತ್ಯಂತ ಸಾತ್ವಿಕವಾಗಿರುತ್ತದೆ. ಚಿತ್ತವು ಎಷ್ಟು ಏಕಾಗ್ರವಾಗುವುದೋ ಅಷ್ಟು ಹೆಚ್ಚಿನ ಫಲವು ದೊರೆಯುವುದು. ನಮ್ಮ ನಮ್ಮ ಊರುಗಳು ಹಾಗೂ ನಾವು ವಾಸಿಸುವ ಮನೆಗಳು ಭೋಗ ಭೂಮಿಗಳಾದ್ದರಿಂದ ಅಲ್ಲಿ ಅಷ್ಟೊಂದು ಚಿತ್ತಸ್ಥೈರ್ಯವು ಉಂಟಾಗುವುದಿಲ್ಲ. ಅಂತೆಯೇ ಪುಣ್ಯಕ್ಷೇತ್ರದಲ್ಲಿ ಮಾಡಿದ ತಪಸ್ಸು ಹೆಚ್ಚಿನ ಫಲ ದಾಯಕವಾಗುತ್ತದೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಸಿದ್ಧಿಗಳಿಗೆ ಮೂಲವಾದದ್ದು ತಪಶ್ಚರ್ಯವು ಮತ್ತು ಆ ತಪಸ್ಸಿಗೆ ಮೂಲ ಸಾಧನವಾದದ್ದು ಶರೀರವು. ಆದ ಕಾರಣ ಸರ್ವಾರ್ಥ ಸಾಧನೀಭೂತವಾದ ಶರೀರವನ್ನು ಆರೋಗ್ಯವಂತವಾಗಿಟ್ಟುಕೊಂಡು ಸಕಾಯನೆನಿಸಿ ಪ್ರಾರಬ್ಧ ಕರ್ಮದ ಪರಿಸಮಾಪ್ತಿಯವರೆಗೆ ಅದನ್ನು ರಕ್ಷಿಸಿಕೊಂಡು ಲೋಕೋದ್ಧಾರಕ್ಕಾಗಿ ಅದರ ಸದುಪಯೋಗವನ್ನು ಮಾಡಿಕೊಳ್ಳಬೇಕು. ದೇಹವು ಆತ್ಮವಲ್ಲವಾದರೂ ಆತ್ಮಜ್ಞಾನದ ಪ್ರಾಪ್ತಿಗಾಗಿ ಅದರ ಅವಶ್ಯಕತೆ ಇರುತ್ತದೆ. ಆತ್ಮಜ್ಞಾನದ ನಂತರ ಲೋಕಕಲ್ಯಾಣಕ್ಕಾಗಿ ಅದರ ಉಪಯೋಗವನ್ನು ಮಾಡುತ್ತ ಕಾಲ ಕಳೆಯ ಬೇಕೆಂಬುದೇ ಈ ಸಕಾಯ ಸ್ಥಲದ ಮುಖ್ಯ ರಹಸ್ಯವಾಗಿದೆ. ಕಾರಣ ನೀವೆಲ್ಲರೂ ಇದರ

ಮರ್ಮವನ್ನು ತಿಳಿದು ಕಾಯದ ಸದುಪಯೋಗವನ್ನು ಮಾಡಿಕೊಳ್ಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩ ಆಗಷ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಅಕಾಯಸ್ಥಲ

ಧರ್ಮಾಭಿಮಾನಿಗಳೇ !

ಶ್ರೀಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಹೃದಯಂಗಮವಾಗಿ ಸಾಗುತ್ತಲಿವೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವ ಕುಲಕೋಟಿಯನ್ನು ಕುರಿತು ಉಪದೇಶ ಮಾಡಿದ ಅಪ್ರತಿಮ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಸಕಾಯಸ್ಥಲದ ಬಗ್ಗೆ ಕೆಲವು ವಿಚಾರಗಳನ್ನು ಕೂಲಂಕುಷವಾಗಿ ಕೇಳಿ ತಿಳಿದಿದ್ದೀರಿ. ಇಂದು ಕ್ರಮಪ್ರಾಪ್ತವಾದ ಅಕಾಯಸ್ಥಲದ ಬಗೆಗೆ ಪರ್ಯಾಲೋಚಿಸೋಣ.

ಪೂರ್ವದಲ್ಲಿ ಹೇಳಿದ ಸಕಾಯಸ್ಥಲದ ಶಿವಯೋಗಿಯು ಯಾವಾಗ ದೇಹಾ ಭಿಮಾನಹೀನನಾಗುತ್ತಾನೆಯೋ ಅರ್ಥಾತ್ ದೇಹವಿದ್ದರೂ ದೇಹದ ಅಭಿಮಾನವನ್ನು ಸಂಪೂರ್ಣವಾಗಿ ಇಲ್ಲದಾಗಿಸಿಕೊಳ್ಳುತ್ತಾನೆಯೋ ಆಗ ಅವನಿಗೇನೇ ಅಕಾಯನೆಂಬು ದಾಗಿ ಕರೆಯಲಾಗುತ್ತದೆ. ಅವನ ಸ್ವರೂಪವನ್ನು ಅಥವಾ ಅವನ ಅಕಾಯ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ 'ಅಕಾಯಸ್ಥಲ'.

ಕಾಯಗಳು ಎಂಭತ್ನಾಲ್ಕು ಲಕ್ಷ ಪ್ರಕಾರದವುಗಳಾಗಿರುತ್ತವೆ. ಅವುಗಳಲ್ಲಿ ಮನುಷ್ಯ ಕಾಯವೇ ಶ್ರೇಷ್ಠವೆಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಶ್ರೀಮದ್ ಭಾಗವತದ 'ಮಹತಾ ಪುಣ್ಯ ಪಣ್ಯೇನ ಕ್ರೀತೇಽಯಂ ಕಾಯನೌಸ್ತ್ವಯಾ' ಎಂಬ ಉಕ್ತಿಗನುಸಾರವಾಗಿ ಮನುಷ್ಯ ಶರೀರವೆಂದರೆ ಒಂದು ನೌಕೆಯಿದ್ದಂತೆ, ಜೀವಾತ್ಮನು ಬಹಳಷ್ಟು ಪುಣ್ಯವೆಂಬ ಧನವನ್ನು ಕೊಟ್ಟು ಅದನ್ನು ಕೊಂಡುಕೊಂಡಿದ್ದಾನೆ. ಸಂಸಾರವೆಂಬ ಸಾಗರದಿಂದ ದಾಟಲು ಇದು ಸಹಾಯಕವಾಗಿರುತ್ತದೆ. ಸಾಗರವನ್ನು ದಾಟಬೇಕಾದ ನೌಕೆಯು ಛಿದ್ರರಹಿತವಾಗಿರಬೇಕು. ಮನಸ್ಸಿನಲ್ಲಿ ರಾಗದ್ವೇಷಾದಿ ಭಾವನೆಗಳು ಉದಿಸಿದವೆಂದರೆ ಅವುಗಳೇ ಈ ನೌಕೆಗೆ ಬಿದ್ದ ಛಿದ್ರಗಳಿದ್ದಂತೆ, ನೌಕೆಗೆ ಬಿದ್ದ ಛಿದ್ರದಿಂದ ಸಮುದ್ರದ ಜಲವು ಒಳಸೇರುವಂತೆ ಈ ರಾಗದ್ವೇಷಗಳ ಮೂಲಕವಾಗಿ ಸಂಸಾರವು ಅಂತರಂಗವನ್ನು ಪ್ರವೇಶಿಸುವುದು. ಆದ್ದರಿಂದ ಈ ನೌಕೆಗೆ ಛಿದ್ರ ಬೀಳದ ಹಾಗೆ ಕಾಳಜಿವಹಿಸಿ ಇದರಿಂದ ಸುರಕ್ಷಿತವಾಗಿ ಸಂಸಾರ ಸಾಗರವನ್ನು ದಾಟಿ ಮುಕ್ತಿಯನ್ನು ಪಡೆಯುವುದು ಮನುಷ್ಯ ಜೀವನದ ಮುಖ್ಯ ಗುರಿಯಾಗಿದೆ.

ಜೀವಾತ್ಮನಿಗೆ ಈ ಮನುಷ್ಯದೇಹವೆಂಬ ನೌಕೆಯು ಅದೆಷ್ಟೋ ಸಾರೆ ದೊರಕಿದ್ದರೂ ಅದಕ್ಕೆ ಅನೇಕ ಛಿದ್ರಗಳನ್ನು ಹಾಕಿ ಈ ಜೀವಿಯು ಸಂಸಾರ ಸಾಗರದಲ್ಲಿ ಮುಳುಮುಳುಗಿ ಹೋಗಿದ್ದಾನೆ. ಇಲ್ಲಿಯವರೆಗೆ ಆಗಿದ್ದೆಲ್ಲ ಆಗಿಹೋಯಿತು. ಇನ್ನು ಮುಂದಾದರೂ ಇಂತಹ ಅನರ್ಥವಾಗದಂತೆ ಪ್ರತಿಯೊಬ್ಬರೂ ಕಾಳಜಿ ವಹಿಸಿ ಸದ್ಯಃ ದೊರೆತ ಈ ಮಾನವ ದೇಹದ ಸದುಪಯೋಗವನ್ನು ಮಾಡಿಕೊಳ್ಳಬೇಕು. ಶರೀರ ವಿಲ್ಲದೆ ಪೂಜಾದಿ ಕ್ರಿಯೆಗಳಾಗಲಿ, ಧ್ಯಾನಾದಿ ಭಾವನೆಗಳನ್ನಾಗಲಿ ಮಾಡಲು ಸಾಧ್ಯವಾಗು ವುದಿಲ್ಲ; ಅಷ್ಟೇ ಅಲ್ಲ ಶಿವಜ್ಞಾನವನ್ನೂ ಸಹ ಪಡೆಯಲು ಶಕ್ಯವಾಗುವುದಿಲ್ಲ. ಆದ್ದರಿಂದಲೆ ಸಕಾಯ ಸ್ಥಲದಲ್ಲಿ ಶಿವಜ್ಞಾನ ಸಂಪನ್ನನಾದ ಶಿವಯೋಗಿಯೂ ಸಹ ಶರೀರವನ್ನು ಸುರಕ್ಷಿತವಾಗಿಟ್ಟು ಕೊಂಡು ಅದರ ಸದುಪಯೋಗವನ್ನು ಪಡೆಯಬೇಕೆಂಬುದಾಗಿ ತಿಳಿಸಲಾಗಿದೆ.

ಸದ್ಯಃ ಪೂಜ್ಯಪಾದರು ಕಾಯವಿದ್ದರೂ ಕಾಯದ ಅಭಿಮಾನಾದಿಗಳು ಇರಬಾರದೆ ನ್ನುವ ವಿಷಯವನ್ನು ನಿರೂಪಿಸಲೋಸುಗ ಈ ಅಕಾಯ ಸ್ಥಲದಲ್ಲಿ ಪುನಃ –

ಔಪಚಾರಿಕ ದೇಹಿತ್ವಾಜ್ಜಗದಾತ್ಮತ್ವ ಭಾವನಾತ್ ।
ಮಾಯಾ ಸಂಬಂಧರಾಹಿತ್ಯಾದಕಾಯೋ ಹಿ ಪರಃ ಸ್ಮೃತಃ ॥

(ಸಿ. ಶಿ. ೧೬–೪೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಇಲ್ಲಿ ಕಾಯವಿದ್ದರೂ ಅಕಾಯನಾಗಿರಬೇಕಾದರೆ ಬೇಕಾಗುವ ಮೂರು ಮಹತ್ತ್ವದ ಅಂಶಗಳ ಉಪದೇಶವನ್ನು ಇಲ್ಲಿ ಮಾಡಿದ್ದಾರೆ. ಇವುಗಳಲ್ಲಿ ಮೊದಲನೆಯದೇ 'ಔಪಚಾರಿಕ ದೇಹಿತ್ವಾತ್' ಎಂಬುದು. ನಾವು ಯಾವ ದೇಹದಲ್ಲಿ ವಾಸ ಮಾಡಿರುತ್ತೇವೆಯೋ ಅದರೊಂದಿಗೆ ನಮ್ಮ ಸಂಬಂಧವು ಔಪಚಾರಿಕ ವಾಗಿರಬೇಕು. ಅರ್ಥಾತ್ ತಾತ್ಕಾಲಿಕವಾಗಿರಬೇಕೇ ವಿನಃ ತಾದಾತ್ಮಿಕವಾಗಿರಬಾರದು. ಅತ್ಯಂತ ಅಪರಿಚಿತನಾದ ವ್ಯಕ್ತಿಯೂ ನಮಗೆ ಭೆಟ್ಟಿಯಾಗಿ ಏನನ್ನಾದರೂ ಕೇಳಿದರೆ ಅವನ ಜೊತೆಗೆ ನಾವು ತಾತ್ಕಾಲಿಕವಾದ ಔಪಚಾರಿಕ ಸಂಬಂಧದಿಂದ ವ್ಯವಹರಿಸುತ್ತೇವೆ. ಆದರೆ ಸುಪರಿಚಿತನೂ ರಕ್ತಸಂಬಂಧಿಯೂ ಆದ ವ್ಯಕ್ತಿಯೋರ್ವನು ಭೆಟ್ಟಿಯಾದಾಗ ಅವನೊಂದಿಗೆ ತಾದಾತ್ಮ್ಯ ಭಾವದಿಂದ ವ್ಯವಹರಿಸುತ್ತೇವೆ. ಎಲ್ಲಿ ತಾದಾತ್ಮ್ಯಭಾವನೆಯು ಉತ್ಪನ್ನವಾಗುವುದೋ ಅಲ್ಲಿ ಅಭಿಮಾನಾದಿಗಳು ಉಂಟಾಗುತ್ತವೆ. ಅವುಗಳೇ ಮುಂದೆ ದುಃಖಕ್ಕೆ ಕಾರಣಗಳಾಗುವುವು. ಆದ್ದರಿಂದ ಅಕಾಯ ಸ್ಥಿತಿಯನ್ನು ಪಡೆಯಲು ಪ್ರಪಂಚ ದಲ್ಲಿ ಔಪಚಾರಿಕ ಸಂಬಂಧವು ಸಹಾಯಕವಾಗುವುದು.

ಈ ತಾದಾತ್ಮ್ಯಭಾವನೆಯಿಂದಲೇ ಜೀವಾತ್ಮನು ದೇಹಾತ್ಮವಾದಿ, ಕಲತ್ರಾತ್ಮವಾದಿ, ಪುತ್ರಾತ್ಮವಾದಿ, ಗೇಹಾತ್ಮವಾದಿ, ಕ್ಷೇತ್ರಾತ್ಮವಾದಿ ಮತ್ತು ಪಶು–ಪಕ್ಷ್ಯಾತ್ಮವಾದಿಯಾಗಿ ಅನೇಕ ದುಃಖಗಳನ್ನು ಅನುಭವಿಸುತ್ತಾನೆ. ಇಲ್ಲಿ ದೇಹಾದಿಗಳೊಂದಿಗೆ ತಾದಾತ್ಮ್ಯ ಭಾವನೆಯನ್ನು ತಾಳಿರುವುದಕ್ಕೇನೇ ದೇಹಾತ್ಮವಾದಿ ಮುಂತಾಗಿ ಹೇಳಲಾಗಿದೆ. ಇನ್ನು ತಾದಾತ್ಮ್ಯಭಾವನೆಯೆಂದರೆ ಶರೀರವೇ ತಾನೆಂದು, ಮಡದಿಯೇ ತಾನೆಂದು, ಮಕ್ಕಳೇ ತಾನೆಂದು, ಮನೆಮಠಗಳೇ ತಾನೆಂದು ತಿಳಿದು, ಅವುಗಳ ಜೊತೆಗೆ ಸಮರಸವಾಗಿ

ವ್ಯವಹರಿಸುವುದು. ಈ ರೀತಿಯಾದ ವ್ಯವಹಾರವೇ ದುಃಖಕ್ಕೆ ಕಾರಣೀಭೂತವಾಗು ವುದು. ಆದ್ದರಿಂದ ಅಕಾಯಸ್ಥಿತಿಯನ್ನು ಪಡೆಯಲೋಸುಗ ಈ ತಾದಾತ್ಮ್ಯ ಸಂಬಂಧ ಗಳನ್ನು ತ್ಯಜಿಸಿ ಔಪಚಾರಿಕ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕು.

ಜಗದಾತ್ಮತ್ವ ಭಾವನೆಯೂ ಸಹ ಅಕಾಯ ಸ್ಥಿತಿಯನ್ನು ಪಡೆದುಕೊಳ್ಳಲು ಸಹಾಯಕವಾಗುವುದು. ಜಗದಾತ್ಮತ್ವ ಭಾವನೆಯೆಂದರೆ ಸಂಪೂರ್ಣ ಜಗತ್ತನ್ನು ಶಿವಮಯವಾಗಿ ಭಾವಿಸುವುದು. ಈ ಜಗತ್ತು ಶಿವಶಕ್ತಿಯರ ವಿಲಾಸವಾಗಿದೆ. ಪ್ರಪಂಚದ ಕಣ–ಕಣಗಳಲ್ಲೆಲ್ಲ ಅವರೇ ತುಂಬಿಕೊಂಡಿದ್ದಾರೆ. ಸಕ್ಕರೆಯಿಂದ ನಿರ್ಮಾಣಗೊಂಡ ಬೊಂಬೆಯು ಸಕ್ಕರೆಯೇ ಆಗಿರುವಂತೆ ಶಿವಶಕ್ತಿಯರಿಂದ ನಿರ್ಮಾಣಗೊಂಡ ಈ ವಿಶ್ವವು ಶಿವಶಕ್ತಿಯರ ಸ್ವರೂಪವೇ ಆಗಿರುತ್ತದೆ. ಈ ಪ್ರಕಾರವಾದ ತಿಳುವಳಿಕೆಯು ಯಾರಿಗೆ ಆಗುತ್ತದೆಯೋ ಅವನು ಸರ್ವತ್ರ ಸಮದೃಷ್ಟಿಯುಳ್ಳವನಾಗಿರೋಣದರಿಂದ ಯಾವ ದೊಂದರಲ್ಲಿ ಆಸಕ್ತನಾಗುವುದಿಲ್ಲ. ಸಕ್ಕರೆಯ ಗೊಂಬೆಗಳನ್ನು ಮಕ್ಕಳಿಗೆ ತಿನ್ನಲು ಕೊಡುವಾಗ ಮಕ್ಕಳು ಅವುಗಳೇ ಆಕಾರ ಪ್ರಕಾರಗಳಲ್ಲಿ ಆಸಕ್ತವಾಗಿ ಕಲಹವನ್ನು ಮಾಡುತ್ತಿರುತ್ತವೆ. ನನಗೆ ಕುದುರೆ ಬೇಕು, ಎಂದು ಒಂದು ಮಗು ಅನ್ನುತ್ತಿದ್ದರೆ, 'ನನಗೆ' ತೇರಬೇಕು, ಎಂದು ಮತ್ತೊಂದು ಮಗು ಅಳುತ್ತದೆ. ಮಕ್ಕಳ ದೃಷ್ಟಿಯಲ್ಲಿ ಅವು ಬೇರೆ ಬೇರೆಯಾಗಿ ಕಾಣುವುದರಿಂದ ಅಲ್ಲಿ ಕಲಹವಿದೆ. ಆದರೆ ಮನೆಯ ಯಜಮಾನನ ದೃಷ್ಟಿಯಲ್ಲಿ ಎಲ್ಲವೂ ಸಕ್ಕರೆಯ ಗೊಂಬೆಗಳೇ. ಎಲ್ಲದರಲ್ಲಿ ಇರುವುದು ಒಂದು ಮಾಧುರ್ಯವು. ಅದರಂತೆ ಜ್ಞಾನಿಯ ದೃಷ್ಟಿಯಲ್ಲಿ ಈ ಜಗತ್ತೆಲ್ಲವೂ ಶಿವಶಕ್ತಿಮಯವು, ಅವನಿಗೆ ಸರ್ವತ್ರ ಶಿವಶಕ್ತಿಯರೇ ಗೋಚರವಾಗುತ್ತಾರೆ. ಅಂದಾಗ ಒಂದರಲ್ಲಿ ಆಸಕ್ತಿ ಇನ್ನೊಂದರಲ್ಲಿ ಅನಾಸಕ್ತಿಯು ಅಲ್ಲಿ ಕಂಡು ಬರುವದಿಲ್ಲ. ಆದ್ದರಿಂದ ಈ ಜಗದಾತ್ಮ, ಭಾವನೆಯಿಂದ ಶಿವಯೋಗಿಯು ತನ್ನ ದೇಹದಲ್ಲಿಯೂ ಸಹ ಆಸಕ್ತನಾಗಿರಲಾರನಾದ್ದ ರಿಂದ ಇವನು ಅಕಾಯನೆನಿಸಿಕೊಳ್ಳುವನು. ಈ ರೀತಿಯಾಗಿ ಈ ಜಗದಾತ್ಮತ್ವ ಭಾವನೆಯೂ ಸಹ ಅಕಾಯ ಸ್ಥಿತಿಯನ್ನು ತಂದುಕೊಡಲು ಸಹಾಯಕವಾಗುತ್ತದೆ.

ಇನ್ನು ಅಕಾಯಸ್ಥಿತಿಗೆ ಮೂರನೆಯದಾದ ಕಾರಣವೇ ''ಮಾಯಾ ಸಂಬಂಧ ರಾಹಿತ್ಯವು''. ಮಾಯೆಯ ಸಂಬಂಧದಿಂದ ದೂರವಿರುವ ಶಿವಯೋಗಿಯು ಶರೀರದಲ್ಲಿ ದ್ದರೂ ಅಕಾಯನೆನಿಸಿಕೊಳ್ಳುವನು. ಅರ್ಥಾತ್ ಶರೀರದ ಯಾವುದೇ ಗುಣಗಳು ಅವನ ಮೇಲೆ ಪರಿಣಾಮವನ್ನುಂಟು ಮಾಡಲಾರವು. ಮಾಯೆಯು ಯಾವಾಗ ಯಾವ ರೂಪ ದಿಂದ ಯಾರ ಮುಂದೆ ಬಂದು ಏನನ್ನು ಮಾಡುತ್ತದೆಯೋ ಅದನ್ನು ಹೇಳುವುದು ಅಷ್ಟೊಂದು ಸುಲಭವಾದ ಮಾತಲ್ಲ. ಶಿವಭಕ್ತನಾದ ರಾವಣನು ಶಿವನ ಆತ್ಮಲಿಂಗದ ಪ್ರಾಪ್ತಿಗಾಗಿ ಅತ್ಯಂತ ಕಠೋರವಾದ ತಪಶ್ಚರ್ಯವನ್ನು ಮಾಡುತ್ತಿದ್ದನು. ಆಗ ಭಗವಂತ ನಾದ ವಿಷ್ಣು ತನ್ನ ಮಾಯಾಶಕ್ತಿಯನ್ನು ಅವನ ಮನಸ್ಸಿನಲ್ಲಿ ಸಂಚಾರ ಗೊಳಿಸಿದನು. ಆಗ ರಾವಣನು ತನ್ನ ತಪಸ್ಸಿನಿಂದ ಪ್ರಸನ್ನನಾದ ಶಿವನಿಂದ ಆತ್ಮಲಿಂಗ ವರದಾನವನ್ನು ಕೇಳುವುದನ್ನು ಬಿಟ್ಟು, ಅವನ ಅರ್ಧಾಂಗಿನಿಯಾದ ಪಾರ್ವತಿಯನ್ನೇ ಕೇಳಿದನಂತೆ. ಮನದಲ್ಲಿ ಮಾಯೆಯ ಪ್ರವೇಶವಾದೊಡನೆ ಮನುಷ್ಯನು ತನ್ನ ಜೀವನದ ಉದ್ದೇಶವನ್ನೇ

ಮರೆತು ಮಾಯೆಯ ಮೋಹಪಾಶದಲ್ಲಿ ಸಿಲುಕಿಕೊಂಡು ಬಿಡುತ್ತಾನೆ. ಇಂತಹ ಮಾಯೆಯ ಪ್ರಭಾವದ ಕಥೆಗಳು ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಹೇರಳವಾಗಿ ಸಿಗುತ್ತವೆ. ಆದಕಾರಣ ಮಾಯಾಸಂಬಂಧ ರಹಿತನಾಗದೆ ಶಿವಯೋಗಿಗೆ ಅಕಾಯಸ್ಥಿತಿಯು ಪ್ರಾಪ್ತವಾಗದು.

ಶಿವಶರಣರಿಗೆಲ್ಲ ಅಕ್ಕನ ಸ್ಥಾನದಲ್ಲಿದ್ದ ಅಕ್ಕಮಹಾದೇವಿಯು ಮಲ್ಲಿಕಾರ್ಜುನನ ಸಾಕ್ಷಾತ್ಕಾರವನ್ನು ಮಾಡಿಕೊಂಡ ಬಳಿಕ ಆಕೆಯ ಮನಸ್ಸಿನಲ್ಲಿ ಶರೀರಭಾವನೆ ಇಲ್ಲದಾಗಿ ಹೋಗಿತ್ತು. ತನ್ನ ಪತಿಯಾದ ಕೌಶಿಕರಾಜನ ಕಾಮಚೇಷ್ಟೆಯಿಂದ ತಿರಸ್ಕಾರ ಭಾವನೆಯನ್ನು ತಾಳಿದ ಅವಳು ರಾಜನನ್ನು ಹಾಗೂ ರಾಜನ ವೈಭವವನ್ನು ತ್ಯಜಿಸಿ ದಿಗಂಬರೆಯಾಗಿ ಅರಮನೆಯಿಂದ ಹೊರಬೀಳುತ್ತಾಳೆ. ಅದೇ ಅವಸ್ಥೆಯಲ್ಲಿ ಕಲ್ಯಾಣದ ಅನುಭವ ಮಂಟಪವನ್ನು ಪ್ರವೇಶಿಸಿದಾಗ ಪ್ರಭುವದೇವರನ್ನೇ ಮೊದಲುಗೊಂಡು ಎಲ್ಲ ಶಿವ ಶರಣರು ಅವಳ ವಿದೇಹ ಸ್ಥಿತಿಯನ್ನು ಕಂಡು ನಿಬ್ಬೆರಗಾದರು. ಅಕ್ಕಮಹಾದೇವಿಯ ಮನಸ್ಸಿನಲ್ಲಿ ಸಾಂಸಾರಿಕ ಮೋಹ–ಮಾಯೆಗಳ ಸಂಬಂಧವಿಲ್ಲದ ಕಾರಣ ಅವಳಿಗೆ ಈ ಅಕಾಯ ಸ್ಥಿತಿಯು ಪ್ರಾಪ್ತವಾಯಿತೆಂದು ಅವಳ ಜೀವನದ ಈ ಘಟನೆಯಿಂದ ತಿಳಿದು ಬರುತ್ತದೆ.

ಯಾರು ಕಾಯದ ಮೋಹವನ್ನು ಬಿಡುವರೋ, ಅವರ ಆ ಕಾಯವು ಅವರ ದೃಷ್ಟಿಯಲ್ಲಿ ಅಕಾಯವಾಗಿದ್ದರೂ ಅದೊಂದು ಪ್ರಸಾದಕಾಯವೂ ಸಹ ಅಹುದು. ಯಾವುದೊಂದು ಪದಾರ್ಥವನ್ನು ಸಮರ್ಪಿಸಿದಾಗ ಆ ಪದಾರ್ಥವು ಪ್ರಸಾದವೆಂಬುದಾಗಿ ಕರೆಯಲ್ಪಡುವುದು. ಅದರಂತೆ ಯಾರು ತಮ್ಮ ಕಾಯವನ್ನು ಸಾಂಸಾರಿಕ ಸುಖಭೋಗಕ್ಕಾಗಿ ಬಳಸದೆ ದೇವರ ಧ್ಯಾನ, ದೇವರ ಪೂಜೆ ಮತ್ತು ದೇವರ ನಾಮ ಜಪ ಹಾಗೂ ಆತ್ಮ ಜ್ಞಾನದ ಪ್ರಾಪ್ತಿಗೆ ಉಪಯೋಗಿಸುತ್ತಾರೆಯೋ ಅವರ ಆ ಕಾಯವು ಪ್ರಸಾದಕಾಯವೆಂತಲೇ ಕರೆಯಿಸಿಕೊಳ್ಳುವುದು. ಇಂತಹ ಪ್ರಸಾದಕಾಯವುಳ್ಳವನೂ ಸಹ ಅಕಾಯನೇ ಅಹುದು. ಈ ತೆರನಾದ ಅಕಾಯಸ್ಥಿತಿಯು ಪ್ರಾಪ್ತವಾದ ಶಿವಯೋಗಿಯ ಜೀವನವು ಲೋಕವಿಲಕ್ಷಣವಾಗಿರುತ್ತದೆ. ಹೀಗೆ ಪೂಜ್ಯಪಾದರ ಆದೇಶದ ಮೇರೆಗೆ ಔಪಚಾರಿಕ ದೇಹಿತ್ವ, ಜಗದಾತ್ಮತ್ವ ಭಾವನೆ ಮತ್ತು ಮಾಯಾ ಸಂಬಂಧರಾಹಿತ್ಯಗಳು ಅಕಾಯ ಸ್ಥಿತಿಯನ್ನು ತಂದುಕೊಡುವ ಸಾಧನೆಗಳೆಂಬುದಾಗಿ ತಿಳಿದುಕೊಳ್ಳಬೇಕು.

ಪೂರ್ವೋಕ್ತನಾದ ಶಿವಯೋಗಿಗೆ ದೇಹಾಭಿಮಾನವು ಇಲ್ಲದಿರೋಣದರಿಂದ ಅವನು ಅಕಾಯನೆಂದು ಕರೆಯಿಸಿಕೊಂಡರೂ ದೇಹಸಂಬಂಧವು ಮಾತ್ರ ಇದ್ದೇ ಇರುತ್ತದೆ ಎಂದ ಬಳಿಕ ಅದರಿಂದ ಉತ್ಪನ್ನವಾಗುವ ವಿಕಾರಗಳು ಅವನಲ್ಲಿ ಒಡಮೂಡ ಬಹುದಲ್ಲಾ? ಎಂಬ ಸಂಶಯವು ಉದ್ಭವಿಸಲು ಅದಕ್ಕೆ ಪರಿಹಾರರೂಪವಾಗಿ ಪೂಜ್ಯ ಪಾದರು ಪುನಃ–

ಪರಸ್ಯ ದೇಹಯೋಗೇऽ ಪಿ ನ ದೇಹಾಶ್ರಯ ವಿಕ್ರಿಯಾ ।
ಶಿವಸ್ಯೇವ ಯತಸ್ತಸ್ಮಾದಕಾಯೋ ऽಯಂ ಪ್ರಕೀರ್ತಿತ ಃ ॥

(ಸಿ. ಶಿ. ೧೬–೪೪)

ಈ ವಿಧವಾಗಿ ಉಪದೇಶಿಸಿದ್ದಾರೆ. ಪರಶಿವನು ತನ್ನ ಲೀಲಾವಿನೋದಕ್ಕಾಗಿ ಅನೇಕ ದೇಹಗಳನ್ನು ಧರಿಸಿದ್ದರೂ ಆ ದೇಹ ಸಂಬಂಧವಾದ ಕಾಮಾದಿ ವಿಕಾರಗಳು ಅವನಿಗೆ ಹೇಗೆ ಇರುವುದಿಲ್ಲವೋ ಅದರಂತೆಯೇ ಶಿವನಿಗೆ ಸಮಾನವಾದ ಶಿವಯೋಗಿಗೆ ಶರೀರ ಸಂಬಂಧವಿದ್ದರೂ ಆ ಶರೀರದ ಯಾವ ವಿಕಾರಗಳೂ ಇವನ ಮೇಲೆ ಯಾವುದೇ ಪರಿಣಾಮವನ್ನು ಉಂಟುಮಾಡಲಾರವು ಎಂಬುದು ಪೂಜ್ಯಪಾದರ ಆಶಯವಾಗಿದೆ. ಹೀಗೆ ದೇಹಧಾರಿಯಾಗಿದ್ದರೂ ದೇಹದ ವಿಕಾರಗಳಿಂದ ಮುಕ್ತನಾಗಿರೋಣದರಿಂದ ಇವನಿಗೆ ಅಕಾಯನೆಂದೂ ಕರೆಯಲಾಗಿದೆ. ಈ ಅಕಾಯಸ್ಥಲದ ಇನ್ನೂ ಹೆಚ್ಚಿನ ವಿಚಾರ ಗಳನ್ನು ನಾಳೆಗೆ ಮಾಡೋಣವೆಂಬುದಾಗಿ ತಿಳಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ಆಗಷ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಅಕಾಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀಕಾಶೀಮಹಾಕ್ಷೇತ್ರದಲ್ಲಿ ಶ್ರಾವಣ ಮಾಸದ ನಿಮಿತ್ತವಾಗಿ ಶ್ರೀಮಹಾ ಸನ್ನಿಧಿಯ ಶಿವಪೂಜಾ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಉಳಿದ ಕ್ಷೇತ್ರದಲ್ಲಿ ನಡೆಯುವ ಧರ್ಮಸಭೆಗೂ ಹಾಗೂ ಈ ಮಹಾಕ್ಷೇತ್ರದಲ್ಲಿನಡೆಯುವ ಧರ್ಮಸಭೆಗೂ ಮಹದಂತರ ವುಂಟು. ಇಲ್ಲಿಯ ಜೀವಿಗಳಿಗೆ ಮಹಾಜ್ಞಾನವನ್ನು ಅನುಗ್ರಹಿಸುವುದಕ್ಕಾಗಿ ಸಾಕ್ಷಾತ್ ಶ್ರೀ ವಿಶ್ವೇಶ್ವರನೇ ಇಲ್ಲಿ ನೆಲೆ ನಿಂತಿದ್ದಾನೆ. ಕಾಶಿಯಲ್ಲಿ ವಾಸ ಮಾಡುವವರಿಗೆ ಅನ್ನ ಹಾಗೂ ಜ್ಞಾನಗಳ ಕೊರತೆಯುಂಟಾಗುವುದಿಲ್ಲ. ಈ ಕಾಶೀಕ್ಷೇತ್ರಕ್ಕೆ ತುಳಸೀದಾಸರು– ''ಜ್ಞಾನ–ಖಾನ–ಅಘಹಾನಿಕರ ಜಂಹಬಸ ಸಂಬುಭವಾನಿ'' ಈ ತಮ್ಮ ಉಕ್ತಿಯಲ್ಲಿ ಜ್ಞಾನದ ಕಣಿವೆಯೆಂದೂ ಸಂಬೋಧಿಸಿದ್ದಾರೆ. ಇಲ್ಲಿ ವಾಸಿಸುವ ಜೀವಿಗಳ ಪಾಪವನ್ನು ದೂರಗೊಳಿಸಲೋಸುಗ ಶಿವ ಹಾಗೂ ಪಾರ್ವತಿಯರು ಈ ಕ್ಷೇತ್ರದಲ್ಲಿ ನಿತ್ಯ ನಿವಾಸಗೈದಿದ್ದಾರೆ. ಭಗವಂತನಾದ ವಿಶ್ವೇಶ್ವರನು ಇಲ್ಲಿಯ ಜನರಿಗೆ ಜ್ಞಾನೋಪದೇಶವನ್ನು ಮಾಡಿದರೆ ಭಗವತಿಯಾದ ಅನ್ನಪೂರ್ಣೆಯು ಸರ್ವರಿಗೆ ಅನ್ನವನ್ನು ದಯಪಾಲಿಸುತ್ತಾಳೆ. ಜ್ಞಾನ ಸಂಪಾದನೆಯನ್ನು ಮಾಡಲಿಚ್ಛಿಸುವ ಸಾಧಕನಿಗೆ ಏನು ಬೇಕೋ ಅದೆಲ್ಲವೂ ಇಲ್ಲಿ ಸಿದ್ಧವಾಗಿರುತ್ತದೆ. ಕಾಶೀ ಮಹಾಕ್ಷೇತ್ರದಲ್ಲಿ ವಾಸ ಮಾಡುವ ಸಾಧಕನು ಶಿವ–ಪಾರ್ವತಿಯರ ಕೃಪೆಯಿಂದ ಸರ್ವಪಾಪಮುಕ್ತನಾಗಿ ಜ್ಞಾನವನ್ನು ಪಡೆದು ಕೊನೆಗೆ ಮೋಕ್ಷವನ್ನು ಹೊಂದುವನು.

ಮುಕ್ತಿದಾಯಕಗಳಾದ ಸಪ್ತಪುರಿಗಳಲ್ಲಿ ಕಾಶಿಯು ಸರ್ವೋತ್ಕೃಷ್ಟವಾದುದಾಗಿದೆ. ಉಳಿದ ಅಯೋಧ್ಯಾ, ಮಥುರಾ, ಮಾಯಾ (ಹರದ್ವಾರಾ) ಕಾಂಚೀ, ಅವಂತಿಕಾ, (ಉಜ್ಜೈನ್) ಹಾಗೂ ದ್ವಾರಕಾ ಎಂಬ ಆರು ಪುರಗಳಲ್ಲಿ ಅರ್ಥಾತ್ ತೀರ್ಥ ಕ್ಷೇತ್ರಗಳಲ್ಲಿ ಯಾವನು ತಪಸ್ಸನ್ನಾಚರಿಸುತ್ತ ಮರಣವನ್ನು ಹೊಂದುತ್ತಾನೋ ಅವನು ಅದರ ಪುಣ್ಯದ ಫಲವಾಗಿ ಕೊನೆಗೆ ಕಾಶಿಯಲ್ಲಿ ಜನ್ಮತಾಳುತ್ತಾನೆ. ಇಲ್ಲಿ ಮರಣ ಹೊಂದಿದ ಬಳಿಕ ಪುನಃ ಆತನಿಗೆ ಜನ್ಮವು ಪ್ರಾಪ್ತವಾಗುವುದಿಲ್ಲ. ಅಂತೆಯೇ ''ಕಾಶ್ಯಾಂ ಮರಣಾನ್ಮುಕ್ತಿಃ'' ಎಂಬ ಉಕ್ತಿಯು ಪ್ರಸಿದ್ಧವಾಗಿದೆ. ''ಏಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಾಣಸೀಗತಿಃ'' ಅಂದರೇ ಬೇರೆಲ್ಲೆಡೆಯೂ ಯಾರಿಗೆ ಸದ್ಗತಿಯು ದೊರೆಯುವುದಿಲ್ಲವೋ ಅವರಿಗೆ ಕಾಶಿಯಲ್ಲಿ ಅದು ಅವಶ್ಯವಾಗಿ ದೊರೆಯುತ್ತದೆ. ಇದು ಕಾಶೀಕ್ಷೇತ್ರದ ಮಹತ್ವವಾಗಿದೆ.

ಇಂತಹ ಪವಿತ್ರವಾದ ಕಾಶೀಮಹಾಕ್ಷೇತ್ರದಲ್ಲಿ ನೀವೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ

ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಅಕಾಯಸ್ಥಲದ ಬಗ್ಗೆ ಕೆಲವೊಂದು ವಿಷಯಗಳನ್ನು ಶ್ರವಣ ಮಾಡಿದ್ದೀರಿ. ಇಂದು ಅದೇ ಸ್ಥಲದ ಅವಶಿಷ್ಟ ಭಾಗವನ್ನು ಕುರಿತು ಆಲೋಚಿಸೋಣ.

ದೇಹವನ್ನು ಧರಿಸಿಕೊಂಡಿದ್ದರೂ ದೇಹದಲ್ಲಿ ಉಂಟಾಗುವ ಕಾಮಕ್ರೋಧಾದಿ ವಿಕಾರಗಳಿಂದ ಯಾವಾತನು ದೂರವಾಗಿರುವನೋ ಅವನೇ ಅಕಾಯನೆಂದು ಕರೆಯಿಸಿ ಕೊಳ್ಳುತ್ತಾನೆ. ಕಾಮಕ್ರೋಧಾದಿ ಷಡ್‌ರಿಪುಗಳು ಸಾಮಾನ್ಯವಾಗಿ ಎಲ್ಲರ ಶರೀರಗಳಿಂದ ಅಭಿವ್ಯಕ್ತವಾಗುವ ಸಹಜವಾದ ವಿಕಾರಗಳು. ಈ ವಿಕಾರಗಳಲ್ಲಿ ಅಪಾರವಾದ ಸಾಮರ್ಥ್ಯ ವಿರುತ್ತದೆ. ಅಂತೆಯೇ ''ಬಲವಾನ್ ಇಂದ್ರಿಯಾ ಗ್ರಾಮೋ ವಿದ್ವಾಂಸಮಪಿ ಕರ್ಷತಿ'' ಎಂಬುದಾಗಿ ಜ್ಞಾನಿಗಳು ಹೇಳಿದ್ದಾರೆ. ಯಾವ ಸಮಯದಲ್ಲಿ ಈ ಕಾಮಕ್ರೋಧಾದಿ ವೃತ್ತಿಗಳು ಜಾಗೃತವಾಗುವವೋ ಆಗ ಶರೀರದಲ್ಲಿಯ ಸಮಸ್ತವಾದ ಊರ್ಜಾಶಕ್ತಿಯು ಅವುಗಳ ರೂಪದಲ್ಲಿಯೇ ಪ್ರವಹಿಸಲು ಪ್ರಾರಂಭಿಸುತ್ತದೆ. ಅಂತೆಯೇ ಈ ಸಮಯದಲ್ಲಿ ಮನಸ್ಸಿನಲ್ಲಿ ಬೇರೊಂದು ವಿಚಾರವೇ ಬರುವುದಿಲ್ಲ. ಹೀಗೆ ಅತೀವೇಗವಾಗಿ ಬಂದ ಈ ವಿಕಾರಗಳು ದೊಡ್ಡ ದೊಡ್ಡ ವಿವೇಕಿಗಳ ವಿವೇಕವನ್ನು ಸಹ ಹಾಳು ಮಾಡಿಬಿಡುತ್ತವೆ.

ಅತ್ಯಂತ ಪ್ರಾಚೀನ ಕಾಲದಲ್ಲಿ 'ಸೌಭರಿ' ಎಂಬ ಹೆಸರಿನ ಮಹರ್ಷಿಯು ಜಲಸ್ತಂಭನ ವಿದ್ಯೆಯಲ್ಲಿ ಪರಿಣತನಾಗಿ ಸಮುದ್ರಜಲದಲ್ಲಿ ಕುಳಿತು ತಪಶ್ಚರ್ಯವನ್ನಾಚರಿ ಸುತ್ತಿದ್ದನು. ಒಂದು ದಿನ ಸಮಾಧಿಯಿಂದ ಎಚ್ಚರಾಗಿ ಕಣ್ಣು ತೆರೆದು ನೋಡುತ್ತಿರುವಾಗ ಒಂದು ಮೀನ ಮಿಥುನವು ಜಲದಲ್ಲಿ ಕಾಮಕ್ರೀಡೆಯಾಡುವುದನ್ನು ನೋಡಿದನು. ಅದಷ್ಟು ನಿಮಿತ್ತದಿಂದಲೇ ಅತ್ಯಂತ ವಯೋವೃದ್ಧನಾದ ಆತನ ಮನಸ್ಸಿನಲ್ಲಿ ಕಾಮಾಕಾರ ವೃತ್ತಿಯು ಜಾಗೃತವಾಯಿತು. ಆಗ ತನ್ನ ಮನಸ್ಸಿನಲ್ಲಿ ಯೋಚಿಸಿದ್ದೇನೆಂದರೆ—ಈ ಕ್ಷುದ್ರವಾದ ಮೀನುಗಳು ಎಷ್ಟೊಂದು ಸರಸವಾಗಿ ಕ್ರೀಡಿಸುತ್ತಿವೆಯಲ್ಲ, ನಾನೋರ್ವನೇ ತಪಸ್ಸನ್ನು ಮಾಡುತ್ತ ವ್ಯರ್ಥವಾಗಿ ಕಾಲ ಕಳೆಯುತ್ತಲಿದ್ದೇನೆ. ಈ ಕಾಲಯಾಪನೆಯಿಂದ ಪ್ರಯೋಜನವೇನು ? ನಾನು ವಿವಾಹ ಸಂಸ್ಕಾರವನ್ನು ಹೊಂದಿ ಈ ಕಾಮಸುಖವನ್ನು ಪಡೆಯಲೇಬೇಕು ಎಂಬುದಾಗಿ ನಿಶ್ಚಯಿಸಿ ಆ ಸಮುದ್ರದಿಂದ ಎದ್ದು ಹೊರಬಂದು ಅಂದು ಆ ದೇಶದ ರಾಜನಾಗಿದ್ದ ಮಾಂಧಾತಾ ಚಕ್ರವರ್ತಿಯ ಕಡೆಗೆ ಹೊರಟನು. ವೃದ್ಧಾವಸ್ಥೆಯ ಕಾರಣದಿಂದಾಗಿ ಶರೀರವು ಜೀರ್ಣಶೀರ್ಣವಾಗಿತ್ತು.

ಕೇಶಗಳೆಲ್ಲ ಶುಭ್ರಗಳಾಗಿದ್ದವು ಶರೀರದ ಚರ್ಮವು ಸುಕ್ಕುಗಟ್ಟಿತ್ತು, ಬಾಯೊಳಗೆ ಒಂದೂ ಸಹ ಹಲ್ಲು ಇರಲಿಲ್ಲ, ಕೈಯೊಳಗೆ ಕೋಲು ಹಿಡಿದು ಸಾವಕಾಶವಾಗಿ ರಾಜನ ಅರಮನೆಯನ್ನು ತಲುಪಿದನು. ಈತನನ್ನು ನೋಡಿ ಮಾಂಧಾತಾ ಮಹಾರಾಜನು ಆದರದಿಂದ ಅರಮನೆಯಲ್ಲಿ ಬರಮಾಡಿಕೊಂಡು ಉನ್ನತಾಸನದ ಮೇಲೆ ಕೂಡ್ರಿಸಿ ಯಥೋಚಿತವಾದ ಸತ್ಕಾರವನ್ನು ಮಾಡಿದ ನಂತರ ಆಗಮನದ ಪ್ರಯೋಜನದ ಬಗ್ಗೆ ಪ್ರಶ್ನಿಸಿದನು. ಆಗ ಮಹರ್ಷಿಯು ''ಎಲೈ ! ಮಹಾರಾಜನೇ ನನಗೆ ವಿವಾಹವಾಗುವ ಬಯಕೆಯುಂಟಾಗಿದೆ. ನಿನಗೆ ಅನೇಕ ಕನ್ಯಾಮಣಿಗಳಿರುವುದಾಗಿ ತಿಳಿದುಬಂದಿದೆ. ಆದರೆ ಅವರ ಪೈಕಿ ಯಾರೊಬ್ಬಳನ್ನಾದರೂ ನನಗೆ ಕೊಟ್ಟು ವಿವಾಹ ಸಂಸ್ಕಾರವನ್ನು

ನೆರವೇರಿಸು ಎಂದು ಕೇಳಿಕೊಂಡನು. ಆಗ ರಾಜನು ಆಶ್ಚರ್ಯಚಕಿತನಾಗಿ ''ಮಹರ್ಷಿಗಳೇ ತಮ್ಮ ಈ ದೇಹವು ವಿವಾಹ ಸಂಸ್ಕಾರಕ್ಕೆ ಯೋಗ್ಯವಾದುದಿಲ್ಲ. ನಿಮ್ಮ ಶರೀರವು ಅತ್ಯಂತ ಜೀರ್ಣ-ಶೀರ್ಣವಾಗಿದೆ. ಇಂತಹ ಸ್ಥಿತಿಯಲ್ಲಿ ಅದು ಹೇಗೆ ತಾನೆ ವಿವಾಹವನ್ನು ಮಾಡಿಕೊಳ್ಳುತ್ತೀರಿ ? ಎಂದು ಪ್ರಶ್ನಿಸಿದನು. ಆಗ ಮಹರ್ಷಿಗಳು ''ಎಲೈ ರಾಜನೇ ! ನನ್ನ ದೇಹದ ಬಗ್ಗೆ ನೀನು ವಿಚಾರಿಸಬೇಡ. ನಿನ್ನ ಮಕ್ಕಳನ್ನೆಲ್ಲ ಇಲ್ಲಿ ಕರೆಯಿಸು. ಅವರಲ್ಲಿ ಒಬ್ಬಳನ್ನು ನಾನು ಆಯ್ಕೆ ಮಾಡುತ್ತೇನೆ. ಅವಳೊಂದಿಗೆ ನನ್ನ ಲಗ್ನ ಮಾಡಿಕೊಡು'' ಎಂದು ನುಡಿದರು. ಋಷಿಯ ಮಾತನ್ನು ತಿರಸ್ಕರಿಸುವುದು ರಾಜನಿಗೆ ಅಸಾಧ್ಯವಾಗಿತ್ತು ಅಂತೆಯೇ ಅವನು ಮಹರ್ಷಿಯನ್ನು ಕುರಿತು ''ಹೇ ಋಷಿವರ್ಯನೇ ! ನನಗೆ ೫೦ ಜನ ಕನ್ಯೆಯರಿದ್ದಾರೆ. ಅವರೆಲ್ಲರನ್ನು ತಮ್ಮೆದುರು ಕರೆಸುತ್ತೇನೆ. ಅವರಲ್ಲಿ ಯಾವಳು ನಿಮ್ಮನ್ನು ಆರಿಸುವಳೋ ಅವಳೊಂದಿಗೆ ನಿಮ್ಮ ವಿವಾಹವನ್ನು ನೆರವೇರಿಸಿಕೊಡುವೆನು'' ಹೀಗೆ ನುಡಿದನು. ಆಗ ಮಹರ್ಷಿಯು ತಥಾಸ್ತು ಎಂಬುದಾಗಿ ಒಪ್ಪಿಗೆಯನ್ನಿತ್ತನು. ಕೆಲವೇ ಕ್ಷಣದಲ್ಲಿ ರಾಜನ ಕನ್ಯಾಮಣಿಗಳೆಲ್ಲ ಮಹರ್ಷಿಯ ಮುಂಭಾಗದಲ್ಲಿ ಬಂದು ನಿಂತರು. ಅವರೆಲ್ಲರೂ ಈತನ ಜರಾ ಜೀರ್ಣವಾದ ದೇಹವನ್ನು ಕಂಡು ಮನದೊಳಗೆ ಇವನೊಂದಿಗೆ ಅದು ಹೇಗೆ ತಾನೆ ಲಗ್ನಮಾಡಿಕೊಳ್ಳುವುದು ? ಎಂಬುದಾಗಿ ವಿಚಾರ ಮಾಡುತ್ತ ಕ್ಷಣ ಕಾಲ ಸರ್ವರೂ ಸ್ಥಬ್ಧರಾದರು. ಆ ರಾಜ ಕನ್ನಿಕೆಯರ ಮನೋಭಾವವನ್ನು ಅರಿತ ಮಹರ್ಷಿಯು ತತ್‌ಕ್ಷಣದಲ್ಲಿಯೇ ತನ್ನ ತಪೋಸಾಮರ್ಥ್ಯದಿಂದ ಇಪ್ಪತ್ತೈದು ವರ್ಷದ ನವತರುಣನಾಗಿ ಕಂಗೊಳಿಸತೊಡಗಿದನು. ಈತನ ಸ್ಫುರದ್ರೂಪದ ಮತ್ತು ತಾರುಣ್ಯಭರಿತವಾದ ದೇಹವನ್ನು ಕಂಡೊಡನೆ ರಾಜಕನ್ನಿಕೆಯರೆಲ್ಲರೂ ನಾ ಮುಂದೆ ನೀ ಮುಂದೆ ಎಂದು ಆ ಋಷಿಯೊಂದಿಗೆ ಲಗ್ನ ಮಾಡಿಕೊಳ್ಳಲು ಸಿದ್ಧರಾದರು. ಆಗ ರಾಜನು ಅನಿವಾರ್ಯವಾಗಿ ತನ್ನ ಐವತ್ತು ಜನ ಹೆಣ್ಣುಮಕ್ಕಳನ್ನು ಋಷಿಗೆ ಧಾರೆಯೆರೆದು ಲಗ್ನ ಮಾಡಿಕೊಟ್ಟನು. ನಂತರ ಆ ಸೌಭರಿ ಮಹರ್ಷಿಯು ಅನೇಕ ವರ್ಷಗಳವರೆಗೆ ತನ್ನ ಐವತ್ತು ಪತ್ನಿಯರೊಂದಿಗೆ ದಾಂಪತ್ಯ ಜೀವನವನ್ನು ಸಾಗಿಸಿ ಅನೇಕ ಮಕ್ಕಳನ್ನು ಸಹ ಪಡೆದವನಾದನು. ಇಷ್ಟೆಲ್ಲ ಭೋಗವನ್ನು ಭೋಗಿಸಿಯೂ ಸಹ ಅವನ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಕೊನೆಗೆ ಆ ಕಾಮಭಾವನೆಯ ಬಗ್ಗೆ ತಿರಸ್ಕಾರವುಂಟಾಗಿ ಎಲ್ಲರನ್ನೂ ತೊರೆದು ಪುನಃ ತಪಸ್ಸನ್ನಾಚರಿಸಲು ಸಮುದ್ರವನ್ನು ಸೇರಿದನು. ಹೀಗೆ ಈ ಕಾಮ-ಕ್ರೋಧಾದಿ ವೃತ್ತಿಗಳು ಯಾವಾಗ್ಯ ಯಾರ ಮನಸ್ಸಿನಲ್ಲಿ ಉದ್ಭವಿಸಿ ಎಷ್ಟು ಅನರ್ಥವನ್ನು ಮಾಡುತ್ತವೆಯೋ ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಈ ವೃತ್ತಿಗಳು ಮನದಲ್ಲಿ ಮೂಡಿದಾಗ ಇವುಗಳ ಬಗ್ಗೆ ಸಾಧಕನು ಎಚ್ಚರವಾಗಿದ್ದರೆ ಮಾತ್ರ ಅವನು ಇವುಗಳಿಂದ ಪಾರಾಗಬಲ್ಲನು. ಇಲ್ಲವಾದರೆ ಇವನನ್ನು ಅವು ಬಲಾತ್ಕಾರವಾಗಿ ಎಳೆದುಕೊಂಡು ಹೋಗುತ್ತವೆ. ಅಂತೆಯೇ ಅಕಾಯಸ್ಥಲದ ಸಾಧಕನು ದೇಹದಲ್ಲಿ ಉಂಟಾಗುವ ಈ ಕಾಮಾದಿವಿಕಾರಗಳಿಂದ ಅಲಿಪ್ತನಾಗಿರುತ್ತಾನೆ. ಅಥವಾ ಇವುಗಳಿಂದ ಅಲಿಪ್ತನಾದಾಗಲೇ ಅವನಿಗೆ ಅಕಾಯಸ್ಥಿತಿಯು ಪ್ರಾಪ್ತವಾಗುತ್ತದೆ.

ಈ ಶಿವಯೋಗಿಯು ಅಕಾಯನಿದ್ದದ್ದೇ ನಿಜವಾಗಿದ್ದರೆ ಸಕಾಯನಂತೆ ಏಕೆ ತೋರುವನು ? ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರು ಅದಕ್ಕೆ ಸಮಾಧಾನ ವಾಗುವ ರೀತಿಯಲ್ಲಿ ಪುನ ಃ –

ಪರಲಿಂಗೇ ವಿಲೀನಸ್ಯ ಪರಮಾನಂದ ಚಿನ್ಮಯೇ ।
ಕುತೋ ದೇಹೇನ ಸಂಬಂಧೋ ದೇಹಿವದ್ಭಾಸನಂ ಭ್ರಮಃ ॥

(ಸಿ.ಶಿ. ೧೬–೪೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಪರಮಾನಂದ ಸ್ವರೂಪವು ಮತ್ತು ಚಿದ್ರೂಪವೂ ಆದ ಪರಶಿವಲಿಂಗದಲ್ಲಿ ವಿಲೀನವಾದ ಮನೋವೃತ್ತಿಯುಳ್ಳ ಶಿವಯೋಗಿಗೆ ದೇಹದ ಸಂಬಂಧವೇ ಇರುವುದಿಲ್ಲ, ನೋಡುವವರಿಗೆ ಅವನು ಶರೀರಧಾರಿಯಂತೆ ಕಾಣುತ್ತಿರು ವದು ನೋಡುವವರ ಭ್ರಮೆಯೇ ವಿನಃ ವಾಸ್ತವಿಕವಾದುದಲ್ಲ, ಹೀಗೆ ಆತನು ಅಕಾಯ ನಾಗಿದ್ದರೂ ಅನ್ಯರಿಗೆ ಸಕಾಯನಂತೆ ತೋರುತ್ತಿರುವುದು ಭ್ರಮೆಯೆಂಬುದಾಗಿ ತಿಳಿದು ಕೊಳ್ಳಬೇಕೆಂಬುದು ಪೂಜ್ಯರ ಆಶಯವಾಗಿದೆ.

ಮನಸ್ಸಿನ ಜೊತೆಗೆ ನಮ್ಮ ಸಂಬಂಧವು ಎಲ್ಲಿ ಇರುವುದೋ ನಾವು ಅಲ್ಲಿಯೇ ಇರುತ್ತೇವೆ. ಹಾಗೆಯೇ ಈ ಶಿವಯೋಗಿಯ ಮನೋವೃತ್ತಿಯು ಪರಶಿವ ಲಿಂಗದಲ್ಲಿ ವಿಲೀನವಾಗಿರೋಣದರಿಂದ ದೇಹದ ಜೊತೆಗೆ ಅವನ ಮನೋವೃತ್ತಿಯ ಸಂಬಂಧವು ಇರುವುದಿಲ್ಲ, ಆದ್ದರಿಂದ ಅವನು ದೇಹದಲ್ಲಿ ಇದ್ದರೂ ಸಹ ದೇಹಕ್ಕೆ ಸಂಬಂಧವಿರದ ಹಾಗೆ ಇರುತ್ತಾನೆ. ಕಮಲವು ಸದಾ ನೀರಿನಲ್ಲಿಯೇ ಇದ್ದರೂ ನೀರು ತನಗೆ ಸೋಂಕದಂತೆ ಇರುವ ಹಾಗೆ ಈ ಶಿವಯೋಗಿಯೂ ಸಹ, ಶರೀರದಲ್ಲಿದ್ದರೂ ಶರೀರಸಂಬಂಧವಿಲ್ಲದಂತೆ ಅಲಿಪ್ತನಾಗಿರುತ್ತಾನೆ. ಅಂತೆಯೇ ಕಾಮಧಾರಿಯಾಗಿಯೂ ಅವನು ಅಕಾಯನಾಗಿರು ತ್ತಾನೆ. ಹೀಗಿದ್ದರೂ ಅಜ್ಞರಾದ ಜೀವಿಗಳು ಇವನನ್ನು ತಮ್ಮಂತೆ ದೇಹಧಾರಿಯನ್ನಾಗಿ ತಿಳಿದುಕೊಂಡಿರುತ್ತಾರೆ. ಅವರ ಈ ತಿಳುವಳಿಕೆಯು ಭ್ರಮಾತ್ಮಕವಾಗಿರುತ್ತದೆ. ಮನುಷ್ಯನ ಅಂತರಂಗ ಬಹಿರಂಗಗಳಲ್ಲಿ ಅಂತರಂಗವೇ ಮಹತ್ತ್ವಪೂರ್ಣವಾದುದು. ನಮ್ಮ ಶರೀರವು ಎಲ್ಲಿದೆ ? ಅದು ಅಷ್ಟೊಂದು ಮಹತ್ತ್ವದ್ದಲ್ಲ. ಆದರೆ ನಮ್ಮ ಮನಸ್ಸು ಎಲ್ಲಿದೆಯೋ ಅದು ಬಹಳಷ್ಟು ಮಹತ್ತ್ವಪೂರ್ಣವಾದುದು. ಸದ್ಯಃ ನೀವುಗಳೆಲ್ಲ ಕಾಶೀ ಮಹಾಕ್ಷೇತ್ರದಲ್ಲಿ ಆಶೀರ್ವಚನವನ್ನು ಆಲಿಸುತ್ತ ಕುಳಿತಿದ್ದೀರೇನೋ ನಿಜ ಆದರೆ ನಿಮ್ಮಲ್ಲಿಯ ಎಷ್ಟೋ ಜನರು ನಿಮ್ಮ ನಿಮ್ಮ ಊರು ಹಾಗೂ ಮನೆಗಳ ಬಗ್ಗೆ ಚಿಂತಿಸುತ್ತಿರ ಬಹುದು. ಹಾಗೇನಾದರೂ ಯಾರದೇ ಮನಸ್ಸಿನಲ್ಲಿ ವಿಚಾರವು ಮೂಡಿ ಬಂದಿದ್ದರೆ ಅವರು ಕಾಶಿಯಲ್ಲಿ ಇದ್ದಂತೆ ತೋರುತ್ತಿದ್ದರೂ ಅವರ ನಿಜವಾದ ವಾಸ್ತವ್ಯವು ಅವರ ಮನೆಯಲ್ಲಿಯೇ ಇರುತ್ತದೆ. ಇನ್ನು ನಿಮ್ಮ ಮನೆಯಲ್ಲಿರುವ ಓರ್ವ ವ್ಯಕ್ತಿಯು ಮನೆಯಲ್ಲಿ ಕುಳಿತುಕೊಂಡು ನಮ್ಮವರು ಸದ್ಯಃ ಕಾಶೀಕ್ಷೇತ್ರದಲ್ಲಿ ಗಂಗೆಯಲ್ಲಿ ಸ್ನಾನ ಮಾಡುತ್ತಿರ ಬಹುದು. ವಿಶ್ವನಾಥನನ್ನು ಪೂಜಿಸುತ್ತಿರಬಹುದು. ಶ್ರೀಮಹಾಸನ್ನಿಧಿಯ ಪೂಜೆಯಲ್ಲಿ ಪಾಲುಗೊಳ್ಳುತ್ತಿರಬಹುದು ಮುಂತಾಗಿ ಮನದಲ್ಲಿ ವಿಚಾರಿಸುತ್ತಿದ್ದರೆ ಅವರು ಮನೆಯ ಲ್ಲಿದ್ದೂ ಸಹ ಕಾಶಿಯಲ್ಲಿದ್ದಂತೆಯೇ. ಆದಕಾರಣ ಪ್ರತಿಯೊಬ್ಬರೂ ತಮ್ಮ ಹೆಚ್ಚಿನ ಗಮನ

ವನ್ನು ಸ್ಥೂಲಶರೀರದ ಕಡೆಗೆ ಹರಿಸದೆ ಸೂಕ್ಷ್ಮ ಶರೀರದತ್ತಗಮನವಿಡ ಬೇಕು. ಅಲ್ಲಿರುವ ಮನಸ್ಸು ಎಲ್ಲಿ ಇರುತ್ತದೆಯೋ ಮತ್ತು ಏನನ್ನು ಮಾಡುತ್ತಿರುತ್ತದೆಯೋ ನಾವು ಅಲ್ಲೇ ಇದ್ದು ಅದನ್ನೇ ಮಾಡುತ್ತೇವೆಂಬುದಾಗಿ ಭಾವಿಸಬೇಕು.

ಈರ್ವರು ಮಿತ್ರರು ದೇಶಪರ್ಯಟನೆಯನ್ನು ಮಾಡುತ್ತ ಕಾಶೀಕ್ಷೇತ್ರಕ್ಕೆ ಬಂದು ತಲುಪಿದರು. ಕಾಕತಾಲೀಯ ನ್ಯಾಯದಂತೆ ಅಂದು ಮಹಾಶಿವರಾತ್ರಿಯ ಪರ್ವಕಾಲ ವಿತ್ತು. ಅವರೀರ್ವರಲ್ಲಿ ಓರ್ವನು ಧಾರ್ಮಿಕ ಪ್ರವೃತ್ತಿಯವನಾಗಿದ್ದರೆ, ಇನ್ನೋರ್ವನು ವಿಷಯಲಂಪಟನಾಗಿದ್ದನು. ಸಾಯಂಕಾಲದ ಸಮಯವಾಗುತ್ತಿರುವಾಗ ಧಾರ್ಮಿಕ ಭಾವನೆಯ ಮಿತ್ರನು ತನ್ನ ಗೆಳೆಯನನ್ನುದ್ದೇಶಿಸಿ ಯೋಗಾಯೋಗದಿಂದ ಮಹಾಶಿವ ರಾತ್ರಿಯ ದಿನದಂದು ನಮಗೆ ಕಾಶಿಯವಾಸವು ಪ್ರಾಪ್ತವಾಗಿದೆ. ಎಲ್ಲ ರಾತ್ರಿಗಳಿಗಿಂತಲೂ ಶಿವಪೂಜೆ-ಶಿವಧ್ಯಾನಾದಿಗಳಿಗೆ ಈ ರಾತ್ರಿಯು ಅತಿ ಮಹತ್ತ್ವದ್ದಾಗಿದೆ. ಕಾರಣ ವಿಶ್ವನಾಥನ ದೇವಸ್ಥಾನದಲ್ಲಿ ಕುಳಿತು ಪ್ರಹರ ಪ್ರಹರಕ್ಕೊಮ್ಮೆ ಅಭಿಷೇಕ ಮತ್ತು ಬಿಲ್ವಾರ್ಚನಾದಿಗಳನ್ನು ಮಾಡಿ ಇಂದಿನ ರಾತ್ರಿಯನ್ನು ಕಳೆಯೋಣ ಎಂದು ತಿಳಿಸಿದನು. ಆದರೆ ವಿಷಯಲಂಪಟನಾದ ಇವನ ಮಿತ್ರನಿಗೆ ಇವನ ಮಾತು ರುಚಿಸಲಿಲ್ಲ, ಆದಕಾರಣ ಅವನು ಈ ಭಜನಾದಿಗಳಲ್ಲಿ ಭಾಗವಹಿಸಲು ನನ್ನ ಮನಸ್ಸು ಒಪ್ಪುತ್ತಲೇ ಇಲ್ಲ. ಕಾಶಿಯು ವಿಶ್ವನಾಥನಿಗಾಗಿ ಪ್ರಸಿದ್ಧವಿರುವಂತೆ ಇಲ್ಲಿಯ ವೇಶ್ಯಾವಾಟಿಕೆಯಿಂದಲೂ ಇದು ಖ್ಯಾತನಾಮವಾಗಿದೆ. ಕಾರಣ ಬೇಕಾದರೆ ನೀನೊಬ್ಬನೇ ವಿಶ್ವನಾಥನ ದೇವಸ್ಥಾನಕ್ಕೆ ಹೋಗು. ನಾನೇನೂ ಅತ್ತಬರಲಾರೆ ಎಂದು ಹೇಳಿ ವೇಶ್ಯಾವಾಟಿಕೆಯನ್ನು ಪ್ರವೇಶಿಸಿ ದನು. ಇತ್ತ ದೇವಸ್ಥಾನವನ್ನು ಪ್ರವೇಶಿಸಿದ ಮಿತ್ರನು ; ಪೂಜೆ-ಭಜನೆ- ಶಿವನಾಮಜ ಪಾದಿಗಳಲ್ಲಿ ತೊಡಗಿದನು. ಆದರೂ ಸಹ ಅವನ ಮನಸ್ಸು ಮಾತ್ರ ವೇಶ್ಯಾವಾಟಿಕೆಯತ್ತ ಹರಿಯತೊಡಗಿತು. ಇನ್ನು ವೇಶ್ಯಾವಾಟಿಕೆಯಲ್ಲಿದ್ದ ಮಿತ್ರನು ಕಾಮಕೇಳಿಯಲ್ಲಿ ನಿರತನಾಗಿ ದ್ದರೂ ಪಶ್ಚಾತ್ತಾಪದಿಂದ ಆತನ ಮನಸ್ಸು ದೇವಸ್ಥಾನದತ್ತ ಹರಿಯತೊಡಗಿತು. ಹೀಗೆ ಇವರೀರ್ವರೂ ಬೆಳಗಾಗುವವರೆಗೆ ತಮ್ಮ ತಮ್ಮ ಕ್ರಿಯೆಯಲ್ಲಿ ಮನಸ್ಸನ್ನು ತೊಡಗಿಸದೆ ಪರಸ್ಪರ ಅನ್ಯಕ್ರಿಯಾಸಕ್ತಚಿತ್ತವುಳ್ಳವರಾದರು. ಹೀಗಾಗಿ ದೇವಸ್ಥಾನದಲ್ಲಿದ್ದು ಓರ್ವನು ಪಾಪಭಾಜನನಾದರೆ, ಮತ್ತೋರ್ವನು ವೇಶ್ಯಾವಾಟಿಕೆಯಲ್ಲಿದ್ದೂ ಪುಣ್ಯಭಾಜನನಾ ದನು. ಬಹಿರಂಗದೃಷ್ಟಿಯಲ್ಲಿ ಅವರವರ ವ್ಯವಹಾರವು ಏನೇ ಇದ್ದರೂ ಅಂತರಂಗವು ಅದಕ್ಕೆ ವಿಪರೀತವಾಗಿ ವರ್ತಿಸಿದಾಗ ವಿಪರೀತ ಫಲಗಳೇ ಪ್ರಾಪ್ತವಾಗುವವು. ಆದ್ದರಿಂದ ನಾವು ಎಲ್ಲಿದ್ದೇವೆ ಎಂಬುದಕ್ಕಿಂತಲೂ ನಮ್ಮ ಮನಸ್ಸು ಎಲ್ಲಿದೆ ಅನ್ನುವದು ಬಹುಮುಖ್ಯ ಎಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು.

ಅಕಾಯಸ್ಥಲದ ಶಿವಯೋಗಿಯು ಕಾಯದಲ್ಲಿದ್ದರೂ ಆತನ ಚಿತ್ತವು, ಮಾತ್ರ ಪರಶಿವ ಬ್ರಹ್ಮದಲ್ಲಿ ವಿಲೀನವಾಗಿರೋಣದರಿಂದ ಅವನು ವ್ಯಾವಹಾರಿಕವಾಗಿ ಕಾಯಧಾರಿಯಾಗಿದ್ದರೂ ವಾಸ್ತವಿಕವಾಗಿ ಆತನು ಅಕಾಯನೇ ಆಗಿರುತ್ತಾನೆ.

ಈ ಪೂರ್ವದಲ್ಲಿ ಹೇಳಿದಂತೆ ಈ ಶಿವಯೋಗಿಗೆ ವ್ಯಾವಹಾರಿಕವಾದ ದೇಹ ಸಂಬಂಧವಿದ್ದರೂ ಅವನಿಗೆ ಯಾವುದೇ ಪ್ರಕಾರದ ಬಾಧೆಯುಂಟಾಗಲಾರದೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು ಪುನಃ-

ದೇಹಾಭಿಮಾನಹೀನಸ್ಯ ಶಿವಭಾವೇಸ್ಥಿತಾತ್ಮನಃ।
ಜಗದೇತಚ್ಛರೀರಂ ಸ್ಯಾದ್ದೇಹೇನೈಕೇನ ಕಾ ವ್ಯಥಾ ? ॥

(ಸಿ.ಶಿ. ೧೬–೪೬)

ಈ ವಿಧವಾಗಿ ಉಪದೇಶಿಸಿದ್ದಾರೆ. ದೇಹಾಭಿಮಾನ ಶೂನ್ಯನಾದ ಮತ್ತು ಶಿವೋಽಹಂ ಭಾವನೆಯಲ್ಲಿ ಸ್ಥಿತನಾದ ಶಿವಯೋಗಿಗೆ ಇಡೀ ವಿಶ್ವವೇ ತನ್ನ ಶರೀರವಾಗಿ ತೋರುತ್ತಿರುವಾಗ ಇದೊಂದು ದೇಹದಿಂದ ಅದಾವ ಹಾನಿಯೂ ಉಂಟಾಗಲಾರದು ಎಂಬುದು ಪೂಜ್ಯರ ಆಶಯವಾಗಿದೆ.

ಶರೀರವು ನಾನಲ್ಲ ಮತ್ತು ಅದು ನನ್ನದೂ ಅಲ್ಲ ಎಂಬುದಾಗಿ ದೇಹಾಭಿಮಾನವನ್ನು ಪರಿತ್ಯಜಿಸಿ ಶಿವಭಾವನೆಯಲ್ಲಿ ತಲ್ಲೀನನಾದ ಶಿವಯೋಗಿಯ ಮಮಕಾರದ ಸಂಕುಚಿತ ಭಾವನೆಯು ತೊಲಗಿ ಅದು ವಿರಾಡ್ರೂಪವನ್ನು ತಾಳುತ್ತದೆ. ಶಾಸ್ತ್ರಕಾರರು ಮಮಕಾರದಿಂದ ಮುಕ್ತರಾಗಲು ಎರಡು ಮಾರ್ಗಗಳನ್ನು ಉಪದೇಶಿಸಿದ್ದಾರೆ. ಮೊದಲನೆಯದು ಸಂಪೂರ್ಣವಾಗಿ ಮಮತ್ವಭಾವನೆಯನ್ನು ತ್ಯಾಗ ಮಾಡುವುದು. ಎರಡನೆಯದು ಸರ್ವವೆಲ್ಲವನ್ನೂ ತನ್ನದನ್ನಾಗಿ ಭಾವಿಸುವುದು. ಯಾರ ಮಮತ್ವವು ವಿಶ್ವವ್ಯಾಪಿಯಾಗಿರುತ್ತದೆಯೋ ಅವರು ಈಶ್ವರಸ್ವರೂಪರೇ ಆಗುತ್ತಾರೆ. ಶಿವನಿಗೂ ಜೀವನಿಗೂ ಇರುವ ವ್ಯತ್ಯಾಸವೆಂದರೆ ಇಷ್ಟೆ. ಅಂದರೆ ತನ್ನದೇ ಆದ ಶರೀರ, ಮನೆ–ಮಠಾದಿಗಳ ಬಗ್ಗೆ ಮಮತ್ವಭಾವನೆಯನ್ನು ತಾಳುವವನು ಜೀವನೆಂದು ಕರೆಯಿಸಿಕೊಂಡರೆ ಸರ್ವವೆಲ್ಲವೂ ನನ್ನದೆಂಬ ಸಮಷ್ಟಿಭಾವನೆಯುಳ್ಳವನು ಪರಮಾತ್ಮನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಈ ಪೂರ್ವದಲ್ಲಿ ಹೇಳಲ್ಪಟ್ಟ ಶಿವಯೋಗಿಯು ವ್ಯಷ್ಟಿ–ಅಭಿಮಾನ ಶೂನ್ಯನಾಗಿ ಶಿವನಂತೆ ಸಮಷ್ಟಿ ಅಭಿಮಾನವನ್ನು ತಾಳಿರೋಣದರಿಂದ ಇಡೀ ಜಗತ್ತೇ ಆತನ ಶರೀರವಾಗಿರೋಣದರಿಂದ ಅವನಿಗಿರುವ ಈ ದೇಹದಿಂದ ಯಾವ ಬಾಧೆಯೂ ಉಂಟಾಗುವುದಿಲ್ಲ.

ಈ ಶಿವಯೋಗಿಯು ಶಿವನಂತೆ ಸರ್ವತಂತ್ರ ಸ್ವತಂತ್ರನಲ್ಲದಿರೋಣದರಿಂದ ಇವನಿಗೆ ಅದು ಹೇಗೆ ತಾನೆ ದುಃಖಾದಿಗಳು ಉಂಟಾಗುವುದಿಲ್ಲ? ಎಂಬ ಶಂಕೆಯುಂಟಾದಾಗ ಪೂಜ್ಯಪಾದರು ಪುನಃ–

ಶಿವಜ್ಞಾನೈಕನಿಷ್ಠಸ್ಯನಾಹಂಕಾರ ಭವಭ್ರಮಃ।
ನ ಚೇಂದ್ರಿಯ ಭವಂ ದುಃಖಂತ್ಯಕ್ತ ದೇಹಾಭಿಮಾನಿನಃ ॥

(ಸಿ.ಶಿ. ೧೬–೪೭)

ಹೀಗೆ ಉಪದೇಶಿಸಿದ್ದಾರೆ. ಶಿವೋಽಹಂ ಭಾವನೆಯಲ್ಲಿ ಅತ್ಯಂತ ನಿಷ್ಠೆಯುಳ್ಳ ಶರೀರಾದಿಗಳ ಪರಿಚ್ಛಿನ್ನ ಅಹಂಕಾರದಿಂದ ದೂರನಾದ, ದೇಹಾಭಿಮಾನವನ್ನು ತ್ಯಜಿಸಿದ ಶಿವಯೋಗಿಗೆ ಇಂದ್ರಿಯಜನ್ಯವಾದ ಯಾವ ದುಃಖವೂ ಉಂಟಾಗಲಾರದೆಂಬುದು ಪೂಜ್ಯರ ಆಶಯವಾಗಿದೆ.

ಜೀವಾತ್ಮನು ಅಹಂಕಾರ ಭಾವನೆಯಿಂದ ಕೂಡಿಕೊಂಡು ಇಂದ್ರಿಯಗಳೊಂದಿಗೆ ಯಾವಾಗ ವ್ಯವಹರಿಸುತ್ತಾನೆಯೋ ಆಗಲೇನೇ ದುಃಖದ ಭೋಗವು ಉಂಟಾಗುತ್ತದೆ. ಪ್ರತಿಯೊಂದು ವ್ಯವಹಾರದಲ್ಲಿ ನಾನೇ ಮಾಡಿದ್ದೇನೆ, ನಾನೇ ಮಾಡಿದ್ದೇನೆ ಎಂಬ

ಭಾವನೆಯು ಉಂಟಾಗುವುದು ಸಹಜ. ಈ ಭಾವನೆಗೇನೇ ಅಹಂಕಾರವೆಂದು ಕರೆಯುತ್ತಾರೆ. ಜೀವಾತ್ಮನು ಏನೇ ಮಾಡಿದರೂ ಅವನಿಗೆ ಪರಮಾತ್ಮನು ಪ್ರೇರಕ ಶಕ್ತಿಯಾಗಿರುತ್ತಾನೆ. ಅಂತೆಯೇ ''ತೇನ ವಿನಾ ತೃಣಮಪಿ ನ ಚಲತಿ'' ಎಂಬುದಾಗಿ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಹೀಗಿದ್ದರೂ ಮೂಢರಾದ ಜೀವಿಗಳು ತಮ್ಮ ಹಿಂದಿರುವ ಪ್ರೇರಕ ಶಕ್ತಿಯನ್ನು ಮರೆತು ತಾವೇ ಮಾಡಿದ್ದೇವೆಯೆಂಬ ದುರಭಿಮಾನ ವನ್ನು ತಾಳುತ್ತಾರೆ. ಈ ದುರಭಿಮಾನವೇ ಅವರ ದುಃಖಕ್ಕೆ ಕಾರಣವಾಗಿರುತ್ತದೆ. ಎಲ್ಲವೂ ಈಶ್ವರನ ಪ್ರೇರಣೆಯಿಂದ ನಡೆಯುತ್ತಿರುವಾಗ ಇದು ನನ್ನಿಂದಲೇ ಆಯಿತು ಎಂಬುದಾಗಿ ಅಭಿಮಾನಿಸುವುದು ಹಾಸ್ಯಾಸ್ಪದವಾಗುವುದು. ಓರ್ವ ವ್ಯಕ್ತಿಯು ಕುದುರೆಯ ಮೇಲೆ ಕುಳಿತುಕೊಂಡು ಪ್ರಯಾಣ ಮಾಡುತ್ತಿದ್ದನು. ಸ್ವಲ್ಪ ದೂರ ಹೋದ ಮೇಲೆ ಕುದುರೆಯ ಮೇಲಿಟ್ಟಿರುವ ಒಂದು ಭಾರವಾದ ಗಂಟನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡನಂತೆ. ದಾರಿಯಲ್ಲಿ ಹೋಗುವವರು ಇದೇನು ಕುದುರೆಯ ಮೇಲೆ ಕುಳಿತ ನೀನು ಈ ಗಂಟನ್ನು ಅದರ ಮೇಲೆಯೇ ಇಡದೆ ನಿನ್ನ ತಲೆಯ ಮೇಲೆ ಏಕೆ ಹೊತ್ತುಕೊಂಡಿರುವೆ ಎಂಬುದಾಗಿ ಪ್ರಶ್ನಿಸಲು ಆ ಕುದುರೆಸವಾರನು ಕುದುರೆಯ ಮೇಲೆ ಹೆಚ್ಚು ಭಾರವಾಗಬಾರದೆಂಬ ಉದ್ದೇಶದಿಂದ ಅದಕ್ಕೆ ಸಹಾಯಮಾಡುವುದಕ್ಕಾಗಿ ಈ ಗಂಟನ್ನು ನಾನು ಹೊತ್ತು ಕೊಂಡಿದ್ದೇನೆಂದು ಉತ್ತರಿಸಿದನಂತೆ. ಅವನ ಆ ಉತ್ತರವನ್ನು ಕೇಳಿ ಎಲ್ಲರೂ ನಗಲಾರಂಭಿಸಿದರು. ಗಂಟನ್ನು ತಲೆಯ ಮೇಲೆ ಹೊತ್ತರೆ ಕುದುರೆಗೆ ಭಾರದಲ್ಲೇನೂ ಕಡಿಮೆಯಾಗಲಿಲ್ಲ, ಆದರೆ ಸವಾರನು ಅದನ್ನು ತನ್ನ ತಲೆಯ ಮೇಲೆ ಹೊತ್ತು ತನಗೆ ಭಾರಮಾಡಿಕೊಂಡನಷ್ಟೇ.

ಸಂಸಾರದಲ್ಲಿಯ ಜೀವಿಗಳು ಇದೇ ತೆರನಾಗಿ ವ್ಯರ್ಥ ಅಭಿಮಾನವನ್ನು ತಾಳಿಕೊಂಡು ದುಃಖಕ್ಕೀಡಾಗುತ್ತಿರುತ್ತಾರೆ. ಆದ್ದರಿಂದ ಜ್ಞಾನಿಗಳಾದವರು ಶಿವನಲ್ಲಿಯೇ ನಿಷ್ಠೆಯುಳ್ಳವರಾಗಿ ಈ ಅಹಂಕಾರ ಮಮಕಾರಗಳನ್ನು ತ್ಯಜಿಸಿರೋಣದರಿಂದ ಇವರಿಗೆ ಯಾವುದೇ ಪ್ರಕಾರದ ದುಃಖಗಳು ಉಂಟಾಗುವುದಿಲ್ಲ.

ಇನ್ನು ಕೊನೆಯದಾಗಿ ಪೂಜ್ಯ ಪಾದರು ಈ ಶಿವಯೋಗಿಗೆ ದೇಹಸಂಬಂಧ ವಿರುವದಿಲ್ಲವೆಂಬುದನ್ನು ಪ್ರತಿಪಾದಿಸಿ ಈ ಸ್ಥಲವನ್ನು ಪರಿಸಮಾಪ್ತಗೊಳಿಸಲೋಸುಗ.

ನ ಮನುಷ್ಯೋ ನ ದೇವೋಽಹಂ ನ ಯಕ್ಷೋನೈವರಾಕ್ಷಸಃ ।
ಶಿವೋಽಹಮಿತಿಯೋಬುದ್ಧ್ಯಾತ್ತಸ್ಯ ಕಿಂ ದೇಹಕರ್ಮಣಾ ॥

(ಸಿ.ಶಿ. ೧೬-೫೭)

ಈ ತೆರನಾಗಿ ಉಪದೇಶಿಸಿದ್ದಾರೆ. ಆ ಆತ್ಮನು ಮನುಷ್ಯನಲ್ಲ, ದೇವನಲ್ಲ, ಮತ್ತು ಯಕ್ಷ-ರಾಕ್ಷಸನೂ ಅಲ್ಲ. ಇವೆಲ್ಲ ಆತ್ಮನಿಗೆ ಪ್ರಾಪ್ತವಾದ ಶರೀರಗಳು, ಯಾವ ಶಿವಯೋ ಗಿಯು ಶಿವೋಽಹಂ ಭಾವನೆಯಲ್ಲಿ ನಿಷ್ಠನಾಗಿರುತ್ತಾನೆಯೋ ಅವನು ತನಗಿರುವ ದೇಹದ ಬಗ್ಗೆ ಅಭಿಮಾನವನ್ನು ತಾಳುವುದಿಲ್ಲ. ಅಂತೆಯೇ ಅವನು ನಾನು ಮನುಷ್ಯನು, ನಾನು ದೇವನು ನಾನು ಯಕ್ಷನು, ನಾನು ರಾಕ್ಷಸನು ಎಂಬುದಾಗಿ ಎಂದೂ ವ್ಯವಹರಿಸುವದಿಲ್ಲ. ಈತನ ಮನಸ್ಸಿನಲ್ಲಿ ಸದಾ ಶಿವೋಽಹಂ ಎಂದರೆ ನಾನು ಪರಶಿವ ಸ್ವರೂಪನೇ

ಆಗಿದ್ದೇನೆ ಎಂಬ ಭಾವನೆಯೊಂದೇ ಇರುತ್ತದೆ. ಆದ್ದರಿಂದ ಶರೀರವಿದ್ದರೂ ಶರೀರದ ಅಭಿಮಾನವಿಲ್ಲದಿರೋಣದರಿಂದ ಶರೀರದ ಯಾವುದೇ ಕ್ರಿಯೆಗಳ ವ್ಯವಹಾರದ ಪರಿಣಾಮವು ಇವನ ಮೇಲೆ ಉಂಟಾಗುವುದಿಲ್ಲ. ಹೀಗೆ ಅಕಾಯಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕಾಯವನ್ನು ಧರಿಸಿದ್ದರೂ ಅಕಾಯನಾಗಿ ಬದುಕುವ ಒಂದು ಕಲೆಯನ್ನು ಕಲಿಸಿಕೊಟ್ಟಿದ್ದಾರೆ. ಈ ಸ್ಥಲದ ರಹಸ್ಯಾರ್ಥವನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಕಾಯವಿದ್ದೂ ಅಕಾಯನಾಗಿ ಬಾಳುವೆ ಮಾಡಬಹುದು. ಇಂತಹ ಈ ಕಲೆಯು ನಿಮಗೆಲ್ಲ ಕರಗತವಾಗಲೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ಆಗಷ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

# ಪರಕಾಯಸ್ಥಲ

ಧರ್ಮಾಸಕ್ತ ಸದ್ಭಕ್ತರೇ !

ಶ್ರೀ ಕಾಶಿ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಅಸಾರವಾದ ಈ ಸಂಸಾರದಲ್ಲಿ ಜ್ಞಾನಿಗಳು ನಾಲ್ಕು ಸಾರಗಳನ್ನು ಕಂಡು ಹಿಡಿದಿದ್ದಾರೆ. ಅವು ಯಾವುವೆಂದರೆ–

ಅಸಾರೇ ಖಲು ಸಂಸಾರೇ ಸಾರಮೇತತ್ ಚತುಷ್ಟಯಮ್ ।
ಕಾಶ್ಯಾಂ ವಾಸ ಃ ಸತಾಂ ಸಂಗಃ ಗಂಗಾಂಭಃ ಶಿವಪೂಜನಮ್ ॥

ಅಂದರೆ ಕಾಶಿಯಲ್ಲಿ ವಾಸಿಸುವುದು, ಸಂತರೊಂದಿಗೆ ಸಹವಾಸ ಮಾಡುವುದು, ಗಂಗಾನದಿಯಲ್ಲಿ ಸ್ನಾನಮಾಡುವುದು ಮತ್ತು ಶಿವನನ್ನು ಪೂಜಿಸುವುದು ಇವೇ ಆ ನಾಲ್ಕು ಸಾರಗಳು. ಅನೇಕ ಜನ್ಮಗಳ ಪುಣ್ಯದ ಫಲವಾಗಿ ಕಾಶಿಯ ವಾಸವು ಪ್ರಾಪ್ತವಾಗುವುದು. ಇಲ್ಲಿ ನಿವಾಸದ ಭಾಗ್ಯ ದೊರೆತಾಗ ಪ್ರತಿದಿನ ಗಂಗಾ ಸ್ನಾನವನ್ನು ಮಾಡುತ್ತ ಶಿವನನ್ನು ಪೂಜಿಸುತ್ತ ಸಂತರ ಸಹವಾಸದಲ್ಲಿ ಕಾಲ ಕಳೆದರೆ ಅವನ ಜೀವನವೇ ಪಾವನವಾಗುವುದು.

ಕಾಶಿಯಲ್ಲಿ ವಾಸಿಸಬೇಕಾದರೆ ಕೆಲವೊಂದು ನಿಯಮಗಳನ್ನು ಅವಶ್ಯವಾಗಿ ಪರಿಪಾಲಿಸಬೇಕು. ಮೊದಲನೆಯದು ಸ್ವತಃ ಸಂಪಾದಿಸಿಯೇ ತನ್ನ ಉಪಜೀವನವನ್ನು ಸಾಗಿಸಬೇಕು. ಎರಡನೆಯದು ಅನಾವಶ್ಯಕವಾಗಿ ಬೇರೆಯವರ ಮೇಲೆ ಕ್ರೋಧವನ್ನು ತಾಳಕೂಡದು ಮತ್ತು ಮೂರನೆಯದು ಯಾರ ನಿಂದೆಯನ್ನೂ ಮಾಡದೇ ಇರುವುದು. ಈ ಮೂರು ನಿಯಮಗಳನ್ನು ಚಾಚೂ ತಪ್ಪದೆ ಪರಿಪಾಲಿಸುತ್ತ ಒಂದು ವರ್ಷಕಾಲ ಕಾಶಿಯಲ್ಲಿ ಕಳೆದರೆ ಆ ವ್ಯಕ್ತಿಗೆ ಕೃತಯುಗದಲ್ಲಿ ಸಾವಿರ ವರ್ಷ ಪರ್ಯಂತರವಾಗಿ ಮಾಡಿದ ತಪಶ್ಚರ್ಯೆಯ ಫಲವು ಪ್ರಾಪ್ತವಾಗುವುದು. ಇಂತಹ ಪುಣ್ಯಪ್ರದವಾದ ಈ ಕಾಶೀ ಮಹಾಕ್ಷೇತ್ರದಲ್ಲಿ ನೀವುಗಳೆಲ್ಲ ಪ್ರತಿದಿನ ಗಂಗಾಸ್ನಾನ, ವಿಶ್ವೇಶ್ವರನ ದರ್ಶನ ಮತ್ತು ಸಾಯಂಕಾಲದ ಧರ್ಮಸಭೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಆಲಿಸುತ್ತಿದ್ದು, ನಿಮ್ಮೆಲ್ಲರ ಜೀವನವು ಸಾರ್ಥಕವಾಗಿವೆ.

ಈ ಸುಸಂದರ್ಭದಲ್ಲಿ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಅಕಾಯಸ್ಥಲದ ಬಗ್ಗೆ ಸಾಕಷ್ಟು ಶ್ರವಣ ಮಾಡಿದ್ದೀರಿ. ಇಂದು ಕ್ರಮ ಪ್ರಾಪ್ತವಾದ ಪರಕಾಯಸ್ಥಲದ ಬಗ್ಗೆ ವಿವೇಚಿಸೋಣ, ''ಪರಃ ಕಾಯಃ ಯಸ್ಯ ಸಃ ಪರಕಾಯಃ'' ಅಂದರೆ ಯಾರ ಕಾಯವು ಪರಬ್ರಹ್ಮಸ್ವರೂಪವಾಗಿದೆಯೋ ಅವನಿಗೆ

ಪರಕಾಯನೆನ್ನುವರು. ಯಾರು ಪರಶಿವ ಬ್ರಹ್ಮವನ್ನು ತನ್ನ ಆತ್ಮರೂಪವನ್ನಾಗಿ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆಯೋ ಅವರ ಕಾಯವೂ ಸಹ ಪರಬ್ರಹ್ಮಸ್ವರೂಪವೇ ಆಗಿರುತ್ತದೆ. ಉಳಿದ ಶಾಸ್ತ್ರಾಚಾರ್ಯರು ಪರಬ್ರಹ್ಮಸ್ವರೂಪವನ್ನು ತಿಳಿದ ವ್ಯಕ್ತಿಯ ಆತ್ಮವು ಪರಶಿವಬ್ರಹ್ಮನೆಂಬುದಾಗಿ ಪ್ರತಿಪಾದಿಸಿದರೆ, ವೀರಶೈವಾಚಾರ್ಯರು ಹಾಗೆ ತಿಳಿದವನ ಆತ್ಮವಷ್ಟೇ ಅಲ್ಲ, ಅವನ ಶರೀರವೂ ಸಹ ಪರಬ್ರಹ್ಮ ಸ್ವರೂಪವಾಗಿರುತ್ತದೆ ಎಂಬುದಾಗಿ ಇಲ್ಲಿ ಪ್ರತಿಪಾದಿಸಿದ್ದಾರೆ. ಅದಕ್ಕೆ ಕಾರಣವೇನೆಂಬುದನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ–

ವಶೀಕೃತತ್ವಾತ್ಪ್ರಕೃತೇ ರ್ಮಾಯಾ ಮಾರ್ಗಾತಿವರ್ತನಾತ್ ।
ಪರಕಾಯೋಽಯ ಮಾಖ್ಯಾತಃ ಸತ್ಯ ಜ್ಞಾನ ಸುಖಾತ್ಮನ ಃ ॥

(ಸಿ.ಶಿ. ೧೬–೪೯)

ಹೀಗೆ ಉಪದೇಶಿಸಿದ್ದಾರೆ. ಪರಕಾಯಸ್ಥಿತಿಯನ್ನು ಪಡೆದ ಶಿವಯೋಗಿಯು ಪ್ರಕೃತಿಯನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುತ್ತಾನೆ. ಅಜ್ಞ ಜೀವಿಗಳು ಪ್ರಕೃತಿಯ ಅಧೀನವಾಗಿ ವ್ಯವಹರಿಸುತ್ತಿದ್ದರೆ, ಈತನು ಪ್ರಕೃತಿಯನ್ನೇ ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುತ್ತಾನೆ. ಸತ್ವ, ರಜ ಹಾಗೂ ತಮೋಗುಣಗಳ ಸಾಮ್ಯಾವಸ್ಥೆಗೆ ಪ್ರಕೃತಿಯೆಂದು ಕರೆದಿದ್ದಾರೆ. ಇದು ಯಾವಾಗ ವಿಷಮ ರೂಪವನ್ನು ತಾಳುತ್ತಿದೆಯೋ ಆಗ ಸೃಷ್ಟಿಕಾರ್ಯವು ಪ್ರಾರಂಭ ವಾಗುತ್ತದೆ. ಇದು ಪ್ರಕೃತಿಯ ಸಮಷ್ಟಿ ಸ್ವರೂಪವು. ಇನ್ನು ಪ್ರತಿಯೊಬ್ಬ ವ್ಯಕ್ತಿಯಲ್ಲಿರುವ, ಮನ–ಬುದ್ಧಿಗಳು ಅವನ ವ್ಯಷ್ಟಿ ಪ್ರಕೃತಿಗಳೆಂದು ತಿಳಿದುಕೊಳ್ಳಬೇಕು. ಪರಕಾಯ ಸ್ಥಿತಿಯನ್ನು ಪಡೆದ ಶಿವಯೋಗಿಯು ಮೂಲ ಪ್ರಕೃತಿಯನ್ನು ತನ್ನ ಸ್ವಾಧೀನದಲ್ಲಿ ಇಟ್ಟು ಕೊಂಡಿರುತ್ತಾನೆಂದ ಬಳಿಕ ಅವನ ವ್ಯಷ್ಟಿ ಪ್ರಕೃತಿಗಳಾದ ಮನೋಬುದ್ಧಿಗಳು ಅವನ ಸ್ವಾಧೀನತೆಯಲ್ಲಿರುತ್ತವೆ ಎಂಬುದಾಗಿ ಬೇರೆ ಹೇಳಬೇಕಾಗಿಲ್ಲ.

ಈತನು ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಂಡಿರುವದಷ್ಟೇ ಅಲ್ಲ, ಮಾಯೆ ಯನ್ನೂ ಸಹ ಮೀರಿದವನಾಗಿರುತ್ತಾನೆ. ಅಂದರೆ ಮಾಯೆಯ ಆಚೆಗಿರುವ ಪರಶಿವಬ್ರಹ್ಮ ನನ್ನು ಅರಿತವನಾಗಿರುತ್ತಾನೆ. ಅಂತೆಯೇ ಈತನು ಸತ್ಯ ಸ್ವರೂಪನೂ, ಜ್ಞಾನ ಸ್ವರೂಪನೂ ಮತ್ತು ಆನಂದ ಸ್ವರೂಪನೂ ಆಗಿರುತ್ತಾನೆ. ಅಂತಲೇ ಈತನಿಗೆ ಪರಕಾಯನೆಂದು ಕರೆದಿ ದ್ದಾರೆ.

ಶರೀರವು ಸ್ವಭಾವತಃ ಅಪವಿತ್ರವೆಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ ಆದರೂ ಯಾವ ಶರೀರವು ನಿರಂತರವಾಗಿ ಆತ್ಮಸಂಬಂಧಿಯಾಗಿರುತ್ತದೆಯೋ ಅರ್ಥಾತ್ ಆ ಶರೀರದಲ್ಲಿ ವಾಸಿಸುವ ಯೋಗಿಯು ಸದಾ ಪರಮಾತ್ಮ ಚಿಂತನೆಯಲ್ಲಿ ತಲ್ಲೀನನಾಗಿರುವನೋ ಅವನ ಶರೀರವೂ ಸಹ ಆತ್ಮದಂತೆ ಪವಿತ್ರವಾಗಿರುತ್ತದೆ. ಅಂತೆಯೇ ನಮ್ಮ ದೇಶದಲ್ಲಿ ಆತ್ಮ ಜ್ಞಾನಿಗಳಾದ ಗುರುಗಳ ಹಾಗೂ ಸಂತರ ಶರೀರವನ್ನು ಸಹ ಪೂಜಿಸುವ ಪರಂಪರೆಯು ರೂಢಿಯಲ್ಲಿ ಬಂದಿದೆ. ಇಂಥವರ ಶರೀರಗಳು ಅಪವಿತ್ರ ವಾದವುಗಳನ್ನು ಪವಿತ್ರಗಳನ್ನಾಗಿ ಮಾಡಬಲ್ಲವು. ಧೂಳಿಯು ಸ್ವಭಾವತಃ ಅಶುದ್ಧ ಹಾಗೂ

ಅಪವಿತ್ರವಾಗಿದ್ದರೂ ಅದುವೇ ಆತ್ಮಜ್ಞಾನಿಯ ಪಾದ ಸೋಂಕಲು ಪಾದ ಧೂಳಿಯೆಂಬ ಹೆಸರಿನಿಂದ ಪವಿತ್ರವಸ್ತುವಾಗಿ ಪರಿವರ್ತಿಸಲ್ಪಡುತ್ತದೆ.

ಈ ಗುರುಪಾದ ಧೂಳಿಯು ಶಿಷ್ಯನ ಮನಸ್ಸಿನಲ್ಲಿಯ ರಜೋಗುಣವನ್ನು ಇಲ್ಲದಾಗಿಸಿ ಆತನನ್ನು ಸಾತ್ವಿಕನನ್ನಾಗಿ ಮಾಡುತ್ತದೆ. ಅಂತೆಯೇ ಹೊರಗಿನಿಂದ ಬಂದ ಧೂಳಮಿಶ್ರಿತವಾದ ಗುರುಪಾದವನ್ನು ತೊಳೆದು ಮನೆಗೆಲ್ಲ ಪ್ರೋಕ್ಷಿಸುವ ಒಂದು ಪ್ರಾಚೀನ ಪರಂಪರೆಯು ಇಂದಿಗೂ ರೂಢಿಯಲ್ಲಿದೆ. ಗುರುವಿನ ಪಾದಧೂಳಿಯ ಬಗ್ಗೆ ಪೂಜ್ಯಪಾದರು–

ಪಾದಾಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।
ತದೇವ ಸದನಂ ಪುಣ್ಯಂ ಪಾವನಂ ಗೃಹಮೇಧಿನಾಮ್ ॥

(ಸಿ.ಶಿ. ೧೧–೪೨)

ಹೀಗೆ ವಿವರಿಸಿದ್ದಾರೆ. ಯಾವ ಗೃಹಸ್ಥನ ಮನೆಗೆ ಗುರುಗಳ ಪಾದ ಧೂಳಿಯು ಸೋಂಕುವುದೋ ಆ ಮನೆಯು ಪಾವನವೆಂಬುದು ಪೂಜ್ಯರ ಆಶಯವಾಗಿದೆ. ಅಂತೆ ಆತ್ಮಜ್ಞಾನಿಯ ಶರೀರವೂ ಸಹ ಪರಬ್ರಹ್ಮರೂಪವೆಂಬುದಾಗಿ ಈ ಪರಕಾಯಸ್ಥಲದಲ್ಲಿ ಪ್ರತಿಪಾದಿಸಲಾಗಿದೆ.

ಪೂರ್ವೋಕ್ತನಾದ ಶಿವಯೋಗಿಗೆ ಪರಕಾಯ ಸ್ವರೂಪವನ್ನು ಹೇಳಿದರೂ ಸಹ ಆತ ನಿಗೆ ಸ್ಥೂಲ ಶರೀರವು ಇರೋಣದರಿಂದ ಅದು ಹೇಗೆ ತಾನೆ ಪರಕಾಯತ್ವವು ಸಂಭವಿಸು ವದು ? ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರು ಅದಕ್ಕೆ ಸಮಾಧಾನ ರೂಪವಾಗಿ ಪುನಃ–

ಪರಬ್ರಹ್ಮವಪುರ್ಯಸ್ಯಪ್ರಬೋಧಾನಂದ ಭಾಸುರಮ್ ।
ಪ್ರಾಕೃತೇನ ಶರೀರೇಣ ಕಿಮೇತೇನಾಸ್ಯ ಜಾಯತೇ ॥

(ಸಿ.ಶಿ. ೧೬–೫೦)

ಹೀಗೆ ನಿರೂಪಿಸಿದ್ದಾರೆ. ಸಚ್ಚಿದಾನಂದ ಸ್ವರೂಪವಾದ ಪರಶಿವ ಬ್ರಹ್ಮವೇ ಯಾರಿಗೆ ಶರೀ ರವಾಗಿದೆಯೋ ಅಂತಹ ಪರಕಾಯನಾದ ಶಿವಯೋಗಿಗೆ ಈ ಪ್ರಾಕೃತ ವಾದ ಸ್ಥೂಲ ಶರೀರದಿಂದ ಅದಾವ ಹಾನಿಯೂ ಉಂಟಾಗುವುದಿಲ್ಲ ಎಂಬುದು ಪೂಜ್ಯರ ಆಶಯವಾಗಿದೆ. ಪರಶಿವ ಬ್ರಹ್ಮವೇ ತಾನೆಂದು ತಿಳಿದು ಶಿವಯೋಗಿಯ ಪ್ರಾಕೃತ ಶರೀರದಿಂದ ಅವನಿಗೆ ಯಾವ ಹಾನಿಯೂ ಇರುವುದಿಲ್ಲ. ಅಷ್ಟೇ ಅಲ್ಲ ಆ ಶರೀರದ ಸ್ಪರ್ಶದಿಂದ ಲೋಕದಲ್ಲಿ ಅಘಟಿತವಾದ ಘಟನೆಗಳೂ ಸಹ ಸಂಭವಿಸುವುದನ್ನು ನೋಡುತ್ತೇವೆ. ಆತ್ಮಜ್ಞಾನಿಯಾದ ಜ್ಞಾನೇಶ್ವರನು ಇಲ್ಲಿ ಉಪದೇಶಿಸಲಾದ ಪರಕಾಯ ಸ್ಥಿತಿಯನ್ನು ಪಡೆದವನಾಗಿದ್ದನು. ಅಂತೆಯೇ ತನ್ನ ವರದ ಹಸ್ತವನ್ನು ಒಂದು ಕೋಣದ ತಲೆಯ ಮೇಲಿಟ್ಟಾಗ ಆ ಕೋಣವು ವೇದ ಮಂತ್ರವನ್ನು ಉಚ್ಚರಿಸಿತೆಂಬ ಕಥೆಯು ಸರ್ವಶ್ರುತವಾಗಿದೆ. ಆದ್ದರಿಂದ ಆತ್ಮಜ್ಞಾನಿಗಳ ಹಸ್ತ ಪಾದ ಮತ್ತು ನೇತ್ರಾದಿಗಳಲ್ಲಿ ಅಪಾರವಾದ ಸಾಮರ್ಥ್ಯವಿರುತ್ತದೆ. ಅವುಗಳ ಸ್ಪರ್ಶವಾದೊಡನೆ ಇಂತಹ ಅಘಟಿತ

ಘಟನೆಗಳು ಆಗಾಗ ಘಟಿಸುತ್ತಿರುತ್ತವೆ. ಪೂಜ್ಯಪಾದರು ಈ ಪರಕಾಯ ಸ್ಥಲದ ಶಿವಯೋಗಿಯ ಬಗ್ಗೇನೇ ಪುನಃ ವಿವರಿಸುತ್ತ–

ಸಮ್ಯಗ್ ಜ್ಞಾನಾಗ್ನಿ ಸಂದಗ್ಧಜನ್ಮಬೀಜಕಳೇ ವರಃ।
ಶಿವತತ್ವಾವಲಂಬೀಯಃ ಪರಕಾಯಃ ಸಃ ಉಚ್ಯತೇ ॥

(ಸಿ. ಶಿ. ೧೬–೫೧)

ಹೀಗೆ ಉಪದೇಶಿಸಿದ್ದಾರೆ. ತನಗುಂಟಾದ ಶಿವಾದ್ವೈತವೆಂಬ ಅಗ್ನಿಯಿಂದ ಜನ್ಮಬೀಜ ವನ್ನು ಹುರಿದು ಹಾಕಿದ ಶಿವತತ್ವವನ್ನು ಅವಲಂಬಿಸಿರುವವನು ಯಾವನೋ ಅವನೇ ಪರಕಾಯನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ ಎಂಬುದು ಪೂಜ್ಯಪಾದರ ಅಭಿಪ್ರಾಯ ವಾಗಿದೆ. ರಾಗದ್ವೇಷಗಳು ಜನ್ಮದ ಬೀಜಗಳು. ಜೀವಾತ್ಮನು ಈ ಪ್ರಪಂಚದಲ್ಲಿ ಪುನಃ ಪುನಃ ಜನ್ಮ ತಾಳಲು ಕಾರಣಗಳಾದ ಬೀಜಗಳೆಂದರೆ ರಾಗ ದ್ವೇಷಗಳೇ. ಅಂತೆಯೇ ನಿಜಗುಣ ಶಿವಯೋಗಿಗಳು–''ರಾಗದಿಂ ಬೇರಿನ್ನು ಭವಬೀಜವುಂಟೇ ?'' ಎಂಬುದಾಗಿ ಪ್ರಶ್ನಿಸಿ ರಾಗವೇ ಈ ಜನ್ಮಮರಣಾತ್ಮಕವಾದ ಈ ಭವಕ್ಕೆ ಬೀಜವೆಂಬುದಾಗಿ ಖಚಿತ ಪಡಿಸಿದ್ದಾರೆ. ರಾಗವೊಂದಿದ್ದರೆ ದ್ವೇಷವು ತಾನಾಗಿಯೇ ಬರುತ್ತದೆ. ಅವೆರಡು ದ್ವಂದ್ವಗಳು. ಅಂದರೆ ಅವು ಒಂದನ್ನೊಂದು ಬಿಟ್ಟು ಇರುವುದಿಲ್ಲ. ಈ ಸಂಸಾರದಲ್ಲಿಯ ಯಾವುದೇ ವಸ್ತು ಇಲ್ಲವೆ ವ್ಯಕ್ತಿಯ ಮೇಲಿರುವ ರಾಗದ ಮೂಲಕ ವಾಗಿಯೇ ಜೀವಾತ್ಮನು ಈ ಜಗತ್ತಿನಲ್ಲಿ ಜನ್ಮ ತಾಳಿ ಬರುತ್ತಾನೆ. ಎಲ್ಲಿಯವರೆಗೆ ಮನಸ್ಸಿನಲ್ಲಿ ರಾಗವಿದೆಯೋ ಅಲ್ಲಿಯವರೆಗೆ ಈ ಜನ್ಮ ಮರಣಗಳು ತಪ್ಪಲಾರವು, ಅಂತೆಯೇ ರಾಗಕ್ಕೆ ಭವದಬೀಜ ವೆಂದು ಕರೆದಿದ್ದಾರೆ. ಆತ್ಮ ಜ್ಞಾನಿಗಳು ತಮಗುಂಟಾದ ಆ ಜ್ಞಾನಾಗ್ನಿಯಿಂದ ಈ ರಾಗವೆಂಬ ಬೀಜವನ್ನು ಹುರಿದುಹಾಕುತ್ತಾರೆ. ಒಮ್ಮೆ ಬೀಜವು ಅಗ್ನಿಯಲ್ಲಿ ದಗ್ಧವಾಯಿ ತೆಂದರೆ ಅದು ಪುನಃ ಅಂಕುರಿಸದು. ಅದರಂತೆ ಜ್ಞಾನಾಗ್ನಿಯಿಂದ ಯಾರ ರಾಗವೆಂಬ ಬೀಜವು ಹುರಿದುಹೋಗಿರುವುದೋ ಅವರಿಗೆ ಪುನರ್ಜನ್ಮ ಬರುವುದಿಲ್ಲ. ಹೀಗೆ ಜನ್ಮ ಬೀಜವನ್ನು ದಗ್ಧಮಾಡಿಕೊಂಡ ಶಿವತತ್ತ್ವವನ್ನು ಅವಲಂಬಿಸಿರುವ ಶಿವಯೋಗಿಯೇ ಇಲ್ಲಿ ಪರಕಾಯನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ.

ಮನುಷ್ಯನ ಮನಸ್ಸಿಗೆ ಏನಾದರೊಂದು ಆಲಂಬನವು ಸದಾ ಬೇಕೇ ಬೇಕು. ಸಾಮಾನ್ಯವಾಗಿ ಎಲ್ಲರ ಮನಸ್ಸು ರಾಗದಿಂದ ಕೂಡಿಕೊಂಡಿದ್ದು, ಶಬ್ದ–ಸ್ಪರ್ಶಾದಿ ವಿಷಯಗಳನ್ನು ಅವಲಂಬಿಸಿ ಅದರಲ್ಲಿಯೇ ಕ್ರೀಡಿಸುತ್ತಿರುತ್ತದೆ. ಹೀಗೆ ವಿಷಯಾಲಂಬನೆ ಯನ್ನು ಮಾಡಿರುವ ಆ ಮನಸ್ಸಿನಿಂದ ವಿಷಯಗಳನ್ನು ಬಿಡಿಸಬೇಕಾದರೆ ಅದಕ್ಕೆ ಶಿವತತ್ತ್ವದ ಆಲಂಬನೆಯನ್ನು ಕೊಡಬೇಕು. ಮಣ್ಣನ್ನು ತಿನ್ನುತ್ತಿರುವ ಮಗುವಿನ ಕೈಗೆ ಬೇರೊಂದು ಪದಾರ್ಥವನ್ನು ಕೊಡದೆ ಆ ಮಣ್ಣನ್ನು ಕಸಿದೊಗೆದರೆ ಮಗು ಅಳುವದಲ್ಲದೆ ಆನಂದಿಸದು. ಅದರಂತೆ ವಿಷಯಾಸಕ್ತವಾದ ಜೀವಿಯ ಕೈಯಿಂದ ವಿಷಯವನ್ನು ಬಿಡಿಸುವ ಪೂರ್ವದಲ್ಲಿ ಅದಕ್ಕೆ ಶಿವತತ್ತ್ವವನ್ನು ಸಂಬಂಧಗೊಳಿಸಿದಾಗ ಈ ಕ್ಷುದ್ರವಾದ ವಿಷಯಾದಿಗಳು ತನ್ನಿಂದ ತಾನೇ ಬಿಟ್ಟು ಹೋಗುತ್ತವೆ. ಹೀಗೆ ಸಮ್ಯಗ್ ಜ್ಞಾನಸಂಪನ್ನನೂ ರಾಗ–ದ್ವೇಷಾದಿ ರಹಿತನೂ ಮತ್ತು ಶಿವತತ್ತ್ವಾವಲಂಬಿಯೂ ಆದ ಶಿವಯೋಗಿಯೇ

ಪರಕಾಯನೆನಿಸಿಕೊಳ್ಳುವನು. ಇಂತಹ ಜ್ಞಾನಿಯ ದರ್ಶನ ಹಾಗೂ ಸ್ಪರ್ಶನದಿಂದ ಸಾಮಾನ್ಯ ಜನರೂ ಸಹ ಉದ್ಧಾರವಾಗುವರು. ಕಾರಣ ಇಂತಹ ಪರಕಾಯ ಶಿವಯೋಗಿಯ ಕೃಪೆಯು ನಿಮ್ಮೆಲ್ಲರಿಗೆ ಉಂಟಾಗಲೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಆಗಸ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಪರಕಾಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಭಾರತೀಯ ಸಾಹಿತ್ಯದಲ್ಲಿ ಮಹರ್ಷಿವ್ಯಾಸನನ್ನೇ ಮೊದಲು ಮಾಡಿಕೊಂಡು ಅನೇಕ ಜನ ಕವಿಗಳು ಕಾಶಿಯನ್ನು ಕುರಿತು ಹೃದಯಂಗಮವಾಗಿ ವರ್ಣಿಸಿದ್ದಾರೆ. ಬೃಹಜ್ಜಾಬಾಲೋಪ ನಿಷತ್ತಿನಲ್ಲಿ- 'ನವಖಂಡ ಪೃಥ್ವಿಯೊಳಗೆ ಕಾಶಿಯು ಸರ್ವಶ್ರೇಷ್ಠ ಕ್ಷೇತ್ರವೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಈ ಕಾಶೀ ನಗರವು ಶಿವನ ತ್ರಿಶೂಲದ ಮೇಲೆ ಪ್ರತಿಷ್ಠಾಪಿ ಸಲ್ಪಟ್ಟಿದೆ. ಶೂಲವೆಂದರೆ ದುಃಖ-ತಾಪವೆಂದರ್ಥ. ಆಧ್ಯಾತ್ಮಿಕ-ಆಧಿಭೌತಿಕ ಮತ್ತು ಆಧಿದೈವಿಕ ಎಂಬ ಈ ತ್ರಿತಾಪಗಳೇ ಶಿವನ ಹಸ್ತದಲ್ಲಿರುವ ತ್ರಿಶೂಲದ ಸಂಕೇತ ಗಳಾಗಿವೆ. ತ್ರಿಶೂಲವು ಶಿವನ ಹಸ್ತದಲ್ಲಿರೋಣದರಿಂದ ಅದು ಇವನ ಅಧೀನವಾದದ್ದು. ಅಂತೆಯೇ ತ್ರಿತಾಪಗಳು ಇವನ ಅಧೀನಗಳೇ ವಿನಃ ಇವನು ತ್ರಿತಾಪಗಳ ಅಧೀನನಲ್ಲ. ಈ ಕಾಶೀನಗರವು ತ್ರಿಶೂಲದ ಮೇಲೆ ಪ್ರತಿಷ್ಠಾಪಿಸಲ್ಪಟ್ಟಿರೋಣದರಿಂದ ಇಲ್ಲಿ ವಾಸಿಸುವ ವರಿಗೆ ಈ ತ್ರಿತಾಪಗಳು ಕ್ಲೇಶವನ್ನುಂಟು ಮಾಡಲಾರವು.

ಇಂತಹ ಈ ಕಾಶೀನಗರದ ಬಗ್ಗೆ ಓರ್ವ ಕವಿಯು-

ಮರಣಂ ಮಂಗಲಂ ಯತ್ರ ವಿಭೂತಿಶ್ಚ ವಿಭೂಷಣಮ್ ।
ಕೌಪೀನಂ ಯತ್ರ ಕೌಶೇಯಂ ಸಾ ಕಾಶೀ ಕಿಂ ನ ಸೇವ್ಯಃ ತೇ ॥

ಹೀಗೆ ವರ್ಣಿಸಿದ್ದಾನೆ. ತಾತ್ಪರ್ಯವೇನೆಂದರೆ- ಬೇರೆ ಊರುಗಳಲ್ಲಿ ಮರಣವಾರ್ತೆಯು ಅಮಂಗಲವೆಂಬುದಾಗಿ ಪರಿಗಣಿಸಲ್ಪಟ್ಟರೂ ಕಾಶಿಯಲ್ಲಿಯ ಮರಣವು ಮಂಗಲ ವೆಂದು ಕರೆಯಲಾಗಿದೆ. ಇಲ್ಲಿಯ ಮರಣದಿಂದ ಮೃತನಿಗೆ ಮುಕ್ತಿಯೇ ದೊರೆಯುವ ಕಾರಣದಿಂದಾಗಿ ಇಲ್ಲಿಯ ಮರಣಕ್ಕೆ ಮಂಗಲವೆಂಬುದಾಗಿ ಕರೆಯಲಾಗಿದೆ. ಶಿವನಿಗೆ ಅತ್ಯಂತ ಪ್ರಿಯವಾಗಿರುವಂಥ ವಿಭೂತಿಯನ್ನು ಮೈಗೆಲ್ಲ ಸವರಿಕೊಂಡು ಹಣೆಯ ಮೇಲೆ ತ್ರಿಪುಂಡ್ರವನ್ನು ಧರಿಸಿದರೆ ಅದಕ್ಕಿಂತ ಶ್ರೇಷ್ಠವಾದ ಆಭೂಷಣವೇ ಬೇರೊಂದಿರು ವುದಿಲ್ಲ. ಬೆಳ್ಳಿ-ಬಂಗಾರದ ಆಭರಣಗಳಿಗಿಂತಲೂ ಭಸಿತ ರೂಪವಾದ ಆಭರಣಕ್ಕೆ ಈ ಕ್ಷೇತ್ರದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿದೆ. ಯಾವುದೇ ಒಡವೆಗಳಿರದಿದ್ದರೂ ಹಣೆಯ ಮೇಲೆ ಧಾರಾಳವಾಗಿ ಭಸ್ಮಲೇಪವೊಂದಿದ್ದರೆ ಕಾಶಿಯ ಪ್ರಜೆಯು ಅವನಿಗೆ ಅತಿಯಾದ ಮನ್ನಣೆ ಯನ್ನು ಕೊಡುತ್ತಾನೆ. ಇನ್ನು ರೇಶಿಮೆಯ ವಸ್ತ್ರವನ್ನು ಧರಿಸುವ ಸಾಮರ್ಥ್ಯವಿರದಿದ್ದರೂ

ಕೇವಲ ಕೌಪೀನವೊಂದನ್ನು ಧರಿಸಿಕೊಂಡಿದ್ದರೆ ಅವನಿಗೆ ಕೌಶೀಯ ವಸ್ತ್ರವನ್ನು ಧರಿಸಿದಷ್ಟು ಮನ್ನಣೆಯು ಕಾಶೀ ಶಹರದಲ್ಲಿ ದೊರೆಯುವುದು. ಇಂತಹ ಈ ದಿವ್ಯ ಕ್ಷೇತ್ರದಲ್ಲಿ ಯಾರು ತಾನೇ ಇರಲು ಬಯಸುವುದಿಲ್ಲ?

ಇಂತಹ ಪರಮ ಮಂಗಲವಾದ ಕಾಶೀ ಕ್ಷೇತ್ರದಲ್ಲಿ ನಿವಾಸ ಮಾಡಿದ ನೀವೆಲ್ಲ ದಿನಾಲೂ ನಡೆಯುವ ಧರ್ಮ ಸಭೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್ ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದಲ್ಲಿಯ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನ ಗಳನ್ನು ಆಲಿಸುತ್ತಾ ಬಂದಿದ್ದೀರಿ. ನಿನ್ನೆಯ ದಿನ ಪರಕಾಯಸ್ಥಲದ ಬಗ್ಗೆ ಕೆಲವು ವಿಷಯ ಗಳನ್ನು ತಿಳಿದವರಾಗಿದ್ದೀರಿ. ಇಂದು ಅದೇ ಸ್ಥಲದ ಅವಶಿಷ್ಟ ಭಾಗವನ್ನು ಕುರಿತು ವಿವೇಚಿಸಲಾಗುವುದು.

ಪರ ಅಂದರೆ ಶ್ರೇಷ್ಠ, ಕಾಯವೆಂದರೆ ಶರೀರ. ಹೀಗೆ ಅತಿ ಉತ್ಕೃಷ್ಟವಾದ ಪುಣ್ಯಮಯ ಶರೀರವೆಂದರ್ಥ. ಇಂತಹ ಶರೀರವು ಯಾರಿಗೆ ದೊರೆತಿರುವುದೋ ಅವನೇ ಪರಕಾಯ ಶಿವಯೋಗಿಯು. ಇಂಥ ಶಿವಯೋಗಿಯ ಆ ಶರೀರವು ದೇವರಷ್ಟೇ ಪೂಜ್ಯವಾಗಿರುತ್ತದೆ. ಅಂತೆಯೇ ಓರ್ವ ಕನ್ನಡದ ಕವಿಯು ''ಕಲ್ಲು ದೇವರಾದರೆ ಕಾಯ ದೇವರಾಗದೆ ?'' ಎಂಬುದಾಗಿ ಪ್ರಶ್ನಿಸಿದ್ದಾನೆ. ಕಲ್ಲಿನ ಮೂರ್ತಿಗಳನ್ನು ನಿರ್ಮಿಸಿ ಅದಕ್ಕೆ ಸದ್ಗುರುವು ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದಾಗ ಅದು ದೇವರಾಗಿ ಪೂಜಿಸಲ್ಪಡು ವುದು. ಹೀಗೆ ಯಾರ ಅಮೃತಹಸ್ತಸ್ಪರ್ಶದಿಂದ ಶಿಲೆಯಲ್ಲಿ ಶಿವತ್ವವು ಪ್ರತಿಷ್ಠಾಪಿಸಲ್ಪಡು ವುದೋ ಅಂಥ ಆ ಕಾಯವು ಅದು ಹೇಗೆ ತಾನೆ ದೇವರಾಗಲಿಕ್ಕಿಲ್ಲ ? ಅಂತೆಯೇ ಪೂಜ್ಯಪಾದರು–

ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ ।
ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥

(ಸಿ. ಶಿ. ೯–೫೪)

ಈ ತೆರನಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಪರಮಾತ್ಮನು ಮಾಯಾಶಕ್ತಿ ವಿಶಿಷ್ಟನಾಗಿರುವುದರಿಂದ ಅವನು ಯಾರಿಗೂ ಪ್ರತ್ಯಕ್ಷ ಗೋಚರನಾಗಲಾರನು. ಆದರೆ ಅವನೇ ಗುರುರೂಪದಲ್ಲಿ ಸರ್ವರಿಗೂ ಪ್ರತ್ಯಕ್ಷನಾಗಿದ್ದು ಎಲ್ಲರ ಭಕ್ತಿಯನ್ನು ಸ್ವೀಕರಿಸಿ ಅದಕ್ಕೆ ಉಚಿತವಾದ ಫಲವನ್ನು ದಯಪಾಲಿಸುತ್ತಿದ್ದಾನೆ. ಇಲ್ಲಿ ಕಾಯಧಾರಿಯಾದ ಸದ್ಗುರುವಿಗೆ ಪ್ರತ್ಯಕ್ಷನಾದ ಪರಮಾತ್ಮನೆಂಬುದಾಗಿ ಸಂಬೋಧಿಸಿರೋಣದರಿಂದ ಅವನ ಆ ಕಾಯವು ಸರ್ವೋತ್ಕೃಷ್ಟವಾದುದೆಂಬುದು ಸ್ಪಷ್ಟವಾಗುತ್ತದೆ. ಇಂತಹ ಉತ್ಕೃಷ್ಟವಾದ ಕಾಯವುಳ್ಳವನೇ ಪರಕಾಯನು.

ಈ ಪರಕಾಯ ಶಿವಯೋಗಿಯ ಇಂದ್ರಿಯ ವ್ಯವಹಾರಗಳೆಲ್ಲ ಲಯವಾಗಿ ಹೋಗಿರುತ್ತವೆ ಎಂಬ ವಿಷಯವನ್ನು ಪ್ರಸ್ತುತಪಡಿಸಲೋಸುಗ ಪೂಜ್ಯಪಾದರು ಪುನಃ–

ಇಂದ್ರಿಯಾಣಿ ಮನೋವೃತ್ತಿ ವಾಸನಾಃ ಕರ್ಮಸಂಭವಾಃ ।
ಯತ್ರ ಯಾಂತಿ ಲಯಂ ತೇನ ಸಕಾಯೋಽಯಂ ಪರಾತ್ಮನಾ ॥

(ಸಿ.ಶಿ. ೧೬–೫೭)

ಈ ವಿಧವಾಗಿ ಉಪದೇಶಿಸಿದ್ದಾರೆ. ಕರ್ಮಪಾಶ ಸಂಭೂತಗಳಾದ ಮನಸ್ಸಿನ ವಾಸನೆಗಳು ಹಾಗೂ ದಶೇಂದ್ರಿಯಗಳ ವ್ಯಾಪಾರಗಳು ಆ ಪರಶಿವ ಲಿಂಗದಲ್ಲಿಯೇ ಲಯವಾಗಿ ರೋಣ ದರಿಂದ ಆ ಶಿವಯೋಗಿಯ ಸಂಪೂರ್ಣವಾದ ಶರೀರವು ಪರಬ್ರಹ್ಮ ಸ್ವರೂಪ ವಾಗಿರುತ್ತದೆ. ಅಂತೆಯೇ ಅವನಿಗೆ ಪರಕಾಯನೆನ್ನುತ್ತಾರೆ. ಆದ್ದರಿಂದಲೇ ಇಂದ್ರಿಯ ವ್ಯವಹಾರಗಳಿಂದ ಅವನಿಗೆ ಯಾವುದೇ ಬಾಧೆಯುಂಟಾಗುವುದಿಲ್ಲ ಎಂಬುದು ಪೂಜ್ಯರ ಅಭಿಪ್ರಾಯವಾಗಿದೆ.

ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಪ್ರವೃತ್ತವಾಗಲು ಮನಸ್ಸಿನಲ್ಲಿರುವ ವಾಸನೆಗಳೇ ಮೂಲಕಾರಣಗಳು. ಜೀವಾತ್ಮನು ಯಾವ ಯಾವ ಪದಾರ್ಥಗಳನ್ನು ಉಪಭೋಗಿಸುತ್ತಾನೆಯೋ ಅವೆಲ್ಲವುಗಳ ಸಂಸ್ಕಾರಗಳು ಮನಸ್ಸಿನಲ್ಲಿ ಉಳಿದುಕೊಳ್ಳುತ್ತವೆ. ಆ ಸಂಸ್ಕಾರಗಳ ಬಲದಿಂದಲೇ ಪುನಃ ಆಯಾ ವಿಷಯಗಳನ್ನು ಅನುಭವಿಸುವ ಇಚ್ಛೆಯುಂಟಾಗುತ್ತದೆ. ಈ ಇಚ್ಛೆಯ ಉತ್ಪತ್ತಿಗೆ ಕಾರಣವಾದ ಆ ಸಂಸ್ಕಾರವೇ ಇಲ್ಲಿಯ 'ವಾಸನಾ' ಎಂಬುದಾಗಿ ಕರೆಯಲ್ಪಡುತ್ತದೆ. ಈ ವಾಸನೆಯ ಮುಖಾಂತರವಾಗಿಯೇ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಮತ್ತೆ ಮತ್ತೆ ಪ್ರವೃತ್ತವಾಗುತ್ತಿರುತ್ತವೆ. ಈ ಪರಕಾಯ ಸಂಪನ್ನವಾದ ಶಿವಯೋಗಿಯ ಎಲ್ಲ ಸಾಂಸಾರಿಕ ವಾಸನೆಗಳು ಆ ಪರಶಿವಲಿಂಗದಲ್ಲಿ ವಿಲಯವನ್ನು ಹೊಂದಿರುವುದರಿಂದ ಅವನ ಇಂದ್ರಿಯಗಳು ವಿಷಯಾಭಿಮುಖವಾಗಿ ಪ್ರವೃತ್ತವಾಗಲಾರವು. ಹೀಗೆ ಈತನ ವಾಸನೆ ಹಾಗೂ ಇಂದ್ರಿಯ ಗಳೆಲ್ಲ ಭಗವದರ್ಪಿತವಾಗಿರೋಣದರಿಂದ ಇವನ ಶರೀರವು ಸಹ ಭಗವದ್ರೂಪ ವಾಗಿರುತ್ತದೆ ಎಂಬುದಾಗಿ ತಿಳಿದುಕೊಳ್ಳಬೇಕು.

ಈ ಪರಸ್ಥಲದ ಶಿವಯೋಗಿಯ ದೇಹವು ಅದು ಹೇಗೆ ತಾನೇ ಪರಬ್ರಹ್ಮ ಸ್ವರೂಪ ವಾಗಬಲ್ಲದು ? ಎಂಬ ಶಂಕೆಯನ್ನು ನಿರಸನಗೊಳಿಸಲೋಸುಗ ಪೂಜ್ಯಪಾದರು ಪುನಃ–

ಪರಾಹಂತಾಮನುಪ್ರಾಪ್ಯ ಪಶ್ಯೇದ್ವಿಶ್ವಂ ಚಿದಾತ್ಮಕಮ್ ।
ಸದೇಹೋಽತಿ ಭ್ರಮಸ್ತಸ್ಯ ನಿಶ್ಚಿತಾಹಿ ಶಿವಾತ್ಮತಾ ॥

(ಸಿ.ಶಿ. ೧೬–೫೩)

ಈ ತೆರನಾಗಿ ವಿವರಿಸಿದ್ದಾರೆ. ಈ ಪರಕಾಯ ಶಿವಯೋಗಿಯು ಪರಾ– ಅಹಂತೆಯನ್ನು ಪಡೆದು ಇಡೀ ವಿಶ್ವವೆಲ್ಲವನ್ನು ಚಿನ್ಮಯವಾಗಿ ನೋಡುತ್ತಾನೆ. ಅಂತೆಯೇ ಅವನಿಗೆ ಶಿವಾತ್ಮತ್ವ ಭಾವನೆಯು ನಿಶ್ಚಿತವಾಗಿರುತ್ತದೆ. ಆದ್ದರಿಂದಲೇ ಅವನು ದೇಹಧಾರಿ ಯಾಗಿದ್ದಾನೆಂಬ ಭಾವನೆಯು ಭ್ರಮಾತ್ಮಕವಾದುದೆಂಬುದಾಗಿ ತಿಳಿದುಕೊಳ್ಳಬೇಕು ಎಂಬುದು ಪೂಜ್ಯರ ಆಶಯವಾಗಿದೆ.

ಅಹಂತಾ ಭಾವನೆಯು ಪರಾಹಂತಾ ಮತ್ತು ಅಪರಾಹಂತಾ ಎಂಬುದಾಗಿ ಎರಡು ಪ್ರಕಾರವಾಗಿರುತ್ತದೆ. ಸಮಷ್ಟಿ ಅಹಂಭಾವನೆಗೆ ಪರಾಹಂತಾ ಎಂದು ಕರೆದರೆ ವ್ಯಷ್ಟಿ ಅಹಂಭಾವನೆಗೆ ಅಪರಾಹಂತಾ ಎಂದು ಕರೆಯುವರು.

ಯಾರ ಅಹಂಭಾವನೆಯು ಕೇವಲ ತನ್ನ ಶರೀರವನ್ನು ವ್ಯಾಪಿಸಿರುವುದೋ ಅದುವೇ ಅಪರಾಅಹಂತೆಯು. ಇದು ಉಳ್ಳವನು ಅಜ್ಞಾನಿ ಜೀವವೆಂದು ಕರೆಯಲ್ಪಡುವನು. ಇನ್ನು ಯಾರ ಅಹಂಭಾವನೆಯು ಸಂಪೂರ್ಣ ವಿಶ್ವವನ್ನು ವ್ಯಾಪಿಸಿಕೊಂಡಿರುವುದೋ ಅಂತಹ ಪರಾಹಂತೆಯುಳ್ಳವರು ಜ್ಞಾನಿ ಎಂಬುದಾಗಿ ಕರೆಯಲ್ಪಡುತ್ತಾರೆ. ಅವರೇ ವಿಶ್ವ ಕುಟುಂಬಿಗಳು. ಇವರ ಮನಸ್ಸಿನಲ್ಲಿ ಯಾವುದೇ ಪ್ರಕಾರದ ಭೇದ ಭಾವವು ಇರುವುದಿಲ್ಲ. ಇಂತಹ ಸ್ಥಿತಿಯನ್ನು ಪಡೆದ ಪರಕಾಯ ಶಿವಯೋಗಿಯು ಈ ಜಗತ್ತಿನಲ್ಲಿ ಎಲ್ಲರಿಗಿಂತಲೂ ದೊಡ್ಡವನಾಗಿ ತೋರುತ್ತಾನೆ. ಇವನೇ ಶ್ರೇಷ್ಠನಾದ ಸದ್ಗುರು. ಇಂತಹ ಗುರುವನ್ನುದ್ದೇಶಿಸಿಯೇ ಶಿವನು– ''ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ'' ಎಂಬುದಾಗಿ ಆದೇಶಿಸಿದ್ದಾರೆ.

ಈತನ ದೃಷ್ಟಿಯು ಶಿವಮಯವಾಗಿರುತ್ತದೆ. ಅಂತೆಯೇ ಸರ್ವವೆಲ್ಲವನು ಚಿದಹಂಭಾವನೆಯಿಂದ ನೋಡುತ್ತ ಆನಂದ ತುಂದಿಲನಾಗಿರುತ್ತಾನೆ. ಇವನಿಗೆ ದುಃಖದ ಸ್ಪರ್ಶವೇ ಆಗುವುದಿಲ್ಲ. ಯಾರ ಮನಸ್ಸಿನಲ್ಲಿ ಸದಾ ಪರಮಾತ್ಮ ಭಾವನೆಯಿರುತ್ತದೆಯೋ ಅವರು ಸದಾ ಸುಖಿಗಳಾಗಿರುತ್ತಾರೆ. ಇನ್ನು ಯಾರ ಮನಸ್ಸಿನಲ್ಲಿ ಪ್ರಾಪಂಚಿಕ ಭಾವನೆ ಉಂಟಾಗುತ್ತಿರುತ್ತದೆಯೋ ಅವರು ಸದಾ ದುಃಖಿಗಳೇ ಆಗಿರುತ್ತಾರೆ. ಸಂಸಾರವೇ ದುಃಖಮಯವಾಗಿರುವಾಗ ಅದರ ಚಿಂತೆಯನ್ನು ಮಾಡುವ ವ್ಯಕ್ತಿಗೆ ಅದು ಹೇಗೆ ತಾನೇ ಸುಖವು ದೊರಕೀತು ? ಇದೂ ಅಲ್ಲದೆ ಪ್ರಪಂಚದಲ್ಲಿಯ ಸುಖಗಳು ಅನೇಕಗಳಾಗಿದ್ದು, ಅವು ಸಾತಿಶಯದಿಂದ ಕೂಡಿಕೊಂಡಿರುತ್ತವೆ. ಇನ್ನು ಈ ಪ್ರಪಂಚದ ಸುಖಗಳು ಎಲ್ಲವೂ ಎಲ್ಲರಿಗೂ ದೊರೆಯಲಾರವು. ಒಂದು ಪ್ರಾಪ್ತವಾಗಿದ್ದರೆ, ಇನ್ನೊಂದರ ಅಭಾವವು ಸದಾ ಮನಸ್ಸನ್ನು ಕೊರೆಯುತ್ತಿರುತ್ತದೆ. ಎಂತಹ ಚಕ್ರವರ್ತಿಯಿದ್ದರೂ ಅವನ ಮನಸ್ಸಿನಲ್ಲಿ ಸಂಸಾರದ ಯಾವುದೇ ಒಂದು ವಸ್ತುವಿನ ಕೊರಗು ಮರಗುಗಳು ಇದ್ದೇ ಇರುತ್ತವೆ.

ಓರ್ವ ವ್ಯಕ್ತಿಯು ಹಂಸತೂಲಿಕಾತಲ್ಪದ ಮೇಲೆ ಮಲಗಿಕೊಂಡು ಆನಂದಿಸುವಾಗ ಆ ಹಾಸಿಗೆಯ ಮೃದುಸ್ಪರ್ಶ ಸುಖವು ದೇಹದ ಒಂದು ಭಾಗಕ್ಕೆ ಮಾತ್ರ ಆಗುತ್ತಿರುತ್ತದೆ. ಇಡೀ ದೇಹಕ್ಕೆಲ್ಲ ಅದರ ಸ್ಪರ್ಶ ಸುಖವು ಏಕಕಾಲಕ್ಕೇನೇ ದೊರೆಯಬೇಕೆಂಬ ಉದ್ದೇಶದಿಂದ ಆತನು ಆ ಹಾಸಿಗೆಯ ಮೇಲೆ ಅತ್ತಿಂದಿತ್ತ ಇತ್ತಿಂದತ್ತ ಹೊರಳಾಡತೊಡಗಿದನು. ಅದೆಷ್ಟೇ ಹೊರಳಾಡಿದರೂ ಏಕಕಾಲದಲ್ಲಿ ಸಂಪೂರ್ಣ ಶರೀರಕ್ಕೆ ಅದರ ಸ್ಪರ್ಶಸುಖಾನುಭೂತಿ ಆಗಲೇ ಇಲ್ಲ. ದೇಹದ ಒಂದು ಮಗ್ಗಲು ಆ ಸುಖವನ್ನನುಭವಿಸುತ್ತಿದ್ದರೆ ಉಳಿದ ಮೂರು ಮಗ್ಗಲುಗಳು ಅದರಿಂದ ವಂಚಿತಗಳಾಗಿದ್ದವು. ಜಗತ್ತಿನಲ್ಲಿಯ ಸಂಸಾರಿಕ ಸುಖಗಳ ರೀತಿ–ನೀತಿಗಳೇ ಇಂತಹವು. ಆದ್ದರಿಂದ ಎಷ್ಟೇ ಪ್ರಯತ್ನ ಮಾಡಿದರೂ ಸಂಸಾರದ ಎಲ್ಲ ಸುಖಗಳು ಓರ್ವ ವ್ಯಕ್ತಿಗೆ ದೊರೆಯಲಾರವು. ಆದ್ದರಿಂದ ರಂಕನನ್ನೇ ಮೊದಲು ಮಾಡಿಕೊಂಡು ಚಕ್ರವರ್ತಿಯವರೆಗಿರುವ ಪ್ರತಿಯೊಬ್ಬರ ಮನಸ್ಸಿನಲ್ಲಿ ಒಂದಿಲ್ಲೊಂದು ಪ್ರಕಾರದ ದುಃಖಗಳು ಇದ್ದೇ ಇರುತ್ತವೆ. ಆದರೆ ಈ ಸಂಸಾರಿಕ ಸುಖಗಳನ್ನು ತ್ಯಜಿಸಿ ಪರಮಾತ್ಮಸ್ವರೂಪವನ್ನು ಪಡೆದ ಪರಕಾಯದ ಶಿವಯೋಗಿಯು ಆ

ಪರಾಹಂತ ಭಾವನೆಯಿಂದ ಸರ್ವವೆಲ್ಲವೂ ತಾನೆಂಬುದಾಗಿ ಅನುಭವಿಸುತ್ತ ಸದಾ ಆನಂದದಲ್ಲಿರುತ್ತಾನೆ. ಈ ಆನಂದವು ನಿರತಿಶಯವಾಗಿ ರೋಣದರಿಂದ ಇದನ್ನು ಪಡೆದ ಬಳಿಕ ಮತ್ತೆ ಬೇರೆ ಯಾವುದರ ಅಪೇಕ್ಷೆಯೇ ಮನಸ್ಸಿನಲ್ಲಿ ಬಾರದಿರೋಣ ದರಿಂದ ಈ ಶಿವಯೋಗಿಯು ಅಚ್ಚ ಸುಖಿಯಾಗಿರುತ್ತಾನೆ. ಈ ಸುಖವನ್ನೇ ಅಪೇಕ್ಷಿಸಿದ ನಿಜಗುಣ ಶಿವಯೋಗಿಗಳು– ''ಸುಖವೇ ! ನಿಜಸುಖವೇ !! ನೀನು ನಿಖಿಳವೆಂದೆನಿಸದೆ ಏಕಮುಖವಾಗಿ ತೋರು– ಎನ್ನೊಳು'', ಎಂದು ಕೇಳಿಕೊಂಡಿದ್ದಾರೆ ಅಂದರೆ ಆತ್ಮಸುಖವೇ ಸಂಸಾರದಲ್ಲಿ ಅನೇಕ ಮುಖವಾಗಿ ತೋರುತ್ತಿರುತ್ತದೆ. ಅಲ್ಲಿ ಅದು ಸಾತಿಶಯ ಸ್ವರೂಪವನ್ನು ತಾಳಿಕೊಂಡು, ಯಾರ ಮನಸ್ಸಿಗೂ ಪರಿಪೂರ್ಣ ವಾದ ಸಮಾಧಾನವನ್ನು ಕೊಡುವುದಿಲ್ಲ. ಆದರೆ ಅದುವೇ ಈ ಹೊರಗಿನ ಅನೇಕ ರೂಪಗಳನ್ನು ಬಿಟ್ಟು, ಆತ್ಮ ಸುಖರೂಪವಾದ ಒಂದೇ ಮುಖದಿಂದ ತೋರಿದಾಗ ಅದು ನಿರತಿಶಯವಾಗಿರೋಣದರಿಂದ ಅದನ್ನು ಪಡೆದವರು ಪರಿಪೂರ್ಣ ಸುಖಿ ಗಳಾಗುತ್ತಾರೆ.

ಈ ಪರಕಾಯಸ್ಥಲದ ಶಿವಯೋಗಿಯು ತನಗುಂಟಾದ ಪರಾಹಂತಾ ಭಾವನೆ ಯಿಂದ ವಿಶ್ವವೆಲ್ಲವನ್ನು ಚಿದ್ರೂಪವಾಗಿ ಕಂಡು ಅದರಲ್ಲಿಯೇ ತನ್ನ ಚಿತ್ತವನ್ನು ವಿಲಯ ಗೊಳಿಸಿರೋಣದರಿಂದ ಸದಾ ಆನಂದಿತನಾಗಿಯೇ ಇರುತ್ತಾನೆ. ಎಲ್ಲರಂತೆ ಅವನಿಗೂ ಸ್ಥೂಲ ದೇಹವಿದ್ದರೂ ಅದರ ಅಭಿಮಾನವಿಲ್ಲದ ಕಾರಣ ಅದರ ಯಾವುದೇ ವಿಕಾರ ಗಳಿಂದ ಇವನಲ್ಲಿ ವಿಕೃತಿಯುಂಟಾಗುವುದಿಲ್ಲ.

ಈ ಪರಕಾಯ ಶಿವಯೋಗಿಯು ದೇಹಧಾರಿಯಾಗಿದ್ದರೂ ಸಹ ಅವನು ನಿರ್ದೇಹಿಯಾಗಿರುತ್ತಾನೆಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು.

ಸ್ವ ಸ್ವರೂಪಂ ಚಿದಾಕಾರಂ ಜ್ಯೋತಿಃ ಸಾಕ್ಷಾದ್ವಿಚಿಂತಯನ್ ।
ದೇಹವಾನಪಿ ನಿರ್ದೇಹೋ ಜೀವನ್ಮುಕ್ತೋ ಹಿ ಸಾಧಕಃ ॥

(ಸಿ. ಶಿ. ೧೬–೫೪)

ಈ ರೀತಿಯಾಗಿ ವಿವರಿಸಿದ್ದಾರೆ. ಆತ್ಮವು ಚಿದ್ರೂಪವಾಗಿರುತ್ತದೆ. ಆ ಚಿದ್ರೂಪ ವಾದ ತನ್ನಾತ್ಮವನ್ನು ಸಾಕ್ಷಾತ್ಕರಿಸಿಕೊಂಡು ಸ್ವಸ್ವರೂಪದ ಚಿಂತನೆಯಲ್ಲಿರುವ ಸಾಧಕನು ದೇಹವನ್ನು ಧರಿಸಿಕೊಂಡಿದ್ದರೂ ನಿರ್ದೇಹಿಯಾಗಿರುತ್ತಾನೆ. ಎಂತಲೇ ಅವನು ಜೀವನ್ಮು ಕ್ತನೂ ಸಹ ಆಗಿರುವನೆಂಬುದು ಪೂಜ್ಯಪಾದರ ಆಶಯವಾಗಿದೆ.

ಜ್ಯೋತಿಯು ಪ್ರಕಾಶಮಾನವಾಗಿರುವಂತೆ ಪ್ರತಿಯೊಬ್ಬರ ಆತ್ಮವೂ ಸಹ ಚಿಜ್ಯೋತಿ ರೂಪವಾಗಿರುತ್ತದೆ. ದೀಪದಿಂದ ಹೊರಗಿನ ಕತ್ತಲೆಯು ಇಲ್ಲದಾಗಿ ಹೋಗುವಂತೆ ಈ ಆತ್ಮಜ್ಯೋತಿಯಿಂದ ಹೃದಯದಲ್ಲಿಯ ಅಜ್ಞಾನವೆಂಬ ಅಂಧಃಕಾರವು ನಿರ್ಮೂಲನ ಗೊಳ್ಳುವುದು. ಇಂತಹ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡ ಸಾಧಕನು ಸದಾ ಅದರ ಚಿಂತನೆಯಲ್ಲಿಯೇ ತನ್ನ ಚಿತ್ತವನ್ನು ತೊಡಗಿಸುವನು. ಅವನ ಮನೋವೃತ್ತಿಯು ಬಹಿರ್ಗಾಮಿಯಾಗದಿರೋಣದರಿಂದ ಮತ್ತು ತನ್ನ ಸ್ಥೂಲದೇಹದ ಕಡೆಗೆ ಆತನ

ಲಕ್ಷ್ಯವಿಲ್ಲದಿರೋಣದರಿಂದ ಅವನು ದೇಹಿಯಾಗಿದ್ದರೂ ನಿರ್ದೇಹಿಯಂತೆ ವರ್ತಿಸುತ್ತಾನೆ. ಈ ನಿರ್ದೇಹಿ ಸ್ಥಿತಿಯೇ ಜೀವನ್ಮುಕ್ತಿಯ ಸ್ಥಿತಿಯು–

ಪೂರ್ವೋಕ್ತನಾದ ಶಿವಯೋಗಿಯ ಜೀವನ್ಮುಕ್ತಿಯ ಸ್ಥಿತಿಯನ್ನು ಮತ್ತಷ್ಟು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು ಪುನಃ–

ದೇಹಸ್ತಿಷ್ಠತು ವಾ ಯಾತು ಯೋಗಿನಃ ಸ್ವಾತ್ಮಬೋಧಿನಃ ।
ಜೀವನ್ಮುಕ್ತಿರ್ಭವೇತ್ ಸದ್ಯಶ್ಚಿದಾನಂದ ಪ್ರಕಾಶಿನೀ ॥

(ಸಿ.ಶಿ. ೧೬–೫೫)

ಈ ತೆರನಾಗಿ ಉಪದೇಶಿಸಿದ್ದಾರೆ. ಸ್ವ ಸ್ವರೂಪ ಜ್ಞಾನ ಸಂಪನ್ನನಾದ ಶಿವಯೋಗಿಯ ಸ್ಥೂಲದೇಹವು ಅನೇಕ ಕಾಲದವರೆಗೆ ಇರಬಹುದು ಅಥವಾ ಇಲ್ಲದೇ ಇರಬಹುದು. ಆದರೂ ಸಹ ಅವನ ಸಚ್ಚಿದಾನಂದ ಸ್ವರೂಪವನ್ನು ಪ್ರಕಾಶಗೊಳಿಸುವ ಜೀವನ್ಮುಕ್ತಿ ರೂಪವಾದ ಅವಸ್ಥೆಯು ತತ್‌ಕ್ಷಣದಲ್ಲಿಯೇ ಪ್ರಾಪ್ತವಾಗುವುದೆಂಬುದು ಪೂಜ್ಯರ ಆಶಯವಾಗಿದೆ.

ಈ ಪರಕಾಯ ಸ್ಥಲದ ಶಿವಯೋಗಿಯು ಸ್ವಾತ್ಮಬೋಧವನ್ನು ಪಡೆದು ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ತತ್‌ಕ್ಷಣದಲ್ಲಿಯೇ ಅನುಭವಿಸುತ್ತಿರುತ್ತಾನೆ. ಈ ಸ್ಥಿತಿಯನ್ನು ಪಡೆದ ನಂತರ ಆತನ ಶರೀರವು ಇದ್ದರೂ ಅಷ್ಟೇ ಇಲ್ಲದೇ ಇದ್ದರೂ ಅಷ್ಟೇ. ಆ ದೇಹದ ಪ್ರಯೋಜನೆಯು ಪ್ರಾಪ್ತವಾದ ಬಳಿಕ ಅದು ಇರಲೇಬೇಕೆನ್ನುವ ಕಟ್ಟು ಪಾಡುಗಳೇನಿಲ್ಲ, ಜ್ಞಾನಿಯೇ ಇರಲಿ ಅಜ್ಞಾನಿಯೇ ಇರಲಿ, ಅವರವರ ಶರೀರಗಳು ಪ್ರಾರಬ್ಧಕರ್ಮದ ಅಧೀನವಾಗಿರುತ್ತವೆ. ಆ ಕರ್ಮವು ಅಧಿಕವಾಗಿದ್ದರೆ ಆ ದೇಹವು ಅಧಿಕ ಕಾಲದವರೆಗೆ ಇರಬಹುದು. ಆ ಕರ್ಮವು ಅಲ್ಪಕಾಲಿಕವಾಗಿದ್ದರೆ ಆ ದೇಹವು ಸಹ ಅಲ್ಪಕಾಲಿಕವಾಗಿಯೇ ಇರುತ್ತದೆ. ಆದ್ದರಿಂದ ಜ್ಞಾನಿಯಾದ ಬಳಿಕ ಇಷ್ಟುಕಾಲ ಬದುಕಬೇಕು. ಅಷ್ಟುಕಾಲ ಬದುಕಬೇಕೆನ್ನುವ ನಿಯಮವೇನಿಲ್ಲ, ಆದರೆ ಯೋಗ ಸಾಮರ್ಥ್ಯವನ್ನು ಹೊಂದಿದ ಜ್ಞಾನಿಗಳು ತಮ್ಮ ಯೋಗಬಲದಿಂದ ಜನಸಾಮಾನ್ಯರಿಗಿಂತಲೂ ಹೆಚ್ಚುಕಾಲ ಬದುಕಿದ ಘಟನೆಗಳನ್ನು ಅನೇಕ ಕಡೆ ಕೇಳುತ್ತವೆ. ಶ್ರೀ ಜಗದ್ಗುರು ರೇಣುಕರೇ ಪ್ರಚ್ಛನ್ನವಾಗಿ ಮತ್ತು ಪ್ರಕಟವಾಗಿ ಹದಿನಾಲ್ಕುನೂರು ವರ್ಷಗಳವರೆಗೆ ಲೀಲೆಯನ್ನು ಮಾಡಿದ್ದರೆಂಬುದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ. ಇಂತಹ ಮಹಿಮಾನ್ವಿತರಾದ ಅನೇಕ ಮಹಾತ್ಮರು ನಮ್ಮ ದೇಶದಲ್ಲಿ ಆಗಿಹೋಗಿದ್ದಾರೆ. ಯೋಗಸಾಮರ್ಥ್ಯದಿಂದ ಅಧಿಕ ಕಾಲ ಬದುಕಿದ ಮಾತ್ರಕ್ಕೆ ಜೀವನ್ಮುಕ್ತಿಯ ಸ್ಥಿತಿಯಲ್ಲಿ ಹೆಚ್ಚೂ ಕಡಿಮೆಯಾಗುತ್ತದೆಂಬ ವಿಚಾರವಿರುವುದಿಲ್ಲ, ಜ್ಞಾನದ ನಂತರ ಒಂದು ಕ್ಷಣವೇ ಬದುಕಿರಲಿ ಅಥವಾ ಸಾವಿರ ಸಾವಿರ ವರ್ಷಗಳ ವರೆಗೆ ಚಿರಂಜೀವಿಯಾಗಿರಲಿ, ಆದರೂ ಅವರೀರ್ವರ ಜೀವನ್ಮುಕ್ತಿಯ ಆನಂದವು ಒಂದೇಯಾಗಿರುತ್ತದೆ. ಅದರಲ್ಲಿ ಯಾವುದೇ ವ್ಯತ್ಯಾಸವನ್ನು ಕಾಣಲಾಗುವುದಿಲ್ಲ, ಆದ್ದರಿಂದ ಜ್ಞಾನಿಗಳು ಜ್ಞಾನಪ್ರಾಪ್ತವಾದನಂತರ

ಶರೀರವನ್ನು ಹೆಚ್ಚು ಕಾಲ ಬದುಕಿಸಿಕೊಂಡಿರಬೇಕೆನ್ನುವ ವಿಚಾರಧಾರೆಗೆ ಒಳಗಾಗು ವದಿಲ್ಲ. ಅಂತೆಯೇ ಸುಜ್ಞಾನ ಸಂಪನ್ನಳಾದ ಅಕ್ಕಮಹಾದೇವಿಯು–

ಕಾಯಕರ್ರನೆ ಕಂದಿದರೇನು ?
ಕಾಯಮಿರ್ರನೆ ಮಿಂಚಿದರೇನು ?
ಅಂತರಂಗ ಶುದ್ಧವಾದ ಬಳಿಕ ಕಾಯವೇನಾದಡೇನಯ್ಯಾ ?
ಚೆನ್ನಮಲ್ಲಿಕಾರ್ಜುನನೊಲಿದ ಕಾಯವೇನಾದಡೆ ನಿಮಗೇನಯ್ಯಾ ?

ಎಂಬುದಾಗಿ ಜ್ಞಾನ ಪ್ರಾಪ್ತಿಯ ನಂತರ ಶರೀರದ ಬಗ್ಗೆ ತನ್ನ ಯಾವುದೇ ಪ್ರಕಾರದ ಆಗ್ರಹವು ಇಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾಳೆ. ಮನುಷ್ಯ ಶರೀರದ ಪ್ರಯೋಜನ ವೆಂದರೆ ಆತ್ಮಜ್ಞಾನವನ್ನು ಪಡೆಯುವುದು. ಆ ಪ್ರಯೋಜನವನ್ನು ಪಡೆದ ನಂತರ ಜ್ಞಾನಿಗಳು ದೇಹದ ಬಗ್ಗೆ ಹೆಚ್ಚು ವಿಚಾರವನ್ನು ಮಾಡದೆ ಅದು ಪ್ರಾರಬ್ಧ ಕರ್ಮಾಧೀನ ವಾದುದೆಂಬುದನ್ನು ತಿಳಿದುಕೊಂಡು ಸುಮ್ಮನೆ ಇರುತ್ತಾರೆ. ಅದು ಹೆಚ್ಚು ಕಾಲ ಬದುಕಲಿ ಅಥವಾ ಬದುಕದೇ ಇರಲಿ, ಅವರಿಗೆ ದೊರೆತ ಜೀವನ್ಮುಕ್ತಿಯ ಸ್ಥಿತಿಯಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು.

ಸಂಸಾರದ ಪೀಡೆಯು ಆತ್ಮಜ್ಞಾನವಾಗುವವರೆಗೆ ಇರುತ್ತದೆಯೇ ವಿನಃ ಆಮೇಲೆ ಅದು ಇರಲಾರದೆಂಬ ವಿಷಯವನ್ನು ಪೂಜ್ಯಪಾದರು ದೃಷ್ಟಾಂತ ಮೂಲಕವಾಗಿ

ಆತ್ಮಜ್ಞಾನಾವಸಾನಂ ಹಿ ಸಂಸಾರ ಪರಿಪೀಡನಮ್ ।
ಸೂರ್ಯೋದಯೇಪಿ ಕಿಂ ಲೋಕಸ್ತಿಮಿರೇಣೋಪರುಧ್ಯತೇ ॥

(ಸಿ.ಶಿ. ೧೬–೫೬)

ಈ ಪರಿಯಾಗಿ ಉಪದೇಶಿಸಿದ್ದಾರೆ. ಆತ್ಮಜ್ಞಾನವಾಗುವವರೆಗೆ ಸಂಸಾರಿಕ ದುಃಖಗಳು ಬೆಂಬತ್ತುತ್ತವೆ. ಸೂರ್ಯೋದಯವಾದೊಡನೆ ಕತ್ತಲೆಯು ಇಲ್ಲದಾಗಿ ಹೋಗುವಂತೆ, ಆತ್ಮ ಜ್ಞಾನವಾದೊಡನೆ ಎಲ್ಲ ದುಃಖಗಳು ನಿವೃತ್ತಗಳಾಗುತ್ತವೆ ಎಂಬುದು ಪೂಜ್ಯರ ಅಭಿಪ್ರಾಯ ವಾಗಿದೆ.

ಅಜ್ಞಾನವೇ ಎಲ್ಲ ದುಃಖಗಳ ಬೀಜವು. ಅಜ್ಞಾನದಿಂದ ಭೇದ ಜ್ಞಾನವು, ಆ ಭೇದ ಜ್ಞಾನದಿಂದ ಅನುಕೂಲ–ಪ್ರತಿಕೂಲ ಜ್ಞಾನವು. ಅದರಿಂದ ರಾಗ–ದ್ವೇಷಾದಿಗಳು ಅವುಗಳಿಂದ ಅನುಕೂಲ ಪ್ರತಿಕೂಲ ವ್ಯವಹಾರವು ಆ ವ್ಯವಹಾರದಿಂದ ಪುಣ್ಯ ಪಾಪವು ಮತ್ತು ಕೊನೆಯದಾಗಿ ಆ ಪುಣ್ಯಪಾಪದಿಂದಲೇ ಜನ್ಮ–ಮರಣಗಳು ಉಂಟಾಗುತ್ತವೆ. ಈ ಜನ್ಮ ಮರಣಗಳೇ ದುಃಖ ರೂಪಗಳು. ಹೀಗೆ ಅಜ್ಞಾನವೊಂದಿದ್ದರೆ ಅದರ ಮುಂದಿನ ಪರಂಪರೆಯು ಬೆಳೆಯುತ್ತ ಬೆಳೆಯುತ್ತ ಹೋಗಿ ಕೊನೆಗೆ ಜೀವಾತ್ಮನು ದುಃಖಸಾಗರವನ್ನೇ ಸೇರುವನು. ಸಂಸಾರದಲ್ಲಿಯ ದುಃಖಗಳು ಒಂದೇ–ಎರಡೇ ಅವುಗಳನ್ನು ಅಂಕಿ ಸಂಖ್ಯೆಗಳಿಂದ ಎಣಿಸಲು ಸಾಧ್ಯವಿಲ್ಲವೆಂದೇ ದುಃಖವನ್ನು ಸಾಗರಕ್ಕೆ ಹೋಲಿಸಿದ್ದಾರೆ. ಇಂತಹ ಸಾಗರದೋಪಾದಿಯಲ್ಲಿಯ ದುಃಖವನ್ನು ದೂರಮಾಡಿಕೊಳ್ಳಬೇಕಾದರೆ ಎಲ್ಲ

ದುಃಖಗಳಿಗೆ ಮೂಲವಾಗಿರುವ ಅಜ್ಞಾನವೊಂದನ್ನು ಆತ್ಮ ಜ್ಞಾನದಿಂದ ಇಲ್ಲವಾಗಿಸಿ ಕೊಳ್ಳಬೇಕು. ಸೂರ್ಯೋದಯವಾಗಲು ಕತ್ತಲೆಯು ಅಡ್ಡಬಾರದಂತೆ ಆತ್ಮಜ್ಞಾನವಾಗಲು ಈ ಅಜ್ಞಾನವು ಹೇಳಹೆಸರಿಲ್ಲದಾಗಿ ಹೋಗುತ್ತದೆ. ಆದ್ದರಿಂದ ಪ್ರತಿಯೊಬ್ಬರು ಇಂತಹ ಆತ್ಮಜ್ಞಾನವನ್ನು ಪಡೆಯಬೇಕೆಂಬುದಾಗಿ ಇಲ್ಲಿ ಪೂಜ್ಯರು ಉಪದೇಶಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪರಕಾಯಸ್ಥಲವನ್ನು ಪರಿಸಮಾಪ್ತಿ ಗೊಳಿಸುತ್ತ ಕೊನೆಯದಾಗಿ ಪುನಃ–

ದೇಹಾಭಿಮಾನನಿರ್ಮುಕ್ತಃ ಕಲಾತೀತ ಪದಾಶ್ರಯಃ ।
ಕಥಂ ಯಾತಿ ಪರಿಚ್ಛೇದಂ ಶರೀರೇಷು ಮಹಾಬುಧಃ ॥

(ಸಿ.ಶಿ. ೧೬–೫೭)

ಈ ರೀತಿಯಾಗಿ ಉಪದೇಶಿಸಿದ್ದಾರೆ. ಈ ಪರಕಾಯಸ್ಥಲದ ಶಿವಯೋಗಿಯು ದೇಹದ ಮೇಲಿನ ಅಭಿಮಾನವನ್ನು ತೊರೆದು, ನಿವೃತ್ತ್ಯಾದಿ ಕಲೆಗಳಿಗೆ ಅತೀತನಾಗಿರುವ ಆ ಪರಶಿವ ಬ್ರಹ್ಮವನ್ನು ಆಶ್ರಯಸಿದಂತವನಾಗಿ ಪರಮಜ್ಞಾನಿಯಾದ ಅವನು ತನ್ನನ್ನು ಶರೀರ ಪರಿಮಿತನನ್ನಾಗಿ ಭಾವಿಸುವುದಿಲ್ಲವೆಂಬುದು ಪೂಜ್ಯರ ಆಶಯವಾಗಿದೆ.

ಸ್ಥೂಲ ಶರೀರವು ಪಾಂಚಭೌತಿಕವಾದದ್ದು, ಅಂದಾಗ ಇದು ಪಂಚಭೂತಗಳದ್ದೇ ವಿನಃ ನಮ್ಮದಲ್ಲವು ಎಂಬ ಜ್ಞಾನವು ಈ ಪರಕಾಯ ಸ್ಥಲದ ಶಿವಯೋಗಿಗೆ ಉಂಟಾಗಿ ರೋಣದರಿಂದ ಅವನಿಗೆ ದೇಹದ ಬಗ್ಗೆ ಮಮತ್ವಾಭಿಮಾನವು ಇರುವುದಿಲ್ಲ ತನ್ನದಲ್ಲದ್ದನ್ನು ತನ್ನದೆಂದು ಭಾವಿಸುವುದೇ ಅಜ್ಞಾನವು. ಸಂಸಾರದಲ್ಲಿಯ ಜೀವಿಗಳು ಇಂತಹ ವ್ಯರ್ಥ ಅಭಿಮಾನದಿಂದಾಗಿಯೇ ವ್ಯರ್ಥವಾಗಿ ದುಃಖವನ್ನು ಅನುಭವಿ ಸುತ್ತಿರುತ್ತಾರೆ. ಮಹಾಜ್ಞಾನ ಸಂಪನ್ನರಾದ ಶಿವಯೋಗಿಗಳು ಇಂತಹ ಅಭಿಮಾನದಿಂದ ಮುಕ್ತರಾಗಿ ಈ ಪ್ರಪಂಚಕ್ಕೆ ಕಾರಣೀಭೂತಗಳಾದ ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ ಮತ್ತು ಶಾಂತ್ಯಾತೀತಗಳೆಂಬ ಪಂಚಕಲೆಗಳಿಂದ ಅತೀತವಾಗಿರುವ ಪರಶಿವ ಬ್ರಹ್ಮವನ್ನು ಆಶ್ರಯಿಸಿರುತ್ತಾರೆ. ಅರ್ಥಾತ್ ತತ್‌ಸ್ವರೂಪರೇ ಆಗಿರುತ್ತಾರೆ. ಇಂತಹ ವ್ಯಾಪಕವಾದ ಸ್ವರೂಪವನ್ನು ಪಡೆದ ಬಳಿಕ ಅವರು ದೇಹದಲ್ಲಿ ಪರಿಚ್ಛಿನ್ನವಾಗಿರುವುದು ಹೇಗೆ ಸಾಧ್ಯವಾಗಬಲ್ಲದು ? ಆದ್ದರಿಂದ ಅವರು ತೋರಿಕೆಗೆ ದೇಹದಲ್ಲಿ ಇದ್ದಂತೆ ತೋರಿದರೂ ಅವರು ದೇಹಾತೀತವಾದ ಅವಸ್ಥೆಯಲ್ಲಿ ಇರುತ್ತಾರೆ.

ಹೀಗೆ ಈ ಪರಕಾಯಸ್ಥಲದಲ್ಲಿ ಜೀವನ್ಮುಕ್ತನಾದ ಶಿವಯೋಗಿಯು ದೇಹ ದಲ್ಲಿದ್ದರೂ ದೇಹದ ಅಭಿಮಾನದಿಂದ ಹೇಗೆ ಮುಕ್ತನಾಗಿರುತ್ತಾನೆಂಬ ವಿಷಯವನ್ನು ಪೂಜ್ಯಪಾದರು ಬಹು ಹೃದಯಂಗಮವಾಗಿ ಇಲ್ಲಿ ಪ್ರತಿಪಾದಿಸಿದ್ದಾರೆ. ಶ್ರೋತೃಗಳಾದ ಸಮಸ್ತ ಸದ್ಭಕ್ತರೇ ! ಈ ಪರಕಾಯಸ್ಥಲದಲ್ಲಿ ಬಂದಿರುವ ಸರ್ವ ವಿಷಯಗಳನ್ನು ಶ್ರವಣ ಮಾಡಿದ್ದೀರೇನೋ ನಿಜ. ಆದರೆ ಇದನ್ನು ಮನನಮಾಡಿಕೊಂಡು ಆ ಸ್ವರೂಪ ಸ್ಥಿತಿಯನ್ನು

ಪಡೆದುಕೊಳ್ಳುವ ಯೋಗ್ಯತೆಯು ನಿಮ್ಮೆಲ್ಲರಿಗೆ ಪ್ರಾಪ್ತವಾಗಲೆಂದು ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಆಗಸ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಧರ್ಮಾಚಾರಸ್ಥಲ

ಧರ್ಮಾಭಿಮಾನಿ ಸದ್ಭಕ್ತರೇ,

ಶ್ರೀ ಕಾಶೀಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಮಹರ್ಷಿ ವ್ಯಾಸನು ಕಾಶೀ ಖಂಡದಲ್ಲಿ ಕಾಶಿಯ ಮಹಾತ್ಮೆಯನ್ನು ಕುರಿತು ಬಹುವಾಗಿ ವರ್ಣಿಸಿದ್ದಾನೆ. ಅವನ ಹೇಳಿಕೆಯ ಪ್ರಕಾರ ಕಾಶಿಯಲ್ಲಿ ವಾಸಿಸುವುದೆಂದರೆ ಈಶ್ವರನ ಗರ್ಭದಲ್ಲಿ ನಿವಾಸಗೈದಂತೆ. ತಾಯಿಯ ಗರ್ಭದಲ್ಲಿರುವ ಶಿಶುವಿಗೆ ಎಲ್ಲ ಕಡೆಯಿಂದಲೂ ಸುರಕ್ಷತೆ ಇರುವಂತೆ, ಕಾಶಿಯಲ್ಲಿ ವಾಸಿಸುವ ಭಕ್ತರನ್ನು ಶಿವನು ಸರ್ವವಿಧದಿಂದಲೂ ಸಂರಕ್ಷಿಸುತ್ತಾನೆ. ಆತನು ಪುಣ್ಯಾತ್ಮನೇ ಇರಲಿ ಅಥವಾ ಪಾಪಿಯೇ ಇರಲಿ. ಸ್ತುತಿ–ಸ್ತೋತ್ರಾದಿಗಳನ್ನು ಮಾಡುವವನೇ ಆಗಿರಲಿ ಅಥವಾ ನಿಂದಕನೇ ಆಗಿರಲಿ ಇವರೆಲ್ಲರನ್ನೂ ಶಿವನು ಸಂರಕ್ಷಿಸುತ್ತಾನೆ. ಅಂತೆಯೇ ಕಾಶಿಯಲ್ಲಿ ವಾಸಗೈದ ಜೀವಿಗಳಿಗೆ ಯಾವ ಭಯವೂ ಇರುವುದಿಲ್ಲ.

ಮೋಕ್ಷದಾಯಕವಾದ ಈ ನಗರದಲ್ಲಿ ಎಲ್ಲರಿಗೂ ಮರಣೋತ್ತರದಲ್ಲಿ ಮುಕ್ತಿಯು ದೊರೆತೇ ದೊರೆಯುತ್ತದೆ. ವ್ಯತ್ಯಾಸವಿಷ್ಟೇ, ಅತಿಯಾದ ಪಾಪವನ್ನಾಚರಿಸಿದವನೂ ಆ ಪಾಪಕರ್ಮ ಮುಗಿಯುವವರೆಗೆ ಕಾಲಭೈರವನು ಕೊಡುವ ಯಾತನೆಯನ್ನನುಭವಿಸಿ ಕಾಲಾಂತರದಲ್ಲಿ ವಿಶ್ವೇಶ್ವರನ ಕೃಪೆಗೆ ಪಾತ್ರನಾಗಿ ಮುಕ್ತಿಯನ್ನು ಪಡೆದರೆ, ತಪಸ್ವಿಯೂ, ಪುಣ್ಯಾತ್ಮನೂ ಆದ ಜೀವಾತ್ಮನು ಶರೀರವನ್ನು ತ್ಯಜಿಸಿದೊಡನೆ ಸದ್ಯಃ ಕೈವಲ್ಯವನ್ನು ಪ್ರಾಪ್ತ ಮಾಡಿಕೊಳ್ಳುವನು. ಇಂತಹ ಪರಮಪಾವನವಾದ ಕಾಶೀಮಹಾಕ್ಷೇತ್ರದಲ್ಲಿ ನೀವುಗಳೆಲ್ಲ ವಾಸ್ತವ್ಯವನ್ನು ಮಾಡಿ, ಪ್ರತಿದಿನ ಗಂಗಾಸ್ನಾನವನ್ನು ಗೈದು, ಇಷ್ಟಲಿಂಗಾರ್ಚನೆಯಲ್ಲಿ ಪಾಲುಗೊಂಡು ಪುನಃ ಸಾಯಂಕಾಲ ನಡೆಯುವ ಧರ್ಮ ಸಭೆಯಲ್ಲಿ ಸಮ್ಮಿಲಿತರಾಗಿ, ಆಧ್ಯಾತ್ಮಿಕ ಆಶೀರ್ವಚನಗಳನ್ನು ಆಲಿಸುತ್ತೀರೆಂದ ಬಳಿಕ ನೀವೆಲ್ಲರೂ ಧನ್ಯಾತ್ಮರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಅನೇಕ ದಿನಗಳಿಂದ ನೀವೆಲ್ಲ ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಪರಕಾಯಸ್ಥಲದ ಬಗ್ಗೆ ಕೂಲಂಕಷವಾಗಿ ತಿಳಿದುಕೊಂಡಿದ್ದೀರಿ. ಇಂದು ಕ್ರಮ ಪ್ರಾಪ್ತವಾದ ಧರ್ಮಾಚಾರ ಸ್ಥಲದ ಬಗ್ಗೆ ವಿವೇಚಿಸೋಣ.

ಈ ಪೂರ್ವದಲ್ಲಿ ಪ್ರತಿಪಾದಿಸಲ್ಪಟ್ಟ ಪರಕಾಯ ಸಂಪನ್ನನಾದ ಶಿವಯೋಗಿಯ ಆಚಾರಕ್ಕೇನೇ ಧರ್ಮವೆಂದು ಕರೆಯುತ್ತಾರೆ. ಅವನ ಆ ಧರ್ಮಗಳು ಲೋಕದ ಜನರಿಗೆ

ಅನುಕರಣೀಯಗಳಾಗಿರುತ್ತವೆ. ಆ ಅನುಕರಣೀಯಗಳಾದ ಧರ್ಮವನ್ನು ಪ್ರತಿಪಾದಿಸುವ ಸ್ಥಲವೇ ಧರ್ಮಾಚಾರಸ್ಥಲ. ಅದನ್ನೇ ಪೂಜ್ಯಪಾದರು–

ತಸ್ಯೈವ ಪರಕಾಯಸ್ಯ ಸಮಾಚಾರೋ ಯ ಇಷ್ಯತೇ।
ಸಧರ್ಮಃ ಸರ್ವಲೋಕಾನಾಮುಪಕಾರಾಯ ಕಲ್ಪ್ಯತೇ॥

(ಸಿ. ಶಿ. ೧೬–೫೮)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಕಾಯ ಶಿವಯೋಗಿಯ ವರ್ತನೆಯೇ ಧರ್ಮವು. ಅದು ಜಗತ್ತಿನ ಸರ್ವ ಜನರಿಗೆ ಉಪಕಾರವಾಗಿ ಸಂಭವಿಸುತ್ತದೆ. ಜಗತ್ತಿನಲ್ಲಿ ಯಾವಾಗಲೂ ದೊಡ್ಡವರ ಆಚರಣೆಯನ್ನು ನೋಡಿ ಸಣ್ಣವರು ಅದರ ಅನುಕರಣೆಯನ್ನು ಮಾಡುತ್ತಾರೆ. ನಾವು ಮಾಡುವ ಉಪದೇಶಕ್ಕಿಂತಲೂ ನಮ್ಮ ವರ್ತನೆಯೇ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಸಣ್ಣಮಕ್ಕಳಿಗೆ ಉಪದೇಶವು ಎಳ್ಳಷ್ಟೂ ತಿಳಿಯುವುದಿಲ್ಲ ಅವು ದೊಡ್ಡವರು ಮಾಡುವುದನ್ನು ನೋಡಿ ತಾವು ಮಾಡಲು ಕಲಿಯುತ್ತವೆ. ಒಂದು ಸಣ್ಣ ಮಗುವನ್ನು ದೇವಸ್ಥಾನಕ್ಕೋ ಅಥವಾ ಗುರುಗಳ ಸಾನ್ನಿಧ್ಯಕ್ಕೋ ಕರೆದುಕೊಂಡು ಹೋದಮೇಲೆ ಅಲ್ಲಿ ಆ ಮಗುವಿಗೆ ದೇವರಿಗೆ ನಮಸ್ಕರಿಸು, ಗುರುಗಳಿಗೆ ನಮಸ್ಕಾರ ಮಾಡು ಎಂಬುದಾಗಿ ಅದೆಷ್ಟು ಸಲ ಹೇಳಿದರೂ ಅದಕ್ಕೆ ಅರ್ಥವಾಗುವುದಿಲ್ಲ. ಆದರೆ ದೊಡ್ಡವನಾದ ಓರ್ವ ವ್ಯಕ್ತಿಯು ತಾನು ಸ್ವತಃ ನಮಸ್ಕಾರವನ್ನು ಮಾಡುತ್ತ ಹೀಗೆ ಮಾಡು ಎಂಬುದಾಗಿ ಆ ಮಗುವಿಗೆ ಹೇಳಲು ಅದು ತಕ್ಷಣದಲ್ಲಿಯೇ ನಮಸ್ಕಾರವನ್ನು ಮಾಡುತ್ತದೆ. ಇಲ್ಲಿ ಚಿಕ್ಕ ಮಗುವಿಗೆ ಉಪದೇಶಕ್ಕಿಂತಲೂ ಆಚರಣೆಯು ಹೆಚ್ಚು ಪರಿಣಾಮಕಾರಿಯಾಗುವುದೆಂಬುದು ಪ್ರತ್ಯಕ್ಷವಾಗಿ ತಿಳಿದುಬರುತ್ತದೆ. ಆದ್ದರಿಂದ ಪರಕಾಯಸ್ಥಲದ ಶಿವಯೋಗಿಯ ಉತ್ತಮವಾದ ಆಚರಣೆಗಳೇ ಲೋಕದ ಜನರಿಗೆ ಧರ್ಮಾಚಾರವೆಂದು ಉಪದೇಶಿಸಲ್ಪಟ್ಟಿದೆ.

''ಸತ್ಯಂ ವದ, ಧರ್ಮಂ ಚರ'' ಎಂಬ ಈ ವೇದವಾಕ್ಯದಲ್ಲಿ ಧರ್ಮವನ್ನು ಆಚರಿಸಬೇಕೆಂಬುದಾಗಿ ಹೇಳಲಾಗಿದೆ. ಶಾಸ್ತ್ರಕಾರರು– ''ಯತೋಽಭ್ಯುದಯ ನಿಶ್ರೇಯಸ ಸಿದ್ಧಿಃ ಸ ಧರ್ಮಃ'' ಎಂಬುದಾಗಿ ಧರ್ಮದ ಲಕ್ಷಣವನ್ನು ಬರೆದಿದ್ದಾರೆ. ಯಾವ ಆಚರಣೆಯಿಂದ ಮನುಷ್ಯನಿಗೆ ಐಹಿಕ ಸುಖದ ಪ್ರಾಪ್ತಿ ಮತ್ತು ಕೊನೆಗೆ ಕೈವಲ್ಯವು ಲಭಿಸುವುದೋ ಅದಕ್ಕೇನೇ ಧರ್ಮವೆಂದು ಕರೆದಿದ್ದಾರೆ. ಸಂಸಾರದಲ್ಲಿಯ ಎಲ್ಲ ಸುಖಗಳೂ ಹಾಗೂ ಸುಖದ ಸಾಧನಗಳು ತನಗೆ ದೊರೆಯಬೇಕೆಂಬ ಇಚ್ಛೆಯು ಎಲ್ಲರಿಗಿರುತ್ತದೆ. ಈ ಸುಖವನ್ನು ಉಪಭೋಗಿಸಿದ ನಂತರ ಒಂದಿಲ್ಲೊಂದು ದಿನ ಇದರ ಬಗ್ಗೆ ತಿರಸ್ಕಾರ ಭಾವನೆಯು ಒಡಮೂಡಿ ಮುಕ್ತಿಯನ್ನು ಪಡೆಯುವ ತೀವ್ರವಾದ ಇಚ್ಛೆಯು ಉತ್ಪನ್ನವಾಗುತ್ತದೆ. ಮನುಷ್ಯ ಜೀವನದ ಅಂತಿಮ ಇಚ್ಛೆಯು ಮೋಕ್ಷವೇ ಆಗಿರುತ್ತದೆ. ಹೀಗಿದ್ದರೂ ಶಿವನು ಸಂಸಾರದ ಜೀವಿಗಳಿಗೆ ಮೊಟ್ಟಮೊದಲು ಭೋಗವನ್ನು ಕೊಡುವ ಕಾರಣವೇನೆಂದರೆ ಅದರಿಂದ ಅವರು ಮುಕ್ತರಾಗಿ ಮುಕ್ತಿಯತ್ತ ಆಕರ್ಷಿತರಾಗಬೇಕೆಂಬುದೇ ಆಗಿದೆ. ಧರ್ಮಮಾರ್ಗದಲ್ಲಿ ನಡೆದುದಾದರೆ ಈ ಭೋಗ ಮೋಕ್ಷಗಳೆರಡೂ ಪ್ರಾಪ್ತವಾಗುವವು.

ಈ ಧರ್ಮಾಚರಣೆಯನ್ನು ಮಾಡುವ ಅಧಿಕಾರವು ಕೇವಲ ಮನುಷ್ಯನಿಗೆ ಮಾತ್ರ ಪ್ರಾಪ್ತವಾಗಿದೆ. ಉಳಿದೆಲ್ಲ ಜನ್ಮಗಳು ಕೇವಲ ಭೋಗಜನ್ಮಗಳು ಆದರೆ ಮನುಷ್ಯನು ಮಾತ್ರ ತಾನು ಮಾಡಿದ ಪ್ರಾಕ್ತನ ಕರ್ಮಗಳ ಫಲವನ್ನು ಅನುಭವಿಸುತ್ತ ಹೊಸ ಕರ್ಮಗಳನ್ನೂ ಸಹ ಮಾಡಬಲ್ಲನು. ಅಂತೆಯೇ ಇವನು ಕರ್ತಾ ಮತ್ತು ಭೋಕ್ತಾ ಇವೆರಡೂ ಆಗಿದ್ದಾನೆ. ಎಂಭತ್ನಾಲ್ಕು ಲಕ್ಷ ಪ್ರಕಾರದ ಜೀವರಾಶಿಗಳಲ್ಲಿ ಹಸ್ತವುಳ್ಳ ಜೀವಿಯೆಂದರೆ ಮನುಷ್ಯನೊರ್ವನೇ. ಉಳಿದೆಲ್ಲ ಪ್ರಾಣಿಗಳಿಗೆ ಕೇವಲ ಕಾಲುಗಳಿರುತ್ತವೆ. ಕೆಲವು ಜೀವಿಗಳಿಗೆ ಎರಡು ಕಾಲುಗಳಿದ್ದರೆ ಬೇರೆ ಜೀವಿಗಳಿಗೆ ನಾಲ್ಕು ಕಾಲುಗಳಿರುತ್ತವೆ. ಇನ್ನು ಕ್ರಿಮಿಕೀಟಾದಿಗಳಿಗೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕಾಲುಗಳಿರುವುದನ್ನು ಕಾಣುತ್ತೇವೆ. ಕೆಲವು ಪ್ರಾಣಿಗಳು ತಮಗೆ ದೊರೆತ ಕಾಲುಗಳನ್ನು ಹಸ್ತರೂಪದಲ್ಲಿ ಉಪಯೋಗಮಾಡಿಕೊಳ್ಳುವುದನ್ನು ಸರ್ವತ್ರ ನೋಡಬಹುದು. ಆದರೆ ಅವು ಕಾಲುಗಳೇ ವಿನಃ ಕೈಗಳಲ್ಲ.

ಇನ್ನು ಮಂಗದ ಬಗ್ಗೆ ವಿಚಾರ ಮಾಡುವುದಾದರೆ ಅದು ನಡೆಯುವಾಗ ನಾಲ್ಕು ಕಾಲುಗಳಿಂದಲೇ ನಡೆಯುತ್ತಿರುತ್ತದೆ. ಯಾವುದಾದರೊಂದು ಪದಾರ್ಥವನ್ನು ತಿನ್ನುವ ಪ್ರಸಂಗ ಬಂದಾಗ ತನ್ನ ಮುಂಗಾಲುಗಳನ್ನು ಹಸ್ತಗಳ ರೂಪದಲ್ಲಿ ಅದು ಬಳಸಿ ಕೊಳ್ಳುತ್ತದೆ. ಹಾಗೂ ಕೆಲವೊಂದು ಪ್ರಸಂಗದಲ್ಲಿ ತನ್ನ ಹಿಂದಿನ ಎರಡೂ ಕಾಲಗಳ ಮೇಲೆ ಎದ್ದು ನಿಂತು ಮನುಷ್ಯನಂತೆ ಓಡಲೂಬಹುದು. ಆದರೆ ಅದು ತಾತ್ಕಾಲಿಕ ಮಾತ್ರ. ಕೊನೆಗೆ ಅದು ಸಹಜವಾಗಿ ನಡೆಯುವಾಗ ಪುನಃ ತನ್ನ ನಾಲ್ಕೂ ಕಾಲುಗಳನ್ನು ಬಳಸಿಕೊಳ್ಳುತ್ತದೆ. ಇದೆಲ್ಲವನ್ನು ಪರ್ಯಾಲೋಚಿಸಿದಾಗ ಹಸ್ತವುಳ್ಳ ಪ್ರಾಣಿಯೆಂದರೆ ಕೇವಲ ಮನುಷ್ಯನೋರ್ವನೇ ! ಇವನಿಗೆ ನಡೆದಾಡಲು ಎರಡು ಕಾಲುಗಳು ಹಾಗೂ ಕರ್ಮವನ್ನು ಮಾಡಲು ಎರಡು ಹಸ್ತಗಳು ಸ್ವತಂತ್ರಗಳಾಗಿರುತ್ತವೆ. ಕೆಲವೊಂದು ಸಂದರ್ಭಗಳಲ್ಲಿ ಈ ಮನುಷ್ಯನು ಹಸ್ತಗಳಿಂದ ಉದ್ಯೋಗಾದಿ ವ್ಯವಹಾರಗಳನ್ನು ಮಾಡುವಾಗ ತನ್ನ ಕಾಲುಗಳನ್ನು ಸಹಾಯಕವಾಗಿ ಬಳಸಿಕೊಳ್ಳುತ್ತಾನೆ. ಆದರೂ ಮುಖ್ಯ ವಾದ ಕರ್ತೃತ್ವವು ಹಸ್ತಗಳಿಗೇ ಪ್ರಾಪ್ತವಾಗಿರುತ್ತದೆ. ಅಂತೆಯೇ ಮನುಷ್ಯನೋರ್ವನೇ ಧರ್ಮಾಚರಣೆಗಳನ್ನು ಮಾಡುವ ಅಧಿಕಾರವನ್ನು ಹೊಂದಿದ್ದಾನೆಂಬುದಾಗಿ ನಿಶ್ಚಯಿಸ ಲಾಗುತ್ತದೆ.

ಹೀಗೆ ಧರ್ಮಾಚರಣೆಯ ಅಧಿಕಾರವನ್ನು ಹೊಂದಿದ ಮನುಷ್ಯನೇ ಒಂದು ವೇಳೆ ಧರ್ಮಾಚರಣೆಯನ್ನು ಮಾಡದೇ ಹೋದರೆ ಅವನು ಪಶುಗಳಿಗೆ ಸಮಾನನಾಗುತ್ತಾನೆ. ಅಂತೆಯೇ ''ಧರ್ಮೇಣ ಹೀನಃ ಪಶುಭಿಃ ಸಮಾನಃ'' ಧರ್ಮಾಚರಣೆಯನ್ನು ಮಾಡದಿರುವ ಮನುಷ್ಯನು ಆಕಾರದಲ್ಲಿ ಮನುಷ್ಯನಂತೆ ತೋರುತ್ತಿದ್ದರೂ ಆತನನ್ನು ಪಶುವೆಂದೇ ಭಾವಿಸಬೇಕು. ಮನುಷ್ಯನು ಇಹಲೋಕ ಯಾತ್ರೆಯನ್ನು ಮುಗಿಸಿ ಪರಲೋಕಕ್ಕೆ ತೆರಳುವಾಗ ಅವನ ಜೊತೆಗೆ ಹೋಗುವಂಥಾದ್ದೆಂದರೆ ಅವನು ಸಂಪಾದಿಸಿದ ಧರ್ಮವೊಂದೇ ! ಅಂತೆಯೇ ಓರ್ವ ಸುಭಾಷಿತಕಾರನು–

ವಿದ್ಯಾಮಿತ್ರಂ ಪ್ರವಾಸೇಷು ಭಾರ್ಯಾಮಿತ್ರಂಗೃಹೇಷು ಚ।
ವ್ಯಾಧಿತಸ್ಯೌಷಧಂ ಮಿತ್ರಂ ಧರ್ಮೋಮಿತ್ರಂಮರಿಷ್ಯತಃ॥

ಹೀಗೆ ಹೇಳಿದ್ದಾನೆ. ತಾತ್ಪರ್ಯವೇನೆಂದರೆ, ಪ್ರವಾಸವನ್ನು ಮಾಡುವಾಗ ವಿದ್ಯೆಯೇ ಮಿತ್ರವು. ಮನೆಯಲ್ಲಿ ಹೆಂಡತಿಯೇ ಮಿತ್ರಳು. ರೋಗಿಯಾದವನಿಗೆ ಔಷಧವೇ ಮಿತ್ರವು. ಇನ್ನು ಸಾಯುತ್ತಿರುವವನಿಗೆ ಧರ್ಮವೇ ಮಿತ್ರವು. ಇಲ್ಲಿ ಅನೇಕ ಉದಾಹರಣೆಗಳ ಮೂಲಕವಾಗಿ ಪರಲೋಕಕ್ಕೆ ಹೋಗುವಾಗ ಧರ್ಮವೇ ನಮ್ಮ ಸಹಾಯಕವೆಂಬುದಾಗಿ ಸ್ಪಷ್ಟಪಡಿಸಲಾಗಿದೆ.

ಓರ್ವ ಮನುಷ್ಯನು ಪ್ರವಾಸವನ್ನು ಗೈಯುತ್ತಿರುವಾಗ, ಈತನು ನಿದ್ರೆಗೈಯ್ಯುತ್ತಿರುವಾಗ ಕಳ್ಳಕಾಕರು ಇವನಲ್ಲಿಯ ವಸ್ತು ಒಡವೆಗಳನ್ನೆಲ್ಲ ಕದ್ದುಕೊಂಡು ಹೋಗಬಹುದು. ಆದರೆ ಇವನಲ್ಲಿರುವ ವಿದ್ಯೆಯನ್ನು ಅದಾರೂ ಕದಿಯಲಾರರು. ವಿದ್ಯಾ ಸಂಪನ್ನನಾದ ವ್ಯಕ್ತಿಯು ಪ್ರವಾಸದಲ್ಲಿ ಏನೆಲ್ಲವನ್ನು ಕಳೆದುಕೊಂಡರೂ ತನ್ನಲ್ಲಿರುವ ವಿದ್ಯೆಯ ಪ್ರಭಾವದಿಂದಾಗಿ ಎಲ್ಲಿಯಾದರೂ ಕೆಲಸ ಕಾರ್ಯಗಳನ್ನು ಮಾಡಿ ಪುನಃ ಧನವನ್ನು ಸಂಪಾದಿಸಿ ಕಳೆದ ವಸ್ತುಗಳನ್ನು ಪಡೆಯಬಹುದು. ಅಂತೆಯೇ ಪ್ರವಾಸಿಗನಿಗೆ ವಿದ್ಯೆಯೇ ಮಿತ್ರನೆಂಬುದಾಗಿ ಹೇಳಬಹುದು.

ಇನ್ನು ಗೃಹಸ್ಥಾಶ್ರಮದಲ್ಲಿರುವವನಿಗೆ ಮನೆಯಲ್ಲಿ ಧರ್ಮಪತ್ನಿಯೇ ಮಿತ್ರಳಾಗಿರುತ್ತಾಳೆ. ಯಾವುದೇ ಜಟಿಲ ಸಮಸ್ಯೆಯು ಬಂದೊದಗಿದಾಗ ಗಂಡನು ತನ್ನ ಹೆಂಡತಿಯೊಂದಿಗೆ ಆಪ್ತಾಲೋಚನೆಯನ್ನು ಮಾಡಿ ನಿರ್ಣಯವನ್ನು ತೆಗೆದುಕೊಳ್ಳುತ್ತಾನೆ. ಹೆಂಡತಿಯು ಕೇವಲ ಹೆಂಡತಿಯೇ ಆಗಿರುವುದಿಲ್ಲ, ಬೇರೆ ಬೇರೆ ಪ್ರಸಂಗಗಳಲ್ಲಿ ಆಕೆಯು ಬೇರೆ ಬೇರೆ ರೂಪದಿಂದ ಗಂಡನಿಗೆ ಸಹಾಯಕಳಾಗಿರುತ್ತಾಳೆ. ಉಣಿಸುವಲ್ಲಿ ತಾಯಿಯಾಗಿ, ಗೂಢಾಲೋಚನೆಯಲ್ಲಿ ಮಂತ್ರಿಯಾಗಿ, ಮನೆಗೆಲಸಗಳಲ್ಲಿ ದಾಸಿಯಾಗಿ, ಸೌಂದರ್ಯದಲ್ಲಿ ಲಕ್ಷ್ಮಿಯಾಗಿ, ಶಯನದಲ್ಲಿ ರಂಭೆಯಾಗಿ, ತಾಳ್ಮೆಯಲ್ಲಿ ಭೂದೇವಿಯಾಗಿ ಹೀಗೆ ಆರು ವಿಧವಾಗಿ ಆಕೆಯು ಗಂಡನಿಗೆ ಸಹಕಾರಿಯಾಗಿರುತ್ತಾಳೆ. ಅಂತೆಯೇ ಇವಳು ಗಂಡನಿಗೆ ನಿಜವಾದ ಮಿತ್ರಳು.

ರೋಗಿಯಾದವನಿಗೆ ಔಷಧವೇ ಮಿತ್ರವು. ಯಾರಾದರೂ ಅಸ್ವಸ್ಥರಾಗಿ ಹಾಸಿಗೆಯನ್ನು ಹಿಡಿದಾಗ ಆ ವ್ಯಕ್ತಿಯ ಅನೇಕ ಜನ ಮಿತ್ರರು ಅವನನ್ನು ಮಾತನಾಡಿಸಲು ಬರುತ್ತಾರೆ. ಯಾರೇ ಬಂದು, ಏನೇ ಮಾತನಾಡಿದರೂ, ರೋಗವು ವಾಸಿಯಾಗುವುದಿಲ್ಲ, ಆದರೆ ರೋಗಿಯ ರೋಗವನ್ನು ಕಳೆದು ಪುನಃ ಅವನಿಗೆ ಆರೋಗ್ಯವನ್ನು ತಂದು ಕೊಡುವಂಥಾದ್ದು ಔಷಧವೇ. ಅಂತೆಯೇ ಸುಭಾಷಿತಕಾರನು ರೋಗಿಯಾದ ವನಿಗೆ ಔಷಧವೇ ಮಿತ್ರವೆಂಬುದಾಗಿ ಹೇಳಿದ್ದಾನೆ.

ಇನ್ನು ಮರಣೋನ್ಮುಖನಾದ ವ್ಯಕ್ತಿಗೆ ಅವನು ಸಂಪಾದಿಸಿದ ಧರ್ಮವೇ ಅವನಿಗೆ ಮಿತ್ರವಾಗಿ ಸಹಾಯಕವಾಗುತ್ತದೆ. ಜೀವಾತ್ಮನು ಶರೀರವನ್ನು ಬಿಟ್ಟು ಹೋಗುವಾಗ ಅವನು ಬೆಳೆಸಿದ ಧನ–ಮನೆ–ವಸ್ತು–ವಾಹನ–ಮತ್ತು ಅವನ ಪರಿವಾರದವರು ಯಾರೂ ಅವನ ಜೊತೆಗೆ ಹೋಗಲಾರರು. ಇಷ್ಟೇ ಅಲ್ಲ ಅತ್ಯಂತ ಪ್ರೀತಿಯಿಂದ

ಲಾಲನೆ–ಪಾಲನೆ ಮಾಡಿದ ದೇಹವೂ ಸಹ ಇಲ್ಲಿಯೇ ಮಣ್ಣಿನಲ್ಲಿ ಮಣ್ಣಾಗಿ ಹೋಗುವುದು. ಅಂತೆಯೇ ''ಧರ್ಮಾನುಗೋ ಗಚ್ಛತಿ ಜೀವ ಏಕಃ'' ಎಂಬ ಸುಭಾಷಿತೋಕ್ತಿಗನುಸಾರವಾಗಿ ಇವನೊಂದಿಗೆ ಹೋಗುವಂಥಾದ್ದು ಧರ್ಮವೊಂದೇ. ಮರಣವು ಶರೀರದ ಧರ್ಮವಾಗಿರೋಣದರಿಂದ ಯಾರೇ ಎಷ್ಟೇ ದಿವಸವಿದ್ದರೂ ಕೊನೆಗೊಂದು ದಿನ ಅವರು ಶರೀರವನ್ನು ಬಿಟ್ಟು ಹೋಗಲೇಬೇಕಾಗುವುದು. ಹೀಗೆ ಎಲ್ಲವನ್ನೂ ತ್ಯಜಿಸಿ ಹೋಗುವಾಗ ನಮಗೆ ಸಹಾಯಕವಾಗುವಂಥಾದ್ದು ಕೇವಲ ಧರ್ಮವು ಮಾತ್ರ. ಆದ್ದರಿಂದ ಪ್ರತಿಯೊಬ್ಬರು ತಮ್ಮ ಜೀವಿತಾವಧಿಯಲ್ಲಿ ಪುಣ್ಯಕಾರ್ಯಗಳನ್ನು ಮಾಡಿ ಧರ್ಮವನ್ನು ಸಂಪಾದಿಸಬೇಕು. ಈ ಧರ್ಮವೇ ಪರಲೋಕದಲ್ಲಿನಮಗೆ ಮಿತ್ರನಂತೆ ಸಹಾಯಕವಾಗುವುದು.

ಇಹಲೋಕದಲ್ಲಿ ಒಂದು ದೇಶದ ವ್ಯಕ್ತಿಯು ಮತ್ತೊಂದು ದೇಶಕ್ಕೆ ಹೋಗುವ ಪ್ರಸಂಗ ಬಂದಾಗ ತನ್ನ ದೇಶದ ಧನವು ಬೇರೆ ದೇಶದಲ್ಲಿ ಚಲಾವಣೆಯಾಗುವುದಿಲ್ಲ ವಾದ್ದರಿಂದ ವಿನಿಮಯ ಬ್ಯಾಂಕಿನಲ್ಲಿ ಈ ಹಣವನ್ನು ತುಂಬಿ ಅಲ್ಲಿ ಚಲಾವಣೆಯಾಗಲಿ ರುವ ಹಣವನ್ನು ತೆಗೆದುಕೊಂಡು ಹೋದಾಗ ಇವನ ಯಾತ್ರೆಯು ಸುಖಕರವಾಗುವುದು. ಅದರಂತೆಯೇ ಈ ಲೋಕದ ಧನವು ಪರಲೋಕದಲ್ಲಿ ಚಲಾವಣೆಯಾಗುವದಿಲ್ಲವಷ್ಟೇ ಅಲ್ಲ, ಈ ಧನವನ್ನು ಪರಲೋಕಕ್ಕೆ ಒಯ್ಯಲೂ ಸಹ ಬರುವುದಿಲ್ಲ. ಆದ್ದರಿಂದ ಇಲ್ಲಿಯ ಹಣವನ್ನು ವ್ಯಯಿಸಿ ಇಲ್ಲಿಯೇ ಸಣ್ಣದೊಡ್ಡ ಧರ್ಮಾನುಷ್ಠಾನಗಳನ್ನು ಮಾಡಿ–ಮಾಡಿಸಿ ಅದರಿಂದ ಪುಣ್ಯರೂಪವಾದ ಧನವನ್ನು ಸಂಗ್ರಹಿಸಿದ್ದರೇ ಮಾತ್ರ ಪರಲೋಕದಲ್ಲಿ ಸುಖವಾಗಿ ಕಾಲಕಳೆಯಬಹುದು. ಅದಿಲ್ಲದಿದ್ದರೆ ಹಣವಿಲ್ಲದ ವ್ಯಕ್ತಿಯು ಯಾತ್ರೆಗೆ ಹೋಗಿ ಅನೇಕ ಕಷ್ಟ–ನಷ್ಟಗಳನ್ನು ಅನುಭವಿಸಿದಂತೆಯೇ ಇವನ ಜೀವನವಾಗುತ್ತದೆ. ಆದ್ದರಿಂದಲೇ ಪರಲೋಕಕ್ಕೆ ಹೋಗುವವನಿಗೆ ಧರ್ಮವೇ ಮಿತ್ರವೆಂಬುದಾಗಿ ಪ್ರತಿಪಾದಿಸಲಾಗಿದೆ.

ಧರ್ಮದ ಮರ್ಮವನ್ನರಿಯದ ಓರ್ವ ಕೃಪಣನು ಉಣ್ಣದೆ–ಉಡದೆ ಸಾಕಷ್ಟು ಧನವನ್ನು ಸಂಪಾದಿಸಿದನು. ಎಂತಹ ಕಠಿಣ ಪ್ರಸಂಗ ಬಂದರೂ ತನಗಾಗಿಯಾಗಲಿ ಮತ್ತು ಅನ್ಯರಿಗಾಗಿ ಆಗಲಿ ಆ ಧನದ ವಿನಿಯೋಗವನ್ನು ಮಾಡಿರಲಿಲ್ಲ. ಒಮ್ಮೆ ಅಸಾಧ್ಯವಾದ ರೋಗದಿಂದ ಬಳಲುತ್ತಿರುವಾಗ ವೈದ್ಯರೊಬ್ಬರು ಬಂದು ಅವನನ್ನು ಪರೀಕ್ಷಿಸಿ ನಿನಗಿರುವ ಈ ರೋಗವು ಉಲ್ಬಣಾವಸ್ಥೆಯಲ್ಲಿದೆ. ಇದೇನು ವಾಸಿಯಾಗುವುದಿಲ್ಲ. ನಿನ್ನ ಆಯುಷ್ಯವೂ ಸಹ ಮುಗಿಯುತ್ತ ಬಂದಿದೆ. ನೀನು ಉಳಿದರೆ ಇನ್ನು ಒಂದೆರಡು ದಿನ ಮಾತ್ರ ಉಳಿಯಬಹುದು ಎಂಬುದಾಗಿ ಹೇಳಿ ಹೊರಟುಹೋದರು. ಆಗ ಮರಣದಿಂದ ಭಯಭೀತನಾದ ಈತನು ನನ್ನಲ್ಲಿರುವ ಈ ಧನವನ್ನು ಯಾರಿಗೂ ಕೊಡದೆ ಇದನ್ನು ಜೊತೆಗೆ ತೆಗೆದುಕೊಂಡು ಹೋಗಲೇಬೇಕೆಂಬುದಾಗಿ ಮನದಲ್ಲಿ ವಿಚಾರಿಸಿ ತನ್ನಲ್ಲಿರುವ ಬೆಳ್ಳಿಯ ನಾಣ್ಯಗಳನ್ನು ಬಂಗಾರದ ನಾಣ್ಯಗಳನ್ನಾಗಿ ಪರಿವರ್ತಿಸಿಕೊಂಡನು. ಮರು ದಿನ ಅರ್ಧ ಡಜನ್ ಬಾಳೆಯಹಣ್ಣನ್ನು ಖರೀದಿಸಿ ತಂದು ಆ ಹಣ್ಣುಗಳನ್ನು ಸಣ್ಣ ಸಣ್ಣ ತುಕುಡಿಗಳನ್ನಾಗಿ ಮಾಡಿ ಪ್ರತಿಯೊಂದು ಹಣ್ಣಿನ ತುಕಡಿಯಲ್ಲಿ ಒಂದೊಂದು ಬಂಗಾರದ ನಾಣ್ಯವನ್ನು ಹುದುಗಿಸಿ ನುಂಗಿಬಿಟ್ಟನು. ನಾಣ್ಯ ಹಾಗೂ ಹಣ್ಣುಗಳಿಂದ ಹೊಟ್ಟೆ

ತುಂಬಿಹೋಯಿತು. ಆಗ ಅವನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕಷ್ಟಪಟ್ಟು ಸಂಗ್ರಹಿಸಿದ ಈ ಸಂಪತ್ತನ್ನು ನನ್ನ ಜೊತೆಗೇನೆ ಒಯ್ಯುತ್ತಿದ್ದೇನೆ. ಇನ್ನೇನು ಮರಣ ಬಂದರೂ ಸರಿಯೇ ಎಂಬುದಾಗಿ ತನ್ನೊಳಗೆ ಉಬ್ಬಿ ಉಬ್ಬಿ ಸಂತೋಷಪಡುತ್ತ ಸತ್ತು ಹೋದನು. ನೋಡಿದಿರಾ ಧರ್ಮಸಂಸ್ಕಾರ ಹೀನನಾದ ವ್ಯಕ್ತಿಯ ಈ ಹೀನ ಜೀವನವನ್ನು! ಯಾವುದನ್ನು ಪರಲೋಕಕ್ಕೆ ತೆಗೆದುಕೊಂಡು ಹೋಗಬೇಕಾಗಿತ್ತೋ ಅಂತಹ ಧರ್ಮವನ್ನು ಸಂಪಾದಿಸದೆ ಕೇವಲ ಇಹಲೋಕದಲ್ಲಿ ಮಾತ್ರ ಚಲಾವಣೆಯಾಗುವ ಧನವನ್ನು ಸಂಗ್ರಹಿಸಿ ಅದನ್ನೂ ಸಹ ಪರಲೋಕಕ್ಕೆ ತೆಗೆದುಕೊಂಡು ಹೋಗುವೆನೆಂಬ ಭ್ರಮೆಯಿಂದ ನುಂಗಿ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಬರಿಗೈಬಂಟನಾಗಿ ಜೀವನವನ್ನು ವ್ಯರ್ಥವಾಗಿಸಿಕೊಂಡನು. ಆದ್ದರಿಂದ ಪ್ರತಿಯೊಬ್ಬರು ದೇಹವನ್ನು ಬಿಡುವುದರೊಳಗಾಗಿ ಧರ್ಮ ಸಂಪಾದನೆಯನ್ನು ಮಾಡಬೇಕು.

ಪುಣ್ಯರೂಪವಾದ ಧರ್ಮವನ್ನು ಸಂಗ್ರಹಿಸಬೇಕಾದರೆ ಏನು ಮಾಡಬೇಕು ? ಹೇಗೆ ವರ್ತಿಸಬೇಕು ಎಂಬ ಜಿಜ್ಞಾಸೆಯುಂಟಾದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಧರ್ಮ ಸಂಪಾದನೆಯ ಮಾರ್ಗವನ್ನು ಬೋಧಿಸಲೋಸುಗ ಪುನಃ

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ॥

(ಸಿ. ಶಿ. ೧೬–೪೯)

ಹೀಗೆ ಉಪದೇಶಿಸಿದ್ದಾರೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜೆ, ಜಪ ಮತ್ತು ಧ್ಯಾನವೆಂಬ ಹತ್ತು ಮಾರ್ಗಗಳು ಧರ್ಮಸಂಪಾದನೆಗೆ ಮೂಲಗಳಾಗಿರುತ್ತವೆಂಬುದು ಪೂಜ್ಯರ ಆಶಯವಾಗಿದೆ.

ಈ ಹತ್ತು ವಿಧವಾದ ಧರ್ಮಮಾರ್ಗಗಳಲ್ಲಿ ಮೊದಲನೆಯದಾದ ಮಾರ್ಗವೇ ಅಹಿಂಸೆಯು. ಅಹಿಂಸೆಯೆಂದರೆ ಯಾವುದೇ ಪ್ರಾಣಿಗೆ ಶರೀರ, ವಾಣಿ ಮತ್ತು ಮನಸ್ಸಿನಿಂದ ದುಃಖವನ್ನುಂಟು ಮಾಡದೇ ಇರುವುದು. ಮನುಷ್ಯನು ಸ್ವಾರ್ಥಿಯಾದ ಪ್ರಾಣಿಯು. ಅಂತೆಯೇ ತಾನು ಸುಖವನ್ನು ಪಡೆಯುವುದಕ್ಕಾಗಿ ಅನ್ಯರನ್ನು ಸದಾ ಪೀಡಿಸುತ್ತಿರುತ್ತಾನೆ. ಮನುಷ್ಯನ ಈ ಪ್ರವೃತ್ತಿಯನ್ನು ನಿಯಂತ್ರಿಸುವುದಕ್ಕಾಗಿಯೇ ಪೂಜ್ಯರು ಅಹಿಂಸಾರೂಪವಾದ ಧರ್ಮವನ್ನು ಪ್ರಪ್ರಥಮವಾಗಿ ಉಪದೇಶಿಸಿದ್ದಾರೆ. ಅಂತೆಯೇ 'ಅಹಿಂಸಾ ಪರಮೋ ಧರ್ಮಃ' ಎಂಬುದಾಗಿಯೂ ಶಾಸ್ತ್ರಗಳು ಉಪದೇಶಿಸಿವೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿ ನಿರ್ಮಾಣಶಕ್ತಿ ಮತ್ತು ವಿನಾಶಕಾರಿ ಶಕ್ತಿಯೆಂಬುದಾಗಿ ಎರಡು ವಿಧ ಶಕ್ತಿಗಳಿರುತ್ತವೆ. ಈತನು ತನ್ನ ಬುದ್ಧಿ ಕುಶಲತೆಯಿಂದ ನವ ನಿರ್ಮಾಣವನ್ನು ಮಾಡಬಲ್ಲನಲ್ಲದೆ, ಇವನ ಬುದ್ಧಿಯಲ್ಲಿ ವಿಕೃತಭಾವನೆಯುಂಟಾದಾಗ ತಾನು ಮಾಡಿದ್ದನ್ನಾಗಲಿ ಅಥವಾ ಅನ್ಯರು ಮಾಡಿದ್ದನ್ನಾಗಲಿ ವಿನಾಶಗೊಳಿಸಲೂ ಬಹುದು. ಸಾಮಾನ್ಯವಾಗಿ ರಚನಾತ್ಮಕ ವಿಚಾರಕ್ಕಿಂತಲೂ ವಿಧ್ವಂಸಕ ವಿಚಾರಗಳೇ ಮನುಷ್ಯನ ಮನಸ್ಸಿನಲ್ಲಿ ತಲೆದೋರುತ್ತಿರುತ್ತವೆ. ಈ ವಿಧ್ವಂಸಕ ವಿಚಾರಧಾರೆಯನ್ನು ಸಂಪೂರ್ಣವಾಗಿ ನಿರ್ನಾಮಗೊಳಿಸಲೋಸುಗವೇ' ಈ ಅಹಿಂಸಾ ಧರ್ಮದ ಪ್ರವೃತ್ತಿಯು.

ಹಿಂಸೆಯೆಂಬ ಶಬ್ದವು ಕೊಲ್ಲು ಎಂಬ ಅರ್ಥದಲ್ಲಿ ರೂಢವಾಗಿದೆ. ಇದು ಅಧರ್ಮವು ''ಮಾಹಿಂಸ್ಯಾತ್ ಸರ್ವಾಭೂತಾನಿ'' ಎಂಬ ವೇದವಾಕ್ಯದಲ್ಲಿ ಯಾವುದೇ ಪ್ರಾಣಿಯನ್ನು ಯಾರೂ ಹಿಂಸಿಸಬಾರದು ಎಂಬುದಾಗಿ ಉಪದೇಶಿಸಲಾಗಿದೆ. ಈ ಜಗತ್ತಿನಲ್ಲಿ ಪ್ರಾಣಿಗಳ ಪ್ರಾಣಹರಣವನ್ನು ಮಾಡುವ ಅಧಿಕಾರವು ಕೇವಲ ರುದ್ರನಿಗೆ ಮಾತ್ರ ಇದೆ. ಈ ಕಾರ್ಯವನ್ನು ಬೇರಾರೂ ಮಾಡುವಂತಿಲ್ಲ, ಬ್ರಹ್ಮ ವಿಷ್ಣುಗಳ ಕಾರ್ಯಗಳಾದ ಸೃಜನ ಮತ್ತು ಪಾಲನೆಗಳನ್ನು ಬೇರೆಯವರೂ ಸಹ ಮಾಡಬಹುದು ಅದರಿಂದ ಯಾವ ದೋಷವೂ ಇಲ್ಲ. ಮನುಷ್ಯನನ್ನೇ ಮೊದಲು ಮಾಡಿಕೊಂಡು ೮೪ ಲಕ್ಷ ಪ್ರಕಾರದ ಜೀವಿಗಳು ತಮ್ಮ ತಮ್ಮ ಸಂತಾನಕ್ಕೆ ಜನ್ಮಕೊಡುತ್ತವೆ. ಇದೂ ಸೃಜನಕಾರ್ಯವೇ. ಈ ಕಾರ್ಯವು ಮೂಲತಃ ಬ್ರಹ್ಮದೇವನದಾಗಿದ್ದರೂ ಜೀವಿಗಳು ಆ ಕಾರ್ಯವನ್ನು ಮಾಡಿದರೆ ಯಾವ ಆಕ್ಷೇಪಣೆ ಇರುವುದಿಲ್ಲ. ಇತ್ತೀಚೆಗೆ ವಿಶ್ವದಲ್ಲಿಯೇ ಜನಸಂಖ್ಯೆಯು ಹೆಚ್ಚುತ್ತಿರುವುದರಿಂದ ಅದನ್ನು ನಿಯಂತ್ರಣಗೊಳಿಸಲೋಸುಗ ''ಹಮ್‌ದೋ ಹಮಾರೆ ದೋ'' ಎಂಬುದಾಗಿ ಕುಟುಂಬ ಕಲ್ಯಾಣ ಮಂತ್ರಾಲಯ ದವರು ಪ್ರಚಾರಮಾಡುತ್ತಲಿದ್ದಾರೆ. ಇಲ್ಲಿ ಈ ಪ್ರತಿಬಂಧನೆಯ ಮುಖ್ಯ ಉದ್ದೇಶವೆಂದರೆ ಸಂರಕ್ಷಿಸುವ ಸಾಮರ್ಥ್ಯವಿಲ್ಲದವರು ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳಿಗೆ ಜನ್ಮಕೊಡಕೂಡದು ಎಂಬುದಾಗಿದೆ. ಮಕ್ಕಳಿಗೆ ಜನ್ಮಕೊಡುವುದೇನೂ ಅಪರಾಧವಲ್ಲ ಎಂಬುದು ಇಲ್ಲಿ ತಿಳಿದುಬರುತ್ತದೆ. ಇದರಂತೆ ಸಂರಕ್ಷಣೆಯ ಕಾರ್ಯವು ಮೂಲತಃ ವಿಷ್ಣು ಪರಮಾತ್ಮನದಾಗಿದ್ದರೂ ತನ್ನ ಕುಟುಂಬದ ಹಾಗೂ ಸಮಾಜದ ಲಾಲನೆ–ಪಾಲನೆಯಲ್ಲಿ ಅನ್ನ–ವಸ್ತ್ರಾದಿಗಳನ್ನಿತ್ತು ಯಾರಾದರೂ ಮಾಡಬಹುದು. ಇಲ್ಲಿಯೂ ಸಹ ಯಾರೂ ಯಾವುದೇ ಆಕ್ಷೇಪವನ್ನು ಮಾಡಲಾರರು. ಆದರೆ ರುದ್ರನ ಕಾರ್ಯವಾದ ಪ್ರಾಣಹರಣ ಕ್ರಿಯೆಯನ್ನು ರುದ್ರನ ಹೊರತಾಗಿ ಬೇರಾರೂ ಮಾಡುವಂತಿಲ್ಲ. ಹಾಗೇನಾದರೂ ಯಾರಾದರೂ ಮಾಡಿದರೆ ಶಿಕ್ಷೆಯು ವಿಧಿಸಲ್ಪಡುತ್ತದೆ. ತನ್ನವರೇ ಆದ ಹೆಂಡತಿ, ಮಕ್ಕಳು, ಅಣ್ಣ–ತಮ್ಮ, ತಂದೆ–ತಾಯಿ ಹೀಗೆ ಪರಿವಾರದ ಯಾವುದೇ ಸದಸ್ಯನನ್ನು ಯಾರಿಗೂ ಕೊಲ್ಲುವ ಅಧಿಕಾರವಿರುವುದಿಲ್ಲ ಇಷ್ಟೇ ಅಲ್ಲ, ತನ್ನನ್ನೇ ತಾನು ಕೊಂದುಕೊಳ್ಳುವ ಹಕ್ಕೂ ಸಹ ಯಾರಿಗೂ ಇರುವುದಿಲ್ಲ. ಯಾವನಾದರೊಬ್ಬನು ಆತ್ಮ ಹತ್ಯೆಯನ್ನು ಮಾಡಿಕೊಳ್ಳುವ ಪ್ರಸಂಗದಲ್ಲಿ ಪೋಲಿಸರ ಕೈಗೆ ಸಿಕ್ಕನೆಂದರೆ ಅವರು ಅವನನ್ನು ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸುತ್ತಾರೆ. ಇವನು ಮಾಡುತ್ತಿರುವ ಅಪರಾಧಕ್ಕಾಗಿ ನ್ಯಾಯಾಲಯವು ಇವನಿಗೆ ಕಠೋರ ಶಿಕ್ಷೆಯನ್ನೂ ಸಹ ವಿಧಿಸಬಹುದು. ಇದೆಲ್ಲವನ್ನು ಪರ್ಯಾಲೋಚಿಸಿದಾಗ ಪ್ರಾಣಿಯ ಪ್ರಾಣಹರಣರೂಪವಾದ ಹಿಂಸೆಯನ್ನು ಯಾರೂ ಮಾಡಬಾರದೆಂಬುದಾಗಿಯೇ ಈ ಅಹಿಂಸಾಧರ್ಮವನ್ನು ವಿಧಿಸಲಾಗಿದೆ. ರುದ್ರನು ಜೀವಿಗಳ ಪ್ರಾಣ ಹರಣ ಮಾಡುವುದಕ್ಕೂ ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಯ ಪ್ರಾಣಹರಣ ಮಾಡುವುದಕ್ಕೂ ಭಾವನೆಯಲ್ಲಿ ಬಹಳಷ್ಟು ವ್ಯತ್ಯಾಸವಿರುತ್ತದೆ. ರುದ್ರನು ತಾನೇ ಮಾಡಿದ ಸೃಷ್ಟಿಯ ನಿಯಮಾನುಸಾರವಾಗಿ ಪ್ರಾಣಿಗಳ ಪ್ರಾಣಹರಣವನ್ನೂ ಮಾಡಿದರೆ ಸಾಮಾನ್ಯ ವ್ಯಕ್ತಿಯು ದ್ವೇಷ, ಲೋಭ, ಕಾಮ, ಮದ, ಮತ್ಸರ ಮುಂತಾದ ದುರ್ಗುಣಗಳಿಂದ ಪ್ರೇರಿತನಾಗಿ ದುರ್ಭಾವನೆ ಯಿಂದ ಪ್ರಾಣಹರಣ ಮಾಡುತ್ತಾನೆ. ಅಂತೆಯೇ ಅವನು ಶಿಕ್ಷೆಗೆ ಗುರಿಯಾಗುತ್ತಾನೆ.

ಹಿಂಸೆಯೆನ್ನುವಂಥಾದ್ದು ಮುಖ್ಯವಾಗಿ ಒಂದೇ ಆಗಿದ್ದರೂ ಅದರ ಬೇರೆ ಬೇರೆ ಕಾರಣಗಳ ಮುಖಾಂತರ ಅದು ಅನಂತ ರೂಪವನ್ನು ತಾಳುತ್ತದೆ. ಯಾರು ಸ್ವತಃ ಪ್ರಾಣಿಗಳನ್ನು ಹಿಂಸಿಸುತ್ತಾರೆಯೋ ಅವರು ಹಿಂಸಕರೇನೋ ನಿಜ, ಆದರೆ ಸ್ವತಃ ತಾನು ಮಾಡದೆ ಅನ್ಯರಿಂದ ಮಾಡಿಸಿದರೂ ಅವನು ಹಿಂಸಕನೆಂದೇ ಪರಿಗಣಿಸಲ್ಪಡುತ್ತಾನೆ. ಇದೂ ಅಲ್ಲದೆ ಹಿಂಸಾಸಕ್ತನಾದ ವ್ಯಕ್ತಿಗೆ ಹಿಂಸೆಯನ್ನು ಮಾಡಲು ಪ್ರಚೋದನೆ ಇಲ್ಲವೆ ಅನುಮೋದನೆ ನೀಡಿದವನೂ ಸಹ ಹಿಂಸಕನೇ ಎಂಬುದಾಗಿ ತಿಳಿದುಕೊಳ್ಳಬೇಕು.

ಮನುಷ್ಯನಲ್ಲಿ ಈ ಹಿಂಸಾ ಪ್ರವತ್ತಿಯು ಉಂಟಾಗಲು ಕಾರಣವೇನು ? ಎಂಬುದರ ಬಗ್ಗೆ ಯೋಗಶಾಸ್ತ್ರದಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಅದರ ಪ್ರಕಾರವಾಗಿ ಮನುಷ್ಯನ ಮನಸ್ಸಿನಲ್ಲಿರುವ ಲೋಭ, ಕ್ರೋಧ ಮತ್ತು ಮೋಹಗಳು ಹಿಂಸೆಗೆ ಮೂಲ ಕಾರಣಗಳೆಂಬುದು ತಿಳಿದುಬರುತ್ತದೆ. ಇವುಗಳಲ್ಲಿ ಮೊದಲನೆಯ ಕಾರಣವೇ ಲೋಭವು. ಸಂಪತ್ತಿನ ಆಶೆಗಾಗಿ ಮನುಷ್ಯನು ಮನುಷ್ಯನನ್ನು ಕೊಲ್ಲುವುದಲ್ಲದೆ ಮೂಕಪ್ರಾಣಿಗಳನ್ನೂ ಸಹ ಕೊಂದುಹಾಕುತ್ತಾನೆ. ಆ ಪ್ರಾಣಿಗಳ ಚರ್ಮ, ಮಾಂಸ, ಕೋಡು ಮತ್ತು ಕೋರೆಹಲ್ಲುಗಳ ಮಾರಾಟದಿಂದ ಅಪಾರವಾದ ಸಂಪತ್ತು ದೊರೆಯುವುದರಿಂದ ಈ ಹಿಂಸೆಯಲ್ಲಿ ತೊಡಗುತ್ತಾನೆ.

ಇನ್ನು ಎರಡನೆಯ ಕಾರಣವೇನೆಂದರೆ ಕ್ರೋಧವು. ಕ್ರೋಧಾಕ್ರಾಂತನಾದ ಮನುಷ್ಯನು ಕುರುಡನಾಗುತ್ತಾನೆ. ಅಂದರೆ ವಿವೇಕವನ್ನು ಕಳೆದುಕೊಳ್ಳುತ್ತಾನೆ. ಈ ಕುರುಡುತನದಲ್ಲಿಯೇ ತಾನು ಮಾಡುವ ಅಧರ್ಮದ ಅರಿವಿಲ್ಲದಾಗಿ ಹಿಂಸೆಯಲ್ಲಿ ಪ್ರವೃತ್ತನಾಗುತ್ತಾನೆ. ಈ ತೆರನಾಗಿ ಕ್ರೋಧಭಾವನೆಯು ಮನುಷ್ಯನನ್ನೂ ಹಿಂಸಕನನ್ನಾಗಿ ಮಾಡುತ್ತದೆ. ಇನ್ನು ಹಿಂಸೆಯ ಮೂರನೇ ಕಾರಣವೇ ಮೋಹವು. ಯಜ್ಞ ಯಾಗಾದಿಗಳಲ್ಲಿ ಪ್ರಾಣಿ ಹಿಂಸೆಯನ್ನು ಮಾಡಿದಾಗ ಆದರಿಂದ ತನಗೆ ಸ್ವರ್ಗಾದಿ ಲೋಕಗಳು ದೊರೆಯುವುವೆಂಬ ಮೋಹದಿಂದ ಹಿಂಸೆಯನ್ನು ಮಾಡುತ್ತಾನೆ, ಇದೂ ಅಲ್ಲದೆ ಸ್ತ್ರೀ ಮೋಹದಿಂದಲೂ ಸಹ ಅನೇಕಸಾರೆ ಮನುಷ್ಯನು ಹಿಂಸೆಯಲ್ಲಿ ಪ್ರವೃತ್ತ ನಾಗುವುದುಂಟು.

ಯಜ್ಞದಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಾಣಿಹಿಂಸೆಯು ಮನುಷ್ಯನ ಸ್ವಾಭಾವಿಕ ಹಿಂಸಾ ಪ್ರವೃತ್ತಿಯನ್ನು ಕಡಿಮೆಮಾಡಲೋಸುಗ ಎಂಬುದಾಗಿ ತಿಳಿದುಕೊಳ್ಳಬೇಕು. ಅಂದರೆ ಯಾವಾಗ ಬೇಕಾದಾಗ ಪ್ರಾಣಿ ಹಿಂಸೆ ಮಾಡುತ್ತಿರುವ ಮನುಷ್ಯನಿಗೆ ಪ್ರತಿ ಬಂಧನೆ ಯನ್ನು ಮಾಡಿ ಇಂತಹ ದೊಡ್ಡ ಯಜ್ಞಸಮಾರಂಭದಲ್ಲಿ ಮಾತ್ರ ಪ್ರಾಣಿ ಹಿಂಸೆಯನ್ನು ಮಾಡಬಹುದೆಂಬುದಾಗಿ ಹೇಳಿ ಮನುಷ್ಯನ ಸಹಜ ಪ್ರವೃತ್ತಿಗೆ ಕಡಿವಾಣವನ್ನು ಹಾಕ ಲಾಗಿದೆ. ಆದ್ದರಿಂದ ಪ್ರಾಣಿಹಿಂಸೆಯನ್ನು ವಿಧಿಸಿರುವ ವೇದಮಂತ್ರಗಳ ತಾತ್ಪರ್ಯವು ಹಿಂಸೆಯಲ್ಲಿರದೆ ಅಹಿಂಸಾತತ್ತ್ವವನ್ನು ಪ್ರತಿಪಾದಿಸುವುದರಲ್ಲಿದೆ ಎಂಬುದಾಗಿ ತಿಳಿದು ಕೊಳ್ಳಬೇಕು.

ಈ ಪೂರ್ವದಲ್ಲಿ ವಿವರಿಸಿದಂತೆ ಲೋಭ, ಕ್ರೋಧ ಮತ್ತು ಮೋಹಗಳು ಹಿಂಸಾಪ್ರವೃತ್ತಿಯ ಮೂಲ ಕಾರಣಗಳಾಗಿರುತ್ತವೆ. ಯೋಗಶಾಸ್ತ್ರದ ಪ್ರಕಾರವಾಗಿ ಈ

ಹಿಂಸೆಯ ಕಾರಣ, ಉಪಕಾರಣಗಳ ಮೂಲಕವಾಗಿ ಇದು ಎಂಭತ್ತು ಪ್ರಕಾರವಾಗಿ ಸಂಭವಿಸುತ್ತದೆ. ಹೀಗೆ ಹಿಂಸೆಯ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳು ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರೋಣದರಿಂದ ಯಾವುದೇ ಪ್ರಕಾರದ ಹಿಂಸೆಯು ಆಗಲಾರದಂತೆ ನಡೆದುಕೊಳ್ಳುವುದೇ ಅಹಿಂಸಾವ್ರತವು. ಹಿಂಸೆಯ ಮತ್ತು ಅಹಿಂಸೆಯ ಹೆಚ್ಚಿನ ವಿಚಾರಗಳನ್ನು ನಾಳೆಯ ದಿನ ನಿರೂಪಿಸೋಣ ಎಂಬಲ್ಲಿಗೆ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಆಗಷ್ಟ್, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಧರ್ಮಾಚಾರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ,

ಶ್ರೀ ಕಾಶೀಮಹಾಕ್ಷೇತ್ರದಲ್ಲಿ ಶ್ರೀ ಮಹಾಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ಶಾಸ್ತ್ರಕಾರರು ಕಾಶೀಕ್ಷೇತ್ರಕ್ಕೆ 'ಕಲಿಯುಗದ ಕಾಮಧೇನು' ಎಂದು ಕರೆದಿದ್ದಾರೆ. ಕಾಮಿತಾರ್ಥವನ್ನು ಕರುಣಿಸುವುದಕ್ಕೆ ಕಾಮಧೇನು ಎಂದು ಹೆಸರು. ಸ್ವರ್ಗಲೋಕದಲ್ಲಿರುವ ಕಾಮಧೇನು ಕಾಮಿತಾರ್ಥವನ್ನು ಅನುಗ್ರಹಿಸುವಂತೆ ಭೂಲೋಕದಲ್ಲಿ ಕಾಶೀಕ್ಷೇತ್ರವೂ ಸಹ ಭಕ್ತರ ಅಭೀಪ್ಸೆಗಳನ್ನು ಪೂರ್ಣಗೊಳಿಸೋಣದ ರಿಂದ ಇದೂ ಸಹ ಒಂದು ಭೂಲೋಕದ ಕಾಮಧೇನುವಿದ್ದಂತೆಯೇ. ಅತ್ಯಂತ ದುರ್ಲಭವಾದ ಎಲ್ಲರಿಗೂ ಬೇಕಾಗಿರುವ ಅಂತೆಯೇ ಎಲ್ಲರ ಪರಮ ಪುರುಷಾರ್ಥವಾದ ಮೋಕ್ಷವನ್ನು ಸರ್ವರಿಗೂ ಅನುಗ್ರಹಿಸುವ ಕಾರಣದಿಂದ ಇದು ಕಾಮಧೇನುವಲ್ಲದೆ ಮತ್ತೇನು ?

ಈ ಕ್ಷೇತ್ರದ ಮಹಿಮೆಯನ್ನು ವರ್ಣಿಸುತ್ತ ಶಾಸ್ತ್ರಕಾರರು– ''ಯೋಗೋಽತ್ರ ನಿದ್ರಾ, ಜಪಃ ಪ್ರಜಲ್ಪಃ ಸ್ವೇಚ್ಛಾಶನಂ ನೈವೇದ್ಯಂ, ಶಯನಂ ಪ್ರಣಾಮಃ'' ಎಂಬುದಾಗಿ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ಕಾಶೀಕ್ಷೇತ್ರಕ್ಕೆ ಬಂದು ಇಲ್ಲಿ ಕೇವಲ ನಿದ್ರೆಯನ್ನು ಮಾಡಿದರೂ ಯೋಗ ಸಮಾಧಿಯ ಫಲವು ಪ್ರಾಪ್ತವಾಗುತ್ತದೆ. ಇಲ್ಲಿ ಏನನ್ನಾದರೂ ಮಾತನಾಡುತ್ತ ಕುಳಿತರೆ ಅವನಿಗೆ ಜಪ ಮಾಡಿದ ಫಲವು ಪ್ರಾಪ್ತವಾಗುತ್ತದೆ. ಅದರಂತೆ ಇಲ್ಲಿ ಕುಳಿತು ತಾನು ಆಹಾರವನ್ನು ಸೇವಿಸಿದರೆ ದೇವರಿಗೆ ನೈವೇದ್ಯವನ್ನು ಸಮರ್ಪಿಸಿದ ಫಲವು ಪ್ರಾಪ್ತವಾಗುತ್ತದೆ. ಇನ್ನು ಈ ಕ್ಷೇತ್ರದಲ್ಲಿಸುಮ್ಮನೆ ಒರಗಿದರೆ ಅವನಿಗೆ ಸಾಷ್ಟಾಂಗ ಪ್ರಣಾಮದ ಫಲವೂ ದೊರೆಯುವುದು. ಕೇವಲ ಊಟ, ಹರಟೆ, ಶಯನ ಮತ್ತು ನಿದ್ರೆಗಳೆಂಬ ದೈನಂದಿನ ವ್ಯವಹಾರಗಳನ್ನು ಮಾಡಿದ ಮಾತ್ರಕ್ಕೆ ಇಷ್ಟೊಂದು ಫಲಪ್ರಾಪ್ತಿಯಾಗುತ್ತಿರುವಾಗ ಇನ್ನು ಈ ಕ್ಷೇತ್ರದಲ್ಲಿ ಇದ್ದು ಯೋಗಾಭ್ಯಾಸಾದಿಗಳನ್ನು ಮಾಡಿದರೆ ಅದೆಷ್ಟು ಫಲವು ದೊರಕಲಿಕ್ಕಿಲ್ಲ ? ಆದ್ದರಿಂದ ಕಾಶೀ ಕ್ಷೇತ್ರದಲ್ಲಿ ವಾಸಿಸಿ ಸ್ವಲ್ಪೇ ಧರ್ಮಕಾರ್ಯವನ್ನಾಚರಿಸಿದರೂ ಸಹ ಅದು ಮಹಾಫಲವನ್ನು ಕೊಡು ವಂಥಾದ್ದಾಗುತ್ತದೆ.

ನಿನ್ನೆಯ ದಿನ ಧರ್ಮಾಚಾರ ಸ್ಥಲದಲ್ಲಿ ಬರುವ ಅಹಿಂಸೆ ವಿಷಯಕವಾಗಿ ಸಾಕಷ್ಟು ಶ್ರವಣ ಮಾಡಿದ್ದೀರಿ. ಮನುಷ್ಯನು ಧಾರ್ಮಿಕನಾಗಬೇಕಾದರೆ ಅವನು ಮೊಟ್ಟಮೊದಲು ಅಹಿಂಸೆಯ ಪಾಲನೆಯನ್ನು ಮಾಡಬೇಕಾಗುವುದು. ನಿನ್ನೆಯ ದಿನ ನೀವೆಲ್ಲ ಕೇಳಿದಂತೆ ಮನುಷ್ಯನು ಲೋಭ, ಕ್ರೋಧ ಹಾಗೂ ಮೋಹಗಳ ಮೂಲಕವಾಗಿ ಹಿಂಸಕನಾಗುತ್ತಾನೆ.

ಈ ದುರ್ಗುಣಗಳು ಎಲ್ಲಿಯವರೆಗೆ ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುವುವೋ ಅಲ್ಲಿಯವರೆಗೆ ಹಿಂಸೆಯು ನಿಲ್ಲಲು ಸಾಧ್ಯವಾಗುವುದಿಲ್ಲ. ರೋಗದ ನಿಜವಾದ ಕಾರಣವನ್ನರಿಯದೇ ಅದೆಷ್ಟೇ ಉಪಚಾರವನ್ನು ಮಾಡಿದರೂ ಅದು ವಾಸಿಯಾಗದಿರುವಂತೆ ಹಿಂಸೆಯ ಮೂಲಕಾರಣಗಳಾದ ಲೋಭಾದಿಗಳನ್ನು ಸಂಪೂರ್ಣವಾಗಿ ನಿವೃತ್ತಿಗೊಳಿಸಿಕೊಳ್ಳದೆ ಅಹಿಂಸಕನಾಗಲು ಸಾಧ್ಯವಾಗುವುದಿಲ್ಲ.

ಯಾವುದೊಂದು ಪ್ರಾಣಿಯ ಪ್ರಾಣಘಾತ ಮಾಡುವುದು ಹಿಂಸೆ ಏನೋ ನಿಜ. ಆದರೆ ಯಾರಿಗಾದರೂ ಅವಾಚ್ಯ ಶಬ್ದಗಳನ್ನು ಬಳಸಿ ಅವರ ಮನಸ್ಸನ್ನು ನೋಯಿಸಿದರೆ ಅದು ಸಹ ಹಿಂಸೆಯೇ. ಇದರಂತೆ ಮನಸ್ಸಿನಲ್ಲಿ ಮತ್ತೊಬ್ಬರ ಬಗ್ಗೆ ಅನಿಷ್ಟ ಚಿಂತನೆಯನ್ನು ಮಾಡುವುದೂ ಸಹ ಹಿಂಸೆಯೆನಿಸಿಕೊಳ್ಳುತ್ತದೆ. ಹೀಗೆ ಶಾರೀರಿಕ, ವಾಚಿಕ ಮತ್ತು ಮಾನಸಿಕವೆಂಬುದಾಗಿ ಹಿಂಸೆಯು ಮುಖ್ಯವಾಗಿ ಮೂರು ಪ್ರಕಾರವಾಗಿರುತ್ತದೆ. ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳು ಪರಿಶುದ್ಧವಾಗದ ಹೊರತು ಪರಮಾತ್ಮನ ಕೃಪೆಯು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಈಶ್ವರಕೃಪೆಯನ್ನು ಪಡೆದುಕೊಳ್ಳಲೋಸುಗ ತ್ರಿಕರಣ ಪೂರ್ವಕವಾಗಿ ಅಹಿಂಸಾವ್ರತವನ್ನು ಪರಿಪಾಲನೆ ಮಾಡಿದಾಗಲೇ ಧಾರ್ಮಿಕನೆನಿಸಿಕೊಳ್ಳುವನು.

ಸಾಮಾನ್ಯವಾಗಿ ಮನುಷ್ಯನು ಹಿಂಸೆಯಲ್ಲಿ ಪ್ರವೃತ್ತನಾದಾಗ ನಾನು ಏನು ಮಾಡುತ್ತಾ ಇದ್ದೇನೆ ? ಇದರ ಪರಿಣಾಮವೇನಾಗಬಹುದು ? ಎಂಬುದರ ಬಗ್ಗೆ ಸರಿಯಾದ ತಿಳುವಳಿಕೆಯು ಇರುವುದಿಲ್ಲ. ಯಾರಿಂದಲಾದರೂ ಯೋಗ್ಯವ್ಯಕ್ತಿಯಿಂದ ಅದರ ಬಗ್ಗೆ ಪರಿಪೂರ್ಣ ತಿಳುವಳಿಕೆಯುಂಟಾದಾಗ ಎಂತಹ ಹಿಂಸಕನೂ ಸಹ ಅಹಿಂಸಕನಾಗಲು ಸಾಧ್ಯವಾಗುತ್ತದೆ. ಅಂತಹ ಎಷ್ಟೋ ಘಟನೆಗಳು ಈ ದೇಶದಲ್ಲಿ ನಡೆದುಹೋಗಿವೆ. ಅಂಗುಲಿಮಾಲನೆಂಬ ಘೋರ ಹಿಂಸಕನು ಭಗವಾನ್‌ಬುದ್ಧನ ಉಪದೇಶಾಮೃತವನ್ನು ಆಲಿಸಿ ಕೊನೆಗೆ ತನ್ನ ಹಿಂಸಾಪ್ರವೃತ್ತಿಯನ್ನು ಸಂಪೂರ್ಣವಾಗಿ ತ್ಯಜಿಸಿ ಬುದ್ಧನ ಪರಮ ಶಿಷ್ಯನಾದನು. ವಾಲ್ಯಾ ಎಂಬ ಹಿಂಸಾಪ್ರವೃತ್ತಿಯ ದಾರಿಬಡಕ ಧರೋಡೆಖೋರನು ನಾರದ ಮಹರ್ಷಿಯ ಸಹವಾಸದಿಂದ ವಾಲ್ಮೀಕಿ ಮಹರ್ಷಿಯೆಂದು ಪ್ರಸಿದ್ಧನಾದನಲ್ಲದೆ ಅತ್ಯಂತ ಅಹಿಂಸಕನಾಗಿಯೂ ಪರಿವರ್ತನೆ ಗೊಂಡನು. ಇದೇ ಪ್ರಕಾರವಾಗಿ ಮಾತಂಗತಮ್ಮನೆಂಬ ಓರ್ವ ಕ್ರೂರಿಯು ಸುಜ್ಞಾನದೇವರ ಸಹವಾಸದಿಂದಾಗಿ ತನ್ನ ಪೂರ್ವದ ಕುಕರ್ಮಗಳನ್ನು ತ್ಯಜಿಸಿ ಸುಜ್ಞಾನದೇವರ ಪರಮ ಶಿಷ್ಯನಾದನು. ಈ ಎಲ್ಲ ಘಟನೆಗಳಲ್ಲಿ ಅತಿಹಿಂಸಕನಾದ ವ್ಯಕ್ತಿಯೇ ತಿಳಿವಳಿಕೆ ಬಂದಾಗ ಸಂಪೂರ್ಣವಾಗಿ ಅಹಿಂಸಕನಾದನೆಂಬ ಸಂಗತಿಯು ತಿಳಿದು ಬರುತ್ತದೆ. ಈ ತೆರನಾಗಿ ಇದರ ರಹಸ್ಯಾರ್ಥವನ್ನು ತಿಳಿದು ಪ್ರತಿಯೊಬ್ಬರೂ ಮೊದಲು ಅಹಿಂಸಾ ಧರ್ಮವನ್ನು ಪರಿಪಾಲಿಸಬೇಕೆಂದು ಪೂಜ್ಯರು ಆದೇಶವಿತ್ತಿದ್ದಾರೆ.

ಸತ್ಯವು ಜಗತ್ತಿನ ಆಧಾರಸ್ತಂಭವಾಗಿರುತ್ತದೆ. ಅಂತೆಯೇ ಒಬ್ಬ ಸುಭಾಷಿತಕಾರನು–

ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇನ ತಪತೇ ರವಿಃ।
ಸತ್ಯೇನ ವಾಯವೋ ವಾಂತಿ ಸರ್ವಂ ಸತ್ಯೇ ಪ್ರತಿಷ್ಠಿತಮ್॥

ಹೀಗೆ ಹೇಳಿದ್ದಾನೆ. ಅವನ ಈ ಅಭಿಪ್ರಾಯದಂತೆ ಈ ಪೃಥ್ವಿಯು ಸತ್ಯದ ಮೇಲೆ ನಿಂತುಕೊಂಡಿದೆ. ಸತ್ಯದಿಂದಲೇ ಸೂರ್ಯನು ಪ್ರತಾಪವುಳ್ಳವನಾಗಿದ್ದಾನೆ. ವಾಯುವು ಬೀಸಲು ಸತ್ಯವೇ ಕಾರಣವು ಆದ್ದರಿಂದ ಸರ್ವವೆಲ್ಲವೂ. ಸತ್ಯದಲ್ಲಿಯೇಪ್ರತಿಷ್ಠೆಗೊಂಡಿದೆ. ಪುರಾಣಗಳಲ್ಲಿ ಪೃಥ್ವಿಯು ಆದಿಶೇಷನ ಹೆಡೆಯ ಮೇಲೆ ಇದೆಯೆಂಬುದಾಗಿ ವರ್ಣಿಸಲಾಗಿದೆ. ಶೇಷವೆಂಬ ಶಬ್ದಕ್ಕೆ ಆದಿಶೇಷನೆಂಬ ಅರ್ಥವಾಗುತ್ತಿದ್ದರೂ ಎಲ್ಲವೂ ಅಳಿದ ಬಳಿಕ ವಸ್ತುವಿಗೆ ಶೇಷವೆಂತಲೂ ಕರೆಯುತ್ತಾರೆ. ಎಲ್ಲವೂ ಅಳಿದ ಬಳಿಕ ಉಳಿಯು ವಂಥಾದ್ದು ಸತ್ಯವೇ. ಸತ್ಯವೆಂದರೆ ಸಾಕ್ಷಾತ್ ಶಿವನೇ ಎಂದರ್ಥ. ಆದ್ದರಿಂದ ಪ್ರಪಂಚದ ಸರ್ವವೆಲ್ಲಕ್ಕೂ ಈ ಸತ್ಯವೇ ಆಧಾರವೆಂಬುದಾಗಿ ತಿಳಿದುಕೊಳ್ಳಬೇಕು.

ಅಹಿಂಸಾದಿ ಉಳಿದೆಲ್ಲ ಧರ್ಮಗಳನ್ನು ಆಚರಿಸುತ್ತಿದ್ದರೂ ಸತ್ಯವೊಂದನ್ನು ಆಚರಿಸದಿದ್ದರೆ ಅವನ ಎಲ್ಲ ಧರ್ಮಾಚರಣೆಗಳು ವ್ಯರ್ಥವಾಗಿ ಹೋಗುತ್ತವೆ. ಆದ್ದರಿಂದ ದೊಡ್ಡ ದೊಡ್ಡ ಧರ್ಮಾಚರಣೆಯನ್ನು ಆಚರಿಸುವುದು ಅಸಾಧ್ಯವಾದರೂ ಸತ್ಯ ನುಡಿಯುವುದನ್ನು ಮಾತ್ರ ಎಂದಿಗೂ ಬಿಡಬಾರದು.

ಸತ್ಯವೊಂದನ್ನು ಹಿಡಿದ ಹರಿಶ್ಚಂದ್ರನಿಗೆ ಜೀವನದಲ್ಲಿ ಅನೇಕ ತೊಂದರೆ ಗಳುಂಟಾದರೂ ಕೊನೆಗೆ ಆತನೇ ಜಯಶಾಲಿಯಾದನು. ಈತನ ಸತ್ಯಸಂಧತೆಯ ಮುಂದೆ ಪರಾಭವವನ್ನು ಅನುಭವಿಸಿದ ವಿಶ್ವಾಮಿತ್ರನು ತನ್ನ ಎಲ್ಲ ತಪಸ್ಸಿನ ಫಲವನ್ನು ಇವನಿಗೆ ಧಾರೆಯೆರೆದು ತಾನು ಬರಿಗೈಯ್ಯವನಾಗಿದ್ದು ಸರ್ವರಿಗೂ ತಿಳಿದ ವಿಷಯವೇ. ಅಂತೆಯೇ ವೇದಗಳು, 'ಸತ್ಯಮೇವ ಜಯತೆ' ಎಂಬುದಾಗಿ ಉಪದೇಶಿಸಿವೆ. ನಮ್ಮ ರಾಷ್ಟ್ರದ ಧ್ಯೇಯ ವಾಕ್ಯವಾದರೂ ಇದೇ ಆಗಿರುತ್ತದೆ.

ಒಂದು ಊರಿನಲ್ಲಿ ತಂದೆಗೆ ಒಬ್ಬನೇ ಒಬ್ಬ ಮಗನಿದ್ದ. ಅವನು ಯಾವಾಗಲೂ ಅಸತ್ಯವನ್ನೇ ನುಡಿಯುತ್ತಿದ್ದನು. ಮನೆಯವರೆಲ್ಲರೂ ಅವನಿಂದ ಬಹಳಷ್ಟು ಬೇಸರಗೊಂಡಿದ್ದರು. ಒಂದು ಸಾರೆ ಅವರ ಊರಿಗೆ ಸತ್ಯಹರಿಶ್ಚಂದ್ರನ ನಾಟಕವು ಬಂದಿತು. ಆಗ ಈ ಹುಡುಗನ ತಂದೆಯು ಅವನ ಕೈಯಲ್ಲಿ ಹತ್ತು ರೂಪಾಯಿಗಳನ್ನು ಕೊಟ್ಟು ''ಹೋಗು ಸತ್ಯ ಹರಿಶ್ಚಂದ್ರನ ನಾಟಕ ಬಂದಿದೆ. ಅದನ್ನು ನೋಡಿಯಾದರೂ ಸುಳ್ಳುಹೇಳುವುದನ್ನು ಬಿಡು'' ಎಂಬುದಾಗಿ ಹೇಳಿ ಕಳಿಸಿಕೊಟ್ಟನು. ಈ ಹುಡುಗನು ನಾಟಕ ಥೇಟರನ್ನು ಪ್ರವೇಶಿಸುವ ಹೊತ್ತಿಗಾಗಲೇ ನಾಟಕವು ಪ್ರಾರಂಭವಾಗಿ ಬಿಟ್ಟಿತ್ತು. ಈತನು ತನ್ನ ಸ್ಥಾನದಲ್ಲಿ ಕುಳಿತು ನೋಡುತ್ತಿರುವಾಗ–ವಿಶ್ವಾಮಿತ್ರನ ಕಾಟದಿಂದಾಗಿ ರಾಜಾ ಹರಿಶ್ಚಂದ್ರನು ರಾಜ್ಯವನ್ನು ಮತ್ತು ಹೆಂಡತಿ ಮಕ್ಕಳನ್ನು ಕಳೆದುಕೊಂಡು ಹೊಲೆಯನಿಗೆ ಆಳಾಗಿ ಸ್ಮಶಾನವನ್ನು ಕಾಯುತ್ತಿರುವ ದೃಶ್ಯವು ಬಂದಿತು. ಆಗ ಆ ಹುಡುಗನು ಪಕ್ಕದಲ್ಲಿ ಕುಳಿತಿರುವ ಯಜಮಾನನನ್ನು ಕುರಿತು ''ಅಜ್ಜಾ! ಇವನಾರು ? ಇವನಿಗೆ ಈ ಪರಿಸ್ಥಿತಿಯು ಬರಲು ಕಾರಣವೇನು ?'' ಎಂಬುದಾಗಿ ಪ್ರಶ್ನಿಸಿದನು. ಆಗ ಆ ಯಜಮಾನನು ''ನೀನು ಈಗ ಬಂದಿರುವಿಯಾ ತಮ್ಮ ! ಈತನು ಹರಿಶ್ಚಂದ್ರ ಮಹಾರಾಜನು. ಸತ್ಯವನ್ನು ನುಡಿಯುವ ಹಟಹಿಡಿದದ್ದಕ್ಕಾಗಿ ವಿಶ್ವಾಮಿತ್ರನು ಇವನಿಗೆ ಈ ಪರಿಸ್ಥಿತಿಯನ್ನು ತಂದೊಡ್ಡಿದ್ದಾನೆ.'' ಎಂಬುದಾಗಿ ನಾಟಕದ ಪ್ರಾರಂಭದಿಂದ ಹಿಡಿದು

ಪ್ರಸ್ತುತ ಸನ್ನಿವೇಶ ದವರೆಗೆ ವಿವರಿಸಿದನು. ಇದನ್ನು ಕೇಳಿದ ಆ ಹುಡುಗನು ''ಅಯ್ಯೋ ಬುದ್ಧಿಗೇಡಿಯಾದ ಹರಿಶ್ಚಂದ್ರನೇ, ಸತ್ಯಹೇಳುವುದರಿಂದ ಏನು ಪ್ರಯೋಜನವಿದೆ ? ಬೇಡಪ್ಪಾ ಬೇಡ, ಈ ಕಷ್ಟವನ್ನು ನೋಡಲಾಗುವುದಿಲ್ಲ'' ಎಂದು ನುಡಿಯುತ್ತ ಕುಳಿತಲ್ಲಿಯೇ ಕಣ್ಣು ಮುಚ್ಚಿಕೊಂಡ. ಆಗಲೇ ಮಧ್ಯರಾತ್ರಿ ಸಮೀಪಿಸುತ್ತಲಿತ್ತು. ಇವನು ಕಣ್ಣುಮುಚ್ಚಿದೊಡನೆ ನಿದ್ರೆಯು ಆವರಿಸಿಬಿಟ್ಟಿತು. ಯಾವಾಗ ಇವನು ನಿದ್ರೆಯಿಂದ ಎಚ್ಚರಾದನೋ ಆಗ ನಾಟಕವೆಲ್ಲ ಮುಗಿದುಹೋಗಿ ಜನರೆಲ್ಲ ಎದ್ದು ತಮ್ಮ ತಮ್ಮ ಮನೆಗಳತ್ತ ಹೊರಟಿದ್ದರು. ಆಗ ಈ ಹುಡುಗನೂ ಸಹ ಲಗುಬಗೆಯಿಂದ ಥೇಟರಿನಿಂದ ಹೊರಬಂದು ಮನೆಗೆ ಬಂದು ತಲುಪಿದನು.

ಈತನು ಬರುತ್ತಲೇ ಇವನ ತಂದೆಯು ಮಗುವನ್ನು ಕುರಿತು ''ಏನು ಮಗು ? ಸತ್ಯಹರಿಶ್ಚಂದ್ರನ ನಾಟಕವು ಹೇಗಿತ್ತು ?'' ಎಂಬುದಾಗಿ ಬಹಳಷ್ಟು ಹರ್ಷದಿಂದಲೇ ಪ್ರಶ್ನಿಸಿದನು. ಆಗ ಆ ಹುಡುಗನು ''ಅಪ್ಪಾ ! ಆ ನಾಟಕವನ್ನು ನಾನು ನೋಡಲು ಹೋಗಬಾರದಿತ್ತು. ಅದಾವನೋ ರಾಜಾ ಹರಿಶ್ಚಂದ್ರನಂತೆ, ಸತ್ಯವನ್ನು ಹೇಳುವ ಹಟಹಿಡಿದ ಕಾರಣ ಆತನು ತನ್ನ ರಾಜ್ಯವನ್ನು, ಹೆಂಡತಿ ಮಕ್ಕಳನ್ನು ಕಳೆದುಕೊಂಡು ಸ್ಮಶಾನದಲ್ಲಿ ಹೊಲೆಯನಿಗೆ ಆಳಾಗಿ ಗೋಳಾಡುವುದನ್ನು ನಾನು ನೋಡಿ ಬೇಸರಪಟ್ಟು ಅಯ್ಯೋ ! ಎಂದೂ ಸತ್ಯವನ್ನು ನುಡಿಯಬಾರದು ಎಂಬುದಾಗಿ ಮನದಲ್ಲಿ ನಿಶ್ಚಯಿಸಿ ಮುಂದಿನ ಸನ್ನಿವೇಶವನ್ನು ನೋಡುವ ಗೊಡವೆಗೆ ಹೋಗದೆ ನಿದ್ರೆಮಾಡಿ ಮನೆಗೆ ಬಂದಿರುವೆ ಎಂದು ಹೇಳಿದನು. ಆಗ ಅವನ ತಂದೆಯು ಅಯ್ಯೋ ಮೂರ್ಖನೇ ! ನಾಟಕದ ಫಲಶ್ರುತಿಯಾದ ಕೊನೆಯ ಸನ್ನಿವೇಶವನ್ನು ನೀನು ನೋಡಲಿಲ್ಲವೇ ? ಸತ್ಯ ನುಡಿಯುವುದನ್ನು ಎಂದೂ ಬಿಡೆನೆಂಬ ಹಟ ಹಿಡಿದ ಕಾರಣದಿಂದಾಗಿ ಮೊದ ಮೊದಲು ರಾಜನಿಗೆ ತೊಂದರೆಯಾದರೂ ಕೊನೆಗೆ ಶಿವನ ಸಾಕ್ಷಾತ್ಕಾರವಾಗಿ ಕಳೆದುಹೋದ ರಾಜ್ಯವನ್ನು ಹಾಗೂ ಹೆಂಡರು ಮಕ್ಕಳನ್ನು ಮರಳಿಪಡೆದು ಕೊಂಡನಲ್ಲದೆ, ವಿಶ್ವಾಮಿತ್ರನ ಸಂಪೂರ್ಣವಾದ ತಪಸ್ಸಿನ ಫಲವನ್ನು ಕೂಡ ಪಡೆದು ಕೊಂಡು ಸತ್ಯಹರಿಶ್ಚಂದ್ರನೆಂಬ ಹೆಸರಿನಿಂದ ಪ್ರಖ್ಯಾತನಾದನು. ಈ ಮುಂದಿನ ಸನ್ನಿವೇಶವನ್ನು ನೋಡದ ಕಾರಣ ದಿಂದಾಗಿ ನಿನಗೆ ಸತ್ಯದ ಮಹತ್ವವು ಗುರುತಾಗಲಿಲ್ಲ, ಈಗಲಾದರೂ ಅದರ ಮರ್ಮವು ತಿಳಿಯಿತಲ್ಲವೆ ? ಸತ್ಯಧರ್ಮವನ್ನು ಪರಿಪಾಲಿಸುವವರಿಗೆ ಮೊದಮೊದಲು ಅನೇಕ ತೊಂದರೆಗಳುಂಟಾದರೂ ಕೊನೆಗೆ ಒಳ್ಳೆಯದೇ ಆಗುತ್ತದೆ. ಆದರೆ ಅಸತ್ಯವನ್ನು ನುಡಿದಾಗ ಮೊದಮೊದಲು ಏನೋ ಸುಖವಾಗಿ ಕಂಡರೂ ಕೊನೆಗೆ ಮಹದನರ್ಥವನ್ನೇ ಅನುಭವಿಸಬೇಕಾಗುತ್ತದೆ ಎಂಬುದಾಗಿ ಮಗನಿಗೆ ತಂದೆಯು ತಿಳಿಹೇಳಿದನು. ಸತ್ಯಹರಿಶ್ಚಂದ್ರ ನಾಟಕದ ಕೊನೆಯ ಸನ್ನಿವೇಶವನ್ನು ತಿಳಿದುಕೊಂಡ ಆ ಹುಡುಗನು ಸತ್ಯದ ಮಹತ್ವವನ್ನು ತಂದೆಯ ಮುಖದಿಂದ ಅರಿತುಕೊಂಡು ಸುಳ್ಳು ಹೇಳುವುದನ್ನು ಬಿಟ್ಟನಂತೆ.

ಈ ಜಗತ್ತಿನಲ್ಲಿ ಬಹಳಷ್ಟು ಜನರು ಸತ್ಯದ ಮರ್ಮವನ್ನರಿಯದೇ ಕ್ಷಣಿಕವಾದ ಸುಖಕ್ಕೆ ಬಲಿಯಾಗಿ ಅಸತ್ಯದಲ್ಲಿ ಪ್ರವೃತ್ತರಾಗುತ್ತಿರುತ್ತಾರೆ. ನಮಗೆ ದೊರೆತಿರುವ ಪಂಚಕರ್ಮೇಂದ್ರಿಯಗಳಲ್ಲಿ ವಾಣಿಯು ಬಹುಮುಖ್ಯವಾದುದು. 'ನಾಲಿಗೆ ಒಳ್ಳೆಯ

ದಾದರೆ ನಾಡೆಲ್ಲಾ ಒಳ್ಳೆಯದು' ಎಂಬ ನಾಡುನುಡಿಯು ಪ್ರಸಿದ್ಧವಾಗಿದೆ. ಓರ್ವ ಸುಭಾಷಿತಕಾರನು–

ಜಿಹ್ವಾಗ್ರೇ ವರ್ತತೇ ಲಕ್ಷ್ಮೀ ಜಿಹ್ವಾಗ್ರೇ ಮಿತ್ರಬಾಂಧವಾಃ।
ಜಿಹ್ವಾಗ್ರೇ ಬಂಧನ ಪ್ರಾಪ್ತಿಃ ಜಿಹ್ವಾಗ್ರೇ ಮರಣಂ ಧ್ರುವಮ್ ॥

ಹೀಗೆ ನಾಲಿಗೆಯ ಮಹತ್ವವನ್ನು ಕೊಂಡಾಡಿದ್ದಾನೆ. ಏನೆಲ್ಲವನ್ನು ನಾಲಿಗೆಯಿಂದಲೇ ಸಂಪಾದಿಸಬಹುದು. ನಾವು ಮಾತನಾಡಿಯೇ ಲಕ್ಷ್ಮೀಯನ್ನು ಸಂಪಾದಿಸಿಕೊಳ್ಳುತ್ತೇವೆ. ಮಾತಿನಿಂದಲೇ ಇಷ್ಟಮಿತ್ರರನ್ನು ಗಳಿಸಬಹುದು. ಮಾತಿನಿಂದಲೇ ಬಂಧನವು ಹಾಗೂ ಮಾತಿನಿಂದಲೇ ಮರಣವು ಸಹ ಪ್ರಾಪ್ತವಾಗುವುದು. ಹೀಗೆ ವಾಣಿಯು, ಮನುಷ್ಯನಿಗೆ ದೊರೆತ ದೇವರ ಬಹುದೊಡ್ಡ ದೇಣಿಗೆಯು. ಇದರ ದುರುಪಯೋಗವನ್ನು ಮಾಡಿ ಕೊಳ್ಳದೆ ಸದುಪಯೋಗವನ್ನು ಮಾಡಿಕೊಂಡರೆ ಸರ್ವವೆಲ್ಲವನ್ನು ಸಂಪಾದಿಸಬಹುದು. ಸರ್ವಜ್ಞ ಕವಿಯು ಮಾತಿಗೆ ಮಾಣಿಕ್ಯವೆಂದು ಕರೆದರೆ, ಶರಣರು ಮಾತಿಗೆ ಜ್ಯೋತಿರ್ಲಿಂಗ ವೆಂದು ಕರೆದಿದ್ದಾರೆ. ''ವಾಗೇವ ಜ್ಯೋತಿಃ'' ಎಂಬ ಉಪನಿಷದ್ ಮಂತ್ರದಲ್ಲಿಯೂ ವಾಣಿಗೆ ಜ್ಯೋತಿ ಎಂಬುದಾಗಿ ಕರೆದಿದ್ದಾರೆ. ಹೀಗೆ ಮಾಣಿಕ್ಯ ದಂತಿರುವ, ಜ್ಯೋತಿ ಯಂತಿರುವ ಮತ್ತು ಜ್ಯೋತಿರ್ಲಿಂಗದಂತಿರುವ ಈ ವಾಣಿಗೆ ಸತ್ಯದ ಸಂಬಂಧವನ್ನು ಮಾಡಬೇಕೇ ವಿನಃ ಅಸತ್ಯದ ಸ್ಪರ್ಶವನ್ನೂ ಸಹ ಮಾಡಕೂಡದು. ಯಾರು ಈ ಅಮೂಲ್ಯವಾದ ವಾಣಿಯಿಂದ ಸದಾ ಸತ್ಯವನ್ನೇ ನುಡಿಯುವರೋ ಅವರು ಈ ಧರ್ಮಾಚರಣೆಯ ಪ್ರಭಾವದಿಂದಾಗಿ ಇಹಲೋಕದಲ್ಲಿ ಸುಖವನ್ನು ಪಡೆಯುವ ರಲ್ಲದೆ ಕೊನೆಗೆ ಸತ್ಯಸ್ವರೂಪನಾದ ಶಿವನನ್ನು ಪಡೆದು ಶಾಶ್ವತ ಸುಖಿಗಳಾಗುವರೆಂಬು ದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಆಗಷ್ಟ್, ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೩

# ಧರ್ಮಾಚಾರಸ್ಥಲ

ಮುಮುಕ್ಷುಗಳೇ !

ಶ್ರೀ ಕಾಶೀಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀಮಹಾಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಿವೆ. ಈ ಜಗತ್ತಿನಲ್ಲಿರುವ ಅನೇಕ ತೀರ್ಥಕ್ಷೇತ್ರಗಳಲ್ಲಿ ಕಾಶೀಕ್ಷೇತ್ರದ ಮಹಾತ್ಮೆಯು ವಿಶೇಷವಾದುದಾಗಿದೆ. ಬೇರೆ ಕ್ಷೇತ್ರಗಳಲ್ಲಿ ದೇವರ ದರ್ಶನಕ್ಕಾಗಿ ಹೋದ ಭಕ್ತರ ಮನಸ್ಸಿನಲ್ಲಿ ಅನೇಕ ವಿಧಗಳಾದ ಸಾಂಸಾರಿಕ ಬಯಕೆಗಳು ಉತ್ಪನ್ನಗಳಾಗುತ್ತವೆ. ಆದರೆ ಕಾಶೀ ಕ್ಷೇತ್ರದಲ್ಲಿ ವಿಶ್ವನಾಥ ಹಾಗೂ ಅನ್ನಪೂರ್ಣೆಯರ ದರ್ಶನವನ್ನು ಪಡೆಯುವ ಭಕ್ತರ ಮನಸ್ಸಿನಲ್ಲಿ ವೈರಾಗ್ಯ ಹಾಗೂ ಜ್ಞಾನಗಳ ಬಯಕೆಗಳು ಒಡಮೂಡುತ್ತವೆ. ಇಲ್ಲಿಯ ಅನ್ನಪೂರ್ಣಾ ದೇವಿಯು ಬಂದ ಭಕ್ತರಿಗೆ ಭಿಕ್ಷಾರೂಪವಾದ ಪ್ರಸಾದವನ್ನು ಅನುಗ್ರಹಿಸುತ್ತಾಳೆ. ಆದರ ಸೇವನೆಯಿಂದ ಭಕ್ತರ ಮನಸ್ಸಿನಲ್ಲಿ ವೈರಾಗ್ಯ ಭಾವನೆಯು ಉತ್ಪನ್ನವಾಗುತ್ತದೆ. ಇಂತಹ ವಿರಕ್ತವಾದ ಮನಸ್ಸಿಗೆ ಶಿವನು ಜ್ಞಾನವನ್ನನು ಗ್ರಹಿಸುತ್ತಾನೆ. ಆಗ ಇವರ ಜೀವನವು ಜ್ಞಾನರೂಪವಾದ ಪ್ರಕಾಶದಿಂದ ತುಂಬಿ ಹೋಗುತ್ತದೆ. ಅಂತೆಯೇ ''ಕಾಶ್ಯತೇ ಪ್ರಕಾಶ್ಯತೇ ಇತಿ ಕಾಶೀ'' ಎಂಬ ವ್ಯುತ್ಪತ್ತಿಯನ್ನು ವಿದ್ವಾಂಸರು ಮಾಡಿದ್ದಾರೆ. ಉಳಿದ ಕ್ಷೇತ್ರಗಳಲ್ಲಿ ಜ್ಞಾನಪ್ರಾಪ್ತಿಗೆ ವಿಳಂಬವಾಗಬಹುದು. ಆದರೆ ಕಾಶೀಕ್ಷೇತ್ರದಲ್ಲಿ ಅವಿಲಂಬವಾಗಿ ಜ್ಞಾನೋದಯವಾಗುತ್ತದೆ. ಅಂತೆಯೇ ಈ ಕ್ಷೇತ್ರಕ್ಕೆ ಕಾಶಿ ಎಂದು ಕರೆದಿದ್ದಾರೆ.

ಕಾಶಿಯು ಎರಡು ಪ್ರಕಾರವಾಗಿರುತ್ತದೆ. ಒಂದು ಬ್ರಹ್ಮಾಂಡದಲ್ಲಿರುವ ಕಾಶಿ ಇನ್ನೊಂದು ಪಿಂಡಾಂಡದಲ್ಲಿರುವ ಕಾಶಿ. ಬ್ರಹ್ಮಾಂಡದಲ್ಲಿರುವ ಕಾಶಿಯು ಉತ್ತರ ಪ್ರದೇಶದ ಉತ್ತರವಾಹಿನಿಯಾದ ಗಂಗೆಯ ತಟದಲ್ಲಿ ನೆಲೆ ನಿಂತಿದೆ. ಇಲ್ಲಿ ಗಂಗಾನದಿಯು ಉತ್ತರ ವಾಹಿನಿಯಾಗಿರೋಣದರಿಂದ ಅದಕ್ಕೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯವು ಬಂದೊದಗಿದೆ. ಸಾಮಾನ್ಯವಾಗಿ ನದಿಗಳು ಎಲ್ಲಿ ಉತ್ತರ ಅಥವಾ ಪಶ್ಚಿಮವಾಹಿನಿಗಳಾಗಿ ಹರಿಯುತ್ತವೆಯೋ ಅಲ್ಲಿ ಒಂದಿಲ್ಲೊಂದು ಕ್ಷೇತ್ರವು ಇದ್ದೇ ಇರುತ್ತದೆ. ಇದು ಬ್ರಹ್ಮಾಂಡದೊಳಗಿನ ಕಾಶಿಯಾದರೆ, ಪ್ರತಿಯೊಬ್ಬ ವ್ಯಕ್ತಿಯ ಹೃದಯವೇ ಪಿಂಡಾಂಡದಲ್ಲಿಯ ಕಾಶಿಯು. ಕಾಶಿಯಲ್ಲಿ ವಿಶ್ವೇಶ್ವರನ ನಿತ್ಯನಿವಾಸವಿರುವಂತೆ ''ತಥಾತ್ಮನಿ ಶಿವಸ್ಥಿತಃ'' ಎಂಬ ಆಚಾರ್ಯೋಕ್ತಿಗನುಸಾರವಾಗಿ ಪ್ರತಿಯೊಬ್ಬರ ಹೃದಯದಲ್ಲಿಯೂ ಶಿವನ ನಿತ್ಯ ನಿವಾಸವಿರುತ್ತದೆ. ಈ ಹೃದಯರೂಪವಾದ ಕಾಶೀಕ್ಷೇತ್ರದಲ್ಲಿ ಉತ್ಕೃಷ್ಟವಿಚಾರಧಾರೆಯ ಪವಿತ್ರವಾದ ಮನಸ್ಸೇ ಉತ್ತರವಾಹಿನಿಯಾದ ಗಂಗೆಯಿದ್ದಂತೆ. ಅಂತೆಯೇ ನಿಜಗುಣ ಶಿವಯೋಗಿಗಳು ''ವಿಮಲಮಾನಸದಿಂದೆ ಶಿವತೀರ್ಥಮುಂಟೇ ?'' ಎಂಬುದಾಗಿ

ಪ್ರಶ್ನಿಸಿ ಪವಿತ್ರಮನವೇ ಒಂದು ಶ್ರೇಷ್ಠವಾದ ತೀರ್ಥವೆಂಬುದಾಗಿ ನಿರ್ಣಯಿಸಿದ್ದಾರೆ. ಹೀಗೆ ಆತ್ಮಜ್ಞಾನವನ್ನು ಮಾಡಿಕೊಂಡ ವ್ಯಕ್ತಿಯ ಹೃದಯವು ಜ್ಞಾನಪ್ರಕಾಶದಿಂದ ತುಂಬಿ ಕೊಂಡಿರುವುದರಿಂದ ಹೃದಯವು ಪಿಂಡಾಂಡದ ಕಾಶಿ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಬ್ರಹ್ಮಾಂಡದ ಕಾಶಿಯು ಸ್ಥಾವರವಾದರೆ ಪಿಂಡಾಂಡದ ಕಾಶಿಯು ಜಂಗಮವಾಗಿರುತ್ತದೆ. ಅಂದರೆ ನಡೆದಾಡುವ ಕಾಶಿಯಾಗಿರುತ್ತದೆ ಎಂಬ ಭಾವವು. ಹೀಗೆ ಬ್ರಹ್ಮಾಂಡದಲ್ಲಿಯ ಕಾಶೀಯಾತ್ರೆಯನ್ನು ಮಾಡುವ ಉದ್ದೇಶವೆಂದರೆ ತನ್ನ ಪಿಂಡಾಂಡವನ್ನೇ ಕಾಶಿಯನ್ನಾಗಿ ಮಾಡಿಕೊಳ್ಳುವುದಾಗಿದೆ. ಹೀಗೆ ಯಾರ ಹೃದಯದಲ್ಲಿ ಪವಿತ್ರವಾದ ವಿಚಾರಧಾರೆಗಳಿವೆಯೋ ಮತ್ತು ಯಾರ ಹೃದಯದಲ್ಲಿ ಶಿವನ ನಿತ್ಯಾನುಭೂತಿಯುಂಟಾಗುತ್ತದೆಯೋ ಅಂತಹ ಹೃದಯಸಂಪನ್ನವಾದ ಕಾಯವು ಕಾಶಿಯೂ ಅಹುದು, ಕೈಲಾಸವೂ ಅಹುದು. ಇದನ್ನು ತಿಳಿದೇನೇ ಶರಣರು ಕಾಯವೇ ಕೈಲಾಸವೆಂಬುದಾಗಿ ನುಡಿದಿದ್ದಾರೆ.

ಆದ್ಯ ಶಂಕರಾಚಾರ್ಯರು ಕಾಶಿಯಲ್ಲಿ ನಿವಾಸ ಮಾಡಿಕೊಂಡಿದ್ದಾಗ ದಿನಾಲೂ ಮನೆ ಮನೆಗೆ ಭಿಕ್ಷೆಗೆ ಹೋಗುತ್ತಿದ್ದರಂತೆ. ಭಿಕ್ಷೆಯನ್ನು ನೀಡುವ ಪ್ರತಿಯೊಬ್ಬ ತಾಯಿಯನ್ನು ಮಾತಾ ಅನ್ನಪೂರ್ಣಾ ಎಂತಲೇ ಭಾವಿಸಿ– ''ಜ್ಞಾನವೈರಾಗ್ಯ ಸಿದ್ಧ್ಯರ್ಥಂ ಭಿಕ್ಷಾಂ ಮೇ ದೇಹಿ ಪಾರ್ವತೀ !'' ಎಂಬುದಾಗಿ ಭಿಕ್ಷೆಯನ್ನು ಬೇಡುತ್ತಿದ್ದರು. ಶಂಕರಾಚಾರ್ಯರನ್ನು ಸಾಕ್ಷಾತ್ ಶಂಕರನ ಅವತಾರವೆಂದು ಪ್ರತಿಪಾದಿಸಲಾಗಿದೆ. ಇಂತಹ ಅವತಾರಿ ಪುರುಷರೂ ಸಹ ಕಾಶೀ ಕ್ಷೇತ್ರಕ್ಕೆ ಬಂದು ಜ್ಞಾನ ಹಾಗೂ ವೈರಾಗ್ಯಗಳ ಭಿಕ್ಷೆಯನ್ನು ಬೇಡಿದ್ದಾರೆಂದ ಬಳಿಕ ಪ್ರತಿಯೊಬ್ಬರು ಅವರ ಅನುಕರಣೆಯನ್ನು ಮಾಡಬೇಕು. ಕಾರಣ ಈ ಸಂದರ್ಭದಲ್ಲಿ ಕಾಶಿಗೆ ಬಂದಿರುವ ನೀವುಗಳೆಲ್ಲ ಈ ಜ್ಞಾನ–ವೈರಾಗ್ಯಗಳನ್ನು ಪಡೆದುಕೊಳ್ಳುವ ಉತ್ಕಟವಾದ ಬಯಕೆಯುಳ್ಳವರಾಗಬೇಕು. ಇಂತಹ ತೀವ್ರ ಇಚ್ಛೆಯಿದ್ದಾಗ ನಿಮ್ಮೆಲ್ಲರಿಗೂ ಅವೆರಡೂ ಅವಶ್ಯವಾಗಿ ಪ್ರಾಪ್ತವಾಗುತ್ತವೆ. ಈ ಯೋಗ್ಯತೆಯು ಬರಬೇಕಾದರೆ ಧರ್ಮಾಚರಣೆಯನ್ನು ಪ್ರತಿಯೊಬ್ಬರೂ ಮಾಡ ಬೇಕೆಂಬುದೇ ಪೂಜ್ಯರ ಆಶಯವಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ಕುರಿತು ಉಪದೇಶ ಮಾಡಿರುವ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರ ಸ್ಥಲದ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಧರ್ಮಾಚಾರ ಸ್ಥಲದಲ್ಲಿ ಬರುವ ಸತ್ಯ ಅಹಿಂಸೆಗಳ ಬಗ್ಗೆ ಸಾಕಷ್ಟು ತಿಳಿದವರಾಗಿದ್ದೀರಿ. ಇಂದೂ ಸಹ ಸತ್ಯ ಹಾಗೂ ಅಸ್ತೇಯಗಳ ಬಗ್ಗೆ ಪ್ರಸ್ತಾಪಿಸಲಾಗುವುದು.

ಪೂಜ್ಯರು ಉಪದೇಶಿಸಿದ ಅಹಿಂಸಾದಿ ದಶವಿಧ ಧರ್ಮಾಚರಣೆಗಳಲ್ಲಿ ಸತ್ಯವು ಎರಡನೆಯದಾಗಿರುತ್ತದೆ. ಸತ್ಯವು ಸರ್ವಶ್ರೇಷ್ಠವಾದ ಧರ್ಮವು. ಸತ್ಯವನ್ನು ಕುರಿತೇ ''ಧರ್ಮ ನಾ ದೂಸರಚಾಣೆಯೇ'' ಅಂದರೆ ಸತ್ಯಕ್ಕೆ ಸಮಾನವಾದ ಬೇರೊಂದು ಧರ್ಮವಿಲ್ಲ. ಸತ್ಯವನ್ನು ಶೋಧಿಸುವುದಕ್ಕಾಗಿಯೇ ಮನುಷ್ಯ ಜನ್ಮವು ಪ್ರಾಪ್ತ

ವಾಗಿರುತ್ತದೆ. ಈ ಪೂರ್ವದಲ್ಲಿ ಹೇಳಿದಂತೆ ಸತ್ಯವೆಂದರೆ ಸಾಕ್ಷಾತ್ ಶಿವನೇ ಎಂದರ್ಥ. ಇಂತಹ ಸತ್ಯ ಸಂಶೋಧನೆಗಾಗಿ ಹೊರಟಿರುವ ಜೀವಾತ್ಮನನ್ನು ಕುರಿತು ಉಪನಿಷತ್ತುಗಳು– 'ಹಿರಣ್ಮಯೇನ ಪಾತ್ರೇನ ಸತ್ಯಸ್ಯಾಪಿಹಿತಂ ಮುಖಮ್'' ಎಂಬುದಾಗಿ ಉಪದೇಶಿಸಿವೆ. ಸತ್ಯಸಂಶೋಧನೆಗಾಗಿ ಹೊರಟಿರುವ ಎಲೈ ಮಾನವನೇ ! ಶಿವನು ಆ ಸತ್ಯವನ್ನು ಬಂಗಾರದ ಪಾತ್ರೆಯೊಳಗೆ ಬಂಗಾರದ ಮುಚ್ಚಳದಿಂದ ಮುಚ್ಚಿ ಇಟ್ಟಿದ್ದಾನೆ. ಅದರ ಮೇಲಿನ ಮುಚ್ಚಳವನ್ನು ಎತ್ತಿ ಒಳಗಿನ ಸತ್ಯವನ್ನು ತಿಳಿದುಕೋ'' ಎಂಬುದೇ ಆ ಉಪನಿಷದ್ ಮಂತ್ರದ ಮಥಿತಾರ್ಥವಾಗಿದೆ.

ಈ ಸತ್ಯಶೋಧನೆಗಾಗಿ ಬಂದ ಮನುಷ್ಯನು ಬಂಗಾರದ ಪಾತ್ರೆಯೊಳಗಿರುವ ಸತ್ಯವನ್ನರಿಯದೆ ಆ ಪಾತ್ರೆಗೇನೇಮೋಹಿತನಾಗಿ ಹೋಗಿದ್ದಾನೆ. ಇಲ್ಲಿ ಬಂಗಾರದ ಪಾತ್ರೆಯೆಂದರೆ ಈ ಸ್ಥೂಲದೇಹವೇ ! ಇಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಮನುಷ್ಯನು ದೇಹದೊಳಗಿನ ಸತ್ಯವನ್ನರಿಯಲು ಪ್ರಯತ್ನಿಸದೆ ದೇಹದ ಲಾಲನೆ–ಪಾಲನೆ ಹಾಗೂ ಅದರಿಂದ ಸುಖೋಪಭೋಗವನ್ನು ಪಡೆಯುವ ವಿಚಾರದಲ್ಲಿಯೇ ಸದಾ ನಿಮಗ್ನನಾಗಿರುತ್ತಾನೆ. ಇದೇ ವ್ಯವಹಾರದಲ್ಲಿಯೇ ತನಗೆ ದೊರೆತ ನೂರು ವರ್ಷಗಳ ಆಯುಷ್ಯವನ್ನು ಹಾಳು ಮಾಡಿಕೊಂಡು ಕೊನೆಗೆ ಸತ್ಯವನ್ನು ಕಾಣದೆ ಅಸತ್ಯವನ್ನೇ ಮೋಹಿಸಿ ಜನನ–ಮರಣಾತ್ಮಕವಾದ ಚಕ್ರದಲ್ಲಿ ಸಿಲುಕಿಕೊಳ್ಳುತ್ತಾನೆ.

ಸತ್ಯದ ಪ್ರಾಪ್ತಿಯು ಸಹಜವಾಗಿಯಾಗುವುದಿಲ್ಲ. ಅದಕ್ಕಾಗಿ ಹಗಲಿರುಳು ಪ್ರಯತ್ನಿಸಬೇಕು. ''ನಾಯಮಾತ್ಮಾ ಬಲಹೀನೇನ ಲಭ್ಯಃ'' ಎಂಬ ಉಪನಿಷದ್ವಾಕ್ಯದಲ್ಲಿ ಬಲಶಾಲಿಯು ಮಾತ್ರ ಸತ್ಯರೂಪನಾದ ಆತ್ಮನನ್ನು ಅರಿಯಲು ಸಾಧ್ಯ. ಆದರೆ ಬಲಹೀನನಿಗೆ ಅದೆಂದೂ ದೊರಕದು ಎಂಬುದಾಗಿ ಉಪದೇಶಿಸಲಾಗಿದೆ. ಇಲ್ಲಿಯ ಬಲವೆಂದರೆ ಶಾರೀರಿಕವಾದುದಲ್ಲ. ಇಲ್ಲಿ ಬೇಕಾದುದು ಮನೋಬಲ. ಚಂಚಲವಾದ ಮನಸ್ಸುಳ್ಳ ವ್ಯಕ್ತಿಯು ಅದೆಂದಿಗೂ ಆತ್ಮಜ್ಞಾನವನ್ನು ಪಡೆಯಲಾರ. ಮನಸ್ಸು ಸ್ಥಿರವಾಗಿದ್ದು ದೃಢಸಂಕಲ್ಪದಿಂದ ಕೂಡಿಕೊಂಡಿದ್ದರೆ ಅದು ಏನೆಲ್ಲವನ್ನು ಸಾಧಿಸಬಹುದು. ಪ್ರಕೃತದಲ್ಲಿ ಸತ್ಯರೂಪನಾದ ಪರಮಾತ್ಮನನ್ನು ಅರಿಯಲು ಮನುಷ್ಯನು ಸತ್ಯಸಂಧನಾಗ ಬೇಕು ಅರ್ಥಾತ್ ಸತ್ಯದ ಪ್ರಾಪ್ತಿಗಾಗಿ ಸತ್ಯವನ್ನೇ ನುಡಿಯಬೇಕೆಂದರ್ಥ. ಸಂಪೂರ್ಣ ವಾಗಿ ಸತ್ಯಮಾತನಾಡದ ವ್ಯಕ್ತಿಗೆ ಸತ್ಯಸ್ವರೂಪನಾದ ಭಗವಂತನ ಪ್ರಾಪ್ತಿಯಾಗಲು ಸಾಧ್ಯವಿಲ್ಲ. ಅಂತೆಯೇ ಪೂಜ್ಯರು ಸತ್ಯ ನುಡಿಯುವುದು ಒಂದು ಧರ್ಮಾಚರಣೆ ಯೆಂಬುದಾಗಿ ಉಪದೇಶಿಸಿದ್ದಾರೆ.

ಪೂರ್ವೋಕ್ತಗಳಾದ ದಶವಿಧ ಧರ್ಮಗಳಲ್ಲಿ ಮೂರನೆಯದಾದ ಧರ್ಮಾ ಚರಣೆಯೇ ಅಸ್ತೇಯವು. ''ಸ್ತೇಯಂ ಪರಸ್ವಾಪಹರಣಂ ತದಭಾವೋಽಸ್ತೇಯಮ್'' ಎಂಬ ಭೋಜದೇವನ ಯೋಗ ಸೂತ್ರವೃತ್ತಿಯಲ್ಲಿ ಅಸ್ತೇಯದ ಲಕ್ಷಣವು ಪ್ರತಿಪಾದಿಸ ಲ್ಪಟ್ಟಿದೆ. ಮತ್ತೊಬ್ಬರ ದ್ರವ್ಯವನ್ನು ಅಪಹರಿಸುವುದು ಸ್ತೇಯವೆಂಬುದಾಗಿ ಕರೆಯಲ್ಪಡುತ್ತದೆ. ಅದಿಲ್ಲದಿರುವಿಕೆಯೇ ''ಅಸ್ತೇಯವು''. ಅಂದರೆ ಅನ್ಯರ ಧನಾದಿಗಳನ್ನು ಅಪಹರಿಸ ದಿರುವುದೇ ಅಸ್ತೇಯವೆಂಬುದಾಗಿ ತಿಳಿದುಕೊಳ್ಳಬೇಕು. ಪರರ ದ್ರವ್ಯವನ್ನು ಕಳ್ಳತನ ದಿಂದಾಗಲೀ, ಬಲಾತ್ಕಾರವಾಗಿಯೇ ಆಗಲಿ ಅಪಹರಿಸುವುದು ಸ್ತೇಯವು.

ಅದಿಲ್ಲದಿರುವುದೇ ಅಸ್ತೇಯರೂಪವಾದ ಧರ್ಮವೆಂಬುದಾಗಿ 'ಈಶ್ವರಗೀತೆ'ಯಲ್ಲಿ ನಿರೂಪಿಸಲಾಗಿದೆ. ''ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ಧನಮ್ಃ'' ಎಂಬ ಈಶಾವಾಸ್ಯೋಪನಿಷತ್ತಿನಲ್ಲಿ ನಿನ್ನಲ್ಲಿರುವ ಸಂಪತ್ತನ್ನು ನೀನು ದಾನಮಾಡಬಹುದೇ ವಿನಃ ಅನ್ಯರ ಸಂಪತ್ತನ್ನು ಎಂದೂ ಅಪಹರಿಸಬಾರದೆಂಬುದಾಗಿ ಉಪದೇಶಿಸಲಾಗಿದೆ. ಚೌರ್ಯವೃತ್ತಿಯು ಮನುಷ್ಯನ ನಿರ್ಭೀತೆಯನ್ನೂ ಹಾಳುಮಾಡುತ್ತದೆ. ಎಂತಹ ಧೈರ್ಯಶಾಲಿಯೇ ಇದ್ದರೂ ಅನ್ಯರ ಮನೆಯಲ್ಲಿ ಕಳ್ಳತನಮಾಡುವಾಗ ಆ ಮನೆಯಲ್ಲಿಯ ಚಿಕ್ಕಮಗುವೊಂದು ಚೀತ್ಕರಿಸಿದರೂ ಭಯಭೀತನಾಗಿ ಅವನು ಓಡಿಹೋಗುತ್ತಾನೆ. ಅಂದ ಹಾಗೆ ಈ ಚೌರ್ಯವೃತ್ತಿಯು ಮನುಷ್ಯನ ಧೈರ್ಯವನ್ನು ಹಾಳು ಮಾಡುತ್ತದೆ.

ಕಳ್ಳತನದಿಂದ ಸಂಪಾದಿಸಿದ್ದೆಲ್ಲವೂ ಅಧರ್ಮದ ಸಂಪಾದನೆಯು. ಅಸತ್ಯವನ್ನು ನುಡಿದು ಮತ್ತು ಮತ್ತೊಬ್ಬರನ್ನು ವಂಚಿಸಿ ಧನವನ್ನೇನೋ ವಾಮಮಾರ್ಗದಿಂದ ಸಂಪಾದಿಸಬಹುದು. ಆದರೆ ಇಲ್ಲಿ ತಿಳಿದುಕೊಳ್ಳಬೇಕಾದ ವಿಷಯವೇನೆಂದರೆ ಪ್ರತಿಯೊಬ್ಬ ಮನುಷ್ಯನು ಸುಖ–ಶಾಂತಿ ಮತ್ತು ಸಮಾಧಾನವನ್ನು ಪಡೆಯಲೋಸುಗವಾಗಿಯೇ ಧನವನ್ನು ಸಂಪಾದಿಸುತ್ತಿರುತ್ತಾನೆ. ಪರರನ್ನು ಪೀಡಿಸಿ ಅವರಲ್ಲಿಯ ದ್ರವ್ಯವನ್ನು ಅಪಹರಿಸಿ ತಾನು ಈ ಧನದಿಂದ ಸುಖಿಯಾಗಬೇಕೆಂದರೆ ಅದೆಂದಿಗೂ ಸಾಧ್ಯವಿಲ್ಲ. ಅಂತೆಯೇ ಜಗತ್ತಿನಲ್ಲಿಯ ಧನಿಕರೆಲ್ಲರೂ ಸುಖಿಗಳಾಗಿರುವುದಿಲ್ಲ. ಧನವು ಸುಖದ ಸಾಧನವಾಗಿದ್ದರೂ ಅದು ಧರ್ಮಮಾರ್ಗದಿಂದ ಬಂದಾಗಲೇನೇ ಸುಖಕೊಟ್ಟೀತೇ ವಿನಃ ಅಧರ್ಮ ಮಾರ್ಗದಿಂದ ಬಂದದ್ದು ಸುಖವನ್ನು ಕೊಡಲಾರದು. ಹೀಗೆ ದುಃಖವನ್ನೇ ಕೊಡುವ ಆ ಧನದಿಂದಲಾದರೂ ಏನು ಪ್ರಯೋಜನ ?

ಧನಕ್ಕೆ ಲಕ್ಷ್ಮಿಯೆಂಬುದೊಂದು ಪರ್ಯಾಯ ನಾಮ. ಇದು ಮೂರು ಪ್ರಕಾರವಾಗಿರುತ್ತದೆ. ಅಲಕ್ಷ್ಮಿ, ಲಕ್ಷ್ಮಿ ಮತ್ತು ಮಹಾಲಕ್ಷ್ಮಿ ಇವೇ ಆ ಮೂರು ಪ್ರಕಾರಗಳು. ಅನ್ಯಾಯ ಮತ್ತು ಅಸತ್ಯ ಮಾರ್ಗದಿಂದ ಸಂಪಾದಿಸಿದ ಧನಕ್ಕೆ ಅಲಕ್ಷ್ಮೀ ಎನ್ನುವರು. ಧರ್ಮ, ಅಧರ್ಮಮಾರ್ಗಗಳೆರಡರಿಂದಲೂ ಸಂಪಾದಿತವಾದ ಧನಕ್ಕೆ ಲಕ್ಷ್ಮಿ ಎಂಬ ಹೆಸರು. ಇನ್ನು ಕೇವಲ ಧರ್ಮಮಾರ್ಗದಿಂದಲೇ ಸಂಗ್ರಹಿಸಿದ ಧನಕ್ಕೆ ಮಹಾಲಕ್ಷ್ಮೀ ಎಂದು ಕರೆಯುತ್ತಾರೆ. ಈ ಮೂರುವಿಧವಾದ ಲಕ್ಷ್ಮಿಯರಲ್ಲಿ ಮಹಾಲಕ್ಷ್ಮಿಯೇ ಸರ್ವಶ್ರೇಷ್ಟವಾದುದು. ಎಷ್ಟು ಪ್ರಮಾಣದ ಧನವು ಯಾವ ಮಾರ್ಗದಿಂದ ಬರುತ್ತದೆಯೋ ಅಷ್ಟು ಪ್ರಮಾಣದ ಧನವು ಅದೇ ಮಾರ್ಗದಲ್ಲಿಯೇ ವ್ಯಯವಾಗಿ ಹೋಗುತ್ತದೆ. ಕೇವಲ ಅನ್ಯಾಯಮಾರ್ಗದಿಂದ ಸಂಪಾದಿಸಲ್ಪಟ್ಟ ಅಲಕ್ಷ್ಮಿಯು ದುರ್ವ್ಯವಹಾರಕ್ಕಾಗಿಯೇ ವ್ಯಯವಾಗುತ್ತದೆ. ಇದೇ ವಿಷಯವನ್ನೇ ಬಸವಣ್ಣನವರು–

ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ
ಸತ್‌ಪಾತ್ರಕ್ಕೆ ಸಲ್ಲದಯ್ಯಾ !
ನಾಯ ಹಾಲು ನಾಯಿಕುನ್ನಿಗಲ್ಲದೆ
ಪಂಚಾಮೃತಕ್ಕೆ ಸಲ್ಲದಯ್ಯಾ !
ನಮ್ಮ ಕೂಡಲಸಂಗನ ಶರಣರಿಗಲ್ಲದೆ ಮಾಡುವ
ಅರ್ಥ ವ್ಯರ್ಥ ಕಂಡಯ್ಯಾ !

ಎಂಬ ತಮ್ಮ ಈ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ. ಓರ್ವ ಸುಭಾಷಿತಕಾರನು ಅನ್ಯಾಯದ ಧನವನ್ನು ಕುರಿತು–

ಅನ್ಯಾಯೋಪಾರ್ಜಿತಂ ದ್ರವ್ಯಂದಶವರ್ಷಾಣಿ ತಿಷ್ಠತಿ !
ಪ್ರಾಪ್ತೇಕಾದಶೇಯವರ್ಷೇ ಸಮೂಲಂ ವಿನಶ್ಯತಿ ॥

ಹೀಗೆ ವಿವರಿಸಿದ್ದನ್ನು ಸಹ ಕಾಣುತ್ತೇವೆ. ತಾತ್ಪರ್ಯವೇನೆಂದರೆ, ಅನ್ಯಾಯದಿಂದ ಸಂಪಾದಿತವಾದ ಹಣವು ಹತ್ತು ವರ್ಷಗಳವರೆಗೆ ಮಾತ್ರ ಇದ್ದು ಕೊನೆಗೆ ಸರ್ವವೆಲ್ಲವೂ ನಷ್ಟವಾಗಿ ಹೋಗುತ್ತದೆ. ಅನುಭವಿಕರ ಈ ಎಲ್ಲ ನುಡಿಗಳನ್ನು ಪರ್ಯಾಲೋಚಿಸಲಾಗಿ ಅನ್ಯಾಯದ ಧನವಾದ ಅಲಕ್ಷ್ಮಿಯು ಸುಖಕ್ಕಿಂತಲೂ ದುಃಖವನ್ನೇ ತಂದೊಡ್ಡು ತ್ತಾಳೆಂಬುದು ತಿಳಿದು ಬರುತ್ತದೆ. ಇನ್ನು ಧರ್ಮ ಅಧರ್ಮ ಮಾರ್ಗಗಳಿಂದ ಬಂದ ಲಕ್ಷ್ಮಿಯು ದೂದಕಾ ದೂಧ ಪಾನೀ ಕಾ ಪಾನೀ '' ಎಂಬ ಉಕ್ತಿಗನುಸಾರವಾಗಿ ಧರ್ಮ ಮತ್ತು ಅಧರ್ಮ ಮಾರ್ಗಗಳೆರಡರಲ್ಲಿಯೂ ಅದು ವ್ಯಯವಾಗುತ್ತದೆ.

ಒಂದು ಹಳ್ಳಿಯಲ್ಲಿ ಓರ್ವ ಮುದುಕಿಯು ಹೊಸದಾಗಿ ಎಮ್ಮೆಯನ್ನು ಕೊಂಡು ತಂದು ಹಾಲುಮಾರುವ ಉದ್ಯೋಗವನ್ನು ಪ್ರಾರಂಭಿಸಿದಳು. ತನ್ನ ಹಳ್ಳಿಯಿಂದ ಪಟ್ಟಣಕ್ಕೆ ಹೋಗುವ ದಾರಿಯಲ್ಲಿ ಒಂದು ಹೊಳೆ ಹರಿಯುತ್ತಿತ್ತು ಆ ವೃದ್ಧೆಯು ದಿನಾಲೂ ಆ ಹೊಳೆಯ ದಂಡೆಯಲ್ಲಿ ಕುಳಿತು ತಾನು ಮಾರಲು ಒಯ್ಯಲಿರುವ ಹಾಲಿನಲ್ಲಿ ಅರ್ಧ ನೀರನ್ನು ಬೆರೆಸಿ ತೆಗೆದುಕೊಂಡು ಹೋಗುತ್ತಿದ್ದಳು. ಹೀಗೆ ಒಂದು ತಿಂಗಳ ಪರ್ಯಂತರವಾಗಿ ಹಾಲನ್ನು ಮಾರಿ ಕೊನೆಯ ದಿನ ತನ್ನ ಎಲ್ಲ ಗ್ರಾಹಕರಿಂದ ಹಾಲಿನ ಹಣವನ್ನು ಸಂಗ್ರಹಿಸಿಕೊಂಡು, ಮರಳಿ ಮನೆಗೆ ಹೋಗುವಾಗ ಆ ನದಿಯ ದಡದಲ್ಲಿರುವ ಗಿಡದ ಕೆಳಗೆ ವಿಶ್ರಾಂತಿಗಾಗಿ ಒಂದಿಷ್ಟು ಒರಗಿದಳು. ಆಗ ಅವಳಿಗೆ ತತ್‌ಕ್ಷಣದಲ್ಲಿಯೇ ನಿದ್ರೆ ಆವರಿಸಿತು. ಅವಳ ತಲೆಯ ಹತ್ತಿರ ಹಾಲಿನ ಗಡಿಗೆಯಲ್ಲಿ ಹಾಲು ಮಾರಿದ ಹಣವನ್ನು ಇಟ್ಟುಕೊಂಡಿದ್ದಳು. ಗಿಡದ ಮೇಲೆ ಕುಳಿತುಕೊಂಡಿರುವ ಒಂದು ಮಂಗವು ಸಾವಕಾಶವಾಗಿ ಇಳಿದುಬಂದು ಆ ಗಡಿಗೆಯನ್ನು ತೆಗೆದುಕೊಂಡು ಹೋಗಿ ಗಿಡದ ಮೇಲೆ ಕುಳಿತಿತು. ಹಾಗೂ ಗಡಿಗೆಯಲ್ಲಿ ಕೈ ಹಾಕಿ ಕೈಗೆ ದೊರೆತ ಆ ರೂಪಾಯಿ ನಾಣ್ಯಗಳಲ್ಲಿ ಒಂದನ್ನು ನದಿಯಲ್ಲಿ ಚೆಲ್ಲಿದರೆ ಇನ್ನೊಂದನ್ನು ಗಿಡದ ಕೆಳಗಿರುವ ಬಂಡೆಗಲ್ಲಿನ ಮೇಲೆ ಒಗೆಯುತ್ತಿತ್ತು, ಹೀಗೆ ಒಗೆಯುತ್ತಿರುವಾಗ ರೂಪಾಯಿಯು ನೀರಲ್ಲಿ ಬಿದ್ದಾಗ ''ಗುಳುಮ್'' ಎಂಬ ಧ್ವನಿಯು ಕಲ್ಲಿನ ಮೇಲೆ ಬಿದ್ದಾಗ ''ಝಣ್'' ಎಂಬ ಧ್ವನಿಯು ಇಂಪಾಗಿ ಕೇಳತೊಡಗಿತು. ಆಗ ಆ ಮಂಗವು ಆ ರೂಪಾಯಿಗಳು ಮುಗಿಯುವವರೆಗೆ ಆ ಶಬ್ದಾನಂದವನ್ನು ಅನುಭವಿಸುತ್ತ ಕೆಳಕ್ಕೆ ಎಸೆಯುತ್ತಲೇ ಇತ್ತು. ಈ ವ್ಯವಹಾರವು ನಡೆದಾಗ ಆ ಮುದುಕಿಯು ಎಚ್ಚರವಾಗಿ ಗಾಬರಿಗೊಂಡು ನೋಡುತ್ತಿದ್ದಳು. ಎಲ್ಲ ಹಣ ಮುಗಿದೊಡನೆ ಬರಿದಾದ ಗಡಗೆಯನ್ನು ಕೆಳಗೆ ಎಸೆದು ಓಡಿ ಹೋಯಿತು. ಗಿಡದಕೆಳಗಿರುವ ಆ ಮುದಿಕೆಯು ಅಲ್ಲಿ ಬಿದ್ದಿರುವ ರೂಪಾಯಿಗಳನ್ನು ಸಂಗ್ರಹಿಸಿಕೊಂಡು ಎಣಿಸಲಾಗಿ ತಾನು ತಂದದರಲ್ಲಿ ಅರ್ಧ ಮಾತ್ರ ಹಣ ಆಕೆಗೆ ದೊರೆಯಿತು. ಮಂಗವು ಮಾಡಿದ ಈ ನ್ಯಾಯವನ್ನು ನೋಡಿ ಓಹೋ ! ನೀರಿನ ಹಣ ನೀರಿಗೆ ಹೋಯಿತು. ಹಾಲಿನ ಹಣ ಮಾತ್ರ ನನಗೆ ದೊರೆಯಿತು. ಇನ್ನು ಮೇಲೆ ಇಂತಹ ಉದ್ಯೋಗವನ್ನೆಂದೂ

ಮಾಡಬಾರದೆಂಬ ಪಶ್ಚಾತ್ತಾಪವು ಅವಳಿಗೆ ಆಯಿತು. ಹೀಗೆ ಧರ್ಮಾ–ಧರ್ಮಗಳಿಂದ ಬಂದ ಲಕ್ಷ್ಮಿಯು ಪುನಃ ಅದೇ ಮಾರ್ಗಗಳಲ್ಲಿ ವ್ಯಯವಾಗಿ ಹೋಗುತ್ತಾಳೆಂಬುದು ತಿಳಿದುಬರುತ್ತದೆ.

ಇನ್ನು ಕೇವಲ ಧರ್ಮಮಾರ್ಗದಿಂದ ಸಂಗ್ರಹೀತವಾದ ಹಣಕ್ಕೆ ಮಹಾಲಕ್ಷ್ಮೀ ಎನ್ನುವರು, ವ್ಯಾಪಾರಿಗಳು ದೀಪಾವಳಿಯಂದು ಮಹಾಲಕ್ಷ್ಮೀ ಹಾಗೂ ಮಹಾ ಸರಸ್ವತಿಯರನ್ನು ಪೂಜೆಮಾಡುವ ಪರಂಪರೆಯು ರೂಢಿಯಲ್ಲಿದೆ. ಮಹಾಲಕ್ಷ್ಮಿಯನ್ನು ಸಂಪಾದಿಸಬೇಕಾದರೆ ವ್ಯಾಪಾರಿಗಳು ಮೊದಲು ಲಾಭಭಾವನೆಯನ್ನು ತಾಳಬೇಕು. ಶುಭಭಾವನೆಯನ್ನು ತಾಳಬೇಕಾಗುತ್ತದೆ. ಅಂತೆಯೇ ಅವರು ತಮ್ಮ ಖಿತಾವಣೆಯಲ್ಲಿ ಮಧ್ಯದಲ್ಲಿ ಸ್ವಸ್ತಿಕವನ್ನು ಬರೆದು, ಎಡಕ್ಕೆ ಶುಭವೆಂತಲೂ ಬಲಕ್ಕೆ ಲಾಭವೆಂತಲೂ ಬರೆಯುತ್ತಾರೆ. ಈ ಸ್ವಸ್ತಿಕ ಹಾಗೂ ಶುಭಲಾಭಗಳನ್ನು ಗೋಡೆಯ ಮೇಲೆ ಹಾಗೂ ತಾವು ಆನಿಸಿ ಕೂಡ್ರುವ ತಲೆದಿಂಬುಗಳ ಮೇಲೆ ಬರೆಯುತ್ತಾರೆ. ಪೂಜಾ ಕಾಲದಲ್ಲಿ ಮೊದಲು ಶುಭವೆಂದು ಬರೆದಿದ್ದರೂ ಮಾರಾಟಕ್ಕಾಗಿ ಪದಾರ್ಥಗಳನ್ನು ಅಳತೆ ಮಾಡುವಾಗ ಮೊದಲನೇ ಅಳತೆಗೆ ಶುಭವೆಂದು ಕರೆಯಬೇಕಾಗಿದ್ದರೂ ಅವರು ಅದನ್ನು ಬಿಟ್ಟು ಲಾಭವೆಂದೇ ಪ್ರಾರಂಭಿಸುತ್ತಾರೆ. ಯಾರ ಮನಸ್ಸಿನಲ್ಲಿ ಮೊದಲು ಲಾಭಭಾವನೆಯು ಬರುತ್ತದೆಯೋ ಅವರು ಮುಂದೆ ಲೋಭಾಕ್ರಾಂತರಾಗಿ ಶುಭವನ್ನೇ ಮರೆತು, ಲಾಭ–ಲೋಭಗಳ ಜಾಲದಲ್ಲಿ ಸಿಲುಕಿಕೊಂಡು ಮಹಾಲಕ್ಷ್ಮಿಯನ್ನು ಪಡೆಯದೆ ಲಕ್ಷ್ಮೀಯನ್ನೋ ಅಲಕ್ಷ್ಮೀಯನ್ನೋ ಸಂಪಾದಿಸಿಕೊಂಡು ಅದಕ್ಕೆ ತಕ್ಕಂತೆ ಸುಖದುಃಖ ಗಳನ್ನು ಅನುಭವಿಸುತ್ತಲಿರುತ್ತಾರೆ. ಆದ್ದರಿಂದ ಈ ಜಗತ್ತಿನಲ್ಲಿ ಲಕ್ಷ್ಮೀ, ಅಲಕ್ಷ್ಮೀಯ ಭಕ್ತರು ಸಿಗುವರಲ್ಲದೆ ಮಹಾಲಕ್ಷ್ಮೀಯ ಭಕ್ತರು ಕ್ವಚಿತ್ತಾಗಿ ದೊರೆಯುವುದುಂಟು.

ಮನುಷ್ಯನ ಮನಸ್ಸಿನಲ್ಲಿ ಯಾವಾಗ ಲೋಭಗುಣವು ಪ್ರಾಬಲ್ಯವನ್ನು ತಾಳುವುದೋ ಆಗ ಅದು ಮನಸ್ಸಿನಲ್ಲಿ ಚೌರ್ಯಗುಣವನ್ನು ಹುಟ್ಟಿಸುತ್ತದೆ. ಚೌರ್ಯ ವೆಂದರೆ ಮತ್ತೊಬ್ಬರ ವಸ್ತುವನ್ನು ಅಪಹರಿಸುವುದಷ್ಟೇ ಅಲ್ಲ, ತಾನೇ ಅನ್ಯರಿಗೆ ಕೊಟ್ಟ ವಸ್ತುವನ್ನು ಪುನಃ ತೆಗೆದುಕೊಂಡರೆ ಅದೂ ಸಹ ಚೌರ್ಯವೆಂದೇ ಕರೆಯಲ್ಪಡುತ್ತದೆ. ರಾಮಾಯಣದಲ್ಲಿಯ ಒಂದು ಪ್ರಸಂಗವು ಇದನ್ನು ಸುಸ್ಪಷ್ಟಗೊಳಿಸುತ್ತದೆ. ರಾವಣನ ವಧೆಯನ್ನು ಮಾಡಿ ಲಂಕೆಯ ಮೇಲೆ ವಿಜಯವನ್ನು ಸಂಪಾದಿಸಿದ ನಂತರ ರಾಮ, ಲಕ್ಷ್ಮಣ ಮತ್ತು ಅವರ ವಾನರ ಸೇನೆ ಇವರೆಲ್ಲರೂ ಅಯೋಧ್ಯೆಗೆ ಮರಳಿ ಹೋಗುವ ನಿಮಿತ್ತದಲ್ಲಿ ಲಂಕೆಯಿಂದ ಹೊರಬಂದು ಸಮುದ್ರದ ದಂಡೆಯ ಮೇಲೆ ಸ್ವಲ್ಪ ಸಮಯ ವಿಶ್ರಾಂತಿಗಾಗಿ ಕುಳಿತಿದ್ದರು. ಆಗ ಅಲ್ಲಿರುವ ವಾನರ ಸೇನೆಯು ತಮ್ಮ ತಮ್ಮೊಳಗೆ ವಿಚಾರ–ವಿಮರ್ಶೆ ಮಾಡುತ್ತಿರುವಾಗ ಒಂದು ವಾನರ ''ನಾವೆಲ್ಲ ಲಂಕೆಯ ಮೇಲೆ ವಿಜಯವನ್ನು ಸಂಪಾದಿಸಿ ಅಯೋಧ್ಯೆಗೆ ಮರಳುತ್ತಿದ್ದೇವೆ. ಆದರೆ ಬರಿಗೈಯ್ಯಿಯಿಂದ ಅಯೋಧ್ಯೆಗೆ ಹೋಗುವುದು ಅಷ್ಟೊಂದು ಸಮಂಜಸವಲ್ಲ, ಇಲ್ಲಿರುವ ಯಾವುದಾದ ರೊಂದು ಬೆಲೆ ಬಾಳುವ ವಸ್ತುವನ್ನು ವಿಜಯದ ಸಂಕೇತವಾಗಿ ತೆಗೆದುಕೊಂಡು ಹೋದರೆ ಕಾಲಕಾಲಕ್ಕೆ ಈ ವಿಜಯೋತ್ಸವದ ಸ್ಮರಣೆಯು ಎಲ್ಲರಿಗೂ ಆಗುತ್ತಲಿರುವುದು'' ಎಂಬುದಾಗಿ ತನ್ನ ಅಭಿಪ್ರಾಯವನ್ನು ವ್ಯಕ್ತಮಾಡಿತು. ಆಗ ಅಲ್ಲಿರುವ ವಾನರಗಳೆಲ್ಲ

ಹನುಮಂತನ ಕಡೆಗೆ ಕೈಮಾಡಿ ಈತನು ಲಂಕೆಯ ಒಳ-ಹೊರಗೆಲ್ಲ ಸಂಚರಿಸಿದ್ದಾನೆ ಇಲ್ಲಿರುವ ಅತೀ ಬೆಲೆಬಾಳುವ ವಸ್ತುಯಾವುದೆಂಬುದು ಇವನಿಗೇನೇ ಗುರುತು. ಕಾರಣ ಈತನು ಹೇಳಿದ್ದನ್ನು ತೆಗೆದುಕೊಂಡು ಹೋಗೋಣ ಎಂಬುದಾಗಿ ಎಲ್ಲ ವಾನರಗಳು ನಿರ್ಣಯಿಸಿ ಹನುಮಂತನ ಮೇಲೆ ಅದರ ಹೊಣೆಗಾರಿಕೆಯನ್ನು ಹೊರಿಸಿದರು. ಆಗ ಹನುಮಂತನು ನನ್ನ ದೃಷ್ಟಿಯಲ್ಲಿ ಲಂಕೆಯಲ್ಲಿರುವ ವಸ್ತುಗಳಲ್ಲಿ ಅತಿ ಬೆಲೆಬಾಳುವ ವಸ್ತುವೆಂದರೆ ಲಂಕಾಧಿಪತಿಯ ರತ್ನ ಖಚಿತ ಸಿಂಹಾಸನವು, ಆಗ ಎಲ್ಲ ವಾನರಗಳು ಆ ಸಿಂಹಾಸನವನ್ನು ತೆಗೆದುಕೊಂಡು ಬರುವಂತೆ ಆಗ್ರಹ ಮಾಡಿದವು. ವಾನರಗಳ ಈ ಸಂವಾದವನ್ನು ಆಲಿಸುತ್ತ ಸಮೀಪದಲ್ಲಿಯೇ ಕುಳಿತಿರುವ ರಾಮ ಲಕ್ಷ್ಮಣರು ಇವರ ಮಾತಿನೊಂದಿಗೆ ಯಾವ ಮಾತನ್ನೂ ಬೆರೆಸದೆ ಸುಮ್ಮನೆ ಕುಳಿತುಕೊಂಡಿದ್ದರು. ಇವರು ಮೌನವಾಗಿ ಕುಳಿತಿದ್ದನ್ನು ಕಂಡು ಇವರ ಸಮ್ಮತಿಯು ಇರವುದಾಗಿ ನಿರ್ಣಯಿಸಿದ ಹನುಮಂತನು ಲಂಕೆಯತ್ತ ಹೊರಟನು. ದಾರಿಯಲ್ಲಿ ಜಾಂಬವಂತನ ಭೆಟ್ಟಿಯಾಯಿತು. ಆಗ ಆ ಜಾಂಬವಂತನು ''ಎಲ್ಲಿ ಹೊರಟಿರುವೆ ?'' ಎಂಬುದಾಗಿ ಹನುಮಂತನನ್ನು ಪ್ರಶ್ನಿಸಿದನು. ಆಗ ಆತನು ನಡೆದ ಪ್ರಸಂಗವನ್ನೆಲ್ಲ ವಿವರಿಸಿ ಹೇಳಿದನು. ವಯೋ ವೃದ್ಧನೂ, ಜ್ಞಾನವೃದ್ಧನೂ ಆದ ಜಾಂಬವಂತನು ಹನುಮಂತನನ್ನುದ್ದೇಶಿಸಿ ನೀನು ಹೊರಟ ಕಾರ್ಯಕ್ಕೆ ಪ್ರಭು ರಾಮಚಂದ್ರನ ಅನುಮತಿ ಇದೆ ಏನು ? ಎಂಬುದಾಗಿ ಪ್ರಶ್ನಿಸಿದನು. ಆಗ ಹನುಮಂತನು ಈ ವಿಷಯದಲ್ಲಿ ನಾವು ಚರ್ಚಿಸುವಾಗ ಹಾಗೂ ನಿರ್ಣಯವನ್ನು ತೆಗೆದುಕೊಂಡು ಲಂಕೆಯತ್ತ ಹೊರಟಾಗ ರಾಮನಾಗಲಿ ಲಕ್ಷ್ಮಣನಾಗಲಿ ನಮಗೆ ಯಾವ ಪ್ರತಿಕ್ರಿಯೆಯನ್ನು ತೋರಿಸದೆ ಸುಮ್ಮನೆ ಕುಳಿತುಕೊಂಡಿದ್ದರು 'ಮೌನಂ ಸಮ್ಮತಿ ಲಕ್ಷಣಮ್' ಎಂಬ ಉಕ್ತಿಗನುಸಾರವಾಗಿ ಅವರು ಸುಮ್ಮನೆ ಕುಳಿತದ್ದೇ ಅವರ ಸಮ್ಮತಿಯೆಂಬುದಾಗಿ ತಿಳಿದು ನಾನು ಹೊರಟಿದ್ದೇನೆ. ಎಂಬುದಾಗಿ ಹನುಮಂತನು ಹೇಳಿದನು. ಆಗ ಜಾಂಬುವಂತನು ನಕ್ಕು ಹೇಳಿದ್ದೇನೆಂದರೆ ಕೆಲವೊಂದು ವಿಚಾರಗಳಲ್ಲಿ ಪ್ರಭುವಿನ ಸ್ಪಷ್ಟವಾದ ಆಜ್ಞೆಯನ್ನು ಪಡೆಯಬೇಕಾಗುತ್ತದೆ. ಆದ್ದರಿಂದ ಮರಳಿ ನಡೆ ಎಂಬುದಾಗಿ ಹೇಳಿ ಹನುಮಂತನನ್ನು ಮರಳಿ ಕರೆದುಕೊಂಡು ಬಂದನು.

ಆಗ ಇಬ್ಬರೂ ರಾಮನೆಡೆಗೆ ಬಂದು ಹನುಮಂತನು ಹೊರಟ ಕಾರ್ಯದ ಬಗ್ಗೆ ಜಾಂಬುವಂತನು ರಾಮನಿಗೆ ತಿಳಿಯಪಡಿಸಿ ಇದಕ್ಕೆ ನಿಮ್ಮ ಆದೇಶವಿದೆಯೇ ಎಂಬುದಾಗಿ ಪ್ರಶ್ನಿಸಿದನು. ಆಗ ಶ್ರೀರಾಮಚಂದ್ರನು 'ತರಲಿ ಬಿಡು ಅದರಿಂದೇನು ಅನರ್ಥ ವಾಗುತ್ತಿದೆ' ? ಎಂಬುದಾಗಿ ಪ್ರಶ್ನಿಸಿದನು. ಆಗ ಜಾಂಬುವಂತನು ಶ್ರೀರಾಮನೆದುರು ಕೈಜೋಡಿಸಿ ನಿಂತು-ಹೇ ಪ್ರಭು ! ಇಂತಹ ಘಟನೆಯು ಹಿಂದೆಂದೂ ಆಗಿಲ್ಲ, ಇನ್ನೂ ಮುಂದೆಯೂ ಸಹ ಆಗುವ ಪ್ರಸಂಗವಿಲ್ಲ, ನೀವು ಲಂಕೆಯ ಮೇಲೆ ವಿಜಯವನ್ನು ಸಂಪಾದಿಸುವ ಪೂರ್ವದಲ್ಲಿಯೇ ಸಮುದ್ರದ ದಂಡೆಯಲ್ಲಿ ಸಮುದ್ರೋದಕದಿಂದ ವಿಭೀಷಣನಿಗೆ ಅಭಿಷೇಕವನ್ನು ಮಾಡಿ ಎಲ್ಲರ ಸಾಕ್ಷಿಯೊಂದಿಗೆ ಆತನನ್ನು ಲಂಕಾಧಿಪತಿ ಯನ್ನಾಗಿ ಘೋಷಿಸಿದ್ದೀರಿ. ಆದ್ದರಿಂದ ರಾವಣನ ಸಿಂಹಾಸನದ ಮೇಲೆ ಈಗ ವಿಭೀಷಣನ ಅಧಿಕಾರವು ಪ್ರಾಪ್ತವಾಗಿದೆ. ಹೀಗೆ ನೀವು ಅನುಗ್ರಹಿಸಿದ ಸಿಂಹಾಸನವನ್ನು ಮರಳಿ ನೀವೇ ಪಡೆಯುವುದು ಸೂಕ್ತವಲ್ಲ, ಹಾಗೇನಾದರೂ ಮಾಡಿದರೆ ಅದೂ ಸಹ ಒಂದು ಚೌರ್ಯಕೃತ್ಯವಾಗುವುದು'' ಜಾಂಬುವಂತನ ಅಭಿಪ್ರಾಯವು ಶ್ರೀರಾಮನಿಗೆ ಮನವರಿಕೆಯಾಗಿ ಮುಂದೆ ಆಗಬಹುದಾಗಿದ್ದ ಅನರ್ಥವು ತಪ್ಪಿಹೋಯಿತು.

“ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಮ್’ ಎಂಬ ಉಕ್ತಿಗನುಸಾರವಾಗಿ ಧರ್ಮದ ತತ್ತ್ವಗಳು ಅತಿಸೂಕ್ಷ್ಮಗಳಾಗಿರುತ್ತವೆ. ತಾನೇ ಕೊಟ್ಟದ್ದನ್ನು ತಾನು ಮರಳಿ ಪಡೆದಾಗ ಅದು ಮಹದನರ್ಥವನ್ನು ಉಂಟುಮಾಡುವುದೆಂಬ ವಿಷಯವು–

ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ್ ಪೃಥಿವೀಮಿಮಾಮ್
ಷಷ್ಟಿವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥

ಹೀಗೆ ಪ್ರತಿಪಾದಿಸಲ್ಪಟ್ಟಿದೆ. ತಾತ್ಪರ್ಯವೇನೆಂದರೆ, ತಾನೇ ಕೊಟ್ಟಿರಲಿ ಅಥವಾ ಅನ್ಯರೇ ಕೊಟ್ಟಿರಲಿ ಅಂತಹ ಭೂಮಿ ಧನ–ಕನಕಾದಿ ಮುಂತಾದ ಸಂಪತ್ತನ್ನು ಯಾರು ಅಪಹರಿಸುತ್ತಾರೆಯೋ ಅವರು ಅರವತ್ತು ಸಾವಿರ ವರ್ಷಗಳವರೆಗೆ ಮಲದಲ್ಲಿಯ ಕ್ರಿಮಿಗಳಾಗಿ ಕಾಲಕಳೆಯಬೇಕಾಗುತ್ತದೆ. ಶಾಸ್ತ್ರಗಳಲ್ಲಿ ವರ್ಣಿಸಿದ ಧರ್ಮದ ಅತಿಸೂಕ್ಷ್ಮ ವಿಚಾರಗಳನ್ನು ತಿಳಿದುಕೊಂಡು ನಡೆದಾಗಲೇ ಜೀವಾತ್ಮನು ಸುಖಿಯಾಗಬಲ್ಲನು.

ಪ್ರತಿಯೊಬ್ಬ ವ್ಯಕ್ತಿಯು ತಾನು ಏನನ್ನೇ ಮಾಡುತ್ತಿರುವಾಗ ನಾನು ಮಾಡುತ್ತಿರುವುದು ಸರಿಯೋ ತಪ್ಪೋ ಎಂಬುದರ ಬಗ್ಗೆ ಆತ್ಮ ನಿರೀಕ್ಷಣೆಯನ್ನು ಮಾಡಿಕೊಳ್ಳಬೇಕು. ನಮ್ಮ ಕೈಯಿಂದ ಯಾವುದೇ ವಿಧವಾದ ಚೌರ್ಯ ಕಾರ್ಯವು ಆಗದಂತೆ ಜಾಗ್ರತೆಯನ್ನು ವಹಿಸಬೇಕು. ಅಂದಾಗಲೇನೇ ಅಸ್ತೇಯ ವ್ರತವನ್ನು ಪರಿಪಾಲಿಸಲು ಸಾಧ್ಯವಾಗುವುದು. ಯಾರು ಅಸ್ತೇಯ ವ್ರತವನ್ನು ಪರಿಪಾಲಿಸುವರೋ ಅವರ ಶರೀರವು ಪವಿತ್ರವಾಗಿರುವದಷ್ಟೇ ಅಲ್ಲ, ಅವರು ಸದಾ ನಿರ್ಭೀತರಾಗಿರುತ್ತಾರೆ. ಧರ್ಮದಿಂದ ನಡೆಯುವವರು ಯಾರಿಗೂ ಅಂಜುವುದಿಲ್ಲ.

ಈ ಅಹಿಂಸಾ ಸತ್ಯ, ಅಸ್ತೇಯ ಮುಂತಾದ ಧರ್ಮಗಳನ್ನು ಆಚರಿಸಲೋಸುಗ ವಯಸ್ಸಿನ ನಿರ್ಬಂಧತೆಗಳಿರುವುದಿಲ್ಲ. ಆದ್ದರಿಂದ ಬಾಲ್ಯದಿಂದಲೇ ಧರ್ಮಾಚರಣೆಯ ಅಭ್ಯಾಸವನ್ನು ಮಕ್ಕಳಿಗೆ ಕೊಡಬೇಕು. ಇಲ್ಲವಾದರೆ ಅವರು ತಾರುಣ್ಯಾವಸ್ಥೆಯಲ್ಲಿ ಅಧಾರ್ಮಿಕರಾಗಿ ಅದರ ಸಂಸ್ಕಾರ ಮೂಲಕವಾಗಿಯೇ ವೃದ್ಧಾವಸ್ಥೆಯಲ್ಲಿಯೂ ಸಹ ಅವರಿಂದ ಧರ್ಮಾಚರಣೆಯು ಸಂಭವಿಸುವುದಿಲ್ಲ. ಧಾರ್ಮಿಕನಾಗುವುದೆಂದರೆ ಕೇವಲ ಧರ್ಮಚಿಹ್ನೆಗಳನ್ನು ಧರಿಸುವುದಲ್ಲ. ಅಹಿಂಸಾದಿ ವ್ರತಗಳನ್ನು ಮನಃಪೂರ್ವಕವಾಗಿ ಪರಿಪಾಲಿಸಿದಾಗಲೇ ಧಾರ್ಮಿಕನಾಗಲು ಸಾಧ್ಯವಾಗುವುದು. ಅಂತೆಯೇ ಪೂಜ್ಯಪಾದರು ಈ ಧರ್ಮಾಚಾರ ಸ್ಥಲದಲ್ಲಿ ಅಹಿಂಸಾದಿ ದಶವಿಧ ಧರ್ಮಗಳನ್ನು ಉಪದೇಶಿಸಿದ್ದಾರೆ. ಇಂದು ನೀವೆಲ್ಲ ಸತ್ಯ ಹಾಗೂ ಅಹಿಂಸೆಗಳ ಬಗ್ಗೆ ಸಾಕಷ್ಟು ಶ್ರವಣ ಮಾಡಿದ್ದೀರಿ. ಈ ಧರ್ಮಾಚರಣೆಗಳ ಮರ್ಮವನ್ನರಿತು, ಅದರಂತೆ ಆಚರಿಸಿ, ಸುಖಿಗಳಾಗಿರೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಆಗಷ್ಟ್, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೪

# ಧರ್ಮಾಚಾರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಮಹರ್ಷಿ ವ್ಯಾಸನು ಕಾಶೀ ಖಂಡದಲ್ಲಿ ಕಾಶಿಯ ಅನೇಕ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಮಹಾಸ್ಮಶಾನ ಎಂಬುವುದೂ ಒಂದು. ಸ ಎಂದರೆ ಶವ ಎಂದರ್ಥ. ಶಾನ ವೆಂದರೆ ಅದರ ನಿವಾಸ ಸ್ಥಾನ. ಹೀಗೆ ಸ್ಮಶಾನವೆಂದರೆ ಶವವನ್ನು ಇಡುವ ಇಲ್ಲವೇ ಸುಡುವ ಸ್ಥಾನವೆಂದು ತಿಳಿದುಕೊಳ್ಳಬೇಕು. ಸಾಮಾನ್ಯವಾಗಿ ಪ್ರತಿಯೊಂದು ಊರಿನಲ್ಲಿ ಸ್ಮಶಾನವು ಇದ್ದೇ ಇರುತ್ತದೆ. ಆದರೆ ಜಗತ್ತಿನ ಯಾವುದೇ ಊರಿಗೆ ಸ್ಮಶಾನ ಎಂಬ ಹೆಸರು ಇದ್ದದ್ದು ಕಂಡುಬರುವುದಿಲ್ಲ, ಕಾಶೀ ಕ್ಷೇತ್ರಕ್ಕೆ ಮಾತ್ರ ಮಹಾಸ್ಮಶಾನ ಎಂಬ ಹೆಸರುಂಟು. ಸಾಮಾನ್ಯವಾಗಿ ಸ್ಮಶಾನಗಳಲ್ಲಿ ಸತ್ತಜೀವಿಗಳ ಸ್ಥೂಲಶರೀರವು ಸುಡಲ್ಪಟ್ಟರೆ, ಕಾಶಿಯಲ್ಲಿ ದೇಹ ಬಿಟ್ಟ ಜೀವಿಯ ಸೂಕ್ಷ್ಮ ಶರೀರವೂ ಸಹ ದಹಿಸಿಹೋಗೋಣದರಿಂದ ಇದಕ್ಕೆ ಮಹಾಸ್ಮಶಾನವೆಂದು ಕರೆದಿದ್ದಾರೆ.

ಶಿವನಿಗೆ ಸ್ಮಶಾನವು ಅತ್ಯಂತ ಪ್ರಿಯವಾಗಿರೋಣದರಿಂದ ಮಹಾಸ್ಮಶಾನ ವೆಂದೆನಿಸಿಕೊಂಡ ಈ ಕಾಶೀ ಕ್ಷೇತ್ರದಲ್ಲಿ ಅವನ ನಿತ್ಯ ನಿವಾಸವಿರುತ್ತದೆ. ಸ್ಮಶಾನವು ಮನುಷ್ಯನ ಮನಸ್ಸಿನಲ್ಲಿ ವಿರಕ್ತಿಯನ್ನು ತಂದುಕೊಡುವ ಒಂದು ಸ್ಥಾನವು. ವೈರಾಗ್ಯ ಬಾರದೇ ಜ್ಞಾನವು ಪ್ರಾಪ್ತಿಯಾಗುವುದಿಲ್ಲ, ಆದ್ದರಿಂದ ವಿರಕ್ತ ಭಾವನೆಯನ್ನು ಜಾಗೃತ ಗೊಳಿಸುವುದಕ್ಕಾಗಿ ಅನೇಕ ಜನರು ಸ್ಮಶಾನದಲ್ಲಿ ಕುಳಿತು ಸಾಧನೆಯನ್ನು ಮಾಡುತ್ತಿರುತ್ತಾರೆ. ಊರಿನಲ್ಲಿ ಯಾರೊಬ್ಬರು ಪ್ರಾಣಬಿಟ್ಟಾಗ ಅವರ ಅಂತ್ಯ ಕ್ರಿಯೆಯನ್ನು ಮಾಡಲೋಸುಗ ಸ್ಮಶಾನಕ್ಕೆ ಒಯ್ಯುತ್ತಾರೆ. ಈ ಶವಯಾತ್ರೆಯಲ್ಲಿ ಮನೆಯವರು, ಊರಿನವರು ಮತ್ತು ಪರಊರಿನಿಂದ ಬಂದವರು ಹೀಗೆ ಸಹಸ್ರಾರು ಜನರು ಪಾಲುಗೊಳ್ಳುವುದನ್ನು ಕಾಣುತ್ತೇವೆ. ಓರ್ವನ ಅಂತ್ಯಕ್ರಿಯೆಗೆ ಇಷ್ಟು ಜನರು ಹೋಗುವ ಅವಶ್ಯಕತೆಯೇನು ? ಆ ಕಾರ್ಯವು ಕೇವಲ ನಾಲ್ಕು ಜನರಿಂದಲೂ ಸಾಧ್ಯವಾಗಬಹುದು. ಹೀಗಿದ್ದರೂ ಹೆಚ್ಚಿನ ಸಂಖ್ಯೆಯಲ್ಲಿ ಜನರು ಹೋಗಲು ಕಾರಣವೇನೆಂದರೆ ಸ್ಮಶಾನಕ್ಕೆ ಯಾರೇ ಹೋದರೂ ಅವರ ಮನಸ್ಸಿನ ಮೇಲೆ ಒಂದು ವೈರಾಗ್ಯಭಾವನೆಯು ಒಡಮೂಡುವುದು, ಅದಕ್ಕೆ ಸ್ಮಶಾನ ವೈರಾಗ್ಯವೆಂದು ಹೆಸರು. ಓರ್ವ ವ್ಯಕ್ತಿಯು ತನ್ನ ಜೀವನದಲ್ಲಿ ಅನೇಕ ಸಾರೆ ಸ್ಮಶಾನಕ್ಕೆ ಬರುತ್ತಹೋಗುತ್ತ ಇದ್ದರೆ ಆ ವೈರಾಗ್ಯ ಸಂಸ್ಕಾರಗಳು ಬೆಳೆದು ದೃಢವಾದ ವೈರಾಗ್ಯ ಉದಿಸಿ ಜ್ಞಾನದ ಯೋಗ್ಯತೆಯು

ಪ್ರಾಪ್ತವಾಗುವುದೆಂಬ ಉದ್ದೇಶದಿಂದಲೇ ಅಧಿಕ ಸಂಖ್ಯೆಯಲ್ಲಿ ಜನರು ಸ್ಮಶಾನಕ್ಕೆ ಹೋಗುವ ಪರಂಪರೆಯು ರೂಢಿಯಲ್ಲಿದೆ. ಭಗವಾನ್ ಬುದ್ಧನ ಸಮೀಪಕ್ಕೆ ಯಾರಾದರೂ ದೀಕ್ಷೆಯನ್ನು ಪಡೆಯಲೋಸುಗ ಬಂದರೆ ಅವರನ್ನು ಆತನು ಆರು ತಿಂಗಳವರೆಗೆ ಸ್ಮಶಾನದಲ್ಲಿ ದುಡಿಸುತ್ತಿದ್ದನು. ಆರು ತಿಂಗಳ ಪರ್ಯಂತರವಾಗಿ ದಿನಾಲು ಆ ಸ್ಮಶಾನದಲ್ಲಿ ಹುಗಿಯುವ ಹಾಗೂ ಸುಡುವ ಕ್ರಿಯೆಗಳನ್ನು ನೋಡಿ ನೋಡಿ ಅವರ ಮನಸ್ಸಿನಲ್ಲಿ ದೇಹಾದಿಗಳ ಬಗ್ಗೆ ಇರುವ ಮಮತ್ವಭಾವನೆಯು ನಷ್ಟವಾಗಿ ಆತ್ಮಬುದ್ಧಿಯು ಜಾಗ್ರತವಾಗುತ್ತಿತ್ತು. ಎಷ್ಟೋ ದಿವಸ ಉಪದೇಶವನ್ನು ಕೇಳಿದರೂ ಬಾರದಿರುವ ವೈರಾಗ್ಯವು ಸ್ಮಶಾನದಲ್ಲಿ ಕೇವಲ ವಾಸಮಾಡಿದ ಮಾತ್ರಕ್ಕೆ ಉದ್ಭವವಾಗುತ್ತದೆ. ಆದ್ದರಿಂದ ನಮ್ಮ ಜೀವನದ ಸುಧಾರಣೆಯಲ್ಲಿ ಸ್ಮಶಾನದ ಪಾತ್ರವೂ ಸಹ ಬಹು ಮಹತ್ವದ್ದಾಗಿದೆ ಯೆಂದು ತಿಳಿದುಕೊಳ್ಳಬೇಕು. ಕಾಶೀ ಮಹಾಕ್ಷೇತ್ರವು ತನ್ನಲ್ಲಿ ದೇಹವನ್ನು ತ್ಯಜಿಸಿದ ಜೀವಿಗೆ ಮೋಕ್ಷವನ್ನು ದಯಪಾಲಿಸೋಣದರಿಂದ ಉಳಿದೆಲ್ಲ ಸ್ಮಶಾನಕ್ಕಿಂತಲೂ ಇದು ವಿಲಕ್ಷಣವಾಗಿರುತ್ತದೆ. ಅಂತೆಯೇ ಇದಕ್ಕೆ ಮಹಾಸ್ಮಶಾನವೆಂದು ಕರೆದಿದ್ದಾರೆ.

ಇಂತಹ ಮಹಾಸ್ಮಶಾನವಾದ ಈ ಕ್ಷೇತ್ರದಲ್ಲಿ ಶ್ರೀ ಸಿದ್ಧಾಂತಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಧರ್ಮಾಚಾರ ಸ್ಥಲದಲ್ಲಿ ಬರುವ ಸತ್ಯ ಹಾಗೂ ಅಸ್ತೇಯಗಳ ಬಗ್ಗೆ ಕೂಲಂಕಷವಾಗಿ ಶ್ರವಣ ಮಾಡಿದ್ದೀರಿ, ಇಂದು ಮುಂದಿನ ಧರ್ಮಗಳಾದ ಬ್ರಹ್ಮಚರ್ಯಾದಿಗಳ ಬಗ್ಗೆ ವಿವೇಚಿಸೋಣ.

''ಬ್ರಹ್ಮಚರ್ಯಂ ಗುಪ್ತೇಂದ್ರಿಯಸ್ಯೋಪಸ್ಥಸ್ಯ ಸಂಯಮಃ''

ಎಂಬ ಯೋಗಸೂತ್ರದ ಭಾಷ್ಯಾನುಸಾರವಾಗಿ ಗುಪ್ತೇಂದ್ರಿಯದ ಸಂಯಮಕ್ಕೆ ಬ್ರಹ್ಮಚರ್ಯವೆಂದು ಕರೆಯುತ್ತಾರೆ. ಕೇವಲ ಗುಪ್ತೇಂದ್ರಿಯದ ಸಂಯಮವು ಪರಿ ಪೂರ್ಣವಾದ ಬ್ರಹ್ಮಚರ್ಯವಾಗಲಾರದು. ಅದರ ಜೊತೆಗೆ ಮೈಥುನ ವಿಷಯಕ ವಾದ ಚಿಂತನೆ, ಭಾಷಣ ಮತ್ತು ಸಂಭಾಷಣಗಳ ಮೇಲೂ ಸಂಯಮವನ್ನು ಮಾಡಿ ಕೊಂಡಾಗ ಅದು ನಿಜವಾದ ಬ್ರಹ್ಮಚರ್ಯವ್ರತವಾಗುವುದು. ಅದನ್ನೇ ಈಶ್ವರ ಗೀತೆಯಲ್ಲಿ–

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ॥
ಸರ್ವತ್ರ ಮೈಥುನ ತ್ಯಾಗಂ ಬ್ರಹ್ಮಚರ್ಯಂ ಪ್ರಚಕ್ಷತೇ ॥

(ಈಶ್ವರಗೀತಾ ೧೧–೧೮)

ಹೀಗೆ ಹೇಳಲಾಗಿದೆ. ತಾತ್ಪರ್ಯವೇನೆಂದರೆ ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳಿಂದ ಮೈಥುನವನ್ನು ಪರಿತ್ಯಜಿಸುವುದೇ ಬ್ರಹ್ಮಚರ್ಯವು.

ಇದೇ ವಿಷಯವೇ ಇನ್ನೊಂದು ಕಡೆ–

ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್
ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವಚ
ಏತನ್ಮೈ ಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ ।
ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಮ್ ॥

ಹೀಗೆ ಅತಿ ವಿಸ್ತಾರವಾಗಿ ಬ್ರಹ್ಮಚರ್ಯದ ಲಕ್ಷಣವನ್ನು ಪ್ರತಿಪಾದಿಸಲಾಗಿದೆ. ಇದರ ಪ್ರಕಾರವಾಗಿ ನಾಯಕ ನಾಯಕಿಯರ ಮನಸ್ಸಿನಲ್ಲಿ ಪರಸ್ಪರ ಉಂಟಾಗುವ ಸ್ಮರಣೆ, ಪರಸ್ಪರ ಪ್ರಶಂಸೆ, ಕೂಡಿ ಆಡುವುದು, ಕದ್ದು ನೋಡುವುದು, ಕದ್ದು ಮಾತನಾಡುವುದು ಮನಸ್ಸಿನಲ್ಲಿ ಮೈಥುನದ ಬಗ್ಗೆ ಯಾವಾಗಲೂ ಸಂಕಲ್ಪವನ್ನು ಮಾಡುವುದು. ಇದನ್ನು ಇಂದೇ ಮಾಡೇ ತೀರಬೇಕೆಂಬ ನಿಶ್ಚಯವು, ಹಾಗೂ ಕೊನೆಗೆ ಮೈಥುನವನ್ನು ಮಾಡುವುದು. ಇವು ಎಂಟು ಮೈಥುನ ಸಂಬಂಧಿಗಳಾದ ಅಷ್ಟಾಂಗಗಳು ಎಂದು ಕರೆಯಲ್ಪಡುತ್ತವೆ. ಇವುಗಳೇ ವಿಪರೀತ ಸ್ವರೂಪಗಳನ್ನು ತಾಳಿದಾಗ ಬ್ರಹ್ಮಚರ್ಯದ ಅಷ್ಟಾಂಗಗಳೆಂದು ಕರೆಯಲ್ಪಡುತ್ತವೆ. ಅಂದರೆ ಪೂರ್ವದಲ್ಲಿ ಹೇಳಿದ ಪರಸ್ಪರ ಸ್ಮರಣೆ, ಪರಸ್ಪರರ ಗುಣಗಾನ, ಪರಸ್ಪರ ಕ್ರೀಡೆ ಮುಂತಾದವುಗಳು ತನ್ನಿಂದ ಆಗದಿರುವಂತೆ ಎಚ್ಚರಿಕೆಯನ್ನು ವಹಿಸುವುದೇ ಪರಿಪೂರ್ಣವಾದ ಬ್ರಹ್ಮಚರ್ಯವೆನಿಸುವುದು.

ಇಂತಹ ಬ್ರಹ್ಮಚರ್ಯ ವ್ರತವನ್ನು ಪರಿಪಾಲನೆ ಮಾಡಿದಾಗ ವ್ಯಕ್ತಿಯ ಮನಸ್ಸಿನಲ್ಲಿ ಮೇಧಾಶಕ್ತಿಯು ಬೆಳೆಯುತ್ತದೆ. ಅದರ ಬಲದಿಂದಲೇ ಬ್ರಹ್ಮಜ್ಞಾನವನ್ನು ಪಡೆಯಲು ಸಾಧ್ಯವಾಗುವುದು. ಹೀಗೆ ಈ ಬ್ರಹ್ಮಚರ್ಯ ವ್ರತವು ಬ್ರಹ್ಮಜ್ಞಾನದ ಮೂಲ ಸಾಧನವೆಂಬುದಾಗಿ ತಿಳಿದುಕೊಳ್ಳಬೇಕು. ಈ ಬ್ರಹ್ಮಚರ್ಯ ಭಾವನೆಯಿದ್ದಾಗಲೇ ವಿವೇಕ ವೈರಾಗ್ಯಾದಿಗಳು ಒಡಮೂಡುತ್ತವೆ. ಇವೇ ಮುಂದೆ ಬ್ರಹ್ಮಜ್ಞಾನಕ್ಕೆ ಸಹಾಯಕ ಗಳಾಗುತ್ತವೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಇದಕ್ಕೆ ಸಂಬಂಧಪಟ್ಟ ಒಂದು ಸುಮನೋಹರವಾದ ಕಥೆಯುಂಟು.

ಒಂದಾನೊಂದು ಸಮಯದಲ್ಲಿ ಪ್ರಜಾಪತಿಯಾದ ಬ್ರಹ್ಮದೇವನ ಕಡೆಗೆ ದೇವ, ದಾನವ ಮತ್ತು ಮಾನವರು ಕೂಡಿಕೊಂಡು ಹೋಗಿ ''ಅಧೀಃ ಮೇ ಭಗವನ್'' ಅಂದರೆ ಹೇ ! ಪ್ರಜಾಪತಿಯೇ ! ನಮಗೇನಾದರೂ ಉಪದೇಶವನ್ನು ಮಾಡಿ ಎಂದು ಪ್ರಾರ್ಥಿಸಿ ಕೊಂಡರು. ಆಗ ಬ್ರಹ್ಮದೇವನು ಆ ಮೂರೂ ಜನರನ್ನೂ ಉದ್ದೇಶಿಸಿ 'ದ, ದ, ದ' ಎಂಬುದಾಗಿ ಮೂರು ಸಾರೆ ಉಚ್ಚರಿಸಿದನು. ಆಗ ದೇವತೆಗಳು– ಹೇ ಭಗವನ್ ಈ 'ದ' ಶಬ್ದದ ಅರ್ಥವೇನು ? ಎಂಬುದಾಗಿ ಕೇಳಿದರು. ಆಗ ಬ್ರಹ್ಮದೇವನು. ಎಲೈ ದೇವತೆಗಳೇ ! ನೀವೆಲ್ಲ ಸದಾ ಸ್ವರ್ಗದಲ್ಲಿದ್ದು, ಅಮೃತಪಾನ, ಅಪ್ಸರಾಗಮನ ಮತ್ತು ನಂದನವನ ವಿಹಾರ ಮುಂತಾದ ವಿಷಯಭೋಗದಲ್ಲಿಯೇ ಸದಾ ಆಸಕ್ತರಾಗಿರುವ ನಿಮಗೆ ಬ್ರಹ್ಮಜ್ಞಾನವು ಅದೆಂದಿಗೂ ಆಗುವದಿಲ್ಲ. ಒಂದು ವೇಳೆ ಬ್ರಹ್ಮಜ್ಞಾನವನ್ನು ಪಡೆಯುವ ಇಚ್ಛೆ ನಿಮಗಿದ್ದರೆ ನಿಮ್ಮೆಲ್ಲ ಇಂದ್ರಿಯಗಳ ಮೇಲೆ ದಮನವನ್ನು ಮಾಡಿರಿ. ಇದುವೇ ನಿಮಗೆ ಉಪದೇಶ ಮಾಡಿದ 'ದ' ಶಬ್ದದ ಅರ್ಥವು. ಇದೇ ಪ್ರಕಾರವಾಗಿ ಮನುಷ್ಯರಿಗೆ 'ದ' ಎಂದರೆ ದಾನ ಮಾಡಬೇಕೆಂಬುದಾಗಿಯೂ ಹಾಗೂ ಅಸುರರಿಗೆ 'ದ' ಎಂದರೆ ದಯಾಗುಣವುಳ್ಳವರಾಗಿರಬೇಕೆಂಬುದಾಗಿ ಉಪದೇಶಿಸಲಾಗಿದೆ.

ಬ್ರಹ್ಮದೇವರ ಉಪದೇಶದಂತೆ ದೇವತೆಗಳ ಒಡೆಯನಾದ ಇಂದ್ರನು ನಾಲ್ವತ್ತೆಂಟು ವರ್ಷಗಳವರೆಗೆ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಿ ಕೊನೆಗೆ ಬ್ರಹ್ಮ ಜ್ಞಾನವನ್ನು ಪಡೆದ ಕಥಾ ಪ್ರಸಂಗವು ಛಾಂದೋಗ್ಯೋಪನಿಷತ್ತಿನಲ್ಲಿ ಸವಿಸ್ತಾರವಾಗಿ

ನಿರೂಪಿಸಲಾಗಿದೆ. ಹೀಗೆ ಬ್ರಹ್ಮಚರ್ಯ ವ್ರತವು ಬ್ರಹ್ಮಜ್ಞಾನಕ್ಕೆ ಸಹಾಯಕ ವಾಗುವದೆಂಬುದು ತಿಳಿದುಬರುತ್ತದೆ.

ನಮ್ಮ ದೇಶದ ಸಂಸ್ಕೃತಿಯಲ್ಲಿ ಬರುವ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ಚತುರ್ವಿಧ ಆಶ್ರಮಗಳಲ್ಲಿ ಗೃಹಸ್ಥಾಶ್ರಮವನ್ನು ಬಿಟ್ಟರೆ ಉಳಿದ ಮೂರೂ ಆಶ್ರಮಗಳಲ್ಲಿ ಬ್ರಹ್ಮಚರ್ಯ ಪರಿಪಾಲನೆಯು ಪ್ರತಿಪಾದಿಸಲಾಗಿದೆ. ಗೃಹಸ್ಥಾಶ್ರಮದಲ್ಲಿಯೂ ಸಹ 'ನುತಬ್ರಹ್ಮಚರ್ಯವ್ರತ'ವನ್ನು ಪರಿಪಾಲಿಸಬೇಕೆಂಬ ವಿಧಾನವಿದೆ. ಅಂದರೆ ತನ್ನ ವಂಶಾಭಿವೃದ್ಧಿಗಾಗಿ ಬ್ರಹ್ಮಚರ್ಯ ವ್ರತವನ್ನು ಖಂಡಿತ ಮಾಡಿಕೊಂಡರೂ, ಗೃಹಸ್ಥನು ವಿಷಯಭೋಗಿಯಾಗಬೇಕೇ ವಿನಃ ವಿಷಯ ಲಂಪಟ ನಾಗಬಾರದೆಂಬ ಉದ್ದೇಶದಿಂದ ಅವನಿಗೂ ಸಹ ವಿಷಯಭೋಗದಲ್ಲಿ ಅನೇಕ ಕಡಿವಾಣಗಳನ್ನು ಹಾಕಲಾಗಿದೆ.

ಓರ್ವ ವ್ಯಕ್ತಿಯು ಗೃಹಸ್ಥಾಶ್ರಮವನ್ನು ಪ್ರವೇಶಿಸಿದಾಗ ಆತನು ಸದಾ ಸರ್ವದಾ ತನ್ನ ಸತಿಯೊಂದಿಗೆ ಕೂಡಿದ್ದು ವಿಷಯ ವ್ಯಾಮೋಹಿಯಾಗಿ ಸ್ವಾಸ್ಥ್ಯವನ್ನು ಹಾಳು ಮಾಡಿ ಕೊಳ್ಳಬಾರದೆಂಬ ಉದ್ದೇಶದಿಂದ ಮತ್ತು ಮಧ್ಯ ಮಧ್ಯದಲ್ಲಿ ಬ್ರಹ್ಮಚರ್ಯವ್ರತವು ಇವನಿಂದ ಆಚರಿಸಲ್ಪಡಬೇಕೆಂಬ ಉದ್ದೇಶದಿಂದ ಹಬ್ಬ ಹರಿದಿನಗಳ ನಿಮಿತ್ತವಾಗಿ ಆತನ ಧರ್ಮಪತ್ನಿಯನ್ನು ತವರು ಮನೆಗೆ ಆಗಾಗ ಕಳಿಸಿಕೊಡುವ ಪದ್ಧತಿಯು ಇಂದಿಗೂ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಹೊಸದಾಗಿ ಲಗ್ನವಾದ ವರ್ಷ ಆಷಾಢಮಾಸ ಬಂದಿತೆಂದರೆ ಅತ್ತೆ-ಸೊಸೆ ಕೂಡಿರಬಾರದು ಎಂಬ ಒಂದು ಪದ್ಧತಿಯು ನಡೆದು ಬಂದಿದೆ. ಅಂದರೆ ಈ ನಿಮಿತ್ತವಾಗಿ ಗಂಡ ಹೆಂಡರು ದೂರಾಗಿದ್ದು ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಬೇಕೆಂಬುದು ಅದರ ಉದ್ದೇಶವಾಗಿದೆ. ಈ ರೂಢಿ ಪರಂಪರೆಯ ಮರ್ಮವನ್ನು ಇಂದಿನ ಯುವ ಪೀಳಿಗೆಯು ಅತ್ತೆ-ಸೊಸೆ ಕೂಡಿರಬಾರದೆಂಬ ಶಬ್ದದ ಕೇವಲ ಸ್ಥೂಲಾರ್ಥದ ವಿಚಾರ ಮಾಡಿ ತನ್ನ ಹೆಂಡತಿಯನ್ನು ತವರು ಮನೆಗೆ ಕಳಿಸುವುದನ್ನು ಬಿಟ್ಟು, ತನ್ನ ತಾಯಿಯನ್ನೇ ಕೆಲದಿನ ಮಟ್ಟಿಗೆ ಬೇರೆ ಊರಿಗೆ ಕಳಿಸುವ ಒಂದು ಹೊಸ ಪರಂಪರೆಯು ಇತ್ತೀಚೆಗೆ ಬೆಳೆದುಬರುತ್ತಿದೆ. ಇದು ಅಷ್ಟೊಂದು ವೈಜ್ಞಾನಿಕವಾದ ಪರಂಪರೆಯಲ್ಲ. ಇದರ ಬಗ್ಗೆ ನವ ದಂಪತಿಗಳು ಕೂಲಂಕಷವಾಗಿ ವಿಚಾರ ಮಾಡಿ ಪ್ರಾಚೀನಕಾಲದಿಂದ ಬಂದಿರುವ 'ರೂಢಿಯ' ರಹಸ್ಯಾರ್ಥವನ್ನು ತಿಳಿದು ಆಚರಿಸಬೇಕು.

ಇದೂ ಅಲ್ಲದೆ ದಂಪತಿಗಳು ಕೂಡಿಕೊಂಡಿರುವಾಗಲೂ ಸಹ ಅವರಲ್ಲಿ ಮೈಥುನ ಪ್ರವೃತ್ತಿಯು ಅಧಿಕವಾಗಿ ಬೆಳೆಯಬಾರದೆಂಬ ಉದ್ದೇಶದಿಂದ ಗಂಡಹೆಂಡರ ಸಮಾಗಮ ಪ್ರಸಂಗದಲ್ಲಿ ಕೆಲವೊಂದು ತಿಥಿ-ವಾರ-ನಕ್ಷತ್ರಾದಿಗಳನ್ನು ನಿಷೇಧಿಸಲಾಗಿದೆ. ಅಮವಾಸ್ಯೆ ಪೌರ್ಣಿಮೆ, ಸಂಕ್ರಾಂತಿ, ಅಷ್ಟಮಿ, ಹೀಗೆ ಇನ್ನೂ ಅನೇಕ ತಿಥಿ-ಮಿತಿಗಳು ಮೈಥುನಕ್ಕೆ ವರ್ಜ್ಯವೆಂಬುದಾಗಿ ಹೇಳಲಾಗಿದೆ. ಇದರಲ್ಲಿಯೂ ಸಹ ದಂಪತಿಗಳ ಬ್ರಹ್ಮಚರ್ಯ ಪರಿಪಾಲನೆಗೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ಶಾಸ್ತ್ರೋಕ್ತವಾದ ಈ ಕಟ್ಟು-ನಿಟ್ಟುಗಳನ್ನು ಕಡ್ಡಾಯವಾಗಿ ನಿಷ್ಠೆಯಿಂದ ಪರಿಪಾಲಿಸುವ ಗೃಹಸ್ಥಾಶ್ರಮಿಗೆ ನುತ ಬ್ರಹ್ಮಚಾರಿ ಎಂಬುದಾಗಿ ಕರೆಯಲಾಗಿದೆ.

ಹೀಗೆ ಶಾಸ್ತ್ರಗಳಲ್ಲಿ ನೈಷ್ಠಿಕ ಬ್ರಹ್ಮಚರ್ಯ, ಸುತಬ್ರಹ್ಮಚರ್ಯ ವಿಧುರ ಬ್ರಹ್ಮಚರ್ಯ ಮತ್ತು ವಿಧವಾ ಬ್ರಹ್ಮಚರ್ಯವೆಂಬುದಾಗಿ ಬ್ರಹ್ಮಚರ್ಯದ ಅನೇಕ ಪ್ರಕಾರಗಳು ಪ್ರತಿಪಾದಿಸಲ್ಪಟ್ಟಿವೆ.

ಒಟ್ಟಿನಲ್ಲಿ ಮನುಷ್ಯನು ಯಾವುದೇ ರೀತಿಯಿಂದಲಾದರೂ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಬೇಕೆಂಬುದೇ ಶಾಸ್ತ್ರಗಳ ಮುಖ್ಯ ಉದ್ದೇಶವಾಗಿದೆ. ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಿದಾಗಲೇ ಆತನು ಬ್ರಹ್ಮಜ್ಞಾನಿಯಾಗಲು ಸಮರ್ಥನಾಗುವನು. ಆದ್ದರಿಂದ ಪೂಜ್ಯಪಾದರು ದಶವಿಧ ಧರ್ಮಾಚರಣೆಗಳಲ್ಲಿ ಬ್ರಹ್ಮಚರ್ಯಕ್ಕೂ ಸಹ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ.

ಇನ್ನು ಮುಂದೆ ಬರುವ ಧರ್ಮವೇ ದಯೆಯು. ಸಕಲಪ್ರಾಣಿಗಳ ಬಗ್ಗೆ ಇರುವ ಕಾರುಣ್ಯಭಾವಕ್ಕೆ ದಯೆ ಎಂಬುದಾಗಿ ಕರೆಯುತ್ತಾರೆ. ಯಾರ ಹೃದಯದಲ್ಲಿ 'ದಯಾ' ಭಾವನೆಯಿರುತ್ತದೆಯೋ ಅವನು ಯಾರಿಗೂ ಯಾವ ಕಾಲಕ್ಕೂ ದುಃಖವನ್ನು ಕೊಡಲಾರನು. ಇದೂ ಅಲ್ಲದೆ ದುಃಖಿತರಾದ ಪ್ರಾಣಿಗಳನ್ನು ನೋಡಿ ಅವರ ಬಗ್ಗೆ ಕನಿಕರ ಹುಟ್ಟಿ ತನ್ನ ಶಕ್ತ್ಯಾನುಸಾರವಾಗಿ, ಅವರಿಗೆ ಸಹಾಯವನ್ನು ಮಾಡುತ್ತಿರುತ್ತಾನೆ. ಹೀಗೆ ದಯಾಭಾವವುಳ್ಳ ವ್ಯಕ್ತಿಯಲ್ಲಿ ಸಹಾನುಭೂತಿ ಹಾಗೂ ಸಮಾನುಭೂತಿಗಳೆರಡೂ ಇರುತ್ತವೆ. ದುಃಖಿಯಾದ ವ್ಯಕ್ತಿಯೊಂದಿಗೆ ತಾನು ತಟಸ್ಥನಾಗಿದ್ದು ಅವನಿಗೆ ಸಹಾಯವನ್ನು ಒದಗಿಸುವುದು ಸಹಾನುಭೂತಿಯಾದರೆ, 'ಅನ್ಯವ್ಯಕ್ತಿಗಾಗುವ ದುಃಖವು ತನಗೇ ಆಗುತ್ತಿದೆ' ಎಂಬ ತಾದಾತ್ಮ್ಯಭಾವವನ್ನು ತಾಳಿ ಅವನಿಗೆ ಸಹಾಯವನ್ನು ಒದಗಿಸುವ ಭಾವನೆಗೆ ಸಮಾನುಭೂತಿ ಎಂದು ಕರೆದಿದ್ದಾರೆ. ಹೀಗೆ ಸಹಾನುಭೂತಿ ರೂಪವಾದ ಮತ್ತು ಸಮಾನುಭೂತಿ ರೂಪವಾದ ದಯೆಗಳಲ್ಲಿ ಸಮಾನುಭೂತಿ ರೂಪವಾದ ದಯೆಯೇ ಸರ್ವೋತ್ಕೃಷ್ಟವಾದುದು. ಇಂತಹ ದಯಾಭಾವನೆಯಿಂದ ಜಗತ್ತಿನ ಜೀವಿಗಳನ್ನು ತನ್ನಂತೆ ಕಾಣುವ ಒಂದು ದಿವ್ಯ ದೃಷ್ಟಿಯು ಪ್ರಾಪ್ತವಾಗುತ್ತದೆ. ಈ ದೃಷ್ಟಿಯಿಂದಲೇ ಸರ್ವವೆಲ್ಲವನ್ನು ತನ್ನ ರೂಪವಾಗಿ ತಿಳಿಯುವ ಯೋಗ್ಯತೆಯು ದೊರೆಯುತ್ತದೆ. ಆದ್ದರಿಂದ ದಯೆಯು ಪರಂಪರೆಯಿಂದ ಆತ್ಮಜ್ಞಾನಕ್ಕೆ ಸಹಾಯಕ ವಾಗುವುದು. ಅಂತೆಯೇ ಪೂಜ್ಯಪಾದರು ದಯೆಯನ್ನು ಸಹ ಒಂದು ಧರ್ಮವನ್ನಾಗಿ ಪರಿಗಣಿಸಿದ್ದಾರೆ. ದಯೆಯ ಮರ್ಮವನ್ನರಿತ ಶ್ರೀ ಬಸವಣ್ಣನವರು–

> ದಯವಿಲ್ಲದ ಧರ್ಮವದೇವುದಯ್ಯಾ ?
> ದಯವೇಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ ;
> ದಯವೇ ಧರ್ಮದ ಮೂಲವಯ್ಯಾ ;
> ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

ಎಂಬ ತಮ್ಮ ಈ ವಚನದಲ್ಲಿ ದಯೆಯು ಎಲ್ಲ ಧರ್ಮಗಳ ಮೂಲ ಎಂಬುದಾಗಿ ತಿಳಿಯಪಡಿಸಿದ್ದಾರೆ. ಆದ್ದರಿಂದ ಪ್ರತಿಯೊಬ್ಬರೂ ಪ್ರಾಣಿದಯೆಯುಳ್ಳವರಾಗಿರಬೇಕು.

ಇನ್ನು ಈ ಮುಂದೆ ಬರುವ ಧರ್ಮವೇ ಕ್ಷಮೆಯು. ಮನುಷ್ಯನಲ್ಲಿರುವ ಸಹನ ಶಕ್ತಿಗೆ ಕ್ಷಮಾ ಎಂದು ಕರೆಯುತ್ತಾರೆ. ಅಪರಾಧ ಮಾಡಿದ ವ್ಯಕ್ತಿಗೆ ದಂಡಕೊಡುವ

ಸಾಮರ್ಥ್ಯವಿದ್ದರೂ ದಂಡವಿಲ್ಲದೆ ಸುಧಾರಿಸಿಕೊಳ್ಳಲೆಂಬ ಭಾವನೆಯಿಂದ ಸಹಿಸುವುದೇ ಕ್ಷಮೆಯು.

ಈ ಕ್ಷಮೆಯೂ ಸಹ ಒಂದು ತಪಸ್ಸೆಂದು ಕರೆಯಿಸಿಕೊಳ್ಳುವುದು. ಓರ್ವ ಕನ್ನಡದ ಕವಿಯು

ತಾಳುವಿಕೆಗಿಂತ ತಪವಿಲ್ಲ।
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ॥ ಪಲ್ಲ॥
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು ।
ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು ॥
ಕಹಿನುಡಿ ಕುಹಕ ಕುಮಂತ್ರವನು ತಾಳು
ತಾಳುವಿಕೆಗಿಂತ ತಪವಿಲ್ಲ...............
.........................................

ಈ ರೀತಿಯಾಗಿ ತಾಳ್ಮೆಯ ಸ್ವರೂಪವನ್ನು ನಿರೂಪಿಸಿ ಅದೂ ಒಂದು ತಪಸ್ಸೆಂಬುದಾಗಿ ಸ್ಪಷ್ಟಪಡಿಸಿದ್ದಾರೆ. ತಾಳಿದವನು ಬಾಳಿಯಾನು ಎಂಬ ಕನ್ನಡದ ನಾಡ ನುಡಿಯಂತೆ ಯಾರು ಎಷ್ಟು ಸಹನೆಮಾಡಿಕೊಳ್ಳುವರೋ ಅವರು ಅಷ್ಟೇ ದೊಡ್ಡವರಾಗುವರು. ಆದಕಾರಣ ಈ ಕ್ಷಮಾಗುಣವನ್ನು ಮೈಗೂಡಿಸಿಕೊಳ್ಳಬೇಕೆಂಬುದೇ ಪೂಜ್ಯಪಾದರ ಆಶಯವಾಗಿದೆ.

ಇನ್ನು ಮುಂದಿನ ಧರ್ಮವೇ ದಾನವು. ''ಸ್ವತ್ವ ನಿವೃತ್ತಿಪೂರ್ವಕ ಧನಾದಿ ಸಮರ್ಪಣಂ ದಾನಮ್'' ಅಂದರೆ ತನ್ನದೆನ್ನುವ ಭಾವನೆಯನ್ನು ಇಟ್ಟುಕೊಳ್ಳಲಾರದೆ ಸುಪಾತ್ರದಲ್ಲಿ ಧನಾದಿಗಳನ್ನು ಸಮರ್ಪಿಸುವುದೇ ದಾನವು. ''ತೇನ ತ್ಯಕ್ತೇನ ಭುಂಜೀಥಾಃ'' ಎಂಬ ಈಶಾವಾಸ್ಯ ಉಪನಿಷತ್ ಮಂತ್ರದಲ್ಲಿ ತಾನು ಉಪಭೋಗಿಸುವ ವಸ್ತುಗಳೆಲ್ಲವನ್ನು ಭಗವದರ್ಪಣ ಮಾಡಿ ಅದನ್ನು ಪ್ರಸಾದ ರೂಪವಾಗಿ ಸೇವಿಸುವ ವಿಧಾನವು ಪ್ರತಿಪಾದಿಸಲ್ಪಟ್ಟಿದೆ. ಯಾರು ಅನ್ನಾದಿ ಭೋಗ್ಯ ಪದಾರ್ಥಗಳನ್ನು ಅನ್ಯರಿಗೆ ದಾನ ಮಾಡದೆ ತಾವೇ ಭುಂಜಿಸುತ್ತಾರೆಯೋ ಅವರು ಕಳ್ಳರೆಂಬುದಾಗಿ ಭಗವದ್ಗೀತೆ ಯಲ್ಲಿ ಪ್ರತಿಪಾದಿಸಲಾಗಿದೆ. ಹಿಂದಿನ ಕಾಲದಲ್ಲಿ ತಾವು ಉಡಬೇಕಾಗಿರುವ ನೂತನ ವಸ್ತ್ರಾದಿಗಳನ್ನು ಮೊದಲು ಅನ್ಯರಿಗೆ ಉಡಲುಕೊಟ್ಟು ಆಮೇಲೆ ಅದನ್ನು ಉಡುವ ಪದ್ಧತಿಯು ರೂಢಿಯಲ್ಲಿತ್ತು. ಈಗಲೂ ಸಹ ಅಲ್ಲಲ್ಲಿ ಈ ಪದ್ಧತಿಯನ್ನು ಕಾಣಬಹುದು. ಆದರೆ ಸರ್ವೆಸಾಮಾನ್ಯವಾಗಿ ಈ ಪದ್ಧತಿಯು ಲುಪ್ತವಾಗುತ್ತ ನಡೆದಿದೆ. ತಾನು ಉಡುವ ವಸ್ತ್ರಾದಿಗಳನ್ನು ಅನ್ಯರಿಗೇಕೆ ಕೊಡಬೇಕು ? ಎಂಬ ಸ್ವಾರ್ಥ ಮನೋಭಾವನೆಯು ಒಡಮೂಡಿರುವುದೇ ಕಾರಣವು.

ದಾನ ಮಾಡೋಣದರಿಂದ ಹೃದಯ ವೈಶಾಲ್ಯತೆಯು ಬೆಳೆಯುತ್ತ ಹೋಗುವ ದಲ್ಲದೆ ಕಾಲಾಂತರದಲ್ಲಿ ಈ ದಾನದ ಮಹಿಮೆಯಿಂದಲೇ ದಾನಿಯು ವಿಶ್ವಕೌಟುಂಬಿಕ ಭಾವನೆಯನ್ನು ತಾಳುತ್ತಾನೆ. ದಾನಮಾಡುವುದು ಧರ್ಮವಷ್ಟೇ ಅಲ್ಲ, ಅದು ಕರ್ತವ್ಯವೂ ಅಹುದು. ತಾನು ಸಂಪಾದಿಸಿದ ಸಂಪತ್ತಿನಲ್ಲಿ ಕೆಲವಷ್ಟು ಅಂಶವನ್ನು ಧರ್ಮಕ್ಕಾಗಿ,

ಸಮಾಜಕ್ಕಾಗಿ ಮತ್ತು ರಾಷ್ಟ್ರಕ್ಕಾಗಿ ಪ್ರತಿಯೊಬ್ಬರೂ ಕೊಡಲೇಬೇಕು ಅಂದಾಗಲೇನೇ ಪ್ರಪಂಚದ ವ್ಯವಸ್ಥೆಯು ಸುಗಮವಾಗಿ ಸಾಗುವುದು.

ಈ ಜಗತ್ತಿನಲ್ಲಿ ನಮ್ಮದೆನ್ನುವ ವಸ್ತುವು ಯಾವುದೂ ಇರುವದಿಲ್ಲ. ಎಲ್ಲವೂ ಈಶ್ವರನದೇ ಅಂದಾಗ ಈಶ್ವರನ ಅನುಗ್ರಹದಿಂದ ಪ್ರಾಪ್ತವಾದದ್ದರಲ್ಲಿ ಸ್ವಲ್ಪನ್ನು ಈಶ್ವರನಿಗೆ ಸಮರ್ಪಿಸುವುದು ಜೀವನ ಕರ್ತವ್ಯವಾಗಿರುತ್ತದೆ. ಯಾವ ವ್ಯಕ್ತಿಯು ಸಂಪಾದಿಸಿದ ಸಂಪತ್ತನ್ನು ತಾನು ಉಪಭೋಗಿಸದೆ ಅನ್ಯರಿಗೂ ಕೊಡದೇ ಹೋದರೆ ಅದಕ್ಕೆ ಮೂರನೆಯದಾದ ವಿನಾಶಗತಿಯೇ ಪ್ರಾಪ್ತವಾಗುವುದು. ಆದ್ದರಿಂದ ಉದಾರಿ ಯಾಗಿ ದಾನಮಾಡುವ ರೂಢಿಯನ್ನು ಬೆಳೆಸಿಕೊಳ್ಳಬೇಕು. ಶ್ರೀ ತುಳಸೀದಾಸರು– ''ಲೋಭ ಪಾಪಕಾ ಬಾಪ ಬಖಾನಾ। ದಾನ ಧರ್ಮಕಾ ಮೂಲ।'' ಎಂಬುದಾಗಿ ಹೇಳಿ 'ಲೋಭವು ಪಾಪದ ಜನಕವಾದರೆ' ದಾನವು ಧರ್ಮದ ಮೂಲ ಎಂಬುದಾಗಿ ತಿಳಿಸಿದ್ದಾನೆ. ಒಂದು ವೃಕ್ಷದ ತಾಯಿಬೇರು ಕಡಿದುಹೋಯಿತೆಂದರೆ ಆ ಗಿಡವೇ ಒಣಗಿ ಹೋಗುವಂತೆ ದಾನ ರೂಪವಾದ ಧರ್ಮವನ್ನು ಮಾಡದೇ ಹೋದಾಗ ಪುಣ್ಯಹೀನ ನಾದ ಅವನ ಬದುಕು ದುಃಖಮಯವಾಗುವುದು. ನಾವು ಯಾರಿಗಾದರೂ ಏನನ್ನಾದರೂ ದಾನಮಾಡಿದರೆ ಅದು ಅವರಿಗೆ ಹೋಯಿತೆಂದು ಭಾವಿಸಕೂಡದು. ಅದು ಒಂದಿಲ್ಲೊಂದು ರೀತಿಯಿಂದ ವೃದ್ಧಿಂಗತವಾಗಿ ಪುನಃ ತನಗೇ ಪ್ರಾಪ್ತವಾಗುತ್ತದೆ. ಅಂತೆಯೇ ಸರ್ವಜ್ಞಕವಿಯು–

ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ
ಕೊಟ್ಟಿದ್ದು ಕೆಟ್ಟಿತೆನಬೇಡ
ಅದು ಮುಂದೆ ಕಟ್ಟಿಹುದು ಬುತ್ತಿ ಸರ್ವಜ್ಞ।

ಈ ತನ್ನ ವಚನದಲ್ಲಿ ಆ ಮಾತನ್ನು ಸ್ಪಷ್ಟಪಡಿಸಿದ್ದಾನೆ. ಈ ವಿಷಯದಲ್ಲಿ ಒಂದು ಬಹು ಸುಂದರವಾದ ದೃಷ್ಟಾಂತವಿದೆ.

ಒಂದಾನೊಂದು ಕಾಲದಲ್ಲಿ ಭೂಲೋಕದಲ್ಲಿ ನಡೆದ ಯಜ್ಞ ಸಮಾರಂಭಕ್ಕಾಗಿ ಯಜಮಾನನು ದೇವ ಹಾಗೂ ದಾನವರಿಬ್ಬರನ್ನೂ ಬರಮಾಡಿಕೊಂಡಿದ್ದನು. ಊಟಕ್ಕೆ ಕೂಡ್ರಿಸುವ ಪ್ರಸಂಗ ಬಂದಾಗ ಪ್ರತಿಸಲದಂತೆ ದೇವತೆಗಳನ್ನು ಮೊದಲನೆಯ ಪಂಕ್ತಿಗೆ ಕೂಡ್ರಿಸಲು ತಯಾರಾದನು. ಆಗ ದಾನವರು ಮನೆಯ ಯಜಮಾನನೊಂದಿಗೆ ಕಲಹವನ್ನು ಮಾಡಿ ನೀವು ಪ್ರತಿಸಲ ದೇವತೆಗಳನ್ನೇ ಮೊದಲ ಪಂಕ್ತಿಗೆ ಕೂಡ್ರಿಸುತ್ತೀರಿ ಇದು ನಮಗಾದ ಬಹುದೊಡ್ಡ ಅಪಮಾನವು. ದೇವತೆಗಳಿಗಿಂತಲೂ ನಾವು ಹಿರಿಯರು. ಕಾರಣ ಮೊದಲ ಪಂಕ್ತಿಗೆ ನಮ್ಮನ್ನೇ ಕೂಡ್ರಿಸಬೇಕೆಂದು ಹಟಹಿಡಿದರು. ಆಗ ಯಜಮಾನನು ಸಮಾರಂಭದಲ್ಲಿ ಕಲಹವನ್ನು ಬೆಳೆಸುವುದು ಸರಿಯಲ್ಲವೆಂದು ಭಾವಿಸಿ ಅವರಿಗೆ ಒಪ್ಪಿಗೆಕೊಟ್ಟು, ದಾನವರನ್ನೇ ಮೊದಲ ಪಂಕ್ತಿಗೆ ಕೂಡ್ರಿಸಿದನು. ಆಗ ಆತನ ಮನಸ್ಸಿನಲ್ಲಿ ಒಂದು ಯುಕ್ತಿಯು ಹೊಳೆಯಿತು. ಆ ಯುಕ್ತಿಯ ಪ್ರಕಾರ ಬಿದಿರುಗಳನ್ನು ಸೀಳಿಸಿ ದಾನವರ ಬಲಗೈಯು ಮಣಿಯದ ಹಾಗೆ ಬಿದಿರ ಪಟ್ಟಿಗಳಿಂದ ಬಿಗಿಯಾಗಿ ಕಟ್ಟಿ ಕೈಯನ್ನು ಮಣಿಸದೆ ಬಿದಿರನ್ನು ಮುರಿಯದೆ ಅರ್ಧಗಂಟೆಯೊಳಗಾಗಿ ನೀವೆಲ್ಲರೂ

ಉಣ್ಣಬೇಕೆಂಬುದಾಗಿ ವಿನಂತಿಸಿಕೊಂಡನು. ಆಗ ದಾನವರು ತಮ್ಮ ತಾಟಿನಲ್ಲಿ ಬಡಿಸಿರುವ ಪಂಚಪಕ್ವಾನ್ನಗಳನ್ನು ಉಣ್ಣುವ ಆಶೆಯಲ್ಲಿ ತಾಟಿನೊಳಗೆ ಕೈಹಾಕಿದರೇನೋ ನಿಜ. ಆದರೆ ಉಣ್ಣಲು ಯಾರೂ ಸಮರ್ಥರಾಗಲಿಲ್ಲ, ಕೊಟ್ಟ ಅವಧಿಯು ಮುಗಿದು ಹೋಯಿತು. ಆಗ ನಿರುಪಾಯರಾಗಿ ಭೋಜನಸ್ಥಾನವನ್ನು ಬಿಟ್ಟು, ಎದ್ದು ಹೋದರು. ಆಗ ಅದೇ ಸ್ಥಾನದಲ್ಲಿ ದೇವತೆಗಳು ಕುಳಿತುಕೊಂಡಾಗ ಅವರಿಗೂ ಸಹ ಅದೇರೀತಿಯಾದ ಹಸ್ತ ಬಂಧನವನ್ನು ಮಾಡಲಾಯಿತು. ದೇವತೆಗಳೂ ಸಹ ತಮ್ಮ ತಾಟಿನಲ್ಲಿಯ ಪದಾರ್ಥವನ್ನು ತಾವು ಉಣ್ಣಲು ಅಸಮರ್ಥರಾದಾಗ ಅವರ ಮನಸ್ಸಿನಲ್ಲಿ ಒಂದು ಸುವಿಚಾರವು ಪ್ರಾದುರ್ಭವಿಸಿತು. ಅದೇನೆಂದರೆ ನಮ್ಮ ತಾಟಿನಲ್ಲಿದ್ದುದು ನಮಗೆ ಉಣ್ಣಲು ಆಗದಿದ್ದರೂ ಮತ್ತೊಬ್ಬರಿಗಾದರೂ ಉಣಿಸಲು ಬರುತ್ತದೆಯಲ್ಲಾ? ಆಗ ಅವರೆಲ್ಲರೂ ಒಬ್ಬರು ಮತ್ತೊಬ್ಬರಿಗೆ, ಮತ್ತೊಬ್ಬರು ಇವರಿಗೆ ಹೀಗೆ ಮುಗ್ಗಲು ಕುಳಿತವರ ಬಾಯೊಳಗೆ ಸುಗ್ರಾಸಭೋಜನವನ್ನು ಇಡುತ್ತ ಎಲ್ಲರೂ ಸಂತೃಪ್ತರಾದರು.

ಇಲ್ಲಿ ತಿಳಿದುಬಂದ ರಹಸ್ಯಾರ್ಥವೇನೆಂದರೆ, ತಾವು ಒಬ್ಬರಿಗೆ ಕೊಟ್ಟಾಗ ಮತ್ತೊಬ್ಬರು ನಮಗೆ ಕೊಡುತ್ತಾರೆ. ಅಂತೆಯೇ ''ಕೊಟ್ಟದ್ದು ತನಗೆ'' ಸಿದ್ಧವಾಗುವುದು. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಶಕ್ತ್ಯಾನುಸಾರವಾಗಿ ದಾನ ಮಾಡ ಬೇಕೆಂಬುದು ಪೂಜ್ಯರ ಆಶಯವಾಗಿದೆ ಎಂಬುದಾಗಿ ತಿಳಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಆಗಷ್ಟ, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೫

# ಧರ್ಮಾಚಾರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಪೂಜ್ಯ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲ ಪ್ರತಿದಿನ ಕ್ಷೇತ್ರ ಮಹಿಮೆಯನ್ನೂ ಸಹ ಆಲಿಸುತ್ತ ಬಂದಿದ್ದೀರಿ. ಶ್ರೀ ಕಾಶೀ ಮಹಾ ಕ್ಷೇತ್ರಕ್ಕೆ ಇರುವ ಅನೇಕ ಹೆಸರುಗಳಲ್ಲಿ ಅವಿಮುಕ್ತ ಕ್ಷೇತ್ರ ಎಂಬುವುದೂ ಒಂದು. ಅವಿನಾಮುಕ್ತಃ ಅವಿಮುಕ್ತಃ ಎಂಬ ವ್ಯುತ್ಪತ್ತಿಯ ಮೇರೆಗೆ ಅವಿ ಎಂದರೆ ಪಾಪ. ಮುಕ್ತ ಎಂದರೆ ಬಿಡಲ್ಪಟ್ಟದ್ದು. ಹೀಗೆ ಪಾಪನಿರ್ಮುಕ್ತವಾದದ್ದು ಎಂದರ್ಥ. ತಾತ್ಪರ್ಯವೇನೆಂದರೆ ಎಂತಹ ಪಾಪಿಯೇ ಇರಲಿ, ಅವನು ಕಾಶೀ ಕ್ಷೇತ್ರವನ್ನು ಪ್ರವೇಶಿಸಿದನೆಂದರೆ ತನ್ನ ಪ್ರಾಕ್ತನ ಪಾಪಗಳಿಂದ ಮುಕ್ತನಾಗುತ್ತಾನೆ.

ಇನ್ನು ವಿಶ್ವೇಶ್ವರನು ಕಾಶಿಗೆ ಬಂದ ನಂತರ ಈ ಕ್ಷೇತ್ರವನ್ನು ಆತನು ಎಂದೂ ಬಿಟ್ಟು ಹೋಗದೆ ಇಲ್ಲಿಯೇ ಶಾಶ್ವತವಾಗಿ ನೆಲೆನಿಂತಿರುವ ಕಾರಣದಿಂದಾಗಿಯೂ ಇದಕ್ಕೆ ಅವಿಮುಕ್ತ ಕ್ಷೇತ್ರವೆಂದು ಕರೆದಿದ್ದಾರೆ. ಇಂತಹ ಪವಿತ್ರವಾದ ಕ್ಷೇತ್ರದಲ್ಲಿ ನೀವೆಲ್ಲ ಪ್ರತಿನಿತ್ಯ ಗಂಗಾ ಸ್ನಾನ, ಇಷ್ಟಲಿಂಗಪೂಜೆ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನದಲ್ಲಿ ಪಾಲುಗೊಂಡು ಪ್ರತಿದಿನವೂ ಪಾವನವಾಗುತ್ತಿದ್ದೀರಿ.

ಶ್ರೀ ಸಿದ್ಧಾಂತಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಅವಾಂತರ ಸ್ಥಲವಾದ ಧರ್ಮಾಚಾರಸ್ಥಲದ ಬಗ್ಗೆ ಅನೇಕ ದಿನಗಳಿಂದ ಅಹಿಂಸಾ ಮುಂತಾದ ಧರ್ಮಗಳ ಬಗ್ಗೆ ಆಲಿಸುತ್ತ, ನಿನ್ನೆಯ ದಿನ ಬ್ರಹ್ಮಚರ್ಯ, ದಯಾ, ಕ್ಷಮೆ, ಹಾಗೂ ದಾನಗಳ ಬಗ್ಗೆ ಸಾಕಷ್ಟು ಶ್ರವಣಮಾಡಿದ್ದೀರಿ. ಇಂದು ಪುನಃ ದಾನ, ಪೂಜೆ, ಜಪ ಹಾಗೂ ಧ್ಯಾನಾದಿಗಳ ಬಗ್ಗೆ ಪರ್ಯಾಲೋಚಿಸೋಣ.

ಈ ಧರ್ಮಾಚರಣೆಗಳೂ ಸಹ ದೇಹದ ಆಭೂಷಣಗಳೆಂಬುದಾಗಿ ಕರೆಯಲ್ಪಡುತ್ತವೆ. ಅಂತೆಯೇ ಓರ್ವ ಸುಭಾಷಿತಕಾರನು–

ಹಸ್ತಸ್ಯ ಭೂಷಣಂ ದಾನಂ ಸತ್ಯಂ ಕಂಠಸ್ಯ ಭೂಷಣಮ್ ।<br>
ಶ್ರೋತ್ರಸ್ಯ ಭೂಷಣಂ ಶಾಸ್ತ್ರಂ ಭೂಷಣೈಃ ಕಿಂ ಪ್ರಯೋಜನಮ್ ॥

ಎಂದು ಹೇಳಿದ್ದಾನೆ. ದಾನ ಮಾಡುವುದು ಹಸ್ತದ ಆಭರಣವು. ಶಾಸ್ತ್ರಾದಿಗಳನ್ನು ಶ್ರವಣ ಮಾಡುವುದು ಕಿವಿಯ ಆಭೂಷಣವು. ಅದರಂತೆ ಸತ್ಯವನ್ನು ನುಡಿಯುವುದೇ ಕಂಠದ ಆಭೂಷಣವು. ದಾನಮಾಡದ ಮನುಷ್ಯನು ತನ್ನ ಹಸ್ತವನ್ನು ಸುವರ್ಣಾಭರಣಗಳಿಂದ

ಅಲಂಕರಿಸಿಕೊಂಡಿದ್ದರೂ ಅವನ ಆ ಹಸ್ತಕ್ಕೆ ಸಮಾಜದಲ್ಲಿ ಯಾವ ಮರ್ಯಾದೆಯೂ ಇರುವುದಿಲ್ಲ. ಅವನಲ್ಲಿರುವ ಕಾರ್ಪಣ್ಯಗುಣದಿಂದಾಗಿ ಎಲ್ಲರೂ ಅವನನ್ನು ತಿರಸ್ಕರಿಸುವರೇ ವಿನಃ ಪುರಸ್ಕರಿಸುವವರೊಬ್ಬರೂ ಇರುವುದಿಲ್ಲ. ಕಿವಿತುಂಬ ಅಲಂಕಾರಗಳನ್ನು ಹಾಕಿಕೊಂಡಿದ್ದರೂ ಒಮ್ಮೆಯೂ ಶಾಸ್ತ್ರಪ್ರವಚನಾದಿಗಳನ್ನು ಕೇಳದೇ ಇದ್ದರೆ ಆ ಕಿವಿಗಳು ಅಲಂಕೃತಗಳಾಗಿದ್ದರೂ ನಿರಲಂಕೃತಗಳೇ. ಕಿವಿಗೆ ಹಾಕಿರುವ ಆಭರಣಗಳು ಶಾಶ್ವತಗಳಾದ ಆಭರಣಗಳಲ್ಲ. ಒಂದು ವೇಳೆ ಅವು ಇದ್ದರೂ ಈ ಶರೀರವನ್ನು ಬಿಡುವವರೆಗೆ ಮಾತ್ರ ನಮ್ಮವುಗಳು. ಅನಂತರ ಎಲ್ಲರೂ ಬಡಿದಾಡಿ ಆ ಆಭರಣಗಳನ್ನು ಹಂಚಿಕೊಂಡು ಬಿಡುತ್ತಾರೆ. ಆದ್ದರಿಂದ ನಮ್ಮ ಜೊತೆಗೆ ಬರುವಂಥ ಶ್ರೋತ್ರದ ಆಭರಣವೆಂದರೆ ನಾವು ಆಲಿಸಿದ ಒಳ್ಳೆ ನುಡಿಗಳು.

ಇದರಂತೆ ಕಂಠಕ್ಕೆ ಶ್ರೇಷ್ಠವಾದ ಆಭರಣವೆಂದರೆ ಸತ್ಯವನ್ನು ನುಡಿಯುವುದು. ಸದಾ ಸುಳ್ಳನ್ನು ಹೇಳುವ ವ್ಯಕ್ತಿಯು ತನ್ನ ಕಂಠವನ್ನು ಕನಕಾಭರಣಗಳಿಂದ ಅಲಂಕರಿಸಿಕೊಂಡಿದ್ದರೂ, ಒಂದೂ ಆಭರಣವಿಲ್ಲದೆ ಸದಾ ಸತ್ಯವನ್ನೇ ನುಡಿಯುವ ಮಹಾವ್ಯಕ್ತಿಯ ಮುಂದೆ ಕುಬ್ಜನಾಗಿ ತೋರುವನು. ಆದ್ದರಿಂದ ಹೊರಗಿನ ಆಭೂಷಣಗಳಿಗಿಂತಲೂ ಈ ಧರ್ಮಾಚರಣ ರೂಪವಾದ ಅಂತರಂಗ ಆಭೂಷಣಗಳು ವ್ಯಕ್ತಿಯ ವ್ಯಕ್ತಿತ್ವವನ್ನು ವಿಕಾಸಗೊಳಿಸಿ ಅವನ ಆಧ್ಯಾತ್ಮಿಕ ಸೌಂದರ್ಯವನ್ನು ವರ್ಧಿಸುತ್ತವೆ. ಅಂತೆಯೇ ಆಚಾರ್ಯರು ಈ ಧರ್ಮಾಚರಣೆಗಳಿಗೆ ಹೆಚ್ಚಿನ ಮಹತ್ತ್ವವನ್ನು ಇತ್ತಿದ್ದಾರೆ.

''ದಾನಮೇಕಂ ಕಲೌಯುಗೇ'' ಎಂಬ ಉಕ್ತಿಗನುಸಾರವಾಗಿ ಈ ಕಲಿಯುಗದಲ್ಲಿ ಪ್ರತಿಯೊಬ್ಬರಿಗೂ ಆಚರಿಸಲು ಅನುಕೂಲವಾದ ಸರಳವಾದ ಧರ್ಮವೆಂದರೆ ದಾನವು. ದಾನವನ್ನು ಮಾಡುವಾಗ ತನ್ನ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಮಾಡಬೇಕು. ದಾನಕ್ಕೆ ಅಷ್ಟೇ ಇಷ್ಟೇ ಎನ್ನುವ ಕಟ್ಟುಪಾಡುಗಳೇನಿರುವುದಿಲ್ಲ. ಯಾರು ಎಷ್ಟೇ ಕೊಟ್ಟರೂ ಅದು ದಾನವೆಂಬುದಾಗಿ ತಿಳಿಯಲ್ಪಡುತ್ತದೆ. ಈ ದಾನದ ಮರ್ಮವನ್ನು ಸರ್ವಜ್ಞಕವಿಯು–

ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಸುರಿವರೆ !<br>
ಕೊಡಬೇಡ ಕೊಡದೆ ಇರಬೇಡ<br>
.....................ಸರ್ವಜ್ಞ

ಈ ತನ್ನ ವಚನದಲ್ಲಿ ಸ್ಪಷ್ಟ ಪಡಿಸಿದ್ದಾನೆ. ಅಂದರೆ ತನ್ನ ಶಕ್ತಿ ಭಕ್ತಿಗಳಿಗೆ ಅನುರೂಪವಾಗಿ ಸದಾ ದಾನ ಮಾಡುತ್ತಿರಬೇಕೆಂಬುದು ಸರ್ವಜ್ಞನ ಆಶಯವಾಗಿದೆ. ಈ ಜಗತ್ತಿನಲ್ಲಿರುವ ಜನರಲ್ಲಿ ದಾತೃತ್ವ ಗುಣವುಳ್ಳ ವ್ಯಕ್ತಿಗಳು ಅತೀ ವಿರಳ ಎಂಬ ವಿಷಯವನ್ನು ಓರ್ವ ಸುಭಾಷಿತಕಾರನು–

ಶತೇಷು ಜಾಯತೇಶೂರಃ ಸಹಸ್ರೇಷು ಚ ಪಂಡಿತಃ।<br>
ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥

ಹೀಗೆ ಪ್ರತಿಪಾದಿಸಿದ್ದಾನೆ. ತಾತ್ಪರ್ಯವೇನೆಂದರೆ, ಒಂದು ನೂರು ಜನರಲ್ಲಿ ಒಬ್ಬ ಶೂರನೂ, ಸಾವಿರ ಜನರಲ್ಲಿ ಒಬ್ಬ ಪಂಡಿತನು ಮತ್ತು ಹತ್ತು ಸಾವಿರ ಜನರಲ್ಲಿ ಒಬ್ಬ

ವಕ್ತಾರನು ದೊರೆಯಬಹುದು. ಆದರೆ ದಾನಮಾಡುವ ವ್ಯಕ್ತಿಯು ಸಿಗುವುದೇ ದುರ್ಲಭವು. ಅನ್ಯರ ವಸ್ತುಗಳನ್ನು ತೆಗೆದುಕೊಳ್ಳಬೇಕೆನ್ನುವ ಈ ಭಾವನೆಯು ಎಲ್ಲರಲ್ಲಿಯೂ ಇರುತ್ತದೆ. ಆದರೆ ತನ್ನದನ್ನು ಅನ್ಯರಿಗೆ ಕೊಡಬೇಕೆನ್ನುವ ಉದಾರತೆಯು ಬಹಳ ಕಡಿಮೆ ಜನರಲ್ಲಿ ಕಂಡುಬರುತ್ತದೆ. ಕೆಲವು ಜನರಿಗೆ ವಸ್ತುಗಳನ್ನು ಕೊಡಲು ಆಗುವುದಿಲ್ಲವಷ್ಟೇ ಅಲ್ಲ, ಕೊಡು ಅನ್ನುವ ಶಬ್ದವೂ ರುಚಿಸುವುದಿಲ್ಲ.

ಒಂದು ಊರಿನಲ್ಲಿ ಓರ್ವ ಕೃಪಣನು ಸಾಯಂಕಾಲ ಸಮಯ ದಾರಿ ಹಿಡಿದು ಹೋಗುವಾಗ ಬಾಯಿ ತೆರೆದಿಟ್ಟಿದ್ದ ಒಂದು ಹಗೆಯಲ್ಲಿ ಕಾಲುಜಾರಿ ಒಳಗೆ ಬಿದ್ದು ಬಿಟ್ಟನು. ಆಗ ಗಾಬರಿಗೊಂಡು ನನ್ನನ್ನು ಯಾರಾದರೂ ಮೇಲೆತ್ತಿರಿ ಮೇಲೆತ್ತಿರಿ ಎಂಬುದಾಗಿ ಚೀರಾಡತೊಡಗಿದನು. ಆಗ ದಾರಿಹೋಕರು ಹಗೆಯ ಸುತ್ತಲೂ ನಿಂತು ಒಳಗೆ ತಮ್ಮ ಕೈಗಳನ್ನು ಚಾಚಿ ನಿನ್ನ ಕೈಯನ್ನು ಕೊಡು, ಮೇಲೆತ್ತುತ್ತೇವೆ ಎಂಬುದಾಗಿ, ಎಷ್ಟೋ ಜನರು ತಮ್ಮ ಕೈಗಳನ್ನು ಚಾಚಿ ಅವನನ್ನು ಮೇಲೆತ್ತಲು ಪ್ರಯತ್ನಿಸಿದರೂ ಆತನು ತನ್ನ ಕೈಯನ್ನು ಕೊಡಲೇ ಇಲ್ಲ, ಅಷ್ಟೇ ಅಲ್ಲ, ನಾನು ಕೊಡುವುದಿಲ್ಲ ಕೊಡುವುದಿಲ್ಲ ಎಂದು ಕೂಗಾಡುತ್ತಿದ್ದನು. ಆಗ ಅವನ ವಿಚಿತ್ರವಾದ ವರ್ತನೆಯನ್ನು ಕಂಡು ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ, ನಾವೇನು ಕೇಳುತ್ತಿದ್ದೇವೆ ಕೇವಲ ಕೈಕೊಡು ಎಂದು ಮಾತ್ರ. ಇವನು ತನ್ನ ಕೈಯನ್ನು ಕೊಡದೇ ಹೋದರೆ ನಾವು ಈತನನ್ನು ಮೇಲಕ್ಕೆ ಎತ್ತುವುದಾದರೂ ಹೇಗೆ ? ಎಂದು ಆಲೋಚಿಸುತ್ತ ಕುಳಿತುಕೊಂಡಾಗ ಹಗೆಯಲ್ಲಿ ಬಿದ್ದ ವ್ಯಕ್ತಿಗೆ ಸುಪರಿಚಿತ ನಾದ ವ್ಯಕ್ತಿಯೋರ್ವನು ಅಲ್ಲಿಗೆ ಬಂದನು. ನೆರೆದ ಜನರೆಲ್ಲ ನಡೆದ ಸಂಗತಿಯನ್ನು ಅವನಿಗೆ ವಿವರಿಸಿ ಹೇಳಿದರು. ಆಗ ಆತನು ಎಲ್ಲರನ್ನೂ ಹಿಂದಕ್ಕೆ ಸರಿಸಿ ಒಳಗೆ ಹಣಿಕಿ ಹಾಕಿ ತನ್ನ ಕೈಯನ್ನು ಚಾಚಿ ಇಗೋ ನನ್ನ ಕೈಯನ್ನು ತೆಗೆದುಕೋ ಎಂದೊಡನೆ, ಆತನು ಇವನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಅವನನ್ನು ಜಗ್ಗಿ ಮೇಲೆತ್ತಿಕೊಂಡನು. ನೆರೆದ ಜನರಿಗೆ ಇದರ ಮರ್ಮವೇ ತಿಳಿಯಲಿಲ್ಲ, ನಾವು ಎಷ್ಟೇ ಪ್ರಯತ್ನಪಟ್ಟರೂ ಈತನ ಕೈಯನ್ನು ಮೇಲಕ್ಕೆತ್ತಿಸಲಾಗಲಿಲ್ಲ, ನೀವು ಒಂದು ಕ್ಷಣದಲ್ಲಿ ಆತನ ಕೈಗಳನ್ನು ಮೇಲಕ್ಕೆತ್ತಿಸಿ ಹೊರ ತೆಗೆದಿರಲ್ಲಾ ಇದರ ರಹಸ್ಯವೇನು ? ಎಂಬುದಾಗಿ ಕೇಳಲು ಹಗೆಯಲ್ಲಿ ಬಿದ್ದ ವ್ಯಕ್ತಿಯ ಸ್ವಭಾವದ ಬಗ್ಗೆ ಸುಪರಿಚಿತನಾದ ಈತನು ಹೇಳಿದ್ದೇನೆಂದರೆ, ಇವನು ಅತ್ಯಂತ ಕೃಪಣನಾದ ವ್ಯಕ್ತಿಯು. ತನ್ನ ಜೀವನದಲ್ಲಿ ಯಾರಿಗೂ ಏನನ್ನೂ ಕೊಟ್ಟವನಲ್ಲ, ಅಷ್ಟೇ ಅಲ್ಲಾ, ಕೊಡು ಎನ್ನುವ ಶಬ್ದವನ್ನೂ ಸಹ ಈತನಿಗೆ ಸಹಿಸಲಾಗುವುದಿಲ್ಲ, ಅಂತೆಯೇ ನೀವೆಲ್ಲ 'ಕೈಕೊಡು, ಕೊಡು ಎಂದಾಗ ಆತನು ಕೊಡುವುದಿಲ್ಲ, ಕೊಡುವುದಿಲ್ಲ ಎಂದು ಕೂಗಾಡುತ್ತಿದ್ದನು. ಆದರೆ ಕೈ ತೆಗೆದುಕೋ ಎಂದು ನುಡಿದಾಕ್ಷಣ ನನ್ನ ಕೈಯನ್ನು ಹಿಡಿದುಕೊಂಡು ಮೇಲಕ್ಕೆ ಬಂದನು. ನೋಡಿದಿರಾ ! ಕೃಪಣರ ಸ್ವಭಾವವನ್ನು ! ಇದನ್ನು ತಿಳಿದೇ ಸುಭಾಷಿತಕಾರನು– ''ದಾತಾ ಭವತಿ ವಾ ನ ವಾ'' ಎಂಬುದಾಗಿ ಹೇಳಿದ್ದಾನೆ.

ಈ ದಾನವು ಸೋಪಾಧಿಕ, ನಿರುಪಾಧಿಕ ಮತ್ತು ಸಹಜವೆಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ಪ್ರತಿಫಲದ ಅಪೇಕ್ಷೆಯನ್ನಿಟ್ಟು ಕೊಟ್ಟ ದಾನಕ್ಕೆ ಸೋಪಾಧಿಕ ವೆನ್ನುವರು. ಪ್ರತಿಫಲದ ಅಪೇಕ್ಷೆಯಿಲ್ಲದೆ ನಿಷ್ಕಾಮ ಭಾವನೆಯಿಂದ ಮಾಡಿದ ದಾನಕ್ಕೆ

ಯನ್ನು ಒದಗಿಸಿಕೊಡುತ್ತದೆ. ಇದೇ ಪ್ರಕಾರವಾಗಿ ಭಗವಂತನ ನಾಮದ ಆವೃತ್ತಿಯಿಂದ ಜಪಮಾಡುವವನ ಮನಸ್ಸಿನಲ್ಲಿ ಪುಣ್ಯರೂಪವಾದ ಒಂದು ಊರ್ಜಾಶಕ್ತಿಯು ನಿರ್ಮಾಣವಾಗಿ ಜಪಮಾಡುವವನ ಎಲ್ಲ ದೋಷಗಳನ್ನು ದೂರೀಕರಿಸಿ, ಅವನನ್ನು ಪವಿತ್ರಾತ್ಮನನ್ನಾಗಿ ಮಾಡುತ್ತದೆ. ಅಂತೆಯೇ ''ಜಪತೋ ನಾಸ್ತಿ ಪಾತಕಮ್'' ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ಪ್ರತಿಯೊಬ್ಬರು ಇಷ್ಟಮಂತ್ರದ ಜಪವನ್ನು ಸದಾ ಮಾಡುತ್ತಿರಬೇಕು. ವೈಯಕ್ತಿಕವಾಗಿಯಾಗಲೀ ಸಾಮೂಹಿಕವಾಗಿಯಾಗಲೀ ಮಾಡುತ್ತಿರುವ ಜಪಕ್ಕೆ ಜಪಯಜ್ಞವೆಂತಲೂ ಕರೆಯುತ್ತಾರೆ. ಇದು ಎಲ್ಲ ವಿಧ ಯಜ್ಞಗಳಲ್ಲಿ ಸರ್ವಶ್ರೇಷ್ಠ ವಾದುದು. ಬೇರೆ ಯಜ್ಞಾದಿಗಳಲ್ಲಿ ಪ್ರಾಣಿಹಿಂಸೆ ಮೊದಲಾದ ದೋಷಗಳಿರುವುದು ಕಂಡುಬರುತ್ತದೆ. ಆದರೆ ಜಪಯಜ್ಞವು ಅಂಥ ಯಾವುದೇ ವಿಧ ವಾದ ದೋಷಗಳಿಂದ ದೂಷಿತವಾಗಿರುವುದಿಲ್ಲ. ಇದೂ ಅಲ್ಲದೆ ಈ ಯಜ್ಞವನ್ನಾಚರಿಸಲು ಬಹುಧನಾದಿಗಳ ಅಪೇಕ್ಷೆಯೂ ಸಹ ಇರುವುದಿಲ್ಲ. ಅಂತೆಯೇ ರಂಕ ಇರಲಿ ರಾಜನೇ ಇರಲಿ ಎಲ್ಲರಿಗೂ ಇದರಲ್ಲಿ ಸಮಾನವಾದ ಅಧಿಕಾರವಿದೆ. ಭಗವಂತನ ನಾಮ ಜಪಕ್ಕೆ ಜಾತಿಯ ತಾರತಮ್ಯಗಳೂ ಸಹ ಇರುವುದಿಲ್ಲ. ಭಕ್ತಿಯುಳ್ಳ ವ್ಯಕ್ತಿಯು ಯಾವುದೇ ಜಾತಿಯವ ನಿದ್ದರೂ ಭಗವನ್ನಾಮ ಜಪವನ್ನು ಮಾಡಲು ಯಾವ ಅಡೆತಡೆಗಳೂ ಇರುವುದಿಲ್ಲ.

ಈ ಜಪವು ವಾಚಿಕ, ಉಪಾಂಶು ಮತ್ತು ಮಾನಸಿಕವೆಂಬುದಾಗಿ ಮೂರು ವಿಧವಾಗಿ ರುತ್ತದೆ. ಅನ್ಯರಿಗೆ ಕೇಳಿಸುವ ಹಾಗೆ ಜಪಮಾಡಿದರೆ ಅದು ವಾಚಿಕವೆನಿಸುವುದು. ಇನ್ನು ತನ್ನ ಉಚ್ಚಾರಣೆಯು ಕೇವಲ ತನಗೆ ಮಾತ್ರ ಕೇಳುತ್ತಿದ್ದರೆ ಅದಕ್ಕೆ ಉಪಾಂಶು ಜಪವೆನ್ನುವರು. ಇದೇ ಪ್ರಕಾರವಾಗಿ ತನಗೂ ಕೇಳದ ಹಾಗೆ ಕೇವಲ ಮನಸ್ಸಿನಲ್ಲಿ ಮಾಡುವ ನಾಮದ ಆವೃತ್ತಿಗೆ ಮಾನಸಿಕ ಜಪವೆನ್ನುವರು. ಇವುಗಳಲ್ಲಿ ಮಾನಸಿಕ ಜಪವೇ ಸರ್ವಶ್ರೇಷ್ಠವಾದದ್ದು. ಕಾರಣ ಸರ್ವರಿಗೂ ಸುಲಭವಾದ ಈ ಜಪಾನುಷ್ಠಾನವನ್ನು ಪ್ರತಿಯೊಬ್ಬರು ಮಾಡಬೇಕು.

ಇದೇ ಪ್ರಕಾರವಾಗಿ ಮುಂಬರುವ ಧರ್ಮಾಚರಣೆಯೆಂದರೆ ಧ್ಯಾನವು. ಯಾವ ದೇವರ ನಾಮಜಪವನ್ನು ಮಾಡುತ್ತಿರುತ್ತೇವೆಯೋ ಆ ದೇವರ ಸಗುಣ ಇಲ್ಲವೆ ನಿರ್ಗುಣ ಸ್ವರೂಪವನ್ನು ಮನಸ್ಸಿನಲ್ಲಿ ಸದಾ ಚಿಂತಿಸುವುದಕ್ಕೆ ಧ್ಯಾನವೆಂದು ಕರೆಯುತ್ತಾರೆ. ಸಂಸಾರದ ಚಿಂತೆಯು ದುಃಖಕ್ಕೆ ಕಾರಣೀಭೂತವಾದ ಶಿವನ ಚಿಂತನಾರೂಪವಾದ ಧ್ಯಾನವು ಎಲ್ಲ ದುಃಖಗಳ ನಿವೃತ್ತಿಗೆ ಕಾರಣವಾಗಿರುತ್ತದೆ. ''ತತ್ರ ಪ್ರತ್ಯಯೈಕತಾನತಾ ಧ್ಯಾನಮ್'' ಎಂಬ ಯೋಗಸೂತ್ರಾನುಸಾರವಾಗಿ ತಾನು ಚಿಂತಿಸುತ್ತಿರುವ ಭಗವತ್ ಸ್ವರೂಪದ ಚಿಂತನೆಯಲ್ಲಿ ಬೇರಾವ ವೃತ್ತಿಯು ಏಳದ ಹಾಗೆ ಅದೊಂದೇ ವೃತ್ತಿಯು ಅಖಂಡ ಧಾರಾಪ್ರವಾಹದಂತೆ ನಡೆಯುತ್ತಿದ್ದರೆ ಅದಕ್ಕೇನೇ ಧ್ಯಾನವೆಂದು ಕರೆಯುತ್ತಾರೆ. ''ಧ್ಯಾನಂ ಸ್ಯಾತ್ ಷಷ್ಟಿ ನಾಡಿಕಮ್'' ಎಂಬ ಸ್ಕಂಧ ಪುರಾಣದ ಉಕ್ತಿಯಂತೆ ಅರವತ್ತು ಘಟಿಕಾ ಪರ್ಯಂತವಾಗಿ ಅಂದರೆ ಇಪ್ಪತ್ನಾಲ್ಕು ಘಂಟೆಗಳ ಕಾಲ ಚಿತ್ತ ವೃತ್ತಿಯು ಏಕಾಗ್ರವಾಗಿದ್ದು ತನ್ನ ಇಷ್ಟ ಚಿಂತನೆಯಲ್ಲಿ ತಲ್ಲೀನವಾಗಿದ್ದರೆ ಅದಕ್ಕೆ 'ಧ್ಯಾನ' ಎಂಬುದಾಗಿ ಕರೆಯುತ್ತಾರೆ.

ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೀ ಸಿದ್ಧಾಂತ ಶಿಖಾಮಣಿಯ ಧರ್ಮಾಚಾರ ಸ್ಥಲದಲ್ಲಿ ಅಹಿಂಸೆಯನ್ನೇ ಮೊದಲು ಮಾಡಿಕೊಂಡು ಧ್ಯಾನ ಪರ್ಯಂತವಾದ ದಶವಿಧ ಧರ್ಮಾಚರಣೆಯನ್ನು ಉಪದೇಶಿಸಿದ್ದಾರೆ. ಇವುಗಳಲ್ಲಿ ಎಲ್ಲವುಗಳನ್ನಾಗಲಿ, ಇಲ್ಲವೆ ತನಗೆ ಸಾಧ್ಯವಾದ ಯಾವುದೊಂದನ್ನಾಗಲೀ ನಿಷ್ಠೆಯಿಂದ ಆಚರಿಸುವ ವ್ಯಕ್ತಿಯೇ ಧಾರ್ಮಿಕನೆಂದು ಕರೆಸಿಕೊಳ್ಳುತ್ತಾನೆ. ಕಾರಣ ಪ್ರತಿಯೊಬ್ಬರು ತಮ್ಮ ಶಕ್ತ್ಯಾನುಸಾರವಾಗಿ ಈ ಧರ್ಮಾಚರಣೆಗಳನ್ನು ಆಚರಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಆಗಷ್ಟ ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ವಕ್ತಾರನು ದೊರೆಯಬಹುದು. ಆದರೆ ದಾನಮಾಡುವ ವ್ಯಕ್ತಿಯು ಸಿಗುವುದೇ ದುರ್ಲಭವು. ಅನ್ಯರ ವಸ್ತುಗಳನ್ನು ತೆಗೆದುಕೊಳ್ಳಬೇಕೆನ್ನುವ ಈ ಭಾವನೆಯು ಎಲ್ಲರಲ್ಲಿಯೂ ಇರುತ್ತದೆ. ಆದರೆ ತನ್ನದನ್ನು ಅನ್ಯರಿಗೆ ಕೊಡಬೇಕೆನ್ನುವ ಉದಾರತೆಯು ಬಹಳ ಕಡಿಮೆ ಜನರಲ್ಲಿ ಕಂಡುಬರುತ್ತದೆ. ಕೆಲವು ಜನರಿಗೆ ವಸ್ತುಗಳನ್ನು ಕೊಡಲು ಆಗುವುದಿಲ್ಲವಷ್ಟೇ ಅಲ್ಲ, ಕೊಡು ಅನ್ನುವ ಶಬ್ದವೂ ರುಚಿಸುವುದಿಲ್ಲ.

ಒಂದು ಊರಿನಲ್ಲಿ ಓರ್ವ ಕೃಪಣನು ಸಾಯಂಕಾಲ ಸಮಯ ದಾರಿ ಹಿಡಿದು ಹೋಗುವಾಗ ಬಾಯಿ ತೆರೆದಿಟ್ಟಿದ್ದ ಒಂದು ಹಗೆಯಲ್ಲಿ ಕಾಲುಜಾರಿ ಒಳಗೆ ಬಿದ್ದು ಬಿಟ್ಟನು. ಆಗ ಗಾಬರಿಗೊಂಡು ನನ್ನನ್ನು ಯಾರಾದರೂ ಮೇಲೆತ್ತಿರಿ ಮೇಲೆತ್ತಿರಿ ಎಂಬುದಾಗಿ ಚೀರಾಡತೊಡಗಿದನು. ಆಗ ದಾರಿಹೋಕರು ಹಗೆಯ ಸುತ್ತಲೂ ನಿಂತು ಒಳಗೆ ತಮ್ಮ ಕೈಗಳನ್ನು ಚಾಚಿ ನಿನ್ನ ಕೈಯನ್ನು ಕೊಡು, ಮೇಲೆತ್ತುತ್ತೇವೆ ಎಂಬುದಾಗಿ, ಎಷ್ಟೋ ಜನರು ತಮ್ಮ ಕೈಗಳನ್ನು ಚಾಚಿ ಅವನನ್ನು ಮೇಲೆತ್ತಲು ಪ್ರಯತ್ನಿಸಿದರೂ ಆತನು ತನ್ನ ಕೈಯನ್ನು ಕೊಡಲೇ ಇಲ್ಲ, ಅಷ್ಟೇ ಅಲ್ಲ, ನಾನು ಕೊಡುವುದಿಲ್ಲ ಕೊಡುವುದಿಲ್ಲ ಎಂದು ಕೂಗಾಡುತ್ತಿದ್ದನು. ಆಗ ಅವನ ವಿಚಿತ್ರವಾದ ವರ್ತನೆಯನ್ನು ಕಂಡು ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ, ನಾವೇನು ಕೇಳುತ್ತಿದ್ದೇವೆ ಕೇವಲ ಕೈಕೊಡು ಎಂದು ಮಾತ್ರ. ಇವನು ತನ್ನ ಕೈಯನ್ನು ಕೊಡದೇ ಹೋದರೆ ನಾವು ಈತನನ್ನು ಮೇಲಕ್ಕೆ ಎತ್ತುವುದಾದರೂ ಹೇಗೆ ? ಎಂದು ಆಲೋಚಿಸುತ್ತ ಕುಳಿತುಕೊಂಡಾಗ ಹಗೆಯಲ್ಲಿ ಬಿದ್ದ ವ್ಯಕ್ತಿಗೆ ಸುಪರಿಚಿತನಾದ ವ್ಯಕ್ತಿಯೋರ್ವನು ಅಲ್ಲಿಗೆ ಬಂದನು. ನೆರೆದ ಜನರೆಲ್ಲ ನಡೆದ ಸಂಗತಿಯನ್ನು ಅವನಿಗೆ ವಿವರಿಸಿ ಹೇಳಿದರು. ಆಗ ಆತನು ಎಲ್ಲರನ್ನೂ ಹಿಂದಕ್ಕೆ ಸರಿಸಿ ಒಳಗೆ ಹಣಿಕಿ ಹಾಕಿ ತನ್ನ ಕೈಯನ್ನು ಚಾಚಿ ಇಗೋ ನನ್ನ ಕೈಯನ್ನು ತೆಗೆದುಕೋ ಎಂದೊಡನೆ, ಆತನು ಇವನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಅವನನ್ನು ಜಗ್ಗಿ ಮೇಲೆತ್ತಿಕೊಂಡನು. ನೆರೆದ ಜನರಿಗೆ ಇದರ ಮರ್ಮವೇ ತಿಳಿಯಲಿಲ್ಲ, ನಾವು ಎಷ್ಟೇ ಪ್ರಯತ್ನಪಟ್ಟರೂ ಈತನ ಕೈಯನ್ನು ಮೇಲಕ್ಕೆತ್ತಿಸಲಾಗಲಿಲ್ಲ, ನೀವು ಒಂದು ಕ್ಷಣದಲ್ಲಿ ಆತನ ಕೈಗಳನ್ನು ಮೇಲಕ್ಕೆತ್ತಿಸಿ ಹೊರ ತೆಗೆದಿರಲ್ಲಾ ಇದರ ರಹಸ್ಯವೇನು ? ಎಂಬುದಾಗಿ ಕೇಳಲು ಹಗೆಯಲ್ಲಿ ಬಿದ್ದ ವ್ಯಕ್ತಿಯ ಸ್ವಭಾವದ ಬಗ್ಗೆ ಸುಪರಿಚಿತನಾದ ಈತನು ಹೇಳಿದ್ದೇನೆಂದರೆ, ಇವನು ಅತ್ಯಂತ ಕೃಪಣನಾದ ವ್ಯಕ್ತಿಯು. ತನ್ನ ಜೀವನದಲ್ಲಿ ಯಾರಿಗೂ ಏನನ್ನೂ ಕೊಟ್ಟವನಲ್ಲ, ಅಷ್ಟೇ ಅಲ್ಲಾ, ಕೊಡು ಎನ್ನುವ ಶಬ್ದವನ್ನೂ ಸಹ ಈತನಿಗೆ ಸಹಿಸಲಾಗುವುದಿಲ್ಲ. ಅಂತೆಯೇ ನೀವೆಲ್ಲ 'ಕೈಕೊಡು, ಕೊಡು ಎಂದಾಗ ಆತನು ಕೊಡುವುದಿಲ್ಲ, ಕೊಡುವುದಿಲ್ಲ ಎಂದು ಕೂಗಾಡುತ್ತಿದ್ದನು. ಆದರೆ ಕೈ ತೆಗೆದುಕೋ ಎಂದು ನುಡಿದಾಕ್ಷಣ ನನ್ನ ಕೈಯನ್ನು ಹಿಡಿದುಕೊಂಡು ಮೇಲಕ್ಕೆ ಬಂದನು. ನೋಡಿದಿರಾ ! ಕೃಪಣರ ಸ್ವಭಾವವನ್ನು ! ಇದನ್ನು ತಿಳಿದೇ ಸುಭಾಷಿತಕಾರನು– ''ದಾತಾ ಭವತಿ ವಾ ನ ವಾ'' ಎಂಬುದಾಗಿ ಹೇಳಿದ್ದಾನೆ.

ಈ ದಾನವು ಸೋಪಾಧಿಕ, ನಿರುಪಾಧಿಕ ಮತ್ತು ಸಹಜವೆಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ಪ್ರತಿಫಲದ ಅಪೇಕ್ಷೆಯನ್ನಿಟ್ಟು ಕೊಟ್ಟ ದಾನಕ್ಕೆ ಸೋಪಾಧಿಕ ವೆನ್ನುವರು. ಪ್ರತಿಫಲದ ಅಪೇಕ್ಷೆಯಿಲ್ಲದೆ ನಿಷ್ಕಾಮ ಭಾವನೆಯಿಂದ ಮಾಡಿದ ದಾನಕ್ಕೆ

ನಿರುಪಾಧಿಕವೆನ್ನುತ್ತಾರೆ. ಇನ್ನು ಕೊಡುವ ಮತ್ತು ತೆಗೆದುಕೊಳ್ಳುವ ವ್ಯಕ್ತಿಗಳಲ್ಲಿ ಹಾಗೂ ದಾನದ ಪದಾರ್ಥದಲ್ಲಿ ಸಂಪೂರ್ಣ ಶಿವಮಯ ಭಾವನೆಯನ್ನು ತಾಳಿ ಮಾಡುವ ದಾನಕ್ಕೆ 'ಸಹಜದಾನವೆಂದು' ಕರೆಯುತ್ತಾರೆ. ಈ ಮೂರು ವಿಧದ ದಾನಗಳಲ್ಲಿ 'ಸಹಜ ದಾನವೇ ಶ್ರೇಷ್ಠವಾದುದು. ಇದನ್ನೇ ಸರ್ವರೂ ಮೈಗೂಡಿಸಿಕೊಳ್ಳಬೇಕೆಂಬುದು ಪೂಜ್ಯರ ಆಶಯವಾಗಿದೆ.

ಇನ್ನು ಈ ಮುಂದೆ ಹೇಳಿರುವ ಧರ್ಮಾಚರಣೆಯೇ ಪೂಜೆಯು. ಅನೇಕ ವಿಧಗಳಾದ ಉಪಚಾರದ ಸಾಮಗ್ರಿಗಳಿಂದ ತನ್ನ ಇಷ್ಟದೇವರನ್ನು ಮನಃಪೂರ್ವ ಕವಾಗಿ ಆರಾಧಿಸುವ ಕ್ರಿಯೆಗೆ ಪೂಜೆಯೆಂಬುದಾಗಿ ಕರೆಯುತ್ತಾರೆ. ಈ ಪೂಜೆಯು ಬಾಹ್ಯ ಮತ್ತು ಅಂತರಂಗವೆಂಬುದಾಗಿ ಎರಡು ವಿಧವಾಗಿರುತ್ತದೆ. ಬಹಿರಂಗದಲ್ಲಿ ಸಾಕಾರದ ಪೂಜೆಯಾದರೆ, ಅಂತರಂಗದಲ್ಲಿ ಸಾಕಾರ ನಿರಾಕಾರಗಳೆರಡರ ಪೂಜೆಯು ಸಂಭವಿಸುತ್ತದೆ. ಶಿವನು ನಿರ್ಗುಣ ನಿರಾಕಾರನಿರುವಂತೆ ಸಗುಣ ಸಾಕಾರನೂ ಇದ್ದಾನೆ. ದೇವ ಮಂದಿರ ಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಶಿವಲಿಂಗಾದಿಗಳು ಸಗುಣ–ಸಾಕಾರ ಸ್ವರೂಪಗಳಾದರೆ ವೀರಶೈವರ ಇಷ್ಟಲಿಂಗ ಮತ್ತು ಪ್ರಾಣಲಿಂಗಾದಿಗಳ ಪೂಜೆಯು ನಿರ್ಗುಣ ನಿರಾಕಾರದ ಪೂಜೆಯಾಗಿರುತ್ತದೆ. ಅಂತೆಯೇ ವೀರಶೈವರ ಇಷ್ಟಲಿಂಗ ಪೂಜೆಯು ಒಂದು ಮೂರ್ತಿಪೂಜೆಯಾಗಿರದೆ ಅದು ಆತ್ಮಾನುಸಂಧಾನದ ಶಿವಯೋಗ ವಾಗಿರುತ್ತದೆ.

ಅತೀ ಚಂಚಲವಾದ ಚಿತ್ತವನ್ನು ಏಕಾಗ್ರಗೊಳಿಸುವುದಕ್ಕಾಗಿ ಮೊದಲು ಉಪಚಾರ ಗಳಿಂದ ಇಷ್ಟಲಿಂಗವನ್ನು ಅನೇಕ ಘಂಟೆಗಳ ಕಾಲ ಪೂಜೆ ಮಾಡಬೇಕು. ಯಾವಾಗ ಚಿತ್ತದಲ್ಲಿ ಸ್ಥೈರ್ಯವು ಪ್ರಾಪ್ತವಾಗುವುದೋ ಆಗ ಯಾವುದೇ ಉಪಚಾರಗಳ ಅವಶ್ಯಕತೆಯಿಲ್ಲದೆ ಕೇವಲ ತನ್ನಿಷ್ಟಲಿಂಗವನ್ನು ತನ್ನ ವಾಮಹಸ್ತ ಪೀಠದಲ್ಲಿರಿಸಿ ದೃಷ್ಟಿ ಯೋಗ (ತ್ರಾಟಕ ಯೋಗ)ದ ಮೂಲಕ ಆ ಲಿಂಗದೊಂದಿಗೆ ಆತ್ಮಾನುಸಂಧಾನವನ್ನು ಮಾಡುತ್ತ ಶಿವೋऽಹಂ ಭಾವನೆಯನ್ನು ತಾಳುವುದೇ ಅಂತರಂಗದ ಪೂಜೆಯು. ಹೀಗೆ ಕ್ರಮವಾಗಿ ಬಹಿರಂಗದಿಂದ ಅಂತರಂಗಕ್ಕೆ ಪ್ರಯಾಣ ಬೆಳೆಸಲು ಪೂಜೆಯು ಅತ್ಯಂತ ಸಹಾಯಕವಾಗಿರೋಣದರಿಂದ ಪ್ರತಿಯೊಬ್ಬರು ಇಷ್ಟಲಿಂಗದ ಬಹಿರಂಗ ಹಾಗೂ ಅಂತರಂಗ ಪೂಜೆಯಲ್ಲಿ ಆಸಕ್ತರಾಗಬೇಕು.

ಪೂಜೆಯ ನಂತರ ಬರುವ ಧರ್ಮಾಚರಣೆಯೇ ''ಜಪವು, ''ತಜ್ಜಪಃ ತದರ್ಥ ಭಾವನಮ್'' ಎಂಬ ಯೋಗಶಾಸ್ತ್ರದ ಉಕ್ತಿಗನುಸಾರವಾಗಿ ಭಗವಂತನ ನಾಮದ ಅರ್ಥಾನುಸಂಧಾನವನ್ನು ಮಾಡುತ್ತ ಆ ನಾಮವನ್ನು ಪುನಃ ಪುನಃ ಆವೃತ್ತಿಗೊಳಿಸುವುದೇ ಜಪವು. ಇದೂ ಒಂದು ನಾಮಾಭ್ಯಾಸವೆಂದು ಕರೆಯಲ್ಪಡುತ್ತದೆ. ಹೀಗೆ ಇಷ್ಟಮಂತ್ರದ ಅರ್ಥವನ್ನರಿತು ಅದರ ಆವೃತ್ತಿಯನ್ನು ಮಾಡುತ್ತಿರುವಾಗ ಇಷ್ಟದ ಜೊತೆಗೆ ಸಾಧಕನ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗುತ್ತದೆ. ಒಂದು ಚಕ್ರವು ತನ್ನ ಮೈಸುತ್ತ ತಿರುಗುತ್ತಿರುವಾಗ ಅಲ್ಲೊಂದು ಊರ್ಜಾಶಕ್ತಿಯು ನಿರ್ಮಾಣವಾಗುವುದನ್ನು ಕಾಣುತ್ತೇವೆ. ಅದುವೇ ವಿದ್ಯುದ್ರೂಪದಲ್ಲಿ ಸರ್ವತ್ರ ಬಳಕೆಯಾಗಿ ಮನುಷ್ಯನ ಲೌಕಿಕ ಜೀವನಕ್ಕೆ ಅನುಕೂಲತೆ

ಯನ್ನು ಒದಗಿಸಿಕೊಡುತ್ತದೆ. ಇದೇ ಪ್ರಕಾರವಾಗಿ ಭಗವಂತನ ನಾಮದ ಆವೃತ್ತಿಯಿಂದ ಜಪಮಾಡುವವನ ಮನಸ್ಸಿನಲ್ಲಿ ಪುಣ್ಯರೂಪವಾದ ಒಂದು ಊರ್ಜಾಶಕ್ತಿಯು ನಿರ್ಮಾಣವಾಗಿ ಜಪಮಾಡುವವನ ಎಲ್ಲ ದೋಷಗಳನ್ನು ದೂರೀಕರಿಸಿ, ಅವನನ್ನು ಪವಿತ್ರಾತ್ಮನನ್ನಾಗಿ ಮಾಡುತ್ತದೆ. ಅಂತೆಯೇ ''ಜಪತೋ ನಾಸ್ತಿ ಪಾತಕಮ್'' ಎಂಬುದಾಗಿ ಹೇಳಲಾಗಿದೆ. ಆದ್ದರಿಂದ ಪ್ರತಿಯೊಬ್ಬರು ಇಷ್ಟಮಂತ್ರದ ಜಪವನ್ನು ಸದಾ ಮಾಡುತ್ತಿರಬೇಕು. ವೈಯಕ್ತಿಕವಾಗಿಯಾಗಲೀ ಸಾಮೂಹಿಕವಾಗಿಯಾಗಲೀ ಮಾಡುತ್ತಿರುವ ಜಪಕ್ಕೆ ಜಪಯಜ್ಞವೆಂತಲೂ ಕರೆಯುತ್ತಾರೆ. ಇದು ಎಲ್ಲ ವಿಧ ಯಜ್ಞಗಳಲ್ಲಿ ಸರ್ವಶ್ರೇಷ್ಠ ವಾದುದು. ಬೇರೆ ಯಜ್ಞಾದಿಗಳಲ್ಲಿ ಪ್ರಾಣಿಹಿಂಸೆ ಮೊದಲಾದ ದೋಷಗಳಿರುವುದು ಕಂಡುಬರುತ್ತದೆ. ಆದರೆ ಜಪಯಜ್ಞವು ಅಂಥ ಯಾವುದೇ ವಿಧ ವಾದ ದೋಷಗಳಿಂದ ದೂಷಿತವಾಗಿರುವುದಿಲ್ಲ. ಇದೂ ಅಲ್ಲದೆ ಈ ಯಜ್ಞವನ್ನಾಚರಿಸಲು ಬಹುಧನಾದಿಗಳ ಅಪೇಕ್ಷೆಯೂ ಸಹ ಇರುವುದಿಲ್ಲ. ಅಂತೆಯೇ ರಂಕ ಇರಲಿ ರಾಜನೇ ಇರಲಿ ಎಲ್ಲರಿಗೂ ಇದರಲ್ಲಿ ಸಮಾನವಾದ ಅಧಿಕಾರವಿದೆ. ಭಗವಂತನ ನಾಮ ಜಪಕ್ಕೆ ಜಾತಿಯ ತಾರತಮ್ಯಗಳೂ ಸಹ ಇರುವುದಿಲ್ಲ. ಭಕ್ತಿಯುಳ್ಳ ವ್ಯಕ್ತಿಯು ಯಾವುದೇ ಜಾತಿಯವ ನಿದ್ದರೂ ಭಗವನ್ನಾಮ ಜಪವನ್ನು ಮಾಡಲು ಯಾವ ಅಡೆತಡೆಗಳೂ ಇರುವುದಿಲ್ಲ.

ಈ ಜಪವು ವಾಚಿಕ, ಉಪಾಂಶು ಮತ್ತು ಮಾನಸಿಕವೆಂಬುದಾಗಿ ಮೂರು ವಿಧವಾಗಿ ರುತ್ತದೆ. ಅನ್ಯರಿಗೆ ಕೇಳಿಸುವ ಹಾಗೆ ಜಪಮಾಡಿದರೆ ಅದು ವಾಚಿಕವೆನಿಸುವುದು. ಇನ್ನು ತನ್ನ ಉಚ್ಚಾರಣೆಯು ಕೇವಲ ತನಗೆ ಮಾತ್ರ ಕೇಳುತ್ತಿದ್ದರೆ ಅದಕ್ಕೆ ಉಪಾಂಶು ಜಪವೆನ್ನುವರು. ಇದೇ ಪ್ರಕಾರವಾಗಿ ತನಗೂ ಕೇಳದ ಹಾಗೆ ಕೇವಲ ಮನಸ್ಸಿನಲ್ಲಿ ಮಾಡುವ ನಾಮದ ಆವೃತ್ತಿಗೆ ಮಾನಸಿಕ ಜಪವೆನ್ನುವರು. ಇವುಗಳಲ್ಲಿ ಮಾನಸಿಕ ಜಪವೇ ಸರ್ವಶ್ರೇಷ್ಠವಾದದ್ದು. ಕಾರಣ ಸರ್ವರಿಗೂ ಸುಲಭವಾದ ಈ ಜಪಾನುಷ್ಠಾನವನ್ನು ಪ್ರತಿಯೊಬ್ಬರು ಮಾಡಬೇಕು.

ಇದೇ ಪ್ರಕಾರವಾಗಿ ಮುಂಬರುವ ಧರ್ಮಾಚರಣೆಯೆಂದರೆ ಧ್ಯಾನವು. ಯಾವ ದೇವರ ನಾಮಜಪವನ್ನು ಮಾಡುತ್ತಿರುತ್ತೇವೆಯೋ ಆ ದೇವರ ಸಗುಣ ಇಲ್ಲವೆ ನಿರ್ಗುಣ ಸ್ವರೂಪವನ್ನು ಮನಸ್ಸಿನಲ್ಲಿ ಸದಾ ಚಿಂತಿಸುವುದಕ್ಕೆ ಧ್ಯಾನವೆಂದು ಕರೆಯುತ್ತಾರೆ. ಸಂಸಾರದ ಚಿಂತೆಯು ದುಃಖಕ್ಕೆ ಕಾರಣೀಭೂತವಾದ ಶಿವನ ಚಿಂತನಾರೂಪವಾದ ಧ್ಯಾನವು ಎಲ್ಲ ದುಃಖಗಳ ನಿವೃತ್ತಿಗೆ ಕಾರಣವಾಗಿರುತ್ತದೆ. ''ತತ್ರ ಪ್ರತ್ಯಯೈಕತಾನತಾ ಧ್ಯಾನಮ್'' ಎಂಬ ಯೋಗಸೂತ್ರಾನುಸಾರವಾಗಿ ತಾನು ಚಿಂತಿಸುತ್ತಿರುವ ಭಗವತ್ ಸ್ವರೂಪದ ಚಿಂತನೆಯಲ್ಲಿ ಬೇರಾವ ವೃತ್ತಿಯು ಏಳದ ಹಾಗೆ ಅದೊಂದೇ ವೃತ್ತಿಯು ಅಖಂಡ ಧಾರಾಪ್ರವಾಹದಂತೆ ನಡೆಯುತ್ತಿದ್ದರೆ ಅದಕ್ಕೇನೇ ಧ್ಯಾನವೆಂದು ಕರೆಯುತ್ತಾರೆ. ''ಧ್ಯಾನಂ ಸ್ಯಾತ್ ಷಷ್ಟಿ ನಾಡಿಕಮ್'' ಎಂಬ ಸ್ಕಂಧ ಪುರಾಣದ ಉಕ್ತಿಯಂತೆ ಅರವತ್ತು ಘಟಿಕಾ ಪರ್ಯಂತವಾಗಿ ಅಂದರೆ ಇಪ್ಪತ್ನಾಲ್ಕು ಘಂಟೆಗಳ ಕಾಲ ಚಿತ್ತ ವೃತ್ತಿಯು ಏಕಾಗ್ರವಾಗಿದ್ದು ತನ್ನ ಇಷ್ಟ ಚಿಂತನೆಯಲ್ಲಿ ತಲ್ಲೀನವಾಗಿದ್ದರೆ ಅದಕ್ಕೆ 'ಧ್ಯಾನ' ಎಂಬುದಾಗಿ ಕರೆಯುತ್ತಾರೆ.

ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶ್ರೀ ಸಿದ್ಧಾಂತ ಶಿಖಾಮಣಿಯ ಧರ್ಮಾಚಾರ ಸ್ಥಲದಲ್ಲಿ ಅಹಿಂಸೆಯನ್ನೇ ಮೊದಲು ಮಾಡಿಕೊಂಡು ಧ್ಯಾನ ಪರ್ಯಂತವಾದ ದಶವಿಧ ಧರ್ಮಾಚರಣೆಯನ್ನು ಉಪದೇಶಿಸಿದ್ದಾರೆ. ಇವುಗಳಲ್ಲಿ ಎಲ್ಲವುಗಳನ್ನಾಗಲಿ, ಇಲ್ಲವೆ ತನಗೆ ಸಾಧ್ಯವಾದ ಯಾವುದೊಂದನ್ನಾಗಲೀ ನಿಷ್ಠೆಯಿಂದ ಆಚರಿಸುವ ವ್ಯಕ್ತಿಯೇ ಧಾರ್ಮಿಕನೆಂದು ಕರೆಸಿಕೊಳ್ಳುತ್ತಾನೆ. ಕಾರಣ ಪ್ರತಿಯೊಬ್ಬರು ತಮ್ಮ ಶಕ್ತ್ಯಾನುಸಾರವಾಗಿ ಈ ಧರ್ಮಾಚರಣೆಗಳನ್ನು ಆಚರಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ಆಗಷ್ಟ ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೬

# ಧರ್ಮಾಚಾರಸ್ಥಲ

ಧರ್ಮಾತ್ಮರಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣ ಮಾಸದ ನಿಮಿತ್ತವಾಗಿ, ಪೂಜ್ಯ ಮಹಾಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲ ಪ್ರತಿದಿನ ಕ್ಷೇತ್ರಮಹಿಮೆಯನ್ನು ಸಹ ಆಲಿಸುತ್ತ ಬಂದಿದ್ದೀರಿ. ಕಾಶೀ ಮಹಾಕ್ಷೇತ್ರಕ್ಕೆ ಇರುವ ಅನೇಕ ನಾಮಗಳಲ್ಲಿ ವಾರಾಣಸಿ ಎಂಬುವುದು ಸಹ ಒಂದು. ಗಂಗೋತ್ರಿಯಿಂದ ದಕ್ಷಿಣವಾಹಿನಿ ಯಾಗಿ ಹರಿಯುತ್ತ ಬಂದಿರುವ ಗಂಗೆಯು ಕಾಶೀ ಮಹಾಕ್ಷೇತ್ರದಲ್ಲಿ ಉತ್ತರವಾಹಿನಿ ಯಾಗಿದೆ. ಈ ನದಿಗೆ ವರುಣಾ ಮತ್ತು ಅಸ್ಸೀ ಎಂಬ ಎರಡು ನದಿಗಳು ಪಶ್ಚಿಮ ದಿಕ್ಕಿನಿಂದ ಹರಿದು ಬಂದು ಕೂಡುತ್ತವೆ. ಈ ವರುಣಾ ಮತ್ತು ಅಸ್ಸೀ ನದಿಗಳ ನಡುವಿನ ಭೂಖಂಡಕ್ಕೆ ವಾರಾಣಸಿಯೆಂದು ಕರೆಯುತ್ತಾರೆ. ಇಲ್ಲಿ ಹರಿಯುತ್ತಿರುವ ಗಂಗಾನದಿಯಲ್ಲಿ ಮೊಸಳೆ ಮೊದಲಾದ ಕ್ರೂರ ಜಲಚರ ಪ್ರಾಣಿಗಳು ಇರುತ್ತಿದ್ದರೂ ವರುಣಾ ಹಾಗೂ ಅಸ್ಸೀ ನದಿಗಳ ಮಧ್ಯದಲ್ಲಿರುವ ಗಂಗಾ ಪ್ರವಾಹದಲ್ಲಿ ಈ ಕ್ರೂರ ಜಲಚರ ಪ್ರಾಣಿಗಳ ಪ್ರವೇಶಕ್ಕೆ ಶಿವನ ನಿಷೇಧಾಜ್ಞೆಯಿದೆ. ಅಂತೆಯೇ ಈ ಪ್ರದೇಶದಲ್ಲಿ ಇನ್ನೂವರೆಗೂ ಮೊಸಳೆ ಮುಂತಾದವುಗಳಿಂದ ಯಾವುದೇ ಪ್ರಾಣಹಾನಿಯು ಉಂಟಾಗಿರುವುದಿಲ್ಲ. ಇದೆಲ್ಲವೂ ವಾರಾಣಸಿಯ ಮಹಿಮೆ ಹಾಗೂ ವಿಶ್ವೇಶ್ವರನ ಕೃಪಾಶೀರ್ವಾದ.

ಇಂತಹ ಪರಮಪಾವನವಾದ ವಾರಾಣಸಿ ಮಹಾ ಕ್ಷೇತ್ರದಲ್ಲಿ ನೀವುಗಳೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದಲ್ಲಿ ಬರುವ ಧರ್ಮಾಚಾರಸ್ಥಲದ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯವರೆಗೆ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜೆ, ಜಪ ಮತ್ತು ಧ್ಯಾನಗಳೆಂಬ ದಶವಿಧ ಧರ್ಮಗಳ ಬಗ್ಗೆ ಕೂಲಂಕಷವಾಗಿ ತಿಳಿದುಕೊಂಡಿದ್ದೀರಿ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಧರ್ಮಾಚಾರಸ್ಥಲದ ಬಗ್ಗೆ ಇನ್ನಷ್ಟು ಮಹತ್ತ್ವವನ್ನು ನಿರೂಪಿಸುತ್ತ ಪುನಃ–

ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮ ಸಂಗ್ರಹಃ ।
ತಸ್ಮಾತ್ತಮಾಚರನ್ವಿದ್ವಾನ್ ತತ್ ಪ್ರಸಾದಾಯ ಕಲ್ಪ್ಯತೇ ॥

(ಸಿ. ಶಿ. ೧೬-೬೦)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವನು ಶಿವಾಗಮಗಳ ಮೂಲಕ ಈ ಧರ್ಮಗಳನ್ನು ಜನಕಲ್ಯಾಣಕ್ಕಾಗಿ ಉಪದೇಶಿಸಿದ್ದಾನೆ. ಹೀಗೆ ಇವುಗಳು ಶಿವನಿಂದ ಉಪದಿಷ್ಟಗಳಾಗಿ

ರುವುದರಿಂದ ಪ್ರತಿಯೊಬ್ಬರೂ ಇವುಗಳನ್ನು ಆಚರಣೆಯಲ್ಲಿ ತರಲು ಯತ್ನಿಸಬೇಕು. ಯಾರು ಇವುಗಳನ್ನು ಆಚರಣೆಯಲ್ಲಿ ತರುತ್ತಾರೋ ಅವರ ಮೇಲೆ ಶಿವನ ಅನುಗ್ರಹವು ಉಂಟಾಗುತ್ತದೆ ಎಂಬುದು ಪೂಜ್ಯರ ಅಭಿಪ್ರಾಯವಾಗಿದೆ.

ವೇದ ಮತ್ತು ಆಗಮಗಳು ನಮ್ಮ ದೇಶದ ಪ್ರಾಚೀನ ವಾಙ್ಮಯಗಳು. ಇವೆರಡೂ ಶಿವನಿಂದಲೇ ಹೊರಬಂದವುಗಳಾಗಿವೆ. ವೇದಭಾಗವು ಶಿವನ ಶ್ವಾಸೋಚ್ಛ್ವಾಸ ಮೂಲಕವಾಗಿ ಹೊರಹೊಮ್ಮಿದರೆ, ಇಪ್ಪತ್ತೆಂಟು ಶಿವಾಗಮಗಳು ಆತನ ವೈಖರಿಯ ವಾಣಿಯಿಂದ ಉಪದಿಷ್ಟಗಳಾಗಿವೆ. ಇವೆರಡರಲ್ಲಿ ಉಪದೇಶಿಸಲ್ಪಟ್ಟಿದ್ದೆಲ್ಲವೂ ಶಿವನ ಆದೇಶವಾಗಿರುತ್ತದೆ. ಆದ್ದರಿಂದ ಅಹಿಂಸಾದಿ ಧರ್ಮಾಚರಣೆಗಳನ್ನು ಪರಿಪಾಲಿಸಿದರೆ ಶಿವನ ಆಜ್ಞೆಯನ್ನು ಪರಿಪಾಲಿಸಿದಂತೆಯೇ ಸರಿ. ಹೀಗೆ ಶಿವನ ಆದೇಶವನ್ನು ಪರಿಪಾಲಿಸುವ ವ್ಯಕ್ತಿಗೆ ಶಿವನ ಅನುಗ್ರಹವು ಪ್ರಾಪ್ತವಾಗುವುದು. ಶಿವನ ಅನುಗ್ರಹವಿಲ್ಲದೆ ಅದಾವ ಜೀವಿಯೂ ಕೈವಲ್ಯವನ್ನು ಪಡೆಯಲಾರನು. ಆದಕಾರಣ ಶಿವಕೃಪೆಯ ಪ್ರಾಪ್ತಿಗಾಗಿ ಈ ಪೂರ್ವದಲ್ಲಿ ಹೇಳಿದ ದಶವಿಧ ಧರ್ಮಾಚರಣೆಗಳನ್ನು ಪರಿಪಾಲಿಸಬೇಕು.

ಧರ್ಮಾಚರಣೆಯಿಲ್ಲದವನು ಪಶುವಿಗೆ ಸಮಾನನಾಗಿರುತ್ತಾನೆ. ಆದರೆ ಧರ್ಮಾಚರಣೆಯನ್ನು ಮಾಡುವವನು ಪಶುತ್ವದಿಂದ ಮುಕ್ತನಾಗಿ ಪಶುಪತಿಯ ಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ. ಅಧರ್ಮಾಚರಣೆಯಲ್ಲಿ ಮನುಷ್ಯನು ಸಹಜವಾಗಿ ಪ್ರವೃತ್ತನಾಗುವಂತೆ ಧರ್ಮಾಚರಣೆಯಲ್ಲಿ ಪ್ರವೃತ್ತನಾಗುವುದಿಲ್ಲ. ಅಂತೆಯೇ ವೇದವು 'ಧರ್ಮಂ ಚರ' ಅಂದರೆ ಧರ್ಮದಿಂದ ನಡೆ ಅರ್ಥಾತ್ ಧರ್ಮವನ್ನು ಆಚರಿಸು ಎಂಬುದಾಗಿ ಆದೇಶಿಸಿದೆ. ಮನುಷ್ಯನ ಸ್ವಾಭಾವಿಕವಾದ ಅಧರ್ಮ ಪ್ರವೃತ್ತಿಯನ್ನು ಕಂಡು ಒಬ್ಬ ಸುಭಾಷಿತ ಕಾರನು–

ಆಶ್ಚರ್ಯಮೇತದ್ ಮನುಷ್ಯಲೋಕೇ ಅಮೃತಂ ಪರಿತ್ಯಜ್ಯ ವಿಷಂ ಪಿಬಂತಿ ।
ಧರ್ಮಂ ಪ್ರಸಂಗಾದಪಿ ನಾಚರಂತಿ ಪಾಪಂ ಪ್ರಯತ್ನೇನ ಸಮಾಚರಂತಿ ॥

ಎಂದು ವಿವರಿಸಿದ್ದಾನೆ. ಈ ಮನುಷ್ಯಲೋಕದಲ್ಲಿ ಬಂದ ಪ್ರತಿಯೊಬ್ಬನೂ ಧರ್ಮವನ್ನು ಆಚರಿಸುವ ಪ್ರಸಂಗ ಬಂದೊದಗಿದರೂ ಅದನ್ನು ಮಾಡದೆ ಪ್ರಯತ್ನಪೂರ್ವಕವಾಗಿ ಪಾಪಾಚರಣೆಯನ್ನು ಮಾಡುತ್ತಿರುತ್ತಾನೆ. ಹೀಗೆ ಮಾಡುವುದನ್ನು ಕಂಡಾಗ ಅಮೃತವನ್ನು ತ್ಯಜಿಸಿ ವಿಷವನ್ನು ಕುಡಿಯುವವನ ಗತಿಯು ಬಂದೊದಗಿದೆಯಲ್ಲಾ ಎಂದು ಯಾರಿಗೆ ತಾನೆ ಆಶ್ಚರ್ಯವಾಗಲಿಕ್ಕಿಲ್ಲ ?

ಧರ್ಮಾಚರಣೆಯನ್ನು ಹೇಗೆ ಮಾಡಬೇಕು ? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯರು–

ಅಧರ್ಮಂ ನಸ್ಪೃಶೇತ್ ಕಿಂಚಿತ್ ವಿಹಿತಂ ಧರ್ಮಮಾಚರೇತ್ ।
ತಂ ಚ ಕಾಮವಿನಿರ್ಮುಕ್ತಂ ತಮಪಿ ಜ್ಞಾನಪೂರ್ವಕಮ್ ॥

(ಸಿ. ಶಿ. ೧೭–೭೧)

ಹೀಗೆ ಆದೇಶಿಸಿದ್ದಾರೆ; ತನ್ನ ಜೀವನದಲ್ಲಿ ಅಧರ್ಮವನ್ನು ಆಚರಿಸುವ ಪ್ರಸಂಗ ಬಂದರೂ ಅದನ್ನು ಎಂದೂ ಆಚರಿಸಕೂಡದು. ಅಂದರೆ ಹಿಂಸೆಯನ್ನು ಮಾಡುವ, ಸುಳ್ಳು ಹೇಳುವ

ಮತ್ತು ಕಳ್ಳತನವನ್ನು ಮಾಡುವ ಮುಂತಾದ ಸನ್ನಿವೇಶಗಳು ಬಂದರೂ ಸಹ ಸಂಯಮವನ್ನು ತಾಳಿ ಅವುಗಳು ಆಗದಂತೆ ಎಚ್ಚರಿಕೆ ವಹಿಸಬೇಕು. ಆದರೆ ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಅಹಿಂಸೆ ಸತ್ಯ ಮುಂತಾದ ಧರ್ಮಾಚರಣೆಗಳನ್ನು ಪ್ರಯತ್ನ ಪೂರ್ವಕವಾಗಿ ಆಚರಿಸಬೇಕು. ಇವುಗಳನ್ನು ಆಚರಿಸುವಾಗಲೂ ಸಹ ಯಾವುದೇ ಪ್ರಕಾರದ ಫಲಾಪೇಕ್ಷೆಯು ಮನಸ್ಸಿನಲ್ಲಿ ಬರದಿರಬೇಕಲ್ಲದೆ ತಾನು ಆಚರಿಸುವ ಧರ್ಮಾಚರಣೆಯ ಬಗ್ಗೆ ಸಂಪೂರ್ಣವಾದ ತಿಳುವಳಿಕೆಯು ಸಹ ಇರಬೇಕು. ತಾನು ಆಚರಿಸುವ ಕ್ರಿಯಾದಿಗಳ ಬಗ್ಗೆ ಪರಿಪೂರ್ಣವಾದ ತಿಳುವಳಿಕೆಯು ಇರದೇ ಹೋದರೆ ಒಮ್ಮೊಮ್ಮೆ ಬಹುದೊಡ್ಡ ಅನರ್ಥವಾಗುವ ಪ್ರಸಂಗವೂ ಸಹ ಬಂದೊದಗಬಹುದು.

ಪಂಚತಂತ್ರದಲ್ಲಿ ಪ್ರಸ್ತುತ ಸಂದರ್ಭೋಚಿತವಾದ ಒಂದು ಕಥೆಯುಂಟು. ಓರ್ವ ರಾಜನು ಒಂದು ಮಂಗವನ್ನು ಸಾಕಿದ್ದನು. ರಾಜನು ಅದನ್ನು ಅತಿಯಾಗಿ ಪ್ರೀತಿಸುತ್ತಿದ್ದನು. ಹೀಗಾಗಿ ಅರಮನೆಯೊಳಗೆ ಆ ಮಂಗಕ್ಕೆ ಎಲ್ಲಿಯೂ ಪ್ರತಿಬಂಧಕವೇ ಇರಲಿಲ್ಲ. ಒಮ್ಮೆ ಮಧ್ಯಾಹ್ನದ ವೇಳೆಯಲ್ಲಿ ರಾಜನು ಊಟವನ್ನು ಮಾಡಿ ತನ್ನ ಶಯ್ಯಾಗೃಹದಲ್ಲಿ ವಿಶ್ರಮಿಸಿದಾಗ ಇವನು ಸಾಕಿದ ಮಂಗವೂ ಸಹ ಇವನ ಪಕ್ಕದಲ್ಲಿ ಸುಮ್ಮನೇ ಕುಳಿತುಕೊಂಡಿತ್ತು. ಆ ಸಂದರ್ಭದಲ್ಲಿ ಎಲ್ಲಿಂದಲೋ ಒಂದು ನೊಣವು ಹಾರುತ್ತ ಬಂದು ರಾಜನ ಮೀಸೆಯ ಮೇಲೆ ಕುಳಿತುಕೊಂಡಿತು. ಅದನ್ನು ನೋಡಿದಾಗ ಮಂಗಕ್ಕೆ ಸಹನೆಯಾಗಲಿಲ್ಲ. ರಾಜನ ನಿದ್ರಾಭಂಗವಾದೀತೆಂಬ ದೃಷ್ಟಿಯಿಂದ ಆ ನೊಣವನ್ನು ಕೈಜಾಡಿಸಿ ಹಾರಿಸಿತು. ಹಾರಿಹೋದ ನೊಣವು ಕೆಲಕ್ಷಣದ ನಂತರ ಮತ್ತೆ ಬಂದು ಅಲ್ಲಿಯೇ ಕುಳಿತಿತು. ಮಂಗವು ಅದನ್ನು ಅನೇಕಸಾರೆ ಹಾರಿಸುತ್ತಿರಲಿಕ್ಕಾಗಿಯೂ ಅದು ಪುನಃ ಪುನಃ ಬಂದು ರಾಜನ ಮೀಸೆಯ ಮೇಲೆ ಕೂಡ್ರುವುದನ್ನು ನೋಡಿ ಮಂಗಕ್ಕೆ ಸಹನೆಯಾಗಲಿಲ್ಲ. ಅತ್ಯಂತ ಕುಪಿತವಾದ ಆ ಮಂಗವು ರಾಜನ ಪಕ್ಕದಲ್ಲಿರುವ ಖಡ್ಗವನ್ನು ಕೈಗೆತ್ತಿಕೊಂಡು ನೊಣವನ್ನು ಕತ್ತರಿಸಿ ಹಾಕುವ ಆವೇಶದಲ್ಲಿ ಖಡ್ಗವನ್ನೆತ್ತಿ ಹೊಡೆದಾಗ ನೊಣವು ಹಾರಿ ಹೋಗಿತ್ತು, ರಾಜನ ಬಾಯಿ ಹರಿದು ಹೋಗಿತ್ತು.

ಇಲ್ಲಿ ರಾಜನ ಮೇಲೆ ಮಂಗವು ಅತಿ ಸ್ನೇಹವನ್ನು ತಾಳಿ ರಾಜನ ನಿದ್ರಾಭಂಗವನ್ನುಂಟು ಮಾಡುತ್ತಿರುವ ನೊಣವನ್ನು ಹೊಡೆಯಲು ಹೋಗಿ ರಾಜನ ಬಾಯಿಯು ಹರಿದು ಹೋಗುವಂತೆ ಮಾಡಿದ್ದನ್ನು ನೋಡಿದಾಗ ನಾನು ಏನು ಮಾಡುತ್ತಿದ್ದೇನೆ ? ಇದರಿಂದಾಗುವ ಪರಿಣಾಮವೇನು ? ಎಂಬುದರ ಅರಿವು ಆ ಮಂಗಕ್ಕೆ ಇಲ್ಲದ ಕಾರಣ ಇಂತಹ ಅನರ್ಥವು ಉಂಟಾಯಿತು. ಅಂತಲೇ ಪೂಜ್ಯಪಾದರು ಯಾವುದೇ ಧರ್ಮಾಚರಣೆಯನ್ನು ಮಾಡುವ ಪೂರ್ವದಲ್ಲಿ ಅದರ ಬಗ್ಗೆ ಸರಿಯಾದ ತಿಳುವಳಿಕೆ ಇರಬೇಕೆಂಬುದಾಗಿ ಆದೇಶಿಸಿದ್ದಾರೆ. ಅರಿತು ಮಾಡಿದ ಆಚರಣೆಯು ಯೋಗ್ಯ ಫಲವನ್ನು ಕೊಡುತ್ತದೆ. ಹಾಗಿಲ್ಲದೆ ಹೋದರೆ ಮಹದನರ್ಥವು ಉಂಟಾಗುತ್ತದೆ. ಧರ್ಮಾಚರಣೆಯನ್ನು ಮಾಡುವ ವ್ಯಕ್ತಿಯಲ್ಲಿ ಎಂತಹ ಜ್ಞಾನವಿರಬೇಕೆಂಬುದರ ಬಗ್ಗೆ ಪೂಜ್ಯ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಆತ್ಮವತ್ಸರ್ವಭೂತಾನಿ ಸಂಪಶ್ಯೇದ್ಯೋಗವಿತ್ತಮಃ।
ಜಗದೇಕಾತ್ಮತಾ ಭಾವಾನ್ನಿಗ್ರಹಾದಿ ವಿರೋಧತಃ॥

(ಸಿ. ಶಿ. ೧೬–೬೨)

ಎಂದು ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವಯೋಗಿಯಾದವನು ಸರ್ವರನ್ನು ತನ್ನಾತ್ಮರೂಪರನ್ನಾಗಿ ಕಾಣಬೇಕು. ಏಕೆಂದರೆ ಈ ಜಗತ್ತೆಲ್ಲವೂ ಒಬ್ಬನೇಯಾದ ಪರಬ್ರಹ್ಮಸ್ವರೂಪವಾಗಿದೆ ಎಂಬ ಭಾವನೆಯು ಅವನಲ್ಲಿ ಇರುತ್ತದೆ. ಅಂತಲೇ ಒಬ್ಬರನ್ನು ನಿಗ್ರಹಿಸುವ, ಮತ್ತೊಬ್ಬರನ್ನು ಅನುಗ್ರಹಿಸುವ ಪ್ರಸಂಗವೇ ಇಲ್ಲಿ ಬರುವುದಿಲ್ಲ, ಎಲ್ಲವೂ ತಾನೇ ತಾನಾದ ಬಳಿಕ ನಿಗ್ರಹ ಮತ್ತು ಅನುಗ್ರಹಗಳಿಗೆ ಅವಕಾಶವೇ ಇರುವುದಿಲ್ಲವೆಂಬ ಭಾವವು. ಧರ್ಮಾಚರಣೆಯನ್ನು ಮಾಡುವ ವ್ಯಕ್ತಿಯಲ್ಲಿ ಇಂತಹ ಸರ್ವಾತ್ಮರೂಪವಾದ ಜ್ಞಾನವಿರಬೇಕೆಂಬುದು ಪೂಜ್ಯಪಾದರ ಆಶಯವಾಗಿದೆ.

ಈ ಪೂರ್ವದಲ್ಲಿ ಹೇಳಿದ ಹಾಗೆ ಯಾರು ಸರ್ವಾತ್ಮರೂಪವಾದ ಜ್ಞಾನವನ್ನು ಪಡೆದುಕೊಂಡಿರುತ್ತಾರೋ ಅವರಿಗೆ ಮಮಕಾರ ಭಾವನೆಯು ಉಂಟಾಗುವುದಿಲ್ಲವೆಂಬ ವಿಚಾರವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯರು ಪುನಃ–

ಏಕ ಏವ ಶಿವಃ ಸಾಕ್ಷಾಜ್ಜಗದೇತದಿತಿ ಸ್ಫುಟಮ್।
ಪಶ್ಯತಃ ಕಿನ್ನಜಾಯೇತ ಮಮಕಾರೋಹಿ ವಿಭ್ರಮಃ॥

(ಸಿ. ಶಿ. ೧೬–೬೩)

ಈ ವಿಧವಾಗಿ ಉಪದೇಶಿಸಿದ್ದಾರೆ. 'ಇದೆಲ್ಲವೂ ಒಬ್ಬನೇ ಆದ ಶಿವನೇ ಆಗಿದೆ' ಎಂಬುವ ದೃಢವಾದ ಜ್ಞಾನವುಳ್ಳವನಿಗೆ ಮಮಕಾರ ಭಾವನೆಯೇ ಇಲ್ಲದಾಗಿ ಹೋಗುತ್ತದೆ. ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಶ್ರುತಿವಾಕ್ಯದಲ್ಲಿ ಈ ಜಗತ್ತು ಸೃಷ್ಟಿಯಾಗುವ ಮೊದಲು ಒಬ್ಬನೇ ಆದ ಪರಮಾತ್ಮನಿದ್ದನು. ಅವನೇ ಎಲ್ಲ ಜಗದ್ರೂಪನೂ ಆಗಿದ್ದಾನೆ. ಇಂತಹ ಶಿವನೊಂದಿಗೆ ತಾದಾತ್ಮ್ಯ ಭಾವನೆಯನ್ನು ತಾಳಿದ ಶಿವಯೋಗಿಯ ಮನಸ್ಸಿನಲ್ಲಿ ಸರ್ವವೆಲ್ಲವೂ ನಾನೇ ಇದ್ದೇನೆ ಎನ್ನುವ ಪೂರ್ಣಾಹಂತೆಯು ಪ್ರಾಪ್ತವಾಗಿರೋಣ ದರಿಂದ, ಎಲ್ಲವನ್ನು ಅಹಂರೂಪವಾಗಿ ಅನುಭವಿಸುವ ಶಿವಯೋಗಿಗೆ ಮಮಕಾರ ಭಾವನೆಯು ಅದು ಹೇಗೆ ತಾನೆ ಉಂಟಾದೀತು ? ಆ ಭಾವನೆಗೆ ಇಲ್ಲಿ ಅವಕಾಶವೇ ಇರುವುದಿಲ್ಲವೆಂಬುದು ಪೂಜ್ಯರ ಆಶಯವಾಗಿದೆ.

ಈ ಪೂರ್ವದಲ್ಲಿ ಹೇಳಿದ ಅಹಿಂಸಾದಿ ಧರ್ಮಾಚರಣೆಯನ್ನು ಯಾರೂ ತ್ಯಜಿಸಬಾರದು ಎಂಬ ವಿಷಯವನ್ನು ಪೂಜ್ಯರು ಪುನಃ–

ಧರ್ಮ ಏವ ಸಮಸ್ತಾನಾಂ ಯತಸ್ಸಂಸಿದ್ಧಿ ಕಾರಣಮ್।
ನಿಸ್ಪೃಹೋಪಿ ಮಹಾಯೋಗೀ ಧರ್ಮಮಾರ್ಗಂಚ ನ ತ್ಯಜೇತ್॥

(ಸಿ.ಶಿ. ೧೬–೬೪)

ಈ ರೀತಿಯಾಗಿ ವಿವರಿಸಿದ್ದಾರೆ. ಧರ್ಮಾಚರಣೆಯೇ ಎಲ್ಲರಿಗೂ ಭೋಗ ಹಾಗೂ ಮೋಕ್ಷಗಳನ್ನು ಕೊಡುವಂತಹದಾಗಿದೆ. ಆದ್ದರಿಂದ ಯಾವುದೇ ಫಲದ ಅಪೇಕ್ಷೆಯಿಲ್ಲದೆ ಇದ್ದರೂ, ಯೋಗಿಯಾದವನು ಧರ್ಮಾಚರಣೆಯನ್ನು ಎಂದೂ ಬಿಡಕೂಡದು

ಎಂಬುದು ಪೂಜ್ಯರ ಆದೇಶವಾಗಿದೆ. ಮನುಷ್ಯನ ಅಭ್ಯುದಯ ಹಾಗೂ ನಿಶ್ರೇಯಸ ಗಳಿಗೆ ಸಾಧನವಾದದ್ದು ಧರ್ಮವೇ. ಧರ್ಮಾಚರಣೆಯಿಂದ ಮನುಷ್ಯನು ಇಹದಲ್ಲಿ ಸರ್ವವಿಧಗಳಾದ ಭೋಗ ಭಾಗ್ಯಗಳನ್ನು ಪಡೆಯುವನಲ್ಲದೆ ಕೊನೆಗೆ ಪರಮ ಪುರುಷಾರ್ಥವಾದ ಮೋಕ್ಷವನ್ನೂ ಸಹ ಪ್ರಾಪ್ತಿಮಾಡಿಕೊಳ್ಳಬಲ್ಲನು. ಅಂತೆಯೇ ಚತುರ್ವಿಧ ಪುರುಷಾರ್ಥಗಳನ್ನು ನಿರೂಪಿಸುವಾಗ ಧರ್ಮವನ್ನು ಮೊದಲನೆಯ ಸ್ಥಾನದಲ್ಲಿ ಪರಿಗ್ರಹಿಸಿದ್ದಾರೆ. ಧರ್ಮದಿಂದಲೇ ಅರ್ಥವು, ಕಾಮವು ಮತ್ತು ಕೊನೆಯದಾಗಿ ಮೋಕ್ಷವೂ ಸಹ ಪ್ರಾಪ್ತವಾಗುತ್ತದೆ. ಆದ್ದರಿಂದ ಎಂಥ ಯೋಗಿಯೇ ಇರಲಿ ಧರ್ಮಾಚರಣೆಯನ್ನು ಮಾಡುತ್ತಲೇ ಇರಬೇಕು.

ಜ್ಞಾನಿಗಳಾದವರು ಧರ್ಮಾಚರಣೆಯನ್ನು ಏಕೆ ಮಾಡಬೇಕು ? ಅದರಿಂದ ಅವರಿಗೆ ಯಾವುದೇ ಪ್ರಯೋಜನವಿರುವುದಿಲ್ಲವಲ್ಲ ? ಎಂಬ ಪ್ರಶ್ನೆಯು ಪ್ರಾದುರ್ಭವಿಸಲು ಅದಕ್ಕೆ ಸಮಾಧಾನ ರೂಪವಾಗಿ ಪೂಜ್ಯರು ಪುನಃ–

ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ ।
ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥

(ಸಿ. ಶಿ. ೧೬–೬೫)

ಈ ವಿಧವಾಗಿ ಉಪದೇಶಿಸಿದ್ದಾರೆ. ಶಿವಾದ್ವೈತ ಜ್ಞಾನದಿಂದ ಸಂತೃಪ್ತನಾದ ಶಿವ ಯೋಗಿಯೂ ಸಹ ಧರ್ಮಾಚರಣೆಯನ್ನು ಬಿಡಕೂಡದು. ಯಾಕೆಂದರೆ ಸಾಮಾನ್ಯ ವಾಗಿ ಲೌಕಿಕ ಜನರು ದೊಡ್ಡವರ ಆಚರಣೆಯನ್ನೇ ಅನುಕರಣೆ ಮಾಡುತ್ತಿರುತ್ತಾರೆ. ಆದ್ದರಿಂದ ಲೋಕಕಲ್ಯಾಣಾರ್ಥವಾಗಿ ಜ್ಞಾನಿಗಳು ಧರ್ಮಾಚರಣೆಯನ್ನು ಮಾಡಲೇ ಬೇಕೆಂಬುದು ಆಚಾರ್ಯರ ಆಶಯವಾಗಿದೆ.

ಶಿವಾದ್ವೈತ ಜ್ಞಾನವು ಮನುಷ್ಯ ಜೀವನದ ಕೊನೆಯದಾದ ಗುರಿಯು. ಇದನ್ನು ಪಡೆದ ಬಳಿಕ ಆ ಜ್ಞಾನಿಗೆ ಧರ್ಮಾಚರಣೆಯ ಪ್ರಯೋಜನವು ತನಗಾಗಿ ಏನೂ ಇರುವುದಿಲ್ಲ. ಆದರೂ ಸಹ ಅಜ್ಞರಾದ ಜನಸಾಮಾನ್ಯರನ್ನು ಧರ್ಮಮಾರ್ಗದಲ್ಲಿ ಮುನ್ನಡೆಸಲೋಸುಗ ತಾವು ಸ್ವತಃ ಧರ್ಮಾಚರಣೆಯನ್ನು ಮಾಡಬೇಕಾಗುತ್ತದೆ. ಶಿಕ್ಷಕ ತರಬೇತಿ ಪರೀಕ್ಷೆ (ಟಿ.ಸಿ.ಹೆಚ್) ಪಾಸಾದ ಒಬ್ಬ ವ್ಯಕ್ತಿಯನ್ನು ಪ್ರಾಥಮಿಕ ಶಾಲೆಯ ಶಿಕ್ಷಕನನ್ನಾಗಿ ನೇಮಿಸಿದಾಗ, ಅವನು ದಿನಾಲೂ ಮಕ್ಕಳಿಗೆ ಅಕ್ಷರಾಭ್ಯಾಸವನ್ನು ಮಾಡಿಸುತ್ತಿರುತ್ತಾನೆ. ನಿತ್ಯವೂ ಮೂಲಾಕ್ಷರಗಳನ್ನು ಬರೆಯುವ, ಬರೆಯಿಸುವ, ಅನ್ನುವ, ಅನಿಸುವ ಕಾರ್ಯದಲ್ಲಿಯೇ ಇಡೀ ತನ್ನ ದಿನವನ್ನು ಆತನು ವ್ಯಯಮಾಡಿಕೊಳ್ಳುತ್ತಿ ರುತ್ತಾನೆ. ಅವನು ಪುನಃ ಪುನಃ ಉಚ್ಚರಿಸುತ್ತಿರುವ ಅವನ ಅಕ್ಷರಾಭ್ಯಾಸವು ಅವನಿಗಾಗಿ ಯಾವ ಪ್ರಯೋಜನವಿರದಿದ್ದರೂ ಅವನ ಉಚ್ಚಾರಣೆಯಿಂದ ಮಕ್ಕಳಿಗೆ ಬೋಧೆ ಯುಂಟಾಗುತ್ತದೆ. ಹೀಗೆ ಮಕ್ಕಳ ಬೋಧೆಗಾಗಿ ಅವನ ಅಕ್ಷರಾಭ್ಯಾಸವು ಪ್ರಯೋಜನ ಕಾರಿಯಾಗಿರುವಂತೆ, ಜ್ಞಾನಿಯಾದ ಶಿವಯೋಗಿಯ ಧರ್ಮಾಚರಣೆಯಿಂದ ಸ್ವತಃ ಅವನಿಗೆ ಯಾವುದೇ ಪ್ರಯೋಜನವಾಗದಿದ್ದರೂ ಸಾಮಾನ್ಯ ಜನರಿಗೆ ಮಾರ್ಗದರ್ಶನ ವಾಗುವುದೆಂಬ ಪ್ರಯೋಜನ ಮಾತ್ರ ಸಿದ್ಧಿಸುತ್ತದೆ : ಆದುದರಿಂದ ಲೋಕ

ಕಲ್ಯಾಣಾರ್ಥವಾಗಿ ಜ್ಞಾನಿಗಳೂ ಸಹ ಧರ್ಮಾಚರಣೆಯನ್ನು ಮಾಡುತ್ತಿರಬೇಕೆಂಬುದು ಜಗದ್ಗುರು ರೇಣುಕ ಭಗವತ್ಪಾದರ ಆಶಯವಾಗಿದೆ.

ಒಮ್ಮೆ ರಾಮಕೃಷ್ಣ ಪರಮಹಂಸರ ಆಶ್ರಮಕ್ಕೆ ಓರ್ವ ಆತ್ಮಜ್ಞಾನಿಯು ಬಂದಿದ್ದನು. ಅವನಿಗೆ ತನ್ನ ಜ್ಞಾನದ ಬಗ್ಗೆ ಬಹಳಷ್ಟು ಅಭಿಮಾನವಿತ್ತು, ಆ ಅಭಿಮಾನದಿಂದಾಗಿಯೇ ಆಚಾರ–ವಿಚಾರಗಳನ್ನು ಕಡೆಗಣಿಸಿ ಮಾತನಾಡುತ್ತಿದ್ದನು. ಆಶ್ರಮಕ್ಕೆ ಬಂದ ಈ ಅತಿಥಿಯನ್ನು ಅಲ್ಲಿಯ ವ್ಯವಸ್ಥಾಪಕರು ಭೋಜನಕ್ಕಾಗಿ ಆಹ್ವಾನಿಸಿದರು. ಅಲ್ಲದೆ ಮಗ್ಗುಲಲ್ಲಿ ಭಾಗೀರಥಿ ನದಿಯು ಹರಿಯುತ್ತಿದ್ದಾಳೆ ಹೋಗಿ ಮುಖಮಾರ್ಜನ ಮಾಡಿ ಕೊಂಡು ಬನ್ನಿರೆಂಬುದಾಗಿ ವಿನಂತಿಸಿಕೊಂಡರು. ಆಗ ಈ ಅಹಂಕಾರಿಯಾದ ಜ್ಞಾನಿಯು ಮುಖಮಾರ್ಜನವನ್ನು ಮಾಡದೆ ಹಾಗೇ ಹೋಗಿ ಪಂಕ್ತಿಯಲ್ಲಿ ಕುಳಿತುಕೊಂಡನು. ಇದೇನು ತಾವು ಹಾಗೇ ಬಂದು ಕುಳಿತಿರಲ್ಲ ? ನೀವು ಮುಖಮಾರ್ಜನೆಯನ್ನೇಕೆ ಮಾಡಲಿಲ್ಲ ? ಎಂದು ವ್ಯವಸ್ಥಾಪಕನು ಪ್ರಶ್ನಿಸಲು ಆ ಜ್ಞಾನಿಯು– ''ನಾನು ಜ್ಞಾನಗಂಗೆಯಲ್ಲಿ ಸ್ನಾನಮಾಡಿ ಬಂದಿದ್ದೇನೆ. ಹೀಗಿದ್ದಾಗ ಈ ಭಾಗೀರಥಿಯ ನೀರಿನಲ್ಲಿ ಕೈಕಾಲು ತೊಳೆಯುವ ಅವಶ್ಯಕತೆ ನನಗಿಲ್ಲ'' ಇವರ ಈ ತೆರನಾದ ಮಾತನ್ನು ಕೇಳಿ ವ್ಯವಸ್ಥಾಪಕನು ಮುಂದೇನೂ ಉತ್ತರಿಸದೆ ಎಲ್ಲರಿಗೂ ಕೊಡುವಂತೆ ಭೋಜ್ಯ ಪದಾರ್ಥಗಳಿಂದ ತುಂಬಿದ ತಟ್ಟೆಯನ್ನು ಇವನಿಗೂ ಕೊಟ್ಟನು. ಆದರೆ ಕುಡಿಯಲು ನೀರನ್ನು ಮಾತ್ರ ಇಟ್ಟಿರಲಿಲ್ಲ, ಎಲ್ಲರೂ ಭೋಜನವನ್ನು ಪ್ರಾರಂಭಿಸಿದರು. ಸ್ವಲ್ಪೇ ಹೊತ್ತಿನಲ್ಲಿ ಆ ಜ್ಞಾನಿಯ ಕಂಠದಲ್ಲಿ ತುತ್ತು ಸಿಕ್ಕು ಬಿಕ್ಕು ಹತ್ತಿತು. ಆಗ ಅವನು ಕೈ ಸನ್ನೆಯನ್ನು ಮಾಡುತ್ತ ನೀರನ್ನು ಯಾಚಿಸಿದನು. ಅಲ್ಲಿಯೇ ಉಪಸ್ಥಿತನಿದ್ದ ವ್ಯವಸ್ಥಾಪಕನು ಜ್ಞಾನಿಯನ್ನು ಉದ್ದೇಶಿಸಿ ''ಓಹೋ ! ನೀವು ಜ್ಞಾನಗಂಗೆಯಲ್ಲಿ ಮಿಂದು ಬಂದವರು ನಿಮಗೇಕೆ ಈ ಭಾಗೀರಥಿಯ ನೀರು ? ಜ್ಞಾನಗಂಗೆಯನ್ನೇ ಕುಡಿದು ಬಿಕ್ಕನ್ನು ಕಳೆದುಕೊಳ್ಳಿ'' ಎಂಬುದಾಗಿ ವ್ಯಂಗ್ಯವಾಗಿ ನುಡಿದನು. ಆಗ ಆ ಜ್ಞಾನಿಗೆ ತನ್ನ ತಪ್ಪಿನ ಅರಿವಾಗಿ ಜ್ಞಾನ ವಾದರೂ ಆಚಾರ–ವಿಚಾರಗಳನ್ನು ಅಲಕ್ಷಿಸಬಾರದೆಂಬುದಾಗಿ ನಿಶ್ಚಯಿಸಿಕೊಂಡನು.

ಜ್ಞಾನಿಯಾದವನು ಧರ್ಮಾಚರಣೆಯನ್ನು ಏಕೆ ಮಾಡಬೇಕು ? ಎಂಬುದರ ಬಗ್ಗೆ ಮತ್ತೊಂದು ಕಾರಣವನ್ನು ತಿಳಿಯಪಡಿಸಲೋಸುಗ ಪೂಜ್ಯರು ಪುನಃ–

ಸದಾಚಾರಪ್ರಿಯಃ ಶಂಭುಃ ಸದಾಚಾರೇಣ ಪೂಜ್ಯತೇ ।
ಸದಾಚಾರಂ ವಿನಾ ತಸ್ಯ ಪ್ರಸಾದೋನೈವ ಜಾಯತೇ ॥

(ಸಿ. ಶಿ. ೧೬–೬೬)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವನು ಸದಾಚಾರಪ್ರಿಯನಾಗಿದ್ದಾನೆ. ಸದಾಚಾರ ದಿಂದಲೇ ಅವನು ಪೂಜೆಗೊಳ್ಳುತ್ತಾನೆ. ಸದಾಚಾರಸಂಪನ್ನರಲ್ಲದವರ ಮೇಲೆ ಅವನು ಎಂದೂ ಕೃಪೆಯನ್ನು ಮಾಡಲಾರನು. ಆದ್ದರಿಂದ ಶಿವನಕೃಪೆಯ ಪ್ರಾಪ್ತಿಗಾದರೂ ಸಹ ಜ್ಞಾನಿಯು ಆಚಾರವುಳ್ಳವನಾಗಿರಬೇಕೆಂಬುದು ಪೂಜ್ಯರ ಆಶಯವಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳೆಂಬುದಾಗಿ ಪಂಚ ಆಚಾರಗಳು ಪ್ರತಿಪಾದಿಸಲ್ಪಟ್ಟಿವೆ. ಈ

ಆಚಾರಗಳನ್ನು ಪ್ರಾಣಗಳಿಗೆ ಹೋಲಿಸಿದ್ದಾರೆ. ಶರೀರದಲ್ಲಿ ಪ್ರಾಣಸಂಚಾರವಿದ್ದಾಗ ಲೇನೇ ಶರೀರದ ಎಲ್ಲ ವ್ಯವಹಾರಗಳು ನಡೆಯುತ್ತಿರುತ್ತವೆ. ಯಾವ ಕ್ಷಣದಲ್ಲಿ ಪ್ರಾಣಸಂಚಾರವು ನಿಂತುಹೋಗುವುದೋ ಅದೇ ಕ್ಷಣದಲ್ಲಿ ಎಲ್ಲ ವ್ಯವಹಾರಗಳು ನಿಂತುಹೋಗುವುವು. ಹೀಗೆ ಜೀವನಕ್ಕೆ ಪ್ರಾಣಗಳ ಅವಶ್ಯಕತೆ ಇರುವಂತೆ ಮನುಷ್ಯನ ಆಧ್ಯಾತ್ಮಿಕ ಉನ್ನತಿಗೆ ಆಚಾರಗಳು ಪರಮಾವಶ್ಯಕವಾದವುಗಳಾಗಿವೆ.

ಈ ಜಗತ್ತಿಗೆ ಒಡೆಯನಾದ ಶಿವನು ಸದಾಚಾರಪ್ರಿಯನಾಗಿರುತ್ತಾನೆ. ಅಂದರೆ ಆಚಾರವುಳ್ಳ ಭಕ್ತನೇ ಅವನಿಗೆ ಪ್ರಿಯನಾಗುವನು. ಆದ್ದರಿಂದ ಆ ಶಿವನನ್ನು ಪೂಜಿಸಬೇಕಾದರೆ ಆಚಾರವಂತನಾಗಿಯೇ ಪೂಜಿಸಬೇಕು. ಅನಾಚಾರಿಯಾದ ವ್ಯಕ್ತಿಯು ಅದೆಂತಹ ದೊಡ್ಡ ಪೂಜೆಯನ್ನು ಮಾಡಿದರೂ ಶಿವನು ಅದನ್ನು ಸ್ವೀಕರಿಸುವುದಿಲ್ಲ. ಮನುಷ್ಯನು ಸದಾಚಾರ ಸಂಪನ್ನನಾಗದೇ ಶಿವನ ಕೃಪೆಯನ್ನು ಸಹ ಪಡೆಯಲಾಗುವುದಿಲ್ಲ. ಆದ್ದರಿಂದ ಶಿವಾನುಗ್ರಹ ಪ್ರಾಪ್ತಿಗಾಗಿ ಯಾರೇ ಇದ್ದರೂ ಆಚಾರ ಸಂಪನ್ನರಾಗಲೇ ಬೇಕೆಂಬುದು ಪೂಜ್ಯರ ಆದೇಶವಾಗಿದೆ.

ಈ ಧರ್ಮಾಚಾರಸ್ಥಲದಲ್ಲಿ ಉಪದೇಶಿಸಲ್ಪಟ್ಟ ದಶವಿಧ ಧರ್ಮಗಳಲ್ಲಿ ಯಾವ ದಾದರೊಂದು ಧರ್ಮವನ್ನು ಆಚರಿಸಲು ಪ್ರತಿಯೊಬ್ಬರೂ ಉದ್ಯುಕ್ತರಾಗಬೇಕು. ಈ ಧರ್ಮದ ಮಹತಿಯನ್ನು ಪ್ರತಿಪಾದಿಸುತ್ತ ಓರ್ವ ಸುಭಾಷಿತಕಾರನು–

ನಿಶಾಯಾಂ ದೀಪಕಶ್ಚಂದ್ರಃ ಪ್ರಭಾತೇ ದೀಪಕೋ ರವಿಃ ।<br>
ತ್ರೈಲೋಕ್ಯೇ ದೀಪಕೋಧರ್ಮಃ ಸುಪುತ್ರಃ ಕುಲದೀಪಕಃ ॥

ಹೀಗೆ ವಿವರಿಸಿದ್ದಾನೆ. ರಾತ್ರಿಯಲ್ಲಿ ಚಂದ್ರನು ದೀಪವಾದರೆ, ಹಗಲಿನಲ್ಲಿ ಸೂರ್ಯನೇ ದೀಪವು. ಉತ್ತಮನಾದ ಪುತ್ರನು ಕುಲಕ್ಕೆ ದೀಪವಾದರೆ, ಮೂರೂ ಲೋಕವನ್ನು ಬೆಳಗುವ ದೀಪವೆಂದರೆ ಧರ್ಮವು. ಇಲ್ಲಿ ಪ್ರತಿಪಾದಿಸಲ್ಪಟ್ಟ ದೀಪಗಳಲ್ಲಿ ಸೂರ್ಯ, ಚಂದ್ರ, ಹಾಗೂ ಸುಪುತ್ರರು ದೇಶ–ಕಾಲ ಪರಿಚ್ಛಿನ್ನರು. ಆದರೆ ಧರ್ಮರೂಪವಾದ ದೀಪವು ಮೂರೂ ಲೋಕಗಳನ್ನು ಸದಾ ಬೆಳಗುವಂಥದ್ದಾಗಿದೆ. ಆದ್ದರಿಂದ ಪ್ರತಿ ಯೊಬ್ಬರೂ ಧರ್ಮವಂತರಾಗಿ ಬಾಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ಆಗಷ್ಟ್ ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಭಾವಾಚಾರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಪೂಜ್ಯ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲ ಪ್ರತಿದಿನ ಕ್ಷೇತ್ರ ಮಹಿಮೆಯನ್ನು ಆಲಿಸುತ್ತ ಬಂದಿದ್ದೀರಿ. ಕಾಶೀ ಮಹಾಕ್ಷೇತ್ರಕ್ಕೆ ಇರುವ ಅನೇಕ ನಾಮಗಳಲ್ಲಿ ಆನಂದವನ ಅಥವಾ ಆನಂದಕಾನನ ಎಂಬುದೂ ಒಂದು. ಇಲ್ಲಿ ನಿವಾಸಿಸುವವರಿಗೆಲ್ಲ ಆನಂದದಾಯಕವಾಗಿರೋಣದರಿಂದ ಇದಕ್ಕೆ ಆನಂದ ಕಾನನ ವೆಂದು ಕರೆಯುತ್ತಾರೆ. ಭಗವಾನ್ ವಿಶ್ವೇಶ್ವರನು ತನ್ನ ಆನಂದಕ್ಕಾಗಿ ಈ ನಗರವನ್ನು ಸ್ವತಃ ನಿರ್ಮಾಣ ಮಾಡಿದ್ದಾನೆ. ಇದು ಮೂರು ಲೋಕಗಳಲ್ಲಿ ವಿಲಕ್ಷಣವಾಗಿರುವ ಕ್ಷೇತ್ರವು. ಈ ಕ್ಷೇತ್ರವನ್ನುಳಿದು ಎಲ್ಲ ಕಡೆಗೆ ವಿಷ್ಣು ಭಗವಂತನು ಪಾಲನೆಯನ್ನು ಮಾಡಿದರೆ, ಯಮನು ದಂಡವನ್ನು ವಿಧಿಸುತ್ತಾನೆ. ಆದರೆ ಕಾಶೀ ಮಹಾಕ್ಷೇತ್ರದಲ್ಲಿ ಸಂರಕ್ಷಿಸುವವನು ಶಿವನು ಹಾಗೂ ದಂಡ ವಿಧಿಸುವವನು ಕಾಲಭೈರವನು. ಅಂತೆಯೇ ಕಾಶೀ ವಾಸಿಗಳಿಗೆ ಯಮ ದಂಡದ ಭೀತಿ ಇರುವುದಿಲ್ಲ.

ಪಾಪೀ ವ್ಯಕ್ತಿಯು ಕಾಶಿಯನ್ನು ಪ್ರವೇಶಿಸಿದಾಗ ತನ್ನ ಪ್ರಾಕ್ತನ ಪಾಪಗಳಿಂದ ಮುಕ್ತ ನಾಗುತ್ತಾನೇನೋ ನಿಜ. ಆದರೆ ಕಾಶಿಯಲ್ಲಿ ಪುನಃ ಪಾಪವನ್ನು ಮಾಡಿದರೆ ಕಾಲಭೈರವನ ಘೋರವಾದ ಯಾತನೆಯನ್ನು ಸಹನಮಾಡಬೇಕಾಗುವುದು. ಕಾಲಭೈರವನಿಗೆ ಸಂಭ್ರಮ ಮತ್ತು ಉದ್ಭ್ರಮ ಎಂಬ ಇಬ್ಬರು ಸೇವಕರಿರುತ್ತಾರೆ. ಇವರು ಭೈರವನ ಆದೇಶದಂತೆ ಪಾಪಿಗಳಿಗೆ ದಂಡವನ್ನು ಕೊಡುತ್ತಾರೆ. ಈ ಕಾಲಭೈರವನ ದಂಡವು ಯಮನ ದಂಡ ಕ್ಕಿಂತಲೂ ಮೂವತ್ತೆರಡು ಪಟ್ಟು ಹೆಚ್ಚಿನದಾಗಿರುತ್ತದೆ. ಈ ಕಾಶೀ ಕ್ಷೇತ್ರವು ಶಂಕರನ ಶಿವ ಸಾಮ್ರಾಜ್ಯದ ರಾಜಧಾನಿಯಾಗಿರುತ್ತದೆ. ಇಂದಿಗೂ ಸಹ ಭಾರತದ ರಾಜಧಾನಿಯು ದಿಲ್ಲಿಯಾಗಿದ್ದರೂ ಈ ದೇಶದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ರಾಜಧಾನಿಯು ಕಾಶಿಯೇ ಆಗಿರುತ್ತದೆ.

ವೇದ, ಉಪನಿಷತ್ತು ಹಾಗೂ ಪುರಾಣಗಳಲ್ಲಿ ಈ ಕ್ಷೇತ್ರದ ಮಹಿಮೆಯು ಅಲ್ಲಲ್ಲಿ ವರ್ಣಿಸಲ್ಪಟ್ಟಿದೆ. ಸ್ಕಂದ ಪುರಾಣದಲ್ಲಿರುವ ಕಾಶೀಖಂಡದಲ್ಲಿ ಮಹರ್ಷಿವ್ಯಾಸರು ಹದಿನೈದು ಸಾವಿರ ಶ್ಲೋಕಗಳಲ್ಲಿ ಕಾಶಿಯ ಮಹಿಮೆಯನ್ನು ವರ್ಣಿಸಿದ್ದಾರೆ. ಇದೂ ಅಲ್ಲದೆ ಮತ್ಸ್ಯ, ಕೂರ್ಮ, ಲಿಂಗ, ಪದ್ಮ ಅಗ್ನಿ ಮತ್ತು ನಾರದೀಯ ಪುರಾಣಗಳಲ್ಲಿಯೂ ಸಹ ಪ್ರಸಂಗಾನುಸಾರವಾಗಿ ಕಾಶಿಯ ಮಹಿಮೆಯು ವರ್ಣಿಸಲ್ಪಟ್ಟಿದೆ. ಜಗತ್ತಿನ ಯಾವ ನಗರದ ಬಗ್ಗೆಯೂ ಇಷ್ಟೊಂದು ವರ್ಣನೆಯು ದೊರೆಯುವುದಿಲ್ಲ. ಸ್ವಾಮಿ

ವಿವೇಕಾನಂದರ ಶಿಷ್ಯಳಾದ ಭಗಿನೀ ನಿವೇದಿತಾ ಇವರು "Foot falls of Indian History" ಎಂಬ ತಮ್ಮ ಪುಸ್ತಕದಲ್ಲಿ–''ರೋಮನ್ ಕೆಥೋಲಿಕ್ ಕ್ರಿಶ್ಚಿಯನ್ನರಿಗೆ ಪೋಪ ಪುರಿ (ವ್ಯಾಟಿಕನ್‌ಸಿಟಿ)ಯು ಎಷ್ಟು ಮಹತ್ವದ್ದೋ ಹಿಂದೂ ಜನರಿಗೆ ಕಾಶೀ ಮಹಾ ಕ್ಷೇತ್ರವು ಅದರ ಸಾವಿರಪಟ್ಟು ಹೆಚ್ಚು ಮಹತ್ವದ್ದಾಗಿದೆ'' ಎಂಬುದಾಗಿ ಹೇಳಿ ಕಾಶಿಯ ಮಹಿಮೆಯನ್ನು ಎತ್ತಿತೋರಿಸಿದ್ದಾರೆ.

ಈ ಮಹಾಕ್ಷೇತ್ರದಲ್ಲಿ ನಮ್ಮ ದೇಶದ ಪ್ರತಿಯೊಂದು ಪ್ರಾಂತದ ಜನರು ಅಲ್ಲಲ್ಲಿ ಅನಾದಿ ಕಾಲದಿಂದಲೂ ವಾಸಗೈದಿದ್ದಾರೆ. ಆ ಜನರೆಲ್ಲ ತಮ್ಮ ಪ್ರಾಂತದ ಭಾಷೆ,ಸಂಸ್ಕೃತಿ ಮೊದಲಾದವುಗಳನ್ನು ಉಳಿಸಿಕೊಂಡು ಉತ್ತರ ಭಾರತದ ಜನತೆಯೊಂದಿಗೆ ಅವರಾಡುವ ಭಾಷೆಯನ್ನೇ ಆಡುತ್ತ ಸಮರಸವಾಗಿ ಜೀವನವನ್ನು ಸಾಗಿಸುತ್ತಲಿದ್ದಾರೆ. ಇದೆಲ್ಲವನ್ನು ನೋಡಿದಾಗ ಕಾಶೀ ಮಹಾಕ್ಷೇತ್ರವು ಸಂಪೂರ್ಣ ಭಾರತದ ಒಂದು ಮಾದರಿ ನಗರ (Model City) ವಾಗಿದೆ.

ಶ್ರೀ ಕಾಶೀ ಕ್ಷೇತ್ರವು ಕೇವಲ ಧಾರ್ಮಿಕಸ್ಥಳವಾಗಿರದೆ ಇದೊಂದು ವಿದ್ಯಾಕೇಂದ್ರವೂ ಆಹುದು. ಅಂತೆಯೇ ಇದಕ್ಕೆ 'ವಿದ್ಯಾಯಾಃ ಸದನಂ ಕಾಶೀ' ಎಂಬುದಾಗಿ ಕರೆಯಲಾಗಿದೆ. ಹದಿನೆಂಟು ಪುರಾಣಗಳನ್ನು, ಮಹಾಭಾರತಾದಿ ಉದ್ಗ್ರಂಥಗಳನ್ನು ಬರೆದಿರುವ ಮಹರ್ಷಿವ್ಯಾಸನು ಇಲ್ಲಿಯೇ ನಿವಾಸಗೈದಿದ್ದಾನೆ. ಅವನ ನಿವಾಸದ ಆ ಸ್ಥಾನಕ್ಕೆ ಇಂದಿಗೂ 'ವ್ಯಾಸ ಕಾಶೀ' ಎಂಬುದಾಗಿ ಕರೆಯುತ್ತಾರೆ. ಕಾಶೀ ನಗರದಲ್ಲಿ ಸಂಸ್ಕೃತ ಭಾಷೆಯ ಹಾಗೂ ಭಾರತೀಯ ದರ್ಶನ ಶಾಸ್ತ್ರಗಳ ಅಧ್ಯಯನವು ಅನಾದಿಕಾಲದಿಂದಲೂ ಸಾಗಿ ಬಂದಿದೆ. ಇದೂ ಅಲ್ಲದೆ ಇಂದು ಆಧುನಿಕ ವಿದ್ಯೆಗಳ ಅಧ್ಯಯನ ಕೇಂದ್ರವೂ ಇದಾಗಿದೆ. ಇಲ್ಲಿ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ಕಾಶೀ ಹಿಂದೂ ವಿಶ್ವವಿದ್ಯಾಲಯ ಮತ್ತು ಮಹಾತ್ಮಾಗಾಂಧಿ ವಿದ್ಯಾಪೀಠವೆಂಬ ಮೂರು ವಿಶ್ವವಿದ್ಯಾಲಯಗಳು ಇವೆ. ಇವುಗಳಲ್ಲಿ ಸಂಸ್ಕೃತ ವಿಶ್ವವಿದ್ಯಾಲಯವೇ ಅತೀ ಪ್ರಾಚೀನವಾದುದು. ಬ್ರಿಟೀಷ್ ವ್ಹಾಯಿಸ್‌ರಾಯ್ ಲಾರ್ಡ್ ಕಾರ್ನವಾಲೀಸನ ಕಾಲದಲ್ಲಿ 'ಗವ್ಹರ್ನಮೆಂಟ್ ಸಂಸ್ಕೃತ ಕಾಲೇಜ್' ಎಂಬುದಾಗಿ ಸ್ಥಾಪಿಸಲ್ಪಟ್ಟ ಆ ಸಂಸ್ಥೆಯು ಡಾ|| ಸಂಪೂರ್ಣಾನಂದರ ಪ್ರಯತ್ನದ ಫಲವಾಗಿ 'ವಾರಾಣಸೇಯ ಸಂಸ್ಕೃತ ವಿಶ್ವವಿದ್ಯಾಲಯ' ಎಂಬುದಾಗಿ ಮಾರ್ಪಟ್ಟಿತು. ಮುಂದೆ ೧೯೭೪ನೇ ಇಸ್ವಿಯಲ್ಲಿ ಈ ವಿಶ್ವವಿದ್ಯಾಲಯದ ಹೆಸರು ''ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ'' ಎಂಬುದಾಗಿ ಪರಿವರ್ತಿಸಲ್ಪಟ್ಟಿತು. ಇಲ್ಲಿ ಸಂಸ್ಕೃತ ಭಾಷೆಯ ಮಾಧ್ಯಮದಿಂದ ವೇದ, ಆಗಮ, ಜ್ಯೋತಿಷ್ಯ ಹಾಗೂ ದರ್ಶನಶಾಸ್ತ್ರಗಳ ಅಧ್ಯಯನವು ಆಗುತ್ತಲಿದೆ.

ಹೀಗೆ ಧಾರ್ಮಿಕ ಹಾಗೂ ವಿದ್ಯಾಕೇಂದ್ರವಾದ ಶ್ರೀ ಕಾಶೀಮಹಾಕ್ಷೇತ್ರದಲ್ಲಿ ನೀವುಗಳೆಲ್ಲ ಪ್ರತಿದಿನ ಧರ್ಮಾನುಷ್ಠಾನವನ್ನು ಮಾಡುತ್ತ ಧರ್ಮಸಭೆಯಲ್ಲಿ ಭಾಗಿಗಳಾಗಿ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳನ್ನು ಶ್ರವಣಮಾಡುತ್ತಿದ್ದೀರಿ. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಈ ಮಾಹೇಶ್ವರ ಸ್ಥಲದಲ್ಲಿ ಬರುವ ಧರ್ಮಾಚಾರ ಸ್ಥಲದ ಬಗ್ಗೆ ಹಿಂದೆ ಪ್ರತಿಪಾದಿಸಲಾಗಿದೆ. ಇಂದು ಕ್ರಮಪ್ರಾಪ್ತವಾದ 'ಭಾವಾಚಾರ ಸ್ಥಲ'ದ ಬಗ್ಗೆ ಕೂಲಂಕಷವಾಗಿ ವಿವೇಚಿಸೋಣ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾವದ ಲಕ್ಷಣ ಹಾಗೂ ಅದರ ಮಹತ್ತ್ವವನ್ನೂ–

ಭಾವ ಏವಾಸ್ಯ ಸರ್ವೇಷಾಂ ಭಾವಾಚಾರಃ ಪ್ರಕೀರ್ತಿತಃ।
ಭಾವೋ ಮಾನಸ ಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯಃ॥

(ಸಿ. ಶಿ. ೧೬–೬೭)

ಈ ರೀತಿಯಾಗಿ ವಿವರಿಸಿದ್ದಾರೆ. ಭಾವವೆಂದರೆ ಭಾವನೆಯೆಂದರ್ಥ. ಇದು ಮನಸ್ಸಿನ ಒಂದು ವೃತ್ತಿಯು, ಯಾವ ಮನೋವೃತ್ತಿಯು ಸಂಪೂರ್ಣವಾಗಿ ಶಿವನನ್ನೇ ಆಶ್ರಯಿಸಿರುತ್ತದೆಯೋ ಅದಕ್ಕೆ ಭಾವ ಇಲ್ಲವೆ ಭಾವನೆಯೆಂದು ಕರೆಯುತ್ತಾರೆ. ಪೂರ್ವದಲ್ಲಿ ಹೇಳಿದ ಧರ್ಮಾಚಾರ ಸಂಪನ್ನನಾದ ಶಿವಯೋಗಿಯ ಮನಸ್ಸಿನಲ್ಲಿ ಉಂಟಾದ ಈ ಭಾವನೆಯೇ ಉಳಿದವರಿಗೆ ಭಾವಾಚಾರವಾಗಿ ತೋರ್ಪಡುತ್ತದೆ. ಯಾರು ಯಾವುದೇ ಕಾರ್ಯವನ್ನು ಮಾಡಬೇಕಾದರೂ ಅದಕ್ಕೆ ಮನಸ್ಸಿನ ಸಹಾಯವು ಬೇಕಾಗುತ್ತದೆ. ಕ್ರಿಯೆಯನ್ನು ಮಾಡುವಾಗ ಮನಸ್ಸಿನ ಸಂಪೂರ್ಣ ಸಹಕಾರವಿದ್ದರೆ, ಆ ಕ್ರಿಯೆಯು ಒಂದು ಯೋಗವಾಗಿ ಅರ್ಥಾತ್ ಕರ್ಮಯೋಗವಾಗಿ ಪರಿವರ್ತಿತವಾಗುತ್ತದೆ. ಅಂದರೆ ಮನಃಪೂರ್ವಕವಾಗಿ ಮಾಡುವ ಕರ್ಮವೇ ಕರ್ಮಯೋಗವು. ಕರ್ಮಗಳನ್ನು ಮಾಡುವವರಿಗೇನೂ ಕೊರತೆ ಯಿಲ್ಲ, ಆದರೆ ಅದನ್ನೇ ಮನಃಪೂರ್ವಕವಾಗಿ ಮಾಡುವವರು ಅತಿ ವಿರಳ. ಅಂತೆಯೇ ಪೂಜ್ಯರು ಮಾಡುವ ಕ್ರಿಯೆಯೊಂದಿಗೆ ಭಾವನೆಯನ್ನು ಬೆರೆಸಬೇಕೆಂಬುದಾಗಿ ತಿಳಿಸಲೋಸುಗವೇ ಈ ಭಾವಾಚಾರ ಸ್ಥಲವನ್ನು ಪ್ರಾರಂಭಿಸಿದ್ದಾರೆ. ಕಡಲೆ ಹಿಟ್ಟು ಅಥವಾ ರವೆ ಮುಂತಾದವುಗಳಿಂದ ಉಂಡಿಗಳನ್ನು ಮಾಡುವಾಗ ಅದರಲ್ಲಿ ಬೆಲ್ಲ ಇಲ್ಲವೆ ಸಕ್ಕರೆಯನ್ನು ಬೆರೆಸುತ್ತಾರೆ. ಅದಿದ್ದಾಗಲೇ ಉಂಡಿಯಲ್ಲಿ ಮಾಧುರ್ಯವು ಅರ್ಥಾತ್ ಸಿಹಿತನವು ಪ್ರಾಪ್ತವಾಗುತ್ತದೆ. ಅದರಂತೆ ಮಾಡುವ ಕ್ರಿಯೆಯೊಂದಿಗೆ ಭಾವವು ಬೆರೆದಾಗ ಆ ಕ್ರಿಯೆಯು ಭಗವಂತನಿಗೆ ಅತ್ಯಂತ ಪ್ರಿಯವಾಗುವುದು. ದೇವರಿಗೆ ಬೇಕಾದದ್ದು ಕರ್ಮವಲ್ಲ, ಭಾವವು. ಭಗವಂತನಿಗೆ ಭಾವದ ಹಸಿವೆ ಇರುತ್ತದೆ. ಅಂತೆಯೇ ಮರಾಠಿಯಲ್ಲಿ ''ದೇವ ಭಾವಾಚಾ ಭೂಕೇಲಾ'' ಎಂಬುದಾಗಿ ಹೇಳಿದ್ದಾರೆ.

ಭಾವಯುಕ್ತವಾದ ಕರ್ಮವು ಹೆಚ್ಚು ಪವಿತ್ರವಾದುದು. ಮತ್ತು ಭಾವದಿಂದಲೇ ಮನಸ್ಸು ಪರಿಶುದ್ಧವಾಗುವುದೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು–

ಭಾವನಾವಿಹಿತಂ ಕರ್ಮ ಪಾವನಾದಪಿ ಪಾವನಮ್।
ತಸ್ಮಾದ್ಭಾವನಯಾ ಯುಕ್ತಂ ಪರಧರ್ಮಂ ಸಮಾಚರೇತ್॥

ಭಾವೇನ ಹಿ ಮನಃ ಶುದ್ಧಿರ್ಭಾವಶುದ್ಧಿಶ್ಚ ಕರ್ಮಣಾ।
ಇತಿ ಸಂಚಿಂತ್ಯ ಮನಸಾ ಯೋಗೀ ಭಾವಂ ನ ಸಂತ್ಯಜೇತ್॥

(ಸಿ. ಶಿ. ೧೬, ೬೮–೬೯)

ಈ ವಿಧವಾಗಿ ಉಪದೇಶಿಸಿದ್ದಾರೆ. ಭಾವನಾಪೂರ್ವಕವಾಗಿ ಮಾಡಿದ ಕರ್ಮವು ಪರಮ ಪವಿತ್ರವಾಗಿರುತ್ತದೆ. ಆದ್ದರಿಂದ ಯಾವುದೇ ಧರ್ಮಾಚರಣೆಯನ್ನು ಮಾಡಬೇಕಾದರೂ ಭಾವನಾಯುಕ್ತವಾಗಿಯೇ ಮಾಡಬೇಕು. ಶಿವಪೂಜಾದಿ ಧರ್ಮಕಾರ್ಯಗಳನ್ನು ಮಾಡೋಣದರಿಂದ ಭಾವನೆಯು ಪರಿಶುದ್ಧವಾಗುತ್ತದೆ. ಶುದ್ಧವಾದ ಭಾವನೆಯಿದ್ದಾಗ

ಮನಸ್ಸು ಪರಿಶುದ್ಧವಾಗುವುದು. ಆದಕಾರಣ ಇದರ ಬಗ್ಗೆ ವಿಚಾರಮಾಡಿದ ಶಿವ ಯೋಗಿಯು ಭಾವನೆಯನ್ನು ಎಂದೂ ತ್ಯಾಗಮಾಡಕೂಡದು ಎಂಬುದು ಪೂಜ್ಯರ ಆಶಯವಾಗಿದೆ.

ಶಾಸ್ತ್ರಗಳು ಧರ್ಮಕಾರ್ಯಗಳನ್ನು ಆಚರಿಸಲು ಆಜ್ಞೆಯನ್ನು ಮಾಡುತ್ತವೆ. ಆಜ್ಞೆಯನ್ನು ಪರಿಪಾಲಿಸುವಾಗ ಆ ವ್ಯಕ್ತಿಯು ಶ್ರದ್ಧಾಭಾವವುಳ್ಳವನಾಗಿದ್ದರೆ ಅದು ಹೆಚ್ಚಿನ ಫಲವನ್ನು ಕೊಡುತ್ತದೆ. ಕೇವಲ ಆಜ್ಞೆಯನ್ನು ಪರಿಪಾಲಿಸಲೋಸುಗ ಮನಸ್ಸಿಲ್ಲದ ಮನಸ್ಸಿನಿಂದ ಯಾವುದೇ ಧರ್ಮಾಚರಣೆಯನ್ನು ಮಾಡಿದರೂ ಅದು ನಿರರ್ಥಕ ವಾಗುತ್ತದೆ. ಸೇವಕನೋರ್ವನು ಮಾಲಕನ ಆಜ್ಞಾನುಸಾರವಾಗಿ ಮನೆಗೆಲಸದಲ್ಲಿ ತೊಡಗಿದಾಗ ಅವನು ಆ ಕೆಲಸವನ್ನು ಮನಃಪೂರ್ವಕವಾಗಿ ಮಾಡುತ್ತಿದ್ದರೆ ಅವನ ಮೇಲೆ ನಿರೀಕ್ಷಿಸುವ ಇನ್ನೋರ್ವ ವ್ಯಕ್ತಿಯ ಅವಶ್ಯಕತೆ ಇರುವುದಿಲ್ಲ. ಆದರೆ ಅವನು ಕೇವಲ ಆಜ್ಞಾ ಪರಿಪಾಲನೆಗಾಗಿ ಹಾಗೂ ಹೀಗೂ ಮಾಡುತ್ತಿದ್ದಾಗ ಅವನಿಂದ ಕೆಲಸ ತೆಗೆದುಕೊಳ್ಳಲು ಇನ್ನೋರ್ವ ವ್ಯಕ್ತಿಯು ಅಲ್ಲಿ ಬೇಕಾಗುವುದು. ಆದರೆ ಮನಃಪೂರ್ವಕವಾಗಿ ಕಾರ್ಯ ಮಾಡುತ್ತಿರುವ ವ್ಯಕ್ತಿಯ ಕಡೆಗೆ ಇನ್ನೊಬ್ಬರು ಲಕ್ಷ್ಯಹಾಕುವ ಅವಶ್ಯಕತೆ ಇರುವುದಿಲ್ಲ. ವ್ಯಕ್ತಿಯ ಭಾವನೆಯು ಕಣ್ಣಿಗೆ ಕಾಣದಿದ್ದರೂ ಅವನು ಮಾಡುತ್ತಿರುವ ಕ್ರಿಯೆಯ ಮೂಲಕ ವಾಗಿ ಆತನ ಭಾವನೆಯನ್ನು ತಿಳಿದುಕೊಳ್ಳಬಹುದು.

ಭಾವನೆಯಿಲ್ಲದೆ ಮಾಡುವ ಕ್ರಿಯೆಗಳೆಲ್ಲ ಯಾಂತ್ರಿಕವೆನಿಸುತ್ತವೆ. ಯಂತ್ರ ಮಾಡುವದಕ್ಕೂ ಈ ಭಾವಶೂನ್ಯವ್ಯಕ್ತಿ ಮಾಡುವದಕ್ಕೂ ಯಾವ ಅಂತರವೂ ಇರುವದಿಲ್ಲ.

ಕಾಶೀ ಕ್ಷೇತ್ರದ ತುಳಸೀಮಾನಸಮಂದಿರವನ್ನು ನೀವೆಲ್ಲ ನೋಡಿ ಬಂದಿರ ಬಹುದು. ಆ ಮಾನಸಮಂದಿರವನ್ನು ಪ್ರವೇಶಿಸಿದ ಕೂಡಲೇ ಎಡಮಗ್ಗಲಲ್ಲಿ ತುಳಸೀ ದಾಸನ ಒಂದು ಬಟ್ಟೆಯ ಮೂರ್ತಿಯು ಇಡಲ್ಪಟ್ಟಿದೆ. ಆ ಮೂರ್ತಿಯ ಕೆಳಗೆ ರಾಮಾಯಣದ ರಿಕಾರ್ಡ್‌ನ್ನು ಹಚ್ಚಿರುತ್ತಾರೆ. ವಿದ್ಯುತ್ ಯಂತ್ರದ ಮಾಧ್ಯಮದಿಂದ ಆ ಮೂರ್ತಿಯು ಬಾಯಿಬಡಿಯುವಂತೆಯೂ ಗೋಣು ಅಲ್ಲಾಡಿಸುವಂತೆಯೂ ಮಾಡಿರುತ್ತಾರೆ. ಅದರ ಕೈಯಲ್ಲಿ ಒಂದು ಜಪಮಾಲೆಯೂ ಸಹ ಇರುತ್ತದೆ. ನೋಡಿ ದವರಿಗೆ ತುಳಸೀದಾಸನು ಕುಳಿತುಕೊಂಡು ರಾಮಾಯಣವನ್ನು ಹೇಳುತ್ತಿರುವಂತೆಯೂ ಮತ್ತು ಮಂತ್ರ ಜಪವನ್ನು ಮಾಡುತ್ತಿರುವಂತೆಯೂ ಕಾಣುತ್ತದೆ. ಈ ಕ್ರಿಯೆಯು ಆ ಮೂರ್ತಿಯಿಂದ ಎಷ್ಟೋ ದಿನಗಳಿಂದ ನಡೆಯುತ್ತಿದ್ದರೂ ಅದಕ್ಕೆ ಯಾವ ಫಲವೂ ಪ್ರಾಪ್ತ ವಾಗುವುದಿಲ್ಲ. ಏಕೆಂದರೆ ಆ ಮೂರ್ತಿಯೊಳಗೆ ಪ್ರಾಣಮನಸ್ಸುಗಳು ಇರುವುದಿಲ್ಲ ಅದೊಂದು ಕೇವಲ ಯಾಂತ್ರಿಕ ಕ್ರಿಯೆ. ಇದರಂತೆ ಭಾವನೆಯಿಲ್ಲದೆ ಮಾಡಿದ ಪ್ರತಿಯೊಬ್ಬರ ಧರ್ಮಾಚರಣೆಗಳು ಯಾಂತ್ರಿಕಗಳಾಗಿರೋಣದಿಂದ ಅವುಗಳಿಗೆ ಯಾವ ಫಲವೂ ಇರುವುದಿಲ್ಲ. ಆದ್ದರಿಂದ ಭಾವನಾಯುಕ್ತವಾಗಿಯೇ ಧರ್ಮಾನುಷ್ಠಾನವನ್ನು ಮಾಡಬೇಕು.

ಭಾವನೆಯಿಂದಲೇ ಮನಸ್ಸು ಪರಿಶುದ್ಧವಾಗುತ್ತದೆ. ಭಾವನೆಯೆಂದರೆ ಮನಸ್ಸಿನ ವೃತ್ತಿಯೆಂಬುದಾಗಿ ಈ ಹಿಂದೆ ಹೇಳಲಾಗಿದೆ. ಅದು ಭಗವಂತನ ಆಕಾರವನ್ನು ತಾಳಿದರೆ

ಪವಿತ್ರವಾಗುವುದು. ಅದುವೇ ವಿಷಯಾಕಾರವನ್ನು ತಾಳಿದರೆ ಅಪವಿತ್ರವಾಗುವುದು ಆಕಾಶದಿಂದ ಬಿದ್ದ ನೀರು ಎಂಥ ಬಣ್ಣದ ಭೂಮಿಯೊಂದಿಗೆ ಸಂಪರ್ಕವನ್ನು ಪಡೆಯುವುದೋ ಅದೇ ಬಣ್ಣದ ರೂಪವನ್ನು ತಾಳುವಂತೆ ಮನಸ್ಸು ಯಾವ ವಿಷಯದ ಸಂಪರ್ಕವನ್ನು ಪಡೆಯುವುದೋ ಅದೇ ಸ್ವರೂಪವನ್ನು ತಾಳುತ್ತದೆ. ಆದ್ದರಿಂದ ಭಾವವನ್ನು ಸದಾ ಶುದ್ಧವಾಗಿ ಇಡಬೇಕಾದರೆ ಅದಕ್ಕೆ ಭಗವಂತನ ಸಂಬಂಧವನ್ನು ಮಾಡಬೇಕು.

ಶಿವಭಾವನೆಯಿಂದ ಕರ್ಮಾದಿಗಳನ್ನು ಮಾಡಿದರೆ ಅವು ಪ್ರತಿಬಂಧಕಗಳಾಗುವುದಿಲ್ಲ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು ಪುನಃ–

ಶಿವಭಾವನಯಾ ಸರ್ವಂ ನಿತ್ಯನೈಮಿತ್ತಿಕಾದಿಕಮ್
ಕುರ್ವನ್ನಪಿ ಮಹಾಯೋಗೀ ಗುಣದೋಷೈರ್ನಬಾಧ್ಯತೇ ||

(ಸಿ.ಶಿ. ೧೬–೨೦)

ಈ ತೆರನಾಗಿ ವಿವರಿಸಿದ್ದಾರೆ. ಶಾಸ್ತ್ರೋಕ್ತಗಳಾದ ನಿತ್ಯ ಹಾಗೂ ನೈಮಿತ್ತಿಕಾದಿ ಕರ್ಮಗಳನ್ನು ಶಿವಭಾವನೆಯಿಂದ ಮಾಡಿದಾಗ ಅವುಗಳನ್ನು ಮಾಡುವ ಯೋಗಿಗೆ ಯಾವ ದೋಷಗಳೂ ಅಂಟಿಕೊಳ್ಳುವುದಿಲ್ಲ.

ಶಾಸ್ತ್ರಗಳಲ್ಲಿ ನಿತ್ಯ ನೈಮಿತ್ತಿಕ, ಕಾಮ್ಯ ಮತ್ತು ನಿಷಿದ್ಧಗಳೆಂಬುದಾಗಿ ಅನೇಕ ಕರ್ಮಗಳು ಪ್ರತಿಪಾದಿಸಲ್ಪಟ್ಟಿವೆ. ಜ್ಞಾನಿಯಾದವನು ಕಾಮ್ಯ ಹಾಗೂ ನಿಷಿದ್ಧಕರ್ಮಗಳನ್ನು ಮಾಡುವುದಿಲ್ಲವಾದ್ದರಿಂದ ನಿತ್ಯ ಹಾಗೂ ನೈಮಿತ್ತಿಕ ಕರ್ಮಗಳನ್ನು ಮಾತ್ರ ಮಾಡಬೇಕಾಗುತ್ತದೆ. ಈ ಕರ್ಮಗಳನ್ನು ಮಾಡುವಾಗಲೂ ಸಹ ಅದಕ್ಕಾಗಿ ವಿಧಿಸಲ್ಪಟ್ಟ ಎಲ್ಲ ನಿಯಮಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸಬೇಕಾಗುತ್ತದೆ. ಆದರೆ ಶಿವಭಾವನೆಯಿಂದ ಯುಕ್ತನಾದ ಮಹಾಯೋಗಿಯು ಈ ಕರ್ಮಗಳನ್ನು ಮಾಡುವಾಗ ಅದರಿಂದ ಉಂಟಾಗುವ ಯಾವುದೇ ಗುಣದೋಷಗಳಿಂದ ಈತನು ಪತಿತನಾಗುವುದಿಲ್ಲ. ಅಂದರೆ ಕರ್ಮಗಳನ್ನು ಮಾಡುವಾಗ ನಾನು ಮಾಡುತ್ತೇನೆಂಬ ಅಹಂಭಾವನೆಯು ಬಂದಾಗ ಅಲ್ಲಿ ಉಂಟಾಗುವ ಗುಣದೋಷಗಳಿಗೆ ಸಹಭಾಗಿಯಾಗಬೇಕಾಗುತ್ತದೆ. ಒಂದು ವೇಳೆ ನಾನು ಮಾಡುವವನಲ್ಲ, ಎಲ್ಲದಕ್ಕೂ ಕರ್ತಾ ಶಿವನೇ ಆಗಿರುತ್ತಾನೆ. ಅವನ ಪ್ರೇರಣೆಯಿಂದಲೇ ಎಲ್ಲವೂ ನಡೆಯುತ್ತದೆ ಎಂಬ ಭಾವನೆಯಿಂದ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ಮಾಡುವಾಗ ಏನೇ ಲೋಪದೋಷಗಳಾದರೂ ಅವುಗಳು ಈ ಶಿವಯೋಗಿಗೆ ಸಂಬಂಧವಾಗಲಾರವು.

ಶಿವಯೋಗಿಯು ಮಾಡಬೇಕಾದ ಸಂಧ್ಯಾವಂದನೆಯನ್ನು ಕುರಿತು ಪೂಜ್ಯಪಾದರು–

ಅಂತಃ ಪ್ರಕಾಶಮಾನಸ್ಯ ಸಂವಿತ್ಸೂರ್ಯಸ್ಯ ಸಂತತಮ್ ।
ಭಾವೇನ ಯದುಪಸ್ಥಾನಂ ತತ್ಸಂಧ್ಯಾವಂದನಂ ವಿದುಃ ||

(ಸಿ. ಶಿ. ೧೬–೨೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ''ಅಹರಹಃ ಸಂಧ್ಯಾಮುಪಾಸೀತ'' ಎಂಬ ವೇದ ವಾಕ್ಯದಲ್ಲಿ ಪ್ರತಿದಿನವೂ ಸಂಧ್ಯಾವಂದನೆಯನ್ನು ಮಾಡಬೇಕೆಂಬುದಾಗಿ ಆದೇಶವಿತ್ತಿದೆ.

ಪ್ರಾಯಃ ಈ ಸಂಧ್ಯಾವಂದನೆಯು ಪ್ರಾತಃ ಸಂಧ್ಯಾ, ಮಧ್ಯಾಹ್ನ ಸಂಧ್ಯಾ ಮತ್ತು ಸಾಯಂ ಸಂಧ್ಯಾ ಎಂಬುದಾಗಿ ಮೂರು ಪ್ರಕಾರವಾಗಿ ಇರುತ್ತದೆ. ಪ್ರಾತಃಕಾಲ ಅರುಣೋದಯದ ನಂತರ ಸೂರ್ಯೋದಯದ ಪೂರ್ವದಲ್ಲಿ ಮಾಡುವ ಸಂಧ್ಯಾ ವಂದನೆಗೆ ಪ್ರಾತಃ ಸಂಧ್ಯಾ ಎನ್ನುತ್ತಾರೆ. ಇನ್ನು ಮಧ್ಯಾಹ್ನ ೧೨ ಘಂಟೆಗೆ ಮಾಡುವ ಸಂಧ್ಯಾ ವಂದನೆಗೆ ಮಧ್ಯಾಹ್ನ ಸಂಧ್ಯಾ ಎನ್ನುತ್ತಾರೆ. ಇನ್ನು ಸೂರ್ಯಾಸ್ತದ ವೇಳೆಯಲ್ಲಿ ಮಾಡುವ ಸಂಧ್ಯಾವಂದನೆಗೆ ಸಾಯಂಸಂಧ್ಯಾ ಎನ್ನುತ್ತಾರೆ. ಈ ಮೂರು ಬಹಿರಂಗದ ಸಂಧ್ಯಾವಂದನೆಗಳು. ಆದರೆ ಪೂಜ್ಯಪಾದರು ಇಲ್ಲಿ ಅಂತರಂಗದ ಸಂಧ್ಯಾವಂದನೆ ಬಗ್ಗೆ ತಿಳಿಯಪಡಿಸಿದ್ದಾರೆ.

ಹೃದಯಕಮಲದಲ್ಲಿ ಸದಾ ಪ್ರಕಾಶಿಸುತ್ತಿರುವ ಜ್ಞಾನವೆಂಬ ಸೂರ್ಯನನ್ನು ಭಾವನೆಯಿಂದ ಅನುಸಂಧಾನಿಸುವುದೇ ಸಂಧ್ಯಾವಂದನೆಯು. ಈ ತೆರನಾದ ಸಂಧ್ಯಾ ವಂದನೆಯನ್ನು ನಿರಂತರವಾಗಿ ಮಾಡುತ್ತಿರಬೇಕು. ಶಿವಚಿಂತನೆ– ಶಿವಧ್ಯಾನಾದಿಗಳನ್ನು ನಿರಂತರವಾಗಿ ಮಾಡುವದಾಗದಿದ್ದರೆ ಕೊನೆಯಪಕ್ಷ ದಿನಾಲೂ ಮೂರು ವೇಳೆ ಯಾದರೂ ಅದನ್ನು ಮಾಡಬೇಕೆಂಬುವ ಉದ್ದೇಶದಿಂದ ಧರ್ಮ ಶಾಸ್ತ್ರದಲ್ಲಿ ಪ್ರಾತಃ ಕಾಲ, ಮಧ್ಯಾಹ್ನ ಮತ್ತು ಸಾಯಂಕಾಲದ ಸಂಧ್ಯಾವಂದನೆಯು ವಿಧಿಸಲ್ಪಟ್ಟಿದೆ. ಮನುಷ್ಯನ ಶ್ವಾಸವೇ ಜೀವನವು. ಎಲ್ಲಿಯವರೆಗೆ ಪ್ರಾಣದ ಗಮನಾಗಮನ ವಿರುತ್ತದೆಯೋ ಅಲ್ಲಿಯವರೆಗೆ ನಾವು ಬದುಕಿಕೊಂಡಿರುತ್ತೇವೆ. ಈ ಪ್ರಾಣವಾಯುವು ಒಂದು ದಿವಸಕ್ಕೆ ೨೧೬೦೦ (ಇಪ್ಪತ್ತೊಂದು ಸಾವಿರದಾ ಆರುನೂರು) ಸಲ ಹೊರಹೋಗಿಬರುವ ಕ್ರಿಯೆಗಳನ್ನು ಮಾಡುತ್ತಿರುತ್ತದೆ. ನಾವು ರಾತ್ರಿ ಮಲಗಿಕೊಂಡಾಗ ಆ ಪ್ರಾಣದ ಮೇಲೆ ಪರಮಾತ್ಮನು ಅದು ಹೊರಗೆ ಹೋದರೂ ಹೊರಗೇ ಹೋಗದಂತೆ ನಿಯಂತ್ರಣವಿರಿಸುತ್ತಾನೆ. ಅದರ ಕೃತಜ್ಞತೆಗಾಗಿಯಾದರೂ ಪ್ರಾತಃಕಾಲ ಎದ್ದೊಡನೆ ಸಂಧ್ಯಾವಂದನೆಯನ್ನು ಮಾಡಬೇಕು. ಇನ್ನು ಮಧ್ಯಾಹ್ನ, ತಾನು ಊಟಮಾಡುವ ಪೂರ್ವದಲ್ಲಿ, ಶಿವನನ್ನು ಸ್ಮರಿಸಿ, ಆತನ ಪೂಜೆಯನ್ನು ಮಾಡಿ, ಅವನಿಗೆ ನೈವೇದ್ಯವನ್ನು ಸಮರ್ಪಿಸಿ, ಅದನ್ನು ಪ್ರಸಾದರೂಪವಾಗಿ ತೆಗೆದುಕೊಳ್ಳುವ ಉದ್ದೇಶದಿಂದ ಮಧ್ಯಾಹ್ನದ ಸಂಧ್ಯಾವಂದನೆಯನ್ನು ಮಾಡಬೇಕೆಂದು ಉಪದೇಶಿಸಲಾಗಿದೆ. ಅದೇ ಪ್ರಕಾರವಾಗಿ ಸಾಯಂಕಾಲ ಮತ್ತೊಮ್ಮೆ ಸಂಧ್ಯಾ ವಂದನೆಯನ್ನು ಮಾಡಿ ತಾನು ಮಲಗಿಕೊಳ್ಳುವ ಪೂರ್ವದಲ್ಲಿ ತನ್ನ ಎಲ್ಲ ಭಾರವನ್ನು ಆ ಶಿವನ ಮೇಲಿರಿಸಬೇಕು. ಈ ಉದ್ದೇಶಕ್ಕಾಗಿಯೇ ಸಂಧ್ಯಾಕಾಲೀನ ಸಂಧ್ಯಾವಂದನೆಯು ಉಪದೇಶಿಸಲ್ಪಟ್ಟಿದೆ. ಹೀಗೆ ನಿರಂತರವಾದ ಧ್ಯಾನಾದಿಗಳು ಸಂಭವಿಸದಿದ್ದಾಗ ಕೊನೆಯ ಪಕ್ಷ ಈ ಮೂರು ವೇಳೆಯಲ್ಲಾದರೂ ಆಚರಿಸಬೇಕೆಂಬುದು ಶಾಸ್ತ್ರಾದೇಶವಾಗಿದೆ.

ಇಲ್ಲಿ ಸಂಧ್ಯಾವಂದನೆಯೆಂದರೆ ಸಂಧಿಕಾಲದಲ್ಲಿ ಮಾಡುವ ಶಿವಪೂಜೆಯೆಂದರ್ಥ. ಅರುಣೋದಯವಾಗಿ ಸೂರ್ಯೋದಯವಾಗುವ ಪೂರ್ವದ ಕ್ಷಣ. ಇದು ಪ್ರಾತಃ ಕಾಲದ ಸಂಧಿಸಮಯವು. ವೀರಶೈವರು ಬ್ರಾಹ್ಮೀ ಮುಹೂರ್ತದಲ್ಲೆದ್ದು ಮಂಗಲ ಸ್ನಾನಾದಿಗಳನ್ನು ಮಾಡಿ ತನ್ನ ನಿತ್ಯ ಕರ್ಮವಾದ ಇಷ್ಟಲಿಂಗ ಪೂಜೆಯನ್ನು ಸೂರ್ಯೋದ ಯವಾಗುವ ಪೂರ್ವದ ಕ್ಷಣದವರೆಗೆ ಪೂರ್ಣಗೊಳಿಸಬೇಕು. ಇದು ವೀರಶೈವರ

ಪ್ರಾತಃಕಾಲೀನ ಸಂಧ್ಯಾವಂದನೆಯು. ಇದೇ ಪ್ರಕಾರವಾಗಿ ಸೂರ್ಯನು ಪೂರ್ವದಿಕ್ಕಿನಲ್ಲಿ ಏರುತ್ತ ಏರುತ್ತ ಮಧ್ಯಾಹ್ನ ೧೨ ಗಂಟೆಗೆ ಆಕಾಶದ ಮಧ್ಯದಲ್ಲಿದ್ದು ಮರುಕ್ಷಣದಲ್ಲಿ ಪಶ್ಚಿಮಕ್ಕೆ ಇಳಿಯುವ ಪೂರ್ವದ ಕ್ಷಣವೇ ಮಧ್ಯಾಹ್ನದ ಸಂಧಿಸಮಯವು. ಈ ಸಮಯದಲ್ಲಿಯೂ ಸಹ ಇಷ್ಟಲಿಂಗ ಪೂಜೆಯನ್ನು ಮಾಡಬೇಕು. ಇದು ಮಧ್ಯಾಹ್ನದ ಸಂಧ್ಯಾವಂದನೆಯು. ಇದೇ ತೆರನಾಗಿ ಸಾಯಂಕಾಲ ಸೂರ್ಯಾಸ್ತವಾಗುವ ವೇಳೆಯಲ್ಲಿ ಸೂರ್ಯ ಬಿಂಬವು ಮುಳುಗುತ್ತ, ಮುಳುಗುತ್ತ ಕೊನೆಯದಾಗಿ ಪೂರ್ಣವಾಗಿ ಮುಳುಗಿದ ಮತ್ತು ಇನ್ನೂ ಕತ್ತಲೆಯು ಆವರಿಸದಿರುವ ಸಮಯವೂ ಸಹ ಸಂಧಿ ಸಮಯವೆಂದು ಕರೆಯಲ್ಪಡುತ್ತದೆ. ಈ ಸಂಧಿ ಸಮಯದಲ್ಲಿ ಮಾಡುವ ಶಿವಪೂಜೆಗೆ ಸಾಯಂ ಸಂಧ್ಯಾ ಎನ್ನುವರು. ವೀರಶೈವರಾದವರು ಈ ಸಮಯದಲ್ಲಿಯೂ ಸಹ ಇಷ್ಟಲಿಂಗ ಪೂಜೆಯನ್ನು ಅವಶ್ಯವಾಗಿ ಮಾಡಬೇಕು ಇದುವೇ ವೀರಶೈವರ ಸಾಯಂ ಸಂಧ್ಯಾವಂದನೆಯು.

ಹೀಗೆ 'ಸಂಧ್ಯಾವಂದನೆ' ಎಂಬ ಶಬ್ದಕ್ಕೆ ಪೂರ್ವದಲ್ಲಿ ಹೇಳಿದ ಸಂಧಿಕಾಲದಲ್ಲಿ ಮಾಡುವ ಶಿವಪೂಜೆಯೆಂಬುದಾಗಿ ತಿಳಿದುಬರುತ್ತದೆ. ಇದು ವೈದಿಕ ಪರಂಪರೆಯಲ್ಲಿ ಬಂದ ಶಬ್ದವು. ಅಂತೆಯೇ ಬಹಳಷ್ಟು ಜನ ವೀರಶೈವರಿಗೆ ಇದರ, ಸರಿಯಾದ ಅರ್ಥವು ಗುರುತಿರದಕಾರಣ ಬ್ರಾಹ್ಮಣರು ಮಾಡುವ ಗಾಯತ್ರಿ ಜಪ ಹಾಗೂ ಸೂರ್ಯನಿಗೆ ಕೊಡುವ ಅರ್ಘ್ಯಾದಿಗಳಿಗೇನೇ ಸಂಧ್ಯಾವಂದನೆಯೆಂದು ತಿಳಿದುಕೊಂಡು ಸಂಧ್ಯಾವಂದನೆಯು ನಮಗೆ ಸಂಬಂಧವೇ ಇಲ್ಲ ಎಂಬುವ ರೀತಿಯಲ್ಲಿ ಮಾತನಾಡುವವರು ಬಹಳ. ಆದರೆ ಈ ಶಬ್ದದ ಸರಿಯಾದ ಅರ್ಥವನ್ನು ತಿಳಿದುಕೊಂಡು ವೀರಶೈವರೂ ಸಹ ಪೂರ್ವದಲ್ಲಿ ಹೇಳಿದ ಹಾಗೆ ಮೂರು ವಿಧ ಸಂಧಿಕಾಲದಲ್ಲಿ ಇಷ್ಟಲಿಂಗ ಪೂಜೆಯನ್ನು ಅವಶ್ಯವಾಗಿ ಮಾಡಬೇಕು.

ಇನ್ನು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವ ಸಂಧ್ಯಾವಂದನೆಯು ಅತ್ಯಂತ ಉತ್ಕೃಷ್ಟವಾದುದು. ಆಕಾಶದಲ್ಲಿಯ ಸೂರ್ಯನು ಒಮ್ಮೆ ಉದಯಿಸುತ್ತಾನೆ. ಇನ್ನೊಮ್ಮೆ ಅಸ್ತನಾಗುತ್ತಾನೆ. ಆದರೆ ಹೃದಯಾಕಾಶದಲ್ಲಿ ಜ್ಞಾನರೂಪನಾದ ಸೂರ್ಯನು ಒಮ್ಮೆ ಉದಯವಾದನೆಂದರೆ ಅವನೆಂದೂ ಅಸ್ತವಾಗುವುದಿಲ್ಲ. ಹೀಗೆ ತನ್ನ ಹೃದಯದಲ್ಲಿ ಜ್ಞಾನಸೂರ್ಯನು ಉದಯವಾಗಿರುವ ಸ್ಥಿತಿಯನ್ನು ನಿರಂತರವಾಗಿ ಅನುಸಂಧಾನಿಸುವುದೇ ಸಂಧ್ಯಾವಂದನೆಯೆಂಬುದಾಗಿ ಹೇಳಲಾಗಿದೆ. ತಾತ್ಪರ್ಯವೇನೆಂದರೆ, ತನಗೆ ಉತ್ಪನ್ನವಾದ ಶಿವೋऽಹಂ ಎನ್ನುವ ಶಿವಾದ್ವೈತ ಜ್ಞಾನವನ್ನು ನಿರಂತರವಾಗಿ ಅನುಸಂಧಾನಿಸುತ್ತಿರಬೇಕು. ಇದುವೇ ಸರ್ವೋತ್ಕೃಷ್ಟವಾದ ಸಂಧ್ಯಾವಂದನೆಯು ಪೂರ್ವದಲ್ಲಿ ಹೇಳಲ್ಪಟ್ಟ ಮೂರು ವಿಧ ಸಂಧ್ಯಾವಂದನೆಗಳನ್ನು ಮಾಡುವ ಉದ್ದೇಶವೆಂದರೆ ಸಾಧಕನ ಅಂತಃಕರಣವು ಪರಿಶುದ್ಧವಾಗಿ ಅವನಿಗೆ ಶಿವಾದ್ವೈತ ಜ್ಞಾನವು ಪ್ರಾಪ್ತವಾಗಬೇಕೆಂಬುದೇ ಆಗಿದೆ. ಅದು ಪ್ರಾಪ್ತವಾದ ಬಳಿಕ ನಿರಂತರವಾಗಿ ಅದನ್ನೇ ಅನುಸಂಧಾನಿಸುವುದೇ ಜೀವನದ ಮುಖ್ಯ ಗುರಿಯೆಂಬುದಾಗಿ ಭಾವಿಸಿ ಪೂಜ್ಯಪಾದರು ಆ ವಿಧವಾದ ಅನುಸಂಧಾನಕ್ಕೇನೇ ಇಲ್ಲಿ ಸಂಧ್ಯಾವಂದನೆಯೆಂಬುದಾಗಿ ಕರೆದಿದ್ದಾರೆ.

ಈ ಭಾವಾಚಾರಸಂಪನ್ನನಾದ ಸಾಧಕನು ಮಾಡಬೇಕಾದ ಸಂಧ್ಯಾವಂದನೆಯ ಬಗ್ಗೆ ತಿಳಿಸಿದಂತೆ, ಇನ್ನು ಆತನಿಂದ ಆಚರಿಸಲ್ಪಡಬೇಕಾದ ಹೋಮದ ವಿಷಯಕವಾಗಿ ಸ್ಪಷ್ಟಪಡಿಸಲೋಸುಗ ಪೂಜ್ಯರು–

ಆತ್ಮಜ್ಯೋತಿಷಿ ಸರ್ವೇಷಾಂ ವಿಷಯಾಣಾಂ ಸಮರ್ಪಣಮ್ ।
ಅಂತರ್ಮುಖೇನ ಭಾವೇನ ಹೋಮಕರ್ಮೇತಿ ಗೀಯತೇ ॥

(ಸಿ. ಶಿ. ೧೬–೭೨)

ಹೀಗೆ ವಿವರಿಸಿದ್ದಾರೆ. ಅಂತರಂಗದ ಚಿದಗ್ನಿಯಲ್ಲಿ ಅಂತರ್ಮುಖನಾಗಿ ತನ್ನ ಮನಸ್ಸಿನಲ್ಲಿ ಬರುತ್ತಿರುವ ವಿಷಯಗಳನ್ನೆಲ್ಲ ಸಮರ್ಪಣಮಾಡುವುದೇ ಹೋಮವು ಎಂಬುದು ಪೂಜ್ಯರ ಆಶಯವಾಗಿದೆ.

ಸಂಧ್ಯಾ ವಂದನೆಯ ನಂತರ ಬರುವ ಕ್ರಿಯೆಯೇ ಹೋಮಕರ್ಮವು. ಈ ಹೋಮವೂ ಸಹ ಬಾಹ್ಯ ಹಾಗೂ ಅಂತರಂಗ ಭೇದದಿಂದ ಎರಡು ಪ್ರಕಾರ ವಾಗಿರುತ್ತದೆ. ಬಾಹ್ಯದಲ್ಲಿ ಯಜ್ಞಕುಂಡವನ್ನು ಸಿದ್ಧಪಡಿಸಿ ಅದರಲ್ಲಿ ಮಂತ್ರಪೂರ್ವಕವಾಗಿ ಅಗ್ನಿ ಯನ್ನು ಪ್ರಜ್ವಲಿಸಿ ಇಷ್ಟದೇವರ ಹೆಸರಿನಿಂದ ಸಮಿತ್ತು ಹಾಗೂ ಘೃತ ಮೊದಲಾದ ದ್ರವ್ಯಗಳನ್ನು ಹೋಮಕುಂಡದಲ್ಲಿ ಸ್ವಾಹಾಕಾರ ಮಾಡುವುದೇ ಬಾಹ್ಯ ಹೋಮವು, ಇಷ್ಟನ್ನು ಮಾಡಿದರೆ ಹೋಮಕ್ರಿಯೆಯು ಪೂರ್ಣವಾಯಿತಂತಲ್ಲ. ತನ್ನೊಳಗಿನ ಅವಗುಣಗಳನ್ನು ಆಹುತಿ ಕೊಟ್ಟಾಗಲೇ ಹೋಮಕ್ರಿಯೆಯು ಪೂರ್ಣವಾಗುವುದು. ಅಂತೆಯೇ ಪೂಜ್ಯಪಾದರು ಇಲ್ಲಿ ಅಂತರಂಗದ ಹೋಮಕರ್ಮವನ್ನು ವಿಧಿಸಿದ್ದಾರೆ. ಆ ಪ್ರಕಾರ ತನ್ನ ಆತ್ಮವೆಂಬ ಚಿದ್ರೂಪವಾದ ಅಗ್ನಿಯಲ್ಲಿ ತನ್ನ ಮನಸ್ಸಿನಲ್ಲಿ ಬರುವ ವಿಷಯಾ ಕಾರ ವೃತ್ತಿಗಳನ್ನು ಒಂದೊಂದಾಗಿ ಸಮರ್ಪಿಸುತ್ತ ತಾನು ನಿರ್ವಿಷಯನಾಗಿ ಅಂತರ್ಮುಖಾವಸ್ಥೆಯಲ್ಲಿ ಇರುವುದೇ ಅಂತರಂಗದ ಹೋಮ ಕರ್ಮವು. ಇದುವೇ ನಿಜವಾದ ಮತ್ತು ಶ್ರೇಷ್ಠವಾದ ಹೋಮ ಕರ್ಮವೆನಿಸಿಕೊಳ್ಳುತ್ತದೆ.

ಇನ್ನು ಬಹಿರಂಗದಲ್ಲಿ ಮಾಡಲ್ಪಡುವ ಯಜ್ಞವು ನಿಷ್ಪ್ರಯೋಜಕವೆಂಬುದಾಗಿ ಯಾರೂ ತಿಳಿದುಕೊಳ್ಳಬಾರದು. ಯಜ್ಞದ ಸೂಕ್ಷ್ಮ ತತ್ವಾರ್ಥವನ್ನು ಅರಿಯದ ಅನೇಕ ಜನರು ಅಲ್ಲಸಲ್ಲದ ಅವಿಚಾರಪೂರ್ಣವಾದ ಮಾತುಗಳಿಂದ ಯಜ್ಞ ಕ್ರಿಯೆಯ ಬಗ್ಗೆ ಖಂಡಿಸುವದನ್ನು ಅಲ್ಲಲ್ಲಿ ಕೇಳುತ್ತೇವೆ. ಮನುಷ್ಯರಿಗೆ ತಿನ್ನಲು ತುಪ್ಪ ಸಿಗದ ವೇಳೆಯಲ್ಲಿ ಅದನ್ನು ಅಗ್ನಿಗೆ ಆಹುತಿಕೊಟ್ಟು, ಹಾಳುಮಾಡುವುದು ವ್ಯರ್ಥವಲ್ಲವೆ ? ನಮ್ಮ ದೇಶದ ಅದೆಷ್ಟೋ ಜನತೆ ವಸ್ತ್ರಹೀನರಾಗಿ ತಿರುಗುತ್ತಿರುವ ಸಂದರ್ಭದಲ್ಲಿ ಬೆಲೆಬಾಳುವ ದುಕೂಲ (ರೇಶ್ಮೆಯ ವಸ್ತ್ರ)ಗಳನ್ನು ಅಗ್ನಿಗೆ ಆಹುತಿಕೊಡುವುದು ಬುದ್ಧಿಮತ್ತೆಯೇ ? ಎಂಬುದಾಗಿ ಅನೇಕ ಯುಕ್ತಿಗಳಿಂದ ಬಾಹ್ಯ ಯಜ್ಞ ಕ್ರಿಯೆಯನ್ನು ಖಂಡಿಸುತ್ತಾರೆ. ಇವರ ಈ ಯುಕ್ತಿವಾದವು ಅಷ್ಟೊಂದು ಸಮಂಜಸವಾದುದಲ್ಲ, ಈ ಜಗತ್ತಿನ ಎಲ್ಲ ವ್ಯವಹಾರಗಳು ಒಂದು ಯಜ್ಞ ಕ್ರಿಯೆಯಿದ್ದಂತೆಯೇ, 'ಯಜ್ಞಮಾಡು' ಎಂದರೆ ತ್ಯಾಗ ಭಾವನೆಯನ್ನು ದೃಢಪಡಿಸಿಕೊ ಎಂದರ್ಥ. ಯಾವುದೇ ಒಂದು ವಸ್ತುವನ್ನು ಭಗವಂತನ ನಾಮಸ್ಮರಣ ಪೂರ್ವಕವಾಗಿ ಯಜ್ಞದಲ್ಲಿ ಆಹುತಿ ಕೊಟ್ಟಾಗ ಅದು ಸಮಷ್ಟಿ ರೂಪವನ್ನು

ತಾಳಿ ಬಹು ಜನರಿಗೆ ಉಪಯೋಗಿಯಾಗುತ್ತದೆ. ಅಗ್ನಿಯಲ್ಲಿ ಅರ್ಪಿಸಲ್ಪಟ್ಟ ವಸ್ತುವು ವ್ಯಾಪಕ ಸ್ವರೂಪವನ್ನು ತಾಳಿ ಸಮಷ್ಟಿಯ ಮೇಲೆ ಪರಿಣಾಮವನ್ನು ಬೀರುತ್ತದೆ. ಓರ್ವ ವ್ಯಕ್ತಿಯು ಒಂದು ಮೆಣಸಿನಕಾಯಿಯನ್ನು ತಿಂದದ್ದಾದರೆ ಅದರ ಖಾರಗುಣದ ಪ್ರಭಾವ ದಿಂದ ಇವನ ಕಣ್ಣು ಮೂಗುಗಳಲ್ಲಿ ನೀರು ಬಂದು ಮುಖವೆಲ್ಲಾ ಕೆಂಪಾಗಿ ಮೈಯೆಲ್ಲಾ ಬೆವರು ಬಿಡುವುದನ್ನು ನೋಡಬಹುದು. ಆದರೆ ಅದೇ ಮೆಣಸಿನಕಾಯಿಯನ್ನು ನಿಗಿನಿಗಿ ಸುವ ಅಗ್ನಿಯ ಮೇಲೆ ಹಾಕಿದಾಗ ಅದು ಸುತ್ತಮುತ್ತಲೂ ಕುಳಿತಿರುವ ಅನೇಕ ಜನರ ಮೇಲೆ ತನ್ನ ವಾಸನೆಯ ಪ್ರಭಾವವನ್ನು ಬೀರಿ ಎಲ್ಲರಿಗೂ ಶೀನು ಬರುವಂತೆ ಮತ್ತು ಕಣ್ಣು–ಮೂಗುಗಳಲ್ಲಿ ನೀರು ಬರುವಂತೆ ಮಾಡುತ್ತದೆ. ಅಂದರೆ ಅಗ್ನಿಯಲ್ಲಿ ಅರ್ಪಿಸ ಲ್ಪಟ್ಟ ವಸ್ತುವಿನ ಶಕ್ತಿಯು ವೃದ್ಧಿಗೊಂಡು ಅನೇಕ ಜನರ ಮೇಲೆ ಪ್ರಭಾವವನ್ನು ಬೀರು ವದು ಕಂಡುಬರುತ್ತದೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ವಿದ್ಯುದಗ್ನಿಯ ಬಳಕೆಯು ಸರ್ವತ್ರ ನಡೆಯುತ್ತಿದೆ. ವ್ಯಕ್ತಿಯ ಶಬ್ದ ಹಾಗೂ ರೂಪಗಳನ್ನು ವಿದ್ಯುದ್ಯಂತ್ರಗಳ ಮಾಧ್ಯಮದಿಂದ ವಿದ್ಯುದಗ್ನಿ ಯಲ್ಲಿ ಸಮರ್ಪಿಸಿದಾಗ ಅದು ಹೆಚ್ಚು ಹೆಚ್ಚು ವ್ಯಾಪಕ ಸ್ವರೂಪವನ್ನು ತಾಳಿ ಆ ವ್ಯಕ್ತಿಯ ಶಬ್ದ ಹಾಗೂ ಚಿತ್ರಗಳು ರೇಡಿಯೋ ಹಾಗೂ ಟಿ. ವಿ.ಗಳ ಮುಖಾಂತರ ಕೋಟಿ ಕೋಟಿ ಜನರಿಗೆ ಆ ಶಬ್ದವನ್ನು ಕೇಳುವಂತೆಯೂ, ಆ ರೂಪವನ್ನು ಕಾಣುವಂತೆಯೂ ಮಾಡುತ್ತದೆ. ಇದನ್ನು ಯಾರಿಂದಲೂ ಅಲ್ಲಗಳೆಯಲಾಗುವುದಿಲ್ಲ. ಹೀಗೆ ಯಾವುದೊಂದು ಪದಾರ್ಥವು ಅಗ್ನಿಯಲ್ಲಿ ಸಮರ್ಪಿಸಿದಾಗ ಅದು ಅನೇಕ ರೂಪವನ್ನು ತಾಳಿ 'ಬಹುಜನ ಸುಖಾಯ ಬಹು ಜನ ಹಿತಾಯ' ಅಂದರೆ ಅನೇಕ ಜನರಿಗೆ ಅದು ಉಪಕಾರಿಯಾಗುತ್ತದೆಂಬುದು ತಿಳಿದುಬರುತ್ತದೆ. ಈ ವೈಜ್ಞಾನಿಕ ತತ್ತ್ವವನ್ನರಿತೇ ನಮ್ಮ ದೇಶದ ಪ್ರಾಚೀನ ಮಹರ್ಷಿ ಗಳು ವೇದಾಗಮಗಳನ್ನು ಅಭ್ಯಸಿಸಿ ಅದರಿಂದ ಯಜ್ಞ ಕ್ರಿಯೆಯ ಬಗ್ಗೆ ಸಂಶೋಧನೆಯನ್ನು ಮಾಡಿ ಈ ಯಜ್ಞದ ಮುಖಾಂತರ ಸಮಷ್ಟಿ ಪ್ರಪಂಚಕ್ಕೆ ಕಲ್ಯಾಣವನ್ನು ಮಾಡುವ ಉದ್ದೇಶದಿಂದ ಯಜ್ಞಪದ್ಧತಿಯನ್ನು ಬಳಕೆಗೆ ತಂದಿದ್ದಾರೆ.

''ಯಜ್ಞಾದ್ಭವತಿ ಪರ್ಜನ್ಯಃ ಪರ್ಜನ್ಯಾದನ್ನ ಸಂಭವಃ'' ಎಂಬ ಭಗವದ್ಗೀತೆಯ ಉಕ್ತಿಯಂತೆ ಯಜ್ಞವನ್ನು ಮಾಡಿದರೆ, ಅದರ ಧೂಮವು ಪರಿಸರದಲ್ಲಿ ಅನುಕೂಲ ವಾತಾವರಣವನ್ನು ನಿರ್ಮಾಣಮಾಡಿ ಮಳೆ ಬರಲು ಸಹಾಯಕವಾಗುತ್ತದೆ. ಮಳೆ ಚೆನ್ನಾಗಿ ಬಂದಾಗ ಬೆಳೆ ಹುಲುಸಾಗಿ ಬೆಳೆಯುತ್ತದೆ. ಅದರಿಂದ ದೇಶದ ಪ್ರಜೆಯೆಲ್ಲ ಸುಖ ಸಮೃದ್ಧಿಯನ್ನು ಹೊಂದುವುದು. ಈ ಪ್ರಾಚೀನ ಪರಂಪರೆಯ ವೈಜ್ಞಾನಿಕ ತತ್ತ್ವವನ್ನು ಅರ್ಥಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಬೇಕೇ ವಿನಃ ಅತ್ಯಂತ ಹಗುರಾದ ಶಬ್ದಗಳಿಂದ ಯಜ್ಞವನ್ನು ತಿರಸ್ಕರಿಸುವುದು ಸೂಕ್ತವಲ್ಲ.

ನಮ್ಮ ದೇಶದಲ್ಲಿ ರೂಢಿಯಲ್ಲಿ ಬಂದಿರುವ ಪ್ರತಿಯೊಂದು ಪರಂಪರೆಯ ಹಿಂದೆ ಒಂದಿಲ್ಲೊಂದು ವಿಧವಾದ ವೈಜ್ಞಾನಿಕ ತತ್ತ್ವವು ಅಡಕವಾಗಿರುತ್ತದೆ. ವಿಜ್ಞಾನವು ಇಂದೇ ಬಹಳಷ್ಟು ವಿಕಸಿತವಾಗಿದೆ, ಹಿಂದೆ ಏನೂ ಇರಲಿಲ್ಲ ಎಂಬುದಾಗಿ ಯಾರೂ ತಿಳಿದುಕೊಳ್ಳ

ಬಾರದು. ಈ ಪ್ರಪಂಚವು ಚಕ್ರದೋಪಾಧಿಯಲ್ಲಿರೋಣದರಿಂದ ಇಂದಿರುವ ವಿಜ್ಞಾನವು ಹಿಂದೂ ಸಹ ಇತ್ತು, ಅದುವೇ ಪುನಃ ಪುನಃ ಆವೃತ್ತಿಯಾಗುತ್ತಿರುತ್ತದೆ. ದೂರ ದರ್ಶನ, ದೂರಶ್ರವಣ ಮತ್ತು ವಿಮಾನಗಮನಾದಿಗಳು ಇಂದಿನ ವಿಜ್ಞಾನಿಗಳ ಪರಿಶ್ರಮದ ಫಲವಾಗಿದ್ದರೂ ಈ ಸಾಧನೆಗಳು ಹಿಂದಿನಕಾಲದಲ್ಲಿಯೂ ಸಹ ಇದ್ದವು ಎನ್ನುವುದರಲ್ಲಿ ಸಂಶಯವಿಲ್ಲ, ಯಾಕೆಂದರೆ ಪ್ರಾಚೀನ ಸಾಹಿತ್ಯದಲ್ಲಿ ವಿಮಾನದ ಉಲ್ಲೇಖವು ಬಂದಿರುವುದನ್ನು ಕಾಣುತ್ತೇವೆ. ಆದರೆ ಅಂದಿನ ವಿಮಾನಗಳು ಅದರಲ್ಲಿ ಸವಾರನಾಗಿರುವ ಯಜಮಾನನ ಇಚ್ಛಾಶಕ್ತಿಯಿಂದ ಪಯಣಿಸುತ್ತಿದ್ದವು ಎಂದಾಗ ಇಂದಿನ ವಿಜ್ಞಾನಕ್ಕಿಂತಲೂ ಹಿಂದಿನ ವಿಜ್ಞಾನವು ಎಷ್ಟು ಸೂಕ್ಷ್ಮವಾಗಿತ್ತೆಂಬುದು ತಿಳಿದು ಬರುತ್ತದೆ. ಇಂದು ನಾವು ಬಳಸುತ್ತಿರುವ ಆಕಾಶವಾಣಿ ಹಾಗೂ ದೂರದರ್ಶನ ಶಬ್ದಗಳು ಹಿಂದಿನ ಸಾಹಿತ್ಯಗಳಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಅಂದಾಗ ಈ ಎಲ್ಲ ಉಪಕರಣ ಗಳು ಅಂದು ಇದ್ದಿರಬಹುದು. ಇಲ್ಲವೇ ಅಂದಿನ ಕಾಲದ ಜನರ ಮಾನಸಿಕ ವಿಕಾಸವೇ ಅಷ್ಟು ರೀತಿಯಲ್ಲಿ ಬೆಳೆದಿತ್ತೆಂಬುದಾಗಿ ಊಹಿಸಬಹುದು. ಇಂದು ಆಕಾಶದಲ್ಲಿ ಪ್ರಕ್ಷೇಪ ಗೊಳಿಸಿದ ಶಬ್ದ ಹಾಗೂ ಚಿತ್ರಗಳನ್ನು ಯಂತ್ರಗಳು ಆಕರ್ಷಿಸಿ ನಮಗೆ ಕೇಳಲು ಹಾಗೂ ನೋಡಲು ಅನುಕೂಲತೆಯನ್ನು ಮಾಡಿಕೊಟ್ಟಿದ್ದರೆ, ಅಂದು ಆ ಕಾಲದ ವ್ಯಕ್ತಿಗಳ ಬುದ್ಧಿ ಹಾಗೂ ಇಂದ್ರಿಯಗಳೇ ಗ್ರಹಿಸುವ ಸಾಮರ್ಥ್ಯವನ್ನು ಹೊಂದಿದ್ದವೆಂದು ತಿಳಿದು ಬರುತ್ತದೆ. ಇಷ್ಟು ಸೂಕ್ಷ್ಮವಾದ ಮನೋವಿಜ್ಞಾನವು ಅಂದು ವಿಕಸಿತವಾಗಿತ್ತೆಂದಬಳಿಕ ಅಂತಹ ಸಾಮರ್ಥ್ಯವುಳ್ಳ ಋಷಿ–ಮಹರ್ಷಿಗಳು ಹೇಳಿದ ಯಜ್ಞದ ವಿಷಯದಲ್ಲಿ ಅತಿಗೂಢವಾದ ರಹಸ್ಯಾರ್ಥವು ಇದ್ದಿರಲಿಕ್ಕೇ ಬೇಕು. ಕಾರಣ ಒಂದು ಯಜ್ಞ ಕ್ರಿಯೆಯನ್ನು ಮಾಡಿದಾಗ ಅದನ್ನು ಮಾಡುವ ವ್ಯಕ್ತಿಗಳ ಭಾವನೆ ಹಾಗೂ ಕ್ರಿಯೆಯ ಪರಿಣಾಮವು ಪ್ರಕೃತಿಯ ಮೇಲೆ ಹೇಗಾಗುತ್ತಿದೆಯೆಂಬುದನ್ನು ವಿಚಾರ ಮಾಡುವುದು ಸೂಕ್ತವೇ ವಿನಃ ಸಹಜವಾಗಿ ಅದನ್ನು ಖಂಡಿಸುವುದಾಗಲಿ ಅದರ ಬಗ್ಗೆ ಹಗುರಾಗಿ ಮಾತನಾಡುವುದಾಗಲಿ ಬುದ್ಧಿಯ ಪರಿಪಕ್ವತೆ ಅಲ್ಲ.

ಇತ್ತೀಚಿನ ದಿನಮಾನಗಳಲ್ಲಿ ಪ್ರಾಚೀನವಾದ ಆ ಯಜ್ಞ ಪರಂಪರೆಯು ಲುಪ್ತ ವಾಗುತ್ತ ನಡೆದಿದ್ದರೂ, ಅಲ್ಲಲ್ಲಿ ಆಗಾಗ ಬೃಹತ್ಪ್ರಮಾಣದ ಇಲ್ಲವೆ ಲಘು ಪ್ರಮಾಣದ ಯಜ್ಞಸಮಾರಂಭಗಳು ಜರುಗುತ್ತಿರುತ್ತವೆ. ಯಜ್ಞದಲ್ಲಿ ತುಪ್ಪ ಮೊದಲಾದ ದ್ರವ್ಯಗಳನ್ನು ಹಾಕಿ ಸುಡುವುದಕ್ಕಿಂತ ಯಾರಿಗಾದರೂ ಉಣಿಸಿದರೆ ಯೋಗ್ಯ ಎನ್ನುವ ವಿಚಾರವು ತಾತ್ಕಾಲಿಕವಾಗಿ ಜನಸಾಮಾನ್ಯರಿಗೆ ಸರಿಯೆಂದು ತೋರಿದರೂ, ಯಜ್ಞಸಮಾರಂಭದಲ್ಲಿ ಋತ್ವಿಜರಿಗೆ, ಬಡಬಗ್ಗರಿಗೆ ಹಾಗೂ ಊರಿನ ಜನರಿಗೆ ಸಮಷ್ಟಿ ಭೋಜನವನ್ನು ಸಹ ಮಾಡಿಸುತ್ತಾರೆ, ಆದರೆ ಯಜ್ಞಕ್ಕೆ ಹಾಕುವ ಆಹುತಿಯನ್ನು ಸಹ ನಮಗೆ ಹಾಕಬೇಕೆನ್ನುವ ವಿಚಾರವು ಸಂಕುಚಿತ ಹಾಗೂ ಸ್ವಾರ್ಥಪರವಾದುದು. ಈ ಪೂರ್ವದಲ್ಲಿ ನಾವು ಹೇಳಿರುವಂತೆ ಒಬ್ಬ ವ್ಯಕ್ತಿಯ ಜಠರಾಗ್ನಿಗೆ ಕೊಟ್ಟ ಆಹುತಿಯಿಂದ ಅವನೋರ್ವನು ತೃಪ್ತನಾದರೆ ಅಗ್ನಿಗೆ ಸಮರ್ಪಿಸಿದ ಆಹುತಿಯಿಂದ ಸಮಷ್ಟಿಗೆ ಅರ್ಥಾತ್ ಇಡೀ ಜಗತ್ತಿಗೆ ತೃಪ್ತಿಯುಂಟಾಗುವುದು. ಆದ್ದರಿಂದ ಈ ಬಾಹ್ಯ ಯಜ್ಞವನ್ನು ಕಾಲಕಾಲಕ್ಕೆ ಮಾಡುವುದು ಸೂಕ್ತವೆಂಬುದಾಗಿ ಭಾವಿಸಬೇಕು.

ಈ ಬಾಹ್ಯ ಯಜ್ಞವು ಸಮಷ್ಟಿಯ ಮೇಲೆ ಸುಪರಿಣಾಮವನ್ನು ಬೀರಿದರೆ ಆಂತರಿಕ ಯಜ್ಞವು ವ್ಯಕ್ತಿಯ ಮನೋನೈರ್ಮಲ್ಯಕ್ಕೆ ಕಾರಣವಾಗಿ ಜ್ಞಾನ ಜ್ಯೋತಿಯು ಸ್ಥಿರಗೊಳ್ಳುವುದು. ಅಂತೆಯೇ ಪೂಜ್ಯಪಾದರು ತನ್ನ ಹೃದಯದಲ್ಲಿ ಪ್ರಾದುರ್ಭವಿಸಿದ ಜ್ಞಾನಾಗ್ನಿಯಲ್ಲಿ ಆಂತರಿಕ ವಿಷಯಗಳನ್ನು ಆಹುತಿಕೊಡುವುದೇ ಹೋಮಕ್ರಿಯೆ ಎಂಬುದಾಗಿ ಇಲ್ಲಿ ತಿಳಿಯ ಪಡಿಸಿದ್ದಾರೆ. ಶಬ್ದ–ಸ್ಪರ್ಶಾದಿ ವಿಷಯಗಳೆಂದರೆ ವಿಷವಿದ್ದಂತೆ. ಇವುಗಳ ಸೇವನೆಯು ಮನುಷ್ಯನಿಗೆ ಮೃತ್ಯುವನ್ನು ತಂದೊದಗಿಸುತ್ತದೆ. ವಿಷಯ ಲೋಲುಪನಾದ ವ್ಯಕ್ತಿಯು ತನ್ನ ದೈಹಿಕ ಹಾಗೂ ಐಂದ್ರಿಕ ಬಲವನ್ನು ಕಳೆದುಕೊಂಡು ದುರ್ಬಲನಾಗಿ ಕೊನೆಗೆ ಮೃತ್ಯುಮುಖವನ್ನು ಸೇರುವನು. ಅಂತೆಯೇ ಜ್ಞಾನಿಗಳು ''ವಿಷಯಾನ್ ವಿಷವತ್‌ತ್ಯಜ'' ಎಂಬುದಾಗಿ ಹೇಳಿದ್ದಾರೆ. ವಿಷಯಗಳನ್ನು ವಿಷವೆಂದು ತಿಳಿದು ಅವುಗಳನ್ನು ತ್ಯಜಿಸ ಬೇಕೆಂಬುದು ಈ ಉಕ್ತಿಯ ತಾತ್ಪರ್ಯವಾಗಿದೆ. ಈ ವಿಷಯಗಳನ್ನೇ ಭಗವದರ್ಪಣ ಮಾಡಿದಾಗ ಅವು ಪರಿಶುದ್ಧವಾಗಿ ಅಮೃತತ್ವಕ್ಕೆ ಸಾಧನವಾಗುತ್ತವೆ. ಅಂತೆಯೇ ವೀರಶೈವ ಆಚಾರ್ಯರು ಪ್ರತಿಯೊಂದು ಇಂದ್ರಿಯಗಳನ್ನು ಲಿಂಗಾರ್ಪಿತಗೊಳಿಸುವ ಒಂದು ಪ್ರಕ್ರಿಯೆಯನ್ನು ತಿಳಿಯಪಡಿಸಿದ್ದಾರೆ.

ಇಂದ್ರಿಯಗಳಲ್ಲಿ ಭಾವಿಸಬೇಕಾದ ಲಿಂಗಗಳೆಂದರೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳು. ಜ್ಞಾನೇಂದ್ರಿಯ. ಹಾಗೂ ಕರ್ಮೇಂದ್ರಿಯಗಳಿಗೆ ಸಂಯುಕ್ತವಾಗಿ ಒಂದೊಂದು ಲಿಂಗಗಳನ್ನು ಇಲ್ಲಿ ಭಾವಿಸ ಲಾಗಿದೆ. ಗುದ ಹಾಗೂ ಘ್ರಾಣೇಂದ್ರಿಯಗಳಲ್ಲಿ ಆಚಾರಲಿಂಗವನ್ನೂ, ಗುಹ್ಯ ಹಾಗೂ ರಸನೇಂದ್ರಿಯಗಳಲ್ಲಿ ಗುರುಲಿಂಗವನ್ನು, ಪಾದ ಹಾಗೂ ನೇತ್ರೇಂದ್ರಿಯಗಳಲ್ಲಿ ಶಿವಲಿಂಗ ವನ್ನು, ಹಸ್ತ ಹಾಗೂ ತ್ವಗಿಂದ್ರಿಯಗಳಲ್ಲಿ ಜಂಗಮಲಿಂಗವನ್ನು, ವಾಕ್ ಹಾಗೂ ಶ್ರವಣೇಂದ್ರಿಯಗಳಲ್ಲಿ ಪ್ರಸಾದಲಿಂಗವನ್ನೂ, ಇನ್ನು ಇಂದ್ರಿಯಾಧ್ಯಕ್ಷವಾಗಿರುವ ಮನಸ್ಸಿ ನಲ್ಲಿ ಮಹಾಲಿಂಗವನ್ನು ಭಾವಿಸಬೇಕು. ಹೀಗೆ ಭಾವಿಸಿದ ಆಯಾ ಲಿಂಗಗಳಿಗೆ ಗಂಧ, ರಸ, ರೂಪ, ಸ್ಪರ್ಶ, ಮತ್ತು ಶಬ್ದಗಳೆಂಬ ವಿಷಯಗಳನ್ನು ಸಮರ್ಪಿಸಿ ಅವುಗಳನ್ನು ಪ್ರಸಾದ ರೂಪವಾಗಿ ಸ್ವೀಕರಿಸಿದಾಗ ಅವು ಬಾಧಕಗಳಾಗುವುದಿಲ್ಲ. ವಿಷಯಗಳ ಸೇವನೆಯಿಂದ ಮನಸ್ಸಿನಲ್ಲಿ ವಾಸನೆಯು ಬೆಳೆಯುತ್ತ ಹೋಗುತ್ತದೆ. ಆದರೆ ಪ್ರಸಾದ ಸೇವನೆಯಿಂದ ಮನಸ್ಸು ಪ್ರಸನ್ನವಾಗಿರುತ್ತದೆ. ಅಂತೆಯೇ ಪೂಜ್ಯರು ಜ್ಞಾನಾಗ್ನಿಯಲ್ಲಿ ವಿಷಯಾರ್ಪಣ ರೂಪವಾದ ಹೋಮವನ್ನು ಆಚರಿಸಬೇಕೆಂಬುದಾಗಿ ತಿಳಿಯಪಡಿಸಿದ್ದಾರೆಂಬಲ್ಲಿಗೆ ಇಂದಿನ ಆಶೀರ್ವಚನವನ್ನು ವಿರಾಮಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ಆಗಷ್ಟ್, ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಭಾವಾಚಾರಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲ ದಿನಾಲು ಕ್ಷೇತ್ರಮಹಿಮೆಯನ್ನೂ ಸಹ ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕಾಶಿಗೆ ಆನಂದಕಾನನವೆಂದು ಕರೆಯುವ ವಿಚಾರವಾಗಿ ತಿಳಿದಿದ್ದೀರಿ. ಈ ವಿಶಾಲವಾದ ಆನಂದವನದಲ್ಲಿ ಒಂದು ಜಂಗಮವಾಟಿಕಾ ಇದೆ. ಅದುವೇ ಈ ಜಂಗಮವಾಡಿ ಮಹಾಮಠವು. ವಾಟಿಕಾ ಎಂದರೆ ಉಪವನವೆಂದರ್ಥ ಜಂಗಮವಾಡಿ ಮಹಾಮಠವೆಂಬ ಈ ಉಪವನವು ಈ ಆನಂದ ವನದಲ್ಲಿ ಅತಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

ಕೃತಯುಗದಲ್ಲಿ ಪಂಚಾಕ್ಷರ ಶಿವಾಚಾರ್ಯರು, ತ್ರೇತಾಯುಗದಲ್ಲಿ ಪಂಚವಕ್ತ್ರ ಶಿವಾಚಾರ್ಯರು, ದ್ವಾಪರಯುಗದಲ್ಲಿ ವಿಶ್ವಕರ್ಣಶಿವಾಚಾರ್ಯರು ಮತ್ತು ಕಲಿಯುಗ ದಲ್ಲಿ ವಿಶ್ವಾರಾಧ್ಯ ಶಿವಾಚಾರ್ಯರು ಈ ಮಹಾಪೀಠದ ಅಧಿಪತಿಗಳಾಗುತ್ತ ಬಂದಿದ್ದಾರೆ. ಈ ಪರಂಪರೆಯ ದ್ವಾಪರಯುಗದ ಆಚಾರ್ಯರಾದ ವಿಶ್ವಕರ್ಣ ಭಗವತ್ಪಾದರು ಕಡುಕೋಪಿಯಾದ ದೂರ್ವಾಸನಿಗೆ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಆತನ ಕ್ರೋಧವನ್ನು ಶಮನಗೊಳಿಸಿದರು. ಅತ್ರಿ ಅನಸೂಯೆಯರ ಪವಿತ್ರಗರ್ಭದಲ್ಲಿ ಶಿವನ ವಿಶೇಷಾಂಶವೇ ದೂರ್ವಾಸನ ರೂಪದಲ್ಲಿ ಜನ್ಮತಾಳಿತು. ಕ್ರೋಧವೃತ್ತಿಯನ್ನು ಶಮನಗೊಳಿಸುವುದಕ್ಕಾಗಿ ತಂದೆತಾಯಿಗಳ ಆಜ್ಞೆಯಂತೆ ಮತ್ತು ನಾರದ ಮಹರ್ಷಿಯ ಸಲಹೆಯಂತೆ ಆತನು ಕಾಶೀ ಮಹಾಕ್ಷೇತ್ರದ ಕಾಮಾಖ್ಯ ಕುಂಡದ ಬಳಿ ಒಂದು ಶಿವಲಿಂಗ ವನ್ನು ಪ್ರತಿಷ್ಠಾಪಿಸಿ ಅದಕ್ಕೆ ಕಾಮೇಶ್ವರ ಎಂಬ ನಾಮಕರಣಮಾಡಿ ತಪಸ್ಸನ್ನಾಚರಿಸ ತೊಡಗಿದನು. ಕ್ರೋಧ ಶಮನಕ್ಕಾಗಿ ಅದೆಷ್ಟೋ ದಿವಸ ತಪಸ್ಸನ್ನಾಚರಿಸಿದರೂ, ಅಲ್ಲಿ ಅವನಿಗೆ ಶಿವನ ದರ್ಶನವಾಗಲಿಲ್ಲ, ಅದರಿಂದ ಕ್ಷುದ್ಧನಾದ ದೂರ್ವಾಸನು ತನ್ನ ಕಮಂಡಲದೊಳಗಿನ ಜಲವನ್ನು ತೆಗೆದುಕೊಂಡು ಭೂಮಿಗೆ ಅಪ್ಪಳಿಸಿದಾಗ ಭೂಮಿಯು ಬಿರಿದು ಅದರಿಂದ ಒಂದು ಶಿವಲಿಂಗವು ಉದ್ಭವಿಸುವುದು. ಆ ಶಿವಲಿಂಗದೊಳಗೆ ಶಿವನು ಪ್ರಕಟನಾಗಿ ದೂರ್ವಾಸನಿಗೆ ಹೇಳಿದ್ದೇನೆಂದರೆ ''ಎಲೈ ದೂರ್ವಾಸನೇ ! ಕೇವಲ ತಪಸ್ಸಿನಿಂದ ಕ್ರೋಧವು ಅದೆಂದಿಗೂ ಶಾಂತವಾಗಲಾರದು. ಕಾರಣ ಈ ಕಾಶೀ ಮಹಾಕ್ಷೇತ್ರದ ಜ್ಞಾನಸಿಂಹಾಸನದ ಅಧಿಪತಿಗಳಾದ ವಿಶ್ವಕರ್ಣಶಿವಾಚಾರ್ಯರ ಸಾನ್ನಿಧ್ಯಕ್ಕೆ ಹೋಗಿ ಅವರಿಂದ ಶಿವಾದ್ವೈತ ಜ್ಞಾನವನ್ನು ಪಡೆದಾಗ, ನೀನು ಕ್ರೋಧಮುಕ್ತನಾಗಬಲ್ಲೆ, ಕಾರಣ ಅಲ್ಲಿಗೆ ಹೋಗು'' ಎಂಬುದಾಗಿ ಆದೇಶಿಸಿದನು.

ಶಿವನ ಆದೇಶದ ಮೇರೆಗೆ ದೂರ್ವಾಸನು ಜಂಗಮವಾಟಿಕೆಯಲ್ಲಿರುವ ಜ್ಞಾನ ಸಿಂಹಾಸನಕ್ಕೆ ಬಂದು ಅದರ ಅಧಿಪತಿಗಳಾಗಿದ್ದ ವಿಶ್ವಕರ್ಣ ಭಗವತ್ಪಾದರಿಗೆ ಶರಣಾಗತರಾಗಿ ಶಿವನ ಆದೇಶವನ್ನು ಮತ್ತು ತನ್ನ ಸ್ಥಿತಿಯನ್ನು ಅರಿಕೆ ಮಾಡಿಕೊಂಡನು. ಆಗ ವಿಶ್ವಕರ್ಣ ಭಗವತ್ಪಾದರು ಅವನಿಗೆ ಶಿವದೀಕ್ಷೆಯನ್ನಿತ್ತು ''ಪಂಚವರ್ಣ ಮಹಾಸೂತ್ರ''ವನ್ನು ಉಪದೇಶಿಸಿ, ಆತನನ್ನು ಶಿವಾದ್ವೈತ ಜ್ಞಾನಿಯನ್ನಾಗಿ ಮಾಡಿ ಆತನ ಸಂಪೂರ್ಣವಾದ ಕ್ರೋಧವನ್ನು ಶಮನಗೊಳಿಸಿದರು. ಅಂದಿನಿಂದ ಶಾಂತನಾದ ದೂರ್ವಾಸ ಮಹರ್ಷಿಯು ಆ 'ಪಂಚವರ್ಣ ಮಹಾಸೂತ್ರಕ್ಕೆ ಭಾಷ್ಯವನ್ನು ಬರೆದು ತನ್ನ ಶಿಷ್ಯ–ಪ್ರಶಿಷ್ಯರ ಮುಖಾಂತರ ಶಿವಾದ್ವೈತ ಸಿದ್ಧಾಂತವನ್ನು ಪ್ರಚಾರಗೊಳಿಸಿದನು.

ಇಂತಹ ಅತ್ಯಂತ ಪ್ರಾಚೀನ ಪರಂಪರೆಯುಳ್ಳ ಈ ಜ್ಞಾನಸಿಂಹಾಸನಕ್ಕೆ ಕಲಿಯುಗ ದಲ್ಲಿ ಶ್ರೀ ಜಗದ್ಗುರು ವಿಶ್ವಾರಾಧ್ಯರನ್ನೇ ಮೊದಲು ಮಾಡಿಕೊಂಡು ಇಂದಿನವರೆಗೆ ಅನೇಕ ಜನ ಪೀಠಾಚಾರ್ಯರು ಆಗಿ ಹೋಗಿದ್ದಾರೆ. ಅವರೆಲ್ಲರೂ ಪರಮ ತಪಸ್ವಿಗಳೂ, ಶಿವಾದ್ವೈತ ಜ್ಞಾನಸಂಪನ್ನರೂ ಮತ್ತು ಕರುಣಾಹೃದಯಿಗಳು ಆಗಿದ್ದರು. ಈ ಪರಂಪರೆಯ ಪೀಠಾಚಾರ್ಯರಿಗೆ ಕ್ರಿ. ಶ. ೫೭೪ ರಲ್ಲಿ ಕಾಶೀ ನರೇಶನಾದ ಜಯನಂದದೇವನು ಭೂದಾನವನ್ನು ಮಾಡಿದ ದಾನ ಪತ್ರವು ಇಂದಿಗೂ ಶ್ರೀಪೀಠದಲ್ಲಿ ವಿರಾಜಮಾನ ವಾಗಿದೆ. ಅಂದು ರಾಜನು ಸಮರ್ಪಿಸಿದ ಆ ಭೂಮಿಯಲ್ಲಿ ಕ್ರಿ. ಶ. ೧೯೧೯ರಲ್ಲಿ ಮದನ ಮೋಹನ ಮಾಲವೀಯರವರು ಕಾಶೀ ಹಿಂದೂ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. ಅಂದಿನ ಪೀಠಾಧಿಪತಿಗಳಾಗಿದ್ದ ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಶ್ರೀಮಾಲವೀಯರವರು ವಿಶ್ವವಿದ್ಯಾಲಯ ಸ್ಥಾಪನೆಗಾಗಿ ಕಾಶೀ ನರೇಶರು ಪೀಠಕ್ಕೆ ಅರ್ಪಿಸಿದ ಭೂಮಿಯನ್ನು ಕೊಡಬೇಕೆಂದು ಕೇಳಿಕೊಂಡಾಗ ಶ್ರೀಮಹಾಸನ್ನಿಧಿಯವರು ಉದಾರವಾದ ಮನಸ್ಸಿನಿಂದ ಆ ಭೂಮಿಯನ್ನು ದಾನ ಮಾಡಿದ್ದಾರೆ. ಇಂದು ಆ ವಿಶ್ವವಿದ್ಯಾಲಯದಲ್ಲಿ ವಿಶ್ವದ ಮೂಲೆ ಮೂಲೆಗಳಿಂದ ಬಂದ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿರುವುದು ಜ್ಞಾನಪೀಠದ ಗೌರವವನ್ನು ಹೆಚ್ಚಿಸಿದಂತೆಯೇ. ಇಂತಹ ಜ್ಞಾನಪೀಠದಲ್ಲಿ ನೀವುಗಳೆಲ್ಲ ಆಧ್ಯಾತ್ಮಿಕ ಜ್ಞಾನಾರ್ಜನೆಯನ್ನು ಮಾಡುತ್ತಿರುವುದು ಒಂದು ಪುಣ್ಯವಿಶೇಷವೇ.

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರ ಸ್ಥಲದ ಬಗ್ಗೆ ನೀವುಗಳೆಲ್ಲ ಅನೇಕ ದಿನಗಳಿಂದ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಭಾವಾಗಮಸ್ಥಲದ ಕೆಲವೊಂದು ವಿಚಾರಗಳನ್ನು ತಿಳಿದು ಕೊಂಡವರಾಗಿದ್ದೀರಿ. ಇಂದು ಅದೇ ಸ್ಥಲದ ಅವಶಿಷ್ಟ ಭಾಗವನ್ನು ಕುರಿತು ಪರ್ಯಾಲೋಚಿಸೋಣ.

ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಶಿವಪ್ರೀತಿಗಾಗಿ ಭಾವಿಸಿ ಆಚರಿಸಿದರೆ ಸಂಗರಹಿತನಾಗುತ್ತಾನೆ ಎಂಬ ವಿಷಯವನ್ನು ನಿರೂಪಿಸಲೋಸುಗ ಪೂಜ್ಯಪಾದರು–

ಭಾವಯೇತ್ ಸರ್ವಕರ್ಮಾಣಿ ನಿತ್ಯನೈಮಿತ್ತಿಕಾನಿ ಚ ।
ಶಿವಪ್ರೀತಿಕರಾಣ್ಯೇವ ಸಂಗರಾಹಿತ್ಯಸಿದ್ಧಯೇ ॥

(ಸಿ. ಶಿ. ೧೬–೭೩)

ಹೀಗೆ ವರ್ಣಿಸಿದ್ದಾರೆ. ನಿತ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ಆಚರಿಸುವಾಗ ಮನಸ್ಸಿನಲ್ಲಿ ಬೇರಾವ ಪ್ರಯೋಜನೆಯ ಭಾವನೆಯನ್ನು ತಾಳದೆ ಶಿವಾರ್ಪಣ ಬುದ್ಧಿಯಿಂದ ಆಚರಿಸಿದರೆ ಆಚರಿಸುವ ವ್ಯಕ್ತಿಯು ಸಾಂಸಾರಿಕ ಬಂಧನದಿಂದ ಬದ್ಧಿತನಾಗಲಾರನು ಎಂಬುದು ಪೂಜ್ಯಪಾದರ ಆಶಯವಾಗಿದೆ.

'ಗಹನಾ ಕರ್ಮಣೋಗತಿಃ' ಎಂಬ ಉಕ್ತಿಗನುಸಾರವಾಗಿ ಕರ್ಮದ ಗತಿಯು ಅತ್ಯಂತ ರಹಸ್ಯಾತ್ಮಕವಾಗಿರುತ್ತದೆ. ಕರ್ಮಸೂತ್ರದಿಂದ ಕಟ್ಟಲ್ಪಟ್ಟ ಜೀವಿಯು ಯಾವಾಗ ಅವನ ಗತಿಯು ಏನಾಗುವುದೆಂಬುದು ಯಾರಿಗೂ ತಿಳಿದಿರುವುದಿಲ್ಲ. ಈ ಕರ್ಮ ಬಂಧನದಿಂದ ಬಿಡುಗಡೆಯನ್ನು ಹೊಂದಬೇಕಾಗಿದ್ದರೆ ತಾನು ಮಾಡ ಬೇಕಾಗಿರುವ ನಿತ್ಯ ನೈಮಿತ್ತಿಕ ಮುಂತಾದ ಕರ್ಮಗಳನ್ನು ಆಚರಿಸುವಾಗ ಮನದಲ್ಲಿ ಯಾವುದೇ ಪ್ರಕಾರದ ಅಪೇಕ್ಷೆಯನ್ನು ಇಡದೆ ಶಿವಸಂಪ್ರೀತಿಗಾಗಿ ಅರ್ಥಾತ್ ಶಿವಾರ್ಪಣ ಬುದ್ಧಿಯಿಂದ ಆಚರಿಸಿದರೆ ಅವನು ಸಂಸಾರ ಸಂಗದಿಂದ ಮುಕ್ತನಾಗುತ್ತಾನೆ. ಸಂಸಾರದ ಸಂಗವನ್ನು ಬಿಡಬೇಕಾದರೆ ಭಗವಂತನ ಸಂಗವನ್ನು ಮಾಡಬೇಕಾಗುವುದು.

ಕರ್ಮಗಳು ಸಂಗಹೇತುಗಳಾಗಿರುವುದರಿಂದ ಅವುಗಳನ್ನು ಆಚರಿಸಿಯೂ ಮನುಷ್ಯನು ಹೇಗೆ ನಿಸ್ಸಂಗಿಯಾಗಬಲ್ಲನು ? ಎಂಬ ಪ್ರಶ್ನೆಯು ಉದ್ಭವಿಸಿದಾಗ ಪೂಜ್ಯಪಾದರು–

ಶಿವೇ ನಿವೇಶ್ಯ ಸಕಲಂ ಕಾರ್ಯಾಕಾರ್ಯಂ ವಿವೇಕತಃ ।
ವರ್ತತೇ ಯೋ ಮಹಾಭಾಗಃ ಸ ಸಂಗರಹಿತೋ ಭವೇತ್ ॥

(ಸಿ. ಶಿ. ೧೬–೭೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ವಿವೇಕಿಯಾದ ವ್ಯಕ್ತಿಯು ಕಾರ್ಯ ಹಾಗೂ ಅಕಾರ್ಯದ ಎಲ್ಲ ಭಾರವನ್ನು ಶಿವನ ಮೇಲಿರಿಸಿ ಕರ್ಮಗಳನ್ನು ಮಾಡುತ್ತಿರುತ್ತಾನೆ. ಅವನು ಆ ಕರ್ಮಗಳ ಫಲಾಫಲಗಳಿಂದ ಸಂಬಂಧಿತನಾಗುವುದಿಲ್ಲ ಎಂಬುದು ಪೂಜ್ಯರ ಆಶಯವಾಗಿದೆ.

ಈ ಪ್ರಪಂಚದಲ್ಲಿದ್ದೂ, ಪುಣ್ಯಾಪುಣ್ಯಗಳನ್ನು ಮಾಡಿಯೂ, ಅವುಗಳಿಂದ ಮುಕ್ತನಾಗಿರುವ ಒಂದು ಕರ್ಮದ ಕಲೆಯನ್ನು ಪೂಜ್ಯರು ಇಲ್ಲಿ ತಿಳಿಸಿಕೊಟ್ಟಿದ್ದಾರೆ. ಯಾವಾತನು ಕರ್ತಾ, ಕಾರಯಿತಾ, ಕರ್ಮ ಹಾಗೂ ಅದರ ಫಲ ಇವೆಲ್ಲವುಗಳು ಶಿವಸ್ವರೂಪವೆಂದು ಭಾವಿಸಿ ವಿವೇಕಿಯಾಗಿ ಕರ್ಮಗಳನ್ನು ಮಾಡುತ್ತಾನೆಯೋ ಅವನು ಆ ಕರ್ಮದ ಫಲಗಳಿಂದ ಲಿಪ್ತನಾಗುವುದಿಲ್ಲ. ಸಂಪೂರ್ಣ ಶಿವಭಾವನೆಯಿಂದ ಕೂಡಿದವನಿಗೆ, ಕರ್ಮದಲೇಪವಾಗುವುದಿಲ್ಲ ವೆಂದರ್ಥ. ಯಾವ ವ್ಯಕ್ತಿಯಲ್ಲಿ 'ಅಹಂ ಕರ್ತಾ' ನಾನು ಕರ್ಮವನ್ನು ಮಾಡುವವನು ಎಂಬ ಭಾವನೆಯು ಪ್ರಾದುರ್ಭವಿಸುವುದೋ ಅವನು ಮಾತ್ರ ಕರ್ಮದ ಫಲಗಳಿಂದ ಲಿಪ್ತನಾಗುತ್ತಾನೆ. ಆ ಭಾವವಿಲ್ಲದವನಿಗೆ ಅವುಗಳ ಲೇಪವಾಗುವುದಿಲ್ಲ. ತುಳಸೀದಾಸರು ಜ್ಞಾನಿಯ ಈ ಅಲಿಪ್ತ ಸ್ಥಿತಿಯನ್ನು–

ತುಲಸೀ ಜಗಮೇಂಞೂ ರಹೋ ಜೋ ರಸನಾ ಮುಖಮಾಹಿ ।
ಖಾತೀ ಘೀ ಔರ ತೇಲ ನಿತ ಫಿರ್‌ಭೀ ಚಿಕನೀ ನಾಹಿ ॥

ಹೀಗೆ ವರ್ಣಿಸಿದ್ದಾರೆ. ನಮ್ಮ ಬಾಯಿಯೊಳಗಿನ ನಾಲಿಗೆಯು ದಿನಾಲೂ ಎಣ್ಣೆ–ತುಪ್ಪಗಳನ್ನು ತಿನ್ನುತ್ತಿದ್ದರೂ ಅದಕ್ಕೆ ಜಿಡ್ಡುತನವು ಹೇಗೆ ಅಂಟಿಕೊಳ್ಳುವುದಿಲ್ಲವೋ ಹಾಗೆ ಜ್ಞಾನಿಯಾದವನು ಕರ್ಮಗಳನ್ನು ಮಾಡಿಯೂ ಸಹ ಅಕರ್ತೃತ್ವ ಭಾವನೆ ಯುಳ್ಳವನಾಗಿ ರೋಣದರಿಂದ ಅವನಿಗೆ ಅದರ ಲೇಪವಾಗುವುದಿಲ್ಲ. ಶರೀರವು ಸಂಸಾರದಲ್ಲಿದ್ದರೂ ಮನವು ಅದರಿಂದ ಅಲಿಪ್ತವಾಗಿದ್ದರೆ ಇದುವೇ ಒಂದು ಜೀವನದ ಕಲೆಯು. ಈ ಕಲೆಯು ಯಾರಿಗೆ ಕರಗತವಾಗಿರುತ್ತದೆಯೋ ಅವರು ಸಂಸಾರದಲ್ಲಿದ್ದೂ ಇಲ್ಲದಂತೆ ಇರುತ್ತಾರೆ. ಜನಕನು ರಾಜನಾಗಿಯೂ, ಕೃಷ್ಣನು ಭೋಗಿಯಾಗಿಯೂ ಅಲಿಪ್ತರಾಗಿದ್ದರೆಂಬುದಕ್ಕೆ ಉದಾಹರಣೆಯಾಗಿದ್ದಾರೆ.

ಶಿವದರ್ಶನವಾಗದೇ ಸಂಸಾರದ ನಿಸ್ಸಂಗತೆಯು ಪ್ರಾಪ್ತವಾಗುವುದಿಲ್ಲವೆಂಬ ವಿಚಾರವನ್ನು ತಿಳಿಸಲೋಸುಗ ಪೂಜ್ಯರು ಪುನಃ–

ಆತ್ಮಾನಮಖಿಲಂ ವಸ್ತು ಶಿವಮಾನಂದಚಿನ್ಮಯಮ್ ।
ಏಕ ಭಾವೇನ ಸತತಂ ಸಂಪಶ್ಯನ್ನೇವ ಪಶ್ಯತಿ ॥

(ಸಿ. ಶಿ. ೧೬–೭೫)

ಈ ವಿಧವಾಗಿ ವಿವರಿಸಿದ್ದಾರೆ. ತನ್ನನ್ನು , ಸಂಪೂರ್ಣವಾದ ವಿಶ್ವವನ್ನು ಮತ್ತು ಚಿದಾನಂದ ರೂಪನಾದ ಶಿವನನ್ನು ಯಾರು ಏಕಭಾವದಿಂದ ಸದಾ ಭಾವಿಸುತ್ತಿರುತ್ತಾರೆಯೋ ಅವರೇ ಶಿವನನ್ನು ಕಾಣುತ್ತಾರೆ ಎಂಬುದು ಪೂಜ್ಯರ ಆಶಯವಾಗಿದೆ.

ಪರಮಾತ್ಮಸಾಕ್ಷಾತ್ಕಾರವು ಯಾರಿಗೆ ಉಂಟಾಗುತ್ತದೆಯೆಂದರೆ ಯಾರು ಜೀವ, ಶಿವ ಮತ್ತು ಜಗತ್ತುಗಳನ್ನು ಏಕರೂಪವಾಗಿ ಭಾವಿಸುತ್ತಾರೆಯೋ ಅವರಿಗೆ ಉಂಟಾಗುತ್ತದೆ ಎಂಬುದಾಗಿ ತಿಳಿದುಕೊಳ್ಳಬೇಕು. ಜೀವ, ಶಿವ ಮತ್ತು ಜಗತ್ತುಗಳು ಮೂರೂ ಬೇರೆ ಬೇರೆಯಾಗಿ ತೋರುತ್ತಿದ್ದರೂ ಮೂಲತಃ ಇವು ಒಂದೇ ಆಗಿರುತ್ತವೆ. ಒಬ್ಬನೇ ಆದ ಶಿವನು ಜೀವನಾಗಿಯೂ, ಜಗತ್ತಾಗಿಯೂ ಲೀಲೆಯನ್ನು ಮಾಡುತ್ತಿರುತ್ತಾನೆ. ಇದರ ರಹಸ್ಯವನ್ನರಿತ ಜ್ಞಾನಿಯು ಈ ಜಗತ್ತು ಶಿವರೂಪವಾಗಿದೆ ಶಿವನಿಗಿಂತಲೂ ಅನ್ಯವಾದುದು ಬೇರೊಂದಿಲ್ಲ, ನಾನೂ ಸಹ ಶಿವಸ್ವರೂಪನೇ ಆಗಿದ್ದೇನೆ ಎಂಬ ದಿವ್ಯ ಜ್ಞಾನವನ್ನು ಪಡೆದುಕೊಂಡಾಗ ಅವನಿಗೆ ಸರ್ವತ್ರ ಶಿವನ ಹೊರತಾಗಿ ಬೇರೊಂದು ವಸ್ತುವು ಕಾಣುವುದೇ ಇಲ್ಲ. ಹೀಗೆ ಕಾಣುವುದೇ ನಿಜವಾದ ಶಿವದೃಷ್ಟಿಯೆಂಬುದಾಗಿ ತಿಳಿದು ಕೊಳ್ಳಬೇಕು.

ಇಲ್ಲಿಯವರೆಗೆ ಈ ಭಾವಾಚಾರ ಸ್ಥಲದಲ್ಲಿ ಬರುವ ಅನೇಕ ವಿಷಯಗಳನ್ನು ನೀವೆಲ್ಲ ಶ್ರವಣ ಮಾಡಿದ್ದೀರಿ. ಶ್ರವಣ ಮಾಡಿದ ವಿಷಯವನ್ನೇ ಮನನಾದಿಗಳ ಮೂಲಕ ಅದನ್ನು ದೃಢಪಡಿಸಿಕೊಳ್ಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೫ ಆಗಷ್ಟ್ ೧೯೯೩
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಜ್ಞಾನಾಚಾರಸ್ಥಲ

ಸಿದ್ಧಾಂತ ಜ್ಞಾನಾಸಕ್ತರೇ !

ಶ್ರೀಕಾಶೀ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ತಪೋನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಕಾರ್ಯ ಕ್ರಮಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವುಗಳೆಲ್ಲ ದಿನಾಲೂ ಕ್ಷೇತ್ರ ಮಹಿಮೆಯನ್ನು ಆಲಿಸುತ್ತಿದ್ದೀರಿ. ಪ್ರಾಚೀನವಾದ ಈ ಕಾಶೀ ಕ್ಷೇತ್ರ ೨೫ ಕ್ರೋಶ ಅಂದರೆ (೫೦) ಐವತ್ತು ಮೈಲುಗಳಷ್ಟು ವಿಸ್ತೀರ್ಣವಾಗಿತ್ತು, ಈ ಕ್ಷೇತ್ರದ ಅಂಗ–ಅಂಗಗಳಲ್ಲಿ ಅನೇಕ ದೇವರುಗಳ ನಿವಾಸವಿದೆ. ಕಾಶಿಯ ರೋಮ ರೋಮಗಳಲ್ಲಿ ತೀರ್ಥಗಳ ನಿವಾಸವಿದೆ. ಮೂವತ್ತು ಮೂರು ಕೋಟಿ ದೇವತೆಗಳೆಲ್ಲ ಇಲ್ಲಿ ಬಂದು ನಿವಾಸಗೈದಿರುವುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತಿವೆ. ಹೀಗೆ ದೇವತೆಗಳ ಹಾಗೂ ತೀರ್ಥಗಳ ನಿವಾಸವಾದ ಈ ಕ್ಷೇತ್ರಕ್ಕೆ ಬಂದ ಭಕ್ತಾದಿಗಳು ಇಲ್ಲಿರುವ ತೀರ್ಥಸ್ನಾನ ಮತ್ತು ದೇವದರ್ಶನದ ಉದ್ದೇಶದಿಂದ ಕಾಶಿಯನ್ನು ಪರಿಕ್ರಮ ಮಾಡುವ ಒಂದು ಯಾತ್ರೆಯು ಇಲ್ಲಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿ ಬಂದಿದೆ. ಅದುವೇ ಪಂಚಕ್ರೋಶಿ ಯಾತ್ರೆಯು. ಒಂದು ದಿವಸಕ್ಕೆ ಐದು ಕ್ರೋಶ (೫ ಕೋಸ್) ಅಂದರೆ ಹತ್ತು ಮೈಲಿನ ಪ್ರಕಾರ ಐದು ದಿನಗಳಲ್ಲಿ ಈ ಯಾತ್ರೆಯು ಪೂರ್ಣಗೊಳ್ಳುವುದು. ಅಂತೆಯೇ ಇದಕ್ಕೆ ಪಂಚಕ್ರೋಶೀ ಯಾತ್ರೆಯೆಂದು ಕರೆಯುತ್ತಾರೆ. ಈ ಯಾತ್ರೆಯನ್ನು ಒಂದು ದಿನ, ಎರಡು ದಿನ, ಮೂರು ದಿನ, ನಾಲ್ಕು ದಿನ, ಐದು ದಿನ ಮತ್ತು ಏಳು ದಿನಗಳಲ್ಲಿ ಪೂರ್ಣ ಗೊಳಿಸುವ ಒಂದು ವಿಧಾನವು ರೂಢಿಯಲ್ಲಿದೆ. ಇವುಗಳಲ್ಲಿ ಐದು ದಿನಗಳ ಯಾತ್ರೆಯೇ ಹೆಚ್ಚು ಪ್ರಚಲಿತದಲ್ಲಿ ಇದೆ.

ಶ್ರೀ ಕಾಶೀ ಮಹಾಕ್ಷೇತ್ರದಲ್ಲಿ ಪ್ರಮುಖ ಮಂದಿರವೆಂದರೆ ಭಗವಾನ್ ವಿಶ್ವೇಶ್ವರ ಮಂದಿರವೇ. ಅದರ ಜೊತೆಗೆ ಓಂಕಾರೇಶ್ವರ, ತ್ರಿಲೋಚನೇಶ್ವರ, ಕೇದಾರೇಶ್ವರ ಮತ್ತು ಮಹಾಮೃತ್ಯುಂಜಯ ಮೊದಲಾದ ದೇವ ಮಂದಿರಗಳು ಸುಪ್ರಸಿದ್ಧವಾಗಿವೆ. ಪಾಪ ವಿಮೋಚನಿಯಾದ ಗಂಗಾನದಿಯ ಪಶ್ಚಿಮ ದಂಡೆಯಲ್ಲಿ ಸ್ಥಾಪಿಸಲ್ಪಟ್ಟ ಈ ನಗರದ ನದಿಯ ದಂಡೆಗೆಲ್ಲ ಅನೇಕ ಘಾಟುಗಳು ಕಟ್ಟಲ್ಪಟ್ಟಿರುತ್ತವೆ. ಇವುಗಳಲ್ಲಿ ದಶಾಶ್ವಮೇಧ, ಮಣಿಕರ್ಣಿಕಾ, ಪಂಚಗಂಗಾ, ಕೇದಾರೇಶ್ವರ ಮತ್ತು ಹರಿಶ್ಚಂದ್ರ ಘಾಟುಗಳು ಸುಪ್ರಸಿದ್ಧವಾದವುಗಳು. ಈ ಎಲ್ಲಾ ಘಾಟುಗಳಲ್ಲಿ ಗಂಗಾನದಿಯ ಜಲವೇ ಇದ್ದರೂ ಆಯಾ ಘಾಟುಗಳಲ್ಲಿ ಸ್ನಾನಮಾಡಿದ ಪುಣ್ಯವಿಶೇಷವು ಭಿನ್ನ ಭಿನ್ನವಾಗಿದೆ. ಬೇರೆ ಬೇರೆ ಪರ್ವಗಳಲ್ಲಿ ಬೇರೆ ಬೇರೆ ಘಾಟುಗಳಲ್ಲಿ ಸ್ನಾನಮಾಡುವ ಪರಂಪರೆಯು ರೂಢಿಯಲ್ಲಿದೆ. ಇಲ್ಲಿರುವ ತೀರ್ಥಗಳಲ್ಲಿ ಮಣಿಕರ್ಣಿಕಾ ತೀರ್ಥ, ಪಿಶಾಚತೀರ್ಥ ಮತ್ತು ಕಪಾಲ

ಮೋಚನ ತೀರ್ಥಗಳು ಪ್ರಮುಖವಾದವುಗಳು. ಕಾಶೀ ಮಹಾಕ್ಷೇತ್ರದಲ್ಲಿ ಗಂಗಾನದಿಯ ಆಗಮನದ ಪೂರ್ವದಲ್ಲಿ ಇಲ್ಲಿರುವ ಮಣಿಕರ್ಣಿಕಾತೀರ್ಥದಲ್ಲಿಯೇ ಭಕ್ತಾದಿಗಳು ಸ್ನಾನಮಾಡುತ್ತಿದ್ದರು. ವಿಷ್ಣು ಭಗವಂತನು ಈ ತೀರ್ಥದ ದಡದ ಮೇಲೆ ನಿಂತುಕೊಂಡು ಅತಿ ಘೋರವಾದ ತಪಸ್ಸನ್ನು ಅನೇಕ ವರ್ಷಗಳವರೆಗೆ ಆಚರಿಸಿದ್ದನು. ಈತನ ತಪಸ್ಸಿಗೆ ಪ್ರಸನ್ನನಾದ ಶಿವನು ಅಲ್ಲಿ ಪ್ರಕಟನಾಗಿ ಸಂತೋಷದ ಭರದಲ್ಲಿ ತನ್ನ ಮಸ್ತಕವನ್ನು ಅಲ್ಲಾಡಿಸಿದ ಸಂದರ್ಭದಲ್ಲಿ ಆತನ ಕರ್ಣದೊಳಗಿನ ರುದ್ರಾಕ್ಷ ಮಣಿಗಳು ಆ ಕುಂಡದಲ್ಲಿ ಬಿದ್ದ ಕಾರಣ ಅದಕ್ಕೆ ಮಣಿಕರ್ಣಿಕಾ ಕುಂಡವೆಂದು ಕರೆಯುತ್ತಾರೆ. ಆಗ ಪ್ರಸನ್ನನಾದ ಶಿವನು, ವಿಷ್ಣು ಭಗವಂತನಿಗೆ ಜಗದ್‌ರಕ್ಷಣೆಗಾಗಿ ಸುದರ್ಶನ ಚಕ್ರವನ್ನು ಅನುಗ್ರಹಿಸಿದನೆಂಬ ಇತಿಹಾಸವಿದೆ. ವಿಷ್ಣು ಭಗವಂತನು ನಿಂತು ತಪಸ್ಸು ಮಾಡಿದ ಆ ಸ್ಥಾನದಲ್ಲಿ ಆತನ ಪಾದ ಚಿಹ್ನೆಗಳು ಮೂಡಿರುವದನ್ನು ಈಗಲೂ ಕಾಣಬಹುದು. ಆ ಸ್ಥಾನದಲ್ಲಿಯೇ ಶವಗಳಿಗೆ ಅಗ್ನಿ ಸಂಸ್ಕಾರವನ್ನು ಕೊಡುತ್ತಾರೆ. ಅಂತೆಯೇ ಮಣಿಕರ್ಣಿಕಾ ಘಾಟು ಕಾಶಿಯ ಒಂದು ಪ್ರಮುಖವಾದ ಸ್ಮಶಾನ ಸ್ಥಾನವು. ಇಲ್ಲಿ ಚಿತಾಗ್ನಿಯು ಅಖಂಡವಾಗಿ ಉರಿಯುತ್ತಿರುತ್ತದೆ. ಇದರಂತೆ ಹರಿಶ್ಚಂದ್ರ ಘಾಟೂ ಸಹ ಸ್ಮಶಾನಭೂಮಿಯೆಂಬುದಾಗಿ ಸುಪ್ರಸಿದ್ಧವಾಗಿದೆ. ಕಾಶಿಯಲ್ಲಿ ಅಥವಾ ಕಾಶಿಯ ಸುತ್ತಲಿನ ಪರಿಸರದಲ್ಲಿ ಶರೀರ ಬಿಟ್ಟ ಜೀವಿಗಳ ದೇಹಗಳ ಅಂತ್ಯಕ್ರಿಯೆಯನ್ನು ಇವೆರಡೂ ಸ್ಮಶಾನಗಳಲ್ಲಿ ನೆರವೇರಿಸುತ್ತಾರೆ.

ಕಾಶಿಯಲ್ಲಿರುವ ಪಿಶಾಚಮೋಚನ ತೀರ್ಥದಲ್ಲಿ ಸ್ನಾನಮಾಡಿ ತರ್ಪಣ ಶ್ರಾದ್ಧಾದಿಗಳನ್ನು ಮಾಡಿದರೆ ಆ ವ್ಯಕ್ತಿಯ ಪಿತರು ಅರ್ಥಾತ್ ಪೂರ್ವಜರು ಪಿಶಾಚಯೋನಿಯಲ್ಲಿದ್ದರೂ ಅವರಿಗೆ ಅದರಿಂದ ಮುಕ್ತಿದೊರೆಯುವುದೆಂಬುದಾಗಿ ಪ್ರತಿಪಾದಿಸಲಾಗಿದೆ. ಇನ್ನು ಇಲ್ಲಿರುವ ಕಪಾಲ ಮೋಚನ ತೀರ್ಥದಲ್ಲಿ ಸ್ನಾನ ಮಾಡಿದಾಗ ಬ್ರಹ್ಮಹತ್ಯಾ ಮೊದಲಾದ ಬಹು ದೊಡ್ಡ ದೊಡ್ಡ ಪಾಪಗಳಿಂದ ಜೀವಾತ್ಮನು ಮುಕ್ತಿಯನ್ನು ಪಡೆಯುತ್ತಾನೆ.

ಶ್ರೀಕಾಶೀ ಮಹಾಕ್ಷೇತ್ರವು ಮೂರು–ನಾಲ್ಕು ಸಾವಿರ ವರ್ಷಕ್ಕಿಂತಲೂ ಅತಿ ಪ್ರಾಚೀನವಾದ ನಗರವೆಂಬುದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಇಷ್ಟು ವರ್ಷಗಳಿಂದ ಅಖಂಡ ಪರಂಪರೆಯನ್ನು ಹೊಂದಿದ ವಿಶ್ವದಲ್ಲಿಯೇ ಅತಿ ಪುರಾತನವಾದ ನಗರವೆಂದರೆ ಕಾಶೀ ಕ್ಷೇತ್ರವೇ ಆಗಿದೆ. ಅತಿ ಪ್ರಾಚೀನಕಾಲದಲ್ಲಿ ದಿವೋದಾಸನೆಂಬ ರಾಜನು ಈ ಕಾಶೀಕ್ಷೇತ್ರ ಹಾಗೂ ಸುತ್ತಮುತ್ತಲಿನ ಭೂಪ್ರದೇಶವನ್ನು ಆಳುತ್ತಿದ್ದನೆಂದು ಮಹಾಭಾರತದ ಅನುಶಾಸನ ಪರ್ವದಿಂದ ತಿಳಿದುಬರುತ್ತದೆ. ಇವನೊಬ್ಬ ಬಹುದೊಡ್ಡ ಆಯುರ್ವೇದ ಪಂಡಿತನಿದ್ದನು. ಇವನಿಗೆ ಎರಡನೆಯ ಧನ್ವಂತರಿಯೆಂಬುದಾಗಿ ಕರೆಯುತ್ತಿದ್ದರು. ಕಾಶೀ ರಾಜರ ಪರಂಪರೆಯು ಇಂದಿಗೂ ಅಕ್ಷುಣ್ಣವಾಗಿಯೇ ಇದೆ.

ಈ ಮಹಾಕ್ಷೇತ್ರದಲ್ಲಿ ವೀರಶೈವ, ದಶನಾಮೀ, ಗೋರಖಪಂಥೀ, ಶಂಕರ, ರಾಮಾನುಜ, ನಿಂಬಾರ್ಕ ಮಾಧ್ವ, ಗೌಡೀಯ, ರಾಮಾನಂದೀ, ಕಬೀರಪಂಥೀ, ಗರೀಬದಾಸೀ, ದಾದೂ ಪಂಥೀ, ಪೀಸಾಪಂಥೀ, ಸ್ವಾಮಿನಾರಾಯಣ, ನಿರ್ಮಲ,

ಉದಾಸೀನ, ಸಖೀಸಂಪ್ರದಾಯ, ಆರ್ಯಸಮಾಜೀ, ಅವಧೂತ, ಹರಿಹರ ಸಂಪ್ರದಾಯ, ಶೀಖ, ಜೈನ, ಬೌದ್ಧ ಮೊದಲಾದ ವಿಭಿನ್ನ ಧರ್ಮ ಸಂಪ್ರದಾಯಗಳ ಮೂರು ನೂರಕ್ಕಿಂತಲೂ ಹೆಚ್ಚು ಮಠಗಳು ಇರುತ್ತವೆ. ಇದೂ ಅಲ್ಲದೆ ಇಲ್ಲಿ ಅಂದಾಜು ಹದಿನೈದುನೂರ (೧೫೦೦)ಕ್ಕಿಂತಲೂ ಹೆಚ್ಚು ಮಂದಿರಗಳಿವೆ. ನಮ್ಮ ದೇಶದ ಬೇರೆ ಊರುಗಳೊಂದಿಗೆ ತುಲನೆಯನ್ನು ಮಾಡಿದಾಗ ಎಲ್ಲಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಸನ್ಯಾಸಿಗಳು, ಸಾಧುಸಂತರು ಮತ್ತು ಯೋಗಿಪುಂಗವರು ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ.

ಇಲ್ಲಿರುವ ಮಠಗಳಲ್ಲಿ ಅತ್ಯಂತ ಪುರಾತನವಾದ ಮಠವೆಂದರೆ ಶ್ರೀಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ ಜಂಗಮವಾಡಿ ಮಹಾಮಠವೇ ಆಗಿದೆ. ಈ ಜ್ಞಾನಪೀಠದ ಕಲಿಯುಗದ ಆಚಾರ್ಯರಾದ ಶ್ರೀಜಗದ್ಗುರು ವಿಶ್ವಾರಾಧ್ಯರು ಹನ್ನೊಂದುನೂರು ವರ್ಷಗಳವರೆಗೆ ಇದ್ದು, ಅನೇಕ ಲೀಲೆಗಳನ್ನು ಮಾಡಿ ಉತ್ತರ ಪ್ರದೇಶದಲ್ಲಿ ವೀರಶೈವ ಧರ್ಮ ತತ್ತ್ವಗಳನ್ನು ಪ್ರತಿಷ್ಠಾಪಿಸಿ ಪ್ರಸಾರಗೊಳಿಸಿದರು. ನಂತರ ತಮ್ಮ ಶಿಷ್ಯನಾದ ಮಲ್ಲಿಕಾರ್ಜುನ ಶಿವಾಚಾರ್ಯರೆಂಬವರಿಗೆ ಜ್ಞಾನಪೀಠದ ಅಧಿಕಾರವನ್ನು ವಹಿಸಿಕೊಟ್ಟು ಅವರು ಪುನಃ ವಿಶ್ವೇಶ್ವರ ಜ್ಯೋತಿರ್ಲಿಂಗದಲ್ಲಿಯೇ ವಿಲೀನರಾದರು. ಪೀಠಾಧಿಕಾರವನ್ನು ವಹಿಸಿಕೊಂಡ ಶ್ರೀಜಗದ್ಗುರು ಮಲ್ಲಿಕಾರ್ಜುನ ಭಗವತ್ಪಾದರು ತಮ್ಮ ಶಿವಯೋಗಸಾಮರ್ಥ್ಯದಿಂದ ಮುನ್ನೂರಾ ಹನ್ನೊಂದು (೩೧೧) ವರ್ಷಗಳವರೆಗೆ ಪೀಠಾಧ್ಯಕ್ಷರಾಗಿದ್ದು ಕೊನೆಗೆ ಸಜೀವ ಸಮಾಧಿಯನ್ನು ಹೊಂದಿದ್ದಾರೆ. ಅವರ ಆ ಸಮಾಧಿಯೇ ಶ್ರೀ ಜಂಗಮವಾಡಿ ಮಹಾಮಠದ ಕರ್ತೃಗದ್ದಿಗೆಯಾಗಿ ಇಂದಿಗೂ ಪೂಜೆಗೊಳ್ಳುತ್ತಲಿದೆ.

ಇವರ ನಂತರ ಈ ಪೀಠಪರಂಪರೆಯಲ್ಲಿ ಬಂದ ಎಲ್ಲ ಜಗದ್ಗುರುಗಳಿಗೆ ಮಲ್ಲಿಕಾರ್ಜುನ ಶಿವಾಚಾರ್ಯರೆಂಬ ನಾಮಾಂಕಿತವನ್ನು ಮಾಡುವ ಪರಂಪರೆಯು ರೂಢಿಯಲ್ಲಿ ಬಂದಿದೆ. ಈ ಪೀಠ ಪರಂಪರೆಯ ಐವತ್ತೊಂದನೆಯ (೫೧)ನೇ ಪೀಠಾಧಿಪತಿಗಳ ಕಾಲದಲ್ಲಿ ಕಾಶೀ ನರೇಶನಾದ ಜಯನಂದದೇವನು ಭೂದಾನವನ್ನು ಮಾಡಿದಂತೆ, ನೇಪಾಳದ ಅರಸನಾದ ವಿಶ್ವಮಲ್ಲನೂ ಸಹ ಕ್ರಿ.ಶ. ೬೩೫ರಲ್ಲಿ ನೇಪಾಳದಲ್ಲಿರುವ ಕಾಶೀ ಪೀಠದ ಜಂಗಮ ಮಠಕ್ಕೆ ಭೂದಾನವನ್ನು ಮಾಡಿದ್ದಾನೆ. ನೇಪಾಳ ದೇಶದ ಅತಿ ಪ್ರಾಚೀನವಾದ ಭಕ್ತಪುರದಲ್ಲಿ ಆ ಮಠ ಹಾಗೂ ಶಿಲಾಶಾಸನಗಳು ಇಂದಿಗೂ ಉಪಲಬ್ಧವಾಗಿವೆ. ಈ ಕಾಶೀ ಮಹಾಪೀಠಕ್ಕೆ ಕೊಡಗು, ಕೆಳದಿ, ಮೈಸೂರು ಮೊದಲಾದ ಕರ್ನಾಟಕದ ರಾಜರುಗಳು ದಾನ ಮಾಡಿದ್ದಲ್ಲದೆ, ಮಧ್ಯ ಪ್ರದೇಶದ ರೀವಾ ಮತ್ತು ಮೈಹರಗಳ ರಾಜರುಗಳು ದಾನ ಮಾಡಿದ ಉಲ್ಲೇಖಗಳಿವೆ. ಇದೇ ಪ್ರಕಾರ ಮೊಗಲ ಶಾಸಕರಾದ ಹುಮಾಯೂನ, ಅಕಬರ, ಜಹಾಂಗೀರ, ಶಹಾಜಹಾನ್, ಔರಂಗಜೇಬ ಮತ್ತು ಮಹಮ್ಮದ ಶಹಾ ಮೊದಲಾದ ಚಕ್ರವರ್ತಿಗಳು ಕ್ರಿ.ಶ. ೧೫೩೦ ರಿಂದ ೧೯೭೮ ರ ವರೆಗೆ ಕೊಡಲ್ಪಟ್ಟ ಅನೇಕ ಫರ್ಮಾನ್ (ದಾನಪತ್ರ)ಗಳು ಶ್ರೀ ಪೀಠದಲ್ಲಿ ಉಪಲಬ್ಧಿ ಇವೆ. ಹೀಗೆ ಹಿಂದೂ ಹಾಗೂ ಮುಸ್ಲಿಂ ಚಕ್ರವರ್ತಿಗಳಿಂದ ಮನ್ನಣೆಯನ್ನು ಪಡೆದ ಕಾಶೀ ಮಹಾಕ್ಷೇತ್ರದಲ್ಲಿ ಗೌರವಾನ್ವಿತವೂ, ಸರ್ವರ ಶ್ರದ್ಧಾ ಸ್ಥಾನವೂ ಆದ ಈ ಜಂಗಮವಾಡಿ

ಮಹಾಮಠದಲ್ಲಿ ನೀವುಗಳೆಲ್ಲ ಒಂದು ತಿಂಗಳವರೆಗೆ ನಿವಾಸಗೈದು ಇಲ್ಲಿಯ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಿದ್ದೀರಿ.

ವೀರಶೈವರಿಗೆ ಶ್ರೀ ಕಾಶೀಕ್ಷೇತ್ರವು ಕೇವಲ ದೇವಕ್ಷೇತ್ರವಾಗಿರದೆ ಒಂದು ಗುರು ಕ್ಷೇತ್ರವೂ ಆಗಿದೆ. ಇಂಥ ಈ ಗುರುಕ್ಷೇತ್ರವಾದ ಜಂಗಮವಾಡಿ ಮಹಾಮಠದಲ್ಲಿ ಶ್ರೀ ಸಿದ್ಧಾಂತಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಮಾಹೇಶ್ವರಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಲಿಸುತ್ತ ಬಂದಿದ್ದೀರಿ. ಇಂದು ಈ ಸ್ಥಲದಕೊನೆಯದಾದ ಜ್ಞಾನಾಚಾರ ಸ್ಥಲದ ಬಗ್ಗೆ ಪರ್ಯಾಲೋಚಿಸೋಣ. ಧರ್ಮಾಚಾರ ಹಾಗೂ ಭಾವಾ ಚಾರಗಳು ಮನುಷ್ಯನ ಆಧ್ಯಾತ್ಮಿಕ ಜೀವನಕ್ಕೆ ಎಷ್ಟು ಅವಶ್ಯಕವಾದವುಗಳೋ ಜ್ಞಾನವೂ ಸಹ ಅಷ್ಟೇ ಅವಶ್ಯಕವಾಗುತ್ತದೆ. ಅಂತಹ ಜ್ಞಾನದ ಸ್ವರೂಪವನ್ನು ತಿಳಿಸುವ ಸ್ಥಲವೇ ಜ್ಞಾನಾಚಾರ ಸ್ಥಲವು. ಅದನ್ನೇ ಪೂಜ್ಯಪಾದರು–

ಅಸ್ಯ ಜ್ಞಾನಸಮಾಚಾರೋ ಯೋಗಿನಃ ಸರ್ವದೇಹಿನಾಮ್ ॥
ಜ್ಞಾನಾಚಾರೋ ಯದುಕ್ತೋಽಯಂ ಜ್ಞಾನಾಚಾರಃ ಸ ಕಥ್ಯತೇ ॥

(ಸ.ಶಿ. ೧೬–೭೬)

ಈ ತೆರನಾಗಿ ಉಪದೇಶಿಸಿದ್ದಾರೆ. ಭಾವಾಚಾರ ಸಂಪನ್ನನಾದ ಶಿವಯೋಗಿಯಲ್ಲಿ ಉಂಟಾಗಿರುವ ಜ್ಞಾನವು ಎಲ್ಲರಿಗೂ ಪ್ರಾಪ್ತಿಮಾಡಿಕೊಳ್ಳಲು ಯೋಗ್ಯವಾಗಿರೋಣದ ರಿಂದ ಅದನ್ನು ತಿಳಿಸುವ ಸ್ಥಲವೇ ಜ್ಞಾನಾಚಾರ ಎಂಬುದಾಗಿ ಹೇಳಲ್ಪಡುತ್ತದೆ.

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿವಚನದಂತೆ ಪರಶಿವ ಬ್ರಹ್ಮವು ಸದ್ರೂಪವೂ, ಚಿದ್ರೂಪವೂ ಮತ್ತು ಆನಂದ ರೂಪವೂ ಆಗಿರುತ್ತದೆ. ಅದನ್ನು ಪಡೆಯಬೇಕಾದರೆ ಅದರ ಜ್ಞಾನವನ್ನು ಮಾಡಿಕೊಳ್ಳಬೇಕಾಗುತ್ತದೆ. ಇಂತಹ ಜ್ಞಾನವು ಸರ್ವರಿಗೂ ಆವಶ್ಯಕವಾಗಿರೋಣದರಿಂದ ಅದರ ಸ್ವರೂಪವನ್ನು ಪೂಜ್ಯರು–

ಶಿವಾದ್ವೈತಪರಂ ಜ್ಞಾನಂ ಜ್ಞಾನಮಿತ್ಯುಚ್ಯತೇ ಬುಧೈಃ।
ಸಿದ್ಧೇನ ವಾ ಪ್ರಾಪ್ತಸಿದ್ಧೇನ ಫಲಂ ಜ್ಞಾನಾಂತರೇಣ ಕಿಮ್ ? ॥
ನಿರ್ಮಲಂ ಹಿ ಶಿವಜ್ಞಾನಂ ನಿಶ್ರೇಯಸಕರಂ ಪರಮ್।
ರಾಗದ್ವೇಷಾದಿಕಲುಷಂ ಭೂಯಃ ಸಂಸೃತಿಕಾರಣಮ್॥

(ಸಿ.ಶಿ.೧೬, ೭೭–೭೮)

ಹೀಗೆ ವಿವರಿಸಿದ್ದಾರೆ. ಶಿವಾದ್ವೈತ ಜ್ಞಾನವೇ ಜ್ಞಾನ ಎಂಬುದಾಗಿ ಜ್ಞಾನಿಗಳು ಕರೆದಿದ್ದಾರೆ. ಆ ಜ್ಞಾನವು ಪ್ರಾಪ್ತವಾದ ನಂತರ ಬೇರೊಂದು ಜ್ಞಾನವು ಪ್ರಾಪ್ತವಾಗಲಿ ಅಥವಾ ಆಗದೇ ಇರಲಿ ಅದರಿಂದ ಯಾವ ಪ್ರಯೋಜನವು ಇರುವುದಿಲ್ಲ. ಶಿವಾದ್ವೈತ ಜ್ಞಾನವು ನಿರ್ಮಲವಾದುದಾಗಿದೆ. ಅಂತೆಯೇ ಅದರಿಂದ ಸರ್ವೋತ್ಕೃಷ್ಟವಾದ ಮೋಕ್ಷವು ಪ್ರಾಪ್ತವಾಗುವುದು. ಅದಕ್ಕಿಂತಲೂ ಭಿನ್ನವಾದ ಲೌಕಿಕವಾದ ಜ್ಞಾನವು ಯಾವುದೇ ಇದ್ದರೂ ಅದು ರಾಗ–ದ್ವೇಷಾದಿಗಳಿಂದ ಕಲುಷಿತವಾಗಿರೋಣದರಿಂದ ಅದುವೇ ಪುನಃ ಸಂಸಾರಕ್ಕೆ ಕಾರಣೀಭೂತವಾಗಿರುತ್ತದೆ ಎಂಬುದು ಪೂಜ್ಯರ ಆಶಯವಾಗಿದೆ.

ಪ್ರತಿಯೊಬ್ಬ ವ್ಯಕ್ತಿಯಲ್ಲಿ ಒಂದಿಲ್ಲೊಂದು ವಿಧವಾದ ಜ್ಞಾನವು ಇದ್ದೇ ಇರುತ್ತದೆ. ಆದರೆ ಯಾವ ಜ್ಞಾನದಿಂದ ಕೇವಲ ಹೊಟ್ಟೆ–ಬಟ್ಟೆಗಳ ವ್ಯವಸ್ಥೆಯಾಗುತ್ತದೆಯೋ ಅದಕ್ಕೆ ನಿಜವಾದ ಜ್ಞಾನವೆಂದು ಕರೆಯಲಾಗುವುದಿಲ್ಲ. ಇನ್ನು ಯಾವ ಜ್ಞಾನದಿಂದ ಜೀವಾತ್ಮನು ಸಂಸಾರದ ಪಾಶಗಳಿಂದ ಮುಕ್ತನಾಗಿ ಮುಕ್ತಿಯನ್ನು ಪಡೆಯುವನೋ, ಆ ಶಿವಾದ್ವೈತ ಜ್ಞಾನವೇ ನಿಜವಾದ ಜ್ಞಾನವೆಂಬುದು ಜ್ಞಾನಿಗಳ ಅಭಿಮತವಾಗಿರುತ್ತದೆ. ಈ ಜ್ಞಾನವೊಂದನ್ನು ಉಳಿದು ಗಣಿತ, ವಿಜ್ಞಾನ ಹಾಗೂ ಅನೇಕ ಭಾಷೆಗಳ ಪಾಂಡಿತ್ಯವನ್ನು ಪಡೆದಿದ್ದಾಗಲೂ ಅವುಗಳು ಪ್ರಯೋಜನಕಾರಿಗಳಾಗಲಾರವು.

ಒಂದಾನೊಂದು ಸಮಯದಲ್ಲಿ ಸಕಲಶಾಸ್ತ್ರ ಪಾರಂಗತನಾದ ಓರ್ವ ಪಂಡಿತನು ಪಾದಯಾತ್ರೆಯನ್ನು ಮಾಡುತ್ತ ಒಂದು ನದೀ ದಂಡೆಗೆ ಬಂದನು. ಮಳೆಗಾಲದ ಸಮಯ. ನದಿ ತುಂಬಿ ಹರಿಯುತ್ತಿತ್ತು. ಅದರಿಂದ ದಾಟಿ ಹೋಗಲೋಸುಗ ಅಲ್ಲಿರುವ ನಾವಿಕನ ಬಳಿಹೋಗಿ ಆಚೆಯ ದಡಕ್ಕೆ ಹೋಗುವ ವಿಚಾರವನ್ನು ತಿಳಿಸಿದನು. ನಾವಿಕನು ಅದಕ್ಕೆ ಒಪ್ಪಿಕೊಂಡು ಪಂಡಿತನನ್ನು ತನ್ನ ನೌಕೆಯಲ್ಲಿ ಕೂಡ್ರಿಸಿಕೊಂಡು ಪ್ರಯಾಣ ಹೊರಟನು. ನೌಕೆಯು ಸಾಗುತ್ತಿರುವಾಗ ಪಂಡಿತನು ಅಂಬಿಗನನ್ನು ಉದ್ದೇಶಿಸಿ ನೀನು ವ್ಯಾಕರಣ ಶಾಸ್ತ್ರವನ್ನು ಓದಿರುವಿಯಾ? ಎಂಬುದಾಗಿ ಪ್ರಶ್ನಿಸಿದನು.

ನಾವಿಕನು :–ಇಲ್ಲ ಪಂಡಿತರೆ ! ನಾನು ಅದನ್ನು ಓದಿಲ್ಲ.

ಪಂಡಿತಃ– ಹಾಗಾದರೆ ಸಾಹಿತ್ಯವನ್ನೇನಾದರೂ ಓದಿರುವೆಯಾ ?

ನಾವಿಕಃ– ಇಲ್ಲ ಅದನ್ನೂ ಓದಿಲ್ಲ.

ಪಂಡಿತ :– ದರ್ಶನಶಾಸ್ತ್ರವನ್ನೇನಾದರೂ ಓದಿರುವೆಯಾ ?

ನಾವಿಕ :– ಇಲ್ಲ ಗುರುಗಳೇ ! ನಾನು ಏನನ್ನೂ ಓದಿಯೇ ಇಲ್ಲ.

ಪಂಡಿತ :– ಹಾಗಾದರೆ ನಿನ್ನ ಅರ್ಧ ಜೀವನ ವ್ಯರ್ಥವಾಗಿ ಹೋಯಿತು.

ಈ ರೀತಿಯಾಗಿ ಇವರೀರ್ವರಲ್ಲಿ ಸಂಭಾಷಣೆ ನಡೆಯುರುತ್ತಿರುವಾಗಲೇ ಬಿರುಗಾಳಿಯು ಪ್ರಾರಂಭವಾಗಿ ನಾವು ಅಲ್ಲೋಲ–ಕಲ್ಲೋಲವಾಗತೊಡಗಿತು. ಇನ್ನೇನು ನಾವಿನಿಂದ ಆ ದಡವನ್ನು ಸೇರುವುದು ಅಸಾಧ್ಯವೆಂಬುದು ನಾವಿಕನಿಗೆ ಖಚಿತವಾದಾಗ ಅವನು ಪಂಡಿತನನ್ನುದ್ದೇಶಿಸಿ ನಿಮಗೆ ಈಜಲು ಬರುತ್ತದೆಯಾ? ಎಂಬುದಾಗಿ ಪ್ರಶ್ನಿಸಿದನು. ಆಗ ಪಂಡಿತನು ಗಾಬರಿಯಾಗಿ ಇಲ್ಲ ನನಗೆ ಈಜಲು ಬರುವುದಿಲ್ಲ ಎಂಬುದಾಗಿ ಗದ್ಗದ ಕಂಠದಿಂದ ನುಡಿದನು. ಆಗ ನಾವಿಕನು ಪಂಡಿತರೇ ! ಹಾಗಾದರೆ ನಿಮ್ಮ ಸಂಪೂರ್ಣವಾದ ಜೀವನವೇ ಇಂದು ವ್ಯರ್ಥವಾಯಿತು ಎಂಬುದಾಗಿ ಹೇಳಿ ನಾವಿನಿಂದ ಜಿಗದು ಈಜಿ ಪಾರಾಗಿ ಹೋದನು. ಇತ್ತ ಸಕಲಶಾಸ್ತ್ರ ಪಾರಂಗತನಾಗಿದ್ದರೂ ಆ ಪಂಡಿ ತನು ಈಜೊಂದು ಬಾರದ ಕಾರಣದಿಂದಾಗಿ ಕೈಬಡೆಯುತ್ತ ಕಾಲು ಬಡೆಯುತ್ತ ನೀರು ಕುಡಿಯುತ್ತ ನದಿಯ ತಳವನ್ನು ಸೇರಿದನು.

ನೀರಿನಲ್ಲಿ ಪ್ರಯಾಣ ಮಾಡುವಾಗ ಎಲ್ಲ ವಿದ್ಯೆಗಳಲ್ಲಿ ಬಲ್ಲಿದನಾಗಿದ್ದರೂ, ಈಜು ವಿದ್ಯೆ ಬಾರದ ಕಾರಣ ಆ ಪಂಡಿತನು ಮೃತ್ಯುಮುಖವನ್ನು ಸೇರಿದಂತೆ, ಬೇರೆ ಬೇರೆ

ಲೌಕಿಕ ವಿದ್ಯೆಗಳನ್ನು ಕಲಿತಿದ್ದರೂ, ಶಿವಾದ್ವೈತ ಜ್ಞಾನವನ್ನು ಪಡೆಯದ ವ್ಯಕ್ತಿಯು ಈ ಸಂಸಾರ ಸಾಗರದಲ್ಲಿ ಮುಳುಗಿ ಹೋಗುತ್ತಾನೆ. ಆದ್ದರಿಂದ ಇದೊಂದು ಜ್ಞಾನವಿದ್ದು ಬೇರಾವ ಜ್ಞಾನವಿರದಿದ್ದರೂ ಅವನಿಗೆ ಅದಾವ ಹಾನಿಯೂ ಉಂಟಾಗುವುದಿಲ್ಲ. ಶಿವಾದ್ವೈತ ಜ್ಞಾನವು ಸಕಲ ದೋಷರಹಿತವಾಗಿರೋಣದರಿಂದ ಅದು ಸರ್ವೋತ್ಕೃಷ್ಟ ವಾದ ಮುಕ್ತಿಯನ್ನು ಪ್ರಾಪ್ತಿ ಮಾಡಿಕೊಡುತ್ತದೆ. ಉಳಿದ ಲೌಕಿಕ ಜ್ಞಾನಗಳು ರಾಗ–ದ್ವೇಷಾದಿಗ ಳಿಂದ ಕಲುಷಿತವಾಗಿರೋಣದರಿಂದ ಅವುಗಳನ್ನು ಪಡೆದವನು ಅದಾವನೇ ಇದ್ದರೂ ಅವನು ಪುನಃ ಪುನಃ ಸಂಸಾರದಲ್ಲಿ ಬರಬೇಕಾಗುತ್ತದೆ.

ಈ ಜಗತ್ತಿನಲ್ಲಿ ಲೌಕಿಕ ವಿದ್ಯೆಯನ್ನು ಕಲಿತ ವ್ಯಕ್ತಿಗಳಲ್ಲಿ ಪರಸ್ಪರ ಸ್ಪರ್ಧೆ ಇರುವುದನ್ನು ಕಾಣುತ್ತೇವೆ. ನಾ ಮುಂದೆ ನೀಮುಂದೆ ಎಂದು ಸಾಗುತ್ತಿರುವಾಗ ಪರಸ್ಪರರಲ್ಲಿ ರಾಗದ್ವೇಷಾದಿಗಳು ಉತ್ಪನ್ನವಾಗುವುದು ಸಹಜವೇ. ಆತ್ಮಜ್ಞಾನ ಸಂಪನ್ನನಾದ ಶಿವಯೋಗಿಯಲ್ಲಿ ಭೇದ ಜ್ಞಾನವೇ ಇಲ್ಲದಾಗಿ ಹೋಗಿರೋಣದರಿಂದ ಅವನಲ್ಲಿ ಅನು ಕೂಲ–ಪ್ರತಿಕೂಲ ಭಾವನೆಗಳು ಬರಲಾರವು. ಈ ಭಾವನೆಗಳು ಬಾರದ್ದರಿಂದಲೇ ಇಲ್ಲಿ ರಾಗ–ದ್ವೇಷಾದಿಗಳಿಗೆ ಅವಕಾಶವಿರುವುದಿಲ್ಲ. ಆದ್ದರಿಂದ ಶಿವಾದ್ವೈತ ಜ್ಞಾನವು ಶುದ್ಧವಾಗಿ ಮುಕ್ತಿಗೆ ಸಾಧನವಾದರೆ, ರಾಗ–ದ್ವೇಷಾದಿಗಳಿಂದ ಕಲುಷಿತವಾದ ಲೌಕಿಕ ಜ್ಞಾನವು ಪುನಃ ಸಂಸಾರಕ್ಕೆ ಕಾರಣವಾಗಿರುತ್ತದೆ.

ಇಲ್ಲಿಯವರೆಗೆ ಪೂಜ್ಯಪಾದರು ಜ್ಞಾನದ ಸ್ವರೂಪವನ್ನು ವಿವರಿಸಿ ಇನ್ನು ಅದರ ಆಚಾರ ಸ್ವರೂಪವನ್ನೂ ತಿಳಿಸಲೋಸುಗ–

ಪರಿಪೂರ್ಣಂ ಮಹಾಜ್ಞಾನಂ ಪರತತ್ತ್ವಪ್ರಕಾಶಕಮ್ ।
ಅವಲಂಬ್ಯ ಪ್ರವೃತ್ತೋ ಯೋ ಜ್ಞಾನಾಚಾರಃ ಸ ಉಚ್ಯತೇ ॥

ನಿರ್ವಿಕಲ್ಪೇ ಪರೇ ಧಾಮ್ನಿ ನಿಷ್ಕಲೇ ಶಿವನಾಮನಿ
ಜ್ಞಾನೇನ ಯೋಜಯೇತ್ ಸರ್ವಂ ಜ್ಞಾನಾಚಾರೀ ಪ್ರಕೀರ್ತಿತಃ ॥

(ಸಿ.ಶಿ. ೧೬, ೭೯ –೮೦)

ಈ ವಿಧವಾಗಿ ಉಪದೇಶಿಸಿದ್ದಾರೆ. ಪರತತ್ತ್ವವನ್ನು ಪ್ರಕಾಶಗೊಳಿಸುವ ಪರಿಪೂರ್ಣವಾದ ಶಿವಾದ್ವೈತ ಜ್ಞಾನವನ್ನು ಅವಲಂಬಿಸಿ ಯಾವ ಆಚಾರವು ಪ್ರತಿಪಾದಿ ಸಲ್ಪಡುತ್ತದೆಯೋ ಅದಕ್ಕೆ ಜ್ಞಾನಾಚಾರವೆಂದು ಕರೆಯುತ್ತಾರೆ. ಇನ್ನು ನಿರವಯವನಾದ ಭೇದರಹಿತನಾದ ಶಿವವೆಂಬ ಪರವಸ್ತುವಿನಲ್ಲಿ ಸಂಪೂರ್ಣವಾದ ಜಗಜ್ಜಾಲವನ್ನೂ ಅಭೇದ ಜ್ಞಾನದಿಂದ ಯಾರು ಸಂಬಂಧಗೊಳಿಸುವರೋ ಅವರಿಗೆ ಜ್ಞಾನಾಚಾರಿ ಎನ್ನುತ್ತಾರೆ.

ವೀರಶೈವ ಸಿದ್ಧಾಂತದಲ್ಲಿ ಪ್ರಪಂಚವನ್ನೇ ಮೊದಲು ಮಾಡಿಕೊಂಡು ಪರಮಾತ್ಮನವರೆಗಿರುವ ಎಲ್ಲ ಪದಾರ್ಥಗಳಿಗೆ ತತ್ತ್ವ ಎಂಬುದಾಗಿ ಪ್ರತಿಪಾದಿಸಲಾಗಿದೆ. ಪೃಥ್ವಿಯನ್ನೇ ಮೊದಲು ಮಾಡಿಕೊಂಡು ಶಿವನವರೆಗೆ ಒಟ್ಟು ಮೂವತ್ತಾರು ತತ್ತ್ವಗಳು ಪ್ರತಿಪಾದಿಸಲ್ಪಟ್ಟಿವೆ. ಈ ಎಲ್ಲ ತತ್ತ್ವಗಳಲ್ಲಿ ಶಿವತತ್ತ್ವವೇ ಸರ್ವೋತ್ಕೃಷ್ಟ ವಾದುದು. ಅಂತೆಯೇ ಅದು ಪರಿಪೂರ್ಣವಾಗಿರುತ್ತದೆ. ಪ್ರಪಂಚದೊಳಗಿನ ಎಲ್ಲ ವಸ್ತುಗಳು

ಅಪೂರ್ಣಗಳೇ ಆಗಿವೆ. ಅವುಗಳೆಲ್ಲ ಕಾಲ, ವಸ್ತು ಮತ್ತು ದೇಶಗಳಿಂದ ಪರಿಚ್ಛಿನ್ನ ಗಳಾಗಿರುತ್ತವೆ. ಈ ಕಾಲದಲ್ಲಿದ್ದು ಇನ್ನೊಂದು ಕಾಲದಲ್ಲಿ ಇಲ್ಲದಿರುವುದು ಕಾಲಪರಿಚ್ಛೇದವು, ಒಂದು ಸ್ಥಾನದಲ್ಲಿ ಇದ್ದು ಇನ್ನೊಂದು ಸ್ಥಾನದಲ್ಲಿ ಇಲ್ಲದಿರುವುದೇ ದೇಶ ಪರಿಚ್ಛೇದವು. ಘಟವು ಪಟವಲ್ಲ, ಪಟವು ಘಟವಲ್ಲವೆಂಬ ವಸ್ತುಗಳ ಅನ್ಯೋನ್ಯಾಭಾವಕ್ಕೆ ವಸ್ತು ಪರಿಚ್ಛೇದವೆನ್ನುವರು. ಹೀಗೆ ಯಾವುದು ಅಪೂರ್ಣವಾದುದೋ ಅದು ಪರಿಚ್ಛಿನ್ನವಾಗಿರುತ್ತದೆ. ಇನ್ನು ಯಾವುದು ಪರಿಪೂರ್ಣವಾದುದೋ ಅದು ಅಪರಿಚ್ಛಿನ್ನವಾಗಿರುತ್ತದೆ. ಶಿವತತ್ತ್ವವು ಪರಿಪೂರ್ಣವಾಗಿರುವುದರಿಂದ ಅದು ಅಪರಿಚ್ಛಿನ್ನವೆಂದು ಭಾವಿಸಬೇಕು. ಹೀಗೆ ಪರಿಪೂರ್ಣವಾದ ಪರಮಾತ್ಮನ ಜ್ಞಾನವನ್ನು ಅವಲಂಬಿಸಿ ಪ್ರವೃತ್ತವಾದ ಆಚಾರಕ್ಕೆ ಜ್ಞಾನಾಚಾರವೆಂದು ಕರೆಯುತ್ತಾರೆ.

ಎಲ್ಲವೂ ಪರಮಾತ್ಮ ಸ್ವರೂಪವಾಗಿದ್ದರೂ ನಮಗೆ ಪ್ರತಿಯೊಂದು ವಸ್ತುವು ಭಿನ್ನ ಭಿನ್ನವಾಗಿಯೇ ತೋರುತ್ತದೆಯಲ್ಲಾ? ಇದಕ್ಕೇನು ಮಾಡಬೇಕು? ಎಂಬ ಪ್ರಶ್ನೆಯುದ್ಭವಿಸಿದಾಗ ತೋರುವ ಪ್ರತಿಯೊಂದು ವಸ್ತುವಿನಲ್ಲಿಯೂ ಸತ್ತು, ಚಿತ್ತು, ಆನಂದ ರೂಪನಾಗಿ ಓರ್ವನೇ ಆದ ಪರಮಾತ್ಮನು ಇದ್ದಾನೆಂಬುದಾಗಿ ಮನನ ಮಾಡುತ್ತ ಹೋದರೆ ಸರ್ವವೆಲ್ಲವೂ ಶಿವರೂಪವಾಗಿಯೇ ಅನುಭವ ಗೋಚರವಾಗುವವು. ಹೀಗೆ ತನ ಗುಂಟಾದ ಶಿವಾದ್ವೈತ ಜ್ಞಾನವನ್ನು ಮನನ ಮಾಡುವವನಿಗೆ ಜ್ಞಾನಾಚಾರಿ ಎಂಬುದಾಗಿ ಕರೆಯುತ್ತಾರೆ.

ಹೀಗೆ ಜ್ಞಾನಾಚಾರಿಯಾದ ಶಿವಯೋಗಿಗೆ ಕರ್ಮದ ಕಟ್ಟಳೆ ಇರುವುದಿಲ್ಲ ಎಂಬ ವಿಷಯವನ್ನು ಪೂಜ್ಯರು–

ಜ್ಞಾನಂ ಮುಕ್ತಿಪ್ರದಂ ಪ್ರಾಪ್ಯ ಗುರುದೃಷ್ಟಿಪ್ರಸಾದತಃ ।
ಕಃ ಕುರ್ಯಾತ್ ಕರ್ಮಕಾರ್ಪಣ್ಯೇ ವಾಂಛಾಂ ಸಂಸಾರವರ್ಧನೇ ॥

ಕರ್ಮಜ್ಞಾನಾಗ್ನಿನಾ ದಗ್ಧಂ ನ ಪ್ರರೋಹೇತ್ ಕಥಂಚನ ।
ಯದಾಹುಃ ಸಂಸ್ಕೃತೇರ್ಮೂಲಂ ಪ್ರವಾಹಾನುಗತಂ ಬುಧಾಃ ॥

(ಸಿ.ಶಿ. ೧೬, ೮೧–೮೨)

ಈ ಪ್ರಕಾರವಾಗಿ ವಿವರಿಸಿದ್ದಾರೆ. ಗುರುವಿನ ಕೃಪಾದೃಷ್ಟಿ ಪ್ರಸಾದದಿಂದ ಮುಕ್ತಿಪ್ರದ ವಾದ ಜ್ಞಾನವನ್ನು ಪಡೆದಬಳಿಕ ಸಂಸಾರದ ವೃದ್ಧಿಗೆ ಕಾರಣೀಭೂತವಾದ ಕರ್ಮವನ್ನು ಮಾಡಲು ಅದಾರಿಗೆ ತಾನೇ ಇಚ್ಛೆಯುಂಟಾದೀತು ? ಇನ್ನು ಸಂಸಾರದ ಪ್ರವಾಹಕ್ಕೆ ಮೂಲ ಕಾರಣವಾಗಿರುವ ಕರ್ಮವು ಜ್ಞಾನಾಗ್ನಿಯಿಂದ ದಗ್ಧವಾಗಿರೋಣದರಿಂದ ಅದು ಮುಂದಿನ ಸಂಸಾರದ ಪ್ರವಾಹಕ್ಕೆ ಕಾರಣವಾಗಲಾರದು.

ಜ್ಞಾನವನ್ನು ಪ್ರಾಪ್ತಿಮಾಡಿಕೊಳ್ಳಲು ತನ್ನ ಪರಿಶ್ರಮ ಹಾಗೂ ಸಾಧನೆಗಳು ಎಷ್ಟು ಮುಖ್ಯವಾದವುಗಳೋ ಗುರುವಿನ ಕೃಪಾದೃಷ್ಟಿಯೂ ಸಹ ಅಷ್ಟೇ ಪ್ರಮುಖವಾದುದು. ಗುರು ಕೃಪೆಯನ್ನು ಸಂಪಾದಿಸದವನು ಅದೆಷ್ಟು ಅಭ್ಯಾಸವನ್ನು ಮಾಡಿದರೂ ಅವನ ಆ ಶ್ರಮವು ನಿರರ್ಥಕವಾಗುವುದು. ಆದ ಕಾರಣ ಮುಕ್ತಿಯ ಪ್ರಾಪ್ತಿಯಲ್ಲಿ ಜ್ಞಾನದಷ್ಟೇ

ಗುರುವಿನ ಅನುಗ್ರಹವೂ ಸಹ ಕಾರಣವೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಗುರುಕೃಪೆ ಹಾಗೂ ಸ್ವಪ್ರಯತ್ನ ಮೂಲಕ ಪ್ರಾಪ್ತವಾದ ಜ್ಞಾನದಿಂದ ಮುಕ್ತಿಯನ್ನು ಸಂಪಾದಿಸಿದ ವ್ಯಕ್ತಿಗೆ ಸಂಸಾರವನ್ನು ವರ್ಧಿಸುವ ಕರ್ಮಗಳಲ್ಲಿ ಇಚ್ಛೆಯು ಉಂಟಾಗುವುದಿಲ್ಲ. ಇನ್ನು ಈ ಶಿವಯೋಗಿಯಲ್ಲಿ ಉತ್ಪನ್ನವಾಗಿರುವ ಜ್ಞಾನಾಗ್ನಿಯು ಸಂಚಿತ ಕರ್ಮಗಳನ್ನೆಲ್ಲ ಸುಟ್ಟುಹಾಕೋಣದರಿಂದ ಆ ಕರ್ಮಗಳು ಪುನಃ ಈತನ ಜನ್ಮಗಳಿಗೆ ಕಾರಣಗಳಾಗುವುದಿಲ್ಲ. ಇನ್ನು ಇವನಲ್ಲಿ ಅಕರ್ತೃತ್ವ ಭಾವನೆಯು ಪ್ರಾದುರ್ಭಾವಿಸಿರೋಣದರಿಂದ ಹೊಸ ಕರ್ಮಗಳು ಸಹ ಉತ್ಪನ್ನಗಳಾಗಲಾರವು. ಹೀಗೆ ಜ್ಞಾನಿಯು ಪುನರ್ಜನ್ಮಕ್ಕೆ ಕಾರಣೀಭೂತವಾಗಿರುವ ಕರ್ಮದಿಂದ ನಿರ್ಮುಕ್ತನಾಗಿರುತ್ತಾನೆ.

ಜ್ಞಾನಿಗಳಿಗೆ ಕರ್ಮಗಳು ಬಂಧಿಸುವುದಿಲ್ಲವೆಂದ ಬಳಿಕ ಈ ಕರ್ಮಬಂಧನವು ಯಾರಿಗೆ ? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯಪಾದರು ಪುನಃ–

ಜ್ಞಾನೇನ ಹೀನಃ ಪುರುಷಃ ಕರ್ಮಣಾ ಬದ್ಧ್ಯತೇ ಸದಾ ।
ಜ್ಞಾನಿನಃ ಕರ್ಮಸಂಕಲ್ಪಾ ಭವಂತಿ ಕಿಲ ನಿಷ್ಫಲಾಃ ॥

(ಸಿ.ಶಿ. ೧೬–೮೩)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಜ್ಞಾನಹೀನನಾದ ವ್ಯಕ್ತಿಯು ಕರ್ಮಜಾಲದಿಂದ ಕಟ್ಟಲ್ಪಡುತ್ತಾನೆ. ಆದರೆ ಜ್ಞಾನಿಗಳಿಂದ ಉಂಟಾಗುವ ಕರ್ಮಗಳು ನಿಷ್ಫಲಗಳಾಗಿರೋಣದರಿಂದ ಅವುಗಳು ಬಂಧನಕಾರಿಗಳಾಗಲಾರವು.

ಅಜ್ಞರಾದ ಜೀವಿಗಳು ಕರ್ಮ ಬಂಧನಕ್ಕೊಳಗಾಗುವರೇ ವಿನಃ ಜ್ಞಾನಿಗಳು ಅದರಿಂದ ಮುಕ್ತರಾಗುತ್ತಾರೆ. "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ" ಅಂದರೆ ಸರೋವರದ ನೀರು ಅಲ್ಲಿರುವ ಕಮಲದ ಎಲೆಗೆ ಸೋಂಕದಿರುವಂತೆ ಜ್ಞಾನಿಯಾದ ವ್ಯಕ್ತಿಗೆ ಕರ್ಮವು ಸೋಂಕುವುದಿಲ್ಲ. ಆದರೆ ಜ್ಞಾನಹೀನನಾದ ವ್ಯಕ್ತಿಯು ಮಾತ್ರ ಕರ್ಮಬಂಧನದಲ್ಲಿ ಸಿಲುಕಿಕೊಳ್ಳುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನಾಚಾರ ಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಶುದ್ಧಾಚಾರೇ ಶುದ್ಧಭಾವೋ ವಿವೇಕೀಜ್ಯೋತಿಃ ಪಶ್ಯನ್ ಸರ್ವತಶ್ಚೈವ ಮೇಕಮ್ ।
ಜ್ಞಾನಧ್ವಸ್ತಪ್ರಾಕೃತಾತ್ಮಪ್ರಪಂಚೋ ಜೀವನ್ಮುಕ್ತಶ್ಚೇಷ್ಟತೇ ದಿವ್ಯಯೋಗೀ ॥

(ಸಿ.ಶಿ. ೧೬–೮೪)

ಹೀಗೆ ವಿವರಿಸಿದ್ದಾರೆ. ಶುದ್ಧಾಚಾರಿಯು ಹಾಗೂ ಶುದ್ಧಭಾವನೆಯುಳ್ಳ ವಿವೇಕಿಯು ಸರ್ವತ್ರ ಒಂದೇಯಾದ ಜ್ಯೋತಿಯನ್ನು ಕಾಣುತ್ತಿರುತ್ತಾನೆ. ಈ ಜ್ಯೋತಿಯ ಸಾಕ್ಷಾತ್ಕಾರ ರೂಪವಾದ ಜ್ಞಾನದಿಂದ ಪ್ರಾಕೃತ ಪ್ರಪಂಚವನ್ನು ಧ್ವಂಸ ಮಾಡಿಕೊಂಡ ಆ ದಿವ್ಯ ಯೋಗಿಯು ಜೀವನ್ಮುಕ್ತನಾಗಿದ್ದು ಸಾಮಾನ್ಯ ಜನರಂತೆ ವ್ಯವಹರಿಸುತ್ತಿರುತ್ತಾನೆ.

ಅಪೂರ್ಣಗಳೇ ಆಗಿವೆ. ಅವುಗಳೆಲ್ಲ ಕಾಲ, ವಸ್ತು ಮತ್ತು ದೇಶಗಳಿಂದ ಪರಿಚ್ಛಿನ್ನಗಳಾಗಿರುತ್ತವೆ. ಈ ಕಾಲದಲ್ಲಿದ್ದು ಇನ್ನೊಂದು ಕಾಲದಲ್ಲಿ ಇಲ್ಲದಿರುವುದು ಕಾಲಪರಿಚ್ಛೇದವು, ಒಂದು ಸ್ಥಾನದಲ್ಲಿ ಇದ್ದು ಇನ್ನೊಂದು ಸ್ಥಾನದಲ್ಲಿ ಇಲ್ಲದಿರುವುದೇ ದೇಶ ಪರಿಚ್ಛೇದವು. ಘಟವು ಪಟವಲ್ಲ, ಪಟವು ಘಟವಲ್ಲವೆಂಬ ವಸ್ತುಗಳ ಅನ್ಯೋನ್ಯಾಭಾವಕ್ಕೆ ವಸ್ತು ಪರಿಚ್ಛೇದವೆನ್ನುವರು. ಹೀಗೆ ಯಾವುದು ಅಪೂರ್ಣವಾದುದೋ ಅದು ಪರಿಚ್ಛಿನ್ನವಾಗಿರುತ್ತದೆ. ಇನ್ನು ಯಾವುದು ಪರಿಪೂರ್ಣವಾದುದೋ ಅದು ಅಪರಿಚ್ಛಿನ್ನವಾಗಿರುತ್ತದೆ. ಶಿವತತ್ತ್ವವು ಪರಿಪೂರ್ಣವಾಗಿರುವುದರಿಂದ ಅದು ಅಪರಿಚ್ಛಿನ್ನವೆಂದು ಭಾವಿಸಬೇಕು. ಹೀಗೆ ಪರಿಪೂರ್ಣವಾದ ಪರಮಾತ್ಮನ ಜ್ಞಾನವನ್ನು ಅವಲಂಬಿಸಿ ಪ್ರವೃತ್ತವಾದ ಆಚಾರಕ್ಕೆ ಜ್ಞಾನಾಚಾರವೆಂದು ಕರೆಯುತ್ತಾರೆ.

ಎಲ್ಲವೂ ಪರಮಾತ್ಮ ಸ್ವರೂಪವಾಗಿದ್ದರೂ ನಮಗೆ ಪ್ರತಿಯೊಂದು ವಸ್ತುವು ಭಿನ್ನ ಭಿನ್ನವಾಗಿಯೇ ತೋರುತ್ತದೆಯಲ್ಲಾ? ಇದಕ್ಕೇನು ಮಾಡಬೇಕು? ಎಂಬ ಪ್ರಶ್ನೆಯುದ್ಭವಿಸಿದಾಗ ತೋರುವ ಪ್ರತಿಯೊಂದು ವಸ್ತುವಿನಲ್ಲಿಯೂ ಸತ್ತು, ಚಿತ್ತು, ಆನಂದ ರೂಪನಾಗಿ ಓರ್ವನೇ ಆದ ಪರಮಾತ್ಮನು ಇದ್ದಾನೆಂಬುದಾಗಿ ಮನನ ಮಾಡುತ್ತ ಹೋದರೆ ಸರ್ವವೆಲ್ಲವೂ ಶಿವರೂಪವಾಗಿಯೇ ಅನುಭವ ಗೋಚರವಾಗುವವು. ಹೀಗೆ ತನ ಗುಂಟಾದ ಶಿವಾದ್ವೈತ ಜ್ಞಾನವನ್ನು ಮನನ ಮಾಡುವವನಿಗೆ ಜ್ಞಾನಾಚಾರಿ ಎಂಬುದಾಗಿ ಕರೆಯುತ್ತಾರೆ.

ಹೀಗೆ ಜ್ಞಾನಾಚಾರಿಯಾದ ಶಿವಯೋಗಿಗೆ ಕರ್ಮದ ಕಟ್ಟಳೆ ಇರುವುದಿಲ್ಲ ಎಂಬ ವಿಷಯವನ್ನು ಪೂಜ್ಯರು–

ಜ್ಞಾನಂ ಮುಕ್ತಿಪ್ರದಂ ಪ್ರಾಪ್ಯ ಗುರುದೃಷ್ಟಿಪ್ರಸಾದತಃ।
ಕಃ ಕುರ್ಯಾತ್ ಕರ್ಮಕಾರ್ಪಣ್ಯೇ ವಾಂಛಾಂ ಸಂಸಾರವರ್ಧನೇ ॥

ಕರ್ಮಜ್ಞಾನಾಗ್ನಿನಾ ದಗ್ಧಂ ನ ಪ್ರರೋಹೇತ್ ಕಥಂಚನ।
ಯದಾಹುಃ ಸಂಸೃತೇರ್ಮೂಲಂ ಪ್ರವಾಹಾನುಗತಂ ಬುಧಾಃ ॥

(ಸಿ.ಶಿ. ೧೬, ೮೧–೮೨)

ಈ ಪ್ರಕಾರವಾಗಿ ವಿವರಿಸಿದ್ದಾರೆ. ಗುರುವಿನ ಕೃಪಾದೃಷ್ಟಿ ಪ್ರಸಾದದಿಂದ ಮುಕ್ತಿಪ್ರದವಾದ ಜ್ಞಾನವನ್ನು ಪಡೆದಬಳಿಕ ಸಂಸಾರದ ವೃದ್ಧಿಗೆ ಕಾರಣೀಭೂತವಾದ ಕರ್ಮವನ್ನು ಮಾಡಲು ಅದಾರಿಗೆ ತಾನೇ ಇಚ್ಛೆಯುಂಟಾದೀತು ? ಇನ್ನು ಸಂಸಾರದ ಪ್ರವಾಹಕ್ಕೆ ಮೂಲ ಕಾರಣವಾಗಿರುವ ಕರ್ಮವು ಜ್ಞಾನಾಗ್ನಿಯಿಂದ ದಗ್ಧವಾಗಿರೋಣದರಿಂದ ಅದು ಮುಂದಿನ ಸಂಸಾರದ ಪ್ರವಾಹಕ್ಕೆ ಕಾರಣವಾಗಲಾರದು.

ಜ್ಞಾನವನ್ನು ಪ್ರಾಪ್ತಿಮಾಡಿಕೊಳ್ಳಲು ತನ್ನ ಪರಿಶ್ರಮ ಹಾಗೂ ಸಾಧನೆಗಳು ಎಷ್ಟು ಮುಖ್ಯವಾದವುಗಳೋ ಗುರುವಿನ ಕೃಪಾದೃಷ್ಟಿಯೂ ಸಹ ಅಷ್ಟೇ ಪ್ರಮುಖವಾದುದು. ಗುರು ಕೃಪೆಯನ್ನು ಸಂಪಾದಿಸದವನು ಅದೆಷ್ಟು ಅಭ್ಯಾಸವನ್ನು ಮಾಡಿದರೂ ಅವನ ಆ ಶ್ರಮವು ನಿರರ್ಥಕವಾಗುವುದು. ಆದ ಕಾರಣ ಮುಕ್ತಿಯ ಪ್ರಾಪ್ತಿಯಲ್ಲಿ ಜ್ಞಾನದಷ್ಟೇ

ಗುರುವಿನ ಅನುಗ್ರಹವೂ ಸಹ ಕಾರಣವೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಗುರುಕೃಪೆ ಹಾಗೂ ಸ್ವಪ್ರಯತ್ನ ಮೂಲಕ ಪ್ರಾಪ್ತವಾದ ಜ್ಞಾನದಿಂದ ಮುಕ್ತಿಯನ್ನು ಸಂಪಾದಿಸಿದ ವ್ಯಕ್ತಿಗೆ ಸಂಸಾರವನ್ನು ವರ್ಜಿಸುವ ಕರ್ಮಗಳಲ್ಲಿ ಇಚ್ಛೆಯು ಉಂಟಾಗು ವುದಿಲ್ಲ. ಇನ್ನು ಈ ಶಿವಯೋಗಿಯಲ್ಲಿ ಉತ್ಪನ್ನವಾಗಿರುವ ಜ್ಞಾನಾಗ್ನಿಯು ಸಂಚಿತ ಕರ್ಮಗಳನ್ನೆಲ್ಲ ಸುಟ್ಟುಹಾಕೋಣದರಿಂದ ಆ ಕರ್ಮಗಳು ಪುನಃ ಈತನ ಜನ್ಮಗಳಿಗೆ ಕಾರಣಗಳಾಗುವುದಿಲ್ಲ. ಇನ್ನು ಇವನಲ್ಲಿ ಅಕರ್ತೃತ್ವ ಭಾವನೆಯು ಪ್ರಾದುರ್ಭವಿ ಸಿರೋಣದರಿಂದ ಹೊಸ ಕರ್ಮಗಳು ಸಹ ಉತ್ಪನ್ನಗಳಾಗಲಾರವು. ಹೀಗೆ ಜ್ಞಾನಿಯು ಪುನರ್ಜನ್ಮಕ್ಕೆ ಕಾರಣೀಭೂತವಾಗಿರುವ ಕರ್ಮದಿಂದ ನಿರ್ಮುಕ್ತನಾಗಿರುತ್ತಾನೆ.

ಜ್ಞಾನಿಗಳಿಗೆ ಕರ್ಮಗಳು ಬಂಧಿಸುವುದಿಲ್ಲವೆಂದ ಬಳಿಕ ಈ ಕರ್ಮಬಂಧನವು ಯಾರಿಗೆ ? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯಪಾದರು ಪುನಃ–

ಜ್ಞಾನೇನ ಹೀನಃ ಪುರುಷಃ ಕರ್ಮಣಾ ಬಧ್ಯತೇ ಸದಾ ।
ಜ್ಞಾನಿನಃ ಕರ್ಮಸಂಕಲ್ಪಾ ಭವಂತಿ ಕಿಲ ನಿಷ್ಫಲಾಃ ॥

(ಸಿ.ಶಿ. ೧೬–೮೩)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಜ್ಞಾನಹೀನನಾದ ವ್ಯಕ್ತಿಯು ಕರ್ಮಜಾಲದಿಂದ ಕಟ್ಟಲ್ಪಡುತ್ತಾನೆ. ಆದರೆ ಜ್ಞಾನಿಗಳಿಂದ ಉಂಟಾಗುವ ಕರ್ಮಗಳು ನಿಷ್ಫಲಗಳಾಗಿ ರೋಣದರಿಂದ ಅವುಗಳು ಬಂಧನಕಾರಿಗಳಾಗಲಾರವು.

ಅಜ್ಞರಾದ ಜೀವಿಗಳು ಕರ್ಮ ಬಂಧನಕ್ಕೊಳಗಾಗುವರೇ ವಿನಃ ಜ್ಞಾನಿಗಳು ಅದರಿಂದ ಮುಕ್ತರಾಗುತ್ತಾರೆ. ''ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ'' ಅಂದರೆ ಸರೋವರದ ನೀರು ಅಲ್ಲಿರುವ ಕಮಲದ ಎಲೆಗೆ ಸೋಂಕದಿರುವಂತೆ ಜ್ಞಾನಿಯಾದ ವ್ಯಕ್ತಿಗೆ ಕರ್ಮವು ಸೋಂಕುವುದಿಲ್ಲ. ಆದರೆ ಜ್ಞಾನಹೀನನಾದ ವ್ಯಕ್ತಿಯು ಮಾತ್ರ ಕರ್ಮಬಂಧನದಲ್ಲಿ ಸಿಲುಕಿಕೊಳ್ಳುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನಾಚಾರ ಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಶುದ್ಧಾಚಾರೇ ಶುದ್ಧಭಾವೋ ವಿವೇಕೀ ಜ್ಯೋತಿಃ ಪಶ್ಯನ್ ಸರ್ವತಶ್ಚೈವ
ಮೇಕಮ್ ।
ಜ್ಞಾನಧ್ವಸ್ತಪ್ರಾಕೃತಾತ್ಮಪ್ರಪಂಚೋ ಜೀವನ್ಮುಕ್ತಶ್ಚೇಷ್ಟತೇ ದಿವ್ಯಯೋಗೀ ॥

(ಸಿ.ಶಿ. ೧೬–೮೪)

ಹೀಗೆ ವಿವರಿಸಿದ್ದಾರೆ. ಶುದ್ಧಾಚಾರಿಯು ಹಾಗೂ ಶುದ್ಧಭಾವನೆಯುಳ್ಳ ವಿವೇಕಿಯು ಸರ್ವತ್ರ ಒಂದೇಯಾದ ಜ್ಯೋತಿಯನ್ನು ಕಾಣುತ್ತಿರುತ್ತಾನೆ. ಈ ಜ್ಯೋತಿಯ ಸಾಕ್ಷಾತ್ಕಾರ ರೂಪವಾದ ಜ್ಞಾನದಿಂದ ಪ್ರಾಕೃತ ಪ್ರಪಂಚವನ್ನು ಧ್ವಂಸ ಮಾಡಿಕೊಂಡ ಆ ದಿವ್ಯ ಯೋಗಿಯು ಜೀವನ್ಮುಕ್ತನಾಗಿದ್ದು ಸಾಮಾನ್ಯ ಜನರಂತೆ ವ್ಯವಹರಿಸುತ್ತಿರುತ್ತಾನೆ.

ಪೂಜ್ಯಪಾದರು ಕೊನೆಯದಾದ ಈ ಉಪದೇಶದಲ್ಲಿ ಶುದ್ಧ ಆಚಾರ ಶುದ್ಧ ಭಾವನೆ ಹಾಗೂ ಪರಿಶುದ್ಧ ಜ್ಞಾನಗಳ ಒಂದು ಸಮನ್ವಯ ಸ್ವರೂಪವನ್ನು ಇಲ್ಲಿ ಉಪ ದೇಶಿಸಿದ್ದಾರೆ. ಶಾಸ್ತ್ರದಲ್ಲಿ ಉಪದೇಶಿಸಲ್ಪಟ್ಟ ವಿಹಿತ ಕರ್ಮಗಳನ್ನು ಆಚರಿಸುವುದೇ ಶುದ್ಧಾಚಾರವು. ಈ ಕರ್ಮಗಳನ್ನು ಆಚರಿಸುವಾಗ ಅಹಂಭಾವನೆಯನ್ನು ತಾಳದಿರು ವುದೇ ಶುದ್ಧಭಾವನೆಯು. ಇನ್ನು ಶರೀರ, ಇಂದ್ರಿಯ, ಮನಸ್ಸು ಮತ್ತು ಬುದ್ಧಿಗಳಿ ಗಿಂತಲೂ ವ್ಯತಿರಿಕ್ತವಾದ ಆತ್ಮಸ್ವರೂಪವನ್ನು ತಿಳಿಯುವುದೇ ವಿವೇಕವು. ಹೀಗೆ ಶುದ್ಧ ಆಚಾರ, ಶುದ್ಧಭಾವನೆ ಹಾಗೂ ವಿವೇಕದಿಂದ ಕೂಡಿದ ದಿವ್ಯ ಯೋಗಿಯು ಎಲ್ಲೆಡೆಯಲ್ಲಿ ಆತ್ಮಜ್ಯೋತಿಯನ್ನೇ ಕಾಣುತ್ತ ತನ್ನ ಪ್ರಾಕ್ತನ ಪ್ರಾಕೃತ ಪ್ರಪಂಚವನ್ನು ಇಲ್ಲದಾಗಿಸಿ ಕೊಂಡು ಜೀವನ್ಮುಕ್ತಾವಸ್ಥೆಯಲ್ಲಿ ತಾನಿದ್ದರೂ ನೋಡುವವರಿಗೆ ಸಾಮಾನ್ಯ ವ್ಯಕ್ತಿಗಳಂತೆ ತೋರುತ್ತಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಲಿಂಗಷಟ್‌ಸ್ಥಲಾಂತರ್ಗತವಾದ ಈ ಮಾಹೇಶ್ವರ ಸ್ಥಲದಲ್ಲಿ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ, ಸಕಾಯ, ಅಕಾಯ, ಪರಕಾಯ, ಧರ್ಮಾಚಾರ, ಭಾವಾಚಾರ ಮತ್ತು ಜ್ಞಾನಾಚಾರ ಸ್ಥಲಗಳ ಬಗ್ಗೆ ಬಹು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ಇಲ್ಲಿಯ ಪ್ರತಿಯೊಂದು ಅವಾಂತರ ಸ್ಥಲಗಳಲ್ಲಿ ಬಂದಿರುವ ರಹಸ್ಯಾರ್ಥವನ್ನು ಪ್ರತಿಯೊಬ್ಬರು ಅರ್ಥಮಾಡಿಕೊಂಡು ಅದರಂತೆ ಆಚರಿಸಿ ಈ ಸ್ಥಲದ ಕೊನೆಯಲ್ಲಿ ಹೇಳಿದ ಜೀವನ್ಮುಕ್ತನ ವಿಲಕ್ಷಣವಾದ ಸ್ಥಿತಿಯನ್ನು ಪಡೆದುಕೊಳ್ಳುವ ಯೋಗ್ಯತೆಯು ನಿಮ್ಮೆಲ್ಲರಿಗೂ ಪ್ರಾಪ್ತವಾಗಲೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯಲಾಗುವುದು.

ಓಂ ಶಾಂತಿಃ ಶಾಂತಿಃ ಶಾಂತಿ :

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ'' ಗ್ರಂಥದ ಷೋಡಶ ಪರಿಚ್ಛೇದವು ಪೂರ್ಣವಾದುದು.

ದಿನಾಂಕ ೧೬ ಆಗಷ್ಟ ೧೯೯೩

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



# ಸಪ್ತದಶ ಪರಿಚ್ಛೇದ

## ಪ್ರಸಾದಿಸ್ಥಲ

ಆಶೀರ್ವಚನ-೧

## ಕಾಯಾನುಗ್ರಹಸ್ಥಲ

ವಿಶ್ವೇಶಲಿಂಗ ಸಂಭೂತಂ ವಿಶ್ವವಿದ್ಯಾವಿಬೋಧಕಮ್ ।
ವಿಶ್ವವಂದ್ಯಂ ಸದಾವಂದೇ ವಿಶ್ವಾರಾಧ್ಯಂ ಜಗದ್ಗುರುಮ್ ॥

ಶ್ರೀ ಕಾಶೀ ಜ್ಞಾನಸಿಂಹಾಸನದ ಆದಿ ಜಗದ್ಗುರು ವಿಶ್ವಾರಾಧ್ಯರನ್ನೇ ಮೊದಲು ಮಾಡಿಕೊಂಡು ವಿಶ್ವೇಶ್ವರ ಶಿವಾಚಾರ್ಯ ಪರ್ಯಂತವಾದ ಗುರುಪರಂಪರೆಗೆ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತ ಈ ಪವಿತ್ರವಾದ ಆಷಾಢಮಾಸದ ನಿಮಿತ್ತವಾಗಿ ಶಿವಯೋಗಿ ಸಾರ್ವಭೌಮನಾದ ಸಿದ್ಧರಾಮೇಶ್ವರನ ದಿವ್ಯಕ್ಷೇತ್ರವಾದ ಸೊನ್ನಲಿಗೆಯ (ಸೋಲಾಪೂರ) ಶಿವಾನುಭವ ಮಂಗಲಭವನದಲ್ಲಿ ಆಯೋಜಿಸಲ್ಪಟ್ಟ ಇಂದಿನ ಧರ್ಮ ಸಭೆಯಲ್ಲಿ ಉಪಸ್ಥಿತರಿರುವ ಶಿವಯೋಗಿ ಸ್ವರೂಪರಾದ ಸಮಸ್ತ ಶಿವಾಚಾರ್ಯರೇ ! ಯೋಗಿನಾಥ ಭಕ್ತಮಂಡಳದ ಸದ್ಭಕ್ತರೇ ! ಈ ಮಂಗಲಭವನದ ಸಮಸ್ತ ವಿಶ್ವಸ್ಥರೇ ! ಶ್ರೋತೃಗಳಾಗಿ ಆಗಮಿಸಿದ ಮುಮುಕ್ಷುಗಳೇ ! ಹಾಗೂ ಮಾತೆಯರೇ ! ಆಷಾಢ ಮಾಸದ ನಿಮಿತ್ತವಾಗಿ ಒಂದು ಶಿವಯೋಗ ಧ್ಯಾನಶಿಬಿರವನ್ನು ಏರ್ಪಡಿಸಲಾಗಿದೆ ಯಲ್ಲದೆ ಅದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನವನ್ನು ಸಹ ಹಮ್ಮಿಕೊಳ್ಳಲಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಬಗ್ಗೆ ಇಲ್ಲಿ ವಿವೇಚಿಸಲಾಗುವುದು ಕಾರಣ ಸರ್ವರೂ ಸಮಾಹಿತ ಚಿತ್ತರಾಗಿ ಶ್ರವಣ ಮಾಡಿರಿ.

ಈ ಹಿಂದೆ ಹೇಳಲ್ಪಟ್ಟ ಮಾಹೇಶ್ವರಸ್ಥಲದ ಬಗ್ಗೆ ಶ್ರವಣ ಮಾಡಿದ ಅಗಸ್ತ್ಯನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರನ್ನು ಉದ್ದೇಶಿಸಿ–

ಸ್ಥಲಾನಿ ತಾನಿ ಚೋಕ್ತಾನಿ ಯಾನಿ ಮಾಹೇಶ್ವರಸ್ಥಲೇ ।
ವದಸ್ವ ಸ್ಥಲಭೇದಂ ಮೇ ಪ್ರಸಾದಿಸ್ಥಲ ಸಂಶ್ರಿತಮ್ ॥

(ಸಿ. ಶಿ. ೧೭–೧)

ಈ ತೆರನಾಗಿ ವಿನಂತಿಸಿಕೊಂಡಿದ್ದಾನೆ. ಹೇ ರೇಣುಕ ಗುರುವರ್ಯರೇ ! ತಾವು ಈ ಹಿಂದೆ ಲಿಂಗಷಟ್‌ಸ್ಥಲದೊಳಗಿನ ಮಾಹೇಶ್ವರಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಸವಿಸ್ತಾರವಾಗಿ

ಪ್ರತಿಪಾದಿಸಿದ್ದೀರಿ. ಇಂದು ಪ್ರಸಾದಿಸ್ಥಲದಲ್ಲಿ ಬರುವ ಅವಾಂತರ ಸ್ಥಲದ ಬಗ್ಗೆ ಉಪದೇಶಿಸುವಂಥವರಾಗಬೇಕು ಎಂಬುದಾಗಿ ಪ್ರಾರ್ಥಿಸಿಕೊಂಡನು. ಆಗ ರೇಣುಕ ಭಗವತ್ಪಾದರು–

ಸ್ಥಲಭೇದಾ ನವ ಪ್ರೋಕ್ತಾಃ ಪ್ರಸಾದಿಸ್ಥಲಸಂಶ್ರಿತಾಃ ।
ಕಾಯಾನುಗ್ರಹಣಂ ಪೂರ್ವಮಿಂದ್ರಿಯಾನುಗ್ರಹಂ ತತಃ ॥

ಪ್ರಾಣಾನುಗ್ರಹಣಂ ಪಶ್ಚಾತ್ ತತಃ ಕಾಯಾರ್ಪಿತಂ ಮತಮ್ ।
ಕರಣಾರ್ಪಿತಮಾಖ್ಯಾತಂ ತತೋ ಭಾವಾರ್ಪಿತಂ ಮತಮ್ ॥

ಶಿಷ್ಯ ಸ್ಥಲಂ ತತಃ ಪ್ರೋಕ್ತಂ ಶುಶ್ರೂಷುಸ್ಥಲಮೇವ ಚ ।
ತತಃ ಸೇವ್ಯಸ್ಥಲಂ ಚೈಷಾಂ ಕ್ರಮಶಃ ಶೃಣು ಲಕ್ಷಣಮ್ ॥

(ಸಿ. ಶಿ. ೧೭, ೨–೪)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ಎಲೈ ಅಗಸ್ತ್ಯನೇ ಈ ಪ್ರಸಾದಿಸ್ಥಲದಲ್ಲಿ ಕಾಯಾನುಗ್ರಹಸ್ಥಲ ಇಂದ್ರಿಯಾನುಗ್ರಹಸ್ಥಲ, ಪ್ರಾಣಾನುಗ್ರಹಸ್ಥಲ, ಕಾಯಾರ್ಪಿತ ಸ್ಥಲ, ಕರಣಾರ್ಪಿತಸ್ಥಲ, ಭಾವಾರ್ಪಿತಸ್ಥಲ, ಶಿಷ್ಯಸ್ಥಲ, ಶುಶ್ರೂಷುಸ್ಥಲ ಮತ್ತು ಸೇವ್ಯ ಸ್ಥಲವೆಂಬುದಾಗಿ ಒಂಭತ್ತು ಅವಾಂತರಸ್ಥಲಗಳಿರುತ್ತವೆ. ಕ್ರಮವಾಗಿ ಇವುಗಳ ಲಕ್ಷಣ ಗಳನ್ನು ವಿವರಿಸಲಾಗುವುದು ಆದಕಾರಣ ಚಿತ್ತಗೊಟ್ಟು ಶ್ರವಣಮಾಡು.

ಕಾಯಾನುಗ್ರಹವೆಂದರೆ ಕಾಯದಿಂದ ಅನುಗ್ರಹಿಸುವುದು ಎಂದರ್ಥ. ಜ್ಞಾನಿ ಗಳು ತಮ್ಮ ಕಾಯದಿಂದಲೇ ಅರ್ಥಾತ್ ಶರೀರದಿಂದಲೇ ಜನರಿಗೆ ಅನುಗ್ರಹಿಸುತ್ತಾರೆ. ಹೀಗೆ ಶಿವಜ್ಞಾನಿಗಳು ಅನುಗ್ರಹಿಸುವ ವಿಷಯವನ್ನು ಪ್ರತಿಪಾದಿಸುವ ಸ್ಥಲವೇ ಕಾಯಾನುಗ್ರಹಸ್ಥಲವು. 'ಶುಚಿಃ ಸಮಗ್ರೀವ–ಶಿರಃ ಶರೀರಃ' ಎಂಬ ಕೈವಲ್ಯೋಪ ನಿಷತ್ತಿನ ಮಂತ್ರದಂತೆ ಶಿವಾದ್ವೈತ ಜ್ಞಾನಸಂಪನ್ನನಾದ ಶಿವಯೋಗಿಯ ಶರೀರವು ಪವಿತ್ರವೂ ಮತ್ತು ಯೋಗ ಸಂಸ್ಕಾರ ಸಂಪನ್ನವೂ ಆಗಿರುತ್ತದೆ. ಅಂತೆಯೇ ಅದು ಅನುಗ್ರಹವನ್ನು ಮಾಡುವ ಸಾಮರ್ಥ್ಯವನ್ನು ಪಡೆದುದಾಗಿರುತ್ತದೆ. ಇದೇ ವಿಷಯ ವನ್ನೇ ಪೂಜ್ಯಪಾದರು–

ಅನುಗ್ರಹ್ಣಾತಿ ಯಲ್ಲೋಕಾನ್ ಸ್ವಕಾಯಂ ದರ್ಶಯನ್ನಸೌ ।
ತಸ್ಮಾದೇಷ ಸಮಾಖ್ಯಾತಃ ಕಾಯಾನುಗ್ರಹನಾಮಕಃ ॥

ಶಿವೋ ಯಥಾಽನುಗೃಹ್ಣಾತಿ ಮೂರ್ತಿಮಾವಿಶ್ಯ ದೇಹಿನಃ ।
ತಥಾ ಯೋಗೀ ಶರೀರಸ್ಥಃ ಸರ್ವಾನುಗ್ರಾಹಕೋಭವೇತ್ ॥

ಶಿವಃ ಶರೀರಯೋಗೇಽಪಿ ಯಥಾ ಸಂಗವಿವರ್ಜಿತಃ
ತಥಾ ಯೋಗೀ ಶರೀರಸ್ಥೋ ನಿಸ್ಸಂಗೋ ವರ್ತತೇ ಸದಾ ॥

(ಸಿ. ಶಿ. ೧೭, ೫–೭)

ಈ ವಿಧವಾಗಿ ಉಪದೇಶಿಸಿದ್ದಾರೆ. ಜ್ಞಾನಾಚಾರ ಸಂಪನ್ನನಾದ ಶಿವಯೋಗಿಯು ತನ್ನ ಶರೀರದ ಮುಖಾಂತರ ಲೋಕದ ಜನರಿಗೆ ಅನುಗ್ರಹಿಸುತ್ತಾನೆ. ಆದ್ದರಿಂದಲೇ ಅವನು

ಕಾಯಾನುಗ್ರಹನೆಂಬುದಾಗಿ ಕರೆಯಲ್ಪಡುತ್ತಾನೆ. ಶಿವನು ಮೂರ್ತಿಯಲ್ಲಿ ಪ್ರವೇಶಿಸಿ ಭಕ್ತರನ್ನು ಹೇಗೆ ಅನುಗ್ರಹಿಸುತ್ತಾನೆಯೋ ಅದರಂತೆ ಶಿವಯೋಗಿಯೂ ಸಹ ತನ್ನ ಶರೀರದ ಮುಖಾಂತರ ಅನುಗ್ರಹಿಸುವವನಾಗುತ್ತಾನೆ. ಶಿವನು ಮೂರ್ತಿಯನ್ನು ಪ್ರವೇಶಿಸಿದರೂ ತಾನು ಅಸಂಗನಾಗಿ ಆ ಮೂರ್ತಿಗಿಂತಲೂ ಭಿನ್ನನಾಗಿರುವಂತೆ ಈ ಶಿವಯೋಗಿಯು ಶರೀರದಲ್ಲಿದ್ದರೂ ಶರೀರದ ಸಂಗವಿಲ್ಲದವನಾಗಿರುತ್ತಾನೆ.

ತನ್ನ ಶರೀರದ ಮುಖಾಂತರ ಜನರನ್ನು ಅನುಗ್ರಹಿಸುವ ಶಿವಯೋಗಿಯು ಕಾಯಾನುಗ್ರಾಹಕನೆಂಬುದಾಗಿ ಕರೆಯಲ್ಪಡುತ್ತಾನೆ. ಶಿವನಲ್ಲಿರುವ ಪಂಚಕೃತ್ಯಗಳಲ್ಲಿ ಒಂದಾಗಿರುವ ಕೃತ್ಯವೇ ಅರ್ಥಾತ್ ಶಕ್ತಿಯೇ ಅನುಗ್ರಹವು. ಅನುಗ್ರಹವೆಂದರೆ ಕೊಡು, ದಯಪಾಲಿಸು, ಆಶೀರ್ವದಿಸು ಎಂದರ್ಥ. ಯಾರಲ್ಲಿ ಕೊಡುವ ಸಾಮರ್ಥ್ಯವಿರುತ್ತದೆಯೋ ಅವರೇ ಕೊಡಬಲ್ಲರೇ ವಿನಃ ಅನ್ಯರು ಕೊಡಲು ಸಮರ್ಥರಾಗರು. ಕೊಡುವ ವ್ಯಕ್ತಿಯೂ ಸಹ ತನ್ನಲ್ಲಿದ್ದದ್ದನ್ನು ಕೊಡಬಲ್ಲನೇ ವಿನಃ ಇಲ್ಲದುದನ್ನು ಎಲ್ಲಿಂದ ಕೊಟ್ಟಾನು? ಶಿವಧ್ಯಾನವನ್ನು ಮಾಡುವ ಶಿವಯೋಗಿಯು ನಿರಂತರ ಶಿವನೊಂದಿಗೆ ಸಂಬಂಧಿತನಾಗಿರೋಣದರಿಂದ ಶಿವನ ಆ ಅನುಗ್ರಹ ಶಕ್ತಿಯೇ ಇವನ ಮುಖಾಂತರವಾಗಿ ಹರಿದು ಬಂದು ಜನರಿಗೆ ಅನುಗ್ರಹವನ್ನುಂಟು ಮಾಡುತ್ತದೆ. ದೂರದರ್ಶನ ಕೇಂದ್ರದಿಂದ ಪ್ರಕ್ಷೇಪಿಸಲ್ಪಟ್ಟ ಶಬ್ದ ಹಾಗೂ ಚಿತ್ರಗಳನ್ನು ನಮ್ಮ ಮನೆಯಲ್ಲಿರುವ ಟಿ.ವಿ.ಯು ಗ್ರಹಿಸಿ ಮರಳಿ ಪ್ರಕ್ಷೇಪಿಸಿ ನೋಡುಗರಿಗೆ ಆನಂದವನ್ನುಂಟು ಮಾಡುವಂತೆ, ಅಪಾರ ಅನುಗ್ರಹ ಸಾಮರ್ಥ್ಯವನ್ನು ಹೊಂದಿದ ಶಿವನೊಂದಿಗೆ ಧ್ಯಾನಾದಿಗಳ ಮೂಲಕ ಸಂಬಂಧವನ್ನು ಸ್ಥಾಪಿಸಿಕೊಂಡ ಶಿವಯೋಗಿಯು ಆ ಶಿವನ ಅನುಗ್ರಹವನ್ನೇ ತಾನು ಗ್ರಹಿಸಿ ತನ್ನನ್ನು ನಂಬಿದ ಭಕ್ತಾದಿಗಳಿಗೆ ಪುನಃ ಅನುಗ್ರಹಿಸಿ ಅವರಿಗೆ ಆನಂದವನ್ನುಂಟು ಮಾಡುತ್ತಾನೆ.

ಶಿವನ ಜೊತೆಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕಾದರೆ ಆತನು ಸುಖಾಸನಸ್ಥನೂ ಅಂದರೆ ಸುಖಾಸನದಲ್ಲಿ ಕುಳಿತವನೂ, ಪವಿತ್ರನೂ, ನೆಟ್ಟಗಿನ ಶರೀರವುಳ್ಳವನೂ, ಸಕಲೇಂದ್ರಿಯಗಳನ್ನು ನಿಗ್ರಹಿಸಿದವನೂ ಆಗಿರಬೇಕೆಂಬುದಾಗಿ ಕೈವಲ್ಯೋಪನಿಷತ್ತಿನಲ್ಲಿ ನಿರೂಪಿಸಲಾಗಿದೆ. ಶಿವಯೋಗಾಭ್ಯಾಸಕ್ಕೆ ಮೊದಲು ಬೇಕಾದುದು ಆಸನಸಿದ್ಧಿಯು. ಒಂದೇ ಆಸನದ ಮೇಲೆ ಅನೇಕ ಗಂಟೆಗಳ ಕಾಲ ಸ್ವಲ್ಪೂ ಅಲುಗಾಡದೆ ಕೂಡ್ರುವ ಯೋಗ್ಯತೆ ಬಂದಾಗ ಅದಕ್ಕೆ ಆಸನಸಿದ್ಧಿ ಎನ್ನುತ್ತಾರೆ. ಎಲ್ಲಿಯವರೆಗೆ ಆಸನ ಸ್ಥಿರವಾಗುವದಿಲ್ಲವೋ ಅಲ್ಲಿಯವರೆಗೆ ಮನಸ್ಸು ಸ್ಥಿರಗೊಳ್ಳಲಾರದು. ಒಂದು ಪಾತ್ರೆಯಲ್ಲಿ ನೀರನ್ನು ತುಂಬಿ ಆ ಪಾತ್ರೆಯನ್ನು ಸ್ವಲ್ಪು ಅಲುಗಾಡಿಸಲಾಗಿ, ಆ ಪಾತ್ರೆಯೊಳಗಿನ ನೀರು ದೀರ್ಘಕಾಲದವರೆಗೆ ಕಂಪನ ಹೊಂದುತ್ತಿರುತ್ತದೆ. ಅಲ್ಲದೆ ತನ್ನ ಕಂಪನ ಶಕ್ತಿಯಿಂದ ಅದು ತನಗೆ ಆಧಾರವಾಗಿರುವ ಪಾತ್ರೆಯನ್ನೂ ಸಹ ಸೂಕ್ಷ್ಮವಾಗಿ ಅಲುಗಾಡಿಸುತ್ತಲೇ ಇರುತ್ತದೆ. ಅದರಂತೆ ಶರೀರವೆಂಬ ಪಾತ್ರೆಯಲ್ಲಿ ಮನಸ್ಸೆಂಬ ನೀರು ತುಂಬಿಕೊಂಡಿರುವಾಗ, ಆ ಮನಸ್ಸು ಕಂಪನ ರಹಿತವಾಗಿರಬೇಕಾದರೆ ಶರೀರವನ್ನು ಸುಸ್ಥಿರವಾಗಿ ಇಡಬೇಕು. ಒಂದು ವೇಳೆ ಶರೀರದಲ್ಲಿ ಕಂಪನ ಉಂಟಾಯಿತೆಂದರೆ ಶರೀರದ ಒಂದು ಕಂಪನವು ಮನಸ್ಸಿನ ಅನೇಕ ಕಂಪನಗಳಿಗೆ ಕಾರಣವಾಗುತ್ತದೆ. ಅಂತೆಯೇ ಯೋಗ ಶಾಸ್ತ್ರದಲ್ಲಿ ಸ್ಥಿರವೂ, ಸುಖಕರವೂ ಆದ ಆಸನದಲ್ಲಿ ಮೊದಲು ಶರೀರವನ್ನು

ಸ್ಥಿರಗೊಳಿಸಬೇಕೆಂಬುದಾಗಿ ಹೇಳಿದ್ದಾರೆ. ಆಸನಸ್ಥನಾಗುವ ವ್ಯಕ್ತಿಯು ಸ್ವಸ್ಥನೂ ಆಗಿರಬೇಕು. ಅಸ್ವಸ್ಥ ಕಾಯವುಳ್ಳ ವ್ಯಕ್ತಿಯಿಂದ ಯೋಗಾಭ್ಯಾಸವು ಸಮನಿಸದು. ದೇಹದ ಯಾವುದೇ ಒಂದು ಭಾಗವು ರುಗ್ಣವಾಗಿದ್ದರೆ ಮನಸ್ಸು ಯಾವಾಗಲೂ ಅದನ್ನೇ ಚಿಂತಿಸುತ್ತಿರುತ್ತದೆ. ಆದ್ದರಿಂದ ಶಿವಧ್ಯಾನಾದಿಗಳನ್ನು ಮಾಡಬೇಕಾದರೆ ಸ್ವಸ್ಥವಾದ ಕಾಯವೇ ಬೇಕು. ಸಂಪೂರ್ಣ ಸ್ವಸ್ಥನಾದ ವ್ಯಕ್ತಿಯೇ ಶರೀರವನ್ನು ಮರೆಯಬಲ್ಲನು. ಶರೀರದ ಮರವೆಯಾಗದೇ ಶಿವಧ್ಯಾನವು ಪೂರ್ಣವಾಗದು. ಹೀಗೆ ಯೋಗಾಭ್ಯಾಸವನ್ನು ಮಾಡಬಯಸುವವನು ಸ್ವಸ್ಥನೂ ಸ್ಥಿರಾಸನನೂ ಆಗಿರಬೇಕು.

ಕೇವಲ ಸ್ಥಿರಾಸನತೆಯು ಯೋಗಿಯ ಲಕ್ಷಣವಲ್ಲ, ಅಂತೆಯೇ ಅವನು ಶುಚಿಯಾಗಿರಬೇಕೆಂಬುದಾಗಿ ಹೇಳಲಾಗಿದೆ. ಒಂದು ವೇಳೆ ಸ್ಥಿರಾಸನವುಳ್ಳವನೇ ಯೋಗಿಯೆಂಬುದಾಗಿ ಹೇಳಿದರೆ ಪರ್ವತಗಳು, ಗಿಡಮರಗಳು ಯೋಗಿಗಳಾಗಬೇಕಾದೀತು. ಪರ್ವತಾದಿಗಳು ಕೆಲವು ಘಂಟೆಗಳ ಕಾಲವಲ್ಲ, ಇಡೀ ಜೀವಿತಾವಧಿಯವರೆಗೆ ಸುಸ್ಥಿರಗಳೇ ಆಗಿರುತ್ತವೆ. ಹಾಗಿದ್ದ ಮಾತ್ರಕ್ಕೆ ಅವುಗಳಿಗೆ ಯೋಗಿಯೆನ್ನಬಹುದೇ ? ಅಂತೆಯೇ ಸ್ಥಿರಾಸನದ ಜೊತೆಗೆ ಶುಚಿಯಾಗಿರಬೇಕೆಂತಲೂ ಹೇಳಲಾಗಿದೆ. ಈ ಶುಚಿತ್ವವು ಶರೀರ, ವಾಣಿ ಮತ್ತು ಮನಸ್ಸಿಗೆ ಸಂಬಂಧಪಟ್ಟುದುದಾಗಿದೆ. ಶರೀರವು ಶುಚಿಯಾಗಿರಬೇಕಾದರೆ ಆಹಾರ ಶುದ್ಧವಾಗಿರಬೇಕು. ಯಾಕೆಂದರೆ ಅನ್ನಮಯ ದೇಹವು ಅನ್ನರಸದಿಂದಲೇ ನಿರ್ಮಾಣವಾಗಿರುತ್ತದೆ. ಆದ್ದರಿಂದ ಶರೀರದ ಶುಚಿತ್ವಕ್ಕೆ ಅನ್ನಶುದ್ಧಿಯು ಬೇಕೇ ಬೇಕು. ಇನ್ನು ವಾಣಿಯು ಶುಚಿಯಾಗಿರಬೇಕಾದರೆ ಸದಾ ಮಂಗಲಮಯ ಶಬ್ದಗಳನ್ನೇ ಪ್ರಯೋಗಿಸುತ್ತಿರಬೇಕು. ಎಂದೂ ಅಮಂಗಲ ಶಬ್ದಗಳನ್ನು ವಾಣಿಯಿಂದ ಬಳಸಕೂಡದು. ಅಮಂಗಲ ಶಬ್ದಗಳ ಪ್ರಯೋಗದಿಂದ ವಾಣಿಯು ಅಶುದ್ಧವಾಗುವದಷ್ಟೇ ಅಲ್ಲ ಅವುಗಳನ್ನು ಕೇಳಿದ ವ್ಯಕ್ತಿಯ ಮನಸ್ಸಿನಲ್ಲಿ ಕ್ಷೋಭೆಯುಂಟಾಗಿ ಆ ಪರಿಸರವೆಲ್ಲ ಅಶಾಂತಮಯವಾಗುವುದು. ಆದ್ದರಿಂದ ಯೋಗಾಭ್ಯಾಸಿಯು ಕರ್ಕಶ ಹಾಗೂ ಅಮಂಗಲ ಶಬ್ದಗಳನ್ನು ವಾಣಿಯಿಂದ ಪ್ರಯೋಗಿಸಕೂಡದು.

ಹೀಗೆ ಶರೀರ ಹಾಗೂ ವಾಣಿಗಳನ್ನು ಶುಚಿಯಾಗಿ ಇಟ್ಟುಕೊಂಡ ಶಿವಯೋಗಿಯು ಮನಸ್ಸಿನ ಶುಚಿತ್ವವನ್ನೂ ಸಹ ಕಾಪಾಡಿಕೊಳ್ಳಬೇಕು. ಮನಸ್ಸಿನಲ್ಲಿ ಅನಿಷ್ಟ ಚಿಂತನೆಗಳು ಬಾರದಿರುವಂತೆ ಎಚ್ಚರಿಕೆ ವಹಿಸುವುದೇ ಮನಸ್ಸಿನ ಶುಚಿತ್ವವು. ಯಾರಿಗಾದರೂ ಬಡಿದು ಮತ್ತು ಅವಾಚ್ಯಶಬ್ದಗಳನ್ನು ಪ್ರಯೋಗಿಸಿ ಅವರಿಗೆ ದುಃಖವನ್ನು ಕೊಡುವುದಕ್ಕಿಂತಲೂ ಅವರ ಬಗ್ಗೆ ಮನಸ್ಸಿನಲ್ಲಿ ಅನಿಷ್ಟ ಚಿಂತನೆಯನ್ನೆಸಗುವುದು ಹೆಚ್ಚು ದುಷ್ಪರಿಣಾಮಕಾರಿಯಾಗಿರುತ್ತದೆ. ಆದ್ದರಿಂದ ಅನ್ಯರ ಬಗ್ಗೆ ಮನಸ್ಸಿನಲ್ಲಿ ಅನಿಷ್ಟ ಚಿಂತನೆಯು ಬಾರದ ಹಾಗೆ ನೋಡಿಕೊಳ್ಳಬೇಕು. ಹಾಗಾದಾಗಲೇ ಮನಸ್ಸು ಶುಚಿಯಾಗಿರುತ್ತದೆ. ಹೀಗೆ ತ್ರಿಕರಣಪರಿಶುದ್ಧನಾದ ಶಿವಯೋಗಿಯು ಸಕಲೇಂದ್ರಿಯಗಳನ್ನು ನಿರೋಧಿಸಿಕೊಂಡು ಶಿವನೊಂದಿಗೆ ಧ್ಯಾನಮೂಲಕ ಸಂಬಂಧವನ್ನು ಸ್ಥಾಪಿಸಿದಾಗ ಶಿವನಿಂದ ಪಡೆದ ಶಕ್ತಿಯನ್ನೇ ಜನಸಾಮಾನ್ಯರ ಮೇಲೆ ಅನುಗ್ರಹಿಸುತ್ತ ಕಾಯಾನುಗ್ರಾಹಕನೆನಿಸಿಕೊಳ್ಳುವನು.

ಮಂದಿರಾದಿಗಳಲ್ಲಿ ಪ್ರಾಣಪ್ರತಿಷ್ಠಾಪನ ಪೂರ್ವಕವಾಗಿ ಸಂಸ್ಥಾಪಿಸಲ್ಪಟ್ಟ ದೇವವಿಗ್ರಹಗಳಲ್ಲಿ ಆಹ್ವಾಯಿತನಾದ ಶಿವನು ತನ್ನನ್ನು ನಂಬಿದ ಭಕ್ತರ ಮೇಲೆ ಅನುಗ್ರಹವನ್ನು ಮಾಡುತ್ತಾನೆ. ಈ ರೀತಿಯಾಗಿ ಅವನು ಮೂರ್ತಿಯೊಳಗಿದ್ದು ಅನುಗ್ರಹವನ್ನು ಮಾಡುವಂತೆ, ಶಿವಧ್ಯಾನಾಸಕ್ತನಾದ ಶಿವಯೋಗಿಯು ತಾನು ಶರೀರ ದಲ್ಲಿದ್ದು ಸರ್ವರನ್ನು ಅನುಗ್ರಹಿಸುತ್ತಾನೆ. ಹೀಗೆ ತನ್ನ ಶರೀರದಿಂದ ಅರ್ಥಾತ್ ಕಾಯದಿಂದ ಅನುಗ್ರಹವನ್ನು ಮಾಡೋಣದರಿಂದ ಕಾಯಾನುಗ್ರಾಹಕವೆನ್ನುವರು.

ಶಿವನು ಮೂರ್ತಿರೂಪವಾದ ಶರೀರದಲ್ಲಿ ಸನ್ನಿಹಿತನಾಗಿದ್ದರೂ ಅದರಿಂದ ಅಸಂಗನಾಗಿರುವಂತೆ ಈ ಕಾಯಾನುಗ್ರಾಹಕನಾದ ಶಿವಯೋಗಿಯು ಶರೀರದಲ್ಲಿದ್ದರೂ ಅವನು ಸದಾ ಅದರಿಂದ ಅಸಂಗನೇ ಆಗಿರುತ್ತಾನೆ. ಈ ವಿಧವಾಗಿ ತನ್ನ ಶಿವಯೋಗ ಹಾಗೂ ಶಿವಾದ್ವೈತ ಜ್ಞಾನಗಳ ಸಾಮರ್ಥ್ಯದಿಂದ ತನ್ನ ಕಾಯವನ್ನು ಅನುಗ್ರಹಶಕ್ತಿ ಸಂಪನ್ನವನ್ನಾಗಿ ಮಾಡಿಕೊಂಡ ಶಿವಯೋಗಿಯೇ ಕಾಯಾನುಗ್ರಾಹಕನೆಂದು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೬ ಜುಲೈ, ೧೯೯೪
(ಸ್ಥಾನ ಶಿವಾನುಭವ ಮಂಗಲ ಭವನ' ಸೋಲಾಪೂರ)



ಆಶೀರ್ವಚನ-೨

# ಕಾಯಾನುಗ್ರಹಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಸುಕ್ಷೇತ್ರವಾದ ಸೊನ್ನಲಿಗೆಯಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶ್ರೀ ಕ್ಷೇತ್ರ ಸೊನ್ನಲಿಗೆಯು ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ಶಿವಯೋಗ ಭೂಮಿಯೂ ಹೌದು ಹಾಗೂ ಆತನ ಕರ್ಮಭೂಮಿಯೂ ಹೌದು. ಇಂತಹ ಪವಿತ್ರ ಕ್ಷೇತ್ರದಲ್ಲಿ ನೀವೆಲ್ಲ ಆಸನ, ಪ್ರಾಣಾಯಾಮ ಮತ್ತು ಧ್ಯಾನಾದಿಗಳ ಮೂಲಕ ಶಿವಯೋಗ ಸಾಧನೆಯನ್ನು ಮಾಡುತ್ತ ಶ್ರೀ ಸಿದ್ಧಾಂತ ಶಿಖಾಮಣಿಯ ತತ್ತ್ವಜ್ಞಾನವನ್ನು ಪಡೆಯುತ್ತಿರುವುದು ಯೋಗ ಮತ್ತು ಜ್ಞಾನಗಳ ಒಂದು ಸಮನ್ವಯ ಸಾಧನೆಯಾಗಿದೆ. ಇದು ಕ್ಷೇತ್ರಾಧಿಪತಿಯ ಅನುಗ್ರಹಕ್ಕೂ ಸಾಧನವಾಗಿರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನ ಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕಾಯಾನುಗ್ರಹದ ಬಗ್ಗೆ ಕೆಲವೊಂದು ವಿಚಾರಗಳನ್ನು ಅರಿತವರಾಗಿರುವಿರಿ. ಇಂದು ಅದೇ ಸ್ಥಲದ ಹೆಚ್ಚಿನ ವಿಷಯಗಳನ್ನು ವಿವೇಚಿಸೋಣ.

ಅನುಗ್ರಹವೆಂದರೆ ಆಶೀರ್ವಾದ, ಕೃಪೆ, ಎಂದರ್ಥ. ನಮ್ಮ ಮೇಲೆ ಅನುಗ್ರಹ ವನ್ನು ಮಾಡುವವರು ಮುಖ್ಯವಾಗಿ ಇಬ್ಬರು ಇದ್ದಾರೆ. ಅವರೇ ಗುರು ಮತ್ತು ದೇವರು. ಇವರ ನಂತರ ಬರುವವರೇ ತಂದೆ ತಾಯಿಗಳು. ಶಿವಯೋಗ ಹಾಗೂ ಶಿವಜ್ಞಾನ ಸಂಪನ್ನನಾದ ಶಿವಯೋಗಿಯು ಜನಸಾಮಾನ್ಯರ ಮೇಲೆ ಹೇಗೆ ಅನುಗ್ರಹವನ್ನು ಮಾಡು ತ್ತಾನೆಂಬುದರ ಬಗ್ಗೆ ಪೂಜ್ಯಪಾದರು ಇಲ್ಲಿ ತಿಳಿಯಪಡಿಸುತ್ತಿದ್ದಾರೆ. ಶಿವಯೋಗಿಯು ತನ್ನ ಸರ್ವೇಂದ್ರಿಯಗಳನ್ನು ನಿಗ್ರಹಿಸಿಕೊಂಡಿರೋಣದರಿಂದ ಅವನಿಗೆ ಅನುಗ್ರಹ ಶಕ್ತಿಯು ಪ್ರಾಪ್ತವಾಗುತ್ತದೆ.

ನಮ್ಮ ಜ್ಞಾನೇಂದ್ರಿಯ ಹಾಗೂ ಕರ್ಮೇಂದ್ರಿಯಗಳು ತಮ್ಮ ತಮ್ಮ ವಿಷಯ ವ್ಯವಹಾರಗಳಲ್ಲಿ ಆಸಕ್ತವಾದಾಗ ಮನುಷ್ಯನ ದೈಹಿಕ ಹಾಗೂ ಮಾನಸಿಕ ಬಲವು ಹ್ರಾಸವಾಗುತ್ತದೆ. ಒಂದು ವಾಹನವು ರಸ್ತೆಯಲ್ಲಿ ವೇಗವಾಗಿ ಓಡುತ್ತಿರುವಾಗ ಅದರಲ್ಲಿ ಸಂಗ್ರಹಿಸಲ್ಪಟ್ಟ ಪೆಟ್ರೋಲ್, ಡೀಜೇಲ್ ಮುಂತಾದ ಇಂಧನವೂ ಹೇಗೆ ಕಡಿಮೆ

ಯಾಗುತ್ತಿರುತ್ತದೆಯೋ ಅದರಂತೆ ಶರೀರದಲ್ಲಿಯ ಇಂದ್ರಿಯಗಳ ವ್ಯವಹಾರವು ನಡೆದಾಗ ದೇಹ ಹಾಗೂ ಮನಸ್ಸಿನ ಬಲಗಳು ಕುಗ್ಗುತ್ತಿರುತ್ತವೆ. ಸಕಲ ವ್ಯವಹಾರಗಳಿಂದ ದಣಿದ ಓರ್ವ ವ್ಯಕ್ತಿಯು ರಾತ್ರಿಯಲ್ಲಿ ವಿಶ್ರಾಂತಿಯನ್ನು ಬಯಸುತ್ತಾನೆ. ಆ ಸಮಯದ ವಿಶ್ರಾಂತಿಯೆಂದರೆ ಸರ್ವ ಇಂದ್ರಿಯಗಳು ಮತ್ತು ಮನಸ್ಸು ತಮ್ಮ ತಮ್ಮ ವ್ಯವಹಾರ ಗಳನ್ನು ಮಾಡದೇ ಇರುವುದು ಎಂದರ್ಥ. ಗಾಢ ನಿದ್ರೆಯಲ್ಲಿರುವಾಗ ನಮ್ಮ ಇಂದ್ರಿಯ ಗಳ ವ್ಯವಹಾರವು ಸಂಪೂರ್ಣವಾಗಿ ನಿಂತುಹೋಗಿರುತ್ತದೆಯಲ್ಲದೆ ಮನಸ್ಸೂ ಸಹ ಆತ್ಮದಲ್ಲಿ ಲೀನವಾಗಿರುತ್ತದೆ. ಹೀಗೆ ಸರ್ವೇಂದ್ರಿಯ ದ್ವಾರಗಳು ಮುಚ್ಚಿಕೊಂಡಿ ರೋಣದರಿಂದ ಶಕ್ತಿಯು ಹ್ರಾಸವಾಗಲು ಅಲ್ಲಿ ಅವಕಾಶವಿರುವುದಿಲ್ಲ. ಒಂದು ಹೌದು ಅಥವಾ ನೀರಿನ ತೊಟ್ಟಿಗೆ ಹಚ್ಚಿದ ನಲ್ಲಿಗಳನ್ನು ಬಂದು ಮಾಡಿ ಅದಕ್ಕೆ ನೀರು ಬಿಟ್ಟಾಗ ಅದು ಪರಿಪೂರ್ಣವಾಗಿ ತುಂಬುತ್ತದೆ. ಪುನಃ ಆ ನಲ್ಲಿಗಳನ್ನು ತಿರುವಿ ಚಾಲು ಮಾಡಿದಾಗ ಹೌದಿನೊಳಗಿನ ನೀರು ಕ್ರಮವಾಗಿ ಕಡಿಮೆಯಾಗಿ ಕೊನೆಗೆ ಸಂಪೂರ್ಣವಾಗಿ ಇಲ್ಲದಾಗಿ ಹೋಗುತ್ತದೆ. ಆ ಹೌದನ್ನು ಪುನಃ ನೀರಿನಿಂದ ತುಂಬಬೇಕಾದಾಗ ನಲ್ಲಿಗಳ ಬಾಯಿ ಬಂದುಮಾಡಬೇಕಾಗುವುದು. ಇದು ನಾವು ಪ್ರತಿನಿತ್ಯ ನೋಡುವ ವ್ಯವಹಾರವು. ಇದರಂತೆ ಮನುಷ್ಯನು ತನ್ನ ಸಕಲೇಂದ್ರಿಯಗಳ ದ್ವಾರವನ್ನು ಬಂದು ಮಾಡಿಕೊಂಡು ತಾನು ಗಾಢವಾದ ನಿದ್ರೆಯಲ್ಲಿದ್ದಾಗ ಇವನಲ್ಲಿ ಶಕ್ತಿಯ ಸಂಚಯವಾಗತೊಡಗುತ್ತದೆ. ಎಂಟು ತಾಸುಗಳ ವರೆಗೆ ನಿದ್ರೆಯಲ್ಲಿ ತಾನು ಸಂಗ್ರಹಿಸಿದ ಆ ಶಕ್ತಿಯನ್ನೇ ಹದಿನಾರು ತಾಸುಗಳವರೆಗೆ ದಿನಾಲೂ ಬಳಸುತ್ತಿರುತ್ತಾನೆ. ಹೀಗೆ ಶಕ್ತಿಯ ಸಂಗ್ರಹ ಹಾಗೂ ಹ್ರಾಸ ಕ್ರಿಯೆಗಳು ನಿರಂತರವಾಗಿ ನಡೆದೇ ಇರುತ್ತವೆ. ಈ ವ್ಯವಹಾರದಿಂದ ತಿಳಿದುಬರುವ ತಥ್ಯವೇನೆಂದರೆ, ಇಂದ್ರಿಯಗಳನ್ನು ನಿರೋಧಮಾಡದೆ ಶಕ್ತಿಯನ್ನು ಸಂಗ್ರಹಿಸ ಲಾಗುವುದಿಲ್ಲ. ಆದ್ದರಿಂದ ಶಿವಯೋಗಿಯಾದವನು ತನ್ನ ಯೋಗಾಭ್ಯಾಸದ ಬಲದಿಂದ ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳನ್ನು ನಿರೋಧಿಸಿ ಶಿವಧ್ಯಾನದಲ್ಲಿ ತಲ್ಲೀನ ನಾದಾಗ ಶಿವನಲ್ಲಿರುವ ಲೋಕಾನುಗ್ರಹ ಶಕ್ತಿಯು ಇವನಲ್ಲಿ ಸಂಗ್ರಹಿತವಾಗಿ ಅದನ್ನೇ ಆತನು ಪುನಃ ತನ್ನಲ್ಲೇ ಶ್ರದ್ಧೆ ವಿಶ್ವಾಸವುಳ್ಳ ಭಕ್ತಾದಿಗಳಿಗೆ ಅನುಗ್ರಹಿಸುತ್ತಿರುತ್ತಾನೆ.

ವಿಶ್ವಾಧಿಪತಿಯಾದ ಶಿವನಲ್ಲಿ ಸೃಷ್ಟಿ, ಪಾಲನೆ, ಸಂಹಾರ, ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಶಕ್ತಿಗಳಿರುತ್ತವೆ. ಈ ಪಂಚಶಕ್ತಿಗಳನ್ನೇ ಪುರಾಣಗಳಲ್ಲಿ ಶಿವನ ಪಂಚಮುಖಗಳೆಂಬುದಾಗಿ ಕರೆದಿದ್ದಾರೆ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬವುಗಳೇ ಆ ಪಂಚಮುಖಗಳು. ತಾತ್ವಿಕ ಗ್ರಂಥಗಳಲ್ಲಿ ಇವುಗಳಿಗೇನೇ ಶಕ್ತಿಗಳೆಂಬುದಾಗಿ ಕರೆದಿದ್ದಾರೆ. ಶಿವನು ತನ್ನ ಪಂಚ ಶಕ್ತಿಗಳ ಸಹಾಯ ದಿಂದ ಜಗತ್ತಿನ ಸಂಚಾಲನೆಯನ್ನು ಮಾಡುತ್ತಿರುತ್ತಾನೆ. ಶಿವನಲ್ಲಿರುವ ಈ ಪಂಚಶಕ್ತಿಗಳು ಶಿವಧ್ಯಾನಾಸಕ್ತನಾದ ಶಿವಯೋಗಿಯಲ್ಲಿಯೂ ಅಲ್ಪ ಪ್ರಮಾಣದಲ್ಲಿ ಇದ್ದೇ ಇರುತ್ತವೆ. ಅಂತೆಯೇ ಅವನೂ ಸಹ ಅವುಗಳ ಬಳಕೆಯನ್ನು ಸಮಯಾನುಸಾರವಾಗಿ ಮಾಡುತ್ತಿರು ತ್ತಾನೆ. ಆ ಶಿವಯೋಗಿಯು ಮಾಡುವ ಅನುಗ್ರಹ ವಿಷಯಕವಾಗಿಯೇ ಈ ಸ್ಥಲದಲ್ಲಿ ಪ್ರತಿಪಾದಿಸಲ್ಪಟ್ಟಿರೋಣದರಿಂದ ಇದಕ್ಕೆ ಕಾಯಾನುಗ್ರಹಸ್ಥಲವೆಂದು ಕರೆಯಲಾಗಿದೆ.

ಈ ಶಿವಯೋಗಿಯು ಕಾಯದಲ್ಲಿ ಇದ್ದರೂ ಕಾಯಗುಣಗಳಿಂದ ನಿಸ್ಸಂಗನಾಗಿರುತ್ತಾನೆ ಎಂಬುದಾಗಿ ಪೂಜ್ಯರು ಈ ಹಿಂದೆ ಅಪ್ಪಣೆಕೊಡಿಸಿದ್ದಾರೆ. ಸಾಮಾನ್ಯವಾಗಿ ನಾವು ಯಾರ ಸಹವಾಸದಲ್ಲಿರುತ್ತೇವೆಯೋ ಅವರ ಗುಣದೋಷಗಳು ನಮಗೆ ಅಂಟಿಕೊಳ್ಳುವುದು ಸಹಜ. ಆದರೆ ಶಿವಯೋಗಿಯು ಶಿವನಂತೆ ನಿಸ್ಸಂಗನಾಗಿರುತ್ತಾನೆ. ಶಿವ ವಿಗ್ರಹಗಳಲ್ಲಿ ಇರುವ ಶಿವನು ಆ ವಿಗ್ರಹಗಳ ಗುಣದೋಷಗಳಿಂದ ಅಸಂಗನಾಗಿರುತ್ತಾನೆ. ಶಿಲಾ ನಿರ್ಮಿತವಾದ ಶಿವಲಿಂಗವು ವಸ್ತುತಃ ಜಡವಾಗಿಯೇ ಇರುತ್ತದೆ. ಆದರೂ ಶಿಲೆಯಲ್ಲಿರುವ ಆ ಜಡತ್ವವು ಶಿಲಾಮೂರ್ತಿಯಲ್ಲಿರುವ ಶಿವನಿಗೆ ಅಂಟಿಕೊಳ್ಳುವದಿಲ್ಲ. 'ಸ್ವಪರ ಜ್ಞಪ್ತಿಶೂನ್ಯತ್ವಂ ಜಡತ್ವಮ್' ಎಂಬ ಲಕ್ಷಣಕ್ಕನುಸಾರವಾಗಿ ತನ್ನ ಮತ್ತು ಇನ್ನೊಂದರ ಜ್ಞಾನವಿಲ್ಲದಿರುವಿಕೆಯೇ ಜಡತ್ವವು. ಕಲ್ಲು, ಮಣ್ಣು ತಾಮ್ರ, ಹಿತ್ತಾಳೆ, ಬೆಳ್ಳಿ, ಬಂಗಾರ ಮುಂತಾದ ಧಾತುಗಳಿಂದ ದೇವ ವಿಗ್ರಹಗಳನ್ನು ಕಲಾಕಾರರು ನಿರ್ಮಿಸುತ್ತಾರೆ. ಆ ಮೂರ್ತಿಗಳಿಗೆ ಸಂಸ್ಕಾರವನ್ನು ಕೊಟ್ಟು ಅವುಗಳನ್ನು ಮಂದಿರಗಳಲ್ಲಿ ಪ್ರತಿಷ್ಠಾಪಿಸಿ, ಆ ಮೂರ್ತಿಗಳಲ್ಲಿ ದೇವರನ್ನು ಆಹ್ವಾನಿಸಿ ಪ್ರಾಣ ಪ್ರತಿಷ್ಠಾಪನೆ ಮಾಡುತ್ತಾರೆ. ಶ್ರದ್ಧಾಳುಗಳಾದ ಭಕ್ತರು ದೇವತ್ವಭಾವನೆಯಿಂದ ಅವುಗಳನ್ನು ಪೂಜಿಸಿ ತಮ್ಮ ತಮ್ಮ ಅಭೀಷ್ಟಗಳನ್ನು ಪೂರ್ಣಮಾಡಿಕೊಳ್ಳುವುದು ಲೋಕದಲ್ಲಿ ಸರ್ವಾನುಭವಸಿದ್ಧವಾಗಿದೆ. ಹೀಗೆ ಆಯಾ ಮೂರ್ತಿಗಳಲ್ಲಿ ಆಯಾ ದೇವರ ಅಸ್ತಿತ್ವವಿದ್ದಾಗಲೂ ಆ ದೇವರುಗಳು ಆ ಮೂರ್ತಿಯ ಯಾವುದೇ ಪ್ರಕಾರವಾದ ದೋಷಗಳಿಂದ ಲಿಪ್ತವಾಗದೇ ಇರುವಂತೆ ಶಿವಜ್ಞಾನಸಂಪನ್ನನಾದ ಶಿವಯೋಗಿಯು ಕಾಯದಲ್ಲಿದ್ದರೂ ಕಾಯಗುಣಗಳಿಂದ ಅಲಿಪ್ತನಾಗಿರುತ್ತಾನೆ. ಅಂತೆಯೇ ಪೂಜ್ಯಪಾದರು ''ತಥಾ ಯೋಗೀ ಶರೀರಸ್ಥೋ ನಿಸ್ಸಂಗೋ ವರ್ತತೇ ಸದಾ'' ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಶರೀರದೊಳಗಿನ ಆತ್ಮವು ದೇಹದಲ್ಲಾಗುವ ಯಾವ ವಿಕಾರಗಳಿಂದಲೂ ವಿಕೃತಿಯನ್ನು ಹೊಂದುವದಿಲ್ಲ ಎಂಬ ವಿಚಾರವಾಗಿ ಶ್ರೀ ಮದ್ಭಗವದ್ಗೀತೆಯಲ್ಲಿ–

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥

ಹೀಗೆ ಹೇಳಲಾಗಿದೆ. ಶಸ್ತ್ರಗಳಿಂದ ಶರೀರವು ಕತ್ತರಿಸಲ್ಪಡಬಹುದು. ಅಗ್ನಿಯಿಂದ ಸುಡಲ್ಪಡಬಹುದು. ನೀರಿನಿಂದ ತೋಯಿಸಲ್ಪಡಬಹುದು. ಮತ್ತು ಗಾಳಿಯಿಂದ ಒಣಗಿಸಲ್ಪಡಬಹುದು. ಆದರೆ ಈ ಯಾವ ವಿಕಾರಗಳೂ ಶರೀರದೊಳಗಿರುವ ಆತ್ಮಕ್ಕೆ ಆಗಲಾರವು. ಅದರಂತೆ ಸರ್ವರ ಮೇಲೆ ಅನುಗ್ರಹವನ್ನು ಮಾಡುವ ಶಿವಯೋಗಿಯು ತನ್ನ ದೇಹ ವಿಕಾರಗಳಿಂದ ವಿಕೃತಿಯನ್ನು ಹೊಂದಲಾರನು. ಯಾಕೆಂದರೆ ಈತನು ದೇಹಾದಿಗಳ ಮೇಲೆ ಮಮತ್ವಾಭಿಮಾನ ಶೂನ್ಯನಾಗಿರುತ್ತಾನೆ.

ಶಿವಯೋಗಿಯು ತನ್ನ ನಿರ್ವಿಕಾರ ಸ್ಥಿತಿಯಿಂದ ಶಿವಸಮಾನನೆಂಬುದಾಗಿ ಹೇಳಿದ ಪೂಜ್ಯರು ಈ ಮುಂದೆ ಅವನು ಶಿವಸ್ವರೂಪನೇ ಎಂಬುದನ್ನು ತಿಳಿಸಲೋಸುಗ–

ಶಿವಭಾವನಯಾ ಯುಕ್ತಃ ಸ್ಥಿರಯಾ ನಿರ್ವಿಕಲ್ಪಯಾ ।
ಶಿವೋ ಭವತಿ ನಿರ್ಧೂತ ಮಾಯಾವೇಶಪರಿಪ್ಲವಃ ॥

(ಸಿ.ಶಿ. ೧೭–೮)

ಹೀಗೆ ನಿರೂಪಿಸಿದ್ದಾರೆ. ಈ ಶಿವಯೋಗಿಯು 'ಶಿವೋऽಹಂ' ಎಂಬ ದೃಢವಾದ ಮತ್ತು ಭೇದರಹಿತವಾದ ಭಾವನೆಯಿಂದ ಕೂಡಿಕೊಂಡಿರೋಣದರಿಂದ ಮಾಯೆಯ ಆವೇಶ ದಿಂದ ಮುಕ್ತನಾಗಿ ಸಾಕ್ಷಾತ್ ಶಿವನೇ ಆಗಿರುತ್ತಾನೆ.

ಶಿವಯೋಗಿಯು ಶಿವನೇ ತಾನಾಗಬೇಕಾದರೆ ಶಿವಭಾವನೆಯು ಅತೀ ಮುಖ್ಯ ವಾದುದು. ಸದಾವಕಾಲ 'ಶಿವೋऽಹಂ' ಭಾವನೆಯನ್ನು ತಾಳುತ್ತಿರುವ ಶಿವಯೋಗಿಯು ಭೇದ ಬುದ್ಧಿವಿರಹಿತನಾಗಿ ಮತ್ತು ಸ್ಥಿರಚಿತ್ತವುಳ್ಳವನಾಗಿ ಶಿವ ಸ್ವರೂಪನೇ ಆಗುತ್ತಾನೆ. ಹೀಗೆ ಶಿವ ಸ್ವರೂಪನಾದ ಶಿವಯೋಗಿಯ ಚಿತ್ತದಲ್ಲಿ ಶಿವನ ಹೊರತಾಗಿ ಬೇರಾವ ವಿಚಾರಗಳು ಸುಳಿಯಲಾರವು. ಅಂತೆಯೇ ಆತನು ಮಾಯೆಯ ಆವೇಶದಿಂದ ಮುಕ್ತನಾಗಿರುತ್ತಾನೆ.

ಮನಸ್ಸಿನಲ್ಲಿ ಮಾಯೆಯ ಆವೇಶವಾಯಿತೆಂದರೆ ಆತನ ಅವಸ್ಥೆಯು ಭೂತ ಸಂಚಾರವಾದ ವ್ಯಕ್ತಿಯಂತಾಗುತ್ತದೆ. ಯಾರದಾದರೂ ಶರೀರದಲ್ಲಿ ಭೂತಾವೇಶ ವಾಯಿತೆಂದರೆ, ಅದು ಆ ವ್ಯಕ್ತಿಯ ವ್ಯಕ್ತಿತ್ವವನ್ನು ಮರೆಮಾಚಿ ತನ್ನದೇ ಆದ ವಿಕಾರಗಳ ತಾಂಡವವನ್ನು ಪ್ರಾರಂಭಿಸುತ್ತದೆ. ಈ ಮಾಯಾವೇಶವುಳ್ಳ ವ್ಯಕ್ತಿಯು ಈಶ್ವರನ ಸಮೀಪಕ್ಕೆ ಹೋಗಿಯೂ ಈಶ್ವರನನ್ನು ಬೇಡದೆ ಅವನ ಮಾಯೆಯನ್ನೇ ಬೇಡಿ ಅದರಿಂದ ಸುಖಿಯಾಗಲು ಪ್ರಯತ್ನಿಸುತ್ತಾನೆ. ಆದರೆ ಮಾಯಾವೇಶವುಳ್ಳ ಅದಾವ ವ್ಯಕ್ತಿಯೂ ಸುಖಿಯಾಗಿರಲು ಸಾಧ್ಯವಾಗುವದಿಲ್ಲ. ಕಾರಣ ಶಿವಯೋಗ ಸಾಧಕನು ಇದರಿಂದ ದೂರನಾಗಿರಲು ಪ್ರಯತ್ನಿಸಬೇಕು.

ಒಂದು ಊರಿನಲ್ಲಿ ಓರ್ವ ಭಕ್ತನು ದೇವದರ್ಶನಕ್ಕಾಗಿ ದೇವರಗುಡಿಗೆ ಹೊರಟಿದ್ದನು. ಸ್ವಲ್ಪು ದಾರಿನಡೆದು ಮುಂದೆ ಹೋದಾಗ 'ರಿಕ್ತಹಸ್ತೇನ ಮ ವ್ರಜೇತ್' ಅಂದರೆ ದೇವರ ಬಳಿಗೆ ಹೋಗುವಾಗ ಬರಿಗೈಯಿಂದ ಹೋಗಕೂಡದು' ಎಂಬ ಸೂಕ್ತಿಯ ನೆನಪಾಗಿ ಅಯ್ಯೋ ನಾನು ಬರಿಗೈಯಿಂದ ಹೊರಟಿದ್ದೇನಲ್ಲ ದೇವರಿಗೆ ಏನಾದರೂ ತೆಗೆದುಕೊಂಡು ಹೋಗಬೇಕು ಎಂಬ ವಿಚಾರವು ಮನಸ್ಸಿನಲ್ಲಿ ಬಂದಾಗ ರಸ್ತೆಯ ಪಕ್ಕದಲ್ಲಿರುವ ಹತ್ತಿಯ ಹೊಲದ ಕಡೆಗೆ ಅವನ ಲಕ್ಷ್ಯ ಹೋಯಿತು. ಆಗ ಅವನು ಬತ್ತಿಗಾಗಿಯಾದರೂ ಸ್ವಲ್ಪು ಹತ್ತಿಯನ್ನು ಒಯ್ಯೋಣವೆಂದು ಈ ಹೊಲದೊಳಗೆ ಹೋಗಿ ಹತ್ತಿಯನ್ನು ಬಿಡಿಸತೊಡಗಿದನು. ಆಗ ಅವನ ಚಿತ್ತದಲ್ಲಿ ಹೊಳೆದುದೇನೆಂದರೆ ಕೇವಲ ಬತ್ತಿಯಿಂದ ದೀಪವನ್ನು ಹಚ್ಚಲಿಕ್ಕಾಗುವುದಿಲ್ಲ ಅದಕ್ಕೆ ಎಣ್ಣೆಯೂ ಬೇಕು ಎಂಬುದಾಗಿ ಆಲೋಚಿಸಿ ಒಂದು ದೊಡ್ಡ ಗಂಟಿನಷ್ಟು ಹತ್ತಿಯನ್ನು ಬಿಡಿಸಿಕೊಂಡು ಮಾರುಕಟ್ಟೆಗೆ ತೆಗೆದುಕೊಂಡು ಹೋದನು. ಅಲ್ಲಿ ಆ ಹತ್ತಿಯನ್ನು ಮಾರಿ ಬಂದ ಹಣದಿಂದ ಎಣ್ಣೆಯನ್ನು ಖರೀದಿ ಮಾಡಿಲಾಗಿ ಸುಮಾರು ಎರಡು–ಮೂರು ಎಣ್ಣೆಯ ಡಬ್ಬೆಗಳು ಪ್ರಾಪ್ತವಾದವು. ಆಗ ಅವನು ಮನಸ್ಸಿನಲ್ಲಿ ವಿಚಾರಿಸಿದ್ದೇನೆಂದರೆ ದೀಪಕ್ಕಾಗಿ ಇಷ್ಟೊಂದು ಎಣ್ಣೆಯ ಅವಶ್ಯಕತೆಯಿರುವುದಿಲ್ಲ, ಇದನ್ನು ಪುನಃ ಮಾರಾಟ ಮಾಡಿದರಾಯಿತು ಎಂಬುದಾಗಿ ಯೋಚಿಸಿ ಎಣ್ಣೆಯ ವ್ಯಾಪಾರದಲ್ಲಿ ತೊಡಗಿದನು. ಹೀಗೆ ದೇವರ ದರ್ಶನಕ್ಕಾಗಿ ಹೊರಟ ವ್ಯಕ್ತಿಯ ಮನಸ್ಸಿನಲ್ಲಿ ಮಾಯೆಯು ಪ್ರವೇಶಿಸಿ

ದಾಗ ಆತನು ದೇವರನ್ನೇ ಮರೆತು ಮಾಯಾ ಪ್ರಪಂಚದಲ್ಲಿ ಆಸಕ್ತನಾಗುತ್ತಾನೆ. ಅಂತೆಯೇ ಹಿಂದಿಯಲ್ಲಿ

''ನಿಕಲಾಥಾ ಹರಿದರ್ಶನಕೇಲಿಯೇ
ಕಿಂತೂ ಓಟನಲಗೇ ಕಪಾಸ್'' ಎಂಬ ಉಕ್ತಿಯು ಪ್ರಸಿದ್ಧವಾಗಿದೆ.

ತಾಯಿಯ ಗರ್ಭದಲ್ಲಿದ್ದಾಗ ಆ ಗರ್ಭಸ್ಥ ಯಾತನೆಯನ್ನು ಕ್ಷಣ ಕ್ಷಣಕ್ಕೂ ಅನುಭವಿಸುತ್ತಿರುವ ಶಿಶುವು ಈ ಗರ್ಭವಾಸದಿಂದ ಮುಕ್ತನನ್ನಾಗಿ ಮಾಡುವಂತೆ ಪರಮಾತ್ಮನನ್ನು ಪ್ರಾರ್ಥಿಸಿಕೊಳ್ಳುತ್ತಿರುತ್ತದೆ. ಈ ಯಾತನೆಯಿಂದ ನಾನು ಪಾರಾದ ಮೇಲೆ ಸದಾ ನಿನ್ನ ಚಿಂತನೆಯಲ್ಲಿಯೇ ಇರುತ್ತೇನೆಂಬುದಾಗಿ ಪರಮಾತ್ಮನಿಗೆ ಅಭಿವಚನ ಕೊಟ್ಟಿದ್ದರೂ ಪ್ರಸೂತಿಯ ಕಾಲದಲ್ಲಿ ಯಾವಾಗ ಆ ಶಿಶುವಿನಲ್ಲಿ ಮಾಯಾವೇಶವಾಗುವುದೋ ಆಗ ಅದೆಲ್ಲವನ್ನೂ ಮರೆತು ಮಾಯಾಧೀನವಾಗಿ ಪ್ರಪಂಚದಲ್ಲಿ ಸಿಲುಕಿಕೊಂಡುಬಿಡುತ್ತದೆ. ಈ ಮಾಯೆಯ ಆವೇಶದಿಂದ ಬಿಡುಗಡೆಯಾಗದ ಹೊರತಾಗಿ ಶಿವತ್ವವು ಪ್ರಾಪ್ತಿಯಾಗಲಾರದು. ಅಂತೆಯೇ ಪೂಜ್ಯಪಾದರು ಶಿವಸ್ವರೂಪನಾದ ಶಿವಯೋಗಿಯು ಮಾಯಾವೇಶದಿಂದ ಮುಕ್ತನಾಗುತ್ತಾನೆಂಬುದಾಗಿ ಉಪದೇಶಿಸಿದ್ದಾರೆ.

ಹೀಗೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ಮನಸ್ಸಿನಲ್ಲಿ ಶಿವೋऽಹಂ ಭಾವನೆಯನ್ನು ಸ್ಥಿರಗೊಳಿಸಿಕೊಂಡಾಗ ಆತನ ಮನಸ್ಸಿನಲ್ಲಿರುವ ಭೇದ–ಭಾವನೆಗಳಾಗಲಿ ಮಾಯಾ ಪ್ರೇರಿತಗಳಾದ ಆಶೆ–ಆಕಾಂಕ್ಷೆಗಳಾಗಲಿ ಇಲ್ಲದಾಗಿ ಹೋಗಿ ಆತನು ಸಾಕ್ಷಾತ್ ಶಿವ ಸ್ವರೂಪನೇ ಆಗಿರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿ : ಶಾಂತಿ : ಶಾಂತಿ :

ದಿನಾಂಕ ೧೭ ಜುಲೈ, ೧೯೯೪
(ಸ್ಥಾನ. ಶಿವಾನುಭವ ಮಂಗಲ ಭವನ' ಸೋಲಾಪೂರ)

■■

ಆಶೀರ್ವಚನ-೩

# ಕಾಯಾನುಗ್ರಹಸ್ಥಲ

ಧರ್ಮಾಸಕ್ತರೇ !

ಸುಕ್ಷೇತ್ರವಾದ ಸೊನ್ನಲಾಪುರದಲ್ಲಿ ಆಷಾಢ ಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಹೃದಯಂಗಮವಾಗಿ ಜರುಗುತ್ತಲಿವೆ. ಸೊನ್ನಲಿಗೆಯು ಅರವತ್ತೆಂಟು ತೀರ್ಥ ಹಾಗೂ ಶಿವಲಿಂಗಗಳಿಂದ ಪರಿಶೋಭಿಸುತ್ತಿರುವ ಒಂದು ದಿವ್ಯ ಕ್ಷೇತ್ರವು. ಇದು ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ತಪೋಭೂಮಿಯೂ ಹೌದು ಮತ್ತು ಆತನ ಕರ್ಮಭೂಮಿಯೂ ಹೌದು. ಇಂತಹ ದಿವ್ಯ ಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಸಾಧನೆಯ ಜೊತೆಗೆ, ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕಾಯಾನುಗ್ರಹದ ಬಗ್ಗೆ ಕೆಲವೊಂದು ವಿಚಾರಗಳನ್ನು ಶ್ರವಣ ಮಾಡಿದ್ದೀರಿ. ಇಂದೂ ಸಹ ಅದೇ ಸ್ಥಲದ ಅವಶಿಷ್ಟ ಭಾಗವನ್ನು ಕುರಿತು ಪರ್ಯಾಲೋಚಿಸೋಣ.

ಮನುಷ್ಯನ ಮನಸ್ಸಿನಲ್ಲಿ ಯಾವಾಗ ಮಾಯೆಯ ಪ್ರವೇಶವಾಗುವುದೋ ಆಗ ಅವನು ಈಶ್ವರನಿಂದ ವಿಮುಖನಾಗುತ್ತಾನೆ ಎಂಬ ವಿಷಯವನ್ನು ನಿನ್ನೆ ನೀವೆಲ್ಲ ಆಲಿಸಿದ್ದೀರಿ. ಈ ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಬ್ಬ ವ್ಯಕ್ತಿಯ ಪ್ರವೃತ್ತಿಯು ಸ್ವಾಭಾವಿಕವಾಗಿ ಪ್ರಪಂಚಾಭಿಮುಖವಾಗಿರುತ್ತದೆ. ಇನ್ನು ಯಾರ ಮನಸ್ಸಿನಲ್ಲಿ ವಿವೇಕದ ಉದಯವಾಗುವುದೋ ಅವನೇ ಈಶ್ವರಾಭಿಮುಖನಾಗುತ್ತಾನೆ. ಈಶ್ವರಾಭಿಮುಖನಾದ ವ್ಯಕ್ತಿಯು ಪಡೆಯುವ ಆನಂದದ ಒಂದು ಅಂಶವೂ ಸಹ ಸಂಸಾರಿಗೆ ದೊರೆಯಲಾರದು. ಆದ್ದರಿಂದ ಶಿವಯೋಗಿಯು ಮಾಯಾವೇಶದಿಂದ ಬಿಡುಗಡೆಯಾಗಿ ಶಿವಚಿಂತನೆಯನ್ನು ಮಾಡುತ್ತ ಶಿವಸ್ವರೂಪನೇ ಆಗುತ್ತಾನೆ. ಇದೇ ವಿಷಯವನ್ನೇ ಪೂಜ್ಯಪಾದರು ಪುನಃ–

> ಚಿತ್ತವೃತ್ತಿಷು ಲೀನಾಸು ಶಿವೇ ಚಿತ್ಸುಖಸಾಗರೇ ।
> ಅವಿದ್ಯಾ ಕಲ್ಪಿತಂ ವಸ್ತು ನಾನ್ಯತ್ಪಶ್ಯತಿ ಸಂಯಮೀ ॥

(ಸಿ.ಶಿ. ೧೭–೯)

ಈ ವಿಧವಾಗಿ ವಿವರಿಸಿದ್ದಾರೆ. ಚೈತನ್ಯ ಸಾಗರನಾದ ಶಿವನಲ್ಲಿ ಮನಸ್ಸಿನ ವೃತ್ತಿಗಳು ವಿಲೀನವಾಗಲು ಸಂಯಮಿಯಾದ ಶಿವಯೋಗಿಯು ಶಿವನ ಹೊರತಾಗಿ ಅವಿದ್ಯಾ ಕಲ್ಪಿತವಾದ ಯಾವ ವಸ್ತುವನ್ನೂ ಸಹ ನೋಡಲಾರನು.

ಇಂದ್ರಿಯಗಳ ವ್ಯವಹಾರವನ್ನು ನಿಯಂತ್ರಿಸುವುದೇ ಸಂಯಮವು. ಇಂತಹ ಸಂಯಮವನ್ನು ಪಡೆದಿರುವ ಶಿವಯೋಗಿಯು ತನ್ನ ಮನಸ್ಸಿನ ವೃತ್ತಿಗಳನ್ನೆಲ್ಲ ಚಿದ್ರೂಪನೂ

ಆನಂದರೂಪನೂ ಆಗಿರುವ ಶಿವನಲ್ಲಿ ವಿಲೀನಗೊಳಿಸಿರುತ್ತಾನೆ. ಅಂತೆಯೇ ಅವನಿಗೆ ಬಾಹ್ಯ ಪ್ರಪಂಚವಾವುದೂ ಅನುಭವಗೋಚರವಾಗುವುದಿಲ್ಲ. ಪೂಜ್ಯಪಾದರು ಶಿವನನ್ನು ಇಲ್ಲಿ ಚಿತ್ಸುಖಸಾಗರನೆಂಬುದಾಗಿ ಪ್ರತಿಪಾದಿಸಿದ್ದಾರೆ. ಅಂದರೆ ಶಿವನು ಚೈತನ್ಯದ ಸಾಗರನೂ, ಸುಖದ ಸಾಗರನೂ ಆಗಿದ್ದಾನೆ. ಚಿತ್ ಎಂದರೆ ಪ್ರಕಾಶ ಇಲ್ಲವೆ ಜ್ಞಾನವೆಂದರ್ಥ. ಶಿವನು ಜ್ಞಾನಸಾಗರನು. ಅಂತೆಯೇ ಅವನಿಗೆ ಸರ್ವಜ್ಞನೆಂಬುದಾಗಿ ಕರೆಯುತ್ತಾರೆ. ಸಕಲ ವಿದ್ಯೆಗಳಿಗೆ ಅಧಿಷ್ಠಾನವೇ ಶಿವನಾಗಿದ್ದಾನೆ. ನಾಲ್ಕು ವೇದಗಳು ಅವನ ಶ್ವಾಸೋಚ್ಛ್ವಾಸದಿಂದ ಹೊರಹೊಮ್ಮಿದ್ದರೆ, ಇಪ್ಪತ್ತೆಂಟು ಶಿವಾಗಮಗಳು ಆತನ ವೈಖರಿಯ ವಾಣಿಯಿಂದ ಪ್ರತಿಪಾದಿಸಲ್ಪಟ್ಟಿವೆ. ಎಲ್ಲ ವಿದ್ಯೆಗಳಿಗೆ ಮೂಲಗಳಾದ ನಿಗಮಾಗಮಗಳೇ ಶಿವನಿಂದ ಪ್ರಾದುರ್ಭವಿಸಿರೋಣದರಿಂದ ಅವನು ಸರ್ವ ವಿದ್ಯೆಗಳ ಅಧಿಷ್ಠಾತೃವಾಗಿದ್ದಾನೆ. ಅಂತೆಯೇ ಅವನು ಸರ್ವಜ್ಞನೂ ಅಹುದು. ಶಿವನು ವಿದ್ಯೆಯ ಸಾಗರವಾಗಿರುವಂತೆ ಆನಂದದ ಸಾಗರನೂ ಆಗಿದ್ದಾನೆ. ಸಮುದ್ರದ ನೀರು ಎಂದೂ ಕಡಿಮೆಯಾಗದಿರುವಂತೆ ಶಿವನ ಈ ಜ್ಞಾನಾನಂದಗಳು ಅದೆಂದಿಗೂ ಕಡಿಮೆಯಾಗ ಲಾರವು. ಶಿವನಿಗೆ ಸಾಗರದ ಉಪಮಾನವನ್ನು ಕೊಟ್ಟಿರುವಂತೆ ಜ್ಞಾನಿಗಳು ಸಂಸಾರಕ್ಕೂ ಸಹ ಸಾಗರದ ಉಪಮಾನವನ್ನೇ ಕೊಟ್ಟಿದ್ದಾರೆ. ಆದರೆ ಪರಮಾತ್ಮನು ಚಿತ್ಸುಖ ಸಾಗರನಾದರೆ, ಪ್ರಪಂಚವು ಅಜ್ಞಾನ ಮತ್ತು ದುಃಖಗಳ ಸಾಗರವಾಗಿರುತ್ತದೆ.

ಅಜ್ಞಾನ–ದುಃಖಗಳು ಯಾರಿಗೂ ಬೇಕಾಗಿರುವುದಿಲ್ಲ. ಎಲ್ಲರಿಗೂ ಬೇಕಾದವು ಗಳೆಂದರೆ ಜ್ಞಾನ ಹಾಗೂ ಆನಂದಗಳೇ. ಪ್ರಪಂಚಾಭಿಮುಖನಾಗಿ ಆ ಜ್ಞಾನಾನಂದಗಳನ್ನು ಬಯಸಿದರೆ ಅವು ದೊರೆಯಲಾರವು. ಅಂತೆಯೇ ಶಿವಯೋಗಿಯು ಪ್ರಪಂಚದಿಂದ ವಿಮುಖನಾಗಿ ಮತ್ತು ಶಿವನಿಗೆ ಅಭಿಮುಖನಾಗಿ ತನ್ನ ಚಿತ್ತವನ್ನು ಶಿವನೊಂದಿಗೆ ತಾದಾತ್ಮ್ಯಗೊಳಿಸಿ ಶಿವನ ಚಿದಾನಂದವನ್ನು ಪಡೆಯುತ್ತಿರುತ್ತಾನೆ. ಸೋಲಾಪೂರ ನಿವಾಸಿಗಳಾದ ನೀವೆಲ್ಲ ನಿತ್ಯವೂ ನಿಮ್ಮ ಮನೆಯೊಳಗಿನ ನಲ್ಲಿಗಳ ಮುಖಾಂತರ ಭೀಮಾನದಿಯ ನೀರನ್ನು ಪಡೆಯುತ್ತಿರುತ್ತೀರಿ. ಹತ್ತಾರು ಮೈಲು ದೂರ ಇರುವ ಆ ನದಿಯ ನೀರು ನಿಮ್ಮ ಮನೆಯವರೆಗೆ ಸುರಕ್ಷಿತವಾಗಿ ಬರಬೇಕಾದರೆ ಅಲ್ಲಿಂದ ಇಲ್ಲಿಯವರೆಗೆ ದೊಡ್ಡ ದೊಡ್ಡ ಹಾಗೂ ಸಣ್ಣ ಸಣ್ಣ ಪೈಪುಗಳನ್ನು ಜೋಡಿಸಿರುತ್ತಾರೆ. ಈ ಪೈಪುಗಳ ಸಂಬಂಧವು ಸರಿಯಾಗಿ ಇರುವವರೆಗೆ ನೀರು ನಿರಂತರವಾಗಿ ಬರುತ್ತಿರುತ್ತದೆ. ಈ ಸಂಬಂಧದಲ್ಲಿ ಏನಾದರೂ ವ್ಯತ್ಯಯವುಂಟಾದರೆ ನೀರು ಬರುವುದಿಲ್ಲ. ಅದರಂತೆ ಸಂಸಾರಿಗಳ ಸಂಬಂಧವು ಶಿವನೊಂದಿಗೆ ಇಲ್ಲದಿರೋಣದರಿಂದ ಅವರು ದುಃಖವನ್ನನು ಭವಿಸಿದರೆ, ಶಿವಯೋಗಿಗಳು ಸದಾ ತಮ್ಮ ಚಿತ್ತವನ್ನು ಶಿವನೊಂದಿಗೆ ಸಂಬಂಧಗೊಳಿಸಿ ರೋಣದರಿಂದ ಅವರು ಯಾವಾಗಲೂ ಆ ಚಿದಾನಂದವನ್ನು ಅನುಭವಿಸುತ್ತಿರುತ್ತಾರೆ.

ನಾವು ಮಾಡುವ ಪೂಜೆ, ನಾಮಸ್ಮರಣೆ ಮತ್ತು ಧ್ಯಾನಾದಿಗಳು ಶಿವನೊಂದಿಗೆ ಸಂಬಂಧಗೊಳಿಸುವ ಪೈಪುಗಳಿದ್ದಂತೆ, ಇವುಗಳಿಂದ ಶಿವಸಂಬಂಧವನ್ನು ಮಾಡಿ ಕೊಳ್ಳುವುದೇ ಯೋಗವು. ಕಾರಣ ತನ್ನ ಶರೀರ, ವಾಣಿ ಮತ್ತು ಮನಸ್ಸುಗಳ ಮೂಲಕ ಶಿವನೊಂದಿಗೆ ಸದಾ ಸಂಬಂಧಗೊಳಿಸುವುದೇ ಶಿವಯೋಗವೆಂದು ಕರೆಯಿಸಿಕೊಳ್ಳುತ್ತದೆ.

ವೀರಶೈವ ಸಿದ್ಧಾಂತದ ಪ್ರಕಾರ ಸದ್ಗುರುವು ಶಿವದೀಕ್ಷಾ ಮೂಲಕವಾಗಿ ಶಿಷ್ಯನಿಗೆ ಇಷ್ಟಲಿಂಗವನ್ನು ದಯಪಾಲಿಸುತ್ತಾನೆ. ಇದು ಸ್ಥೂಲದೇಹದೊಂದಿಗೆ ಶಿವನ ಸಂಬಂಧ ವನ್ನು ಮಾಡಿದಂತೆ. ಒಮ್ಮೆ ಶರೀರಕ್ಕೆ ಸಂಬಂಧವಾದ ಈ ಲಿಂಗವನ್ನು ಎಂದೂ ಅಗಲಿಸಕೂಡದು. ಅಂತೆಯೇ ವೀರಶೈವರು ಜೀವಿತ ಕಾಲದಲ್ಲಷ್ಟೇ ಅಲ್ಲ, ಮರಣೋತ್ತರ ದಲ್ಲಿಯೂ ಇಷ್ಟಲಿಂಗ ಸಂಬಂಧವನ್ನು ತಪ್ಪಿಸುವುದಿಲ್ಲ. ಹೀಗೆ ಶಿವದೀಕ್ಷೆಯ ನಂತರ ಶರೀರದೊಂದಿಗೆ ಶಿವನ ಸಂಬಂಧವು ಸ್ಥಾಪಿಸಲ್ಪಡುತ್ತದೆ.

ಇದರಂತೆ ಸದ್ಗುರುಗಳು ಶಿಷ್ಯನಿಗೆ ಪಂಚಾಕ್ಷರ ಮಹಾಮಂತ್ರವನ್ನು ಉಪದೇಶಿಸಿ ಅದನ್ನು ನಿರಂತರ ಜಪಿಸಲು ಆಜ್ಞಾಪಿಸಿ ವಾಣಿಯೊಂದಿಗೆ ಶಿವನ ಸಂಬಂಧವನ್ನು ಸ್ಥಾಪಿಸುತ್ತಾರೆ. ಶಿಷ್ಯನಾದವನು ಗುರೂಪದೇಶದಂತೆ ಆ ಮಹಾಮಂತ್ರವನ್ನು ಸದಾವ ಕಾಲ ಜಪಿಸುತ್ತಲಿದ್ದು ಶಿವನೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಂಡಿರಬೇಕು. ಇದೇ ಪ್ರಕಾರವಾಗಿ ಮನಸ್ಸಿನಿಂದ ಪ್ರಾಣ ಹಾಗೂ ಭಾವಲಿಂಗಿಗಳ ಅನುಸಂಧಾನವನ್ನು ಮಾಡುವುದು ಮನೋಸಂಬಂಧವೆನಿಸಿಕೊಳ್ಳುವುದು. ಹೀಗೆ ಶರೀರ, ವಾಣಿ ಮತ್ತು ಮನಸ್ಸುಗಳೆಂಬ ತ್ರಿಕರಣಗಳನ್ನು ಶಿವನೊಂದಿಗೆ ಸಂಬಂಧಗೊಳಿಸುವುದೇ ಶಿವಯೋಗವು. ಈ ಶಿವಯೋಗ ಮೂಲಕವಾಗಿ ಶಿವಯೋಗಿಯು ಶಿವಾನಂದವನ್ನು ಅನುಭವಿಸುತ್ತಿರುವುದ ರಿಂದ ಅವನ ಈ ಚಿತ್ತದಲ್ಲಿ ಸಾಂಸಾರಿಕ ದುಃಖಗಳು ಪ್ರವೇಶಿಸಲಾರವು.

ಒಂದು ಸಾರೆ 'ಯದು' ಎಂಬ ಹೆಸರಿನ ಮಹಾರಾಜನು ದತ್ತಾತ್ರಯನಲ್ಲಿಗೆ ಬಂದು ವಿನಮ್ರ ಭಾವದಿಂದ ಅಭಿವಂದಿಸಿ ವಿಚಾರಿಸಿದ್ದೇನೆಂದರೆ– ''ಹೇ ಗುರುವರ್ಯರೇ ! ನಿಮ್ಮ ಬಳಿಯಲ್ಲಿ ಪ್ರಪಂಚದ ಅಧಿಕಾರ, ಅಂತಸ್ತು ಮತ್ತು ಸಂಪತ್ತು ಮೊದಲಾದ ಯಾವುದೇ ವಸ್ತುಗಳು ಇರುವುದಿಲ್ಲ ಆದರೂ ನೀವು ಸದಾ ಪ್ರಸನ್ನ ಮುದ್ರೆಯಲ್ಲಿರುತ್ತೀರಿ ನನಗೆ ಅವೆಲ್ಲವುಗಳು ಇದ್ದೂ ಸಹ ನಾನು ದುಃಖಿಯಾಗಿದ್ದೇನೆ ಇದಕ್ಕೆ ಕಾರಣವೇನು?'' ರಾಜನ ಈ ಪ್ರಶ್ನೆಯನ್ನಾಲಿಸಿದ ದತ್ತಾತ್ರಯರು ''ಎಲೈ ಮಹಾರಾಜನೇ ! ನಿನ್ನ ಚಿತ್ತವು ಯಾವ ವಸ್ತುವಿನ ಜೊತೆಗೆ ನಿರಂತರವಾಗಿ ಸಂಬಂಧವನ್ನು ತಾಳಿರುತ್ತದೆಯೋ ಅದು ಜಡವೂ ದುಃಖರೂಪವೂ ಆಗಿರುತ್ತದೆ. ಅಂತೆಯೇ ನೀನು ಏನೆಲ್ಲ ಇದ್ದೂ ಸಹ ದುಃಖಿಯಾಗಿರುವಿ; ಆದರೆ ನನ್ನ ಚಿತ್ತವು ಚಿದ್ರೂಪವೂ, ಆನಂದರೂಪವೂ ಆದ ಪರಮಾತ್ಮನೊಂದಿಗೆ ಸಂಬಂಧವಾಗಿರೋಣದರಿಂದ ನಾನು ಸದಾ ಆನಂದಿತ ನಾಗಿರುತ್ತೇನೆ'' ಎಂಬುದಾಗಿ ಅದರ ರಹಸ್ಯವನ್ನು ತಿಳಿಸಿಕೊಟ್ಟರು.

ಈ ಸಂಸಾರವು ದುಃಖಮಯವಾಗಿದ್ದರೂ ಇದರಲ್ಲಿ ವಾಸಿಸಿ ಸುಖವನ್ನು ಪಡೆಯಬೇಕಾದರೆ ಏನು ಮಾಡಬೇಕು ? ಎಂಬ ಪ್ರಶ್ನೆಗೆ ಉತ್ತರ ರೂಪವಾಗಿ ಶ್ರೀ ತುಳಸೀದಾಸರು–

ತುಲಸೀ ಇಸ ಸಂಸಾರಮೇ ಪಾಂಚ ರತನ ಹೈ ಸಾರ ।
ಸಾದು ಮಿಲನ, ಹರಿಭಜನ, ದಯಾ, ಧರ್ಮ–ಉಪಕಾರ ॥

ಹೀಗೆ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ ಸಜ್ಜನರ ಸಹವಾಸ, ದೇವರ ಭಜನೆ, ಪ್ರಾಣಿ ದಯೆ, ಧರ್ಮಾಚರಣೆ ಮತ್ತು ಪರೋಪಕಾರ ಈ ಐದು ಅಮೂಲ್ಯಗಳಾದ

ರತ್ನಗಳಿವೆ. ಇವುಗಳನ್ನು ಯಾರು ಸಂಗ್ರಹಿಸಿಕೊಂಡಿರುತ್ತಾರೆಯೋ ಅವರು ಈ ಸಂಸಾರದಲ್ಲಿದ್ದೂ ಸಹ ಸುಖಿಗಳಾಗಿರುತ್ತಾರೆ. ಸಜ್ಜನರು ಸದಾ ಸತ್ಸಂಗಿಗಳಾಗಿ ರೋಣದರಿಂದ ಶಾಸ್ತ್ರಗಳ ಶ್ರವಣ–ಮನನಾದಿಗಳನ್ನು ಮಾಡಿ ಸುಖೀ ಜೀವನವನ್ನು ಸಾಗಿಸುತ್ತಿರುತ್ತಾರೆ. ಇಂತಹ ಸುಖಾನುಭವಿಗಳ ಸಹವಾಸ ಮಾಡಿದಾಗ ನಮಗೂ ಸಹ ಆ ಸುಖದ ಲಾಭವಾಗುವುದು. ಆದ್ದರಿಂದ ಸಂತರ ಸಹವಾಸವು ಒಂದು ರತ್ನವೆಂಬುದಾಗಿ ಹೇಳಲ್ಪಟ್ಟಿದೆ.

ಇನ್ನು ಎರಡನೇ ರತ್ನವೇ ಭಗವದ್ಭಜನೆಯು. ಸಂತರ ಸಹವಾಸದಿಂದ ಭಗವದ್ಭಜನೆಯನ್ನು ಮಾಡುವ ಪ್ರವೃತ್ತಿಯು ಬೆಳೆಯುತ್ತದೆ. ಶರೀರವಾಣಿ ಮತ್ತು ಮನಸ್ಸುಗಳಿಂದ ಪೂಜೆ, ಜಪ ಮತ್ತು ಧ್ಯಾನಾದಿಗಳನ್ನು ಮಾಡುವುದೇ ಭಜನೆಯು. ಯಾರು ಅನನ್ಯವಾದ ಭಕ್ತಿಯಿಂದ ಭಗವಂತನನ್ನು ಭಜಿಸುತ್ತಾರೆಯೋ ಅವರು ಭಗವದ್ರೂಪರೇ ಆಗುತ್ತಾರೆ. ಹೀಗೆ ಸಾಧಕನಿಗೆ ಭಗವತ್ ಸ್ವರೂಪವನ್ನು ಪ್ರಾಪ್ತಿ ಮಾಡಿಕೊಡುವ ಭಜನೆಯೂ ಸಹ ಒಂದು ಅಮೂಲ್ಯವಾದ ರತ್ನವೇ. ಇನ್ನು ಮೂರನೆಯದಾದ ರತ್ನವೇ ದಯೆಯು. ಪ್ರತಿಯೊಂದು ಪ್ರಾಣಿಗಳ ಬಗ್ಗೆ ಮನಸ್ಸಿನ ಕಾರುಣ್ಯ ಭಾವವೇ ದಯೆಯು. ದಶವಿಧ ಧರ್ಮಗಳಲ್ಲಿ ದಯೆಯು ಒಂದು ಶ್ರೇಷ್ಠವಾದ ಧರ್ಮವೆಂದು ಪರಿಗಣಿತವಾಗಿದೆ. ದಯಾಭಾವನೆಯುಳ್ಳ ವ್ಯಕ್ತಿಯು ಅನ್ಯರನ್ನು ಎಂದೂ ಪೀಡಿಸಲಾರನು. ನಾವು ಇನ್ನೊಬ್ಬರಿಗೆ ಪೀಡೆಯನ್ನು ಕೊಟ್ಟಾಗ ಅದರ ಪ್ರತಿಯಾಗಿ ನಾವೂ ಸಹ ಪೀಡಿತರಾಗಬೇಕಾಗುತ್ತದೆ. ಅನ್ಯರಿಗೆ ಸುಖವನ್ನು ಕೊಟ್ಟಾಗ ನಾವೂ ಸಹ ಸುಖಿಗಳಾಗುತ್ತೇವೆ. ಆದ್ದರಿಂದ ಜೀವನವನ್ನು ಸುಖಮಯವನ್ನಾಗಿ ಮಾಡುವ ತತ್ತ್ವವು ಇದರಲ್ಲಿ ಅಡಕವಾಗಿರುವುದರಿಂದ ದಯೆಯೂ ಸಹ ಜೀವನದ ಒಂದು ರತ್ನವೆಂದೇ ಭಾವಿಸಬೇಕು.

ನಾಲ್ಕನೆಯದಾದ ರತ್ನವೇ ಧರ್ಮವು. ಧರ್ಮವೆಂದರೆ ಉತ್ತಮವಾದ ಆಚರಣೆ ಯೆಂದರ್ಥ. ಸತ್ಯ, ಅಹಿಂಸೆ, ಅಸ್ತೇಯ ಮತ್ತು ಬ್ರಹ್ಮಚರ್ಯ ಮೊದಲಾದ ಹತ್ತು ಪ್ರಕಾರದ ಉತ್ತಮ ಆಚರಣೆಗಳಿಗೆ ಧರ್ಮವೆಂದು ಕರೆದಿದ್ದಾರೆ. ಈ ಧರ್ಮವನ್ನು ಆಚರಿಸಿದಾಗ ಪುಣ್ಯವು ಲಭಿಸುವುದು. ಆ ಪುಣ್ಯದಿಂದಲೇ ಮನುಷ್ಯನಿಗೆ ಸುಖದ ಲಾಭವಾಗುವುದು. ಹೀಗೆ ಧರ್ಮವು ಸುಖದ ಸಾಧನವಾಗಿರೋಣದರಿಂದ ಇದೂ ಸಹ ಒಂದು ರತ್ನವು. ಇನ್ನು ಐದನೆಯದಾದ ರತ್ನವೇ ಉಪಕಾರವು. ಅನ್ಯರಿಗೆ ಮಾಡುವ ಸಹಕಾರವೇ ಉಪಕಾರವು. ವ್ಯಾಸ ಮಹರ್ಷಿಯು, ತನ್ನ ಹದಿನೆಂಟು ಪುರಾಣಗಳ ಸಾರವೇನೆಂದು ಕೇಳಿದಾಗ, ಪರೋಪಕಾರ ಮಾಡುವುದೇ ಪುಣ್ಯವು, ಪರರನ್ನು ಪೀಡಿಸುವುದು ಪಾಪವು ಎಂಬುದಾಗಿ ತಿಳಿಸಿದ್ದಾನೆ. ಅನ್ಯರನ್ನು ಪೀಡಿಸಿ ಪಾಪಿಯಾಗಿ ನಿರಂತರ ದುಃಖವನ್ನನುಭವಿಸುವುದಕ್ಕಿಂತಲೂ ಪರೋಪಕಾರವನ್ನು ಮಾಡಿ ಪುಣ್ಯಾತ್ಮ ನಾಗಿ ಸುಖಿಯಾಗುವುದೇ ಲೇಸು. ತನಗೆ ಪ್ರತಿಕೂಲವೆನಿಸುವ ಯಾವ ವ್ಯವಹಾರವನ್ನೂ ಅನ್ಯರ ಜೊತೆಗೆ ಮಾಡದಿರಬೇಕು. ಈ ಐದು ಆಚರಣೆಗಳು ಅಸಾರವಾದ ಸಂಸಾರದ ಪಂಚರತ್ನಗಳೆಂಬುದಾಗಿ ತುಳಸೀದಾಸರು ತಿಳಿಯಪಡಿಸಿದ್ದಾರೆ.

ಹೀಗೆ ಯಾರು ಸುಖ ಸಾಧನೆಗಳನ್ನು ಸಂಪಾದಿಸಿರುತ್ತಾರೆಯೋ ಅವರು ಪ್ರಪಂಚದಲ್ಲಿ ಸದಾ ಸುಖಿಗಳಾಗಿರುತ್ತಾರೆ. ಅದಿಲ್ಲದವರು ದುಃಖವನ್ನೇ ಅನುಭವಿಸ ಬೇಕಾಗುವುದು. ಅಂತೆಯೇ ಪೂಜ್ಯಪಾದರು ಸುಖಸಾಗರನಾದ ಶಿವನಲ್ಲಿ ಚಿತ್ತವೃತ್ತಿ ಯನ್ನು ಲೀನ ಮಾಡಿಕೊಂಡ ಶಿವಯೋಗಿಯು ಅವಿದ್ಯಾಕಲ್ಪಿತವಾದ ಸಂಸ್ಕಾರವನ್ನು ಅನುಲಕ್ಷಿಸದೆ ಸದಾ ಸುಖಿಯಾಗಿರುತ್ತಾನೆಂಬುದಾಗಿ ಉಪದೇಶಿಸಿದ್ದಾರೆ.

ಶಿವನಲ್ಲಿ ಲೀನಚಿತ್ತನಾದ ಶಿವಯೋಗಿಗೆ ಶಿವನ ಹೊರತು ಬೇರೊಂದೇನೂ ತೋರುವುದಿಲ್ಲ, ಎಂಬುದಾಗಿ ಈ ಹಿಂದೆ ಹೇಳಿದ ವಿಷಯವನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ ದೃಷ್ಟಾಂತ ಪೂರ್ವಕವಾಗಿ ಪುನಃ–

ನೇದಂ ರಜತಮಿತ್ಯುಕ್ತೇ ಯಥಾ ಶುಕ್ತಿಃ ಪ್ರಕಾಶತೇ ।
ನೇದಂ ಜಗದಿತಿಜ್ಞಾತೇ ಶಿವತತ್ತ್ವಂ ಪ್ರಕಾಶತೇ ॥

ಯಥಾ ಸ್ವಪ್ನಕೃತಂ ವಸ್ತು ಪ್ರಬೋಧೇನೈವ ಶಾಮ್ಯತಿ ।
ತಥಾ ಶಿವಸ್ಯ ವಿಜ್ಞಾನೇ ಸಂಸಾರಂ ನೈವ ಪಶ್ಯತಿ ॥

ಅಜ್ಞಾನಮೇವ ಸರ್ವೇಷಾಂ ಸಂಸಾರ ಭ್ರಮಕಾರಣಮ್ ।
ತನ್ನಿವೃತ್ತೌ ಕಥಂ ಭೂಯಃ ಸಂಸಾರ ಭ್ರಮದರ್ಶನಮ್ ॥

(ಸಿ. ಶಿ. ೧೭: ೧೦–೧೨)

ಈ ಪ್ರಕಾರವಾಗಿ ಪೂಜ್ಯರು ಉಪದೇಶಿಸಿದ್ದಾರೆ. ಕಪ್ಪೆ ಚಿಪ್ಪಿನಲ್ಲಿ ಅರ್ಥಾತ್ ಶಿಂಪಿಯಲ್ಲಿ ಭ್ರಮೆಯಿಂದ ಬೆಳ್ಳಿಯು ತೋರುತ್ತಿರುವಾಗ, ಗುರುವಿನ ಉಪದೇಶದಿಂದ ಇದು ಬೆಳ್ಳಿಯಲ್ಲ ಎಂಬ ಜ್ಞಾನವಾದೊಡನೆ ಬೆಳ್ಳಿಯು ಇಲ್ಲದಾಗಿ ಶಿಂಪಿಯು ಹೇಗೆ ತೋರುವುದೋ ಅದರಂತೆ ಇದು ಜಗತ್ತಲ್ಲ ಎಂಬ ನಿಷೇಧಾತ್ಮಕ ಜ್ಞಾನವಾದೊಡನೆ ಶಿವತತ್ತ್ವವೇ ಪ್ರಕಾಶಿಸಲ್ಪಡುತ್ತದೆ. ನಿದ್ರಿಸುವಾಗ ತೋರುವ ಸ್ವಪ್ನವು ಜಾಗ್ರತವಾದೊಡನೆ ಹೇಗೆ ಇಲ್ಲದಾಗಿ ಹೋಗುವುದೋ, ಅದರಂತೆ ಶಿವ ಜ್ಞಾನವಾದೊಡನೆ ಸಂಸಾರವೂ ಸಹ ಇಲ್ಲದಾಗುತ್ತದೆ. ಈ ತೋರುವ ಸಂಸಾರದ ಭ್ರಾಂತಿಗೆ ಅಜ್ಞಾನವೇ ಮೂಲಕಾರಣ ವಾಗಿರುತ್ತದೆ. ಆ ಅಜ್ಞಾನವು ನಿವೃತ್ತಿಯಾಗಲು ಪುನಃ ಸಂಸಾರವು ಪ್ರತೀತಿಯಾಗುವುದಿಲ್ಲ ಎಂಬುದು ಪೂಜ್ಯರ ಉಪದೇಶದ ಆಶಯವಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಜ್ಞಾನ ಸಂಪನ್ನನಾದ ಶಿವಯೋಗಿಗೆ ಜಗತ್ತು ಹೇಗೆ ತೋರುವುದಿಲ್ಲ ಎಂಬ ಬಗ್ಗೆ ಬೆಳ್ಳಿ ಹಾಗೂ ಸ್ವಪ್ನದ ಉದಾಹರಣೆಗಳ ಮೂಲಕ ತಿಳಿಯಪಡಿಸಿದ್ದಾರೆ. ಮಧ್ಯಾಹ್ನದ ಬಿಸಿಲಿನಲ್ಲಿ ಶಿಂಪೆಯೊಂದು ಮೇಲ್ಮುಖವಾಗಿ ಬಿದ್ದಿರಲು ಸೂರ್ಯನ ಕಿರಣಗಳಿಂದ ಅದು ಬೆಳ್ಳಿಯಂತೆ ಹೊಳೆಯಲಾರಂಭಿಸುವುದು. ಅದನ್ನು ನೋಡಿದ ವ್ಯಕ್ತಿಯು ಬೆಳ್ಳಿಯ ಸಂಸ್ಕಾರದಿಂದಾಗಿ ಇದು ಬೆಳ್ಳಿಯೆಂಬುದಾಗಿ ಅದರತ್ತ ಧಾವಿಸುತ್ತಾನೆ. ಆದರೆ ಅದನ್ನು ಕೈಗೆತ್ತಿಕೊಂಡು ನೋಡಿದಾಗ ಇದು 'ಶಿಂಪೆ' ಎಂಬ ಜ್ಞಾನವಾಗುವುದು. ಆಗ ಈ ಪೂರ್ವದಲ್ಲಿ ತೋರಿದ ರಜತವಾಗಲಿ ಮತ್ತು ರಜತ ಜ್ಞಾನವಾಗಲಿ ಎರಡೂ ಇಲ್ಲದಾಗಿ ಇದು ಬರೀ ಶಿಂಪೆಯೆಂಬ ಜ್ಞಾನವು ಹೇಗೆ ದೃಢಗೊಳ್ಳುವುದೋ ಅದರಂತೆ ಶಿವಜ್ಞಾನವಾಗುವ ಪೂರ್ವದಲ್ಲಿ ತೋರುವುದೆಲ್ಲವೂ

ಜಗತ್ತೆಂಬ ಜ್ಞಾನವು ಸರ್ವರಿಗೂ ಉಂಟಾಗುತ್ತದೆ. ಯಾವಾಗ ಶಿವತತ್ತ್ವದ ಜ್ಞಾನ ವಾಗುವುದೋ ಆಗ ಜಗತ್ತೆನ್ನುವುದು ಇಲ್ಲವಾಗಿ ಸರ್ವವೂ ಶಿವರೂಪವಾಗಿಯೇ ತೋರಲಾರಂಭಿಸುವುದು. ''ಯಥಾ ದೃಷ್ಟಿಃ ತಥಾ ಸೃಷ್ಟಿಃ'' ಎಂಬ ಉಕ್ತಿಗನುಸಾರವಾಗಿ ದೃಷ್ಟಿಯೇ ಶಿವಮಯವಾದ ಬಳಿಕ ಶಿವನ ಹೊರತಾಗಿ ಬೇರೊಂದೇನೂ ತೋರಲು ಅಲ್ಲಿ ಅವಕಾಶವೇ ಇರುವುದಿಲ್ಲ. ಆದ್ದರಿಂದ ಶಿವಜ್ಞಾನವಾದೊಡನೆ ಪ್ರಪಂಚವೆಲ್ಲವೂ ಶಿವರೂಪವಾಗಿದೆ. ಶಿವನಿಗಿಂತಲೂ ಭಿನ್ನವಾಗಿ ತೋರುವುದಿಲ್ಲವೆಂಬುದಾಗಿ ತಿಳಿದು ಕೊಳ್ಳಬೇಕು.

ಪೂಜ್ಯಪಾದರು ಸ್ವಪ್ನ ದೃಷ್ಟಾಂತ ಮೂಲಕವಾಗಿಯೂ ಪ್ರಪಂಚದ ಅಸ್ತಿತ್ವವನ್ನು ಇಲ್ಲಿ ಅಲ್ಲಗಳೆದಿದ್ದಾರೆ. ಸ್ವಪ್ನದಲ್ಲಿ ತೋರುವ ವಸ್ತುಗಳು ಸ್ವಪ್ನಾವಸ್ಥೆ ಇರುವವರೆಗೆ ಮಾತ್ರ ತೋರುವವೇ ವಿನಹ ಆ ಸ್ವಪ್ನವು ಇಲ್ಲದಾಗಲು ಅಲ್ಲಿ ಬೇರಾವ ಪದಾರ್ಥಗಳು ತೋರುವುದಿಲ್ಲ. ಜಾಗ್ರದಾವಸ್ಥೆ ಆಗಮಿಸಿದೊಡನೆ ಸ್ವಪ್ನವು ಇಲ್ಲದಾಗಿ ಹೋಗುವಂತೆ ಶಿವಜ್ಞಾನವಾದೊಡನೆ ಸಂಸಾರವೂ ಸಹ ಇಲ್ಲದಾಗಿ ಹೋಗುತ್ತದೆ.

ಓರ್ವ ಗೃಹಸ್ಥನು ಯಾವುದೋ ಒಂದು ಕಾರ್ಯ ನಿಮಿತ್ತವಾಗಿ ನಸುಕಿನ ನಾಲ್ಕು ಘಂಟೆಯ ಗಾಡಿಯಿಂದ ಬೇರೊಂದು ಊರಿಗೆ ಹೋಗುವ ಪ್ರಸಂಗವು ಬಂದೊದಗಿತು. ಆತನಿಗೆ ನಸುಕಿನಲ್ಲೇಳುವ ಅಭ್ಯಾಸವಿರಲಿಲ್ಲ. ಆಗ ತನ್ನ ಧರ್ಮಪತ್ನಿಯನ್ನು ಕರೆದು ತಾನು ಮಾಡಬೇಕಾದ ಪ್ರಯಾಣದ ವಿಷಯವನ್ನೆಲ್ಲ ತಿಳಿಯಪಡಿಸಿ ನಸುಕಿನ ಮೂರು ಘಂಟೆಗೆ ತನ್ನನ್ನು ಎಚ್ಚರಗೊಳಿಸಬೇಕೆಂಬುದಾಗಿ ಹೇಳಿ ಮಲಗಿಕೊಂಡನು. ಆಗ ಅವನ ಹೆಂಡತಿಯು ತನ್ನ ಸಮೀಪದಲ್ಲಿ ಒಂದು ಗಡಿಯಾರನ್ನು ಇಟ್ಟುಕೊಂಡು ತಾನು ಮಲಗಿಕೊಳ್ಳದೆ ಗಂಡನ ಪ್ರಯಾಣಕ್ಕಾಗಿ ಬಟ್ಟೆ–ಬರೆ–ಬುತ್ತಿ ಮುಂತಾದವುಗಳ ವ್ಯವಸ್ಥೆಯಲ್ಲಿ ಕಾಲಕಳೆಯತೊಡಗಿದಳು. ಇತ್ತ ಅವಳ ಯಜಮಾನನು ನಿದ್ರಿಸುತ್ತಿರುವಾಗ ಕನಸೊಂದನ್ನು ಕಂಡನು. ಆ ಕನಸಿನಲ್ಲಿ ಈತನು ಕೆಲವು ಜನ ಕಳ್ಳರೊಡಗೂಡಿ ಒಂದು ಬ್ಯಾಂಕಿಗೆ ದರೋಡೆ ಹಾಕಲು ಹೋಗಿದ್ದನು. ಆಗ ಬ್ಯಾಂಕಿನ ಅಪಾರವಾದ ಧನವನ್ನು ದೋಚಿಕೊಂಡು ಹೋಗುತ್ತಿರುವಾಗ ಪೊಲೀಸರ ಕೈಗಿ ಸಿಕ್ಕು ಬಿದ್ದನು. ಪೊಲೀಸರು ಇವನನ್ನು ನ್ಯಾಯಾಲಯಕ್ಕೆ ಒಪ್ಪಿಸಿದಾಗ, ನ್ಯಾಯಾಧೀಶರು ಕಾರಾಗೃಹ ಶಿಕ್ಷೆಯನ್ನು ವಿಧಿಸಿದರು. ನ್ಯಾಯಾಧೀಶರ ಆದೇಶದಂತೆ ಪೊಲೀಸರು ಅವನನ್ನು ಇನ್ನೇನು ಕಾರಾಗೃಹದಲ್ಲಿ ನೂಕುವವರಿದ್ದರು, ಅಷ್ಟರಲ್ಲಿ ಸರಿಯಾಗಿ ಮೂರು ಘಂಟೆ ವೇಳೆ ಆಗಿದ್ದರಿಂದ ಹೆಂಡತಿಯು ಗಂಡನನ್ನು ''ರೀ ಏಳ್ರಿ ! ಸರಿಯಾಗಿ ಮೂರು ಘಂಟೆ ಬಾರಿಸಿದೆ ಸ್ನಾನಾದಿಗಳನ್ನು ಮಾಡಿಕೊಂಡು ಪ್ರಯಾಣಕ್ಕೆ ಸಿದ್ಧವಾಗಿರಿ'' ಎಂಬುದಾಗಿ ನುಡಿದು ಮೈಮುಟ್ಟಿ ಎಬ್ಬಿಸಿದಳು. ಆಗ ಆತನು ಏಳುತ್ತಲೇ ಹೌಹಾರಿ ''ಪೊಲೀಸರೆಲ್ಲಿ?'' ಎಂದು ನುಡಿದನು. ಆಗ ಅವನ ಹೆಂಡತಿಯು ಪೊಲೀಸರು ನಮ್ಮ ಮನೆಗೇಕೆ ಬರುತ್ತಾರೆ ? ಏಕೋ ನೀವು ಗಾಬರಿಯಾದಂತೆ ಕಾಣುತ್ತಿದೆಯಲ್ಲ ? ಏನು ಸಮಾಚಾರ ? ಎಂಬುದಾಗಿ ಕೇಳಿದಳು. ಆಗ ಗಂಡನು ತನಗೆ ಬಿದ್ದ ಸ್ವಪ್ನವನ್ನು ವಿವರಿಸುತ್ತ ನೀನು ಒಂದು ವೇಳೆ ಸರಿಯಾದ ಈ ಸಮಯಕ್ಕೆ ಎಬ್ಬಿಸದೇ ಹೋಗಿದ್ದರೆ ಪೊಲೀಸರು ನನ್ನನ್ನು ಕಾರಾಗೃಹದಲ್ಲಿ

ಬಂಧಿಸುತ್ತಿದ್ದರು. ನೀನು ಎಚ್ಚರಗೊಳಿಸಿ ನನ್ನನ್ನು ಈ ದಂಡದಿಂದ ಪಾರು ಮಾಡಿದೆ ಎಂಬುದಾಗಿ ಸಂತೋಷದಿಂದ ನುಡಿದನಂತೆ.

ಮನುಷ್ಯನಿಗೆ ಬಿದ್ದ ಯಾವುದೇ ಸ್ವಪ್ನವು ಅವನು ಎಚ್ಚರಾದೊಡನೆ ಅದು ಇಲ್ಲವಾಗಿ ಹೋಗುವಂತೆ ಶಿವಜ್ಞಾನವಾದೊಡನೆ ಸಂಸಾರವೂ ಸಹ ಕಾಣದಾಗುವುದು. ಅಂದರೆ ಶಿವಜ್ಞಾನಿಯಾದವನಿಗೆ ಈ ಪಂಚಭೂತಾತ್ಮಕವಾದ ಪ್ರಪಂಚವು ತೋರದೆ ಎಲ್ಲವೂ ಶಿವಮಯವಾಗಿ ಅನುಭವ ಗೋಚರವಾಗುವುದು. ಶಿವಜ್ಞಾನವನ್ನು ಪಡೆಯುವದೂ ಸಹ ಒಂದು ವಿಧವಾದ ಎಚ್ಚರಿಕೆ ಇದ್ದಂತೆ ''ಉತ್ತಿಷ್ಠತ, ಜಾಗ್ರತ'' ಎಂಬ ಉಪನಿಷತ್ ಮಂತ್ರಗಳು ಮೋಹ ನಿದ್ರೆಯಿಂದ ಅಥವಾ ಅಜ್ಞಾತ ನಿದ್ರೆಯಿಂದ ಎಚ್ಚರ ಗೊಳಿಸುತ್ತಲಿವೆ. ಈ ಮಂತ್ರದ ಆದೇಶದಂತೆ ಸಾಧಕನು ಎಚ್ಚರಾದನೆಂದರೆ ಅರ್ಥಾತ್ ಶಿವಜ್ಞಾನವನ್ನು ಪಡೆದರೆ ಪ್ರಪಂಚವೆಲ್ಲವೂ ಶಿವನಾಗಿಯೇ ತೋರೋಣದರಿಂದ ಅವನಿಗೆ ಶಿವನ ಹೊರತಾಗಿ ಬೇರಾವುದೂ ತೋರುವುದಿಲ್ಲ.

ಸಂಸಾರದ ಪ್ರತೀತಿಗೆ ಅಜ್ಞಾನವೇ ಮೂಲ ಕಾರಣವು. ಆ ಅಜ್ಞಾನವೇ ಇಲ್ಲದಾಗಿ ಹೋದಾಗ ಪ್ರಪಂಚವಾದರೂ ಹೇಗೆ ತಾನೆ ಪ್ರತೀತಿಯಾದೀತು ?

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು. ಈ ಕಾಯಾನುಗ್ರಹಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಈ ಸ್ಥಲದ ಸಾಧಕನು ಜೀವನ್ಮುಕ್ತನಾಗಿರುತ್ತಾನೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪುನಃ–

ಗಲಿತಾಹಂಕೃತಿ ಗ್ರಂಥಿಃ ಕ್ರೀಡಾಕಲ್ಪಿತ ವಿಗ್ರಹಃ।
ಜೀವನ್ಮುಕ್ತಶ್ಚರೇದ್ಯೋಗೀ ದೇಹಿವನ್ನಿರುಪಾಧಿಕಃ॥

(ಸಿ. ಶಿ. ೧೭–೧೩)

ಹೀಗೆ ಆದೇಶಿಸಿದ್ದಾರೆ. ಅಹಂಕಾರವೆಂಬ ಗ್ರಂಥಿಯನ್ನು ಬಿಡಿಸಿಕೊಂಡಿರುವ ಯೋಗಿಯು ಲೀಲಾದೇಹಧಾರಿಯಾಗಿ ಜೀವನ್ಮುಕ್ತನಾದ ಇವನು ತಾನು ನಿರುಪಾಧಿಕ ನಾಗಿದ್ದರೂ ಲೋಕಾನುಗ್ರಹಕ್ಕಾಗಿ ದೇಹವುಳ್ಳವನಂತೆ ತೋರುತ್ತಿರುತ್ತಾನೆ.

ಅಹಂಕಾರವನ್ನು ಕಳೆದುಕೊಂಡ ಶಿವಯೋಗಿಯ ಜೀವನವು ಮಕ್ಕಳ ಆಟ ದೋಪಾದಿಯಲ್ಲಿ ಇರುತ್ತದೆ. ಅಹಂಕಾರವಿದ್ದಾಗ ಜೀವನವು ವ್ಯಾವಹಾರಿಕವಾದರೆ ಅದಿಲ್ಲದಿದ್ದಾಗ ಜೀವನವೂ ಒಂದು ಕ್ರೀಡೆಯಾಗಿ ಪರಿಣಮಿಸುತ್ತದೆ. ಮಕ್ಕಳು ಯಾವುದೇ ಪ್ರಕಾರದ ರಾಗ–ದ್ವೇಷಾದಿ ಭಾವನೆಗಳಿಲ್ಲದೆ ಸಹಜವಾಗಿ ಪತಿ, ಪತ್ನಿ, ತಂದೆ, ತಾಯಿ ಮತ್ತು ಮಕ್ಕಳ ರೂಪದಲ್ಲಿ ಆಡುತ್ತಿರುತ್ತವೆ. ದೊಡ್ಡವರು ಗಂಡ–ಹೆಂಡಿರಾಗಿ ವರ್ತಿ ಸುವದಕ್ಕೂ ಮತ್ತು ಮಕ್ಕಳು ಪತಿ–ಪತ್ನಿಯಾಗಿರುವುದಕ್ಕೂ ಬಹಳಷ್ಟು ಅಂತರವಿರುತ್ತದೆ. ಒಂದು ವ್ಯಾವಹಾರಿಕ ಜೀವನವಾದರೆ. ಇನ್ನೊಂದು ಕ್ರೀಡಾ ಜೀವನವು. ಜನರ ಮೇಲೆ ಅನುಗ್ರಹ ಮಾಡುವುದಕ್ಕಾಗಿ ದೇಹಧಾರಿಯಾದ ಶಿವಯೋಗಿಯು ದೇಹವಿದ್ದರೂ ದೇಹವಿಲ್ಲದವನಂತೆ ಅರ್ಥಾತ್ ಅಭಿಮಾನರಹಿತವಾಗಿ ವ್ಯವಹರಿಸುತ್ತಿರುತ್ತಾನೆ. ಅಂತೆಯೇ ಅವನು ಜೀವನ್ಮುಕ್ತನೂ ಆಗಿರುತ್ತಾನೆ.

ಪೂಜ್ಯಪಾದರು ಈ ಕಾಯಾನುಗ್ರಹಸ್ಥಲದಲ್ಲಿ ಶಿವಜ್ಞಾನ ಸಂಪನ್ನನಾದ ಶಿವಯೋಗಿಯು ತಾನು ಲೋಕಾನುಗ್ರಹವನ್ನು ಮಾಡುವುದಕ್ಕಾಗಿ ಕಾಯವನ್ನು ಧರಿಸಿದ್ದರೂ ಅದರ ಅಭಿಮಾನಾದಿಗಳು ಅವನಿಗೆ ಇರುವುದಿಲ್ಲ ಎಂಬ ವಿಷಯವನ್ನು ಅನೇಕ ಯುಕ್ತಿ-ದೃಷ್ಟಾಂತಗಳ ಮೂಲಕ ಇಲ್ಲಿ ಪ್ರತಿಪಾದಿಸಿದ್ದಾರೆ. ಈ ವಿಷಯವನ್ನು ನೀವುಗಳೆಲ್ಲ ಚೆನ್ನಾಗಿ ಅರ್ಥಮಾಡಿಕೊಂಡು ಅದರಂತೆ ಆಚರಿಸಿ ನಿಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳಿರೆಂಬುದಾಗಿ ಅಪ್ಪಣೆ ಕೊಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೮ ಜುಲೈ ೧೯೯೪
(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)

■■

ಆಶೀರ್ವಚನ-೧

# ಇಂದ್ರಿಯಾನುಗ್ರಹಸ್ಥಲ

ಧರ್ಮಾಭಿಮಾನಿಗಳೇ !

ಸುಕ್ಷೇತ್ರವಾದ ಸೊನ್ನಲಾಪೂರದಲ್ಲಿ ಆಷಾಢ ಮಾಸದ ನಿಮಿತ್ತವಾಗಿ ಶಿವಯೋಗಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ರಾಘವಾಂಕ ಮೊದಲಾದ ಕವಿಗಳು ಸೊನ್ನಲಿಗೆಯನ್ನು ಭೂಕೈಲಾಸವೆಂದು ಕರೆದಿದ್ದಾರೆ. ಇಲ್ಲಿರುವ ಯೋಗಿಕುಲ ಚಕ್ರವರ್ತಿಯಾದ ಸಿದ್ಧರಾಮೇಶ್ವರನು ಸಾಕ್ಷಾತ್ ಶಿವಸ್ವರೂಪನು ಮತ್ತು ಇಲ್ಲಿಯ ಪುರುಷರೆಲ್ಲ ಶಿವಗಣರು ಮತ್ತು ಸ್ತ್ರೀಯರೆಲ್ಲ ರುದ್ರಕನ್ನಿಕೆಯರು. ಅಂತೆಯೇ ಸೊನ್ನಲಿಗೆಯ ಭೂಕೈಲಾಸವೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಇಂತಹ ಪವಿತ್ರ ಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್ ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಕಾಯಾನುಗ್ರಹದ ಬಗ್ಗೆ ಸವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ಇಂದು ಅದರ ಮುಂದಿನ ಸ್ಥಲವಾದ ಇಂದ್ರಿಯಾನುಗ್ರಹಸ್ಥಲದ ಬಗ್ಗೆ ವಿವೇಚಿಸೋಣ.

ವಿಷಯ ವ್ಯಾಸಂಗ ರಹಿತವಾಗಿರುವ ಶಿವಯೋಗಿಯ ಕಾಯದಲ್ಲಿರುವ ಇಂದ್ರಿಯಗಳು ಭಕ್ತರನ್ನು ಅನುಗ್ರಹಿಸುವ ವಿಷಯವನ್ನು ಪ್ರತಿಪಾದಿಸುವ ಸ್ಥಲವೇ ಇಂದ್ರಿಯಾನುಗ್ರಹ ಸ್ಥಲವು. ಇದನ್ನೇ ಪೂಜ್ಯರು–

ದರ್ಶನಾತ್ಪರಕಾಯಸ್ಯ ಕರಣಾನಾಂ ವಿವೇಕತಃ ।
ಇಂದ್ರಿಯಾನುಗ್ರಹಃ ಪ್ರೋಕ್ತಃ ಸರ್ವೇಷಾಂ ತತ್ತ್ವವೇದಿಭಿಃ ॥

ಇಂದ್ರಿಯಾಣಾಂ ಸಮಸ್ತಾನಾಂ ಸ್ವಾರ್ಥೇಷು ಸತಿ ಸಂಗಮೇ ।
ರಾಗೋ ವಾ ಜಾಯತೇ ದ್ವೇಷಸ್ತೌ ಯೋಗೀ ಪರಿವರ್ಜಯೇತ್ ॥

(ಸಿ. ಶಿ. ೧೭ ; ೧೪–೧೫)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಪೂರ್ವದಲ್ಲಿ ಹೇಳಿರುವ ಕಾಯಾನುಗ್ರಹ ಸಂಪನ್ನನಾದ ಶಿವಯೋಗಿಯು ಎಲ್ಲರಂತೆ ಇಂದ್ರಿಯಗಳುಳ್ಳವನಾಗಿದ್ದರೂ, ಅವನು ಆಚರಿಸುತ್ತಿರುವ ರೀತಿ ನೀತಿಗಳನ್ನು ನೋಡಿಯೂ, ಸಾಮಾನ್ಯನಂತೆ ತನ್ನ ಇಂದ್ರಿಯಗಳನ್ನು ಬಹಿರ್ಮುಖಗೊಳಿಸದೆ ಅವುಗಳನ್ನು ತನ್ನ ಆಧೀನದಲ್ಲಿಟ್ಟುಕೊಂಡು ಅಂತರ್ಮುಖಗೊಳಿಸಿಕೊಂಡಿರುವ ರೀತಿಯನ್ನು ಅರಿತುಕೊಳ್ಳುವುದ

ರಿಂದಲೂ, ಲೋಕದ ಜನರು ಉದ್ಧಾರಗೊಳ್ಳುವವರಾದ್ದರಿಂದ ಅವನಿಗೆ ಇಂದ್ರಿಯಾನುಗ್ರಾಹಕನೆಂಬುದಾಗಿ ಜ್ಞಾನಿಗಳು ಕರೆದಿದ್ದಾರೆ. ಸಾಮಾನ್ಯ ಜನರು ತಮ್ಮ ಇಂದ್ರಿಯಗಳ ಮೂಲಕ ವ್ಯವಹರಿಸುವಾಗ ಅದರಿಂದ ಅವರ ಮನಸ್ಸಿನಲ್ಲಿ ರಾಗ ಇಲ್ಲವೆ ದ್ವೇಷವು ಉತ್ಪನ್ನವಾಗುತ್ತದೆ. ಆದರೆ ಈ ಇಂದ್ರಿಯಾನುಗ್ರಾಹಕನಾದ ಶಿವಯೋಗಿಯು ಆ ರಾಗ ದ್ವೇಷಗಳಿಂದ ಮುಕ್ತನಾಗಿರುತ್ತಾನೆ.

ಶಿವಯೋಗಿಯು ತನ್ನ ಶ್ರೇಷ್ಠಗಳಾದ ಆಚಾರ–ವಿಚಾರಗಳ ಮೂಲಕ ಅನ್ಯರನ್ನು ಪ್ರಭಾವಿತಗೊಳಿಸುತ್ತಾನೆ. ಆತನ ಪ್ರಭಾವಕ್ಕೊಳಗಾದ ಸಾಮಾನ್ಯ ಜನರೂ ಸಹ ಉತ್ತಮ ಆಚರಣೆಯಲ್ಲಿ ತೊಡಗುವುದನ್ನು ನೋಡುತ್ತೇವೆ. ನಾವು ಮಾಡುವ ಉಪದೇಶದ ಪ್ರಭಾವಕ್ಕಿಂತಲೂ ನಾವು ಆಚರಿಸುವ ಸದಾಚಾರದ ಪ್ರಭಾವವು ಅತಿ ಆಳವಾಗಿರುತ್ತದೆ. ಅಂತೆಯೇ ಇಂದ್ರಿಯಾನುಗ್ರಹ ಸ್ಥಲದ ಶಿವಯೋಗಿಯು ತನ್ನ ಸಂಯಮಪೂರ್ವಕವಾದ ಇಂದ್ರಿಯಗಳ ವ್ಯವಹಾರದಿಂದ ಅನ್ಯರನ್ನು ತನ್ನ ಪ್ರಭಾವಕ್ಕೆ ಒಳಗುಮಾಡಿಕೊಂಡು ಅವರನ್ನೂ ಸಹ ಸಂಯಮಿಗಳನ್ನಾಗಿ ಪರಿವರ್ತಿಸುತ್ತಾನೆ. ಹೀಗೆ ತನ್ನ ಇಂದ್ರಿಯಗಳ ಸಂಯಮಪೂರ್ಣವಾದ ವ್ಯವಹಾರದಿಂದ ಅನ್ಯರನ್ನು ಸಂಯಮಶೀಲರನ್ನಾಗಿಸುವುದೇ ಇಂದ್ರಿಯಾನುಗ್ರಹವು.

ಸಾಮಾನ್ಯ ಜನರಿಗೆ ಇರುವಂತೆ ಶಿವಯೋಗಿಗಳಿಗೂ ಸಹ ಇಂದ್ರಿಯಗಳು ಇರುತ್ತವೆ. ಆದರೆ ಅವರೀರ್ವರ ವ್ಯವಹಾರದಲ್ಲಿ ಮಾತ್ರ ಬಹಳಷ್ಟು ವ್ಯತ್ಯಾಸವಿರುವುದು. ಸಾಮಾನ್ಯವಾದ ವ್ಯಕ್ತಿಯ ಇಂದ್ರಿಯಗಳು ತಮ್ಮ ತಮ್ಮ ವಿಷಯದೊಂದಿಗೆ ಸಂಬಂಧವನ್ನು ಪಡೆದಾಗ ಅವುಗಳ ಆ ವ್ಯವಹಾರದ ಮೂಲಕವಾಗಿ ಆ ವ್ಯಕ್ತಿಯ ಮನಸ್ಸಿನಲ್ಲಿ ರಾಗ ಇಲ್ಲವೆ ದ್ವೇಷವು ಉತ್ಪನ್ನವಾಗುತ್ತದೆ. ಇಂದ್ರಿಯಕ್ಕೆ ಸಂಬಂಧಪಟ್ಟ ವಿಷಯವು ಅನುಕೂಲ ಕರವಾಗಿದ್ದರೆ ಮನಸ್ಸಿನಲ್ಲಿ ರಾಗವು ಮತ್ತು ಅದು ಪ್ರತಿಕೂಲಕರವಾಗಿದ್ದರೆ ದ್ವೇಷವು ಉತ್ಪನ್ನವಾಗುತ್ತದೆ. ಈ ರಾಗ–ದ್ವೇಷಗಳೇ ಸಂಸಾರದಲ್ಲಿ ಉಂಟಾಗುವ ಎಲ್ಲ ಅನರ್ಥಪರಂಪರೆಗಳಿಗೆ ಕಾರಣಗಳಾಗಿರುತ್ತವೆ. ಶಿವಯೋಗಿಯ ಮನಸ್ಸಿನಲ್ಲಿ ಈ ರಾಗ–ದ್ವೇಷಗಳೇ ಇಲ್ಲದಿರೋಣದರಿಂದ ಇವನ ಇಂದ್ರಿಯ ವ್ಯವಹಾರಗಳ ಮೂಲಕವಾಗಿ ಯಾವ ಅನರ್ಥವೂ ಆಗುವುದಿಲ್ಲ. ಹಾವಿನ ಬಾಯೊಳಗಿನ ಮುಂದಿನ ಎರಡು ವಿಷದ ಹಲ್ಲುಗಳನ್ನು ತೆಗೆದುಹಾಕಿ ಆ ಹಾವಿನೊಂದಿಗೆ ಸರಸವಾಡಿದರೆ ಯಾವುದೇ ಪ್ರಕಾರದ ಅಪಾಯವು ಹೇಗೆ ಉಂಟಾಗುವುದಿಲ್ಲವೋ ಅದರಂತೆ ರಾಗ–ದ್ವೇಷಗಳೆಂಬ ಎರಡು ವಿಷದ ಹಲ್ಲುಗಳನ್ನು ತೆಗೆದುಹಾಕಿ ಇಂದ್ರಿಯಗಳೆಂಬ ಸರ್ಪದೊಂದಿಗೆ ಸಹವಾಸಗೈದರೂ ಯಾವ ಅಪಾಯವೂ ಉಂಟಾಗುವುದಿಲ್ಲ.

ಇದೇ ವಿಷಯವನ್ನೇ ಅಕ್ಕಮಹಾದೇವಿಯು–

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೇ ಲೇಸು ಕಂಡಯ್ಯಾ
ಕಾಯವಿಕಾರವ ಕಳೆದು ಕಾಯದಲಿರ್ದರೆ
ಕಾಯದ ಸಂಗವೇಲೇಸು ಕಂಡಯ್ಯ

ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯ ನೀಸೊಲಿದವರು
ಕಾಯಗೊಂಡಿದ್ದರೆನ್ನಬೇಡ.

ಈ ರೀತಿಯಾಗಿ ವಿವರಿಸಿದ್ದಾಳೆ. ಕೂಸಿನ ತಾಯಿಯು ರಕ್ಕಸಿಯಾದರೆ ಅವಳು ಆ ಕೂಸನ್ನೇ ನುಂಗಿಬಿಡುವಂತೆ ವಿಷಯೇಂದ್ರಿಯಗಳ ಸಂಬಂಧದಲ್ಲಿ ಉಂಟಾಗುವ ರಾಗ–ದ್ವೇಷ ಗಳೆಂಬ ರಾಕ್ಷಸೀ ಭಾವನೆಗಳು ನಮ್ಮನ್ನೇ ಧ್ವಂಸಮಾಡುತ್ತವೆ. ಆದ್ದರಿಂದ ಶಿವಯೋಗಿಯು ಇಂದ್ರಿಯಗಳ ವ್ಯವಹಾರವನ್ನು ಮಾಡುತ್ತಿದ್ದರೂ ರಾಗ–ದ್ವೇಷಗಳಿಂದ ಮುಕ್ತ ನಾಗಿರೋಣದರಿಂದ ತಾನು ಯಾವುದೇ ಹಾನಿಯನ್ನು ಅನುಭವಿಸಲಾರನಲ್ಲದೆ ತನ್ನ ವ್ಯವಹಾರದಿಂದ ಅನ್ಯರನ್ನು ಪ್ರಭಾವಿತರನ್ನಾಗಿ ಮಾಡಿ ಅವರನ್ನೂ ಸಹ ಸನ್ಮಾರ್ಗದತ್ತ ಕೊಂಡೊಯ್ಯುವನು.

ಶಿವನು ತನ್ನ ಸರ್ವಾಂಗಗಳಲ್ಲಿ ಸರ್ಪಗಳನ್ನೇ ಅಲಂಕಾರಗಳನ್ನಾಗಿ ಮಾಡಿಕೊಂಡಿ ರುತ್ತಾನೆ. ಅಂತೆಯೇ ಅವನಿಗೆ ಸರ್ಪಭೂಷಣನೆಂದು ಕರೆದಿದ್ದಾರೆ. ಇನ್ನು ಜಗದ್ರಕ್ಷಕನಾದ ವಿಷ್ಣು ಆದಿಶೇಷ ನಾಗವನ್ನು ತನ್ನ ಶಯ್ಯೆಯನ್ನಾಗಿ ಮಾಡಿಕೊಂಡಿದ್ದಾನೆ. ಅಂತೆಯೇ ಅವನಿಗೆ 'ಶೇಷಶಾಯೀ' ಎಂದು ಅನ್ನುತ್ತಾರೆ. ಶಿವನು ವಿಷಸರ್ಪಗಳಿಂದ ಭೂಷಿತ ನಾಗಿದ್ದರೂ, ವಿಷ್ಣುವು ಶೇಷನನ್ನು ತನ್ನ ಶಯ್ಯೆಯನ್ನಾಗಿ ಮಾಡಿಕೊಂಡಿದ್ದರೂ ಅವರೀರ್ವರಿಗೆ ಅದಾವ ವಿಷದ ಬಾಧೆಯು ಉಂಟಾಗದಿರುವಂತೆ ರಾಗ–ದ್ವೇಷ ರಹಿತನಾದ ಶಿವಯೋಗಿಯ ಇಂದ್ರಿಯ ವ್ಯವಹಾರಗಳಿಂದ ಆ ಶಿವಯೋಗಿಗೆ ಯಾವುದೇ ಪ್ರಕಾರವಾದ ಹಾನಿಯಾಗಲಾರದೆಂಬುದಾಗಿ ತಿಳಿದುಕೊಳ್ಳಬೇಕು. ಇದೂ ಅಲ್ಲದೆ ಇವನ ಮನಸ್ಸು ರಾಗ–ದ್ವೇಷಗಳಿಂದ ಮುಕ್ತವಾಗಿರೋಣದರಿಂದ ಇವನ ಇಂದ್ರಿಯಗಳಲ್ಲಿ ಲೋಕಾನುಗ್ರಹ ಮಾಡುವ ಸಾಮರ್ಥ್ಯವಿರುತ್ತದೆ.

ಶಿವಯೋಗಿಯ ಇಂದ್ರಿಯಗಳಲ್ಲಿರುವ ಅನುಗ್ರಾಹಕ ಸಾಮರ್ಥ್ಯಕ್ಕೇನೇ ಪರುಷ ವೆಂಬುದಾಗಿ ಕರೆಯುತ್ತಾರೆ. ಅವನಲ್ಲಿ ನೇತ್ರ ಪರುಷ, ವಾಕ್‌ಪರುಷ, ಹಸ್ತಪರುಷ ಮತ್ತು ಪಾದಪರುಷ ಮುಂತಾದ ಸಾಮರ್ಥ್ಯವಿರುವುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ತನ್ನ ಇಂದ್ರಿಯಗಳಲ್ಲಿ ಪರುಷ ಸಾಮರ್ಥ್ಯವನ್ನು ಪಡೆದ ಶಿವಯೋಗಿಯು ನೋಡಿ, ಮುಟ್ಟಿ ಮತ್ತು ಮಾತನಾಡಿಯೂ ಜನರನ್ನು ಉದ್ಧಾರ ಮಾಡುತ್ತಾನೆ. ಈ ಸಾಮರ್ಥ್ಯವು ಪ್ರಾಪ್ತವಾಗಬೇಕಾದರೆ ರಾಗ–ದ್ವೇಷಾದಿಗಳು ಇಲ್ಲದಿರಬೇಕೆಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ.

ಶಿವಯೋಗಿಯ ಇಂದ್ರಿಯ ವ್ಯವಹಾರವು ಲೋಕವಿಲಕ್ಷಣವಾಗಿರೋಣದರಿಂದ ಅವನಲ್ಲಿ ಲೋಕಾನುಗ್ರಹ ಸಾಮರ್ಥ್ಯವು ಪ್ರಾಪ್ತವಾಗಿರುತ್ತದೆ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯರು ಪುನಃ–

ಇಂದ್ರಿಯಾಣಾಂ ಬಹಿರ್ವೃತ್ತಿಃ ಪ್ರಪಂಚಸ್ಯ ಪ್ರಕಾಶಿನೀ ।
ಅಂತಃ ಶಿವೇ ಸಮಾವೇಶೋ ನಿಷ್ಪ್ರಪಂಚಸ್ಯ ಕಾರಣಮ್ ॥

(ಸಿ. ಶಿ. ೧೭–೧೬)

ಈ ತೆರನಾಗಿ ಉಪದೇಶಿಸಿದ್ದಾರೆ. ಇಂದ್ರಿಯಗಳ ಬಹಿರ್ಮುಖ ಪ್ರವೃತ್ತಿಯು ಪ್ರಪಂಚದರ್ಶನಕ್ಕೆ ಕಾರಣೀಭೂತವಾದರೆ ಅಂತರ್ಮುಖ ಪ್ರವೃತ್ತಿಯು ಶಿವನೊಂದಿಗೆ ಸಮಾವೇಶಹೊಂದಿ ನಿಷ್ಪ್ರಪಂಚಕ್ಕೆ ಕಾರಣವಾಗುತ್ತದೆ ಎಂಬುದು ಪೂಜ್ಯರ ಅಭಿಪ್ರಾಯವಾಗಿದೆ.

ನಮ್ಮ ಮನಸ್ಸು ಇಂದ್ರಿಯಗಳ ಮೂಲಕ ಯಾವಾಗ ಬಹಿರ್ಮುಖವಾಗುವುದೋ ಆಗ ಈ ಜಗತ್ತು ತೋರುವುದು. ನಾವು ಗಾಢವಾದ ನಿದ್ರೆಯಲ್ಲಿದ್ದಾಗ ನಮ್ಮ ಮನಸ್ಸಿನ ವೃತ್ತಿಯು ಅಂತರ್ಮುಖವಾಗಿ ಆತ್ಮದಲ್ಲಿ ಲಯವಾಗಿರೋಣದರಿಂದ ಜಗತ್ತು ತೋರುವುದಿಲ್ಲವೆಂಬುದು ಸರ್ವಾನುಭವಸಿದ್ಧವಾದುದು. 'ಚಿತ್ತೇ ಚಲತಿ ಸಂಸಾರಃ' ಎಂಬ ಉಕ್ತಿಗನುಸಾರವಾಗಿ ಚಿತ್ತವು ಬಹಿರ್ಮುಖವಾದಾಗ ಪ್ರಪಂಚವು, ಅದುವೇ ಅಂತರ್ಮುಖವಾದಾಗ ನಿಷ್ಪ್ರಪಂಚ ಸ್ಥಿತಿಯು ಪ್ರಾಪ್ತವಾಗುವುದು. ಜಾಗ್ರದಾವಸ್ಥೆಯಲ್ಲಿ ಮನಸ್ಸು ನೇತ್ರೇಂದ್ರಿಯದ ಮುಖಾಂತರ ರೂಪವನ್ನು, ಶ್ರವಣೇಂದ್ರಿಯದ ಮುಖಾಂತರ ಶಬ್ದವನ್ನು, ರಸನೇಂದ್ರಿಯದ ಮುಖಾಂತರ ರಸವನ್ನು, ನಾಸಿಕೆಯ ಮುಖಾಂತರ ಗಂಧವನ್ನು ಮತ್ತು ತ್ವಗಿಂದ್ರಿಯ ಮುಖಾಂತರ ಸ್ಪರ್ಶವನ್ನು ಅನುಭವಿಸುತ್ತಿರುತ್ತದೆ. ಇದು ಮನಸ್ಸಿನ ಬಹಿರಂಗ ವ್ಯವಹಾರವು. ಸೃಷ್ಟಿಕರ್ತನಾದ ಬ್ರಹ್ಮನು ಪ್ರತಿಯೊಬ್ಬರ ಶರೀರಗಳಲ್ಲಿಯ ಇಂದ್ರಿಯಗಳನ್ನು ಬಹಿರ್ಮುಖಗಳನ್ನಾಗಿಯೇ ಮಾಡಿದ್ದಾನೆ. ಅಂತೆಯೇ ಈ ಇಂದ್ರಿಯಗಳ ಮುಖಾಂತರ ಮನಸ್ಸು ಸದಾ ಬಹಿರ್ಮುಖವಾಗಿರುತ್ತದೆ. ಹೀಗೆ ಇದು ಬಹಿರ್ಮುಖವಾದಾಗಲೇ ಪ್ರಪಂಚವು ತೋರತೊಡಗುವುದು.

ಪ್ರಪಂಚವು ತೋರಿದರೆ ತೋರಲಿ, ಅದು ಏಕೆ ತಾನೇ ನಾವು ಅಂತರ್ಮುಖ ವಾಗಬೇಕು ? ಎಂಬ ಪ್ರಶ್ನೆಯು ಉದ್ಭವಿಸಬಹುದು. ಪ್ರಪಂಚವು ದುಃಖರೂಪ ವಾಗಿರೋಣದರಿಂದ ಅದನ್ನು ನೋಡಿದವರಿಗೆ ದುಃಖಪ್ರಾಪ್ತಿಯಾಗುವುದೇ ವಿನಃ ಸುಖಪ್ರಾಪ್ತಿಯಾಗಲಾರದು. ಆದ್ದರಿಂದ ಅನುಭವಿಗಳು ಬಹಿರ್ಮುಖ ಪ್ರವೃತ್ತಿಯನ್ನು ತಡೆದು ಅಂತರ್ಮುಖಿಗಳಾಗಿರಬೇಕೆಂಬುದಾಗಿ ತಿಳಿಯಪಡಿಸಿದ್ದಾರೆ. ಎಷ್ಟೆಷ್ಟು ಪ್ರಪಂಚದ ವಿಸ್ಮರಣವಾಗುವುದೋ ಅಷ್ಟಷ್ಟು ಸಾಧಕನು ಸುಖರೂಪನಾದ ಪರಮಾತ್ಮನ ಸಾಮಿಪ್ಯವನ್ನು ಪಡೆಯುವನು. ಒಮ್ಮೆ ಅಂತರಂಗದಲ್ಲಿ ಶಿವಸಾಕ್ಷಾತ್ಕಾರವಾಯಿತೆಂದರೆ ಮನಸ್ಸು ಸದಾ ಶಿವಮಯವಾಗುವುದು. ಆ ಶಿವಮಯವಾದ ಮನಸ್ಸು ಬಹಿರಂಗದಲ್ಲಿ ಬಂದರೂ ಸಹ ಪ್ರಪಂಚವನ್ನು ಶಿವಮಯವಾಗಿಯೇ ನೋಡುವುದು. ಇದು ಅಂತರ್ಮುಖಪ್ರವೃತ್ತಿಯ ಫಲಶ್ರುತಿಯು.

ಈ ಪ್ರಪಂಚವೆಲ್ಲವು ಶಬ್ದ–ಸ್ಪರ್ಶಾದಿ ವಿಷಯರೂಪವಾದುದು. ಈ ವಿಷಯಗಳು ಇಂದ್ರಿಯಗಳಿಗಿಂತಲೂ ಬಲವಂತವಾಗಿರುತ್ತವೆ. ಬಹಿರ್ಮುಖಗಳಾದ ಇಂದ್ರಿಯ ಗಳನ್ನೆಲ್ಲ ಈ ವಿಷಯಗಳೇ ದುರ್ಬಲಗೊಳಿಸಿ ಕೊನೆಗೆ ವಿಷಯಗ್ರಹಣ ಸಾಮರ್ಥ್ಯವನ್ನೇ ಇಲ್ಲದಾಗಿಸುತ್ತವೆ. ಅಂತೆಯೇ ಉಪನಿಷತ್ತಿನಲ್ಲಿ ಇಂದ್ರಿಯಗಳಿಗೆ ಗ್ರಹಗಳೆಂಬುದಾಗಿ ಕರೆದು ವಿಷಯಗಳಿಗೆ ಅತಿಗ್ರಹಗಳೆಂದು ಕರೆದಿದ್ದಾರೆ. ಇಂದ್ರಿಯಗಳು ವಿಷಯಗಳನ್ನು

ಗ್ರಹಿಸೋಣದರಿಂದ ಅವುಗಳಿಗೆ ಗ್ರಹಗಳೆಂತಲೂ, ಕೊನೆಗೆ ಆ ವಿಷಯಗಳೇ ಇಂದ್ರಿಯಗಳ ಸಾಮರ್ಥ್ಯವನ್ನು ಇಲ್ಲದಾಗಿರೋಣದರಿಂದ ಅವುಗಳಿಗೆ ಅತಿಗ್ರಹ ಗಳೆಂತಲೂ ಕರೆಯುವುದುಂಟು.

ನಾವು ನಮ್ಮ ನೇತ್ರೇಂದ್ರಿಯದಿಂದ ರೂಪವನ್ನು ನೋಡುತ್ತಿರುತ್ತೇವೆ. ಹೀಗೆ ನೋಡುತ್ತ ನೋಡುತ್ತ ನೇತ್ರದ ದರ್ಶನ ಸಾಮರ್ಥ್ಯವು ಕಡಿಮೆಯಾಗುತ್ತ ಹೋಗುವುದು. ಆಗ ನೇತ್ರತಜ್ಞರಿಗೆ ತೋರಿಸಿ ಅವರಿಂದ ಕನ್ನಡಕಗಳನ್ನು ಪಡೆದು ಪುನಃ ನೋಡಲಾರಂಭಿಸುತ್ತೇವೆ. ಕಾಲಕಳೆದಂತೆ ಆ ಕನ್ನಡಕಗಳ ನಂಬರುಗಳು ಹೆಚ್ಚಾಗುತ್ತ ಹೆಚ್ಚಾಗುತ್ತ ಕೊನೆಗೊಂದು ದಿನ ಕನ್ನಡಕವನ್ನು ಹಾಕಿದರೂ ಸಹ ಕಣ್ಣು ಕಾಣದಂತಾಗು ತ್ತವೆ. ಹೀಗೆ ಕಣ್ಣು ರೂಪವನ್ನು ಅನುಭವಿಸಲು ಹೋಗಿ ಕೊನೆಗೆ ರೂಪವನ್ನು ತಾನನುಭವಿಸದೆ, ರೂಪದಿಂದಲೇ ತಾನು ಅನುಭವಿಸಲ್ಪಡುತ್ತದೆ. ಅರ್ಥಾತ್ ಪ್ರಪಂಚದಲ್ಲಿ ರೂಪವಿದ್ದರೂ ನೇತ್ರವು ತನ್ನ ರೂಪಗ್ರಹಣ ಸಾಮರ್ಥ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡುಬಿಡುತ್ತದೆ. ಇದೇ ತೆರನಾಗಿ ಕಿವಿ, ಮೂಗು, ನಾಲಗೆ ಮತ್ತು ಚರ್ಮ ಮೊದಲಾದವುಗಳೂ ಸಹ ತಮ್ಮ ವಿಷಯಗ್ರಹಣ ಸಾಮರ್ಥ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡುಬಿಡುತ್ತವೆ.

ಈ ರೀತಿಯಾಗಿ ಇಂದ್ರಿಯಗಳು ವಿಷಯಗ್ರಹಣದಲ್ಲಿ ಅಸಮರ್ಥವಾಗಿದ್ದರೂ ಮನಸ್ಸು ಮಾತ್ರ ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳದೆ ಒಳಗಿದ್ದುಕೊಂಡು ವಿಷಯಗಳನ್ನು ಅಭಿಲಕ್ಷಿಸತೊಡಗುವುದು. ಆದರೆ ತನಗೆ ವಿಷಯಗಳನ್ನು ತಂದುಕೊಡುವ ಇಂದ್ರಿಯಗಳು ಸಂಪೂರ್ಣ ನಿಸ್ಸತ್ತ್ವಗಳಾಗಿರುವುದರಿಂದ ಅವುಗಳು ಮನಸ್ಸಿಗೆ ವಿಷಯಗಳನ್ನು ಪೂರೈಸಲಾರವು. ಅಂತೆಯೇ ಮನಸ್ಸು ಖಿನ್ನವಾಗಿ ದುಃಖಿಯಾಗಿರುತ್ತದೆ. ತಾನು ಶರೀರ ವನ್ನು ಬಿಡುವ ಸಮಯ ಬಂದಾಗ ಮನಸ್ಸು ಅತೃಪ್ತವಾಗಿಯೇ ಇರುತ್ತದೆ. ಜಗತ್ತಿನಲ್ಲಿ ಬಹುಪಾಲು ಜನರು ಮರಣಕಾಲದಲ್ಲಿ ಅತೃಪ್ತರೇ ಆಗಿರುತ್ತಾರೆ. ಆದರೆ ಕೆಲವೇ ಜನರು ಸಂತೃಪ್ತಾವಸ್ಥೆಯಲ್ಲಿ ದೇಹವನ್ನು ತ್ಯಜಿಸುತ್ತಾರೆ. ಅಳುತ್ತ-ಅಳಿಸುತ್ತ ಸಾಯುವವರು ಕೋಟಿ ಕೋಟಿಯಾದರೆ ನಗುತ್ತ-ನಗಿಸುತ್ತ ದೇಹ ಬಿಡುವವರು ಕೋಟಿಗೊಬ್ಬರು. ಅಳುತ್ತ ದೇಹ ಬಿಟ್ಟವರೆಲ್ಲ ಮುಂದೆ ಮತ್ತೊಂದು ಜನ್ಮವನ್ನು ಪಡೆಯುವಾಗ ಅಳುತ್ತಲೇ ಬರುತ್ತಾರೆ.

ಹೀಗೆ ಸ್ರಕ್-ಚಂದನ-ವನಿತಾದಿ ವಿಷಯ ರೂಪವಾದ ಪ್ರಪಂಚವು ಎಲ್ಲರನ್ನೂ ಅಳಿಸುತ್ತಲೇ ಇರುತ್ತದೆ. ಇಂತಹ ಅಳಿಸುವ ಪ್ರಪಂಚದಲ್ಲಿ ನಕ್ಕು ನಗಿಸುವ ಸಂತ-ಶರಣರು ಅಲ್ಲೊಬ್ಬರು-ಇಲ್ಲೊಬ್ಬರು ಇರುತ್ತಾರೆ. ಅಳುವದರಲ್ಲಿ ದುಃಖಾಭಿವ್ಯಕ್ತಿಯ ಸಂಕೇತವು, ಅದರಂತೆ ನಗುವದು ಆನಂದಾಭಿವ್ಯಕ್ತಿಯ ಸಂಜ್ಞೆಯು. ಅಳುವವನ ಮನಸ್ಸಿನಲ್ಲಿ ದುಃಖವು ತುಂಬಿಕೊಂಡಿದ್ದರೆ, ನಗುವವನ ಮನಸ್ಸು ಆನಂದಭರಿತವಾಗಿರುತ್ತದೆ. ಈ ಪ್ರಪಂಚವು ದುಃಖದ ಮಾರುಕಟ್ಟೆಯು, ಇಲ್ಲಿ ಸಣ್ಣ-ಪುಟ್ಟ ಹಾಗೂ ಬಹುದೊಡ್ಡ ದುಃಖದ ಅಂಗಡಿಗಳೇ ಇರುತ್ತವೆ. ಯಾವುದೇ ಅಂಗಡಿಯನ್ನು ಪ್ರವೇಶಿಸಿದರೂ ಅಲ್ಲಿ ಸಿಗುವುದು ದುಃಖವೇ. ಆದರೂ ಅಲ್ಲಿರುವ ದುಃಖಪದಾರ್ಥಗಳ ಮೇಲೆ ಅತೀ

ತಿಳುವಾದ ಸುಖದ ಲೇಪವಿರುತ್ತದೆ. ಆ ಲೇಪವನ್ನು ನೋಡಿಯೇ ಸುಖವೆಂದು ಭಾವಿಸಿ ಜೀವಿಗಳು ದುಃಖವನ್ನೇ ಅಪ್ಪಿಕೊಳ್ಳುತ್ತಿದ್ದಾರೆ. ಅಂತೆಯೇ ನಿಜಗುಣ ಶಿವಯೋಗಿಗಳು ''ದುಃಖವನೆ ಸುಖವೆಂಬರು ಅವಿವೇಕಿಗಳು'' ಎಂಬುದಾಗಿ ಹೇಳಿದ್ದಾರೆ.

ಪ್ರತಿಯೊಬ್ಬರ ಆತ್ಮವು ಸುಖರೂಪವಾದುದಲ್ಲದೆ ಅದರ ಹೊರತಾಗಿ ಉಳಿದುದೆಲ್ಲವೂ ದುಃಖರೂಪವೇ ಆಗಿರುತ್ತದೆ. ತನ್ನೊಳಗಿನ ಸುಖರೂಪವಾದ ಆತ್ಮವನ್ನು ಮರೆತ ಜೀವಿಗಳು, ದುಃಖವನ್ನೇ ಸುಖವೆಂದು ತಿಳಿದು ಅದಕ್ಕಾಗಿ ಹಾತೊರೆಯುತ್ತಿರುತ್ತಾರೆ. ಅಂತೆಯೇ ಅನ್ಯವಸ್ತುಗಳಿಂದ ಅಥವಾ ಅನ್ಯರಿಂದ ಆ ಸುಖವು ಸಿಗಬಹುದೆಂಬ ತಪ್ಪು ತಿಳುವಳಿಕೆಯಿಂದ ಪ್ರಪಂಚದ ಜೀವಿಗಳು ಅನ್ಯರನ್ನು ಅಥವಾ ಅನ್ಯವಸ್ತುಗಳನ್ನು ಆಶ್ರಯಿಸಲು ಪ್ರಯತ್ನಿಸುತ್ತಾರೆ. ಇಲ್ಲಿರುವವರೆಲ್ಲರೂ ಅನ್ಯರಿಂದ ಸುಖಸಿಗುವುದೆಂಬ ಭಾವನೆಯಿಂದ ಅವರ ಬಳಿ ಭಿಕ್ಷುಕರಾಗಿ ಹೋಗುತ್ತಾರೆ. ಎಲ್ಲರೂ ಭಿಕ್ಷುಕರೇ ! ಆದರೂ ಒಬ್ಬರನ್ನೊಬ್ಬರು ಸುಖದ ಭಿಕ್ಷೆಯನ್ನು ಬೇಡುತ್ತಿರುತ್ತಾರೆ. ಇಬ್ಬರಲ್ಲಿ ದುಃಖವೇ ತುಂಬಿಕೊಂಡಿರೋಣದರಿಂದ ಮೊದಮೊದಲು ಪರಸ್ಪರ ಸುಖಕೊಟ್ಟಂತೆ ಕಂಡರೂ ಕೊನೆಗೆ ಅವರೀರ್ವರಿಗೆ ದೊರೆಯುವುದು ದುಃಖವೇ. ಆದ್ದರಿಂದ ಬಹಿರ್ಮುಖನಾಗಿದ್ದುಕೊಂಡು ಸುಖವನ್ನು ಪಡೆಯಬೇಕೆಂಬುವುದು ಕನಸಿನ ಮಾತೇ ಸರಿ. ಜಗತ್ತಿನಲ್ಲಿರುವ ಜನರು ತಮ್ಮ ಜೀವಕ್ಕಿಂತಲೂ ಅನ್ಯರ ಜೀವನವು ಹೆಚ್ಚು ಸುಖಕಾರಿ ಎಂಬುದಾಗಿ ತಿಳಿದುಕೊಂಡಿರುತ್ತಾರೆ. ಅಂತೆಯೇ ಈರ್ವರು ಪರಸ್ಪರವಾಗಿ ಮಾತನಾಡುವಾಗ ನಿಮ್ಮ ಜೀವನವು ಸುಖಮಯವಾದುದು, ನಾವು ಸುಖವನ್ನುಕಾಣದೆ ದುಃಖವನ್ನೇ ಅನುಭವಿಸುತ್ತಿದ್ದೇವೆ ಎಂಬುದಾಗಿ ಹೇಳುವುದನ್ನು ಕೇಳುತ್ತೇವೆ. ಈರ್ವರೂ ದುಃಖಿಗಳೇ ಆಗಿದ್ದರೂ ಅವನ ದುಃಖವು ಕಡಿಮೆ ಪ್ರಮಾಣದ್ದೆಂದು ತಿಳಿದು ಅದನ್ನು ಈತನು ಅಪೇಕ್ಷಿಸುತ್ತಿರುತ್ತಾನೆ.

ಓರ್ವ ಭಕ್ತನು ಸಂಸಾರದ ದುಃಖದಿಂದ ಬೇಸತ್ತು ಶಿವನಲ್ಲಿಗೆ ಬಂದು ''ಹೇ ಮಹಾದೇವಾ ! ಇಷ್ಟು ವರ್ಷಗಳವರೆಗೆ ಪ್ರಪಂಚದಲ್ಲಿದ್ದು ದುಃಖವನ್ನು ಅನುಭವಿಸಿ, ಅನುಭವಿಸಿ ಸಾಕಾಗಿ ಹೋಗಿದೆ. ಆದ್ದರಿಂದ ನನ್ನ ಈ ದುಃಖವನ್ನು ದೂರಮಾಡೆಂದು'' ಪರಿಪರಿಯಾಗಿ ಕೇಳಿಕೊಂಡನು. ಈಗ ಪರಮಾತ್ಮನು ಭಕ್ತನನ್ನುದ್ದೇಶಿಸಿ, ''ನೀನು ವಾಸಿಸುವ ಈ ಜಗತ್ತು ದುಃಖಮಯವೇ ಆದುದು. ಅಲ್ಲಿ ಸುಖಕ್ಕಿಂತಲೂ ದುಃಖವು ಅಧಿಕವಾಗಿ ತೋರುವುದು. ಈ ದುಃಖ ಪ್ರಪಂಚದಲ್ಲಿದ್ದು ದುಃಖವು ಬೇಡವೆಂದರೆ ಅದು ಹೇಗೆ ತಾನೇ ಸಾಧ್ಯ ? ನೀನು ಅಪೇಕ್ಷೆ ಪಟ್ಟರೆ ನಿನ್ನ ದುಃಖವನ್ನು ಅನ್ಯರಿಗೆ ಕೊಟ್ಟು ಅನ್ಯರ ದುಃಖವನ್ನು ನಿನಗೆ ಕೊಡಿಸುವ ವ್ಯವಸ್ಥೆ ಮಾಡಲಾಗುವುದು'' ಶಿವನ ಈ ಮಾತನ್ನು ಕೇಳಿ ಅವನಿಗೆ ಅದೆಷ್ಟೋ ಸಮಾಧಾನವಾಯಿತು ''ಆಗಲಿ ನನ್ನ ದೊಡ್ಡ ಪ್ರಮಾಣದ ದುಃಖವನ್ನು ಅನ್ಯರಿಗೆ ಕೊಟ್ಟು ಅನ್ಯರ ಸಣ್ಣ ಪ್ರಮಾಣದ ದುಃಖವನ್ನು ಪಡೆದರಾಯಿತು. ಎಂಬುದಾಗಿ ನಿರ್ಣಯಿಸಿ ಮನೆಗೆ ಬಂದನು. ಶಿವನಿಗೆ ಅದೆಷ್ಟೋ ಜನರು ಈ ರೀತಿಯಾದ ಬೇಡಿಕೆಯನ್ನಿಟ್ಟಾಗ ಶಿವನು ಒಂದು ದಿನ ಆ ಎಲ್ಲ ಭಕ್ತರಿಗೆ ಆದೇಶಿಸಿದ್ದೇನೆಂದರೆ ''ನೀವುಗಳು ನಿಮ್ಮ ದುಃಖದ ಗಂಟುಗಳನ್ನು ತೆಗೆದುಕೊಂಡು ನಾಳೆ ಕೈಲಾಸಕ್ಕೆ ಬನ್ನಿರಿ'' ಶಿವನ ಆದೇಶದಂತೆ ಅಸಂಖ್ಯಾತ ಭಕ್ತರು ತಮ್ಮ ತಮ್ಮ ದುಃಖದ ಗಂಟುಗಳನ್ನು

ಹೊತ್ತುಕೊಂಡು ಶಿವನ ಸಾನ್ನಿಧ್ಯಕ್ಕೆ ಬಂದರು. ಆಗ ಶಿವನು ಒಂದು ವಿಶಾಲವಾದ ಮಂಟಪದಲ್ಲಿ ತಾನು ಕುಳಿತುಕೊಂಡು ಎಲ್ಲ ಭಕ್ತರನ್ನು ಅಲ್ಲಿ ಬರಮಾಡಿಕೊಂಡು ಆದೇಶಿಸಿದ್ದೇನೆಂದರೆ ''ಈ ಮಂಟಪದ ಗೋಡೆಯಲ್ಲಿರುವ ಗೂಟಗಳಿಗೆ ನಿಮ್ಮ ನಿಮ್ಮ ದುಃಖದ ಗಂಟುಗಳನ್ನು ನೇತು ಹಾಕಿರಿ'' ಶಿವನ ಆದೇಶದಂತೆ ಎಲ್ಲರೂ ಹಾಗೆಯೇ ಮಾಡಿದರು. ಆಗ ಶಿವನು ಪುನಃ ಆಜ್ಞಾಪಿಸಿದ್ದೇನೆಂದರೆ, ''ನೀವುಗಳೆಲ್ಲ ನಿಮ್ಮ ನಿಮ್ಮ ದುಃಖದಿಂದ ಬೇಸತ್ತು ಅನ್ಯರ ದುಃಖವನ್ನು ಪಡೆಯಲಿಕ್ಕಾಗಿ ಬಂದಿದ್ದೀರಿ. ನೀವು ಕುಳಿತಲ್ಲಿಯೇ ಎಲ್ಲ ಗಂಟುಗಳನ್ನು ನಿರೀಕ್ಷಿಸಿ ನಿಮಗೆ ಈ ಗಂಟುಗಳಲ್ಲಿ ಸಣ್ಣದಾಗಿ ತೋರುವ ಗಂಟನ್ನು ತೆಗೆದುಕೊಂಡು ಹೋಗಬಹುದು''. ಶಿವನ ಈ ಆದೇಶವನ್ನು ಕೇಳಿದ ಆ ಜನರೆಲ್ಲ ತಮ್ಮ ಗಂಟನ್ನು ಹಾಗೂ ಅನ್ಯರ ಗಂಟುಗಳನ್ನೂ ಸೂಕ್ಷ್ಮವಾಗಿ ವೀಕ್ಷಿಸ ತೊಡಗಿದರು. ಆಗ ಅವರೆಲ್ಲರಿಗೆ ಅನ್ಯರ ಗಂಟುಗಳಿಗಿಂತಲೂ ತಮ್ಮ ತಮ್ಮ ಗಂಟುಗಳೇ ಚಿಕ್ಕವಾಗಿ ತೋರತೊಡಗಿದವು. ಅಂತೆಯೇ ಎಲ್ಲರೂ ಲಗುಬಗೆಯಿಂದ ತಮ್ಮ ತಮ್ಮ ಗಂಟುಗಳನ್ನು ತೆಗೆದುಕೊಂಡು ಪಲಾಯನ ಮಾಡಿದರು. ಆ ಗಂಟುಗಳನ್ನು ಒಯ್ಯುವ ಗದ್ದಲದಲ್ಲಿ ಶಿವನನ್ನೇ ಅಲಕ್ಷಿಸಿದರು.

ಇದರಿಂದ ತಿಳಿದು ಬರುವುದೇನೆಂದರೆ ಪ್ರಪಂಚದಲ್ಲಿ ಬಹಿರ್ಮುಖನಾಗಿ ವ್ಯವಹರಿಸುವ ವ್ಯಕ್ತಿಗೆ ದುಃಖವು ತಪ್ಪಿದ್ದಲ್ಲ. ಇದೂ ಅಲ್ಲದೆ ತನ್ನ ದುಃಖವನ್ನು ತಾನೇ ಅನುಭವಿಸಬೇಕಲ್ಲದೆ ಅನ್ಯರಿಗೆ ಕೊಡಲು–ಕೊಳ್ಳಲು ಬರುವುದಿಲ್ಲ. ಯಾವಾಗ ಶಿವಯೋಗಿಯು ತನ್ನ ಬಹಿರ್ಮುಖ ಪ್ರವೃತ್ತಿಯನ್ನು ಇಲ್ಲದಾಗಿಸಿಕೊಂಡು ಶಿವನಲ್ಲಿ ಲೀನಚಿತ್ತನಾಗುತ್ತಾನೆಯೋ ಆಗ ಅವನಿಗೆ ನಿಷ್ಪ್ರಪಂಚರೂಪವಾದ ಶಿವನೇ ಸರ್ವತ್ರ ಅನುಭವಗೋಚರವಾಗುವನು.

ಅಂತರ್ಮುಖನಾದ ಶಿವಯೋಗಿಯು ಬಹಿಪ್ರಪಂಚವನ್ನು ಅದೆಂದೂ ನೋಡುವುದಿಲ್ಲವೇ ಹೇಗೆ ? ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯಪಾದರು ಪುನಃ–

> ಕ್ಷಣಮಂತಃ ಶಿವಂ ಪಶ್ಯನ್ ಕೇವಲೇನೈವ ಚೇತಸಾ ।
> ಬಾಹ್ಯಾರ್ಥಾನಾಮನುಭವಂ ಕ್ಷಣಂ ಕುರ್ವನ್ ದೃಗಾದಿಭಿಃ ॥
>
> ಸರ್ವೇಂದ್ರಿಯ ನಿರೂಢೋಽಪಿ ಸರ್ವೇಂದ್ರಿಯ ವಿಹೀನವಾನ್ ।
> ಶಿವಾಹಿತಮನಾಯೋಗೀ ಶಿವಂ ಪಶ್ಯತಿ ನಾಪರಮ್ ॥

(ಸಿ. ಶಿ. ೧೭, ೧೭–೧೮)

ಈ ವಿಧವಾಗಿ ವಿವರಿಸಿದ್ದಾರೆ. ಶಿವಯೋಗಿಯು ಅಂತರ್ಮುಖನಾಗಿ ಕೇವಲ ಚಿತ್ತದಿಂದ ಶಿವನನ್ನು ಕಾಣುತ್ತಿರುತ್ತಾನೆ. ತಾನು ಬಹಿರ್ಮುಖನಾದರೆ ಜ್ಞಾನೇಂದ್ರಿಯಗಳ ಮುಖಾಂತರ ಬಾಹ್ಯ ಪದಾರ್ಥಗಳನ್ನೂ ಸಹ ಅನುಭವಿಸುತ್ತಿರುತ್ತಾನೆ. ಹೀಗಾಗಿ ಶಿವನಲ್ಲಿ ಆಸಕ್ತವಾದ ಮನಸ್ಸುಳ್ಳ ಇವನು ಸರ್ವೇಂದ್ರಿಯಗಳಿಂದ ಕೂಡಿಕೊಂಡಿದ್ದರೂ ಸರ್ವೇಂದ್ರಿಯ ರಹಿತನೂ ಆಗಿದ್ದಾನೆ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಇಂದ್ರಿಯಾನುಗ್ರಹಸ್ಥಲದ ಶಿವಯೋಗಿಯು ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳಿಂದ ಮುಕ್ತನಾದವನಾಗಿರುತ್ತಾನೆ. ಅಂತೆಯೇ ಆತನು ಬಹಿರಿಂದ್ರಿಯ

ಗಳ ದ್ವಾರಗಳನ್ನು ಮುಚ್ಚಿಕೊಂಡು ಅಂತರ್ಮುಖನಾಗಿ ಅಂತರಂಗದಲ್ಲಿ ಕೇವಲ ಚಿತ್ತೊಂದರಿಂದಲೇ ಶಿವನನ್ನು ಅನುಭವಿಸುತ್ತಾನೆ. ಒಂದು ಕ್ಷಣಕಾಲ ಕುಳಿತುಕೊಂಡರೆ ಮರುಕ್ಷಣದಲ್ಲಿ ಆ ಇಂದ್ರಿಯಗಳ ದ್ವಾರಗಳನ್ನು ತೆಗೆದು ತಾನು ಹೊರಬಂದು ಪ್ರಪಂಚವನ್ನೂ ಸಹ ನೋಡುತ್ತಿರುತ್ತಾನೆ. ಹೀಗೆ ಕ್ಷಣ ಕ್ಷಣದಲ್ಲಿ ಅಂತರಂಗ ಬಹಿರಂಗದಲ್ಲಿ ವ್ಯವಹರಿಸುವ ಶಿವಯೋಗಿಯು ಪರಮಾತ್ಮ ಸ್ವರೂಪವನ್ನೂ ಮತ್ತು ಪ್ರಪಂಚ ಸ್ವರೂಪವನ್ನೂ ಮೇಲಿಂದ ಮೇಲೆ ನೋಡಿ, ಅವೆರಡರಲ್ಲಿ ಪ್ರಪಂಚವು ದುಃಖರೂಪ ವೆಂಬುದನ್ನು ತಿಳಿದು ಶಿವನಲ್ಲಿಯೇ ಲೀನಚಿತ್ತನಾಗಿರುತ್ತಾನೆ. ಆದ್ದರಿಂದ ಅವನು ಎಲ್ಲ ಇಂದ್ರಿಯಗಳಿಂದ ಕೂಡಿಕೊಂಡಿದ್ದರೂ ಅವಾವುಗಳೂ ತನಗಿಲ್ಲವೆಂಬ ಅಲಿಪ್ತಸ್ಥಿತಿಯನ್ನು ಹೊಂದಿರುತ್ತಾನೆ. ಈ ಅವಸ್ಥೆಯು ಅವನಿಗೆ ಪ್ರಾಪ್ತವಾದಾಗ ಶಿವನ ಹೊರತಾಗಿ ಬೇರಾವುದನ್ನೂ ಆತ ನೋಡುವುದಿಲ್ಲ.

ಈ ತೆರನಾಗಿ ಶಿವಯೋಗಿಯು ತನ್ನ ಸಂಯತೇಂದ್ರಿಯಗಳಿಂದ ಲೋಕದ ಜನರ ಮೇಲೆ ಅನುಗ್ರಹವನ್ನು ಮಾಡೋಣದರಿಂದ ಇವನಿಗೆ ಇಂದ್ರಿಯಾನುಗ್ರಾಹಕ ನೆಂಬುದಾಗಿ ಕರೆಯುತ್ತಾರೆ. ಈ ಸ್ಥಲದಲ್ಲಿ ಇಲ್ಲಿಯವರೆಗೆ ಪ್ರತಿಪಾದಿಸಿರುವ ವಿಷಯ ಗಳನ್ನೆಲ್ಲ ವಿವೇಚಿಸಿಕೊಂಡು ನೀವೆಲ್ಲ ಆ ಸ್ಥಿತಿಯನ್ನು ಪಡೆಯುವರಾಗಿರೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ಜುಲೈ, ೧೯೯೪
(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)



ಆಶೀರ್ವಚನ-೨

# ಇಂದ್ರಿಯಾನುಗ್ರಹಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೆ !

ಸುಕ್ಷೇತ್ರವಾದ ಸೊನ್ನಲಾಪೂರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಭೂಕೈಲಾಸವೆನಿಸುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯದಿನ ಇಂದ್ರಿಯಾನುಗ್ರಹಸ್ಥಲದ ಬಗ್ಗೆ ಕೆಲವೊಂದು ವಿಷಯಗಳನ್ನು ತಿಳಿದುಕೊಂಡಿದ್ದೀರಿ. ಇಂದು, ಅದೇ ವಿಷಯವನ್ನು ಪುನಃ ಮುಂದುವರೆಸುತ್ತಿದ್ದೇವೆ. ತನ್ನ ಸರ್ವೇಂದ್ರಿಯ ಗಳನ್ನು ಅಂತರ್ಮುಖಗೊಳಿಸಿಕೊಂಡು, ತನ್ನ ಹೃದಯದಲ್ಲಿರುವ ಶಿವನ ದರ್ಶನ ವನ್ನು ಪಡೆದು, ತನ್ನ ಪವಿತ್ರವಾದ ಇಂದ್ರಿಯಗಳಿಂದ ಭಕ್ತರನ್ನು ಅನುಗ್ರಹಿಸುವ ಶಿವಯೋಗಿಯು ಜನನ-ಮರಣಾದಿ ಷಡೂರ್ಮಿಗಳಿಂದ ಮುಕ್ತನಾಗಿರುತ್ತಾನೆಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು-

> ನ ಜರಾ ಮರಣಂ ನಾಸ್ತಿ ನ ಪಿಪಾಸಾ ನ ಚ ಕ್ಷುಧಾ ।
> ಶಿವಾಹಿತೇಂದ್ರಿಯಸ್ಯಾಸ್ಯ ನಿರ್ಮಾನಸ್ಯ ಮಹಾತ್ಮನಃ ॥
>
> (ಸಿ. ಶಿ. ೧೭-೧೯)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ತನ್ನ ಸಕಲೇಂದ್ರಿಯಗಳ ವ್ಯಾಪಾರವನ್ನು ಶಿವನಲ್ಲಿ ಅಡಗಿಸಿ ದೇಹಾಭಿಮಾನರಹಿತನೂ, ಮಹಾಪುರುಷನೂ ಆದ ಶಿವಯೋಗಿಗೆ ದೇಹಧರ್ಮಗಳಾದ ಮುಪ್ಪು ಮರಣಗಳಾಗಲೀ ಮತ್ತು ಪ್ರಾಣಧರ್ಮಗಳಾದ ಹಸಿವೆ-ತೃಷೆಗಳಾಗಲೀ ಇರುವದಿಲ್ಲ.

ಜಗತ್ತಿನಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಸಾಮಾನ್ಯ ಜೀವಿಗೆ ಹಸಿವೆ-ತೃಷೆ, ಜನನ-ಮರಣ ಮತ್ತು ಸುಖ-ದುಃಖಗಳೆಂಬ ಷಡೂರ್ಮಿಗಳು ಇದ್ದೇ ಇರುತ್ತವೆ. ಹಸಿವೆ-ತೃಷೆಗಳು ಪ್ರಾಣದ ಧರ್ಮಗಳು, ಜನನ-ಮರಣಗಳು ದೇಹ-ಧರ್ಮಗಳು ಹಾಗೂ ಸುಖ-ದುಃಖಗಳು ಮನಸ್ಸಿನ ಧರ್ಮಗಳಾಗಿರುತ್ತವೆ. ಇವು ಯಾವುವೂ ಆತ್ಮನ ಧರ್ಮಗಳಲ್ಲ, ಆದರೂ ಆತ್ಮಜ್ಞಾನವಿಲ್ಲದ ಅಜ್ಞ ಜೀವಿಗಳು ಇವೆಲ್ಲವುಗಳನ್ನು ಆತ್ಮದ ಧರ್ಮಗಳೆಂದೇ ತಿಳಿದು 'ನನಗೆ ಹಸಿವೆಯಾಗಿದೆ', 'ನನಗೆ ನೀರಡಿಕೆಯಾಗಿದೆ', 'ನಾನು ಸುಖಿಯಾಗಿದ್ದೇನೆ', 'ನಾನು ದುಃಖಿಯಾಗಿದ್ದೇನೆ', 'ನಾನು ವೃದ್ಧನಾಗಿದ್ದೇನೆ' ಮತ್ತು 'ನಾನು ಸಾಯುತ್ತಲಿದ್ದೇನೆ' ಮುಂತಾಗಿ ವ್ಯವಹರಿಸುವುದನ್ನು ಕಾಣುತ್ತೇವೆ. ಇಲ್ಲಿ

ಜನನ–ಮರಣಗಳು ದೇಹದ ಧರ್ಮಗಳು, ದೇಹವೇ ಜನಿಸುತ್ತದೆ. ದೇಹವೇ ಮರಣವನ್ನಪ್ಪುತ್ತದೆ. ಅಂತೆಯೇ ಶಾಸ್ತ್ರಕಾರರು ಶರೀರಕ್ಕೆ–ಅಸ್ತಿ, ಜಾಯತೇ, ವಿವರ್ಧತೇ, ವಿಪರಿಣಮತೇ, ಅಪಕ್ಷೀಯತೇ ಮತ್ತು ವಿನಶ್ಯತಿ ಎಂಬ ಷಡ್ಭಾವ ವಿಕಾರಗಳನ್ನು ನಿರೂಪಿಸಿದ್ದಾರೆ. ಈ ಶರೀರವು ತಾಯಿಯ ಗರ್ಭದಲ್ಲಿದ್ದಾಗ 'ಅಸ್ತಿ' ಎಂಬುದಾಗಿಯೂ ಹೊರಬರುವಾಗ 'ಜಾಯತೇ' ಎಂಬುದಾಗಿಯೂ, ಅನ್ನ–ಆಹಾರಾದಿಗಳಿಂದ ಉಪಚಯವನ್ನು ಪಡೆದಾಗ 'ವಿವರ್ಧತೇ'ಯೆಂಬುದಾಗಿಯೂ, ಪರಿಪೂರ್ಣವಾಗಿ ಬೆಳೆದುನಿಂತಾಗ 'ವಿಪರಿಣಮತೇ'ಯೆಂಬುದಾಗಿಯೂ, 'ರೋಗರುಜಿನಾದಿಗಳಿಂದ' ಕ್ಷಯಿಸತೊಡಗಿದಾಗ 'ಅಪಕ್ಷೀಯತೇ'ಎಂಬುದಾಗಿಯೂ, ಕೊನೆಗೆ ಪಂಚಭೂತದಲ್ಲಿ ಲಯಗೊಂಡಾಗ 'ವಿನಶ್ಯತಿ' ಎಂಬುದಾಗಿಯೂ ಕರೆಯಿಸಿಕೊಳ್ಳುತ್ತದೆ. ಆತ್ಮ–ಅನಾತ್ಮಗಳ ವಿವೇಕವನ್ನು ಪಡೆಯದಿರುವ ಅಜ್ಞಾನಿಗಳು ತೋರುವ ದೇಹವನ್ನೇ ತಾವೆಂಬುದಾಗಿ ತಿಳಿದು ಈ ಪೂರ್ವದಲ್ಲಿ ಹೇಳಿದ ಅದರ ಧರ್ಮಗಳನ್ನೆಲ್ಲ ತನ್ನವೆಂಬುದಾಗಿಯೂ ತಿಳಿದುಕೊಂಡಿರುತ್ತಾರೆ. ಅಂತೆಯೇ ಓರ್ವ ಹೆಣ್ಣುಮಗಳಿಗೆ ಗರ್ಭಾದಾನವಾಗಿ, ಗರ್ಭದಲ್ಲಿ ಶಿಶು ಶರೀರವು ಬೆಳೆಯ ತೊಡಗಲು ಗೃಹಸ್ಥರಿಗೊಂದು ಹಬ್ಬವಾಗುತ್ತದೆ. ಗರ್ಭಿಣಿಯಾದ ಹೆಣ್ಣುಮಗಳನ್ನು ಮನೆ ಮನೆಗೆ ಕರೆದುಕೊಂಡು ಹೋಗಿ ಮೃಷ್ಟಾನ್ನವನ್ನುಣಿಸಿ ತೃಪ್ತಿಪಡಿಸುತ್ತಾರೆ. ಒಂಭತ್ತುತಿಂಗಳು ಪೂರ್ಣವಾದ ಬಳಿಕ ಗರ್ಭಸ್ಥ ಶಿಶುವು ಜನ್ಮವನ್ನು ಪಡೆದಾಗ, ಜಾತ–ಕರ್ಮಾದಿ ಸಂಸ್ಕಾರಗಳನ್ನು ಮಾಡುತ್ತಾರೆ. ಹೀಗೆ ತಾಯಿ ಗರ್ಭದಲ್ಲಿಯೇ ದೇಹ ಧರಿಸಿಕೊಂಡು ಭೂಮಿಗೆ ಬಂದ ಜೀವಿಯು ಜಗತ್ತಿನಲ್ಲಿಯ ಸಂಸಾರಿಗಳ ಮಧ್ಯದಲ್ಲಿಯೇ ಉಂಡುಟ್ಟು ಬೆಳೆಯುತ್ತ ಹೋದಂತೆ ಈ ಜೀವಿಯು ದೇಹಾದಿ ಧರ್ಮಗಳೊಂದಿಗೆ ತಾದಾತ್ಮ್ಯವನ್ನು ಹೊಂದುತ್ತ ಹೋಗುತ್ತದೆ. ಅನ್ನ ನೀರುಗಳಿಂದ ದೇಹವು ದಷ್ಟ–ಪುಷ್ಟವೂ, ಕಾಂತಿಯುತವೂ, ರಮಣೀಯವೂ ಆಗಿ ನಿಂತಾಗ ಈ ಜೀವಿಯಲ್ಲಿ ದೇಹಾಭಿಮಾನವು ಪರಾಕಾಷ್ಠ ಸ್ಥಿತಿಯನ್ನು ಪಡೆಯುತ್ತದೆ. ಅಂತೆಯೇ ತನ್ನ ಆಯುಷ್ಯದ ಅತ್ಯಮೂಲ್ಯವಾದ ವೇಳೆಯನ್ನು ಶರೀರಕ್ಕೆ ಉಣಿಸುವ, ಉಡಿಸುವ, ಶೃಂಗರಿಸುವ ವ್ಯವಹಾರಗಳಲ್ಲಿ ಇವನು ಕಾಲ ಕಳೆಯುತ್ತಿರುತ್ತಾನೆ.

ಕಾಲಾಂತರದಲ್ಲಿ ವಿಷಯ–ವ್ಯಾಮೋಹಕ್ಕೆ ಸಿಲುಕಿಕೊಂಡು ಈ ಶರೀರವು ರುಗ್ಣವಾಗಿ ಅಪಕ್ಷಯವನ್ನು ಪಡೆದಾಗ 'ನಾನೇ ಕ್ಷೀಣನಾಗಿದ್ದೇನೆ' ಎಂಬುದಾಗಿ ವ್ಯವಹರಿಸುತ್ತ ದುಃಖಪಡುತ್ತಿರುತ್ತಾನೆ. ಹೀಗೆ ಶರೀರಾದಿಗಳ ವೃದ್ಧಿಯನ್ನು ತನ್ನ ವೃದ್ಧಿಯೆಂದೂ, ಅದರ ಅಪಕ್ಷಯವನ್ನು ತನ್ನದೇ ಆದ ಅಪಕ್ಷಯವೆಂದೂ ಭಾವಿಸುತ್ತಿರುವ ಅಜ್ಞ ಜೀವಿಗಳು ಸದಾ ಸಾಂಸಾರಿಕ ಸುಖ–ದುಃಖಗಳಲ್ಲಿಯೇ ಲಿಪ್ತರಾಗಿರುತ್ತಾರೆ. ಇದೇ ಪ್ರಕಾರವಾಗಿ ಹಸಿವೆ–ತೃಷೆಗಳು ಶರೀರದಲ್ಲಿರುವ ಪ್ರಾಣಕ್ಕೆ ಆಗುತ್ತಿದ್ದರೂ 'ನಾನು ಹಸಿದಿದ್ದೇನೆ' 'ನಾನು ನೀರಡಿಸಿದ್ದೇನೆ' ಎಂಬುದಾಗಿ ಹೇಳುತ್ತ ಅವುಗಳ ನಿವಾರಣೆಗಾಗಿ ಹಗಲಿರುಳು ಪರಿತಪಿಸುತ್ತಿರುತ್ತಾನೆ. ಅಂತೆಯೇ ಹಾವಿನಾಳ ಕಲ್ಲಯ್ಯನೆಂಬ ಶರಣನು–

ಹಗಲು ಹಸಿವೆಗೆ ಕುದಿದು, ಇರುಳು ನಿದ್ರೆಗೆ ಕುದಿದು ।
ಉಳಿದಾದ ಹೊತ್ತೆಲ್ಲ ಅಶನ–ವ್ಯಸನಕ್ಕೆ ಕುದಿದು ॥

ಅಯ್ಯಾ ನಿಮ್ಮನರಿಯದ ಪಾಪಿ ನಾನಯ್ಯ !
ಅಯ್ಯಾ ನಿಮ್ಮನರಿಯದ ಕರ್ಮಿ ನಾನಯ್ಯಾ !
ಮಹಾಲಿಂಗ ಕಲ್ಲೇಶ್ವರಾ ! ಅಗಸ ನೀರಡಿಸಿ
ಸತ್ತ ತೆರನಾಯಿತ್ತೆನ್ನ ಮುಕ್ತಿ ॥

ಎಂಬ ತನ್ನ ಈ ಅನುಭಾವದ ವಚನದಲ್ಲಿ ಅಜ್ಞಜೀವಿಗಳ ವ್ಯವಹಾರವನ್ನು ತನ್ನ ಮೇಲೆ ಆರೋಪಿಸಿಕೊಂಡು ಪ್ರಸ್ತಾಪಿಸಿದ್ದಾನೆ.

ಇದೇ ತೆರನಾಗಿ ಜಗತ್ತಿನಲ್ಲಿ ನಡೆಯುವ ಅನುಕೂಲ–ಪ್ರತಿಕೂಲ ವ್ಯವಹಾರ ಗಳಿಂದುಂಟಾಗುವ ಸುಖ–ದುಃಖಗಳು ಮನಸ್ಸಿನ ಧರ್ಮಗಳಾಗಿದ್ದರೂ, ಇದರ ವಿವೇಕವಿಲ್ಲದೆ 'ಅಹಂ ಸುಖೀ' (ನಾನು ಸುಖಿಯಾಗಿದ್ದೇನೆ) ಅಹಂ ದುಃಖೀ (ನಾನು ದುಃಖಿಯಾಗಿದ್ದೇನೆ) ಎಂಬುದಾಗಿ ವ್ಯವಹರಿಸುವುದನ್ನು ಕಾಣುತ್ತೇವೆ. ಈ ತೆರನಾಗಿ ಜನನ–ಮರಣ, ಹಸಿವೆ–ತೃಷೆ ಮತ್ತು ಸುಖ–ದುಃಖಗಳೆಂಬ ಷಡೂರ್ಮಿಗಳ ಜಾಲದಲ್ಲಿ ಸಿಲುಕಿಕೊಂಡ ಸಾಂಸಾರಿಕ ಜೀವಿಗಳು ಸದಾ ದುಃಖದಲ್ಲಿಯೇ ತೊಳಲಾಡುತ್ತಿರುತ್ತಾರೆ. ಆದರೆ ಇಂದ್ರಿಯಾನುಗ್ರಹ ಸ್ಥಳದ ಸ್ಥಿತಿಯನ್ನು ಪಡೆದ ಶಿವಯೋಗಿಯು ದೇಹ–ಧರ್ಮವನ್ನು ತನ್ನ ಮೇಲೆ ಆರೋಪಿಸಿಕೊಳ್ಳದ ಕಾರಣ ಅವನಿಗೆ ಜನನ–ಮರಣ ಗಳಿರುವುದಿಲ್ಲ. ಅದರಂತೇನೇ ತನ್ನನ್ನು ಪ್ರಾಣಕ್ಕಿಂತಲೂ ಭಿನ್ನನನ್ನಾಗಿ ತಿಳಿದುಕೊಂಡ ಕಾರಣ ಇವನಿಗೆ ಕ್ಷುಧಾ–ತೃಷೆಗಳೂ ಸಹ ಇರಲಾರವು. ಇದೇ ತೆರನಾಗಿ ತನ್ನ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಹಾಗೂ ಮನಸ್ಸನ್ನು ಶಿವನಿಗೆ ಸಮರ್ಪಿಸಿ ಅಮನಸ್ಕನಾಗಿರೋಣದರಿಂದ ಮನಸ್ಸಿನ ಧರ್ಮಗಳಾದ ಸುಖ–ದುಃಖಗಳೂ ಸಹ ಇವನಿಗೆ ಅದಾವ ಬಾಧೆಯನ್ನೂ ಉಂಟುಮಾಡಲಾರವು.

ಜನನ–ಮರಣಗಳೆಂಬ ಘಟನೆಗಳು ಸಾಮಾನ್ಯ ಜೀವಿಗಳಿಗೆ ಬಹು ದೊಡ್ಡವು ಗಳಾಗಿ ಸುಖ–ದುಃಖಗಳಿಗೆ ಕಾರಣೀಭೂತಗಳಾದರೂ ಜ್ಞಾನಿಗಳ ದೃಷ್ಟಿಯಲ್ಲಿ ಅವರೆಡೂ ಬಹು–ಸಾಮಾನ್ಯ–ಘಟನೆಗಳಾಗಿ ತೋರುತ್ತವೆ. ಶರೀರದಲ್ಲಿ ಜೀವಾತ್ಮನ ಪ್ರವೇಶಕ್ಕೆ ಜನ್ಮವೆಂದು ಕರೆದರೆ ಆತನು ಶರೀರವನ್ನು ಬಿಟ್ಟು ಹೊರಹೋಗುವುದೇ ಮರಣವು. ಇದೊಂದು ಪ್ರಾಕೃತಿಕವಾದ ಸಹಜ ಘಟನೆಯು ಇವುಗಳ ಸಹಜತೆಯನ್ನು ಶ್ರೀಮದ್ ಭಗವದ್ಗೀತೆಯಲ್ಲಿ–

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಪರಾಣಿ ।
ತಥಾ ಶರೀರಾಣಿ ವಿಹಾಯ ಜೀರ್ಣಾನ್
ಅನ್ಯಾನಿ ಸಂಯಾತಿ ನವಾನಿ ದೇಹಿ ॥

ಈ ವಿಧವಾಗಿ ವಿವರಿಸಲಾಗಿದೆ. ಓರ್ವ ವ್ಯಕ್ತಿಯು ತನ್ನ ದೇಹದ ಮೇಲೆ ವಸ್ತ್ರಾದಿಗಳನ್ನು ಧರಿಸಿಕೊಳ್ಳುತ್ತಾನೆ. ಅವು ಜೀರ್ಣ–ಶೀರ್ಣವಾದುವೆಂದರೆ ಅವುಗಳನ್ನು ತೆಗೆದೊಗೆದು ಹೊಸ ವಸ್ತ್ರಗಳನ್ನು ಧರಿಸಿಕೊಳ್ಳುತ್ತಾನೆ. ಇದೊಂದು ಸಾಮಾನ್ಯವಾದ ವ್ಯವಹಾರ. ಹಳೆಯ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸುವ ಪ್ರಸಂಗ ಬಂದಾಗ ಅದಾರೂ

ರೋದನಾದಿಗಳನ್ನು ಮಾಡುವುದಿಲ್ಲ. ಅದಕ್ಕೆ ವಿಪರೀತವಾಗಿ ಹರ್ಷವನ್ನೇ ಪಡುತ್ತಾರೆ. ಓರ್ವ ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಅದೆಷ್ಟೋ ಬಟ್ಟೆಗಳನ್ನು ಧರಿಸುತ್ತಾನೆ ಹಾಗೂ ಜೀರ್ಣವಾದನಂತರ ಕಳೆದೊಗೆಯುತ್ತಾನೆ. ದೈನಂದಿನ ಜೀವನದಲ್ಲಿಯ ಈ ಘಟನೆಯು ಆತನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನು ಬೀರದೆ ಸಹಜವಾಗಿ ನಡೆದು ಹೋಗುತ್ತದೆ. ಇದರಂತೆ ಜ್ಞಾನಿಯೂ ಸಹ ಜನನ–ಮರಣಗಳನ್ನು ಅಷ್ಟೊಂದು ಸಹಜವಾಗಿ ಸ್ವೀಕರಿಸುತ್ತಾನೆ ಅಂತೆಯೇ ಅವೆರಡೂ ಘಟನೆಗಳು ಅವನ ಮನಸ್ಸಿನ ಮೇಲೆ ಅದಾವ ವಿಶೇಷ ಪರಿಣಾಮವನ್ನು ಉಂಟುಮಾಡುವುದಿಲ್ಲ.

ಅಜ್ಞರಾದ ಜೀವಿಗಳು ಮರಣವನ್ನು ಕಂಡಾಗ ಭಯ–ಭೀತರಾಗುತ್ತಾರೆ. ಆದರೆ ಇಂದ್ರಿಯಾನುಗ್ರಹಸ್ಥಲದ ಈ ಶಿವಯೋಗಿಯು ಭೀತನಾಗುವುದಿಲ್ಲ. ಇವನ ದೃಷ್ಟಿಯಲ್ಲಿ ಮರಣವೆಂದರೆ ಒಂದು ಉಪಾಧಿಯ ತ್ಯಾಗವಷ್ಟೇ. ದೇಹಾಭಿಮಾನಶೂನ್ಯನಾದ ಇವನಿಗೆ ದೇಹವು ತನ್ನನ್ನು ಅಗಲಿ ಹೋದಾಗ ಸಂತೋಷವೇ ವಿನಃ ದುಃಖವೆಂದೂ ಆಗುವುದಿಲ್ಲ. ಆದ್ದರಿಂದ ಜನನ–ಮರಣಗಳ ಪರಿಣಾಮವು ಇವನ ಮೇಲೆ ಉಂಟಾಗುವುದಿಲ್ಲ. ಅಂತೆಯೇ ರೇಣುಕ ಭಗವತ್ಪಾದರು ಈತನಿಗೆ ಜನನ–ಮರಣ ಗಳಿರುವುದಿಲ್ಲ ಎಂಬುದಾಗಿ ಹೇಳಿದ್ದಾರೆ.

ಶರೀರದಲ್ಲಿ ಪ್ರಾಣವಿರುವವರೆಗೆ ಹಸಿವೆ–ತೃಷೆಗಳು ಅದಾರಿಗೂ ತಪ್ಪುವುದಿಲ್ಲ. ಅಜ್ಞನಾದ ಜೀವಿಯು ಅನ್ನ–ನೀರುಗಳನ್ನು ಸ್ವೀಕರಿಸುವಂತೆ ಜ್ಞಾನಿಯೂ ಸಹ ಸ್ವೀಕರಿಸುವುದು ಕಂಡುಬರುತ್ತದೆ. ಆದರೆ ವ್ಯತ್ಯಾಸವೇನೆಂದರೆ ಅಜ್ಞನು ತನಗೆ ಹಸಿವೆ–ತೃಷೆಗಳಾಗುತ್ತಿವೆಯೆಂದು ತಿಳಿದುಕೊಂಡರೆ, ಜ್ಞಾನಿಯು ಇವುಗಳು ಪ್ರಾಣದ ಧರ್ಮಗಳೆಂದು ನಿಶ್ಚಯಿಸಿಕೊಂಡಿರುತ್ತಾನೆ. ಹೀಗೆ ಇವನು ಪ್ರಾಣಾಭಿಮಾನಶೂನ್ಯನಾಗಿ ರೋಣದರಿಂದ, ಇವನಿಗೆ ಕ್ಷುತ್‌ಪಿಪಾಸೆಗಳು ಇರುವುದಿಲ್ಲವೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿರುತ್ತಾರೆ. ಅಭಿಮಾನವು ಬಂಧನಕ್ಕೆ ಕಾರಣವಾದರೆ, ನಿರಭಿಮಾನವು ಮುಕ್ತಿಗೆ ಸಾಧನವಾಗಿರುತ್ತದೆ. ಮುಕ್ತನಾಗಬೇಕಾದರೆ ಮೊದಲು ಅಭಿಮಾನವನ್ನು ತ್ಯಜಿಸಬೇಕಾಗುವುದು. ಜೀವನು ಅಭಿಮಾನಿಯಾಗಿರೋಣದರಿಂದ ಸದಾ ಬದ್ಧಿತನಾಗಿ ರುತ್ತಾನೆ: ಶಿವನು ನಿರಭಿಮಾನಿಯಾಗಿರೋಣದರಿಂದ ಅವನು ನಿತ್ಯಮುಕ್ತನಾಗಿರುತ್ತಾನೆ. ತನ್ನ ಜೀವನದಲ್ಲಿ ಬಹು ಕಷ್ಟಪಟ್ಟು ಒಂದು ಮನೆಯನ್ನು ನಿರ್ಮಿಸಿಕೊಂಡ ಜೀವನು ತನ್ನ ಉಸಿರಿರುವವರೆಗೆ 'ನಾನು ಕಟ್ಟಿಸಿದ್ದೇನೆ' 'ನಾನು ಕಟ್ಟಿಸಿದ್ದೇನೆ' ಎಂಬುದಾಗಿ ಹೇಳುತ್ತಲೇ ಇರುತ್ತಾನೆ. ಆದರೆ ಅನಂತ ವೈಚಿತ್ರ್ಯಗಳಿಂದ ಕೂಡಿದ ಈ ವಿಶಾಲವಾದ ಸೃಷ್ಟಿಯನ್ನು ನಿರ್ಮಿಸಿದ ಶಿವನು ಸದಾ ಮೌನವಾಗಿಯೇ ಇರುತ್ತಾನೆ. ಪ್ರಕೃತಿ ಹಾಗೂ ಪರಮಾತ್ಮರು ತಾವು ಮಾಡಿದ್ದನ್ನು ಎಂದೂ ಹೇಳಿಕೊಳ್ಳುವುದಿಲ್ಲ. ಒಂದು ಬೀಜವನ್ನು ಭೂಮಿಯಲ್ಲಿ ಹಾಕಿದಾಗ ಅದು ಅಂಕುರಿಸಿ ಬೆಳೆದು ಮಹಾನ್ ವೃಕ್ಷವಾಗಿ ನಿಂತು ಎಲ್ಲರಿಗೂ ಶೀತಲ ಛಾಯೆಯನ್ನು, ಸುಮಧುರ ಫಲಗಳನ್ನು, ಸುಗಂಧಭರಿತಗಳಾದ ಪುಷ್ಪಗಳನ್ನು ಸದಾ ಕೊಡುತ್ತಲಿರುತ್ತದೆ. ಆದರೂ ಅದು ಮೌನವಾಗಿಯೇ ಇರುತ್ತದೆ. ಇದು ಅದರ ಮಹಾನ್ ಗುಣವು.

ಮನುಷ್ಯನು ಮಾತ್ರ ಎಂದೂ ಮೌನವಾಗಿರಲಾರನು. ಸದಾ ತನ್ನ ಪ್ರತಿಷ್ಠೆಯನ್ನು ತನ್ನ ವಾಣಿಯಿಂದಲೇ ಮಾಡಿಕೊಳ್ಳುತ್ತಿರುವ ಇವನಿಗೆ ಶಾಸ್ತ್ರಗಳು ಮೌನವಾಗಿರಲು ಉಪದೇಶಿಸುತ್ತವೆ. ವಾರಕ್ಕೊಂದು ದಿನ ಮೌನವನ್ನು ಪರಿಪಾಲಿಸುವುದೂ ಸಹ ಮನುಷ್ಯನಿಗೆ ಬಹು ಕಷ್ಟಸಾಧ್ಯವಾಗಿರುತ್ತದೆ. ಮೌನವೆಂದರೆ ಕೇವಲ ಬಾಯಿಮುಚ್ಚಿ ಕೊಂಡು ಕುಳಿತುಕೊಳ್ಳುವುದಲ್ಲ. ತನ್ನ ಇಚ್ಛೆಯನ್ನು ಪ್ರಕಟಿಸದಿರುವುದೇ ಮೌನ. ಪ್ರಕೃತಿ ಹಾಗೂ ಪರಮಾತ್ಮರು ಸದಾ ಮೌನರಾಗಿದ್ದು ಸಕಲ ಜೀವಿಗಳಿಗೆ ಸದಾ ಮೌನವಾಗಿರುವ ಸಂದೇಶವನ್ನು ಕೊಡುತ್ತಿರುತ್ತಾರೆ. ಯಾರಿಗೆ ತನ್ನ ವಾಣಿ ಹಾಗೂ ಮನಸ್ಸಿನ ಮೇಲೆ ನಿಯಂತ್ರಣವಿರುವುದಿಲ್ಲವೋ ಅವನಿಗೆ ಭಗವತ್ತತ್ತ್ವವನ್ನು ತಿಳಿದುಕೊಳ್ಳಲು ಸಾಧ್ಯವಾಗು ವುದಿಲ್ಲ. ಆದ್ದರಿಂದ ಪ್ರತಿಯೊಬ್ಬರೂ ಮನದ ಮೌನವನ್ನು ಸಾಧಿಸಲು ಪ್ರಯತ್ನ ಪಡಬೇಕು. ತನ್ನ ಸರ್ವೇಂದ್ರಿಯ ವ್ಯವಹಾರದ ಮೇಲೆ ನಿಗ್ರಹವನ್ನು ಸಾಧಿಸಿದ ಶಿವಯೋಗಿಯು ಆ ಇಂದ್ರಿಯಗಳಿಂದಲೇ ಭಕ್ತರನ್ನು ಅನುಗ್ರಹಿಸುತ್ತಾನೆ. ಹೀಗೆ ನಿರಭಿಮಾನಿಯೂ, ಇಂದ್ರಿಯಾನುಗ್ರಹ ಸಮರ್ಥನೂ ಆದ ಶಿವಯೋಗಿಗೆ ಜರಾಮರಣಗಳಿಲ್ಲವೆಂದರೆ ಆತನ ಶರೀರಕ್ಕೆ ಮುಪ್ಪು ಮರಣಗಳು ಆವರಿಸುವುದಿಲ್ಲ ವೆಂದರ್ಥವಲ್ಲ. ಆದರೆ ಈ ಶಿವಯೋಗಿಯು ದೇಹಾಭಿಮಾನರಹಿತನಾಗಿರೋಣದ ರಿಂದ ದೇಹದ ಧರ್ಮಗಳಾದ ಜರಾ–ಮರಣಗಳನ್ನು ತನ್ನ ಮೇಲೆ ಆರೋಪಿಸಿ ಕೊಳ್ಳುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು. ಇದೇ ಪ್ರಕಾರವಾಗಿ ಅವನಿಗೆ ಹಸಿವೆ–ತೃಷೆಗಳಿಲ್ಲವೆಂದರೆ ಅವನು ಅನ್ನ–ನೀರುಗಳನ್ನು ಸ್ವೀಕರಿಸುವುದೇ ಇಲ್ಲವೆಂದರ್ಥ ವಲ್ಲ. ಆದರೆ ಈ ಹಸಿವೆ–ತೃಷೆಗಳು ಪ್ರಾಣದ ಧರ್ಮಗಳೆಂದು ತಿಳಿದು ಆ ಧರ್ಮ ಗಳನ್ನೂ ಸಹ ತನ್ನ ಮೇಲೆ ಆರೋಪಿಸಿಕೊಳ್ಳುವುದಿಲ್ಲವೆಂಬುದಾಗಿ ಅರ್ಥೈಸಿಕೊಳ್ಳಬೇಕು. ಶಿವಯೋಗಿಯ ಇಂದ್ರಿಯಾನುಗ್ರಹ ಸ್ಥಿತಿಯನ್ನು ಪ್ರತಿಪಾದಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ–

ಮನೋ ಯತ್ರ ಪ್ರವರ್ತೇತ ತತ್ರ ಸರ್ವೇಂದ್ರಿಯ ಸ್ಥಿತಿಃ ।
ಶಿವೇ ಮನಸಿ ಸಲ್ಲೀನೇ ಕ್ವ ಚೇಂದ್ರಿಯವಿಚಾರಣಾ ॥

(ಸಿ. ಶಿ. ೧೭–೨೦)

ಈ ರೀತಿಯಾಗಿ ವಿವರಿಸಿದ್ದಾರೆ. ಮನಸ್ಸು ಎಲ್ಲಿ ಪ್ರವೃತ್ತವಾಗುವುದೋ ಅಲ್ಲಿಯೇ ಇಂದ್ರಿಯಗಳ ವ್ಯವಹಾರವು ಉಂಟಾಗುವುದು. ಮನಸ್ಸಿಲ್ಲದೆ ಇಂದ್ರಿಯಗಳು ತಮ್ಮ ವ್ಯವಹಾರವನ್ನು ಮಾಡಲು ಸಮರ್ಥವಾಗಲಾರವು. ಹೀಗೆ ಸರ್ವ ಇಂದ್ರಿಯಗಳ ವ್ಯವಹಾರಕ್ಕೆ ಕಾರಣವಾಗಿರುವ ಆ ಮನಸ್ಸೇ ಶಿವನಲ್ಲಿ ಲೀನವಾಗಿ ಬಿಟ್ಟರೆ ಇಂದ್ರಿಯಗಳು ಬೇರಾವಕಡೆಯೂ ಹರಿದಾಡಲಾರವು.

ನಮ್ಮ ದೇಹದಲ್ಲಿ ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯ ಗಳೆಂಬ ಹತ್ತು ಇಂದ್ರಿಯಗಳಿರುತ್ತವೆ. ಈ ಎಲ್ಲ ಇಂದ್ರಿಯಗಳ ಮೇಲೆ ಒಡೆತನವನ್ನು ಪಡೆದಿರುವ ಮನಸ್ಸು ಸಹ ಇರುತ್ತದೆ. ನಾವು ಯಾವುದೇ ಇಂದ್ರಿಯದ ಮೂಲಕ ವ್ಯವಹಾರವನ್ನು ಮಾಡಬೇಕಾದರೆ ಅಲ್ಲಿ ಮನಸ್ಸಿನ ಸಹಕಾರವು ಬೇಕೇ ಬೇಕು. ಅಂತೆಯೇ ಶಾಸ್ತ್ರಕಾರರು ಮನಸ್ಸಿಗೆ ಇಂದ್ರಿಯಾಧ್ಯಕ್ಷವೆಂದು ಕರೆದಿದ್ದಾರೆ.

ರೋದನಾದಿಗಳನ್ನು ಮಾಡುವುದಿಲ್ಲ, ಅದಕ್ಕೆ ವಿಪರೀತವಾಗಿ ಹರ್ಷವನ್ನೇ ಪಡುತ್ತಾರೆ. ಓರ್ವ ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಅದೆಷ್ಟೋ ಬಟ್ಟೆಗಳನ್ನು ಧರಿಸುತ್ತಾನೆ ಹಾಗೂ ಜೀರ್ಣವಾದನಂತರ ಕಳೆದೊಗೆಯುತ್ತಾನೆ. ದೈನಂದಿನ ಜೀವನದಲ್ಲಿಯ ಈ ಘಟನೆಯು ಆತನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನು ಬೀರದೆ ಸಹಜವಾಗಿ ನಡೆದು ಹೋಗುತ್ತದೆ. ಇದರಂತೆ ಜ್ಞಾನಿಯೂ ಸಹ ಜನನ–ಮರಣಗಳನ್ನು ಅಷ್ಟೊಂದು ಸಹಜವಾಗಿ ಸ್ವೀಕರಿಸುತ್ತಾನೆ ಅಂತೆಯೇ ಅವೆರಡೂ ಘಟನೆಗಳು ಅವನ ಮನಸ್ಸಿನ ಮೇಲೆ ಅದಾವ ವಿಶೇಷ ಪರಿಣಾಮವನ್ನು ಉಂಟುಮಾಡುವುದಿಲ್ಲ.

ಅಜ್ಞರಾದ ಜೀವಿಗಳು ಮರಣವನ್ನು ಕಂಡಾಗ ಭಯ–ಭೀತರಾಗುತ್ತಾರೆ. ಆದರೆ ಇಂದ್ರಿಯಾನುಗ್ರಹಸ್ಥಲದ ಈ ಶಿವಯೋಗಿಯು ಭೀತನಾಗುವುದಿಲ್ಲ. ಇವನ ದೃಷ್ಟಿಯಲ್ಲಿ ಮರಣವೆಂದರೆ ಒಂದು ಉಪಾಧಿಯ ತ್ಯಾಗವಷ್ಟೇ. ದೇಹಾಭಿಮಾನಶೂನ್ಯನಾದ ಇವನಿಗೆ ದೇಹವು ತನ್ನನ್ನು ಅಗಲಿ ಹೋದಾಗ ಸಂತೋಷವೇ ವಿನಃ ದುಃಖವೆಂದೂ ಆಗುವುದಿಲ್ಲ. ಆದ್ದರಿಂದ ಜನನ–ಮರಣಗಳ ಪರಿಣಾಮವು ಇವನ ಮೇಲೆ ಉಂಟಾಗುವುದಿಲ್ಲ. ಅಂತೆಯೇ ರೇಣುಕ ಭಗವತ್ಪಾದರು ಈತನಿಗೆ ಜನನ–ಮರಣ ಗಳಿರುವುದಿಲ್ಲ ಎಂಬುದಾಗಿ ಹೇಳಿದ್ದಾರೆ.

ಶರೀರದಲ್ಲಿ ಪ್ರಾಣವಿರುವವರೆಗೆ ಹಸಿವೆ–ತೃಷೆಗಳು ಅದಾರಿಗೂ ತಪ್ಪುವುದಿಲ್ಲ. ಅಜ್ಞನಾದ ಜೀವಿಯು ಅನ್ನ–ನೀರುಗಳನ್ನು ಸ್ವೀಕರಿಸುವಂತೆ ಜ್ಞಾನಿಯೂ ಸಹ ಸ್ವೀಕರಿಸುವುದು ಕಂಡುಬರುತ್ತದೆ. ಆದರೆ ವ್ಯತ್ಯಾಸವೇನೆಂದರೆ ಅಜ್ಞನು ತನಗೆ ಹಸಿವೆ–ತೃಷೆಗಳಾಗುತ್ತಿವೆಯೆಂದು ತಿಳಿದುಕೊಂಡರೆ, ಜ್ಞಾನಿಯು ಇವುಗಳು ಪ್ರಾಣದ ಧರ್ಮಗಳೆಂದು ನಿಶ್ಚಯಿಸಿಕೊಂಡಿರುತ್ತಾನೆ. ಹೀಗೆ ಇವನು ಪ್ರಾಣಾಭಿಮಾನಶೂನ್ಯನಾಗಿ ರೋಣದರಿಂದ, ಇವನಿಗೆ ಕ್ಷುತ್‌ಪಿಪಾಸೆಗಳು ಇರುವುದಿಲ್ಲವೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿರುತ್ತಾರೆ. ಅಭಿಮಾನವು ಬಂಧನಕ್ಕೆ ಕಾರಣವಾದರೆ, ನಿರಭಿಮಾನವು ಮುಕ್ತಿಗೆ ಸಾಧನವಾಗಿರುತ್ತದೆ. ಮುಕ್ತನಾಗಬೇಕಾದರೆ ಮೊದಲು ಅಭಿಮಾನವನ್ನು ತ್ಯಜಿಸಬೇಕಾಗುವುದು. ಜೀವನು ಅಭಿಮಾನಿಯಾಗಿರೋಣದರಿಂದ ಸದಾ ಬದ್ಧನಾಗಿ ರುತ್ತಾನೆ: ಶಿವನು ನಿರಭಿಮಾನಿಯಾಗಿರೋಣದರಿಂದ ಅವನು ನಿತ್ಯಮುಕ್ತನಾಗಿರುತ್ತಾನೆ. ತನ್ನ ಜೀವನದಲ್ಲಿ ಬಹು ಕಷ್ಟಪಟ್ಟು ಒಂದು ಮನೆಯನ್ನು ನಿರ್ಮಿಸಿಕೊಂಡ ಜೀವನು ತನ್ನ ಉಸಿರಿರುವವರೆಗೆ 'ನಾನು ಕಟ್ಟಿಸಿದ್ದೇನೆ' 'ನಾನು ಕಟ್ಟಿಸಿದ್ದೇನೆ' ಎಂಬುದಾಗಿ ಹೇಳುತ್ತಲೇ ಇರುತ್ತಾನೆ. ಆದರೆ ಅನಂತ ವೈಚಿತ್ರ್ಯಗಳಿಂದ ಕೂಡಿದ ಈ ವಿಶಾಲವಾದ ಸೃಷ್ಟಿಯನ್ನು ನಿರ್ಮಿಸಿದ ಶಿವನು ಸದಾ ಮೌನವಾಗಿಯೇ ಇರುತ್ತಾನೆ. ಪ್ರಕೃತಿ ಹಾಗೂ ಪರಮಾತ್ಮರು ತಾವು ಮಾಡಿದ್ದನ್ನು ಎಂದೂ ಹೇಳಿಕೊಳ್ಳುವುದಿಲ್ಲ. ಒಂದು ಬೀಜವನ್ನು ಭೂಮಿಯಲ್ಲಿ ಹಾಕಿದಾಗ ಅದು ಅಂಕುರಿಸಿ ಬೆಳೆದು ಮಹಾನ್ ವೃಕ್ಷವಾಗಿ ನಿಂತು ಎಲ್ಲರಿಗೂ ಶೀತಲ ಛಾಯೆಯನ್ನು, ಸುಮಧುರ ಫಲಗಳನ್ನು, ಸುಗಂಧಭರಿತಗಳಾದ ಪುಷ್ಪಗಳನ್ನು ಸದಾ ಕೊಡುತ್ತಲಿರುತ್ತದೆ. ಆದರೂ ಅದು ಮೌನವಾಗಿಯೇ ಇರುತ್ತದೆ. ಇದು ಅದರ ಮಹಾನ್ ಗುಣವು.

ಮನುಷ್ಯನು ಮಾತ್ರ ಎಂದೂ ಮೌನವಾಗಿರಲಾರನು. ಸದಾ ತನ್ನ ಪ್ರತಿಷ್ಠೆಯನ್ನು ತನ್ನ ವಾಣಿಯಿಂದಲೇ ಮಾಡಿಕೊಳ್ಳುತ್ತಿರುವ ಇವನಿಗೆ ಶಾಸ್ತ್ರಗಳು ಮೌನವಾಗಿರಲು ಉಪದೇಶಿಸುತ್ತವೆ. ವಾರಕ್ಕೊಂದು ದಿನ ಮೌನವನ್ನು ಪರಿಪಾಲಿಸುವುದೂ ಸಹ ಮನುಷ್ಯನಿಗೆ ಬಹು ಕಷ್ಟಸಾಧ್ಯವಾಗಿರುತ್ತದೆ. ಮೌನವೆಂದರೆ ಕೇವಲ ಬಾಯಿಮುಚ್ಚಿಕೊಂಡು ಕುಳಿತುಕೊಳ್ಳುವುದಲ್ಲ. ತನ್ನ ಇಚ್ಛೆಯನ್ನು ಪ್ರಕಟಿಸದಿರುವುದೇ ಮೌನ. ಪ್ರಕೃತಿ ಹಾಗೂ ಪರಮಾತ್ಮರು ಸದಾ ಮೌನರಾಗಿದ್ದು ಸಕಲ ಜೀವಿಗಳಿಗೆ ಸದಾ ಮೌನವಾಗಿರುವ ಸಂದೇಶವನ್ನು ಕೊಡುತ್ತಿರುತ್ತಾರೆ. ಯಾರಿಗೆ ತನ್ನ ವಾಣಿ ಹಾಗೂ ಮನಸ್ಸಿನ ಮೇಲೆ ನಿಯಂತ್ರಣವಿರುವುದಿಲ್ಲವೋ ಅವನಿಗೆ ಭಗವತ್ತತ್ತ್ವವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ, ಆದ್ದರಿಂದ ಪ್ರತಿಯೊಬ್ಬರೂ ಮನದ ಮೌನವನ್ನು ಸಾಧಿಸಲು ಪ್ರಯತ್ನಪಡಬೇಕು. ತನ್ನ ಸರ್ವೇಂದ್ರಿಯ ವ್ಯವಹಾರದ ಮೇಲೆ ನಿಗ್ರಹವನ್ನು ಸಾಧಿಸಿದ ಶಿವಯೋಗಿಯು ಆ ಇಂದ್ರಿಯಗಳಿಂದಲೇ ಭಕ್ತರನ್ನು ಅನುಗ್ರಹಿಸುತ್ತಾನೆ. ಹೀಗೆ ನಿರಭಿಮಾನಿಯೂ, ಇಂದ್ರಿಯಾನುಗ್ರಹ ಸಮರ್ಥನೂ ಆದ ಶಿವಯೋಗಿಗೆ ಜರಾಮರಣಗಳಿಲ್ಲವೆಂದರೆ ಆತನ ಶರೀರಕ್ಕೆ ಮುಪ್ಪು ಮರಣಗಳು ಆವರಿಸುವುದಿಲ್ಲವೆಂದರ್ಥವಲ್ಲ. ಆದರೆ ಈ ಶಿವಯೋಗಿಯು ದೇಹಾಭಿಮಾನರಹಿತನಾಗಿರೋಣದರಿಂದ ದೇಹದ ಧರ್ಮಗಳಾದ ಜರಾ–ಮರಣಗಳನ್ನು ತನ್ನ ಮೇಲೆ ಆರೋಪಿಸಿಕೊಳ್ಳುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು. ಇದೇ ಪ್ರಕಾರವಾಗಿ ಅವನಿಗೆ ಹಸಿವೆ–ತೃಷೆಗಳಿಲ್ಲವೆಂದರೆ ಅವನು ಅನ್ನ–ನೀರುಗಳನ್ನು ಸ್ವೀಕರಿಸುವುದೇ ಇಲ್ಲವೆಂದರ್ಥವಲ್ಲ. ಆದರೆ ಈ ಹಸಿವೆ–ತೃಷೆಗಳು ಪ್ರಾಣದ ಧರ್ಮಗಳೆಂದು ತಿಳಿದು ಆ ಧರ್ಮಗಳನ್ನೂ ಸಹ ತನ್ನ ಮೇಲೆ ಆರೋಪಿಸಿಕೊಳ್ಳುವುದಿಲ್ಲವೆಂಬುದಾಗಿ ಅರ್ಥೈಸಿಕೊಳ್ಳಬೇಕು. ಶಿವಯೋಗಿಯ ಇಂದ್ರಿಯಾನುಗ್ರಹ ಸ್ಥಿತಿಯನ್ನು ಪ್ರತಿಪಾದಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ–

ಮನೋ ಯತ್ರ ಪ್ರವರ್ತೇತ ತತ್ರ ಸರ್ವೇಂದ್ರಿಯ ಸ್ಥಿತಿಃ ।
ಶಿವೇ ಮನಸಿ ಸಲ್ಲೀನೇ ಕ್ವ ಚೇಂದ್ರಿಯವಿಚಾರಣಾ ॥

(ಸಿ. ಶಿ. ೧೭–೨೦)

ಈ ರೀತಿಯಾಗಿ ವಿವರಿಸಿದ್ದಾರೆ. ಮನಸ್ಸು ಎಲ್ಲಿ ಪ್ರವೃತ್ತವಾಗುವುದೋ ಅಲ್ಲಿಯೇ ಇಂದ್ರಿಯಗಳ ವ್ಯವಹಾರವು ಉಂಟಾಗುವುದು. ಮನಸ್ಸಿಲ್ಲದೆ ಇಂದ್ರಿಯಗಳು ತಮ್ಮ ವ್ಯವಹಾರವನ್ನು ಮಾಡಲು ಸಮರ್ಥವಾಗಲಾರವು. ಹೀಗೆ ಸರ್ವ ಇಂದ್ರಿಯಗಳ ವ್ಯವಹಾರಕ್ಕೆ ಕಾರಣವಾಗಿರುವ ಆ ಮನಸ್ಸೇ ಶಿವನಲ್ಲಿ ಲೀನವಾಗಿ ಬಿಟ್ಟರೆ ಇಂದ್ರಿಯಗಳು ಬೇರಾವಕಡೆಯೂ ಹರಿದಾಡಲಾರವು.

ನಮ್ಮ ದೇಹದಲ್ಲಿ ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳೆಂಬ ಹತ್ತು ಇಂದ್ರಿಯಗಳಿರುತ್ತವೆ. ಈ ಎಲ್ಲ ಇಂದ್ರಿಯಗಳ ಮೇಲೆ ಒಡೆತನವನ್ನು ಪಡೆದಿರುವ ಮನಸ್ಸು ಸಹ ಇರುತ್ತದೆ. ನಾವು ಯಾವುದೇ ಇಂದ್ರಿಯದ ಮೂಲಕ ವ್ಯವಹಾರವನ್ನು ಮಾಡಬೇಕಾದರೆ ಅಲ್ಲಿ ಮನಸ್ಸಿನ ಸಹಕಾರವು ಬೇಕೇ ಬೇಕು. ಅಂತೆಯೇ ಶಾಸ್ತ್ರಕಾರರು ಮನಸ್ಸಿಗೆ ಇಂದ್ರಿಯಾಧ್ಯಕ್ಷವೆಂದು ಕರೆದಿದ್ದಾರೆ.

ಕಿವಿಯು ಶಬ್ದವನ್ನು ಕೇಳಬೇಕಾದರೆ, ಚರ್ಮವು ಸ್ಪರ್ಶವನ್ನರಿಯಬೇಕಾದರೆ, ನೇತ್ರವು ರೂಪವನ್ನು ನೋಡಬೇಕಾದರೆ, ರಸನೆಯು ರಸಾಸ್ವಾದನೆ ಮಾಡಬೇಕಾದರೆ ಮತ್ತು ಘ್ರಾಣವು ಗಂಧವನ್ನು ಆಘ್ರಾಣಿಸಬೇಕಾದರೆ ಮನಸ್ಸು ಈ ಎಲ್ಲ ಇಂದ್ರಿಯ ಗಳೊಂದಿಗೆ ಬೆರೆತಿರಬೇಕಾಗಿರುತ್ತದೆ. ಮನಸ್ಸಿನ ಅಸ್ತಿತ್ವವಿಲ್ಲದೆ ಯಾವ ಇಂದ್ರಿಯಗಳೂ ಸ್ವತಂತ್ರವಾಗಿ ತಮ್ಮ ವ್ಯವಹಾರವನ್ನು ಮಾಡಲಾರವು.

ವಾಸ್ತವಿಕವಾಗಿ ವಿಚಾರಮಾಡಲು ಶಬ್ದ-ಸ್ಪರ್ಶಾದಿ ವಿಷಯಗಳು ಶ್ರೋತ್ರಾದಿ ಇಂದ್ರಿಯಗಳಿಗೆ ಬೇಕಾಗಿರುವುದಿಲ್ಲ. ಎಲ್ಲ ವಿಷಯಗಳು ಬೇಕಾಗುವುದು ಮನಸ್ಸಿಗೇನೇ. ಮನಸ್ಸೇ ಶ್ರವಣೇಂದ್ರಿಯ ಮೂಲಕ ಶಬ್ದವನ್ನು, ತ್ವಗಿಂದ್ರಿಯ ಮೂಲಕ ಸ್ಪರ್ಶವನ್ನೂ, ನೇತ್ರೇಂದ್ರಿಯ ಮೂಲಕ ರೂಪವನ್ನೂ, ಜಿಹ್ವೇಂದ್ರಿಯ ಮೂಲಕ ರಸವನ್ನೂ ಮತ್ತು ಘ್ರಾಣೇಂದ್ರಿಯ ಮೂಲಕ ಗಂಧವನ್ನೂ ಅನುಭವಿಸುತ್ತಿರುತ್ತದೆ. ಈ ವಿಷಯಗಳ ಸಂಬಂಧದಿಂದ ಉಂಟಾಗುವ ಸುಖ-ದುಃಖಗಳು ಮನಸ್ಸಿಗೇನೇ ಆಗುತ್ತವೆಯೇ ವಿನಃ ಇಂದ್ರಿಯಗಳಿಗೆ ಆಗುವುದಿಲ್ಲ. ಇಂದ್ರಿಯಗಳೆಂದರೆ ಮನಸ್ಸಿನ ವಿಷಯಾನುಭವದ ಸಾಧನಗಳು. ಓರ್ವ ವ್ಯಕ್ತಿಯು ಒಂದು ಮನೆಯಲ್ಲಿದ್ದುಕೊಂಡು ಆ ಮನೆಗೆ ಹಚ್ಚಿರುವ ಕಿಡಿಕಿಗಳ ಮುಖಾಂತರ ಹೊರಗಿನ ಸಂಗತಿ ಸಮಾಚಾರಗಳನ್ನು ಅರಿಯುವಂತೆ, ಮನಸ್ಸು ಸಹ ಅಂತರಂಗದಲ್ಲಿದ್ದುಕೊಂಡು ಈ ಶರೀರಕ್ಕಿರುವ ದಶೇಂದ್ರಿಯಗಳ ಮೂಲಕವಾಗಿ ಸರ್ವವ್ಯವಹಾರವನ್ನು ಮಾಡುತ್ತಿರುತ್ತದೆ. ಇದೆಲ್ಲವನ್ನು ನೋಡಿದಾಗ ಸಕಲೇಂದ್ರಿಯಗಳ ವ್ಯವಹಾರಕ್ಕೆ ಮನವೇ ಮೂಲ ಎಂಬುದಾಗಿ ತಿಳಿದುಬರುತ್ತದೆ.

ಆದ್ದರಿಂದ ತನಗೆ ಯಾವಾಗ ಯಾವ ವಿಷಯವು ಬೇಕೆನಿಸುವುದೋ ಆಗ ಆ ವಿಷಯಕ್ಕೆ ಸಂಬಂಧಿಸಿದ ಇಂದ್ರಿಯದ ಮೂಲಕ ಅದನ್ನು ಅನುಭವಿಸುತ್ತದೆ. ನಾವು ಇಂದ್ರಿಯಗಳನ್ನು ನಿಗ್ರಹಿಸಬೇಕಾದರೆ ಪ್ರತಿಯೊಂದು ಇಂದ್ರಿಯಕ್ಕಾಗಿ ಪ್ರಯತ್ನಿಸುವ ಅವಶ್ಯಕತೆ ಇರುವುದಿಲ್ಲ. ಇಂದ್ರಿಯಾಧ್ಯಕ್ಷವಾದ ಮನಸ್ಸೊಂದನ್ನು ತಡೆದರೆ ಸಕಲೇಂದ್ರಿಯಗಳ ವ್ಯವಹಾರವೆಲ್ಲ ತನ್ನಿಂದ ತಾನೇ ನಿಂತುಹೋಗುತ್ತದೆ. ಇಂದ್ರಿಯ ಮನಸ್ಸುಗಳ ಈ ಸಂಬಂಧವನ್ನು ಲೋಕಕ್ಕೆ ತಿಳಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮನಸ್ಸನ್ನು ಶಿವನಲ್ಲಿ ಲಯಗೊಳಿಸಿದರೆ ಇಂದ್ರಿಯಗಳ ವಿಷಯ ವ್ಯವಹಾರವು ತಾನಾಗಿಯೇ ನಿಂತು ಹೋಗುತ್ತದೆ ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಇದೇ ವಿಷಯವನ್ನೇ ಅಕ್ಕಮಹಾದೇವಿಯು ತನ್ನ ಅನುಭಾವ ವಚನದಲ್ಲಿ-

ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ
ಎನಗುಳ್ಳುದೊಂದು ಮನ, ಆ ಮನ ನಿಮ್ಮಲ್ಲಿ
ಒಡವೆರೆದ ಬಳಿಕ ಎನಗೆ ಭವವುಂಟೇ
ಚೆನ್ನಮಲ್ಲಿಕಾರ್ಜುನಾ ?

ಎಂಬುದಾಗಿ ವರ್ಣಿಸಿದ್ದಾಳೆ. ಮನಸ್ಸು ಬಹಿರ್ಮುಖವಾದೊಡೆ ಸಂಸಾರವು, ಅದುವೇ ಅಂತರ್ಮುಖವಾದಾಗ ಅಸಂಸಾರ ಸ್ಥಿತಿಯು. ಗಾಢವಾದ ನಿದ್ರೆಯಲ್ಲಿ ಪ್ರತಿಯೊಬ್ಬರ

ಮನಸ್ಸು ಅಂತರ್ಮುಖವಾಗಿರೋಣದರಿಂದ ಅಲ್ಲಿ ಯಾವ ಇಂದ್ರಿಯಗಳ ವ್ಯವಹಾರವೂ ಇರುವುದಿಲ್ಲವೆಂಬುದು ಸರ್ವಾನುಭವ ಸಿದ್ಧವಾದುದು. ಇದೇ ಪ್ರಕಾರ ವಾಗಿ ಓರ್ವ ಶಿವಯೋಗಿಯು ಜಾಗ್ರದಾವಸ್ಥೆಯಲ್ಲಿಯೇ ಶಿವಯೋಗ ಸಾಮರ್ಥ್ಯದಿಂದ ತನ್ನ ಮನಸ್ಸನ್ನು ಶಿವನಲ್ಲಿ ವಿಲೀನಗೊಳಿಸಿದಾಗ ಸರ್ವೇಂದ್ರಿಯ ವ್ಯವಹಾರವು ನಿಂತು ಹೋಗುತ್ತದೆ. ಇದುವೇ ಇಂದ್ರಿಯಾನುಗ್ರಹಸ್ಥಲದ ಶಿವಯೋಗಿಯ ಸ್ಥಿತಿಯು.

ಹೀಗೆ ಮನಸ್ಸು ಶಿವನಲ್ಲಿ ಲಯವಾದ ಶಿವಯೋಗಿಯ ಬಾಹ್ಯ ವ್ಯವಹಾರವೂ ಸಹ ಶಿವಮಯವಾಗಿಯೇ ಇರುತ್ತದೆಯೆಂಬ ವಿಷಯವನ್ನು ನಿರೂಪಿಸಲೋಸುಗ ಪೂಜ್ಯಪಾದರು ಪುನಃ–

ಯದ್ಯತ್ ಪಶ್ಯನ್ ದೃಶಾ ಯೋಗೀ ಮನಸಾ ಚಿಂತಯತ್ಯಪಿ ।
ತತ್ತತ್ ಸರ್ವಂ ಶಿವಾಕಾರಂ ಸಂವಿದ್ರೂಪಂ ಪ್ರಕಾಶತೇ ॥

(ಸಿ. ಶಿ. ೧೭–೨೧)

ಈ ವಿಧವಾಗಿ ವಿವರಣೆಯಿತ್ತಿದ್ದಾರೆ. ತಾತ್ಪರ್ಯವೇನೆಂದರೆ, ಶಿವಯೋಗಿಯು ಯಾವುದನ್ನು ನೋಡುತ್ತಾನೆಯೋ ಮತ್ತು ಯಾವುದನ್ನು ಮನಸ್ಸಿನಿಂದ ಚಿಂತಿಸು ತ್ತಾನೆಯೋ ಅದೆಲ್ಲವೂ ಅವನಿಗೆ ಚಿದ್ರೂಪವಾದ ಶಿವರೂಪವೇ ಆಗಿ ಅನುಭವಗೋಚರ ವಾಗುವುದು.

ನಮ್ಮ ಮನಸ್ಸು ಒಮ್ಮೆ ಶಿವಮಯವಾಯಿತೆಂದರೆ ಅದು ಏನನ್ನೇ ನೋಡಿದರೂ ಶಿವರೂಪವಾಗಿಯೇ ನೋಡುತ್ತದೆ. ಕೆಂಪು ಬಣ್ಣದ ಕನ್ನಡಕವನ್ನು ಹಾಕಿದ ವ್ಯಕ್ತಿಗೆ ಎಲ್ಲವೂ ಕೆಂಪಾಗಿಯೇ ತೋರುವಂತೆ ಶಿವಜ್ಞಾನಿಗೆ ಸರ್ವವೂ ಶಿವಮಯವಾಗಿಯೇ ತೋರುವುದು. ಸೃಷ್ಟಿಯನ್ನು ಪರಿವರ್ತಿಸುವ ಸಾಮರ್ಥ್ಯವು ಯಾರಿಗೂ ಇರುವುದಿಲ್ಲ, ಆದರೆ ದೃಷ್ಟಿಯನ್ನು ಪರಿವರ್ತಿಸಿಕೊಂಡು ತನಗೆ ಬೇಕಾದ ಹಾಗೆ ಸೃಷ್ಟಿಯನ್ನು ಕಾಣಬಹುದು. ಇದಕ್ಕೇನೇ ಶಾಸ್ತ್ರಕಾರರು ದೃಷ್ಟಿ–ಸೃಷ್ಟಿವಾದವೆಂದು ಕರೆದಿದ್ದಾರೆ. ಇಂದ್ರಿಯಾನುಗ್ರಹಸ್ಥಲದ ಶಿವಯೋಗಿಯು ಇಂದ್ರಿಯಾಧ್ಯಕ್ಷವಾದ ಮನಸ್ಸನ್ನು ಶಿವಮಯವಾಗಿ ಮಾಡಿಕೊಂಡಿರೋಣದರಿಂದ ಅವನ ಸಕಲೇಂದ್ರಿಯಗಳ ವ್ಯವಹಾರ ದಲ್ಲಿ ಅವನು ಶಿವರೂಪವನ್ನೇ ಅನುಭವಿಸುತ್ತಿರುತ್ತಾನೆ. ಅವನ ಅಂತರಂಗ–ಬಹಿರಂಗಗಳಲ್ಲೆಲ್ಲ ಶಿವನೇ ಶಿವನಾಗಿ ತೋರುತ್ತಿರುತ್ತಾನೆ.

ಈ ಶಿವದೃಷ್ಟಿಯನ್ನು ಪಡೆಯುವ ಶಿವಯೋಗ ಪದ್ಧತಿಯನ್ನು ತಿಳಿಸಲೋಸುಗ ಪೂಜ್ಯಪಾದರು ಪುನಃ–

ಕರಣೈಃ ಸಹಿತಂ ಪ್ರಾಣಂ ಮನಸ್ಯಾದಾಯ ಸಂಯಮೀ ।
ಯೋಜಯೇತ ಶಿವಃ ಸಾಕ್ಷಾದ್ ಯತ್ರ ನಾಸ್ತಿ ಜಗದ್ ಭ್ರಮಃ ॥

(ಸಿ. ಶಿ. ೧೭–೨೨)

ಈ ತೆರನಾಗಿ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ಚಕ್ಷುರಾದಿ ಇಂದ್ರಿಯಗಳನ್ನು ಪ್ರಾಣಸಮೇತವಾಗಿ ಮನಸ್ಸಿನಲ್ಲಿ ನೆಲೆಗೊಳಿಸಿ, ಆ ಮನಸ್ಸನ್ನು ಯಾವ

ಶಿವಯೋಗಿಯು ಮಹಾಲಿಂಗದಲ್ಲಿ ಲಯಗೊಳಿಸುವನೋ ಅವನು ಲೌಕಿಕ ದೃಷ್ಟಿಯನ್ನು ಕಳೆದುಕೊಂಡು ಸಾಕ್ಷಾತ್ ಶಿವಸ್ವರೂಪನೇ ಆಗುವನು. ಇವನಿಗೆ ಯಾವುದೇ ವಿಧವಾದ ಭ್ರಮೆಯು ಉಂಟಾಗುವುದಿಲ್ಲ.

ಇಂದ್ರಿಯಗಳ ವ್ಯವಹಾರಕ್ಕೆ ಮನಸ್ಸು ಕಾರಣವಾಗಿರುವಂತೆ ಪ್ರಾಣವು ಸಹ ಕಾರಣವಾಗಿರುತ್ತದೆ. ವೇದಾಂತ ಶಾಸ್ತ್ರದಲ್ಲಿ ಪ್ರತಿಪಾದಿಸಿರುವ ಪಂಚೀಕರಣ ಪ್ರಕ್ರಿಯಾನುಸಾರವಾಗಿ ಅಪಂಚೀಕೃತ ಪಂಚಮಹಾಭೂತಗಳ ಸಮಷ್ಟೀ ಸತ್ವಗುಣದಿಂದ ಅಂತಃಕರಣವು ಹಾಗೂ ಸಮಷ್ಟಿಯ ರಜೋಗುಣದಿಂದ ಪ್ರಾಣವು ಉತ್ಪನ್ನ ವಾಗಿರುತ್ತದೆ. ಅಂತಃಕರಣವು ಜ್ಞಾನಕ್ಕೆ ಸಾಧನವಾದರೆ ಪ್ರಾಣವು ಸಕಲಕ್ರಿಯೆಗಳಿಗೆ ಆಧಾರವಾಗಿರುತ್ತದೆ. ಶರೀರದಲ್ಲಿ ಪ್ರಾಣವಿರದೆ ಹೋದರೆ ಯಾವ ಇಂದ್ರಿಯಗಳ ವ್ಯವಹಾರವೂ ನಡೆಯುವುದಿಲ್ಲ.

ಒಂದು ಸಾರೆ ಇಂದ್ರಿಯ, ಪ್ರಾಣ ಮತ್ತು ಮನಸ್ಸುಗಳಲ್ಲಿ ಪರಸ್ಪರವಾದ ಕಲಹವು ಪ್ರಾರಂಭವಾಗಿ ಎಲ್ಲವುಗಳು ನಾನೇ ಜ್ಯೇಷ್ಠ, ನಾನೇ ಶ್ರೇಷ್ಠ ಎಂದು ವಾದಿಸತೊಡಗಿದವು. ಈ ವಾದವು ಪರಸ್ಪರರಲ್ಲಿ ಬಗೆಹರಿಯದಿದ್ದಾಗ ಎಲ್ಲವೂ ಕೂಡಿಕೊಂಡು ಬ್ರಹ್ಮನ ಬಳಿಗೆ ಹೋದವು. ಅಲ್ಲಿ ಬ್ರಹ್ಮನನ್ನು ಕುರಿತು ನಮ್ಮಲ್ಲಿ ಯಾರು ಜ್ಯೇಷ್ಠರು ? ಯಾರು ಶ್ರೇಷ್ಠರು ? ಎಂದು ಪ್ರಶ್ನಿಸಿದವು. ಆಗ ಬ್ರಹ್ಮನು ನಿಮ್ಮೊಳಗೆ ಯಾರು ಈ ಶರೀರವನ್ನು ಬಿಟ್ಟು ಹೋದಾಗ ಶರೀರದ ವ್ಯವಹಾರವು ನಿಂತು ಹೋಗಿ ಅದು ಅಮಂಗಲವಾಗಿ ತೋರತೊಡಗುವುದೋ ಅವರೇ ಜ್ಯೇಷ್ಠರು. ಅವರೇ ಶ್ರೇಷ್ಠರು ಎಂಬುದಾಗಿ ನಿರ್ಣಯಿಸಿಕೊಳ್ಳಬೇಕು ಎಂದು ಹೇಳಿದನು. ಬ್ರಹ್ಮನ ಉಪದೇಶದಂತೆ ಶರೀರದಲ್ಲಿಯ ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಹಾಗೂ ಮನ–ಬುದ್ಧಿಗಳು ಒಂದೊಂದಾಗಿ ದೇಹವನ್ನು ತ್ಯಜಿಸಿ ಹೋಗಲು, ಕಿವುಡನಾಗಿ, ಕುರುಡನಾಗಿ, ಮೂಕನಾಗಿ, ಹೆಳವನಾಗಿ, ಚೊಂಚನಾಗಿ, ಅಮನಸ್ಕನಾಗಿ ಮತ್ತು ಬುದ್ಧಿಶೂನ್ಯನಾಗಿ ಆ ದೇಹದಲ್ಲಿರುವ ವ್ಯಕ್ತಿಯ ವ್ಯವಹಾರವು ಕುಂಠಿತವಾಗಿ ಕೆಲಕಾಲ ತೊಂದರೆಗೀಡಾದರೂ ಕಾಲಾಂತರದಲ್ಲಿ ಹಾಗೂ ಹೀಗೂ ಅವನ ದೈಹಿಕ ವ್ಯವಹಾರವು ನಡೆಯತೊಡಗಿತು. ಸಂಪೂರ್ಣ ವ್ಯವಹಾರವು ನಿಂತು ಹೋಗಲಿಲ್ಲ ಮತ್ತು ಶರೀರವು ಅಮಂಗಲವೂ ಆಗಲಿಲ್ಲ. ಆದರೆ ಯಾವಾಗ ಪ್ರಾಣವು ಶರೀರವನ್ನು ಬಿಟ್ಟು ಹೊರಟಿತೋ ಆಗ ದೇಹದಲ್ಲಿಯ ಎಲ್ಲ ಇಂದ್ರಿಯಗಳ ವ್ಯವಹಾರವು ನಿಂತು ಹೋಗಿ ಶರೀರವು ಶವರೂಪದಲ್ಲಿ ಪರಿವರ್ತವಾಗಿ ಅದು ಅಮಂಗಲವಾಗಿ ತೋರತೊಡಗಿತು. ಆಗ ಸರ್ವೇಂದ್ರಿಯಗಳು ಪ್ರಾಣಕ್ಕೆ ಶರಣು ಹೋಗಿ ನೀನೇ ಜ್ಯೇಷ್ಠನು, ನೀನೇ ಶ್ರೇಷ್ಠನು ಎಂದು ಹೇಳಿ ಪುನಃ ಅದು ಶರೀರದಲ್ಲಿ ಮರಳಿ ಬರುವಂತೆ ಮಾಡಿಕೊಂಡವು.

ಉಪನಿಷತ್ತಿನಲ್ಲಿ ಇಂದ್ರಿಯಗಳ ಪರಸ್ಪರ ಕಲಹಾತ್ಮಕವಾದ ಈ ಕಥೆಯು ಬಹುರೋಚಕವಾಗಿ ಪ್ರತಿಪಾದಿಸಲ್ಪಟ್ಟಿದೆ. ಇದರಿಂದ ಶರೀರದಲ್ಲಿರುವ ಸಕಲೇಂದ್ರಿಯ ಗಳ ವ್ಯವಹಾರಕ್ಕೆ ಪ್ರಾಣವು ಕಾರಣೀಭೂತವಾಗಿರುವುದೆಂದು ತಿಳಿದುಬರುವುದು.

ಶಿವಯೋಗಿಯು ಸರ್ವ ಇಂದ್ರಿಯಗಳನ್ನೂ ಮತ್ತು ಇಂದ್ರಿಯಗಳ ವ್ಯವಹಾರಕ್ಕೆ ಕಾರಣೀಭೂತವಾದ ಪ್ರಾಣವನ್ನು ಮನಸ್ಸಿನಲ್ಲಿ ಲಯಗೊಳಿಸಿ ಆ ಮನಸ್ಸನ್ನು ಪರಮಾತ್ಮನ ಚಿಂತನೆಯಲ್ಲಿ ಸ್ಥಿರಗೊಳಿಸಿದಾಗ ಅವನಿಗೆ ಈ ಜಗತ್ತಿನ ಭ್ರಮೆಯೇ ಇಲ್ಲದಾಗಿ ಹೋಗಿ ಅವನು ಸರ್ವತ್ರ ಶಿವದೃಷ್ಟಿಯುಳ್ಳವನಾಗುತ್ತಾನೆ. ವೇದಾಂತ ಶಾಸ್ತ್ರದಲ್ಲಿ ಪ್ರಪಂಚದ ಈ ತೋರುವಿಕೆಗೆ ಭ್ರಮೆಯೆಂದು ಕರೆದಿದ್ದಾರೆ. ಭ್ರಮೆಯೆಂದರೆ ಇದ್ದ ವಸ್ತುವು ಮುಚ್ಚಲ್ಪಟ್ಟು, ಇಲ್ಲದ ವಸ್ತುವಿನ ಪ್ರತೀತಿಯೇ ಆಗಿದೆ. ಹಗ್ಗದಲ್ಲಿ ಹಾವು, ಮೋಟು ಮರದಲ್ಲಿ ಕಳ್ಳ, ಕಪ್ಪೆ ಚಿಪ್ಪಿನಲ್ಲಿ ತೋರುವ ಬೆಳ್ಳಿ ಇವೆಲ್ಲವುಗಳು ಭ್ರಮೆಯ ಉದಾಹರಣೆಗಳು. ಜಗತ್ತಿನಲ್ಲಿರುವ ಅಜ್ಞಜೀವಿಗಳು ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನನ್ನು ಮರೆತು ತೋರುವ ಮಾಯಿಕ ಪ್ರಪಂಚವನ್ನೇ ನಂಬಿ ಸದಾ ದುಃಖವನ್ನು ಅನುಭವಿಸುತ್ತಿರುತ್ತಾರೆ. ದುಃಖದಾಯಿಯಾದ ಈ ಮಾಯಾಪ್ರಪಂಚವಡಗಿ ಪರಶಿವ ಸ್ವರೂಪದ ಅರಿವಾಗಬೇಕಾದರೆ ಶಿವಾದ್ವೈತ ಜ್ಞಾನವು ಬೇಕಾಗುವುದು.

ಶಿವಾದ್ವೈತ ಜ್ಞಾನಕ್ಕೆ ಸಾಧನವಾದುದು ಶಿವಯೋಗವು. ಆ ಶಿವಯೋಗದ ಪ್ರಕ್ರಿಯೆಯನ್ನೇ ಪೂಜ್ಯರು ಇಲ್ಲಿ ವಿವರಿಸಿದ್ದಾರೆ. ನಮ್ಮಲ್ಲಿರುವ ಮನಸ್ಸು ಇಂದ್ರಿಯಗಳ ಮೂಲಕ ಬಹಿರಂಗದಲ್ಲಿ ವ್ಯವಹರಿಸುವುದೇ ಸಂಸಾರವು. ಅದುವೇ ದುಃಖದಾಯಕ ವಾದುದು. ಎಲ್ಲ ಇಂದ್ರಿಯಗಳ ನಿಗ್ರಹಕ್ಕೆ ಮನೋನಿಗ್ರಹವು ಮತ್ತು ಮನದ ನಿಗ್ರಹಕ್ಕೆ ಇಂದ್ರಿಯ ನಿಗ್ರಹವು ಹೀಗೆ ಈ ಶಮೆ–ದಮೆಗಳು ಪರಸ್ಪರರ ನಿಗ್ರಹಕ್ಕೆ ಸಹಾಯಕ ಗಳಾಗಿರುತ್ತವೆ. ಕೇವಲ ಬಹಿರಿಂದ್ರಿಯಗಳ ನಿಗ್ರಹರೂಪವಾದ ದಮೆಯನ್ನು ಸಾಧಿಸಿ ಕೊಂಡ ಮಾತ್ರಕ್ಕೆ ಮನಸ್ಸಿನ ಸಂಪೂರ್ಣವಾದ ನಿಗ್ರಹವಾಗುವುದಿಲ್ಲ. ಅಂತೆಯೇ ಮನದ ನಿಗ್ರಹಕ್ಕಾಗಿ ಪ್ರಾಣದ ನಿಗ್ರಹವನ್ನು ಪ್ರತಿಪಾದಿಸಲಾಗಿದೆ. ಮನಸ್ಸಿನ ಗತಿಯು ಪ್ರಾಣದ ಗತಿಯನ್ನು ಅವಲಂಬಿಸಿರುತ್ತದೆ. ಅಂತೆಯೇ ಪ್ರಾಣವನ್ನು ನಿರೋಧಿಸಿದಾಗ ಮನಸ್ಸು ಸಹಜವಾಗಿ ನಿರುದ್ಧವಾಗುವುದು. ಅಂತೆಯೇ ಯೋಗಶಾಸ್ತ್ರದಲ್ಲಿ ಮನೋನಿಗ್ರಹಕ್ಕಾಗಿ ಪ್ರಾಣಾಯಾಮ ಪ್ರಕ್ರಿಯೆಯು ಪ್ರತಿಪಾದಿಸಲ್ಪಟ್ಟಿದೆ.

ಜಪತಪಾದಿಗಳನ್ನು ಪ್ರಾರಂಭಿಸಬೇಕಾದರೆ ಆಚಮನ–ಪ್ರಾಣಾಯಾಮಗಳನ್ನು ಮಾಡಬೇಕೆಂಬುದಾಗಿ ಪೂಜಾವಿಧಿಯಲ್ಲಿ ತಿಳಿಸಲಾಗಿದೆ. ಗುರುಮುಖದಿಂದ ಪ್ರಾಣಾಯಾಮ ಪ್ರಕ್ರಿಯೆಯನ್ನು ಅರಿತು ಪ್ರಾಣಾಯಾಮವನ್ನಾಚರಿಸಬೇಕು. ಪ್ರಾಣಾಯಾಮ ಮೂಲಕವಾಗಿ ಪ್ರಾಣದ ಮೇಲೆ ನಿಯಂತ್ರಣವನ್ನು ಸಾಧಿಸಿದಾಗ ಮನಸ್ಸನ್ನು ನಿಯಂತ್ರಿಸಲು ಸಾಧ್ಯವಾಗುವುದು. ವಾಯುವು ಸದಾ ಚಂಚಲವಾಗಿರುವಂತೆ ಮನಸ್ಸೂ ಸಹ ಚಂಚಲವಾಗಿರುತ್ತದೆ. ವಾಯುವನ್ನು ಬಂಧಿಸುವುದು ಹೇಗೆ ಅತ್ಯಂತ ಕಠಿಣವಾಗಿರುವುದೋ ಮನಸ್ಸನ್ನು ಬಂಧಿಸುವುದೂ ಸಹ ಅಷ್ಟೇ ಕಠಿಣವಾಗಿರುತ್ತದೆ. ಯಾವ ಯೋಗಿಯು ದೇಹದಲ್ಲಿಯ ಪ್ರಾಣವಾಯುವನ್ನು ತಡೆಯಬಲ್ಲನೋ ಅವನೇ ಮನಸ್ಸನ್ನು ನಿಗ್ರಹಿಸಬಲ್ಲನು. ಇದು ಒಂದು ಮನೋನಿಗ್ರಹದ ಯೋಗಪ್ರಕ್ರಿಯೆಯು.

ಇಂದ್ರಿಯ ಹಾಗೂ ಮನಸ್ಸುಗಳನ್ನು ನಿಗ್ರಹಿಸುವುದೆಂದರೆ ಅವುಗಳ ಮೇಲೆ ಅನುಗ್ರಹಮಾಡಿದಂತೆಯೇ. ಉಡಾಳನಾದ ಮಗನ ಮೇಲೆ ತಂದೆ–ತಾಯಿಗಳು

ಶಾಸನವನ್ನು ಮಾಡುತ್ತಾರೆ. ಅವನಿಗೆ ಮಾಡುವ ಆ ಶಾಸನವು ಅವನ ಸುಧಾರಣೆಗಾಗಿಯೇ ಇರುತ್ತದೆ. ಅದೇ ಪ್ರಕಾರವಾಗಿ ಒಬ್ಬ ಶಿವಯೋಗಿಯು ಇಂದ್ರಿಯಗಳ ಮೇಲೆ ಮಾಡುವ ನಿಗ್ರಹವು ಅವುಗಳ ಸುಧಾರಣೆಗಾಗಿಯೇ ಎಂದು ತಿಳಿದುಕೊಳ್ಳಬೇಕು. ಹೀಗೆ ಇಂದ್ರಿಯಗಳ ಮೇಲೆ ನಿಯಂತ್ರಣವನ್ನು ಸಾಧಿಸಿ, ಜಪದ ಮೂಲಕ ಮನಸ್ಸನ್ನು ಶುದ್ಧೀಕರಿಸಿಕೊಂಡು ಆ ಶುದ್ಧವಾದ ಮನಸ್ಸನ್ನು ಶಿವನಿಗೆ ಸಮರ್ಪಿಸಿದಾಗ ಈ ಇಂದ್ರಿಯಾನುಗ್ರಹದ ಶಿವಯೋಗಿಗೆ ಸರ್ವತ್ರ ಶಿವಾನುಭೂತಿಯೇ ಉಂಟಾಗುವದು.

ಇಷ್ಟಮಂತ್ರದ ಜಪವು ನಮ್ಮ ಜೀವನವನ್ನು ಪರಿಶುದ್ಧಗೊಳಿಸುತ್ತದೆ. ಮನಸ್ಸನ್ನು ಪಾವನಗೊಳಿಸುತ್ತದೆ. ಹೆಚ್ಚು ಹೆಚ್ಚು ಮಾಡಿದ ಜಪವು ನಮ್ಮ ಸರ್ವಾಂಗೀಣ ಶುದ್ಧಿಗೆ ಕಾರಣವಾಗುವುದು. ಜನ್ಮತಾಳಿದ ವ್ಯಕ್ತಿಯ ಜನ್ಮಸಮಯದ ಪ್ರಕಾರವಾಗಿ ಜ್ಯೋತಿಷ್ಯ ಶಾಸ್ತ್ರಜ್ಞರು ಜನ್ಮಕುಂಡಲಿಯನ್ನು ತಯಾರಿಸುತ್ತಾರೆ. ಪ್ರತಿಯೊಬ್ಬರ ಜನ್ಮಕುಂಡಲಿಯಲ್ಲಿ ತನು, ಧನ, ಸಹಜ, ಮಾತೃ, ವಿದ್ಯಾ, ರಿಪು, ಜಾಯಾ, ಮೃತ್ಯು, ಭಾಗ್ಯ, ಪಿತೃ, ಲಾಭ ಮತ್ತು ವ್ಯಯ ಎಂಬುದಾಗಿ ದ್ವಾದಶ ಭಾವಗಳಿರುತ್ತವೆ. ಈ ಭಾವಗಳಲ್ಲಿರುವ ಗ್ರಹಗಳ ಮೂಲಕವಾಗಿ ಅವನಿಗೆ ಶುಭಾಶುಭ ಫಲಗಳು ಪ್ರಾಪ್ತವಾಗುತ್ತಲಿರುತ್ತವೆ. ಈ ಭಾವಗಳು ಅಶುಭಗ್ರಹಗಳಿಂದ ದುಷ್ಟವಾಗಿದ್ದರೆ ಅವುಗಳನ್ನು ಮಂತ್ರಜಪದ ಮೂಲಕ ಸುಧಾರಿಸಬಹುದು. ಒಂದು ಭಾವಕ್ಕೆ ಒಂದು ಕೋಟಿ ಮಂತ್ರವನ್ನು ಜಪಿಸಿದಾಗ, ಆ ಭಾವವು ಸಂಪೂರ್ಣವಾಗಿ ಶುದ್ಧವಾಗುತ್ತದೆ. ಇಡೀ ತನ್ನ ಜೀವನ ಕ್ರಮವನ್ನೇ ಪರಿಶುದ್ಧಗೊಳಿಸಿಕೊಳ್ಳಬೇಕಾದರೆ ಹನ್ನೆರಡು ಕೋಟಿ ಜಪಮಾಡಬೇಕೆಂಬುದಾಗಿ ಶಾಸ್ತ್ರಜ್ಞರು ಪ್ರತಿಪಾದಿಸುತ್ತಾರೆ. ಯಾವಾಗ ಜಪದಿಂದ ದ್ವಾದಶಭಾವಗಳು ಪರಿಶುದ್ಧ ವಾಗುವವೋ ಆಗ ಆ ವ್ಯಕ್ತಿಯು ಶಿವಾನುಗ್ರಹಕ್ಕೆ ಪಾತ್ರನಾಗುವನು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಇಂದ್ರಿಯಾನುಗ್ರಹಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಸರ್ವೇಂದ್ರಿಯ ಪ್ರವೃತ್ತ್ಯಾ ಚ ಬಹಿರಂತಃ ಶಿವಂ ಯಜನ್ ।
ಸ್ವಚ್ಛಂದಚಾರೀ ಸರ್ವತ್ರ ಸುಖೀಭವತಿ ಸಂಯಮೀ ॥

(ಸಿ. ಶಿ. ೧೭–೨೩)

ಈ ರೀತಿ ತಿಳಿಸಿದ್ದಾರೆ. ಈ ಇಂದ್ರಿಯಾನುಗ್ರಹಸ್ಥಲದ ಶಿವಯೋಗಿಯು ತನ್ನ ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳ ವ್ಯಾಪಾರವನ್ನೆಲ್ಲ ಮಹಾಲಿಂಗದಲ್ಲಿ ಐಕ್ಯಗೊಳಿಸಿ ತದ್ರೂಪವಾದ ಇಷ್ಟ–ಪ್ರಾಣರೂಪ ಶಿವಲಿಂಗವನ್ನು ಪೂಜಿಸುತ್ತ ತನ್ನ ಇಚ್ಛಾ ನುಸಾರವಾಗಿ ಸರ್ವತ್ರ ಸಂಚರಿಸುವವನಾಗಿ ಪರಮಾನಂದವನ್ನು ಅನುಭವಿಸುತ್ತಾನೆ.

ಈ ಪೂರ್ವದಲ್ಲಿ ಹೇಳಿದ ಪ್ರಕಾರವಾಗಿ ಪ್ರಾಣ ಹಾಗೂ ಮನಸ್ಸುಗಳ ಸಂಯಮದಿಂದ ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳ ಮೇಲೆ ನಿಯಂತ್ರಣವನ್ನು ಸಾಧಿಸಿದ ಶಿವಯೋಗಿಯು ತನ್ನ ಒಳಹೊರಗೆಲ್ಲ ಶಿವದರ್ಶನವನ್ನೇ ಪಡೆಯುತ್ತಿರುತ್ತಾನೆ. ಸದಾ ಶಿವಸುಖವನ್ನು ಅನುಭವಿಸುತ್ತಿರುವ ಇವನು ತನ್ನ ಇಚ್ಛಾನುಸಾರವಾಗಿ ಜಗತ್ತಿನಲ್ಲಿ ಸಂಚರಿಸುತ್ತಿರುತ್ತಾನೆ. ಸಂಯಮಿಯಾದ ಶಿವಯೋಗಿಯು ಅನುಭವಿಸುವ ಆನಂದದ

ಲವಲೇಶವನ್ನೂ ಸಹ ಭೋಗಜೀವಿಯು ಅನುಭವಿಸಲಾರನು. ಅಂತೆಯೇ ಪೂಜ್ಯ ಪಾದರು ಇಂದ್ರಿಯಾನುಗ್ರಹಸ್ಥಲದಲ್ಲಿ ಈ ರಹಸ್ಯವನ್ನು ಅಪ್ಪಣೆಕೊಡಿಸಿದ್ದಾರೆಂಬುದನ್ನು ತಿಳಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ಜುಲೈ, ೧೯೯೪
(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)

■■

ಆಶೀರ್ವಚನ-೧

# ಪ್ರಾಣಾನುಗ್ರಹಸ್ಥಲ

ಧರ್ಮಾಸಕ್ತ ಸದ್ಭಕ್ತರೇ !

ಸುಕ್ಷೇತ್ರವಾದ ಸೊನ್ನಲಾಪುರದಲ್ಲಿ ಆಷಾಢ ಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವು ಗಳೆಲ್ಲ ಶಿವಯೋಗ-ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಇಂದ್ರಿಯಾನುಗ್ರಹದ ಬಗ್ಗೆ ಕೂಲಂಕಷವಾಗಿ ತಿಳಿದಿದ್ದೀರಿ. ಇಂದು ಅದರ ಮುಂದಿನ ಸ್ಥಲವಾದ ಪ್ರಾಣಾನುಗ್ರಹಸ್ಥಲದ ಬಗ್ಗೆ ವಿವೇಚಿಸೋಣ.

ಮನಸ್ಸನ್ನು ಸದಾ ಪ್ರಸನ್ನವಾಗಿಟ್ಟುಕೊಳ್ಳುವುದೇ ಪ್ರಸಾದಿಸ್ಥಲದ ಮುಖ್ಯವಾದ ಗುರಿ. ಲಿಂಗ ಷಟ್‌ಸ್ಥಲಾಂತರ್ಗತವಾದ ಪ್ರಸಾದಿ ಸ್ಥಲದಲ್ಲಿ ಮನಸ್ಸಿನ ಪ್ರಸನ್ನತೆಗಾಗಿ ಭಗವದರ್ಪಿತವಾದ ಪ್ರಸಾದ ಸೇವನೆಯು ಪ್ರತಿಪಾದಿಸಲ್ಪಟ್ಟಿದೆ. ಪ್ರಸ್ತುತವಾದ ಲಿಂಗಸ್ಥಲಾಂತರ್ಗತವಾದ ಪ್ರಸಾದಿಸ್ಥಲದಲ್ಲಿ ಮನಸ್ಸನ್ನು ನಿಯಂತ್ರಣಗೊಳಿಸಿ ಅದನ್ನು ಹೇಗೆ ಪ್ರಸನ್ನವಾಗಿಡಬೇಕೆಂಬುದನ್ನು ತಿಳಿಸಲಾಗುತ್ತದೆ. ಮನಸ್ಸಿನ ನಿಯಂತ್ರಣಕ್ಕೆ ಸಂಬಂಧಪಟ್ಟ ಕಾಯಾನುಗ್ರಹಸ್ಥಲ ಮತ್ತು ಇಂದ್ರಿಯಾನುಗ್ರಹಸ್ಥಲದ ನಂತರ ಪ್ರಾಣಾನುಗ್ರಹಸ್ಥಲದ ವಿಚಾರವು ಪ್ರಾಪ್ತವಾಗುತ್ತದೆ. ಇದೂ ಒಂದು ಕ್ರಮವು. ಇಂದ್ರಿಯ ಹಾಗೂ ಪ್ರಾಣಗಳ ಮೇಲೆ ನಿಯಂತ್ರಣ ಮಾಡಬೇಕಾದಾಗ ಎಲ್ಲಕ್ಕೂ ಮೊದಲು ಕಾಯವನ್ನು ನಿಯಂತ್ರಿಸಬೇಕಾಗುವುದು. ಶರೀರವು ಒಂದು ಸ್ಥಿರವಾದ ಆಸನದ ಮೇಲೆ ಹೆಚ್ಚು ಕಾಲದವರೆಗೆ ಕುಳಿತುಕೊಳ್ಳದಿದ್ದರೆ ಇಂದ್ರಿಯ ಹಾಗೂ ಪ್ರಾಣ ಗಳ ಮೇಲೆ ನಿಯಂತ್ರಣ ಮಾಡುವುದು ಸಾಧ್ಯವಾಗುವುದಿಲ್ಲ. ಅಂತೆಯೇ ಯೋಗ ಶಾಸ್ತ್ರದಲ್ಲಿ ಮೊದಲು ಆಸನಗಳನ್ನು ಪ್ರತಿಪಾದಿಸಿ ನಂತರ ಪ್ರಾಣಾಯಾಮದ ಬಗ್ಗೆ ತಿಳಿಸಿದ್ದಾರೆ. ಶರೀರವು ನಮಗೆ ಅನುಕೂಲವಾಗಿರದಿದ್ದರೆ ನಮ್ಮ ಸಾಧನೆಯೆಲ್ಲ ವಿಫಲ ವಾಗುವುದು. ಓರ್ವ ಸಾಧಕನು ತನ್ನ ಸಾಧನೆಯನ್ನು ಸಾಧಿಸುತ್ತಿರುವಾಗ ಗುರುವಿನ ಹಾಗೂ ದೇವರ ಕೃಪೆಯು ಬೇಕಾಗುವಂತೆ, ಶರೀರದ ಕೃಪೆ ಹಾಗೂ ಮನಸ್ಸಿನ ಕೃಪೆ ಗಳೂ ಸಹ ಬೇಕಾಗುವವು. ಇಲ್ಲಿ ಶರೀರ ಹಾಗೂ ಮನಸ್ಸಿನ ಕೃಪೆಯೆಂದರೆ ಅವು ನಮ್ಮ ಸಾಧನೆಯಲ್ಲಿ ಅನುಕೂಲವಾಗಿರಬೇಕೆಂಬ ಅರ್ಥವು.

ವೇದಾಂತ ಶಾಸ್ತ್ರದಲ್ಲಿ ಈಶ್ವರ ಕೃಪೆ, ಗುರುಕೃಪೆ, ವೇದ ಕೃಪೆ ಮತ್ತು ಅಂತಃಕರಣ ಕೃಪೆಯೆಂಬುದಾಗಿ ನಾಲ್ಕು ವಿಧವಾದ ಕೃಪೆಗಳು ಪ್ರತಿಪಾದಿಸಲ್ಪಟ್ಟಿವೆ. ಈ ನಾಲ್ಕರ

ಕೃಪೆಯಿದ್ದಾಗಲೇನೇ ಸಾಧಕನ ಸಾಧನೆಯು ನಿರ್ಬಾಧಗತಿಯಿಂದ ಸಾಗುವುದು. ವೀರಶೈವಾಚಾರ್ಯರು ಈ ನಾಲ್ಕು ಕೃಪೆಗಳ ಹೊರತಾಗಿ ಶರೀರ ಕೃಪೆ, ಇಂದ್ರಿಯಕೃಪೆ ಮತ್ತು ಪ್ರಾಣಕೃಪೆಯೆಂಬ ಹೆಚ್ಚಿನ ಮೂರು ಕೃಪೆಗಳ ಬಗೆಗೆ ಇಲ್ಲಿ ನಿರೂಪಿಸಿದ್ದಾರೆ. ಸಾಧಕನ ಶರೀರವು ಹೆಚ್ಚು ಹೆಚ್ಚು ಸಮಯದವರೆಗೆ ಒಂದೇ ಆಸನದಲ್ಲಿ ಸ್ಥಿರವಾಗಿದ್ದರೆ ಅದನ್ನು ಶರೀರಕೃಪೆಯೆಂತಲೇ ಭಾವಿಸಬೇಕು. ಶರೀರವೆಂದರೆ ಇಂದ್ರಿಯಗಳ ಸಮೂಹವು, ಕಾರಣ ಶರೀರದಲ್ಲಿಯ ಯಾವುದೊಂದು ಇಂದ್ರಿಯದಲ್ಲಿ ಚಲನವಲನ ಪ್ರಾರಂಭವಾದರೆ ಶರೀರವು ತನ್ನ ಸ್ಥಿರತೆಯನ್ನು ಕಳೆದುಕೊಳ್ಳುತ್ತದೆ. ಅಂತೆಯೇ ಕಾಯಾನುಗ್ರಹಕ್ಕೆ ಪೂರಕವಾದ ಇಂದ್ರಿಯಾನುಗ್ರಹವನ್ನು ಪ್ರತಿಪಾದಿಸಲಾಗಿದೆ. ಈ ಇಂದ್ರಿಯಾನುಗ್ರಹಸ್ಥಲವನ್ನು ಪರಿಸಮಾಪ್ತಿಗೊಳಿಸುವ ಸಂದರ್ಭದಲ್ಲಿ ಪ್ರಾಣಾನು ಗ್ರಹದ ಉಲ್ಲೇಖವನ್ನು ಮಾಡಲಾಗಿದೆ. ಸರಳವಾಗಿ ಪ್ರವಹಿಸದೇ ಇರುವ ಪ್ರಾಣ ವಾಯುವನ್ನು ಪ್ರಾಣಾಯಾಮದ ಮುಖಾಂತರವಾಗಿ ಅದನ್ನು ಸರಳಗೊಳಿಸುವುದೇ ಒಂದು ವಿಧವಾದ ಪ್ರಾಣಾನುಗ್ರಹವು. ಹೀಗೆ ನಿಯಂತ್ರಿಸಲ್ಪಟ್ಟ ಪ್ರಾಣವು ನಮ್ಮ ಮನಸ್ಸು ಭಗವಂತನ ಕಡೆಗೆ ಹೋಗಲು ಸಹಾಯಕವಾಗೋಣದರಿಂದ ನಮ್ಮ ಮೇಲೆ ಪ್ರಾಣವೂ ಸಹ ಅನುಗ್ರಹವನ್ನು ಮಾಡಿದೆಯೆಂಬುದಾಗಿ ತಿಳಿದುಕೊಳ್ಳಬೇಕು. ಪ್ರಾಣ ವನ್ನು ನಿಯಂತ್ರಿಸಿದರೆ ಮನಸ್ಸು ನಿಯಂತ್ರಿತವಾಗುತ್ತದೆ. ಪ್ರಾಣವು ಮನಸ್ಸಿನ ವಾಹನ ವಿದ್ದಂತೆ. ಸ್ವತಂತ್ರವಾಗಿ ಹೋಗುವ ಸಾಮರ್ಥ್ಯವಿಲ್ಲದೆ ಪ್ರಾಣವೆಂಬ ವಾಹನಾರೂಢ ವಾದ ಮನಸ್ಸನ್ನು ವಾಹನದ ನಿಯಂತ್ರಣದಿಂದ ನಿಯಂತ್ರಿಸಬಹುದಾಗಿದೆ. ಮನಸ್ಸಿನ ನಿಯಂತ್ರಣ ಹಾಗೂ ಅದರ ಶುದ್ಧೀಕರಣವು ಆಧ್ಯಾತ್ಮಿಕ ಪ್ರಗತಿಗೆ ಕಾರಣವಾಗುವುದು.

ಭಗವಂತನು ಮನುಷ್ಯನಿಗೆ ಒಂದು ನೂರು ವರ್ಷ ಆಯುಷ್ಯವನ್ನು ದಯಪಾಲಿಸಿ ದ್ದಾನೆ. ಇವುಗಳಲ್ಲಿ ಸಾಂಸಾರಿಕ ವಿಷಯ ಸುಖಾದಿಗಳನ್ನು ಅನುಭವಿಸಲು ಅರುವತ್ತು ವರ್ಷ ಮತ್ತು ಈ ಸಾಂಸಾರಿಕ ಭೋಗದಿಂದ ಅಶುದ್ಧಿಗೊಂಡ ಮನಸ್ಸಿನ ಶುದ್ಧೀಕರಣ ಕ್ಕಾಗಿ ನಾಲ್ವತ್ತುವರ್ಷ ಎಂಬುದಾಗಿ ತಿಳಿದುಕೊಳ್ಳಬೇಕು. ಸಂಸಾರದೊಳಗಿನ ಸುಖ– ದುಃಖಗಳನ್ನು ಅನುಭವಿಸಿ ಮಲಿನವಾದ ಮನಸ್ಸಿನ ಮಾಲಿನ್ಯವನ್ನು ದೂರಮಾಡಿ ಕೊಳ್ಳಲು ತನ್ನ ಜೀವನದ ಉತ್ತರಾರ್ಧದ ನಾಲ್ವತ್ತು ವರ್ಷಗಳು ಬೇಕಾಗುವವೆಂದರೆ ಆಶ್ಚರ್ಯಪಡಬೇಕಾಗಿಲ್ಲ, ನಾಲ್ವತ್ತು ವರ್ಷದಲ್ಲಿ ಆ ಮನಸ್ಸು ಶುದ್ಧವಾಗುವದೂ ಸಹ ಕಷ್ಟ ಸಾಧ್ಯವೇ. ಅದೆಷ್ಟೋ ವೃದ್ಧರು ತಮ್ಮ ಜೀವನದ ಕೊನೆಯ ಉಸಿರಿನವರೆಗೂ ಸಂಸಾರದ ರಾಗ–ದ್ವೇಷಾದಿಗಳಲ್ಲಿಯೇ ಮುಳುಗಿಹೋಗಿರುತ್ತಾರೆ.

ಶರೀರವು ಮುಪ್ಪಾದ ಮಾತ್ರಕ್ಕೆ ಮನಸ್ಸಿನ ಆಶಾದಿಗಳಿಗೆ ಮುಪ್ಪು ಬರುವುದಿಲ್ಲ. ಅಂತೆಯೇ ಶ್ರೀಶಂಕರಾಚಾರ್ಯರು–

ಅಂಗಂ ಗಲಿತಂ ಪಲಿತಂ ಮುಂಡಮ್ ।
ದಶನವಿಹೀನಂ ಜಾತಂ ತುಂಡಮ್ ॥
ವೃದ್ಧೋ ಯಾತಿ ಗೃಹಿತ್ವಾ ದಂಡಮ್ ।
ತದಪಿನಮುಂಚತ್ಯಾಶಾ ಪಿಂಡಮ್ ॥

ಹೀಗೆ ಮನದ ಆಶೆಯ ಅಜೀರ್ಣ ಸ್ಥಿತಿಯನ್ನು ವಿವರಿಸಿದ್ದನ್ನು ಕಾಣಬಹುದು. ಆದಕಾರಣ ಅದೆಷ್ಟೋ ಮುಪ್ಪಿನ ದೇಹಗಳನ್ನು ಈ ಜೀವಾತ್ಮನು ಬಿಟ್ಟು ಬಂದಿದ್ದರೂ ಇವನ ಮನಸ್ಸಿಗೆ ಮುಪ್ಪೇ ಆವರಿಸಿರುವುದಿಲ್ಲ. ತನ್ನ ಚಿತ್ತದ ಶುದ್ಧೀಕರಣದ ಸಾಧನೆಯಲ್ಲಿ ನಿರತನಾದ ಶಿವಯೋಗಿಯು ಮಾತ್ರ ತನ್ನ ಕಠೋರವಾದ ಸಾಧನೆಯ ಬಲದಿಂದ ಮನಶುದ್ಧಿಯನ್ನು ಪಡೆಯಬಹುದು. ಯಾರ ಮನಸ್ಸು ಸುಧಾರಿಸುವುದೋ ಅವರ ಜೀವನವೇ ಸುಧಾರಣೆಗೊಳ್ಳುವುದು. ನೀವೆಲ್ಲ ಇಷ್ಟು ನಸುಕಿನಲ್ಲಿ ಯೋಗ ಸಾಧನೆಗೆ ಬಂದಿರುವುದನ್ನು ನೋಡಿದರೆ ನಿಮ್ಮೆಲ್ಲರಲ್ಲಿ ಮನಸ್ಸನ್ನು ಸುಧಾರಿಸಿಕೊಳ್ಳುವ ಇಚ್ಛೆಯು ತೀವ್ರವಾಗಿದೆಯೆಂದು ತಿಳಿದುಬರುತ್ತದೆ. ನೀವಿಲ್ಲಿ ಕುಳಿತು ಯೋಗ ಸಾಧನೆಯನ್ನು ಮಾಡುತ್ತಿರುವಾಗ ಈ ಸೊನ್ನಲಿಗೆಯ ಅದೆಷ್ಟೋ ಜನರು ನಿದ್ರೆಯ ಮಬ್ಬಿನಲ್ಲಿಯೇ ಇದ್ದಾರೆ. ಹೀಗೆ ಕೇವಲ ನಿದ್ರೆಯಲ್ಲಿ ಕಾಲಕಳೆಯುವ ವ್ಯಕ್ತಿಗಳು ತಮ್ಮನ್ನೆಂದೂ ಸುಧಾರಿಸಿಕೊಳ್ಳಲಾರರು. ನಿಮ್ಮ ಮನಸ್ಸನ್ನು ಶುದ್ಧೀಕರಿಸಿಕೊಳ್ಳಬೇಕಾದರೆ ಪ್ರಾಣದ ಮೇಲೆ ನಿಯಂತ್ರಣವನ್ನು ಸಾಧಿಸಬೇಕಾಗುವುದು ಹೀಗೆ ಪ್ರಾಣದ ಮೇಲೆ ನಿಯಂತ್ರಣವನ್ನು ಸಾಧಿಸುವುದೇ ಪ್ರಾಣಾನುಗ್ರಹವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಾಣಾನುಗ್ರಹಸ್ಥಲವನ್ನು ಪ್ರತಿಪಾದಿಸುತ್ತ–

ಶಿವಸ್ಯ ಪರಕಾಯಸ್ಯ ಯತ್ ತಾತ್ಪರ್ಯಾವಲೋಕನಮ್ ।
ತತ್ಪ್ರಾಣಾನುಗ್ರಹಃ ಪ್ರೋಕ್ತಃ ಸರ್ವೇಷಾಂ ತತ್ತ್ವದರ್ಶಿಭಿಃ ।

(ಸಿ.ಶಿ. ೧೭–೨೪)

ಈ ರೀತಿಯಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಕಾಯನಾದ ಶಿವಯೋಗಿಯು ತನ್ನ ಗಂಭೀರವಾದ ದೃಷ್ಟಿಯಿಂದ ಅವಲೋಕಿಸುವುದೇ ಪ್ರಾಣಾನುಗ್ರಹ ಎಂಬುದಾಗಿ ತತ್ತ್ವದರ್ಶಿಗಳು ಪ್ರತಿಪಾದಿಸುತ್ತಾರೆ.

ತನ್ನ ಹೃದಯಗುಹೆಯಲ್ಲಿರುವ ಜ್ಞಾನಘನವಾದ ಚಿಜ್ಜ್ಯೋತಿಯನ್ನು ಅರಿತು ವಾಯುನಿರೋಧಯೋಗದಿಂದ ನಿತ್ಯಾತ್ಮಭಾವವನ್ನು ಪಡೆದು ನಿಷ್ಪ್ರಪಂಚರೂಪವಾದ ಶಿವಲಿಂಗದಲ್ಲಿ ಬೆರೆದ ಶಿವಯೋಗಿಯ ಮನ ಹಾಗೂ ಪ್ರಾಣಗಳು ನಿಶ್ಚಲವಾಗಿರುತ್ತವೆ. ಹೀಗೆ ಸುಸ್ಥಿರಗೊಂಡ ಅಂತಃಕರಣವುಳ್ಳ ಶಿವಯೋಗಿಯು ತನ್ನ ದಿವ್ಯದೃಷ್ಟಿಯನ್ನು ಸಾಧಕರ ಮೇಲೆ ಬೀರಿದಾಗ ಅವರ ಪ್ರಾಣ ಮನಗಳೂ ಸಹ ಸುಸ್ಥಿರಗೊಳ್ಳುವವು. ಹೀಗೆ ತನ್ನ ಸಾಧನೆಯಿಂದ ಸಾಧಕರ ಪ್ರಾಣಾದಿಗಳನ್ನು ನಿಗ್ರಹಿಸುವುದಕ್ಕೆ ಅಥವಾ ಸುಸ್ಥಿರಗೊಳಿಸುವುದಕ್ಕೆ ಪ್ರಾಣಾನುಗ್ರಹಸ್ಥಲವೆಂದು ಹೆಸರಿಸಲಾಗಿದೆ. ಯೋಗಮಾರ್ಗದಿಂದ ಆತ್ಮ–ಪರಮಾತ್ಮರ ಐಕ್ಯಸ್ಥಿತಿಯನ್ನು ಪಡೆಯುವಲ್ಲಿ ಪ್ರಾಣಾದಿಗಳ ಮೇಲೆ ನಿಯಂತ್ರಣ ಮಾಡುವುದು ಒಂದು ಮಹತ್ತ್ವಪೂರ್ಣವಾದ ಕಾರ್ಯವಾಗಿದೆ. ಪ್ರಾಣವೆಂಬ ವಾಯುವು ಒಂದೇ ಆಗಿದ್ದರೂ ಸ್ಥಾನ ಹಾಗೂ ಕಾರ್ಯಗಳ ಮೂಲಕವಾಗಿ ಅದೊಂದಕ್ಕೇನೇ ಅನೇಕ ಹೆಸರುಗಳು ಬಂದಿರುವುದಾಗಿ ಯೋಗಶಾಸ್ತ್ರದ ವಿಶ್ಲೇಷಣೆಯಿಂದ ತಿಳಿದುಬರುತ್ತದೆ. ಯೋಗ ಶಾಸ್ತ್ರವು ಪ್ರಾಣವನ್ನು ಮೊದಲು ಐದು ವಿಧವಾಗಿ

ನಂತರ ಅದನ್ನು ಮತ್ತಷ್ಟು ವಿಸ್ತಾರಗೊಳಿಸಿ ಹದಿನಾಲ್ಕು ವಿಧವಾಗಿ ಅದರ ವಿಂಗಡಣೆ ಯನ್ನು ಮಾಡಿರುವುದಾಗಿ ತಿಳಿದುಬರುತ್ತದೆ.

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬಿವು ಪ್ರಾಣದ ಐದು ಭೇದ ಗಳು, 'ಹೃದಿಪ್ರಾಣಃ' ಹೃದಯದಲ್ಲಿರುವ ವಾಯುವಿಗೆ ಪ್ರಾಣವಾಯುವೆಂದು ಕರೆಯು ತ್ತಾರೆ. ಇದು ಒಂದು ದಿವಸಕ್ಕೆ (೨೧,೬೦೦) ಇಪ್ಪತ್ತೊಂದು ಸಾವಿರದಾ ಆರುನೂರು ಸಾರೆ ಶ್ವಾಸೋಚ್ಛ್ವಾಸ ಕ್ರಿಯೆಯನ್ನು ಮಾಡುತ್ತಿರುತ್ತದೆ. ಇದರ ಈ ಕ್ರಿಯೆಯೇ ಪ್ರತಿ ಯೊಂದು ಜೀವಿಯ ಜೀವನದ ಆಧಾರವು. ಈ ಕ್ರಿಯೆಯು ನಿಂತಿತೆಂದರೆ ಶರೀರವು ಪ್ರೇತವಾಗಿ ಪರಿಣಮಿಸುತ್ತದೆ. ಅಂತೆಯೇ ಇದು ಜೀವನಕ್ಕೆ ಮೂಲ ಆಧಾರವಾದುದು. ಎರಡನೆಯದಾದ ವಾಯುವೇ ಅಪಾನವು 'ಗುದೇಽಪಾನಃ' ಗುದೇಂದ್ರಿಯವು ಇದರ ನಿವಾಸಸ್ಥಾನವು. ಮಲಮೂತ್ರಗಳ ವಿಸರ್ಜನೆಗೆ ಇದು ಸಹಾಯಕವಾಗಿರುತ್ತದೆ. ಇದು ತನ್ನ ಸ್ಥಾನದಲ್ಲಿದ್ದು ಸಮರ್ಥವಾಗಿದ್ದರೆ ಮಲಮೂತ್ರಗಳ ವಿಸರ್ಜನೆಗೆ ಯಾವ ಅಡೆ–ತಡೆಗಳೂ ಬರುವುದಿಲ್ಲ, ಅದು ಒಂದು ವೇಳೆ ದುರ್ಬಲವಾದರೆ ಅಥವಾ ತನ್ನ ಸ್ಥಾನವನ್ನು ಬಿಟ್ಟು ಊರ್ಧ್ವಮುಖಿಯಾದರೆ ಉದರದ ವ್ಯವಸ್ಥೆಯೆಲ್ಲ ಕೆಟ್ಟು ಹೋಗಿ ಮನುಷ್ಯ ಶರೀರವು ಅಸ್ವಸ್ಥವಾಗುವುದಷ್ಟೇ ಅಲ್ಲ, ಒಮ್ಮೊಮ್ಮೆ ಬುದ್ಧಿಯ ಮೇಲೆಯೂ ವಿಪರೀತ ಪರಿಣಾಮವಾಗುವ ಸಂಭವವಿರುತ್ತದೆ.

'ವ್ಯಾನಃ ಸರ್ವ ಶರೀರಗಃ' ವ್ಯಾನವಾಯುವು ಶರೀರದ ಪ್ರತಿಯೊಂದು ನರನಾಡಿ ಗಳಲ್ಲಿ ತುಂಬಿಕೊಂಡಿರುತ್ತದೆ. ಇದರ ಬಲದಿಂದಲೇ ಅವಯವಗಳ ಚಲನವಲನೆಯು ಸಂಭವಿಸುವುದು. ಬಾಲ್ಯ ಹಾಗೂ ತಾರುಣ್ಯಾವಸ್ಥೆಯಲ್ಲಿ ಈ ವಾಯುವು ಪ್ರಬಲವಾಗಿ ರೋಣದರಿಂದ ಮಕ್ಕಳಲ್ಲಿ ಹಾಗೂ ತರುಣರಲ್ಲಿ, ಹೆಚ್ಚಿನ ಅಂಗಚಲನವಲನೆಯು ಕಂಡು ಬರುತ್ತದೆ. ವೃದ್ಧಾವಸ್ಥೆಯಲ್ಲಿ ಈ ವಾಯುವು ದುರ್ಬಲವಾಗುವ ಕಾರಣ ವೃದ್ಧರಿಗೆ ಕೂಡ್ರುವ, ಏಳುವ, ನಡೆದಾಡುವ ತೊಂದರೆಗಳು ಉಂಟಾಗುವುದು ಕಂಡುಬರುತ್ತದೆ. ಮಂಗಗಳ ದೇಹದಲ್ಲಿ ಈ ವಾಯುವಿನ ಹೆಚ್ಚಿನ ಪ್ರಾಬಲ್ಯವನ್ನು ಕಾಣಬಹುದು. ಈ ವಾಯುವಿನ ವಿಕಾರದಿಂದಲೇ ಅರ್ಧಾಂಗವಾಯು ಎಂಬ ವ್ಯಾಧಿಯು ಬರುವ ಸಂಭವ ವಿರುತ್ತದೆ. ಇಂದಿನ ಯುಗದಲ್ಲಿ ಅಧಿಕರಕ್ತದೊತ್ತಡ (High Blood Pressure) ಎಂಬ ರೋಗದ ಪ್ರಾಬಲ್ಯವು ಸರ್ವತ್ರಕಂಡುಬರುತ್ತದೆ. ಇದಕ್ಕೆ ಮುಖ್ಯಕಾರಣವೆಂದರೆ ವ್ಯಾನ ವಾಯುವಿನ ದುರ್ಬಲತೆಯು. ಮನುಷ್ಯನು ಪ್ರತಿನಿತ್ಯ ಸರ್ವಅವಯವಗಳ ಸಮುಚಿತ ವಾದ ಚಲನವಲನರೂಪವಾದ ವ್ಯಾಯಾಮವನ್ನು ಮಾಡುತ್ತಿದ್ದು ಜೊತೆಗೆ ಪ್ರಾಣಾ ಯಾಮವನ್ನು ಮಾಡಿ ಅದರ ಬಲದಿಂದ ಮನಸ್ಸನ್ನು ಸ್ಥಿರಗೊಳಿಸಿ ಧ್ಯಾನಾಸಕ್ತನಾದರೆ ಈ ರಕ್ತ ಒತ್ತಡರೂಪವಾದ ರೋಗವು ಇಲ್ಲದಾಗಿ ಹೋಗುವುದು. ವ್ಯಾನವಾಯುವನ್ನು ನಾವು ಸರಿಯಾಗಿ ಇಟ್ಟುಕೊಳ್ಳದಿದ್ದರೆ ಅರ್ಧಾಂಗ ವಾಯುವಲ್ಲದೆ ಹಾರ್ಟ್‌ಫೇಲ್ (ಹೃದಯ ಗತಿ ತಡೆ), ಬ್ರೇನ್ ಹೆಮರೇಜ್ (ಮೆದುಳಿನಲ್ಲಿ ರಕ್ತಸ್ರಾವ) ಮುಂತಾದ ಭಯಾನಕ ರೋಗಗಳಿಗೆ ತುತ್ತಾಗಬೇಕಾಗುವುದು.

ನಾಲ್ಕನೆಯದಾದ ವಾಯುವೇ ಉದಾನವು, 'ಉದಾನಃ ಕಂಠದೇಶಸ್ಥಃ', ಉದಾನ ವಾಯುವು ಕಂಠದಲ್ಲಿ ಇರುತ್ತದೆ. ಢೇಕರಿಕೆ, ಆಕಳಿಕೆ ಮುಂತಾದವುಗಳಿಗೆ ಸಹಾಯಕ ವಾಗಿರುತ್ತದೆ. ಇನ್ನು ಐದನೆಯದಾದ, ವಾಯುವೇ ಸಮಾನವು 'ಸಮಾನಃ ನಾಭಿದೇಶಸ್ಥಃ' ಇದು ನಾಭಿಸ್ಥಾನದಲ್ಲಿದ್ದು ಅನ್ನರಸವನ್ನು ಪ್ರತಿಯೊಂದು ಇಂದ್ರಿಯಗಳಿಗೆ ಹಂಚುವ ಕಾರ್ಯವನ್ನು ಮಾಡುತ್ತಿರುತ್ತದೆ. ಹೀಗೆ ಈ ಐದು ವಾಯುಗಳು ಮುಖ್ಯ ವಾಯುಗಳೆಂಬುದಾಗಿ ಕರೆಯಲ್ಪಡುತ್ತವೆ. ಇದೂ ಅಲ್ಲದೆ ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯವೆಂಬ ಐದು ಉಪಪ್ರಾಣಗಳೆಂಬುದಾಗಿ ಕರೆಯಲ್ಪಡು ತ್ತವೆ. ಇವುಗಳಲ್ಲಿ ನಾಗವಾಯುವು ರೋಮನಾಳದಲ್ಲಿದ್ದು ಸ್ನಾಯುವಿನ ಚಲನೆಗೆ ಸಹಾಯಕವಾಗಿರುತ್ತದೆ. ಕೂರ್ಮವಾಯುವು ಉದರ ಹಾಗೂ ಲಲಾಟ ಸ್ಥಾನದಲ್ಲಿದ್ದು ನೇತ್ರದ ನಿಮೀಲನ ಉನ್ಮೀಲನ ಅರ್ಥಾತ್ ರೆಪ್ಪೆ ಬಡಿಯುವುದು ಕಣ್ಣು ಮುಚ್ಚು ವುದು–ತೆರೆಯುವುದು ಮುಂತಾದ ಕ್ರಿಯೆಗಳಿಗೆ ಕಾರಣವಾಗಿರುತ್ತದೆ. ಇದೂ ಅಲ್ಲದೆ ವಾಗಿಂದ್ರಿಯದ ಚಲನವಲನೆಗೂ ಸಹ ಇದುವೇ ಸಹಾಯಕವಾಗಿರುತ್ತದೆ. ಇನ್ನು ಕೃಕರ ವಾಯುವು ನಾಶಿಕಾ ಸ್ಥಾನದಲ್ಲಿದ್ದುಕೊಂಡು ಶೀನು ಮುಂತಾದ ಕ್ರಿಯೆಗಳಿಗೆ ಸಹಾಯಕ ವಾಗಿರುತ್ತದೆ. 'ದೇವದತ್ತ' ವಾಯು ಶರೀರದ ಗುಹ್ಯಸ್ಥಾನದಲ್ಲಿರುತ್ತದೆ. ಇದು ನಗು, ನುಡಿ ಮುಂತಾದ ಕ್ರಿಯೆಗಳಿಗೆ ಸಹಾಯಕವಾಗುವುದು. 'ಧನಂಜಯ' ವಾಯುವು ಬ್ರಹ್ಮರಂಧ್ರದಲ್ಲಿರುತ್ತದೆ. ನಾವು ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಾಗ ಉಂಟಾ ಗುವ ಸಮುದ್ರ ಘೋಷ ಧ್ವನಿಯು ಇದರಿಂದಲೇ ಉತ್ಪನ್ನವಾಗುತ್ತದೆ.

ಈ ಐದು ಉಪಪ್ರಾಣಗಳಲ್ಲದೆ ವೈರಂಭ, ಮುಖ್ಯ, ಪ್ರಭಂಜನ ಮತ್ತು ಅಂತ ರ್ಯಾಮಿ ಎಂಬ ಸೂಕ್ಷ್ಮವಾದ ನಾಲ್ಕು ವಾಯುಗಳನ್ನು ಯೋಗಿಗಳು ಕಂಡು ಹಿಡಿದಿ ದ್ದಾರೆ. ಇವುಗಳಲ್ಲಿ 'ವೈರಂಭವು' ಮನಸ್ಸಿನಲ್ಲಿದ್ದು ಮನಸ್ಸಿಗೆ ಪ್ರೇರಣೆ ನೀಡುವುದು. 'ಮುಖ್ಯ' ವಾಯುವು ಬುದ್ಧಿಯಲ್ಲಿದ್ದು ಬುದ್ಧಿಗೆ ಪುಷ್ಟಿನೀಡುವುದು. 'ಪ್ರಭಂಜನ' ವಾಯುವು ಚಿತ್ತದಲ್ಲಿ ನೆಲೆಸಿ ಚಿತ್ತವನ್ನು ಪ್ರೇರೇಪಿಸುವುದು. ಇದರಂತೆ ಅಂತರ್ಯಾಮಿ ವಾಯುವು ಅಹಂಕಾರದಲ್ಲಿ ನೆಲೆಸಿ ಅಹಂಕಾರಕ್ಕೆ ಪ್ರಚೋದನೆಯನ್ನು ಕೊಡುವುದು.

ಇಲ್ಲಿಯವರೆಗೆ ಪ್ರತಿಪಾದಿಸಲ್ಪಟ್ಟ ಈ ಹದಿನಾಲ್ಕು ವಾಯುಗಳಲ್ಲಿ ಪಂಚ ಮುಖ್ಯ ಪ್ರಾಣಗಳು ಪಂಚಜ್ಞಾನೇಂದ್ರಿಯಗಳಿಗೆ ನಾಗಾದಿ ಪಂಚ ಉಪಪ್ರಾಣಗಳು ಪಂಚ ಕರ್ಮೇಂದ್ರಿಯಗಳಿಗೆ ಮತ್ತು ವೈರಂಭಾದಿ ನಾಲ್ಕು ಉಪವಾಯುಗಳು ಅಂತಃಕರಣ ಚತುಷ್ಟಯಕ್ಕೆ ಪ್ರೇರಕವಾಗಿರುತ್ತವೆಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಒಂದೇ ಆದ ಪ್ರಾಣವಾಯುವು ಶರೀರದ ಬೇರೆ ಬೇರೆ ಸ್ಥಾನಗಳಲ್ಲಿ ವಾಸಿಸಿ ಬೇರೆ ಬೇರೆ ಕಾರ್ಯ ಗಳಿಗೆ ಚಾಲನೆಕೊಡುವ ಕಾರಣದಿಂದಾಗಿ ಇದು ಹದಿನಾಲ್ಕು ಪ್ರಕಾರವಾಗಿ ವಿಸ್ತಾರ ಗೊಂಡಿದೆಯೆಂಬುದು ತಿಳಿದುಬರುತ್ತದೆ. ವಾಯುವಿನ ಈ ಕ್ರಿಯೆಗಳನ್ನು ಅವಲೋಕಿಸಿ ದಾಗ ನಮ್ಮ ಜೀವನದ ಸರ್ವ ವ್ಯವಹಾರಗಳಿಗೆ ಇದುವೇ ಪ್ರೇರಕಶಕ್ತಿಯಾಗಿರುತ್ತದೆ. ಇದರ ಈ ಕಾರ್ಯವ್ಯಾಪ್ತಿಯನ್ನು ಕಂಡೇ ಉಪನಿಷತ್ತಿನ ಮಹರ್ಷಿಗಳು ಇದಕ್ಕೆ ಜ್ಯೇಷ್ಠ ಮತ್ತು ಶ್ರೇಷ್ಠ ಎಂಬುದಾಗಿ ಕರೆದಿದ್ದಾರೆ. ಮನುಷ್ಯನ ಬದುಕು ಈ ಪ್ರಾಣವನ್ನೇ ಅವಲಂಬಿಸಿರುತ್ತದೆ. ಪ್ರಾಣನಾತ್ ಪ್ರಾಣಃ' ಎಂಬ ವ್ಯುತ್ಪತ್ತಿಗನುಸಾರವಾಗಿ ಜೀವನಕ್ಕೆ

ಇದುವೇ ಮೂಲವಾದುದು. ಶರೀರದಲ್ಲಿರುವ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಮತ್ತು ಅಂತಃಕರಣ ಚತುಷ್ಟಯಗಳಿಗೆ ಪ್ರೇರಕ ಶಕ್ತಿಯಾಗಿರುವ ಪ್ರಾಣವೊಂದನ್ನು ನಿಗ್ರಹಿಸಿದರೆ ಸರ್ವದರ ಮೇಲೆ ನಿಗ್ರಹವನ್ನು ಸಾಧಿಸಬಹುದು. ಸೇನಾಪತಿಯನ್ನು ಸೆರೆ ಹಿಡಿದರೆ ಸಮಸ್ತಸೈನ್ಯವನ್ನೆಲ್ಲ ನಮ್ಮ ಅಂಕಿತದಲ್ಲಿ ಇಟ್ಟುಕೊಳ್ಳಲು ಸಾಧ್ಯವಾಗುವಂತೆ ಪ್ರಾಣನಿರೋಧದಿಂದ ಸರ್ವದರ ನಿರೋಧವು ಸಿದ್ಧಿಸುವುದು. ಅಂತೆಯೇ ಈ ಪ್ರಾಣಾನುಗ್ರಹದ ಶಿವಯೋಗಿಯು ಪ್ರಾಣವಾಯುವನ್ನು ಪೂರಕ, ಕುಂಭಕ ಹಾಗೂ ರೇಚಕಗಳೆಂಬ ಪ್ರಾಣಾಯಾಮ ವಿಧಾನ ಮೂಲಕವಾಗಿ ಪ್ರತಿಬಂಧಿಸಿ ತನ್ನ ಹೃದಯಕಮಲದಲ್ಲಿ ಸ್ಥಿರಗೊಳಿಸುತ್ತಾನೆ. ಆಗ ಅವನ ಹೃದಯಸ್ಥ ಪರಂಜ್ಯೋತಿಯ ಪ್ರಕಾಶವು ಪ್ರಕಟವಾಗುವುದು. ಹಾಗೂ ಆ ಜ್ಯೋತಿಯಲ್ಲಿಯೇ ಅವನ ಪ್ರಾಣ ವಾಯುವು ವಿಲೀನವಾಗುತ್ತದೆ. ಆಗ ಶಿವಯೋಗಿಯು ಆ ದಿವ್ಯ ಪ್ರಭೆಯಲ್ಲಿ ಬೆರೆತು ಹೋಗುತ್ತಾನೆ. ಈ ತೆರನಾದ ಶಿವಯೋಗ ಸಮಾಧಿಯಿಂದ ಉತ್ಥಾನನಾದ ಬಳಿಕ ಲೋಕಾನುಗ್ರಹಕ್ಕಾಗಿ ತನ್ನ ದಿವ್ಯ ದೃಷ್ಟಿಯಿಂದ ಅನ್ಯರ ಪ್ರಾಣಗಳ ಮೇಲೆ ಅನುಗ್ರಹ ವನ್ನು ಮಾಡಿ ಅವರ ಪ್ರಾಣನಿರೋಧಕ್ಕೆ ಕಾರಣನಾಗುತ್ತಾನೆ. ಅಂತೆಯೇ ಇವನಿಗೆ ಪ್ರಾಣಾನುಗ್ರಹಸ್ಥಲ ಎಂಬುದಾಗಿ ಕರೆಯುತ್ತಾರೆ.

ಈ ಸ್ಥಿತಿಯನ್ನು ತಲುಪಿದ ಶಿವಯೋಗಿಯು ತನ್ನ ಪ್ರಾಣವನ್ನು ಭಗವದ್ರೂಪದಲ್ಲಿ ವಿಲೀನಗೊಳಿಸುತ್ತಾನೆ. ಇದುವೇ ಇವನ ಕುಂಭಕವು. ಅವನು ವಿಶ್ವವೆಲ್ಲವನ್ನು ಶಿವಮಯ ವಾಗಿ ನೋಡುತ್ತಾನೆ. ಇದುವೇ ಅವನ ತಾತ್ಪರ್ಯ ದೃಷ್ಟಿಯು. ತಾತ್ಪರ್ಯವೆಂದರೆ ಸಾರ ವೆಂದರ್ಥ ಶಿವಯೋಗವನ್ನು ಸಾಧಿಸುವುದರ ತಾತ್ಪರ್ಯವೇನೆಂದರೆ, ಸರ್ವ ಪ್ರಪಂಚ ವನ್ನು ಶಿವರೂಪವಾಗಿ ನೋಡುವುದೇ ಆಗಿರುತ್ತದೆ. ಒಬ್ಬರನ್ನು ಗೌರವಿಸುವುದು ಇನ್ನೊಬ್ಬರನ್ನು ಅಪಮಾನಗೊಳಿಸುವುದು ಜೀವನ ಸ್ವಭಾವವು. ಯೋಗಿಯು ಈ ಜೀವತ್ವನ್ನು ಮೀರಿ ಶಿವತ್ವ ಸ್ಥಿತಿಯನ್ನು ಪಡೆದ ಕಾರಣ ಪ್ರಪಂಚವೆಲ್ಲವನ್ನು ಅವನು ಶಿವರೂಪವಾಗಿಯೇ ನೋಡುತ್ತಿರುತ್ತಾನೆ. ಶಿವನು ಸರ್ವರನ್ನೂ ಸಮಾನವಾಗಿ ನೋಡು ವಂತೆ ಶಿವಯೋಗಿಯೂ ಸಹ ಸಮದೃಷ್ಟಿಯುಳ್ಳವನೇ ಆಗಿರುತ್ತಾನೆ. ಇವನಲ್ಲಿ ರಾಗ ದ್ವೇಷಾದಿಗಳಿರುವುದಿಲ್ಲ, ತನ್ನ ಮೇಲಿರುವಷ್ಟು ಪ್ರೀತಿಯನ್ನು ಅವನು ಎಲ್ಲರ ಮೇಲೂ ಮಾಡುತ್ತಿರುತ್ತಾನೆ. ಜೀವಿಗಳು ಬಾಹ್ಯವಾದ ಯಾತ್ರೆಯನ್ನು ಮಾಡಿದರೆ ಶಿವ ಯೋಗಿಯು ಅಂತರ್ಯಾತ್ರೆಯನ್ನು ಮಾಡುತ್ತಾನೆ. ಶಿವನು ಹೊರಗೆ ಜ್ಯೋತಿರ್ಲಿಂಗ ರೂಪದಲ್ಲಿರುವಂತೆ ನಮ್ಮೆಲ್ಲರ ಹೃದಯದಲ್ಲಿಯೂ ಸಹ ಜ್ಯೋತಿರ್ಲಿಂಗ ರೂಪದಲ್ಲಿ ಇದ್ದಾನೆ ನಮ್ಮ ಶರೀರದಲ್ಲಿಯ ಭ್ರೂಮಧ್ಯ–ಹೃದಯ ಹಾಗೂ ಮೂಲಾಧಾರಗಳು ಅಂತರಂಗದಲ್ಲಿಯ ಜ್ಯೋತಿರ್ಲಿಂಗದ ಆವಿರ್ಭಾವ ಸ್ಥಾನಗಳಾಗಿವೆ. ಅಲ್ಲಿರುವ ಜ್ಯೋತಿರ್ಲಿಂಗವನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಪ್ರಾಣಾಯಾಮದ ಸಹಾಯದಿಂದ ಆ ಸ್ಥಾನಗಳನ್ನು ಶುದ್ಧೀಕರಿಸಿಕೊಳ್ಳಬೇಕಾಗುತ್ತದೆ. ನಮ್ಮ ಮನೆಯೊಳಗೆ ಆದೆಷ್ಟೇ ಕಸಕಡ್ಡಿ ಗಳು ದಿನಾಲೂ ಬೀಳುತ್ತಿರುವಂತೆ ನಮ್ಮ ಅಂತರಂಗದಲ್ಲಿಯೂ ಸಹ ಹಲವು ವಿಧ ಮಾಲಿನ್ಯದ ಸಂಗ್ರಹವಾಗಿರುತ್ತದೆ. ಕಸಬರಿಗೆಯಿಂದ ಮನೆಯ ಕಸವನ್ನು ಹೊರಹಾಕು ವಂತೆ ಪ್ರಾಣಾಯಾಮದ ಮುಖಾಂತರವಾಗಿ ನಮ್ಮ ಶರೀರದಲ್ಲಿ ಜ್ಯೋತಿರ್ಲಿಂಗದ

ಪ್ರಾಕಟ್ಯಸ್ಥಾನಗಳಾದ ಕೇಂದ್ರದಲ್ಲಿರುವ ದೋಷವನ್ನು ದೂರೀಕರಿಸಿಕೊಳ್ಳಲು ಬರುತ್ತದೆ.

ಮನ ಹಾಗೂ ಪ್ರಾಣಗಳ ಸಂಯೋಗದಿಂದ ಅಂತರ್ಲಿಂಗದ ದರ್ಶನವನ್ನು ಪಡೆಯಬಹುದು. ಮನಸ್ಸು ಹೊರ ಹೋಗಬೇಕಾದರೆ ಪ್ರಾಣವೇ ಸಹಾಯಕವಾಗುವಂತೆ ಅದು ಅಂತರ್ಮುಖವಾಗಬೇಕಾದರೂ ಪ್ರಾಣವೇ ಸಹಾಯಕವಾಗುವುದು. ಒಂದು ಅಂಧಃಕಾರಮಯವಾದ ಗುಹೆಯನ್ನು ಪ್ರವೇಶಿಸಬೇಕಾದರೆ ಕೈಯಲ್ಲಿ ದೀಪವನ್ನು ತೆಗೆದುಕೊಳ್ಳಬೇಕಾಗುವಂತೆ ಅಂತರಂಗದಲ್ಲಿ ಪ್ರವೇಶಿಸುವಾಗ ಪ್ರಾಣವೆಂಬ ದೀಪದ ಸಹಾಯವನ್ನು ಪಡೆಯಬೇಕಾಗುತ್ತದೆ.

ಪ್ರಾಣವು ಶಿವನಲ್ಲಿ ಲಯವಾದಾಗ ಇಂದ್ರಿಯಗಳ ಸ್ಫೂರ್ತಿಯಾಗಲಿ ಸಂಸಾರದ ದರ್ಶನವಾಗಲಿ ಉಂಟಾಗುವುದಿಲ್ಲವೆಂಬ ವಿಷಯವನ್ನು ತಿಳಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ–

> ಪ್ರಾಣೋ ಯಸ್ಯ ಲಯಂ ಯಾತಿ ಶಿವೇ ಪರಮಕಾರಣೇ ।
> ಕುತಸ್ತಸ್ಯೇಂದ್ರಿಯಸ್ಫೂರ್ತಿಃ ಕುತಃ ಸಂಸಾರದರ್ಶನಮ್ ॥

(ಸಿ. ಶಿ. ೧೭–೨೫)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಜಗತ್ತಿಗೆ ಪರಮ ಕಾರಣೀಭೂತನಾದ ಶಿವನಲ್ಲಿ ತನ್ನ ಪ್ರಾಣವನ್ನು ಲಯಗೊಳಿಸಿಕೊಂಡ ಶಿವಯೋಗಿಯ ಶರೀರದಲ್ಲಿ ಯಾವ ಇಂದ್ರಿಯಗಳ ವ್ಯವಹಾರ ಸ್ಫೂರ್ತಿಯು ಇರುವದಿಲ್ಲವಷ್ಟೇ ಅಲ್ಲ ಅವನಿಗೆ ಪ್ರಪಂಚದ ದರ್ಶನವೇ ಆಗುವುದಿಲ್ಲ.

ನಮ್ಮ ಇಂದ್ರಿಯಗಳ ವ್ಯವಹಾರಕ್ಕೆ ಮನವು ಮೂಲವಾದುದು. ಮನಸ್ಸಿನ ವ್ಯವಹಾರಕ್ಕೆ ಪ್ರಾಣವು ಮೂಲವು. ಈ ಪ್ರಾಣಾನುಗ್ರಹಸ್ಥಲದ ಶಿವಯೋಗಿಯು ಪ್ರಾಣಾಯಾಮ ವಿಧಿಯಿಂದ ತನ್ನ ಪ್ರಾಣವನ್ನು ಅಂತರಂಗದ ಜ್ಯೋತಿರ್ಲಿಂಗದಲ್ಲಿ ಲಯಗೊಳಿಸಿದ ಬಳಿಕ ಅವನ ಮನಸ್ಸೂ ಸಹ ಅಲ್ಲಿಯೇ ವಿಲಯಗೊಳ್ಳುವುದು. ಹೀಗೆ ಪ್ರಾಣ ಮನಸ್ಸುಗಳೇ ತಮ್ಮ ವ್ಯವಹಾರದಿಂದ ವಿರತವಾದ ಬಳಿಕ ಇಂದ್ರಿಯಗಳ ವ್ಯವಹಾರವು ಅದು ಹೇಗೆ ತಾನೆ ಸಂಭವಿಸಬಲ್ಲದು. ನಮ್ಮಲ್ಲಿರುವ ದಶೇಂದ್ರಿಯಗಳಲ್ಲಿ ಯಾವುದೊಂದು ಇಂದ್ರಿಯವು ತನ್ನ ವಿಷಯದತ್ತ ಪ್ರವೃತ್ತವಾಗಬೇಕಾದರೆ ಅದಕ್ಕೆ ಮನಸ್ಸಿನ ಸಹಕಾರವು ಬೇಕೇಬೇಕು. ಮನಸ್ಸೇ ಪರಮಾತ್ಮನಲ್ಲಿ ಲೀನವಾಗಿರೋಣದರಿಂದ ಇಂದ್ರಿಯಗಳ ವ್ಯವಹಾರವು ಸಹಜವಾಗಿಯೇ ನಿಂತುಹೋಗುತ್ತದೆ. ಹೀಗೆ ತನ್ನ ಇಂದ್ರಿಯ ಹಾಗೂ ಮನಸ್ಸುಗಳಿಂದ ಬಹಿರ್ಮುಖ ವ್ಯವಹಾರದಲ್ಲಿ ಪ್ರವೃತ್ತನಾಗದಿರುವ ಶಿವಯೋಗಿಯು ತನ್ನ ಅಂತರಂಗದಲ್ಲಿಯೇ ಶಿವಸಾಕ್ಷಾತ್ಕಾರವನ್ನು ಪಡೆದು ಸಂತೋಷದಲ್ಲಿರುತ್ತಾನೆ.

ಈ ಪ್ರಾಣಾನುಗ್ರಹದ ಶಿವಯೋಗಿಯು ಸಕಲೇಂದ್ರಿಯ ವ್ಯವಹಾರದಿಂದ ನಿವೃತ್ತನಾಗಿ ತನ್ನಲ್ಲಿಯೇ ತಾನು ಹೇಗೆ ಶಾಂತನಾಗಿರುತ್ತಾನೆ ಎಂಬ ವಿಷಯವನ್ನು ಪೂಜ್ಯರು ಪುನಃ–

ಕರಣೇಷು ನಿವೃತ್ತೇಷು ಸ್ವಾರ್ಥಸಂಗಾತ್ ಪ್ರಯತ್ನತಃ ।
ತೈಃ ಸಮಂ ಪ್ರಾಣಮಾರೋಪ್ಯ ಸ್ವಾಂತೇ ಶಾಂತಮತಿಃ ಸ್ವಯಮ್ ॥

(ಸಿ. ಶಿ. ೧೭–೨೬)

ಹೀಗೆ ಉಪದೇಶಿಸಿದ್ದಾರೆ. ಶಿವಯೋಗಿಯು ತನ್ನ ಇಂದ್ರಿಯಗಳನ್ನೂ ಅವುಗಳ ವಿಷಯ ಗಳಿಂದ ಪ್ರಯತ್ನಪೂರ್ವಕವಾಗಿ ನಿವೃತ್ತಗೊಳಿಸಿ ಅವುಗಳೊಂದಿಗೆ ತನ್ನ ಪ್ರಾಣವನ್ನು ಸಂಯೋಜಿಸಿ ತಾನು ತನ್ನಲ್ಲಿಯೇ ಶಾಂತಮನಸ್ಕನಾಗುತ್ತಾನೆ.

ಸಾಮಾನ್ಯವಾಗಿ ನಮ್ಮ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳತ್ತಲೇನೇ ಪ್ರವಹಿಸುತ್ತಿರುತ್ತವೆ. ಅನಾದಿಕಾಲದಿಂದಲೂ ಇಂದ್ರಿಯಗಳಿಗೆ ವಿಷಯಾಭ್ಯಾಸವಾಗಿ ಹೋಗಿದೆ. ಆ ವಿಷಯಗಳಿಲ್ಲದೆ ಅವುಗಳಿಗೆ ಸಮಾಧಾನವಿರುವುದಿಲ್ಲ. ಆದರೆ ತಾವು ಅನುಭವಿಸುತ್ತಿರುವ ವಿಷಯಗಳು ತಮಗೆ ಹಾನಿಯನ್ನುಂಟು ಮಾಡುತ್ತಿವೆ ಎಂಬ ಅರಿವು ಅವುಗಳಿಗಿರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯ ಇಂದ್ರಿಯಗಳು ವಿಷಯಗಳನ್ನು ಅನುಭವಿಸಿ ಅನುಭವಿಸಿ ಶಿಥಿಲವಾಗಿ ಕೊನೆಗೊಂದು ದಿನ ವಿಷಯಗ್ರಹಣ ಶಕ್ತಿಯನ್ನೇ ಕಳೆದುಕೊಂಡುಬಿಡುತ್ತವೆ. ಅಂತೆಯೇ ಅನುಭವಿಗಳು ''ಭೋಗಾ ನ ಭುಕ್ತಾ ವಯಮೇವ ಭುಕ್ತಾಃ'' ಎಂಬುದಾಗಿ ನುಡಿದಿದ್ದಾರೆ. ಇಂದ್ರಿಯಗಳು ವಿಷಯಗಳನ್ನು ಅನುಭವಿಸಲು ಹೋದರೆ ಆ ವಿಷಯಗಳೇ ಇಂದ್ರಿಯಗಳನ್ನು ಅನುಭವಿಸಿಬಿಡುತ್ತವೆ. ಅರ್ಥಾತ್ ಶಕ್ತಿಹೀನಗಳನ್ನಾಗಿ ಮಾಡುತ್ತವೆ. ಇದರ ರಹಸ್ಯವನ್ನರಿತ ಶಿವಯೋಗಿಯು ತನ್ನ ನಿಗ್ರಹಶಕ್ತಿಯ ಸಾಮರ್ಥ್ಯದಿಂದ ತನ್ನ ಇಂದ್ರಿಯಗಳನ್ನು ವಿಷಯಗಳಿಂದ ವಿಮುಖ ಗೊಳಿಸಿಕೊಳ್ಳುತ್ತಾನೆ. ಇದೇ ಪ್ರಕಾರವಾಗಿ ಪ್ರಾಣಾಯಾಮ ಪ್ರಕ್ರಿಯೆಯಿಂದ ತನ್ನ ಪ್ರಾಣದ ಮೇಲೆಯೂ ನಿಯಂತ್ರಣವನ್ನು ಸಾಧಿಸಿಕೊಳ್ಳುತ್ತಾನೆ. ಹೀಗೆ ಇಂದ್ರಿಯ ಹಾಗೂ ಪ್ರಾಣಗಳನ್ನು ವಶಪಡಿಸಿಕೊಂಡ ಶಿವಯೋಗಿಗೆ ಮನೋನಿಗ್ರಹವು ಸುಲಭ ಸಾಧ್ಯವಾಗುವುದು. ಪ್ರಾಣ ಹಾಗೂ ಇಂದ್ರಿಯಗಳ ಬಲದಿಂದಲೇ ಮನಸ್ಸು ವಿಷಯ ಸುಖವನ್ನು ಅನುಭವಿಸುತ್ತಿರುತ್ತದೆ. ಶಿವಯೋಗಿಯು ಯಾವಾಗ ಪ್ರಾಣೇಂದ್ರಿಯಗಳನ್ನು ನಿಗ್ರಹಿಸುವನೋ ಆಗ ಅವನ ಮನಸ್ಸು ಸಹಜವಾಗಿಯೇ ನಿಗ್ರಹೀತವಾಗುತ್ತದೆ. ಮನಸ್ಸು ನಿಗ್ರಹಗೊಂಡರೆ ಸಂಸಾರದ ವ್ಯವಹಾರವೇ ನಿಂತು ಹೋಗುವುದು. ಈ ತೆರ ನಾಗಿ ಸಂಸಾರದಿಂದ ಸಂಪೂರ್ಣವಾಗಿ ವಿಮುಖನಾದ ಈ ಶಿವಯೋಗಿಯು ತನ್ನಲ್ಲಿಯೇ ತಾನು ಸುಸ್ಥಿರಗೊಂಡು ಸುಖ–ಶಾಂತಿಗಳನ್ನು ಸದಾ ಅನುಭವಿಸುತ್ತಿರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ಜುಲೈ, ೧೯೯೪

(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)



ಆಶೀರ್ವಚನ-೨

## ಪ್ರಾಣಾನುಗ್ರಹಸ್ಥಲ

ಧರ್ಮಾಭಿಮಾನಿಗಳೇ,

ಸುಕ್ಷೇತ್ರವಾದ ಸೊನ್ನಲಾಪುರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧ ರಾಮೇಶ್ವರನ ನಿತ್ಯನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡು ವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಪ್ರಾಣಾನುಗ್ರಹ ಸ್ಥಲದ ಕೆಲವು ವಿಷಯಗಳನ್ನು ತಿಳಿದುಕೊಂಡಿದ್ದೀರಿ. ಇಂದೂ ಸಹ ಮುಂದುವರೆಸುತ್ತಿದ್ದೇವೆ.

ಮನುಷ್ಯನ ಜೀವನದಲ್ಲಿ ಪ್ರಾಣಕ್ಕೆ ಅತ್ಯಧಿಕ ಮಹತ್ತ್ವವಿದೆ. ಶರೀರದಿಂದ ಪ್ರಾಣಪಕ್ಷಿಯು ಹಾರಿಹೋಯಿತೆಂದರೆ ಶರೀರವು ಪ್ರೇತವಾಗಿ ಇಹಲೋಕದ ಎಲ್ಲ ಸಂಬಂಧಗಳೂ ಸಮಾಪ್ತವಾಗುತ್ತವೆ. ದೇಹದಲ್ಲಿ ಪ್ರಾಣ ಇರುವವರೆಗೇನೇ ತಂದೆ, ತಾಯಿ, ಗಂಡ, ಹೆಂಡತಿ, ಅಣ್ಣ–ತಮ್ಮ ಮತ್ತು ಅಕ್ಕ, ತಂಗಿ ಮುಂತಾದ ಸಂಬಂಧಗಳು ಇರುತ್ತವೆ. ಆ ಪ್ರಾಣ ಹೋದನಂತರ ಈ ಎಲ್ಲ ಸಂಬಂಧಗಳು ಒಂದು ಕ್ಷಣದಲ್ಲಿಯೇ ಸಮಾಪ್ತವಾಗಿ ಬಿಡುತ್ತವೆ. ಶರೀರವನ್ನು ಬಿಟ್ಟುಹೋದ ಪ್ರಾಣಾದಿಗಳು ಮರಳಿ ಅದೇ ಶರೀರದಲ್ಲಿ ಬರಲಾರವು. ಇದು ಪ್ರಕೃತಿ ಸಿದ್ಧವಾದ ನಿಯಮವು. ಒಂದು ವೇಳೆ ಹಾಗೇನಾದರೂ ಹೊರಹೋದ ಪ್ರಾಣಾದಿಗಳು ಆ ಮೃತದೇಹದಲ್ಲಿ ಪುನಃ ಪ್ರವೇಶಿಸಿ ಮೃತವ್ಯಕ್ತಿಯು ಪುನಃ ಕಣ್ಣುತೆರೆದನೆಂದರೆ ಎದುರಿಗೆ ಅಳುತ್ತ ಕುಳಿತಿರುವ ಜನರೆಲ್ಲ ಭಯ ಗೊಂಡು 'ಭೂತ', 'ಭೂತ'ವೆಂದು ಅರಚುತ್ತ ಹೊರಗೋಡುತ್ತಾರೆ. ಆ ಕಣ್ಣು ತೆರೆದ ವ್ಯಕ್ತಿಯು ನಾನು ಭೂತನಲ್ಲ ನಿಮ್ಮ ತಂದೆಯೇ ಇದ್ದೇನೆ ''ಹೆದರಬೇಡಿ, ಬನ್ನಿ'' ಎಂದು ಆತನು ಬೇಕಾದಷ್ಟು ಆಶ್ವಾಸನೆಯನ್ನಿತ್ತರೂ ಜನರಿಗೆ ನಂಬಿಕೆಯಾಗುವುದಿಲ್ಲ. ಅನಿವಾರ್ಯವಾಗಿ ಆ ವ್ಯಕ್ತಿಯ ಸಮೀಪದಲ್ಲಿ ಬಂದರೂ ಸದಾ ಅವನನ್ನು ಸಂಶಯದ ದೃಷ್ಟಿಯಿಂದಲೇ ನೋಡುತ್ತಿರುತ್ತಾರೆ. ನೋಡಿದಿರಾ ! ಈ ಲೌಕಿಕ ಸಂಬಂಧದ ಅಸ್ಥಿರತೆ ಯನ್ನು. ಓರ್ವ ವ್ಯಕ್ತಿಯು ತನ್ನ ಶರೀರದಲ್ಲಿ ಎಪ್ಪತ್ತು–ಎಂಭತ್ತು ವರ್ಷಗಳವರೆಗೆ ಇದ್ದು ತನ್ನ ಸಂಬಂಧಿಗಳಿಗೆ ಬೇಕಾದಷ್ಟು ಅನೂಕಲತೆಗಳನ್ನು ಮಾಡಿಕೊಟ್ಟು ಧರ್ಮ–ಕರ್ಮ ಸಂಯೋಗದಿಂದ ಅವನ ಪ್ರಾಣಗಳು ಹೊರಹೋಗಿ ಆತನು ಗತಪ್ರಾಣನೆನಿಸಿದ ಕೆಲಕಾಲದನಂತರ ಮರಳಿ ಪ್ರಾಣಗಳು ಆ ದೇಹದಲ್ಲಿ ಪ್ರವೇಶಿಸಿದರೆ ತನ್ನ ಸಂಬಂಧಿ

ಗಳಾರೂ ತನ್ನನ್ನು ನಂಬಲಾರದ ಸ್ಥಿತಿಯನ್ನು ಅವನು ಅನುಭವಿಸಬೇಕಾಗುತ್ತದೆ. ಲೌಕಿಕ ಸಂಬಂಧಗಳು ಪಿಸುಗುದಾರವಿದ್ದಂತೆ. ಸ್ವಲ್ಪ ಜಗ್ಗಿದರೂ ಅದು ಪಿಸಿದು ಹೋಗುವಂತೆ ದೇಹದೊಳಗಿನ ಪ್ರಾಣಾದಿಗಳು ಹೊರಹೋದವೆಂದರೆ ಸಂಬಂಧಗಳೆಲ್ಲ ಪಿಸಿದು ಇಲ್ಲ ವಾಗಿ ಹೋಗುತ್ತವೆ. ಅಂತೆಯೇ ಇಹಲೋಕದ ಸಂಬಂಧವನ್ನು ಬಹುದಿನಗಳವರೆಗೆ ಭದ್ರವಾಗಿ ಇರಿಸುವುದೇ ಪ್ರಾಣವು. ಈ ಪ್ರಾಣದ ಸಹಾಯದಿಂದ ನಾವು ಲೌಕಿಕ ವ್ಯವಹಾರವನ್ನು ಮಾಡುವಂತೆ ಅದರ ಮೇಲೆ ಪ್ರಾಣಾಯಾಮಾದಿಗಳಿಂದ ನಿಯಂತ್ರಣ ವನ್ನು ಸಾಧಿಸಿದರೆ ಯೋಗಿಯಾಗಬಹುದು. ಅಂತೆಯೇ ಪೂಜ್ಯಪಾದರು ಶಿವಯೋಗಕ್ಕೆ ಸಹಾಯಕವಾಗುವ ಪ್ರಾಣಾನುಗ್ರಹದ ಬಗ್ಗೆ ಅಪ್ಪಣೆಕೊಡಿಸುತ್ತ

ಶಾಂತತ್ವಾತ್ ಪ್ರಾಣವೃತ್ತೀನಾಂ ಮನಃ ಶಾಮ್ಯತಿ ವೃತ್ತಿಭಿಃ ।
ತಚ್ಛಾಂತೌ ಯೋಗಿನಾಂ ಕಿಂಚಿಚ್ಛಿವಾದನ್ಯನ್ನದೃಶ್ಯತೇ ॥

(ಸಿ. ಶಿ. ೧೭–೨೭)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ಶ್ವಾಸೋಚ್ಛ್ವಾಸ ರೂಪದಲ್ಲಿ ಸದಾ ಚಲಿಸುತ್ತಿರುವ ಪ್ರಾಣವಾಯುವನ್ನು ಶಿವಯೋಗಿಯು, ಪೂರಕ, ರೇಚಕಗಳೆಂಬ ಯೋಗಶಾಸ್ತ್ರದ ವಿಧಿಯಿಂದ ನಿಯಮನಗೊಳಿಸಿ ಕುಂಭಕ ವಿಧಿಯಿಂದ ಅದರ ಗತಿ ಯನ್ನು ನಿರೋಧಿಸಲಾಗಿ ಮನಸ್ಸು ತನ್ನ ಸಂಕಲ್ಪ ವಿಕಲ್ಪರೂಪವಾದ ವ್ಯಾಪಾರವನ್ನು ಬಿಟ್ಟು ಶಾಂತವಾಗುತ್ತದೆ. ಹೀಗೆ ಮನಸ್ಸು ಶಾಂತವಾದೊಡನೆ ಆ ಶಿವಯೋಗಿಗೆ ಸರ್ವತ್ರ ಶಿವದರ್ಶನವಾಗುತ್ತದೆಯೇ ವಿನಃ ಶಿವನ ಹೊರತು ಬೇರಾವುದರ ದರ್ಶನವಾಗುವದಿಲ್ಲ.

ಯೋಗಶಾಸ್ತ್ರದಲ್ಲಿ ಪ್ರಾಣ ನಿರೋಧವನ್ನು ಮಾಡುವುದರ ಸಲುವಾಗಿ ಪೂರಕ– ರೇಚಕ ಮತ್ತು ಕುಂಭಕವೆಂಬ ವಿಧಾನವು ಪ್ರತಿಪಾದಿಸಲ್ಪಟ್ಟಿದೆ. ನಾವು ಪ್ರತಿದಿನವೂ ಮಾಡುವ ಉಸಿರಾಟದ ಕ್ರಿಯೆಗೆ ಶಾಸೋಚ್ಛ್ವಾಸವೆಂದು ಕರೆಯುತ್ತಾರೆ. ನಾಶಿಕೆಯ ಮುಖಾಂತರ ವಾಯುವನ್ನು ಒಳಗೆ ಸ್ವೀಕರಿಸುವುದು ಶ್ವಾಸವು, ಅದನ್ನೇ ಹೊರ ಬಿಡುವುದು ಉಚ್ಛ್ವಾಸವು. ಆ ಕ್ರಿಯೆಯು ನಾವು ತಾಯಿಯ ಗರ್ಭದಿಂದ ಹೊರ ಬಿದ್ದಾಗಿನಿಂದ ಪ್ರಾರಂಭಗೊಂಡು ಕೊನೆಗೆ ಭೂಗರ್ಭವನ್ನು ಸೇರುವವರೆಗೆ ಅರ್ಥಾತ್ ಮರಣ ಪರ್ಯಂತವಾಗಿ ಅಖಂಡವಾಗಿ ಸಾಗಿರುತ್ತದೆ. ಇದೊಂದು ಪ್ರಕೃತಿಸಿದ್ಧವಾದ ಸಹಜ ಕ್ರಿಯೆಯು. ಇದಕ್ಕಾಗಿ ವಿಶೇಷವಾಗಿ ಪ್ರಯತ್ನಿಸುವ ಕಾರಣವಿರುವುದಿಲ್ಲ. ಇದು ಪ್ರಾರಬ್ಧ ಕರ್ಮದ ನಿಯಂತ್ರಣದಲ್ಲಿ ಸಹಜವಾಗಿ ಸಾಗಿರುತ್ತದೆ. ಈ ಸಹಜವಾದ ಕ್ರಿಯೆಯೇ ಯೋಗಶಾಸ್ತ್ರೋಕ್ತ ಪದ್ಧತಿಯಂತೆ ನಡೆದಾಗ ಅದಕ್ಕೆ ಪ್ರಾಣಾಯಾಮ ವೆನ್ನುತ್ತಾರೆ. ಪ್ರಾಣಾಯಾಮದಲ್ಲಿ ಪೂರಕ, ರೇಚಕ ಮತ್ತು ಕುಂಭಕಗಳೆಂಬ ವಿಧಾನ ಗಳಿರುತ್ತವೆ. ಯೋಗಶಾಸ್ತ್ರ ಪದ್ಧತಿಯಂತೆ ಶ್ವಾಸವನ್ನು ತೆಗೆದುಕೊಳ್ಳುವದಕ್ಕೆ ಪೂರಕ ವೆಂತಲೂ ಅದನ್ನು ಹೊರಬಿಡುವ ವಿಧಾನಕ್ಕೆ ರೇಚಕವೆಂತಲೂ ಮತ್ತು ಆ ಪ್ರಾಣವನ್ನು ತಡೆ ಹಿಡಿಯುವುದಕ್ಕೆ ಕುಂಭಕವೆಂತಲೂ ಕರೆಯುತ್ತಾರೆ. ಪ್ರಾಣವನ್ನು ಪೂರಕ ವಿಧಿ ಯಿಂದ ಒಳಗೆ ತೆಗೆದುಕೊಂಡು ಅದನ್ನು ಹೊರಬಿಡದೆ ಕೆಲಕಾಲ ಒಳಗೆ ತಡೆಹಿಡಿದರೆ

ಅದಕ್ಕೆ ಅಂತಃಕುಂಭಕವೆನ್ನುವರು. ಇನ್ನೂ ಒಳಗಿನ ಪ್ರಾಣವನ್ನು ರೇಚಕವಿಧಿಯಿಂದ ಹೊರಹಾಕಿ ಕೆಲಕಾಲದವರೆಗೆ ಅದನ್ನು ಹೊರಗೇ ಸ್ತಂಭನಗೊಳಿಸುವುದಕ್ಕೆ ಬಹಿಃ ಕುಂಭಕವೆನ್ನುವರು. ಹೀಗೆ ಸಹಜವಾದ ಶ್ವಾಸೋಚ್ಛ್ವಾಸ ಕ್ರಿಯೆಯಲ್ಲಿ ಅಶಿಸ್ತಿನಿಂದ ಚಲಿಸುತ್ತಿರುವ ಪ್ರಾಣಕ್ಕೆ ರೇಚಕ ಪೂರಕಗಳ ಮೂಲಕ ಶಿಸ್ತಿನ ಸಂಚಾರದ ಅಭ್ಯಾಸ ಮಾಡಿಸುವುದೇ ಪ್ರಾಣಾಯಾಮವು.

ಈ ಪ್ರಾಣಾಯಾಮ ವಿಧಿಯನ್ನು ಗುರುಮುಖದಿಂದ ತಿಳಿದು ಅದರ ಅಭ್ಯಾಸ ವನ್ನು ಮಾಡಿದಾಗ ಯೋಗಸಾಧಕ ದೀರ್ಘಾಯುಷಿಯಾಗಬಲ್ಲನಲ್ಲದೆ ಮನಸ್ಸನ್ನೂ ಸಹ ನಿಯಂತ್ರಿಸಿಕೊಳ್ಳುವನು. ಶ್ವಾಸೋಚ್ಛ್ವಾಸವನ್ನು ನಿಯಂತ್ರಣವಿಲ್ಲದೆ ಬೇಕಾದ ಹಾಗೆ ಬಳಸಿದಾಗ ವ್ಯಕ್ತಿಯು ಅಲ್ಪಾಯುಷಿಯಾಗುತ್ತಾನೆ. ಅದನ್ನೇ ಪ್ರಾಣಾಯಾಮ ವಿಧಿ ಯಿಂದ ನಿಯಂತ್ರಿಸಿ ಬಳಸಿದಾಗ ದೀರ್ಘಾಯುಷಿಯಾಗುತ್ತಾನೆ. ಅಂತೆಯೇ ಯೋಗಿ ಗಳು ನೂರಾರು, ಸಾವಿರಾರು ವರ್ಷಗಳವರೆಗೆ ಬದುಕಿದ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಈ ಪೂರ್ವದಲ್ಲಿ ಹೇಳಿದ ಅಂತಃಕುಂಭಕ ವಿಧಿಯಿಂದ ಪ್ರಾಣವನ್ನು ನಿರೋಧ ಗೊಳಿಸಲಾಗಿ ಅದರ ಪೂರಕ–ರೇಚಕ ಕ್ರಿಯೆಗಳು ನಿಂತುಹೋಗಿ ಪ್ರಾಣವು ಶಾಂತ ವಾಗುತ್ತದೆ. ಪ್ರಾಣವು ಶಾಂತವಾದರೆ ಮನಸ್ಸಿನ ವೃತ್ತಿಗಳೂ ಸಹ ನಿಂತುಹೋಗಿ ಅದೂ ಸಹ ಶಾಂತವಾಗುತ್ತದೆ.

ಯೋಗಶಾಸ್ತ್ರದಲ್ಲಿ ಮುಖ್ಯವಾಗಿ ಮನಸ್ಸಿನ ಐದು ವೃತ್ತಿಗಳು ಪ್ರತಿಪಾದಿಸಲ್ಪ ಟ್ಟಿವೆ. ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಮತ್ತು ಸ್ಮೃತಿಗಳೆಂಬಿವೇ ಆ ಐದು ವೃತ್ತಿಗಳು. ಇವುಗಳನ್ನು ಕ್ಲಿಷ್ಟ ಮತ್ತು ಅಕ್ಲಿಷ್ಟವೆಂದು ಎರಡು ವಿಧವಾಗಿ ಪ್ರತಿ ಪಾದಿಸುತ್ತಾರೆ. ಇವುಗಳಲ್ಲಿ ಕ್ಲೇಶದಾಯಕವಾದವುಗಳು ಕ್ಲಿಷ್ಟಗಳೆಂತಲೂ ಕ್ಲೇಶದಾಯಕ ವಲ್ಲದವುಗಳು ಅಕ್ಲಿಷ್ಟವೆಂತಲೂ ಕರೆಯಿಸಿಕೊಳ್ಳುವವು. ಪ್ರಮಾತ್ಮಕವಾದ ಜ್ಞಾನ ವನ್ನುಂಟು ಮಾಡುವ ವೃತ್ತಿಗೆ ಪ್ರಮಾಣವೃತ್ತಿಯೆನ್ನುವರು. ಇದು ಶಬ್ದ ಸ್ಪರ್ಶಾದಿ ಪ್ರಮಾಜ್ಞಾನಕ್ಕೆ ಕಾರಣವಾದಾಗ ಕ್ಲಿಷ್ಟಪ್ರಮಾಣವೃತ್ತಿಯೆಂದು ಕರೆಯಲ್ಪಡುವುದು. ಲೌಕಿಕವಾದ ಶಬ್ದ–ಸ್ಪರ್ಶಾದಿ ಜ್ಞಾನವು ಮನುಷ್ಯನಿಗೆ ಅಲ್ಪಸುಖವನ್ನು ಕೊಟ್ಟರೂ ಅನಂತ ದುಃಖವನ್ನೇ ಕೊಡುತ್ತಿರುವ ಕಾರಣದಿಂದಾಗಿ ಅದಕ್ಕೆ ಕ್ಲಿಷ್ಟಪ್ರಮಾಣವೃತ್ತಿ ಯೆಂದು ಅನ್ನುವರು. ಇನ್ನು ಆತ್ಮಜ್ಞಾನ ವಿಷಯಕವಾದ ಪ್ರಮಾಣವೃತ್ತಿಗೆ ಅಕ್ಲಿಷ್ಟ ಪ್ರಮಾಣ ವೃತ್ತಿಯೆನ್ನುವರು. ಏಕೆಂದರೆ ಆತ್ಮಜ್ಞಾನವು ಅದಾರಿಗೂ ಕ್ಲೇಶವನ್ನುಂಟು ಮಾಡುವುದಿಲ್ಲ.

ಇನ್ನು ಮನಸ್ಸಿನ ಎರಡನೆಯ ವೃತ್ತಿಯೇ ವಿಪರ್ಯಯವೃತ್ತಿಯು. ವಸ್ತು ಒಂದು ವಿಧವಾಗಿದ್ದು ಮತ್ತೊಂದು ವಿಧವಾಗಿ ತೋರುತ್ತಿದ್ದರೆ ಅದಕ್ಕೆ ವಿಪರ್ಯಯವೃತ್ತಿ ಯೆಂದು ಕರೆಯುತ್ತಾರೆ. ಈ ವೃತ್ತಿಯೂ ಸಹ ಕ್ಲಿಷ್ಟ, ಅಕ್ಲಿಷ್ಟವೆಂದು ಎರಡು ಪ್ರಕಾರ ವಾಗಿರುತ್ತದೆ. ಹಗ್ಗದಲ್ಲಿ ತೋರುವ ಹಾವು, ಮೋಟಮರದಲ್ಲಿ ತೋರುವ ಕಳ್ಳ, ಸಿಂಪೆ ಯಲ್ಲಿ ತೋರುವ ಬೆಳ್ಳಿ ಇವೆಲ್ಲವುಗಳು ಕ್ಲಿಷ್ಟವಿಪರ್ಯಯ ವೃತ್ತಿಯ ಉದಾಹರಣೆಗಳು. ಈ ವೃತ್ತಿಯಿಂದ ಕ್ಲೇಶ ಉಂಟಾಗುವ ಕಾರಣ ಇವುಗಳಿಗೆ ಕ್ಲಿಷ್ಟ ವಿಪರ್ಯಯವೃತ್ತಿ

ಯೆಂದು ಅನ್ನುವರು. ಶಿಲಾಮಯ ಮೂರ್ತಿಗಳಲ್ಲಿ ದೇವತ್ವವನ್ನು ಭಾವಿಸುವದೂ ಸಹ ಒಂದು ವಿಪರ್ಯಯ ವೃತ್ತಿಯೇ. ಆದರೆ ಈ ಭಾವನೆಯಿಂದ ಒಂದು ವಿಲಕ್ಷಣವಾದ ಆನಂದವು ಪ್ರಾಪ್ತವಾಗೋಣದರಿಂದ ಇದಕ್ಕೆ ಅಕ್ಲಿಷ್ಟ ವಿಪರ್ಯಯ ವೃತ್ತಿಯೆಂದು ಹೆಸರು.

ಮನಸ್ಸಿನ ಮೂರನೆಯದಾದ ವೃತ್ತಿಯೇ ವಿಕಲ್ಪವು. ಇಲ್ಲದ ವಸ್ತುವಿನ ಬಗ್ಗೆ ಮನಸ್ಸಿನಲ್ಲಿ ಉಂಟಾಗುವ ವೃತ್ತಿಯೇ ವಿಕಲ್ಪಾತ್ಮಕವಾದುದು. ಇದಕ್ಕೆ ಮನೋರಾಜ್ಯ ವೆಂತಲೂ ಕರೆಯಬಹುದು. ಶೇಖ ಮಹಮ್ಮದನ ಕಥೆಯು ಇದಕ್ಕೆ ಉದಾಹರಣೆ ಯಾಗಿದೆ. ಶೇಖಮಹಮ್ಮದನು ತನ್ನ ಮನೋರಾಜ್ಯದಲ್ಲಿ ಮುಳುಗಿದಾಗ ತನ್ನ ತಲೆಯ ಮೇಲೆ ಹೊತ್ತುಕೊಂಡ ತುಪ್ಪದ ಕೊಡವನ್ನು ಕೆಳಗೆ ಕೆಡವಿ ಕ್ಲೇಶವನ್ನು ಹೊಂದಿದ್ದು ಕಥೆ ಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ಅಂತೆಯೇ ಇದಕ್ಕೆ ಕ್ಲಿಷ್ಟ ವಿಕಲ್ಪವೃತ್ತಿಯೆನ್ನು ತ್ತಾರೆ. ಇನ್ನು ತನ್ನ ಮನಸ್ಸಿನಲ್ಲಿ ಲೋಕಕಲ್ಯಾಣದ ಭಾವನೆಗಳನ್ನು ತುಂಬಿಕೊಂಡು ಅದಕ್ಕನುಕೂಲವಾಗಿ ತನ್ನ ಮನಸ್ಸಿನಲ್ಲಿ ತಾನು ವ್ಯಾಪಾರವನ್ನು ಮಾಡಿ ಧನವನ್ನು ಸಂಪಾದಿಸಿ ಅದರಿಂದ ಮಠ–ಮಂದಿರ–ವಿದ್ಯಾಲಯ–ಆರೋಗ್ಯ ಕೇಂದ್ರಾದಿಗಳನ್ನು ನಿರ್ಮಾಣ ಮಾಡುವುದರ ಬಗ್ಗೆ ಮನೋರಾಜ್ಯವುಂಟಾಗುತ್ತಿದ್ದರೆ ಆ ವೃತ್ತಿಯಿಂದ ತನ ಗಾಗಲೀ ಅನ್ಯರಿಗಾಗಲೀ ಯಾವುದೇ ವಿಧವಾದ ಕ್ಲೇಶವುಂಟಾಗದ ಕಾರಣ ಅದಕ್ಕೆ ಅಕ್ಲಿಷ್ಟ ವಿಕಲ್ಪವೃತ್ತಿಯೆನ್ನುವರು.

ಇನ್ನು ನಾಲ್ಕನೆಯದಾದ ವೃತ್ತಿಯೇ ನಿದ್ರಾವೃತ್ತಿಯು. ಇಲ್ಲಿ ನಿದ್ರೆಯೆಂದರೆ ಸ್ವಪ್ನಾವಸ್ಥೆಯೆಂದರ್ಥ. ನಮಗೆ ಬೀಳುವ ಸ್ವಪ್ನಗಳೂ ಸಹ ಕೆಲವು ಕ್ಲೇಶದಾಯಕಗಳು ಇನ್ನು ಕೆಲವು ಅಕ್ಲೇಶದಾಯಕಗಳು ಇರುತ್ತವೆ. ಸ್ವಪ್ನದಲ್ಲಿ ಭೂತ–ಪ್ರೇತಾದಿಗಳ ದರ್ಶನ, ಅನಿಷ್ಟ ಘಟನೆಗಳು ಸಂಭವಿಸಿದಾಗ ಅದರಿಂದ ನಮ್ಮ ಮನಸ್ಸಿಗೆ ಕ್ಲೇಶವುಂಟಾ ಗುವ ಕಾರಣ ಆ ಸ್ವಪ್ನಕ್ಕೆ ಕ್ಲಿಷ್ಟನಿದ್ರಾವೃತ್ತಿಯೆಂದು ಅನ್ನುವರು. ಇನ್ನು ಸ್ವಪ್ನದಲ್ಲಿ ತೀರ್ಥ ಯಾತ್ರೆ, ದೇವದರ್ಶನ, ಮುಂತಾದ ಅಭೀಷ್ಟ ಘಟನೆಗಳು ಸಂಭವಿಸಿದಾಗ ಅದು ಸುಖದಾಯಕವಾಗಿರೋಣದರಿಂದ ಅದಕ್ಕೆ ಅಕ್ಲಿಷ್ಟ ನಿದ್ರಾವೃತ್ತಿಯೆಂದು ಕರೆಯುತ್ತಾರೆ.

ಇದೇ ಪ್ರಕಾರವಾಗಿ ಮನಸ್ಸಿನ ಐದನೆಯದಾದ ವೃತ್ತಿಯೇ ಸ್ಮೃತಿಯು. ಸಂಸ್ಕಾರ ಜನ್ಯ ಜ್ಞಾನಕ್ಕೆ ಸ್ಮೃತಿಯನ್ನುತ್ತಾರೆ. ನಾವು ಪ್ರತ್ಯಕ್ಷವಾಗಿ ಅನುಭವಿಸಿದ ಪ್ರತಿಯೊಂದು ಘಟನೆಗಳು ನಮ್ಮ ಮನಸ್ಸಿನ ಮೇಲೆ ತಮ್ಮ ಸಂಸ್ಕಾರವನ್ನುಂಟು ಮಾಡುತ್ತವೆ. ಈ ಸಂಸ್ಕಾರವು ಮನಸ್ಸಿನಲ್ಲಿ ಸಂಗ್ರಹಿತವಾಗಿರುತ್ತದೆ. ಆ ಸಂಸ್ಕಾರಗಳೇ ಪುನಃ ಕಾಲಾಂತರ ದಲ್ಲಿ ಉದ್ಬೋಧಗೊಂಡು ಸ್ಮೃತಿಗೆ ಕಾರಣಗಳಾಗಿರುತ್ತವೆ. ಈ ಸ್ಮೃತಿ ಜ್ಞಾನವೂ ಸಹ ಕ್ಲಿಷ್ಟ–ಅಕ್ಲಿಷ್ಟವೆಂದು ಎರಡು ವಿಧವಾಗಿ ಇರುತ್ತದೆ. ಅನುಕೂಲ ವ್ಯಕ್ತಿಯ ಸ್ಮರಣೆಯು ಸುಖದಾಯಕವಾಗಿರುವುದರಿಂದ ಅದಕ್ಕೆ ಅಕ್ಲಿಷ್ಟ ಸ್ಮೃತಿಯೆಂದು ಕರೆದರೆ ಪ್ರತಿಕೂಲ ವ್ಯಕ್ತಿಯ ಸ್ಮರಣೆಯಿಂದ ದುಃಖವುಂಟಾಗುವ ಕಾರಣದಿಂದಾಗಿ ಅದಕ್ಕೆ ಕ್ಲಿಷ್ಟ ಸ್ಮೃತಿ ಯೆಂದು ಕರೆಯುತ್ತಾರೆ. ಇನ್ನು ಲೌಕಿಕವಾದ ವ್ಯಕ್ತಿಯು ಒಮ್ಮೆ ಅನುಕೂಲವಾದವನು ಮತ್ತೊಮ್ಮೆ ಪ್ರತಿಕೂಲನೂ ಆಗಬಹುದು. ಆದ್ದರಿಂದ ಇಂದು ಆಗುವ ಓರ್ವ ವ್ಯಕ್ತಿಯ

ಸ್ಮೃತಿಯು ಸುಖದಾಯಕವಾಗಿ ತೋರಿದರೂ ಕಾಲಾಂತರವರೆಗೆ ಅವನ ಸ್ಮೃತಿಯೇ ನಮಗೆ ದುಃಖದಾಯಕವಾಗಿ ಮಾರ್ಪಡುವುದು. ಆದ್ದರಿಂದ ಲೌಕಿಕ ವ್ಯಕ್ತಿಗಳ ಸ್ಮೃತಿಗಳನ್ನೆಲ್ಲ ಕ್ಲಿಷ್ಟಸ್ಮೃತಿಗಳೆಂತಲೇ ಪರಿಗಣಿಸಿ ಭಗವಂತನ ಸ್ಮರಣೆಯೊಂದನ್ನೇ ಅಕ್ಲಿಷ್ಟ ಸ್ಮೃತಿಯೆಂಬುದಾಗಿ ಕರೆಯುವುದೂ ಸಹ ಉಂಟು.

ನಮ್ಮಲ್ಲಿರುವ ಮನಸ್ಸು ಈ ಮೇಲೆ ವಿವರಿಸಿದ ಪಂಚವೃತ್ತಿಗಳ ರೂಪಾತ್ಮಕ ವಾಗಿರುತ್ತದೆ. ಪ್ರಾಣಾನುಗ್ರಹಸ್ಥಲದ ಶಿವಯೋಗಿಯು ಯಾವಾಗ ತನ್ನ ಪ್ರಾಣವನ್ನು ನಿರೋಧಿಸಿ ಅದರ ಬಲದಿಂದಲೇ ಮನಸ್ಸನ್ನೂ ಸಹ ನಿರೋಧಗೊಳಿಸಲಾಗಿ ಮೇಲೆ ಹೇಳಿದ ಮನಸ್ಸಿನ ವೃತ್ತಿಗಳೆಲ್ಲ ನಿಂತು ಹೋಗಿ ಮನಸ್ಸು ಶಾಂತವಾಗುವುದು. ಹೀಗೆ ಮನಸ್ಸು ಶಾಂತವಾದರೆ ಅದಕ್ಕೆ ಸರ್ವತ್ರ ಶಿವದರ್ಶನವಾಗುವುದೇ ವಿನಃ ಶಿವನ ಹೊರತಾಗಿ ಬೇರಾವುದೂ ತೋರುವುದಿಲ್ಲ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೨ ಜುಲೈ ೧೯೯೪

(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)

■■

ಆಶೀರ್ವಚನ-೩

# ಪ್ರಾಣಾನುಗ್ರಹಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಸುಕ್ಷೇತ್ರವಾದ ಸೊನ್ನಲಾಪುರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ನಿತ್ಯ ನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣಮಾಡುತ್ತ ಬಂದಿದ್ದೀರಿ. ನಿನ್ನೆಯದಿನ ಪ್ರಾಣಾನುಗ್ರಹಸ್ಥಲದ ಕೆಲವು ವಿಷಯಗಳನ್ನು ತಿಳಿದುಕೊಂಡಿದ್ದೀರಿ ಅದೇ ಸ್ಥಲ ಕುರಿತು ಇಂದೂ ಸಹ ವಿವರಿಸಲಾಗುತ್ತಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಾಣಾನುಗ್ರಹಸ್ಥಲದಲ್ಲಿ ಪ್ರಾಣದ ಮಹತ್ತ್ವವನ್ನು ಕುರಿತು ಪುನಃ-

ಪ್ರಾಣ ಏವ ಮನುಷ್ಯಾಣಾಂ ದೇಹಧಾರಣಕಾರಣಮ್ ।
ತದಾಧಾರಃ ಶಿವಃ ಪ್ರೋಕ್ತಃ ಸರ್ವಕಾರಣಕಾರಣಮ್ ॥

(ಸಿ. ಶಿ. ೧೭-೨೮)

ಈ ವಿಧವಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ಮನುಷ್ಯರೆಲ್ಲ ದೇಹವನ್ನು ಧರಿಸಿಕೊಂಡಿರುವುದಕ್ಕೆ ಆ ದೇಹದಲ್ಲಿಯ ಪ್ರಾಣವೇ ಕಾರಣವಾಗಿರುತ್ತದೆ. ಆ ಪ್ರಾಣಕ್ಕೆ ಸರ್ವಕ್ಕೂ ಕಾರಣನಾದ ಶಿವನು ಆಧಾರನಾಗಿರುತ್ತಾನೆ.

ಜಗತ್ತಿನಲ್ಲಿಯ ಪ್ರಾಣಿಗಳೆಲ್ಲ ಬದುಕಿಕೊಂಡು ವ್ಯವಹರಿಸುತ್ತಿರುವುದಕ್ಕೆ ಪ್ರಾಣವೇ ಕಾರಣವಾಗಿರುತ್ತದೆ. ಶರೀರದಲ್ಲಿ ಪ್ರಾಣಪ್ರವೇಶವಾಗಲು ಜನ್ಮವೆಂತಲೂ ಅದು ಶರೀರವನ್ನು ತೊರೆದು ಹೋಗಲು ಮರಣವೆಂತಲೂ ಕರೆಯುತ್ತಾರೆ. ಲೌಕಿಕ ವ್ಯವಹಾರದಲ್ಲಿ ತಾಯಿಯ ಗರ್ಭದಿಂದ ಶಿಶುವು ಹೊರಬಂದಾಗ ಮಗುವಿನ ಜನ್ಮವಾಯಿತು ಎಂದು ಹೇಳುತ್ತಾರೆ. ಸ್ಥೂಲದೃಷ್ಟಿಯಿಂದ ಇದು ಸರಿಯೆನಿಸಿದರೂ ಸೂಕ್ಷ್ಮವಾಗಿ ವಿಚಾರ ಮಾಡಲಾಗಿ ತಾಯಿಯ ಗರ್ಭದಲ್ಲಿ ಶಿಶುವಿನ ಶರೀರದ ಅವಯವಗಳೆಲ್ಲ ರೂಪುಗೊಂಡು ಪುಷ್ಟಿಗೊಂಡ ಬಳಿಕ ಏಳನೇ ತಿಂಗಳಲ್ಲಿ ಆ ಪಿಂಡದೊಳಗೆ ಪ್ರಾಣವು ಪ್ರವೇಶವಾಗುವುದು. ಆಗಲೇನೇ ಆ ದೇಹದಲ್ಲಿ ಚೇತನ ಶಕ್ತಿಯು ಒಡಮೂಡುವುದು. ಹೀಗೆ ಗರ್ಭಸ್ಥ ಶಿಶುವಿನ ಶರೀರದಲ್ಲಿ ಯಾವಾಗ ಪ್ರಾಣಪ್ರವೇಶವಾಯಿತೋ ಆ ಕ್ಷಣವೇ-

ಅದರ ಜನ್ಮ ಕ್ಷಣವೆಂಬುದಾಗಿ ತಿಳಿದುಕೊಳ್ಳಬೇಕು. ಇದು ವೈಜ್ಞಾನಿಕವೂ, ಶಾಸ್ತ್ರ ಸಮ್ಮತವೂ ಆದ ವಿಚಾರವು. ಶಾಸ್ತ್ರಕಾರರು ಅನೇಕ ಕಡೆಗಳಲ್ಲಿ ಪಿಂಡೋತ್ಪತ್ತಿಯ ವಿಚಾರವನ್ನು ವಿವರಿಸಿದ್ದನ್ನು ಕಾಣಬಹುದು. ಕರ್ನಾಟಕದಲ್ಲಿ ಅತ್ಯಂತ ಪ್ರಖ್ಯಾತ ರಾಗಿರುವ, ಶ್ರೀಮನ್ನಿಜಗುಣ ಶಿವಯೋಗಿಗಳು 'ಪರಮಾನುಭವ ಬೋಧೆ'ಯ ಮೊದಲನೇ ಸಂಧಿಯಲ್ಲಿ ಹಾಗೂ 'ಪರಮಾರ್ಥಗೀತೆ'ಯ ನಾಲ್ಕನೇ ಗತಿಯಲ್ಲಿ ಪಿಂಡೋತ್ಪತ್ತಿಯ ವಿಚಾರವನ್ನು ಬಹು ವಿಸ್ತಾರವಾಗಿ ವಿವರಿಸಿದ್ದಾರೆ. ಅವರ ವಿಚಾರದ ಪ್ರಕಾರವಾಗಿ ನಾವು ಸೇವಿಸುವ ಆಹಾರವು ಉದರದಲ್ಲಿರುವ ಜಠರಾಗ್ನಿಯಲ್ಲಿ ಪಾಕ ಗೊಳ್ಳುತ್ತ ಏಳೇಳು ದಿವಸಕ್ಕೆ ಹೊಸ ಹೊಸ ರೂಪವನ್ನು ತಳೆಯುತ್ತ ಹೋಗುತ್ತದೆ. ಅವು ಗಳಿಗೆ ಸಪ್ತಧಾತುಗಳು ಎಂದು ಕರೆಯುವರು. ನಾವು ಇಂದು ಸೇವಿಸಿದ ಅನ್ನ-ಜಲಾದಿ ಗಳು ಏಳುದಿನಗಳವರೆಗೆ ಪಕ್ವವಾಗಿ ರಸರೂಪವನ್ನು ತಳೆಯುತ್ತವೆ. ಆ ರಸವು ಮತ್ತೆ ಏಳುದಿನ ಪಾಕಗೊಂಡಾಗ ರುಧಿರವೆನಿಸುವುದು. ಆ ರುಧಿರವು ಮುಂದೇಳುದಿನ ಪಾಕ ಗೊಂಡಾಗ ಮಾಂಸರೂಪವನ್ನು ತಾಳುವುದು. ಆ ಮಾಂಸವು ಮತ್ತೇಳುದಿನ ಪಾಕ ಗೊಂಡಾಗ ಮೇಧಸ್ಸು ಎಂದು ಕರೆಯಲ್ಪಡುವುದು. ಈ ಮೇಧಸ್ಸು ಪುನಃ ಏಳು ದಿನ ಪಾಕಗೊಂಡ ಬಳಿಕ ಅಸ್ಥಿ ಎಂದು ಕರೆಯಿಸಿಕೊಳ್ಳುವುದು. ಅಸ್ಥಿಯು ಪಕ್ವಗೊಂಡು ಮುಂದೇಳುದಿನಕ್ಕೆ ಮಜ್ಜೆಯ ರೂಪವನ್ನು ತಾಳುವುದು. ಆ ಮಜ್ಜೆಯೇ ಮುಂದೇಳು ದಿವಸಕ್ಕೆ ಪಕ್ವಗೊಂಡು ರೇತಸ್ಸಿನ ಸ್ವರೂಪ ತಾಳುವುದು.

ಈ ರೀತಿಯಾಗಿ ನಾವು ಸೇವಿಸಿದ ಅನ್ನವು ಕ್ರಮವಾಗಿ ಪಾಕಗೊಳ್ಳುತ್ತ ರಸ, ರಕ್ತ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ ಮತ್ತು ರೇತಸ್ಸುಗಳೆಂಬ ರೂಪವನ್ನು ತಳೆಯುತ್ತ ಹೋಗುತ್ತದೆ. ಇಂದು ಸೇವಿಸಿದ ಅನ್ನವು ಸುಮಾರು ನಾಲ್ವತ್ತೊಂಭತ್ತನೇ ದಿವಸಕ್ಕೆ ತಂದೆಯ ಶರೀರದಲ್ಲಿ ರೇತಸ್ಸಾಗಿ ಮತ್ತು ತಾಯಿಯ ಶರೀರದಲ್ಲಿ ರಜಸ್ಸಾಗಿ (ಶೋಣಿತ ವಾಗಿ) ಪರಿಣಮಿಸುತ್ತದೆ. ಇವೆರಡೂ ಅವರೀರ್ವರ ರತಿಯೋಗದಲ್ಲಿ ಒಂದಾಗಿ ಮಾತೆಯ ಉದರದೊಳು ನೆಲೆನಿಲ್ಲುವವು. ಮುಂದೆ ಈ ರೇತೋ-ರುಧಿರಗಳು ಕೂಡಿದ ಮೊದಲನೆಯ ದಿನದಂದು ಕಲಲದಾಕೃತಿಯಾಗಿ, ಮುಂದೆ ಐದನೇ ದ್ದಿವಸಕ್ಕೆ ಬುದ್ಬುಧಾಕೃತಿಯಾಗಿ, (ಗುರುಳೆಯಾಕಾರವಾಗಿ) ಮುಂದೆ ಹತ್ತು ದಿನಕ್ಕೆ ಕಂದಾಕೃತಿ ಯಾಗಿ, (ಗಡ್ಡೆಯಾಕಾರವಾಗಿ), ಮುಂದೆ ಹದಿನೈದು ದಿವಸಕ್ಕೆ ದಂಡಾಕೃತಿಯಾಗಿ ರೂಪುಗೊಳ್ಳುವುದು. ಮುಂದೆ ಒಂದು ತಿಂಗಳಿಗೆ ಆ ದಂಡಾಕೃತಿಯಲ್ಲಿಯೇ ಶಿರಸ್ಸು ತಯಾರಾಗುವುದು. ಮುಂದೆ ಎರಡು ತಿಂಗಳಿಗೆ ಬಾಹುಗಳು ತೋರ್ಪಡುವವು. ಮೂರನೇ ತಿಂಗಳಿಗೆ ಉದರವು ರೂಪಗೊಳ್ಳುವುದು. ನಾಲ್ಕನೆಯ ತಿಂಗಳಲ್ಲಿ ಪಾದಾದಿ ಸರ್ವಾಂಗಗಳು ಒಡಮೂಡುವವು. ಮುಂದೆ ಐದನೆಯ ತಿಂಗಳಲ್ಲಿ ರೋಮಾಳಿಗಳು ನಿರ್ಮಾಣಗೊಳ್ಳುವವು. ಮುಂದೆ ಏಳನೆಯ ತಿಂಗಳಲ್ಲಿ ಆ ಪಿಂಡದೊಳಗೆ ಪ್ರಾಣಾದಿಗಳು ಪ್ರವೇಶಿಸುವವು. ಮುಂದೆ ಎಂಟನೆಯ ತಿಂಗಳಲ್ಲಿ ಆ ಗರ್ಭಸ್ಥ ಶಿಶುವಿಗೆ ಜನ್ಮ-ಜನ್ಮಾಂತರಗಳ ಜ್ಞಾನವು ಉದಿಸುವುದು. ಒಂಭತ್ತು ತಿಂಗಳು ಪೂರ್ಣವಾದ ಬಳಿಕ ಆ ಮಗುವಿನ ಹೆರಿಗೆಯಾಗುವುದು. ಇದೊಂದು ಪ್ರಕೃತಿ ಸಿದ್ಧವಾದ ಶಿಶುವಿನ ಜನ್ಮಕ್ರಮವು.

ಇಲ್ಲಿ ಶಿಶುವಿನ ಜನ್ಮವೆಂದರೆ ಅದು ತಾಯಿಯ ಗರ್ಭದಿಂದ ಹೊರಬರುವ ಕ್ರಿಯೆಯೆಂಬುದಾಗಿ ಸಾಮಾನ್ಯವಾಗಿ ತಿಳಿಯಲ್ಪಟ್ಟಿದ್ದರೂ ಸೂಕ್ಷ್ಮವಾಗಿ ವಿಚಾರಿಸಲಾಗಿ, ಎಂದು ಆ ಪಿಂಡದಲ್ಲಿ ಪ್ರಾಣಾದಿಗಳು ಪ್ರವೇಶವನ್ನು ಪಡೆದುವೋ ಅಂದೇ ಆ ಶಿಶುವಿನ ಜನ್ಮವೆಂಬುದಾಗಿ ಅರ್ಥೈಸಿಕೊಳ್ಳಬೇಕು. ಒಬ್ಬ ಗರ್ಭವತಿಯಾದ ಹೆಣ್ಣುಮಗಳಿಗೆ ಆರು ತಿಂಗಳು ಪೂರ್ಣವಾಗಿ ಏಳನೇ ತಿಂಗಳು ಪ್ರಾರಂಭವಾಗಲು ಅವಳಿಗೆ ಹೂ ಮುಡಿಸುವ ಅಥವಾ ಸೀಮಂತ ಕಾರ್ಯವನ್ನು ಮಾಡುತ್ತಾರೆ. ಏಳನೇ ತಿಂಗಳಲ್ಲಿ ಮಾಡುವ ಈ ಕ್ರಿಯೆಯು ಗರ್ಭಸ್ಥ ಶಿಶುವಿನ ಶರೀರದಲ್ಲಿ ಪ್ರಾಣಾದಿಗಳ ಪ್ರವೇಶದ ಸಂಕೇತ ರೂಪವಾಗಿರುತ್ತದೆ. ಗರ್ಭವತಿಯಾದ ಹೆಣ್ಣುಮಗಳನ್ನು ಬಂಧುಬಾಂಧವರು ಇಷ್ಟ ಮಿತ್ರಾದಿಗಳು ತಮ್ಮ ತಮ್ಮ ಮನೆಗೆ ಬರಮಾಡಿಕೊಂಡು ಅವಳಿಗೆ ಸುಗ್ರಾಸ ಭೋಜನವನ್ನು ಮಾಡಿಸಿ ಪಟ್ಟೆ–ಪೀತಾಂಬರವನ್ನು ಉಡಿಸಿ ಸಂತೋಷಪಡಿಸುತ್ತಾರೆ. ಇದು ಕೇವಲ ಅವಳಿಗಾಗಿ ಮಾಡುವುದಲ್ಲ, ಆದರೆ ಅವಳ ಗರ್ಭಸ್ಥ ಶಿಶು ದಷ್ಟ–ಪುಷ್ಟವಾಗಿ ಸರ್ವಾಂಗ ಪರಿಪೂರ್ಣವಾಗಿ ಬೆಳೆಯಲೆಂಬುದಾಗಿರುತ್ತದೆ.

ಶಿಶುವಿನ ಶರೀರದಲ್ಲಿ ಪ್ರಾಣಪ್ರವೇಶವಾದ ನಂತರ ಪ್ರಸವದವರೆಗಿನ ಉಳಿದಿರುವ ಎರಡು ತಿಂಗಳಲ್ಲಿ ಆ ಶಿಶುವು ಸರ್ವಾಂಗಪರಿಪೂರ್ಣವಾಗಿ ಬೆಳೆಯುತ್ತದೆ. ಮುಂದೆ ಇದಕ್ಕೆ ಎಂಟನೇ ತಿಂಗಳು ಪ್ರಾಪ್ತವಾಗಲು ಜನ್ಮಜನ್ಮಾಂತರಗಳ ಜ್ಞಾನವಾಗಿ ಆ ಎಲ್ಲ ಜನ್ಮಗಳಲ್ಲಿ ದುಃಖದ ಸ್ಮೃತಿಯುಂಟಾಗಿ ಹಾಗೂ ಜನ್ಮಿಸಿದ ನಂತರ ಅನುಭವಿಸಬೇಕಾಗಿರುವ ಭಾವೀದುಃಖಗಳ ಪರಿಜ್ಞಾನವಾಗಿ ಆ ಶಿಶುವು ಭಯಗೊಂಡು ಜನ್ಮಿಸುವುದಕ್ಕಿಂತ ಸಾಯುವುದೇ ಲೇಸೆಂಬ ತೀವ್ರವಾದ ಮುಮುರ್ಷಾಭಾವದಿಂದ ಕೂಡಿಕೊಂಡು ಅಂದರೆ ಆ ಶಿಶುವಿನ ಮನಸ್ಸಿನಲ್ಲಿ ಸಾಯಬೇಕೆನ್ನುವ ಉತ್ಕಟವಾದ ಬಯಕೆಯು ಉತ್ಪನ್ನವಾಗುತ್ತದೆ. ಆದ್ದರಿಂದಲೇ ಆಕಸ್ಮತ್ತಾಗಿ ಎಂಟನೇ ತಿಂಗಳಲ್ಲಿ ಪ್ರಸವ ಸಂಭವಿಸಿದರೆ ಆ ಶಿಶುವು ಸತ್ತುಹೋಗುವುದು. ಇದು ಲೋಕಾನುಭವ ಸಿದ್ಧವಾದ ವಿಷಯವು.

ಗರ್ಭಸ್ಥ ಶಿಶುವಿನ ಈ ಮನೋವಿಜ್ಞಾನವನ್ನರಿತ ವೀರಶೈವಾಚಾರ್ಯರು ಆ ಶಿಶುವಿನ ನಿಮಿತ್ತವಾಗಿ ತಾಯಿಯ ಗರ್ಭಕ್ಕೆ ಲಿಂಗಧಾರಣೆಯನ್ನು ಮಾಡಿ ತಾಯಿಗೆ ಮಂತ್ರೋಪದೇಶವನ್ನು ಕೊಡುವ ವೈಜ್ಞಾನಿಕ ವಿಧಾನವನ್ನು ಕಂಡುಹಿಡಿದಿದ್ದಾರೆ. ಈ ವಿಧವಾದ ಈ ಧಾರ್ಮಿಕ ಕ್ರಿಯೆಯು ಮಗುವಿನ ಭೀತಿಯನ್ನು ಹೊಡೆದೋಡಿಸಿ ಅದಕ್ಕೆ ಧೈರ್ಯವನ್ನು ತಂದುಕೊಡುತ್ತದೆ. ಅಂದರೆ ಸರ್ವ ಅನಿಷ್ಟಗಳನ್ನು ದೂರಮಾಡುವ ಇಷ್ಟಾರ್ಥವನ್ನು ದೊರಕಿಸಿಕೊಡುವ ಲಿಂಗವೇ ಇಷ್ಟಲಿಂಗವಾದ ಕಾರಣ ಅದರ ಸಂಬಂಧವು ತಾಯಿಯ ಮುಖಾಂತರ ಶಿಶುವಿಗೆ ಪ್ರಾಪ್ತವಾಗೋಣದರಿಂದ ಶಿಶುವಿನ ಮನಸ್ಸಿನಲ್ಲಿ ಬಂದಿರುವ ಅನಿಷ್ಟದಾಯಕವಾಗಿರುವ ಭೀತಿಯು ತೊಲಗಿ ಹೋಗುವುದು. ತಾಯಿಗೆ ಮಾಡಿದ ಉಪದೇಶಾದಿ ಸಂಸ್ಕಾರಗಳು ಗರ್ಭಸ್ಥ ಮಗುವಿನ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡುವುದು ಒಂದು ವೈಜ್ಞಾನಿಕವಾದ ಕ್ರಿಯೆಯು. ಹಿಂದೆ ಮಹಾಭಾರತದ ಕಾಲದಲ್ಲಿ ಸುಭದ್ರೆಯ ಗರ್ಭದಲ್ಲಿದ್ದ ಶಿಶು ಅಭಿಮನ್ಯುವು

ಶ್ರೀಕೃಷ್ಣನಿಂದ ಸುಭದ್ರೆಗೆ ಉಪದೇಶಿಸಲ್ಪಟ್ಟ ಚಕ್ರವ್ಯೂಹದ ಭೇದನೆಯನ್ನು ತಿಳಿದು ಕೊಂಡಿದ್ದನೆಂಬುದು ಜನ ಜನಿತವಾದ ಸಂಗತಿಯಾಗಿದೆ.

ಇಂದು ನಾವು ಇಪ್ಪತ್ತನೇ ಶತಮಾನವನ್ನು ದಾಟಿ ಇಪ್ಪತ್ತೊಂದನೇ ಶತಮಾನದಲ್ಲಿ ಪಾದಾರ್ಪಣ ಮಾಡಿದ್ದೇವೆ. ಸದ್ಯದ ಪರಿಸ್ಥಿತಿಯಲ್ಲಿ ವಿಕಾಸಗೊಂಡಿರುವ ವಿಜ್ಞಾನವನ್ನು ನೋಡಿದಾಗ ಪ್ರತಿಯೊಬ್ಬರೂ ಆಚ್ಚರಿಪಡುವಂಥಾದ್ದೇನೋ ನಿಜ. ಆದರೆ ಇಂದು ವಿಕಸಿತವಾಗಿರುವ ಈ ವಿಜ್ಞಾನವು ಈ ಹಿಂದೆಯೂ ಸಹ ವಿಕಸಿತವಾಗಿತ್ತೆಂಬುದನ್ನು ನಾವು ನಂಬಬೇಕಾಗುತ್ತದೆ. ವಿಶ್ವದ ವ್ಯವಹಾರವು ಯಾವಾಗಲೂ ಚಕ್ರಾಕಾರವಾಗಿರುತ್ತದೆ. ವಿಜ್ಞಾನಿಗಳ ಬುದ್ಧಿಕುಶಲತೆಯಿಂದ ನಿರ್ಮಾಣಗೊಂಡಿರುವ ಇಂದಿನ ಯಂತ್ರಗಳು ನಮ್ಮ ದೇಹದ ಒಳ–ಹೊರಗಿನ ಅವಯವಗಳನ್ನೆಲ್ಲ ಸ್ಪಷ್ಟವಾಗಿ ಪರೀಕ್ಷಿಸುವ ಸಾಮರ್ಥ್ಯವನ್ನು ಹೊಂದಿರುತ್ತವೆ. ಇಂದಿನ ವೈದ್ಯರುಗಳು 'ಸೋನೋ ಗ್ರಾಫಿ' ಮುಖಾಂತರ ಗರ್ಭವನ್ನು ಪರೀಕ್ಷಿಸುತ್ತಿದ್ದರೆ, ಶ್ರೀಮನ್ನಿಜಗುಣ ಶಿವಯೋಗಿಗಳು ವರ್ಣಿಸಿದ ಪಿಂಡೋತ್ಪತ್ತಿಯ ವಿವರವನ್ನು ಕೇಳಿದಾಗ ಅವರೆಂಥ ವಿಜ್ಞಾನಿಗಳಾಗಿದ್ದರೆಂಬುದನ್ನು ಊಹಿಸ ಬಹುದಾಗಿದೆ.

ಈ ಪಿಂಡೋತ್ಪತ್ತಿಯ ವಿಚಾರವು ಛಾಂದೋಗ್ಯೋಪನಿಷತ್ತಿನಲ್ಲಿ ಬರುವ ಸಪ್ತಾಗ್ನಿ ವಿದ್ಯಾಪ್ರಕರಣದಲ್ಲಿ ''ಸಪ್ತಮ್ಯಾಮಾಹುತಾವಾಪಃ ಪುರುಷವಚಸೋಭವಂತಿ'' ಎಂಬು ದಾಗಿ ಹೇಳಿದ್ದಾರೆ. ಇಲ್ಲಿ ವಿವರಿಸಿದಂತೆ ಸ್ತ್ರೀಯೋನಿಯೆಂಬ ಅಗ್ನಿಕುಂಡದಲ್ಲಿ ಪುರುಷ ವೀರ್ಯವೆಂಬ ಆಜ್ಯ (ತುಪ್ಪ)ವನ್ನು ಹೋಮ ಮಾಡಲಾಗಿ ಅದುವೇ ಮುಂದೆ ಗರ್ಭ ದಲ್ಲಿ ಕಲಲಾದಿ ಆಕೃತಿಗಳನ್ನು ತಾಳುತ್ತ ಕೊನೆಗೆ ಶಿಶು ಆಕಾರವನ್ನು ಪಡೆದು ಜನ್ಮ ತಾಳುತ್ತದೆ. ವೇದದ ಕೊನೆಯ ಭಾಗವಾದ ಉಪನಿಷತ್ತಿನಲ್ಲಿ ಬಂದಿರುವ ಈ ಪಿಂಡೋತ್ಪತ್ತಿಯ ವಿಚಾರವನ್ನು ತಿಳಿದುಕೊಂಡಾಗ ಸಹಸ್ರ ಸಹಸ್ರ ವರ್ಷಗಳ ಪೂರ್ವ ದಲ್ಲಿಯೂ ಸಹ ಇಂದಿನಂತೆಯೇ ವಿಜ್ಞಾನವು ವಿಕಸಿತವಾಗಿತ್ತೆಂಬುದು ತಿಳಿದುಬರುತ್ತದೆ. ಇಂದು ಶರೀರವನ್ನು ಪರೀಕ್ಷಿಸಲು ಯಂತ್ರಗಳನ್ನು ಬಳಸುತ್ತಿದ್ದರೆ. ಅಂದು ಆ ಕಾಲಕ್ಕೆ ತಕ್ಕಂತೆ ಬೇರೆ ಯಾವುದೇ ಉಪಕರಣಗಳು ಇರಬಹುದು. ಇಲ್ಲವೆ ಅಂದಿನ ಋಷಿ ಮಹರ್ಷಿಗಳ ಸೂಕ್ಷ್ಮಬುದ್ಧಿ ಹಾಗೂ ಅವರ ದಿವ್ಯದೃಷ್ಟಿಗಳೇ ಅದನ್ನು ತಿಳಿದುಕೊಳ್ಳಲು ಸಮರ್ಥಗಳಾಗಿದ್ದುವೆಂಬುದನ್ನು ಅರ್ಥೈಸಬಹುದಾಗಿದೆ.

ನಮ್ಮ ದೇಶದ ಆಯುರ್ವೇದ ವಿದ್ಯಾತಜ್ಞರಾದ ವೈದ್ಯರು ಯಾವ ಯಂತ್ರಗಳ ಸಹಾಯವಿಲ್ಲದೆ ಕೇವಲ ನಾಡಿ ವಿಜ್ಞಾನದಿಂದಲೇ ರೋಗವನ್ನು ಗುರುತಿಸಿ ರೋಗಿಗೆ ಔಷಧೋಪಚಾರವನ್ನು ಮಾಡುತ್ತಲಿದ್ದರು ಮತ್ತು ಈಗಲೂ ಮಾಡುತ್ತಿದ್ದಾರೆ. ನಾಡೀ ಪರೀಕ್ಷಣೆಯು ಸ್ಪರ್ಶಜ್ಞಾನದ ಒಂದು ಸೂಕ್ಷ್ಮ ವಿಜ್ಞಾನವು. ಇದರಲ್ಲಿ ಅತ್ಯಂತ ಪರಿಣಿತ ರಾಗಿದ್ದ ಕೊಪ್ಪಳ ಗವಿಮಠದ ಮರಿಶಾಂತವೀರ ಸ್ವಾಮಿಗಳು ಹೆಣ್ಣುಮಕ್ಕಳನ್ನು ಪರೀಕ್ಷಿಸುವ ಪ್ರಸಂಗಬಂದಾಗ ಅವರನ್ನು ನೇರವಾಗಿ ಸ್ಪರ್ಶಿಸದೆ ಅವರ ಮುಂಗೈಗೆ ಒಂದು ತಿಳುವಾದ ದಾರವನ್ನು ಕಟ್ಟಿ ಆ ದಾರದಲ್ಲಿ ಬರುವ ಅತಿಸೂಕ್ಷ್ಮಕಂಪನಗಳಿಂದ ಅವರ ನಾಡಿಯನ್ನು ಪರೀಕ್ಷಿಸಿ ಔಷಧೋಪಚಾರ ಮಾಡಿ ಅವರನ್ನು ಗುಣಪಡಿಸುತ್ತಿದ್ದ

ರೆಂಬ ವಿಷಯವನ್ನು ಅವರ ಶಿಷ್ಯರೇ ಆದ ಬನ್ನಿಕೊಪ್ಪದ ಲಿಂ || ಡಾ || ಎಸ್. ಎಫ್. ಹಿರೇಮಠ ಅವರು ಅನೇಕ ಸಲ ನಮ್ಮ ಮುಂದೆ ಪ್ರಸ್ತಾಪಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಈ ಎಲ್ಲ ವಿಚಾರಗಳನ್ನು ನೋಡಿದಾಗ ವಿಜ್ಞಾನದ ಪುನರಾವೃತ್ತಿಯು ಯಾವಾಗಲೂ ಆಗುತ್ತಲಿರುತ್ತದೆ. ಆದರೆ ಎಲ್ಲಾ ಕಾಲಗಳಲ್ಲಿ ಅದರ ಸ್ವರೂಪವು ಒಂದೇ ಆಗಿರುವುದಿಲ್ಲ ಎಂಬುದೂ ಗಮನಿಸಬೇಕಾದ ಸಂಗತಿ. ಇಲ್ಲಿಯವರೆಗೆ ವಿವೇಚಿಸಿದ ವಿಚಾರದ ಮುಖಾಂತರ ತಿಳಿದುಬರುವುದೇನೆಂದರೆ, ತಾಯಿಯ ಗರ್ಭದಲ್ಲಿ ಶಿಶು ಏಳು ತಿಂಗಳದ್ದಾದಾಗ ಅದರ ಶರೀರದಲ್ಲಿ ಪ್ರಾಣಸಂಚಾರವಾಗಿ ಅದರಲ್ಲಿ ಚೇತನಾಭಿವ್ಯಕ್ತಿಯುಂಟಾಗುತ್ತದೆ. ಶಿಶುವಿನ ಶರೀರದಲ್ಲಿ ಪ್ರಾಣ ಪ್ರವೇಶವಾದ ಕ್ಷಣವೇ ಆ ಜೀವಿಯ ಜನ್ಮಸಮಯವೆಂದು ಸೂಕ್ಷ್ಮವಾಗಿ ಅರ್ಥೈಸಿಕೊಳ್ಳಬೇಕು. ಅಂತೆಯೇ ಪೂಜ್ಯಪಾದರು–

''ಪ್ರಾಣ ಏವ ಮನುಷ್ಯಾಣಾಂ ದೇಹಧಾರಣ ಕಾರಣಮ್''

ಎಂಬುದಾಗಿ ಉಪದೇಶಿಸಿ ಶರೀರದ ಸರ್ವ ವ್ಯವಹಾರಗಳಿಗೆ ಪ್ರಾಣವೇ ಮೂಲ ಎಂಬುದನ್ನು ತಿಳಿಸಿಕೊಟ್ಟಿದ್ದಾರೆ.

ದೇಹದ ಸರ್ವ ವ್ಯವಹಾರಗಳಿಗೆ ಆಧಾರವಾದ ಈ ಪ್ರಾಣಕ್ಕೆ ಶಿವನೇ ಆಧಾರನು. ಶಿವನ ಸಂಕೇತದಿಂದಲೇ ಸರ್ವಮಹಾಭೂತಗಳ ವ್ಯವಹಾರವು ನಡೆದಿರುತ್ತದೆ. ಆದ್ದರಿಂದ ಸರ್ವಾಧಾರನಾದ ಶಿವನು ಪ್ರಾಣಕ್ಕೂ ಸಹ ಆಧಾರನೆಂಬುದನ್ನು ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವನ ಸರ್ವಾಧಾರತ್ವವನ್ನು ಮತ್ತು ಪ್ರಾಣದ ದೇಹಾಧಾರತ್ವವನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ ಪುನಃ–

ನಿರಾಧಾರಃ ಶಿವಃ ಸಾಕ್ಷಾತ್ ಪ್ರಾಣಸ್ತೇನ ಪ್ರತಿಷ್ಠಿತಃ ।
ತದಾಧಾರಾ ತನುರ್ಜ್ಞೇಯಾ ಜೀವೋ ಏನೈವ ಚೇಷ್ಟತೇ ॥

(ಸಿ. ಶಿ. ೧೭–೨೯)

ಈ ತೆರನಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವನು ನಿರಾಧಾರನಾಗಿದ್ದಾನೆ. ಅರ್ಥಾತ್ ಅವನೇ ಸರ್ವಕ್ಕೂ ಆಧಾರನಾಗಿರುವುದರಿಂದ ಅವನಿಗೆ ಬೇರೊಂದು ಆಧಾರವಿರುವುದಿಲ್ಲ, ಅವನೇ ಪ್ರತಿಯೊಬ್ಬರ ಶರೀರದಲ್ಲಿ ಪ್ರಾಣವನ್ನು ಪ್ರತಿಷ್ಠಾಪಿಸಿರುತ್ತಾನೆ. ಆ ಪ್ರತಿಷ್ಠಾಪಿಸಲ್ಪಟ್ಟ ಪ್ರಾಣವೇ ದೇಹಕ್ಕೆ ಆಧಾರವಾಗಿರುತ್ತದೆ. ತನಗೆ ಆಧಾರವಾದ ಆ ಪ್ರಾಣದಿಂದಲೇ ಶರೀರದ ಎಲ್ಲ ವ್ಯವಹಾರಗಳು ನಡೆಯುತ್ತಿರುತ್ತವೆ.

ಸರ್ವಕ್ಕೂ ಆಧಾರನಾದ ಶಿವನಿಗೆ ಬೇರಾವುದೂ ಆಧಾರವಿಲ್ಲದ ಕಾರಣ ಅವನಿಗೆ ನಿರಾಧಾರನೆಂಬುದಾಗಿ ಪೂಜ್ಯಪಾದರು ಬೋಧಿಸಿದ್ದಾರೆ. ಅವನ ಪ್ರೇರಣೆಯಿಂದಲೇ ನಮ್ಮೆಲ್ಲರ ದೇಹದಲ್ಲಿ ಪ್ರಾಣದ ಪ್ರತಿಷ್ಠಾಪನೆಯಾಗಿರುತ್ತದೆ. ದೇವಮಂದಿರಗಳಲ್ಲಿ ವಿಗ್ರಹಗಳನ್ನು ಸ್ಥಾಪಿಸಿ ಅವುಗಳಲ್ಲಿ ವೈದಿಕ ವಿಧಿವಿಧಾನಗಳಿಂದ ಪ್ರಾಣಪ್ರತಿಷ್ಠಾಪನೆಯನ್ನು ಮಾಡುವ ಪದ್ಧತಿ ಇರುತ್ತದೆ. ಮೂರ್ತಿಯಲ್ಲಿ ಪ್ರಾಣಪ್ರತಿಷ್ಠಾಪನೆಯನ್ನು

ಮಾಡದೆ ಅದರ ಪೂಜಾದಿ ವಿಧಿವಿಧಾನಗಳು ನಡೆಯಲಾರವು. ಮೂರ್ತಿಯಲ್ಲಿ ದೇವತಾ ಆಕೃತಿಯು ಬಂದಿದ್ದರೂ ಅದರಲ್ಲಿ ಪ್ರಾಣಪ್ರತಿಷ್ಠಾಪನೆಯಾಗುವವರೆಗೆ ಅದು ಹೇಗೆ ಪೂಜಾವ್ಯವಹಾರಕ್ಕೆ ಅರ್ಹವಾಗುವುದಿಲ್ಲವೋ ಅದೇ ಪ್ರಕಾರವಾಗಿ ತಾಯಿಯ ಗರ್ಭದಲ್ಲಿ ಪಿಂಡಕ್ಕೆ ಶಿಶುವಿನ ಆಕಾರವು ಪ್ರಾಪ್ತವಾಗಿದ್ದರೂ ಅದರಲ್ಲಿ ಪ್ರಾಣಪ್ರವೇಶ ವಾಗದ ಹೊರತು ಅದು ಸಜೀವವೆನಿಸಿಕೊಳ್ಳುವುದಿಲ್ಲ ಮತ್ತು ಆ ದೇಹದಿಂದ ಯಾವದೇ ಚಲನವಲನೆಯೂ ಕೂಡ ಸಂಭವಿಸುವದಿಲ್ಲ. ಅಂತೆಯೇ ಮೂರ್ತಿಯಲ್ಲಿ ಪ್ರಾಣ ಪ್ರತಿಷ್ಠಾಪನೆ ಮಾಡುವಂತೆ ಗರ್ಭಸ್ಥ ಶಿಶುವಿನ ಶರೀರದಲ್ಲಿಯೂ ಸಹ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಬೇಕಾಗುವುದು. ಅಲ್ಲಿ ಆ ಪ್ರತಿಷ್ಠಾಪನೆಯನ್ನು ಮಾಡಲು ಬೇರಾರೂ ಇರುವುದಿಲ್ಲ. ಅದು ಶಿವನಿಂದಲೇ ಪ್ರತಿಷ್ಠಾಪನೆಗೊಳ್ಳುತ್ತದೆ. ಗರ್ಭದಲ್ಲಿಯ ಶಿಶುವಿಗೆ ಏಳನೇ ತಿಂಗಳು ಪ್ರಾರಂಭವಾದಾಗ ''ಮೂರ್ಧಾನಂ ಭಿತ್ವಾ ಪ್ರಾವಿಶತ್'' ಎಂಬ ಉಪನಿಷತ್ತಿನ ವಾಕ್ಯದಂತೆ ಶಿವನು ಆ ಶಿಶುವಿನ ಮಸ್ತಕವನ್ನು ಭೇದಿಸಿ ಅದರ ಮುಖಾಂತರ ಆ ಶರೀರದಲ್ಲಿ ಪ್ರಾಣವನ್ನು ಪ್ರತಿಷ್ಠಾಪಿಸುತ್ತಾನಲ್ಲದೆ ತಾನೂ ಸಹ ಆ ಜೀವಿಯ ಹೃದಯದಲ್ಲಿ ವಾಸವಾಗುತ್ತಾನೆ. ಮಸ್ತಕವನ್ನು ಭೇದಿಸಿ ಪ್ರಾಣವು ಶರೀರದಲ್ಲಿ ಪ್ರವಿಷ್ಟವಾದ ಕಾರಣದಿಂದಲೇ ನವಜಾತ ಶಿಶುವಿನ ಮಸ್ತಕದಲ್ಲಿ ತಿಳುವಾದ ಚರ್ಮದ ಪರದೆಯಿಂದ ಕೂಡಿದ ಒಂದು ರಂಧ್ರವಿರುವುದು ತಿಳಿದುಬರುತ್ತದೆ. ಅದಕ್ಕೆ ಲೋಕ ಭಾಷೆಯಲ್ಲಿ 'ಅಳ್ನೆತ್ತಿ' ಎಂದು ಕರೆಯುವರು. ಶಾಸ್ತ್ರಗಳು ಅದಕ್ಕೆ 'ಬ್ರಹ್ಮರಂಧ್ರ'ವೆಂದು ಹೆಸರಿಸಿವೆ. ಶಿಶುವಿನ ಮಸ್ತಕದ ಆ ರಂಧ್ರವು ಸರಿಯಾಗಿ ಮುಚ್ಚಿಕೊಳ್ಳಲೆಂಬ ಉದ್ದೇಶ ದಿಂದ ಆ ಮಸ್ತಕಕ್ಕೆ ತಾಯಂದಿರು ಚೆನ್ನಾಗಿ ಎಣ್ಣೆಯನ್ನು ಉಣ್ಣಿಸುತ್ತಾರೆ. ಇದರಿಂದ ಕಾಲಾಂತರದಲ್ಲಿ ಪೂರ್ಣವಾಗಿ ಮುಚ್ಚಿಕೊಂಡು ಪೂರ್ವದಲ್ಲಿ ಮೃದುವಾಗಿದ್ದ ಆ ಭಾಗವು ಗಟ್ಟಿಗೊಂಡುಬಿಡುತ್ತದೆ. ಯಾವ ಮಾರ್ಗದಿಂದ ಪ್ರಾಣವು ಒಳಪ್ರವೇಶ ಮಾಡಿತ್ತೋ ಆ ಮಾರ್ಗದಿಂದ ಅದಕ್ಕೆ ಹೊರಹೋಗಲು ಎಂದೂ ಸಾಧ್ಯವಾಗುವುದಿಲ್ಲ.

ಮರಣ ಕಾಲದಲ್ಲಿ ಶರೀರದ ಉಳಿದ ಯಾವುದೋ ಛಿದ್ರದ ಮೂಲಕವಾಗಿ ಅಂದರೆ ಕಣ್ಣು, ಕಿವಿ, ಮೂಗು ಬಾಯಿ ಮುಂತಾದ ನವದ್ವಾರಗಳಲ್ಲಿ ಯಾವುದಾದ ರೊಂದು ದ್ವಾರದ ಮೂಲಕ ಹೊರಹೋಗುವುದು. ಆದರೆ ಯೋಗ ಸಾಮರ್ಥ್ಯವನ್ನು ಪಡೆದ ಸಿದ್ಧಯೋಗಿಯು ಮಾತ್ರ ತನ್ನ ಮಸ್ತಕದ ಆ ಬ್ರಹ್ಮರಂಧ್ರವನ್ನು ಭೇದಿಸಿಯೇ ಹೊರಹೋಗುತ್ತಾನೆಂಬುದಾಗಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಬ್ರಹ್ಮರಂಧ್ರವು ದೇಹ ದಲ್ಲಿರುವ ದಶಮದ್ವಾರವು. ಇದು ಯೋಗಿಗಳು ನಿರ್ಗಮಿಸುವ ವಿಶೇಷದ್ವಾರ (Special Gate) ವಾಗಿರುತ್ತದೆ.

ಮನುಷ್ಯನ ಶರೀರವೆಂದರೆ ಬಹುವಿಶಾಲವಾಗಿರುವ ಒಂದು ಪಟ್ಟಣವಿದ್ದಂತೆ. ಶಾಸ್ತ್ರಗಳು ದೇಹಕ್ಕೆ ಪುರವೆಂಬುದಾಗಿಯೇ ಕರೆದಿವೆ. ಈ ಪುರದಲ್ಲಿ ವಾಸಮಾಡುವ ಪ್ರಧಾನ ಜೀವನಿಗೆ ಪುರುಷನೆನ್ನುವರು. 'ಪುರಿ ಶೇತೇ ಇತಿ ಪುರುಷಃ ಎಂಬ ಪುರುಷ ಶಬ್ದದ ವ್ಯುತ್ಪತ್ತಿಯು ಇದೇ ಅರ್ಥವನ್ನು ಹೇಳುತ್ತದೆ. ಮನುಷ್ಯ ಶರೀರವೆಂಬ ಈ ಪುರ ದಲ್ಲಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಬ್ರಹ್ಮರಂಧ್ರ

ಮತ್ತು ಪಶ್ಚಿಮ ಶಿಖಾ ಎಂಬ ಎಂಟು ಚಕ್ರಗಳು ಅರ್ಥಾತ್ ಮುಖ್ಯಕೇಂದ್ರಗಳಿರುತ್ತವೆ. ಇದೂ ಅಲ್ಲದೆ ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊರಳೆ, ಬಾಯಿ ಮತ್ತು ಗುದ, ಗುಹ್ಯಗಳೆಂಬ ಒಂಭತ್ತು ದ್ವಾರಗಳಿರುತ್ತವೆ. ಇನ್ನು ಸ್ತ್ರೀ ಶರೀರದಲ್ಲಿ ಎರಡು ಸ್ತನಗಳು ಮತ್ತು ಒಂದು ಯೋನಿ ಹೀಗೆ ಮೂರು ದ್ವಾರಗಳು ಅಧಿಕವಾಗಿರುತ್ತವೆ ಎಂಬು ದಾಗಿ ಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ.

ಇದೂ ಅಲ್ಲದೆ ವೇದಾಂತ ಶಾಸ್ತ್ರದಲ್ಲಿ ನಮ್ಮಲ್ಲಿರುವ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಮತ್ತು ಅಂತಃಕರಣದಲ್ಲಿ ಒಂದೊಂದು ಅಧಿಷ್ಠಾತೃ ದೇವತೆ ಯನ್ನು ಪ್ರತಿಪಾದಿಸಲಾಗಿದೆ. ವೀರಶೈವ ಆಚಾರ್ಯರು ಪೂರ್ವೋಕ್ತಗಳಾದ ಇಂದ್ರಿಯ ಗಳಲ್ಲಿ ಆಚಾರಾದಿ ಲಿಂಗಗಳನ್ನು ಮತ್ತು ಮನದಲ್ಲಿ ಮಹಾಲಿಂಗವನ್ನು ಪರಿಭಾವಿಸಲು ಅಪ್ಪಣೆ ಕೊಡಿಸಿದ್ದಾರೆ. ಈ ಪ್ರತಿಯೊಂದು ಇಂದ್ರಿಯಗಳು ಆಯಾ ಅಧಿಷ್ಠಾತೃ ದೇವತೆ ಗಳ ಇಲ್ಲವೆ ಲಿಂಗಗಳ ಪ್ರೇರಣೆಯಿಂದ ತಮ್ಮ ತಮ್ಮ ವ್ಯವಹಾರವನ್ನು ಮಾಡಲು ಸಮರ್ಥಗಳಾಗಿರುತ್ತವೆ. ಶಾಸ್ತ್ರದಲ್ಲಿ ವರ್ಣಿಸಿದ ಈ ಎಲ್ಲ ವಿಚಾರವನ್ನು ನೋಡಲಾಗಿ ನಮ್ಮ ದೇಹವೆಂದರೆ ಅನೇಕ ದೇವತೆಗಳ ನಿವಾಸದ ಒಂದು ಪಟ್ಟಣವೆಂದು ತಿಳಿದು ಬರುತ್ತದೆ. ಆದ್ದರಿಂದಲೇ ಈ ದೇಹವನ್ನು ಕುರಿತು–''ಅಷ್ಟ ಚಕ್ರಾನವದ್ವಾರಾ ದೇವಾನಾಂ ಪೂರಯೋಧ್ಯಾ'' ಎಂಬುದಾಗಿ ಹೇಳಲಾಗಿದೆ. ತಮ್ಮ ದೇಹವು ದೇವತೆಗಳ ಆವಾಸಸ್ಥಾನ ಎಂಬುದು ಅದೆಷ್ಟೋ ಜನರಿಗೆ ತಿಳಿದಿರುವುದಿಲ್ಲ. ನಮ್ಮ ಮನೆಯೊಳಗಿನ ದೇವರಕೋಣೆಯನ್ನು ಸದಾ ಶುದ್ಧವಾಗಿಯೂ, ಪವಿತ್ರವಾಗಿಯೂ ಇಡುವಂತೆ ಸಾಧಕ ರಾದವರು ಈ ದೇಹದ ಪವಿತ್ರತೆಯತ್ತ ಲಕ್ಷ್ಯಕೊಡಬೇಕಾಗುವುದು. ದೇವರನ್ನು ಪಡೆಯಲು ದೇವರಿಂದಲೇ ಅನುಗ್ರಹಿಸಲ್ಪಟ್ಟ ಇದೊಂದು ಪ್ರಸಾದವು. ಅಂತೆಯೇ ಬಸವಣ್ಣನವರು–''ಕೂಡಲಸಂಗಮದೇವರನ್ನು ಒಲಿಸಬಂದ ಪ್ರಸಾದಕಾಯವನ್ನು ಕೆಡಿಸಲಾಗದು'' ಎಂಬುದಾಗಿ ಹೇಳಿದ್ದಾರೆ. ಯಾರು ಇದನ್ನು ಎಷ್ಟು ಶುದ್ಧವಾಗಿಟ್ಟು ಕೊಳ್ಳುವರೋ ಅಷ್ಟೇ ಅವರು ಸಾಧನೆಯಲ್ಲಿ ಪ್ರಗತಿಯನ್ನು ಸಾಧಿಸಬಲ್ಲರು.

ಸರ್ವಕ್ಕೂ ಆಧಾರವಾದ ಶಿವನು ಈ ಶರೀರದ ಎಲ್ಲ ವ್ಯವಹಾರವು ಸುಗಮವಾಗಿ ಸಾಗಲೆಂದು ಇದರಲ್ಲಿ ಪ್ರಾಣವನ್ನು ಪ್ರತಿಷ್ಠಾಪಿಸಿದ್ದಾನೆ. ಇದೂ ಅಲ್ಲದೆ ಆ ಪ್ರಾಣಕ್ಕೆ ಪ್ರೇರಕ ಶಕ್ತಿಯಾಗಿ ತಾನೂ ಸಹ ಪ್ರತಿಯೊಬ್ಬರ ಹೃದಯದಲ್ಲಿ ನಿವಾಸಿಸಿರುತ್ತಾನೆ. ಶರೀರದಲ್ಲಿ ಪ್ರಾಣವಿರುವುದರಿಂದಲೆ ಪ್ರತಿಯೊಂದು ಇಂದ್ರಿಯಗಳ ಚಲನವಲನವು ಕಂಡುಬರುತ್ತದೆ. ಅದು ಇರದೇ ಹೋದಾಗ ಶರೀರದ ಎಲ್ಲ ಕ್ರಿಯೆಗಳು ನಿಂತು ಹೋಗುವವು. ಈ ವಿಷಯದಲ್ಲಿ ರೋಚಕವಾದ ಕಥೆಯು ಹೀಗಿರುತ್ತದೆ.

ಓರ್ವ ರಾಜನು ತನ್ನ ಪಟ್ಟದಾನೆಯನ್ನು ಅತಿಯಾಗಿ ಪ್ರೀತಿಸುತ್ತಿದ್ದನು. ಯಾವುದೇ ಊರಿನಲ್ಲಿ ತನ್ನ ಕಾರ್ಯಕ್ರಮವಿದ್ದರೂ ಅವನು ಆ ಆನೆಯನ್ನು ತೆಗೆದುಕೊಂಡೇ ಹೋಗುತ್ತಿದ್ದನು. ಒಮ್ಮೆ ಒಂದು ಊರಿನ ಕಾರ್ಯಕ್ರಮಕ್ಕೆ ಹೋದಾಗ ಅವನ ಆ ಆನೆಯು ಬಹಳಷ್ಟು ಅಸ್ವಸ್ಥವಾಯಿತು. ಆಗ ರಾಜನು ಆ ಆನೆಯನ್ನು ಅಲ್ಲಿಯೇ ಬಿಟ್ಟು ಊರಿನ ಪ್ರಮುಖ ಜನರನ್ನು ಕರೆಯಿಸಿ ಅಪ್ಪಣೆ ಕೊಡಿಸಿದ್ದೇನೆಂದರೆ ನೀವೆಲ್ಲ ಈ ಆನೆಯ

ಯೋಗಕ್ಷೇಮವನ್ನು ನೋಡಿಕೊಳ್ಳಿ. ಇದರ ಔಷಧೋಪಚಾರಕ್ಕಾಗಿ ಬೇಕಾಗುವ ಧನ ವನ್ನು ಖಜಾನೆಯಿಂದ ಕಳುಹಿಸಲಾಗುವುದು. ಪ್ರತಿದಿನ ಈ ಆನೆಯ ಶರೀರದ ಸ್ಥಿತಿಗತಿಗಳ ಬಗ್ಗೆ ನಮಗೆ ಯಾರಿಂದಲಾದರೂ ಸಂದೇಶವನ್ನು ಕಳಿಸುತ್ತ ಇರಬೇಕು. ಈ ಆನೆಯ ಮರಣದ ವಾರ್ತೆಯನ್ನು ಯಾರಾದರೂ ಬಂದು ಹೇಳಿದರೆ ಅವರಿಗೆ ಮರಣ ದಂಡನೆಯನ್ನೇ ವಿಧಿಸಲಾಗುವುದು. ಕಾರಣ ಆನೆಯ ಆರೋಗ್ಯದಕಡೆಗೆ ಹೆಚ್ಚು ಗಮನ ವಹಿಸಬೇಕೆಂಬುದಾಗಿ ಆದೇಶಿಸಿ ಎಲ್ಲ ವ್ಯವಸ್ಥೆಯನ್ನು ಮಾಡಿ ರಾಜಧಾನಿಗೆ ಹೊರಟು ಹೋದನು. ಊರಿನ ಪ್ರಮುಖರೂ ಸಹ ಆನೆಯ ಆರೋಗ್ಯದ ಬಗ್ಗೆ ಅತ್ಯಂತ ಆಸ್ಥೆವಹಿಸಿ ಯೋಗ್ಯ ವೈದ್ಯರಿಂದ ಉಪಚಾರಮಾಡಿಸತೊಡಗಿದರು. ಆನೆಯ ದೇಹದ ಸ್ಥಿತಿಗತಿಗಳ ಬಗ್ಗೆ ದಿನಾಲೂ ಬೇರೆ ಬೇರೆ ವ್ಯಕ್ತಿಗಳ ಮುಖಾಂತರ ರಾಜನಿಗೆ ಸಂದೇಶವನ್ನು ಕಳಿಸ ಲಾಗುತ್ತಿತ್ತು. ಒಂದು ದಿನ ಆ ಆನೆಯು ಮರಣವನ್ನಪ್ಪಿತು. ಈ ಸಮಾಚಾರವನ್ನು ರಾಜನಿಗೆ ಹೋಗಿ ತಿಳಿಸಲು ಊರಿನವರಾರೂ ತಯಾರಾಗಲಿಲ್ಲ, ಯಾರೇ ಹೋದರೂ ಅವರ ಸಾವು ನಿಶ್ಚಿತವಾಗಿತ್ತು, ಆದ್ದರಿಂದ ಭಯಗೊಂಡು ಊರಿನವರೆಲ್ಲರೂ ಕಿಂಕರ್ತವ್ಯ ಮೂಢರಾಗಿ ಚಿಂತಿಸುತ್ತ ಕುಳಿತುಕೊಂಡರು. ಅದೇ ಸಂದರ್ಭದಲ್ಲಿ ಓರ್ವ ಶಿವಾಚಾರ್ಯರು ದೇಶ ಪರ್ಯಟನ ಮಾಡುತ್ತ ಆ ಊರಿಗೆ ಬಂದು ತಲುಪಿದರು. ಊರಿನವರೆಲ್ಲರೂ ಸಾಮೂಹಿಕವಾಗಿ ದುಃಖ ಮಗ್ನರಾಗಿರುವುದನ್ನು ಕಂಡು ಅವರು ಓರ್ವ ಯಜಮಾನನನ್ನು ಕರೆದು ದುಃಖದ ಕಾರಣವೇನೆಂಬುದಾಗಿ ಕೇಳಿದರು. ಆಗ ಆ ಯಜಮಾನನು ಸಂಗತಿಯನ್ನೆಲ್ಲ ವಿವರಿಸಿ ತಮಗೆ ಬಂದ ವಿಪತ್ತನ್ನು ಬಗೆಹರಿಸಿಕೊಳ್ಳುವ ಉಪಾಯವನ್ನು ತಿಳಿಸಬೇಕೆಂದು ಅಂಗಲಾಚಿ ಬೇಡಿಕೊಂಡನು. ಪರಿಸ್ಥಿತಿಯನ್ನೆಲ್ಲ ಅರಿತ ಆ ಶಿವಾಚಾರ್ಯರು ಊರಿನವರಿಗೆಲ್ಲ ಧೈರ್ಯವನ್ನು ಹೇಳಿ ನೀವಾರೂ ಭಯಪಡ ಬೇಕಾಗಿಲ್ಲ, ನಾವು ತಿಳಿಸಿದಂತೆ ನಿಮ್ಮಲ್ಲಿ ಯಾರಾದರೊಬ್ಬರು ರಾಜನಲ್ಲಿಗೆ ಹೋಗಿ (ಆನೆಯ ಸ್ಥಿತಿ–ಗತಿಗಳನ್ನು ತಿಳಿಸಿದಾಗ) 'ಆನೆಯು ಸತ್ತಿದೆ' ಎಂಬ ವಾಕ್ಯವನ್ನು ಉಚ್ಚರಿ ಸದೆ ಆನೆಯ ಮರಣ ವಾರ್ತೆಯನ್ನು ರಾಜನಿಗೆ ತಿಳಿಸಬಹುದು ಎಂಬುದಾಗಿ ಉಪಾಯ ವಿವರಿಸಿದರು.

ಆ ಶಿವಾಚಾರ್ಯರು ಹೇಳಿದ ಉಪಾಯವನ್ನು ಕೇಳಿ ಓರ್ವ ವ್ಯಕ್ತಿಯು ರಾಜನ ಆಸ್ಥಾನಕ್ಕೆ ಬಂದು ರಾಜನಿಗೆ ನಮಸ್ಕರಿಸಿ ನಿಂತುಕೊಂಡನು. ಆಗ ರಾಜನು ಆ ಗ್ರಾಮಸ್ಥ ನನ್ನು ಕಂಡು ಅತ್ಯಾತುರದಲ್ಲಿ ಏನು ನಮ್ಮ ಪಟ್ಟದಾನೆ ಹೇಗಿದೆ ? ಎಂಬುದಾಗಿ ಪ್ರಶ್ನಿಸಿ ದನು. ಆಗ ಆ ಗ್ರಾಮಸ್ಥನು ಮಹಾರಾಜರೆ ! ನಿಮ್ಮ ಆನೆಯು ಕುಶಲವಾಗಿದೆ. ಆದರೆ ನಿನ್ನೆಯಿಂದ ಅದು ಅನ್ನ–ನೀರುಗಳನ್ನು ಗ್ರಹಿಸಲೊಲ್ಲದಾಗಿದೆ. ಕೈಕಾಲುಗಳನ್ನು ಅಲ್ಲಾಡಿ ಸುತ್ತಿಲ್ಲ, ತಿನ್ನುವ ಪದಾರ್ಥವನ್ನು ಮುಂದಿಟ್ಟರೂ ಕಣ್ಣು ತೆರೆದು ಸಹ ನೋಡುತ್ತಿಲ್ಲ, ಇಷ್ಟೇ ಅಲ್ಲ ಅದು ಉಸಿರಾಡಿಸುವುದನ್ನೂ ಸಹ ಬಿಟ್ಟಿರುತ್ತದೆ. ಗ್ರಾಮಸ್ಥನ ಈ ಮಾತುಗಳನ್ನು ಕೇಳಿ ಗಾಬರಿಗೊಂಡ ರಾಜನು ಏನು ? ನನ್ನ ಆನೆಯು ಸತ್ತು–ಗಿತ್ತು ಹೋಗಿದೆ ಏನು ಮತ್ತೆ ? ಎಂಬುದಾಗಿ ಉದ್ಗರಿಸಿದನು. ಆಗ ಆ ವ್ಯಕ್ತಿಯು ಮಹಾರಾಜರೇ ! ನನಗೆ ಹೆಚ್ಚಿಗೆ ಏನೂ ಗುರುತಿಲ್ಲ, ಆನೆಯ ದೇಹದ ಸ್ಥಿತಿಯನ್ನು ಇದ್ದಕ್ಕಿದ್ದಂತೆ ತಮ್ಮ ಮುಂದೆ ಅರಿಕೆ ಮಾಡಿಕೊಂಡಿದ್ದೇನೆ. ಅದು ಸತ್ತಿದೆಯೋ

ಬದುಕಿದೆಯೋ ಎಂಬುದನ್ನು ತಾವೇ ನಿರ್ಣಯಿಸಿಕೊಳ್ಳಬೇಕು ಮಹಾಪ್ರಭುಗಳೇ ಎಂದು ನುಡಿದನು. ಆನೆಯು ಸತ್ತಿದ್ದರೂ ಸತ್ತಿದೆಯೆಂಬ ಶಬ್ದವನ್ನು ಉಚ್ಚರಿಸದೆ ಅದರ ಮರಣವಾರ್ತೆಯನ್ನು ಯುಕ್ತಿಯಿಂದ ನಿರೂಪಿಸಿರುವ ಆ ವ್ಯಕ್ತಿಯ ಮಾತನ್ನು ಕೇಳಿ ರಾಜನು ನಿರುಪಾಯನಾಗಿ ಅವನಿಗೆ ಮರಣ ದಂಡನೆಯನ್ನು ವಿಧಿಸದೆ ಕಳಿಸಿಕೊಟ್ಟನು.

ಇಲ್ಲಿ ಮರಣವೆಂದರೆ ಶರೀರದಿಂದ ಪ್ರಾಣದ ನಿರ್ಗಮನವೆಂದರ್ಥ. ಪ್ರಾಣವು ನಿರ್ಗಮಿಸಿದಾಗ ಶರೀರದ ಎಲ್ಲ ವ್ಯವಹಾರಗಳು ನಿಂತುಹೋಗುತ್ತವೆ. ಅಂತೆಯೇ ಪೂಜ್ಯಪಾದರು– ''ತದಾಧಾರಾ ತನುರ್ಜ್ಞೇಯಾ ಜೀವೋ ಏನೈವ ಚ್ಯೇಷ್ಟತೇ'' ಎಂಬುದಾಗಿ ಉಪದೇಶಿಸಿದ್ದಾರೆ. ಪ್ರಾಣವೇ ಶರೀರಕ್ಕೆ ಆಧಾರವಾದುದು. ಆದರಿಂದಲೇ ಜೀವನ ಚೇಷ್ಟೆಯು ಸಂಭವಿಸುವುದು. ಅದಿರದೇ ಹೋದಾಗ ಶರೀರದ ಯಾವ ಚೇಷ್ಟೆಗಳೂ ನಡೆಯಲಾರವೆಂಬುದು ಸರ್ವಾನುಭವಸಿದ್ಧವಾದ ಸಂಗತಿಯಾಗಿದೆ. ಇದೆಲ್ಲವನ್ನು ಪರ್ಯಾಲೋಚಿಸಿದಾಗ ಶರೀರದ ಸರ್ವ ವ್ಯವಹಾರಕ್ಕೆ ಪ್ರಾಣವೇ ಪ್ರೇರಕವೆಂಬುದು ತಿಳಿದುಬರುವುದಲ್ಲದೆ ಆ ಪ್ರಾಣವು ಶಿವನಿಂದ ಈ ಶರೀರದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆಯೆಂಬುದೂ ಸಹ ತಿಳಿದುಬರುತ್ತದೆ.

ಶಿವಯೋಗಿಯು ಯೋಗವಿಧಿಯಿಂದ ತನ್ನ ಪ್ರಾಣವನ್ನು ಕುಂಭಕಗೊಳಿಸಿ ಆ ಪ್ರಾಣವನ್ನು ಶಿವನಲ್ಲಿ ಲಯಗೊಳಿಸಿದಾಗ ಅವನ ಶರೀರಾದಿ ವ್ಯವಹಾರಗಳು ನಡೆಯುತ್ತವೆಯೋ ಇಲ್ಲವೋ ಎಂಬ ಪ್ರಶ್ನೆಯುದ್ಭವಿಸಿದಾಗ ಪೂಜ್ಯಪಾದರು–

ಶಿವೇ ಪ್ರಾಣೋ ವಿಲೀನೋಽಪಿ ಯೋಗಿನೋ ಯೋಗಮಾರ್ಗತಃ ।
ಸ್ವಶಕ್ತಿವಾಸನಾಯೋಗಾದ್ ಧಾರಯತ್ಯೇವ ವಿಗ್ರಹಮ್ ॥

(ಸಿ. ಶಿ. ೧೭–೩೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಓರ್ವ ಶಿವಯೋಗಿಯು ಕುಂಭಕ ವಿಧಿಯಿಂದ ತನ್ನ ಪ್ರಾಣವನ್ನು ಶಿವಲಿಂಗದಲ್ಲಿ ಐಕ್ಯಗೊಳಿಸಿದರೂ ಸಂಸ್ಕಾರಬಲದಿಂದ ಆ ಯೋಗಿಯು ದೇಹವನ್ನು ಧರಿಸಿಕೊಂಡೇ ಇರುತ್ತಾನೆ.

ಈ ದೇಹದಲ್ಲಿ ಪ್ರಾಣವನ್ನು ಪ್ರತಿಷ್ಠಾಪಿಸಿದ ಶಿವನು ನಮ್ಮ ಹೃದಯಲ್ಲಿಯೇ ವಾಸವಾಗಿರುತ್ತಾನೆ. ಅಂತಹ ಆ ಶಿವನಲ್ಲಿ ಶಿವಯೋಗಿಯು ತನ್ನ ಪ್ರಾಣವನ್ನಿಟ್ಟು ಕುಂಭಕದ ಮೂಲಕ ವಿಲಯಗೊಳಿಸಿದಾಗ ಪ್ರಾಣವು ಶರೀರದಲ್ಲಿಯೇ ಇರುತ್ತದೆ ವಿನಃ ಶರೀರವನ್ನು ಬಿಟ್ಟು ಹೊರಗೆ ಹೋಗಿರುವುದಿಲ್ಲ. ಆ ಸಮಯದಲ್ಲಿ ಶ್ವಾಸೋಚ್ಛ್ವಾಸ ಕ್ರಿಯೆಯು ಮಾತ್ರ ನಿಂತು ಹೋಗಿರುತ್ತದೆ. ಆ ಪ್ರಾಣದ ಅಸ್ತಿತ್ವದಿಂದಲೇ ಶರೀರದ ರಕ್ಷಣೆಯಾಗಿದ್ದು ಅದರ ವ್ಯವಹಾರವು ಸಂಸ್ಕಾರಬಲದಿಂದ ನಡೆದಿರುತ್ತದೆ. ಶರೀರದೊಳಗೆ ಪ್ರಾಣವಿರುವವರೆಗೆ ಆ ದೇಹವನ್ನು ಯಾವ ಪ್ರಾಣಿಗಳೂ ಸಹ ಸ್ಪರ್ಶಿಸುವದಿಲ್ಲ. ಸತ್ತ ದೇಹಕ್ಕೆ ನಾಯಿ–ನರಿಗಳು ಮುಕುರಿಬೀಳುವಂತೆ ಉಸಿರಾಟವಿಲ್ಲದೆ ಯೋಗದಲ್ಲಿ ಕುಳಿತಿರುವ ಯೋಗಿಯ ದೇಹವನ್ನು ಇವುಗಳು ಮುಕುರಲಾರವು. ಅಲ್ಲಿ ದೇಹವನ್ನು ರಕ್ಷಿಸುವವರು ಬೇರಾರೂ ಇರದಿದ್ದರೂ ಪ್ರಾಣವೇ ಮಾತ್ರ ಅದನ್ನು ರಕ್ಷಿಸುತ್ತಿರುತ್ತದೆ. ದೇಹ ರಕ್ಷಕವಾದ ಈ ಪ್ರಾಣವು ದೇಹವನ್ನು ತೊರೆದ ಮರುಕ್ಷಣದಲ್ಲಿಯೇ

ನಾಯಿ–ನರಿಗಳು ಅದನ್ನು ಹರಿದು ತಿಂದುಬಿಡುತ್ತವೆ. ಆದ್ದರಿಂದ ಯೋಗಿಯು ದೇಹದಲ್ಲಿ ಪ್ರಾಣವನ್ನು ಕುಂಭಕಗೊಳಿಸಿದ್ದರೂ ಆ ಪ್ರಾಣವು ದೇಹದಲ್ಲೇ ಇರುವುದರಿಂದ ಪ್ರಾಕ್ತನ ಸಂಸ್ಕಾರಾನುಸಾರವಾಗಿ ಶರೀರ ವ್ಯವಹಾರವು ನಡೆಯುತ್ತಿರುವುದೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ.

ಪ್ರಾಣ ನಿರೋಧವನ್ನು ಮಾಡಿದ ಯೋಗಿಯ ನಿಶ್ಚಲ ಸ್ಥಿತಿಯನ್ನು ವಿವರಿಸುತ್ತ ಪೂಜ್ಯರು ಪುನಃ –

ಸ ಚಾಭ್ಯಾಸವಶಾದ್ ಭೂಯಃ ಸರ್ವತತ್ತ್ವಾತಿವರ್ತಿನೀ ।
ನಿಷ್ಕಲಂಕೇ ನಿರಾಕಾರೇ ನಿರಸ್ತಾಶೇಷವಿಪ್ಲವೇ ॥

ಚಿದ್ವಿಲಾಸಪರಿಸ್ಫೂರ್ತಿ ಪರಿಪೂರ್ಣ ಸುಖಾದ್ವಯೇ ।
ಶಿವೇ ವಿಲೀನಃ ಸರ್ವಾತ್ಮಾ ಯೋಗೀ ಚಲತಿ ನ ಕ್ವಚಿತ್ ॥

(ಸಿ. ಶಿ. ೧೭; ೩೧–೩೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಜೀವನ ವ್ಯವಹಾರಕ್ಕೆ ಆಧಾರಭೂತವಾದ ಆ ಪ್ರಾಣವಾಯುವು ಭೂಮ್ಯಾದಿ ಸರ್ವತತ್ವಗಳನ್ನು ಮೀರಿ ನಿಂತಿರುವ ಜರಾ–ಮರಣಾದಿ ದೋಷಗಳಿಲ್ಲದ ನಿರಾಕಾರವಾದ ಸಕಲ ಬಂಧನರಹಿತವಾದ ಜ್ಞಾನಾಧಿಕ್ಯದಿಂದಲೂ, ಪರಮಾನಂದ ಪರಿಪೂರ್ಣತೆಯಿಂದಲೂ ಅದ್ವಿತೀಯವಾಗಿರುವ ಪರಶಿವ ತತ್ತ್ವದಲ್ಲಿ ವಿಲೀನವಾಗಲು ಆ ಶಿವಯೋಗಿಯ ದೇಹದಲ್ಲಿ ಯಾವುದೇ ಚಲನವಲನೆಗಳು ಆಗುವುದಿಲ್ಲ. ಅಂದರೆ ಶಿವಯೋಗಿಯು ನಿಶ್ಚಲವಾಗಿರುತ್ತಾನೆ.

ಪ್ರಾಣಾಯಾಮದ ಅಭ್ಯಾಸದ ಬಲದಿಂದ ಶಿವಯೋಗಿಯು ತನ್ನ ಪ್ರಾಣವನ್ನು ಪರಶಿವ ತತ್ತ್ವದಲ್ಲಿ ವಿಲಯಗೊಳಿಸುತ್ತಾನೆ. ಆ ಪರಶಿವ ತತ್ತ್ವವು ಭೂಮ್ಯಾದಿ ಸರ್ವ ತತ್ತ್ವಗಳನ್ನು ಮೀರಿ ನಿಂತಿರುವಂಥಾದ್ದಾಗಿರುತ್ತದೆ. ಇದಕ್ಕೆ ಜರಾ–ಮರಣಗಳೆಂಬ ಷಡ್ಭಾವ ವಿಕಾರಗಳು ಇರುವುದಿಲ್ಲ. ಇದು ನಿರಾಕಾರವಾಗಿದ್ದು ಸರ್ವ ಆಕಾರಗಳಲ್ಲಿ ವ್ಯಾಪಿಸಿಕೊಂಡಿರುತ್ತದೆ. ಇದರಲ್ಲಿ ಯಾವುದೇ ಪ್ರಕಾರದ ದೋಷಗಳಿರುವುದಿಲ್ಲ. ಇದು ಸ್ವಯಂಪ್ರಕಾಶರೂಪವಾಗಿದ್ದು ಪರಮಾನಂದ ಸ್ವರೂಪವಾಗಿರುತ್ತದೆ. ಇದಕ್ಕೆ ಸರಿಸಮಾನವಾದ ಬೇರೊಂದು ತತ್ತ್ವವಿಲ್ಲದ ಕಾರಣ ಇದಕ್ಕೆ ಅದ್ವಯವೆಂದು ಕರೆಯುತ್ತಾರೆ. ಇಂತಹ ಆ ಪರಶಿವ ತತ್ತ್ವದಲ್ಲಿ ತನ್ನ ಪ್ರಾಣವನ್ನು ಹಾಗೂ ತನ್ನನ್ನು ಲಯಗೊಳಿಸಿಕೊಂಡಿರುವ ಶಿವಯೋಗಿಯು ನಿಶ್ಚಲವಾಗಿರುತ್ತಾನೆ. ಅವನ ಚಿತ್ತವು ಶಿವನಲ್ಲಿ ಲೀನವಾಗಿರೋಣದರಿಂದ ಶರೀರವು ನಿಶ್ಚೇಷ್ಟವೂ, ಸುಸ್ಥಿರವೂ ಆಗಿರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಾಣಾನುಗ್ರಹಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಪ್ರಧ್ವಸ್ತವಾಸನಾಸಂಗಾತ್ ಪ್ರಾಣವೃತ್ತಿಪರಿಕ್ಷಯಾತ್ ।
ಶಿವೈಕೀಭೂತಸರ್ವಾತ್ಮಾ ಸ್ಥಾಣುವದ್ಭಾತಿ ಸಂಯಮೀ ॥

(ಸಿ. ಶಿ. ೧೭–೩೩)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ತನ್ನ ಪ್ರಾಣಮನೋ ವೃತ್ತಿಗಳನ್ನೆಲ್ಲ ಶಿವನಲ್ಲಿ ಲಯಗೊಳಿಸಿದ ಶಿವಯೋಗಿಯು ಶಿವನೊಂದಿಗೆ ಸಮರಸ ನಾಗಿದ್ದು ಸ್ಥಾಣುವಿನಂತೆ ನಿಶ್ಚಲನಾಗಿರುತ್ತಾನೆ.

ಪ್ರಾಣಾಯಾಮದಲ್ಲಿ ಪರಿಣಿತನಾದ ಈ ಶಿವಯೋಗಿಯು ತನ್ನ ಪ್ರಾಕೃತ ಹಾಗೂ ವೈಕೃತರೂಪವಾದ ಪ್ರಾಣವಾಯುವಿನ ಗತಿಯನ್ನು ತಡೆದು ಅದನ್ನು ಶಿವನಲ್ಲಿ ಕುಂಭಕ ಗೊಳಿಸಿದಾಗ ಅವನ ಮನಸ್ಸಿನ ವೃತ್ತಿಗಳೆಲ್ಲ ನಿಂತುಹೋಗುತ್ತವೆ. ಇಂತಹ ಮನೋ ನಿಗ್ರಹರೂಪವಾದ ಅಭ್ಯಾಸದಿಂದ ಇವನ ಮನಸ್ಸಿನ ವಾಸನೆಗಳೆಲ್ಲ ಕ್ಷೀಣಗೊಂಡು ಈತನು ಸಂಯಮಿಯಾಗುತ್ತಾನೆ. ಈ ಸಂಯಮತೆಯಿಂದ ಶಿವನೊಂದಿಗೆ ಸಮರಸ ಗೊಂಡು ಸರ್ವಾತ್ಮ ಸ್ಥಿತಿಯನ್ನು ಪಡೆದ ಇವನು ಸ್ಥಾಣುವಿನಂತೆ ಅರ್ಥಾತ್ ಮೋಟು ಮರದಂತೆ ನಿಶ್ಚಲನಾಗಿರುತ್ತಾನೆ. ಗಾಳಿ ಬೀಸಿದಾಗ ಶಾಖೋಪಶಾಖೆಯಿಂದ ಕೂಡಿದ ಗಿಡವು ಅಲುಗಾಡುವುದೇ ವಿನಃ ಯಾವ ಶಾಖೆಯೂ ಇರದ ಮೊಂಡು ಮರವು ಅಚಲ ವಾಗಿಯೇ ಇರುತ್ತದೆ. ಇದೇ ಪ್ರಕಾರವಾಗಿ ಮನೋವೃತ್ತಿಗಳಿಂದ ಬಹಿರ್ಮುಖನಾದ ಸಂಸಾರ ಜೀವಿಯು ಪ್ರತಿಯೊಂದು ವ್ಯವಹಾರದಿಂದ ವಿಚಲಿತನಾಗುವುದನ್ನು ಕಾಣು ತ್ತೇವೆ. ಸಂತೋಷದಲ್ಲಿ ಒಂದು ತರಹದ ವಿಚಲನೆಯಾದರೆ ದುಃಖದಲ್ಲಿ ಇನ್ನೊಂದು ಬಗೆಯಾದ ವಿಚಲನೆಯುಂಟಾಗುತ್ತದೆ. ಆದರೆ ಪ್ರಾಣಾನುಗ್ರಹಸ್ಥಲದ ಶಿವಯೋಗಿಯು ತನ್ನ ಮನೋಪ್ರಾಣಗಳ ವೃತ್ತಿಗಳನ್ನೆಲ್ಲ ಲಯಗೊಳಿಸಿಕೊಂಡಿರೋಣದರಿಂದ ಅವನು ನಿಶ್ಚಲನೂ, ಗಂಭೀರನೂ ಆಗಿರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ಜುಲೈ ೧೯೯೪

(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)

■■

# ಕಾಯಾರ್ಪಿತಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಸುಕ್ಷೇತ್ರ ಸೊನ್ನಲಾಪೂರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗ ಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ನಿತ್ಯ ನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಪ್ರಾಣಾನುಗ್ರಹಸ್ಥಲವನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡಿದ್ದೀರಿ. ಇವತ್ತಿನ ದಿನ ಕಾಯಾರ್ಪಿತಸ್ಥಲವನ್ನು ಕುರಿತು ಆಶೀರ್ವಚನ ನೀಡಲಾಗುತ್ತಿದೆ.

ಕಾಯವೆಂದರೆ ಶರೀರವೆಂದರ್ಥ. ತನ್ನ ಶರೀರವನ್ನು ಇಷ್ಟದೇವರ ಸೇವೆಗಾಗಿ ಸಮರ್ಪಿಸುವುದಾಗಲಿ ಅಥವಾ ತನ್ನ ದೇಹದ ಮೇಲಿನ ಅಭಿಮಾನವನ್ನು ತ್ಯಜಿಸುವುದ ಕ್ಕಾಗಲಿ ಕಾಯಾರ್ಪಿತವೆಂಬುದಾಗಿ ಕರೆಯಲಾಗುವುದು. ಶರೀರವನ್ನು ಸೇವೆಯಲ್ಲಿ ಸಮರ್ಪಿಸುವುದು ಸ್ಥೂಲವಾದ ಕಾಯಾರ್ಪಿತವಾದರೆ ದೇಹಾಭಿಮಾನವನ್ನು ತ್ಯಜಿಸು ವುದು ಸೂಕ್ಷ್ಮವಾದ ಕಾಯಾರ್ಪಿತವೆನಿಸಿಕೊಳ್ಳುವುದು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪ್ರಸ್ತುತವಾದ ಈ ಕಾಯಾರ್ಪಿತ ಸ್ಥಲದಲ್ಲಿ ದೇಹಾಭಿಮಾನದ ತ್ಯಾಗ ಕ್ಕೇನೇ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಅಂತೆಯೇ ಈ ಸ್ಥಲದ ಬಗ್ಗೆ ವಿವರಣೆಯನ್ನು ಪ್ರಾರಂಭಿಸುತ್ತ–

ಶಿವಸ್ಯ ಪರರೂಪಸ್ಯ ಸರ್ವಾನುಗ್ರಾಹಿಣೋಽರ್ಚನೇ ।
ತ್ಯಾಗೋ ದೇಹಾಭಿಮಾನಸ್ಯ ಕಾಯಾರ್ಪಿತಮುದಾಹೃತಮ್ ॥

(ಸಿ. ಶಿ. ೧೭–೩೪)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಸರ್ವ ಜೀವಿಗಳ ಮೇಲೆ ಅನುಗ್ರಹ ವನ್ನು ಮಾಡುವ ಸಾಮರ್ಥ್ಯವುಳ್ಳ ಪರಶಿವಬ್ರಹ್ಮಸ್ವರೂಪನಾದ ಪ್ರಾಣಾನುಗ್ರಹ ಸ್ಥಲದ ಶಿವಯೋಗಿಯು ಶಿವಾರ್ಚನೆಯಲ್ಲಿ ಯಾವಾಗ ದೇಹಾಭಿಮಾನವನ್ನು ತ್ಯಜಿಸುವನೋ ಆಗ ಅವನಿಗೆ ಕಾಯಾರ್ಪಿತನೆಂಬುದಾಗಿ ಕರೆಯಲಾಗುವುದು.

ಕಾಯವನ್ನಾಗಲೀ ಕಾಯಾಭಿಮಾನವನ್ನಾಗಲೀ ಸಮರ್ಪಿಸುವ ಉದ್ದೇಶವೇನು ? ಎಂಬುದಾಗಿ ಜಿಜ್ಞಾಸೆಯು ಸರ್ವರಲ್ಲಿ ಉಂಟಾಗುವುದು ಸಹಜವೇ ಸರಿ. ಈ ಸಂಸಾರ

ದಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಜೀವಿಯು ಅನ್ಯರ ವಸ್ತುಗಳನ್ನು ತನ್ನಲ್ಲಿಟ್ಟುಕೊಂಡು ಅವುಗಳು ತನ್ನವೆನ್ನುವ ಭಾವನೆಯನ್ನು ತಾಳಿ ವ್ಯವಹರಿಸುತ್ತಿರುತ್ತಾನೆ. ಈ ರೀತಿಯಾದ ಇವನ ವ್ಯವಹಾರವೇ ಇವನ ಅನಂತ ದುಃಖಕ್ಕೆ ಕಾರಣವಾಗಿರುತ್ತದೆ. ಅಂತೆಯೇ ಶಾಸ್ತ್ರಗಳು ಜೀವಿಯ ಈ ಭಾವನೆಯನ್ನು ದೂರಮಾಡಲು ಅನೇಕ ವಿಧವಾಗಿ ಉಪದೇಶ ಮಾಡಿವೆ. ಈಶಾವಾಸ್ಯೋಪನಿಷತ್ತಿನಲ್ಲಿ ''ಈಶಾವಾಸ್ಯಮಿದಂ ಸರ್ವಂ'' ಎಂಬುದಾಗಿ ಉಪದೇಶಿಸಿ ಸಂಪೂರ್ಣವಾದ ವಿಶ್ವವು ಈಶ್ವರನದೇ ಆಗಿರುತ್ತದೆ. ಆದರೂ ಜೀವಿಗಳು ನನ್ನದೆನ್ನುವ ಅಭಿಮಾನವನ್ನು ಮಾಡಿಕೊಳ್ಳುತ್ತಲೇ ಇರುತ್ತಾರೆ. ನಾವು ಈ ಸ್ಥೂಲ ಶರೀರಕ್ಕೆ ನಮ್ಮದು, ನಮ್ಮದು ಎನ್ನುತ್ತೇವೆ. ಆದರೆ ವಾಸ್ತವಿಕವಾಗಿ ವಿಚಾರಮಾಡಲು ಇದು ನಮ್ಮದಾಗಿರದೆ ನಮ್ಮ ತಂದೆ ತಾಯಿಗಳ ರೇತೋ–ರಕ್ತಗಳದಾಗಿರುತ್ತದೆ. ಅವರ ಶರೀರಗಳು ಅವರ ತಂದೆ–ತಾಯಿಗಳವು ಇರುತ್ತವೆ. ಹೀಗೆ ಈ ಪರಂಪರೆ ಹಿಂದಕ್ಕೆ ಹಿಂದಕ್ಕೆ ಹೋದಂತೆಲ್ಲ ಕೊನೆಯದಾಗಿ ಶಿವಶಕ್ತಿಯರೇ ಸರ್ವರಿಗೂ ತಂದೆ–ತಾಯಿಗಳಾಗಿರುತ್ತಾರೆ. ಅಂತೆಯೇ ಮಹಾಕವಿ ಕಾಳಿದಾಸನು–

> ವಾಗರ್ಥಾವಿವಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
> ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ॥

ಈ ತನ್ನ ರಘುವಂಶ ಮಹಾಕಾವ್ಯದ ಮಂಗಲಾಚರಣದಲ್ಲಿ ಶಿವಶಕ್ತಿಯರನ್ನೂ ಜಗತ್ತಿನ ತಂದೆ–ತಾಯಿಗಳೆಂಬುದಾಗಿ ತಿಳಿಯಪಡಿಸಿದ್ದಾನೆ. 'ತ್ವಮೇವ ಮಾತಾ ಚ ಪಿತಾತ್ವಮೇವ' ಎಂಬ ಸಂಸ್ಕೃತ ಶ್ಲೋಕದಲ್ಲಿಯೂ ಸಹ ಈ ವಿಷಯವು ನಿರೂಪಿಸಲ್ಪಟ್ಟಿದೆ. ಇದೇ ವಿಷಯವನ್ನು ಶ್ರೀ ಬಸವಣ್ಣನವರೂ ಸಹ–

> ತಂದೆ ನೀನು, ತಾಯಿ ನೀನು,
> ಬಂಧು ನೀನು, ಬಳಗ ನೀನು.
> ನೀನಲ್ಲದೆ ಮತ್ತಾರೂ ಇಲ್ಲವಯ್ಯಾ,
> ಕೂಡಲಸಂಗಮದೇವಾ ॥

ಎಂಬ ತಮ್ಮ ಈ ವಚನದಲ್ಲಿ ವಿವರಿಸಿದ್ದನ್ನು ಕಾಣಬಹುದು. ಸರ್ವ ಜೀವಿಗಳ ಶರೀರಗಳು ಶಿವ–ಶಕ್ತಿಯರೆಂಬ ಕಲಾಕಾರರ ಸುಂದರ ಕಲಾಕೃತಿಗಳು. ಎಂಭತ್ನಾಲ್ಕು ಲಕ್ಷ ಪ್ರಕಾರದ ಶರೀರಗಳನ್ನು ಹಾಗೂ ಅವುಗಳ ರಚನಾ ವಿಧಾನವನ್ನು ನೋಡಿದಾಗ ಮತ್ತು ಅದರ ಬಗ್ಗೆ ಸೂಕ್ಷ್ಮಾತಿಸೂಕ್ಷ್ಮವಾಗಿ ವಿಚಾರಮಾಡಿದಾಗ ಶಿವಶಕ್ತಿಯರ ಅದ್ಭುತವಾದ ಕರ್ತೃತ್ವ ಶಕ್ತಿಯು ತಿಳಿದುಬರುತ್ತದೆ. ಶರೀರದಲ್ಲಿರುವ ಅಸ್ಥಿ, ಮಜ್ಜೆ, ಮಾಂಸ, ತ್ವಚೆ ಮತ್ತು ಬುದ್ಧಿ ಮುಂತಾದವುಗಳ ರಚನೆಯು ಅದ್ಭುತವಾದುದು. ತಿಲಮಾತ್ರದ ರೇತೋ–ರಕ್ತಗಳು ತಾಯಿಯ ಗರ್ಭದಲ್ಲಿ ಬೆರೆತು ಸಾವಕಾಶವಾಗಿ ಆಕಾರ ತಳೆಯುವುದನ್ನು ನೋಡಿದಾಗ ಅಚ್ಚರಿ ಪಡೆಯದವರಾರು ? ಈ ಶರೀರದ ನಿರ್ಮಾಣದಲ್ಲಿ ತಂದೆ–ತಾಯಿಗಳು ನಿಮಿತ್ತ ಮಾತ್ರರೇ ಹೊರತು ಅವರೇನೂ ಕರ್ತೃಗಳಲ್ಲ. ಮನುಷ್ಯ ಜಾತಿ ಎನ್ನುವಂಥಾದ್ದು ಒಂದೇಯಾಗಿದ್ದರೂ ಅದರ ಶರೀರಗಳು ಮಾತ್ರ ಪ್ರತಿಯೊಂದು ವಿಲಕ್ಷಣಗಳೇ ಆಗಿರುತ್ತವೆ. ಒಂದು ಆಕಾರದಂತೆ ಇನ್ನೊಂದರ ಆಕಾರವಿರುವುದೇ ಇಲ್ಲ.

ಪ್ರತಿಯೊಂದು ನಿತ್ಯವಿನೂತನವೇ ಆಗಿರುತ್ತವೆ. ಇದು ಶಿವನ ಸೃಷ್ಟಿಯ ಒಂದು ವೈಶಿಷ್ಟ್ಯವು. ಕಾರಖಾನೆಯಲ್ಲಿ ತಯಾರಾಗುವ ವಸ್ತುಗಳೆಲ್ಲ ಒಂದೇ ತೆರನಾಗಿರುತ್ತವೆ. ಅವುಗಳಲ್ಲಿ ಯಾವುದೇ ವಿಧವಾದ ವ್ಯತ್ಯಾಸವು ಇರುವುದಿಲ್ಲ. ಅಂತೆಯೇ ಒಂದೇ ತೆರನಾದ ವಸ್ತುಗಳನ್ನು ಬೇರೆ ಬೇರೆಯಾಗಿ ಗುರುತಿಸಲೋಸುಗ ಅವುಗಳ ಮೇಲೆ ಕ್ರಮ ಸಂಖ್ಯೆಯನ್ನು ಅಚ್ಚುಮಾಡಲಾಗುತ್ತದೆ. ಆದರೆ ಶಿವನ ಸೃಷ್ಟಿಯಲ್ಲಿ ಬಂದಿರುವ ಯಾವ ಪದಾರ್ಥದ ಮೇಲೂ ಕ್ರಮಸಂಖ್ಯೆಯ ಪಡಿಯಚ್ಚು ಇರುವುದಿಲ್ಲ. ಎಲ್ಲವೂ ಸ್ವತಃ ಆಕಾರ-ಪ್ರಕಾರಾದಿಗಳಲ್ಲಿ ಭಿನ್ನಭಿನ್ನಗಳೇ ಆಗಿರೋಣದರಿಂದ ಅವುಗಳನ್ನು ಬೇರೆ ಬೇರೆಯಾಗಿ ಗುರುತಿಸಲು ಕ್ರಮಸಂಖ್ಯೆಗಳ ಅವಶ್ಯಕತೆ ಇರುವುದಿಲ್ಲ. ಹೀಗೆ ಈ ಜಗ ವೆಲ್ಲವೂ ಶಿವನದೇ ಆದ ಒಂದು ವಿಲಕ್ಷಣವಾದ ಸೃಷ್ಟಿಯು.

ನಮ್ಮೆಲ್ಲರಿಗೆ ದೊರೆತಿರುವ ಈ ಶರೀರಗಳು ಮೇಲೆ ವಿವರಿಸಿದ ವಿಧಾನದಿಂದ ವಿಚಾರಿಸಲಾಗಿ ಶಿವನವುಗಳೇ ಆಗಿರುತ್ತವೆ. ಆದ್ದರಿಂದ ಅವನ ಈ ದೇಹವನ್ನು ಅವನಿಗೇ ಸಮರ್ಪಿಸಿದಾಗ ಅರ್ಥಾತ್ ಆ ದೇಹದ ಮೇಲಿರುವ ತನ್ನದೆಂಬ ಭಾವನೆಯನ್ನು ಕಳೆದು ಕೊಂಡಾಗ ಕಾಯಾರ್ಪಿತವೆಂಬುದಾಗಿ ಕರೆಸಿಕೊಳ್ಳುವುದು. ನದಿಯ ನೀರನ್ನು ಅರ್ಘ್ಯ ರೂಪದಲ್ಲಿ ಪುನಃ ನದಿಗೇ ಸಮರ್ಪಿಸಿದಾಗ ಆ ವ್ಯಕ್ತಿಗೆ ಆ ಭಾವನಾತ್ಮಕ ಕ್ರಿಯೆಯಿಂದ ಅಪೂರ್ವ (ಪುಣ್ಯ)ವು ಪ್ರಾದುರ್ಭವಿಸುವಂತೆ, ಕಾಯದ ಮೇಲಿನ ಮಮತ್ವ ಭಾವನೆ ಯನ್ನು ತ್ಯಜಿಸಿ ಅದನ್ನು ಶಿವಾರ್ಪಿತಗೊಳಿಸಲಾಗಿ ಆ ಅರ್ಪಕನಲ್ಲಿ ತನ್ನಲ್ಲಿ ಬಂದಿರುವ ಔದಾರ್ಯಭಾವನೆಯಿಂದಾಗಿ ಅವನಿಗೆ ಶಿವತ್ವಭಾವನೆಯು ಪ್ರಾಪ್ತವಾಗುವುದು. ನಾವು ನಮ್ಮ ಕಾಯವನ್ನು ಶಿವಾರ್ಪಿತಗೊಳಿಸಲು ನಮ್ಮ ವ್ಯವಹಾರಕ್ಕೆ ಕಾಯವೇ ಉಳಿಯುವ ದಿಲ್ಲವಲ್ಲ ಎಂಬ ಭಾವನೆಯನ್ನು ತಾಳುವ ಅವಶ್ಯಕತೆ ಇರುವುದಿಲ್ಲ. ಓರ್ವ ತಾಯಿಯು ತನ್ನ ಮಗುವಿಗೆ ತಿನ್ನಲುಕೊಟ್ಟ ಪದಾರ್ಥವನ್ನು ಒಂದು ವೇಳೆ ಮಗು ಅತ್ಯಂತ ಪ್ರೀತಿ ಯಿಂದ ತನ್ನ ತಾಯಿಯ ಬಾಯಿಯಲ್ಲಿ ಇಡಲು ಹೋದಾಗ ತಾಯಿಯು ಅದನ್ನು ತಿಂದು ಹಾಕದೆ ಅದೇ ವಸ್ತುವನ್ನೇ ಪುನಃ ಮಗುವಿನ ಬಾಯಿಯಲ್ಲಿಟ್ಟು ಅದನ್ನು ಮುದ್ದಾಡಿ ಅಪ್ಪಿಕೊಂಡು ಸಂತೋಷ ಪಡುವುದನ್ನು ಲೌಕಿಕದಲ್ಲಿ ಕಾಣುತ್ತೇವೆ. ಇಲ್ಲಿ ಮಗುವಿನ ಈ ವ್ಯವಹಾರದಿಂದ ಅದರ ಔದಾರ್ಯಗುಣದ ಅಭಿವ್ಯಕ್ತಿಯಾಗುವುದಲ್ಲದೆ ಮಗು ತಾಯಿಯ ಅತಿಯಾದ ಸ್ನೇಹಕ್ಕೆ ಪಾತ್ರವಾಗುವುದು. ಇದೇ ಪ್ರಕಾರವಾಗಿ ಶಿವನದೇ ಆಗಿರುವಂತಹ ಈ ಶರೀರಾದಿಗಳನ್ನು ಶಿವನ ಸೇವೆಗಾಗಿ ಪ್ರೀತಿಯಿಂದ ಸಮರ್ಪಿಸಿ ಅದರ ಮೇಲಿನ ಮಮತ್ವ ಭಾವನೆಯನ್ನು ಪರಿತ್ಯಜಿಸಲು ನಮ್ಮ ಮನಸ್ಸಿನಲ್ಲಿಯ ವ್ಯಷ್ಟಿ ಭಾವನೆಯಡಗಿ ಸಮಷ್ಟಿ ಭಾವನೆಯು ತಲೆದೋರುವುದು. ಈ ಸಮಷ್ಟಿ ಭಾವನೆ ಯಿಂದಲೇ ಜೀವನು ಶಿವನಾಗುವನು. ಕೆಲವು ಜನ ಮಕ್ಕಳು ತಾಯಿಕೊಟ್ಟ ಪದಾರ್ಥ ವನ್ನು ತಾಯಿಗೆ ಕೊಡದೆ ತಾವೇ ತಿನ್ನುತ್ತಿರುವಂತೆ ಸಂಸಾರದಲ್ಲಿಯ ಕೋಟಿ ಕೋಟಿ ಜೀವಿಗಳು ತಮ್ಮ ಶರೀರ ಹಾಗೂ ಮನಸ್ಸುಗಳನ್ನು ಶಿವಾರ್ಪಿತಗೊಳಿಸದೆ ಮಮತ್ತ್ವ ಭಾವನೆಯಿಂದೊಡಗೂಡಿ ಅನುದಾರರಾಗಿ ಕೃಪಣರಂತೆ ಸಂಕುಚಿತ ಜೀವನವನ್ನು ಸಾಗಿಸುತ್ತಿರುತ್ತಾರೆ. ಇಂತಹ ಈ ಜೀವನವು ಸಾಮಾಜಿಕ ವ್ಯವಹಾರದಲ್ಲೂ ಸಹ ನಿರುಪಯುಕ್ತವೆನಿಸುವುದು. ಈಗಾಗಲೇ ಹುಟ್ಟಿ ನಾಲ್ವತ್ತು-ಐವತ್ತು-ಎಪ್ಪತ್ತು-

ಎಂಭತ್ತು ವರ್ಷಗಳಾಗಿದ್ದರೂ ಅದೆಷ್ಟೋ ಜೀವಿಗಳು ತಮ್ಮ ಕಾಯ–ಮನಸ್ಸುಗಳನ್ನು ಶಿವಾರ್ಪಿತ ಗೊಳಿಸುವ ಭಾವನೆಯನ್ನೂ ಸಹ ತಳೆದಿರುವುದಿಲ್ಲ. ಆದರೆ ಶಿವನ ವಸ್ತುವನ್ನೂ ಶಿವಾರ್ಪಿತ ಮಾಡದ ಹೊರತು ಜೀವಿಯು ಎಂದೂ ಸುಖಿಯಾಗಲಾರನು. ತಾಯಿಯು ಕೊಟ್ಟ ಪದಾರ್ಥವನ್ನು ತಾಯಿಗೇ ಅರ್ಪಿಸಿದ ಮಗುವು ತಾಯಿಯ ಅಪಾರ ಪ್ರೇಮಕ್ಕೆ ಪಾತ್ರವಾಗುವಂತೆ ತನ್ನ ಕಾಯವನ್ನು ಶಿವನಿಗೆ ಅರ್ಪಣ ಮಾಡುವ ಶಿವಯೋಗಿಯು ಶಿವನ ಅಪಾರವಾದ ಕೃಪೆಗೆ ಪಾತ್ರನಾಗುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕಾಯದ ಅಭಿಮಾನವನ್ನು ತ್ಯಜಿಸಿ ಅದನ್ನು ಶಿವಾರ್ಪಿತಗೊಳಿಸುವ ಶಿವಯೋಗಿಯು ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆಂಬ ವಿಷಯವನ್ನು–

ಯದಾ ಯೋಗೀ ನಿಜಂ ದೇಹಂ ಶಿವಾಯ ವಿನಿವೇದಯೇತ್ ।
ತದಾ ಭವತಿ ತದ್ರೂಪಂ ಶಿವರೂಪಂ ನ ಸಂಶಯಃ ॥

(ಸಿ. ಶಿ. ೧೭–೩೫)

ಈ ತೆರನಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವಯೋಗಿಯು ತನ್ನ ಶರೀರವನ್ನು ಯಾವಾಗ ಶಿವಾರ್ಪಣ ಮಾಡುವನೋ ಆಗ ಅವನು ಶಿವರೂಪನೇ ಆಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಶರೀರದ ಮೇಲಿನ ನನ್ನದೆಂಬ ಅಭಿಮಾನವನ್ನು ಕಳೆದುಕೊಳ್ಳುವುದೇ ಕಾಯಾರ್ಪಿತವೆಂಬುದಾಗಿ ಪೂಜ್ಯಪಾದರು ಆದೇಶಿಸಿದ್ದಾರೆ. ನಮಗೆ ದೊರೆತಿರುವ ಈ ಕಾಯವು ಮೂಲತಃ ಪಂಚಭೌತಿಕವಾದದ್ದು. ತಾತ್ವಿಕ ದೃಷ್ಟಿಯಿಂದ ದೇಹವನ್ನು ಪರೀಕ್ಷಿಸಿದಾಗ ಇಲ್ಲಿ ಪಂಚಭೂತಗಳ ಅಂಶಗಳೇ ಪ್ರಾಪ್ತಗಳಾಗುವವು. ದೇಹದೊಳಗೆ ವಾಸಿಸುವ ಜೀವಾತ್ಮರು ಇದನ್ನು ಬಿಟ್ಟು ಹೋದಾಗ ಈ ಶರೀರವನ್ನು ಪಂಚಭೂತಗಳಿಗೆ ಸಮರ್ಪಿಸಲಾಗುವುದು. ಇಂತಹ ವಿಧಿಯನ್ನು ನಾವು ದಿನಾಲೂ ನೋಡುತ್ತಲೇ ಇರುತ್ತೇವೆ. ಯಾವುದೊಂದು ಕಾರ್ಯವು ನಷ್ಟವಾದಾಗ ಅದು ತನ್ನ ಉಪಾದಾನ ಕಾರಣದಲ್ಲಿಯೇ ವಿಲೀನವಾಗುವುದು. ಮಣ್ಣಿನಿಂದ ನಿರ್ಮಾಣಗೊಂಡ ಮಡಿಕೆಯು ಒಡೆದಾಗ ಅದನ್ನು ನಾವು ಹೊರಗೆ ಎಸೆದು ಬಿಡುತ್ತೇವೆ. ಅದರ ತುಣುಕುಗಳು ಕಾಲಾಂತರದಲ್ಲಿ ಮಣ್ಣಿನೊಂದಿಗೆ ಮಣ್ಣಾಗಿ ಹೋಗುತ್ತವೆ. ಇದರಂತೆಯೇ ಈ ಸ್ಥೂಲ ಶರೀರವು ಪ್ರಾಣಾದಿಗಳಿಂದ ವಿಯೋಗವನ್ನು ಹೊಂದಿದಾಗ ಇದನ್ನು ಭೂಮಿ, ಅಗ್ನಿ ಮತ್ತು ಜಲಗಳೆಂಬ ಸ್ಥೂಲಮಹಾಭೂತಗಳಿಗೆ ಸಮರ್ಪಿಸಿ ಅಂತ್ಯ ವಿಧಿಯನ್ನು ಮಾಡಲಾಗುತ್ತದೆ. ಇದರಿಂದ ಈ ದೇಹವು ಪಂಚಭೌತಿಕವೆಂಬುದು ಸಹಜವಾಗಿ ಸಿದ್ಧವಾಗುವುದು ಏಕೆಂದರೆ ಯಾವುದೊಂದು ಕಾರ್ಯದ ಅಸ್ತಿತ್ವ ವಿನಾಶಗಳು ಅದರ ಉಪಾದಾನ ಕಾರಣದಲ್ಲಿಯೇ ಸಂಭವಿಸುತ್ತವೆ. ಸ್ಥೂಲ ಶರೀರದ ಉತ್ಪತ್ತಿಗೆ ಪಂಚ ಮಹಾಭೂತಗಳೇ ಉಪಾದಾನ ಕಾರಣಗಳಾಗಿರುವುದರಿಂದ ಅದರ ವಿನಾಶವೂ ಸಹ ಅವುಗಳಲ್ಲಿಯೇ ಸಂಭವಿಸುತ್ತದೆ.

ಈ ಪಂಚಮಹಾಭೂತಗಳು ಶಿವನ ವ್ಯಕ್ತವಾದ ಸ್ವರೂಪಗಳು. ಅಂತೆಯೇ ಶಾಸ್ತ್ರಗಳಲ್ಲಿ ಶಿವನ ಅಷ್ಟತನುಗಳನ್ನು ವಿವರಿಸುವಾಗ ಅವುಗಳಲ್ಲಿ ಈ ಪಂಚಮಹಾಭೂತ

ಗಳೂ ಸಹ ಪರಿಗಣಿಸಲ್ಪಟ್ಟಿವೆ. ಅಂದರೆ ಪೃಥ್ವಿ, ಅಪ್ಪು, ಮೊದಲಾದ ಈ ಪಂಚಮಹಾ ಭೂತಗಳು ಶಿವನ ವ್ಯಕ್ತವಾದ ಶರೀರಗಳು. ಶಿವನೇ ಪೃಥ್ವಿ ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಆತ್ಮರೂಪದಲ್ಲಿ ವ್ಯಕ್ತನಾಗಿರುತ್ತಾನೆ. ಇವುಗಳೇ ಅವನ ವ್ಯಕ್ತವಾದ ಅಷ್ಟತನುಗಳು. ಇದೇ ವಿಷಯವನ್ನು ಪೂಜ್ಯಪಾದರು ಶಿವ-ಜಗನ್ಮಯಸ್ಥಲದಲ್ಲಿ–

ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥

(ಸಿ. ಶಿ. ೧೦–೨೦)

ಎಂಬುದಾಗಿ ಉಪದೇಶಿಸಿದ್ದಾರೆ. ಬೇರು, ಕಾಂಡ, ಟೊಂಗೆ, ಹೂವು ಮತ್ತು ಕಾಯಿ ಮೊದಲಾದವುಗಳ ರೂಪದಲ್ಲಿ ಗಿಡವೇ ತೋರುವಂತೆ ಭೂಮ್ಯಾದಿಗಳ ರೂಪದಲ್ಲಿ ಶಿವನೇ ವ್ಯಕ್ತವಾಗಿ ತೋರುತ್ತಿದ್ದಾನೆ. ಇದರಿಂದ ಭೂಮ್ಯಾದಿಗಳು ಶಿವರೂಪವೆಂಬುದಾಗಿ ತಿಳಿದುಬರುತ್ತದೆ. ಅಂದಾಗ ನಾವು ನಮ್ಮ ಈ ಪಾಂಚಭೌತಿಕ ಸ್ಥೂಲದೇಹವನ್ನು ಶಿವನಿಗೆ ಸಮರ್ಪಿಸಿದಾಗ ನಮ್ಮದ್ಯಾವುದನ್ನೂ ಸಮರ್ಪಿಸುತ್ತಿರುವುದಿಲ್ಲ, ಶಿವನದೇ ಆದ ವಸ್ತುವನ್ನು ಶಿವನಿಗೇ ಸಮರ್ಪಿಸುತ್ತಿರುತ್ತೇವೆ ಎಂಬುದು ತಿಳಿದುಬರುತ್ತದೆ. ಈ ರೀತಿಯಾದ ವಿವೇಕವು ಮನಸ್ಸಿನಲ್ಲಿ ಮೂಡಿತೆಂದರೆ ಮನುಷ್ಯನು ಸಹಜವಾಗಿ ನಿರಭಿಮಾನಿಯಾಗಬಲ್ಲನು. ನಾವು ವಸ್ತುಗಳನ್ನು ಸಹಜವಾಗಿ ತ್ಯಜಿಸಬಹುದು. ಆದರೆ ಆ ವಸ್ತುವಿನ ಮೇಲಿರುವ ನನ್ನದೆಂಬ ಅಭಿಮಾನವನ್ನು ಅಷ್ಟು ಸಹಜವಾಗಿ ತ್ಯಜಿಸಲಾಗುವುದಿಲ್ಲ, ಯಾವುದೋ ಒಂದು ಸತ್ಕಾರ ಸಮಾರಂಭದಲ್ಲಿ ಯಾರಿಗಾದರೂ ಶಾಲು ಮುಂತಾದ ವಸ್ತುಗಳನ್ನು ಕೊಟ್ಟಾಗ ಆ ವ್ಯಕ್ತಿಯು ಆ ಶಾಲನ್ನು ಹೊದ್ದುಕೊಂಡು ಬೇರೊಂದು ಪ್ರಸಂಗದಲ್ಲಿ ನಮ್ಮೆದುರು ಬಂದಾಗ ಅವನು ಹೊದ್ದ ಆ ಶಾಲನ್ನು ಕಂಡೊಡನೆ 'ಇದು ನಾನೇ ಕೊಟ್ಟ ಶಾಲು' ಎಂದು ತನ್ನ ಮನಸ್ಸಿನಲ್ಲಿ ಅಭಿಮಾನ ಮೂಡುವುದಲ್ಲದೆ ತನ್ನ ಸಮೀಪದ ವ್ಯಕ್ತಿಗೆ 'ಇದೋ ನೋಡಿ ಆತನು ಹೊದ್ದಿರುವ ಶಾಲು ನನ್ನದೇ, ಮೊನ್ನೆ ಅವನ ಸತ್ಕಾರ ಸಮಾರಂಭದಲ್ಲಿ ಕೊಡಲಾಗಿದೆ'. ಎಂಬುದಾಗಿ ಹೇಳುವ ವ್ಯಕ್ತಿಗಳನ್ನು ಅನೇಕ ಕಡೆಗಳಲ್ಲಿ ಕಾಣಬಹುದು. ಹೀಗೆ ಕೊಟ್ಟ ವಸ್ತುವಿನ ಮೇಲೆ ಪುನಃ ನನ್ನದೆಂಬ ಅಭಿಮಾನವನ್ನು ತಾಳಿದರೆ ಆ ಕೊಡುವಿಕೆಗೆ ಯಾವ ಅರ್ಥವೂ ಇರುವುದಿಲ್ಲ, ಅಂತೆಯೇ ಶಾಸ್ತ್ರಕಾರರು ತಾನು ಮತ್ತೊಬ್ಬರಿಗೆ ಮಾಡಿದ ಸತ್ಕಾರವನ್ನಾಗಲೀ, ಉಪಕಾರವನ್ನಾಗಲೀ, ನೆನಪಿಡದೆ ಅದನ್ನು ಆಗಿಂದಾಗಲೇ ಮರೆತು ಬಿಡಬೇಕೆಂಬುದಾಗಿ ಹೇಳಿರುತ್ತಾರೆ. ಎಲ್ಲಿಯವರೆಗೆ ನಮಗೆ ನಾವು ಮಾಡಿದ ದಾನ ಹಾಗೂ ಉಪಕಾರಾದಿಗಳ ವಿಸ್ಮರಣವಾಗುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಮಾನಸಿಕ ಪ್ರಗತಿಯಾಗಲಾರದು. 'ನಾನು ಮಾಡಿದೆ, ಇದೆಲ್ಲ ನನ್ನದು' ಎಂಬ ಮನಸ್ಸಿನಲ್ಲಿಯ ಈ ಗಂಟುಗಳು ನಮ್ಮನ್ನು ಕಟ್ಟಿ ಹಾಕಿ ನಮ್ಮ ಪ್ರಗತಿಗೆ ಬಾಧಕವಾಗಿರುತ್ತವೆ.

ಒಂದು ಸಾರೆ ಕಾಶೀ ಕ್ಷೇತ್ರದಲ್ಲಿಯ ಕೆಲವು ಜನ ಗಾಂಜಾಬಡಕರು ರಾತ್ರಿಯ ಹೊತ್ತಿನಲ್ಲಿ ಕಾಶಿಯಿಂದ ನೌಕೆಯ ಮುಖಾಂತರ ಪ್ರಯಾಗಕ್ಕೆ ಹೋಗುವ ವಿಚಾರವನ್ನು

ಮಾಡಿ ಗಾಂಜಾದ ನಿಶೆಯಲ್ಲಿಯೇ ಒಂದು ಖಾಲೀ ನೌಕೆಯಲ್ಲಿ ಬಂದು ಕುಳಿತು ಕೊಂಡರು ಮತ್ತು ತಾವೇ ಅದನ್ನು ನಡೆಸುವುದಾಗಿ ನಿರ್ಣಯಿಸಿಕೊಂಡು ಅಲ್ಲಿಯೇ ಇಡಲ್ಪಟ್ಟಿರುವ ಹುಟ್ಟುಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ನೌಕೆಯನ್ನು ನಡೆಸ ತೊಡಗಿದರು. ಬೆಳಗಾಗುವವರೆಗೆ ಹುಟ್ಟು ಹಾಕುತ್ತಲೇ ಇದ್ದರು. ಬೆಳಿಗ್ಗೆ ಅವರ ಆ ನಿಶೆಯು ಕಡಿಮೆಯಾಗಿತ್ತು, ಆಗ ಅವರಲ್ಲೋರ್ವನು ಕಣ್ಣು ತೆರೆದು ನೋಡಿ ಇದೇನು ಬೆಳಗಾಗುವವರೆಗೆ ಹುಟ್ಟು ಹಾಕಿದರೂ ನಾವಿನ್ನೂ ಕಾಶೀ ಕ್ಷೇತ್ರದ ದಶಾಶ್ವಮೇಧ ಘಾಟದಲ್ಲಿಯೇ ಇದ್ದೇವಲ್ಲಾ ! ಅದೇಕೆ ತಾನೆ ನಾವು ಪ್ರಯಾಗವನ್ನು ತಲುಪಲಿಲ್ಲ ? ಎಂಬುದಾಗಿ ಉದ್ಗರಿಸಿದನು. ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ. ರಾತ್ರಿಯೆಲ್ಲಾ ಹುಟ್ಟು ಹಾಕಿದ್ದೇನೋ ನಿಜ. ಆದರೆ ನೌಕೆ ಒಂದಿಷ್ಟೂ ಮುಂದೆ ಸರಿಯದಿರುವ ಕಾರಣ ವೇನು ? ಎಂಬುದಾಗಿ ನೋಡಲು ದಡದಲ್ಲಿರುವ ಗೂಟಕ್ಕೆ ಆ ನೌಕೆಯನ್ನು ಕಟ್ಟಿ ಹಾಕಿದ್ದು ಕಂಡು ಬಂದಿತು. ನೌಕೆಯನ್ನು ಹುಟ್ಟು ಹಾಕುವ ಪೂರ್ವದಲ್ಲಿ ನಾವು ಈ ಹಗ್ಗವನ್ನು ಬಿಚ್ಚಲಿಲ್ಲವಲ್ಲ ! ಎಂಬ ಅರಿವು ಅವರಿಗಾಯಿತಂತೆ. ಕಟ್ಟಿದ ಹಗ್ಗವನ್ನು ಬಿಚ್ಚದೆ ನೌಕೆಯು ಮುಂದೆ ಹೋಗಲು ಸಾಧ್ಯವಾಗದಿರುವಂತೆ ನಾನು–ನನ್ನದೆಂಬ ಈ ಮನದ ಮೋಹ ಗ್ರಂಥಿಗಳನ್ನು ಬಿಚ್ಚದೆ ಮನುಷ್ಯನಿಗೆ ಆಧ್ಯಾತ್ಮಿಕ ಪ್ರಗತಿಯು ಸಾಧ್ಯವಾಗುವುದಿಲ್ಲ.

ನಾನು ನನ್ನದೆಂಬ ಈ ಅಭಿಮಾನವನ್ನು ಸಂಪೂರ್ಣವಾಗಿ ತ್ಯಜಿಸಿದರೆ ಲೋಕದ ವ್ಯವಹಾರವು ನಡೆಯುವದಾದರೂ ಹೇಗೆ ? ಎಂಬ ವಿಚಾರವು ಪ್ರತಿಯೊಬ್ಬರ ಮನಸ್ಸಿನಲ್ಲಿ ಒಡಮೂಡುವುದು ಸಹಜ. ಆದರೆ ವ್ಯಾವಹಾರಿಕ ಕಲೆಯನ್ನು ನಾವು ಕಲಿತು ಕೊಂಡಿದ್ದರೆ ನಾವು ವ್ಯವಹಾರವನ್ನು ಮಾಡಿಯೂ ಸಹ ಆ ವ್ಯವಹಾರದಿಂದ ಅಲಿಪ್ತರಾಗಲು ಬರುತ್ತದೆ. ನಾವು ನಮ್ಮ ವ್ಯಾವಹಾರಿಕ ಜೀವನವನ್ನು ಅಭಿನಯ ಜೀವನವನ್ನಾಗಿ ಮಾರ್ಪಡಿಸಿಕೊಂಡಾಗ ವ್ಯವಹಾರದ ಆಗುಹೋಗುಗಳು ನಮಗೆ ಅಂಟಿಕೊಳ್ಳಲಾರವು. ರಾಮ–ರಾವಣಾದಿಗಳ ಅಭಿನಯವನ್ನು ಮಾಡುವ ವ್ಯಕ್ತಿಗಳು ತಾವು ಅಭಿನಯಿಸುವ ಘಟನೆಯಿಂದ ಅಲಿಪ್ತರಾಗಿಯೇ ಇರುತ್ತಾರೆ. ಸೀತೆಯ ವಿಯೋಗದಿಂದ ರಾಮನಪಾತ್ರಧಾರಿಯಾದ ಓರ್ವ ಕಲಾಕಾರನು ರಂಗಮಂಟಪದಲ್ಲಿ ಶೋಕಿಸುವ ಅಭಿನಯವನ್ನು ಮಾಡಿ ಕಲಾಭಿಮಾನಿಗಳ ಮನಸ್ಸಿನಲ್ಲಿ ಶೋಕವನ್ನು ಮೂಡಿಸಿದರೂ ತನ್ನ ಮನಸ್ಸಿನ ಮೇಲೆ ಆ ಶೋಕದ ಲವಲೇಶವೂ ಪರಿಣಾಮವಾಗದಂತೆ ಇರುತ್ತಾನೆ. ಇದೇ ಪ್ರಕಾರವಾಗಿ ಜ್ಞಾನಿಯೂ ಸಹ ಬಹಿರಂಗದಲ್ಲಿ ಆಸಕ್ತನಂತೆ ತೋರುತ್ತಿದ್ದರೂ ಅಂತರಂಗದಲ್ಲಿ ನಿರಾಸಕ್ತನಾಗಿರುತ್ತಾನೆ. ಅಂತೆಯೇ ಅವನು ತನ್ನ ದೇಹಾದಿಗಳನ್ನು ಹಾಗೂ ಅವುಗಳ ಮೇಲಿನ ತನ್ನದೆಂಬ ಅಭಿಮಾನವನ್ನು ಸಂಪೂರ್ಣವಾಗಿ ತ್ಯಜಿಸಿ ಕಾಯಾರ್ಪಿತನೆಂದು ಅನಿಸಿಕೊಳ್ಳುತ್ತಾನೆ.

ಹೀಗೆ ಕಾಯಾರ್ಪಿತವನ್ನು ಮಾಡಿದ ಶಿವಯೋಗಿಯು ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ. ಸಾಧಕನು ತನ್ನ ಸಾಧನೆಯ ಬಲದಿಂದ ತನ್ನ ಆರಾಧ್ಯ ಸ್ವರೂಪವನ್ನು ಪಡೆಯಬೇಕೇ ವಿನಃ ಕೇವಲ ಆರಾಧ್ಯದೇವರ ಅನುಯಾಯಿಯಾಗಿರಬಾರದು. ನಮ್ಮ ದೇಶದ ಧಾರ್ಮಿಕ ಪರಂಪರೆಯಲ್ಲಿ ದೇವರಾದವರಿಗಿಂತಲೂ ದೇವರ ಅನುಯಾಯಿ

ಗಳಾದವರೇ ಬಹಳ. ಅಂತೆಯೇ ನಮ್ಮ ಧಾರ್ಮಿಕ ಪರಂಪರೆಗೆ ಶೈವ, ವೈಷ್ಣವ, ಶಾಕ್ತ ಗಾಣಪತ್ಯ, ಬೌದ್ಧ ಜೈನ, ಮತ್ತು ಕ್ರಿಶ್ಚಿಯನ್ ಮುಂತಾದ ಹೆಸರುಗಳಿರುವುದು ಕಂಡು ಬರುತ್ತದೆ. ಇಲ್ಲಿ ಶೈವನೆಂದರೆ ಶಿವನ ಭಕ್ತ ಅಥವಾ ಶಿವನ ಅನುಯಾಯಿ ಎಂದರ್ಥ. ಇದೇ ಪ್ರಕಾರವಾಗಿ ವಿಷ್ಣುವಿನ ಭಕ್ತನಿಗೆ ವೈಷ್ಣವ, ಶಕ್ತಿಯ ಭಕ್ತನಿಗೆ ಶಾಕ್ತ, ? ಗಣಪತಿಯ ಭಕ್ತನಿಗೆ ಗಾಣಪತ್ಯ, ಜಿನನ ಭಕ್ತನಿಗೆ ಜೈನ, ಬುದ್ಧನ ಭಕ್ತನಿಗೆ ಬೌದ್ಧ ಮತ್ತು ಏಸುಕ್ರಿಸ್ತನ ಭಕ್ತನಿಗೆ ಕ್ರಿಶ್ಚಿಯನ್ ಎಂಬುದಾಗಿ ಕರೆಯಲಾಗುತ್ತದೆ. ಈ ಅನುಯಾಯಿಗಳಾದವರು ತಮ್ಮ ಇಷ್ಟ ದೇವರನ್ನು ಪೂಜಿಸುವಲ್ಲಿ ಅವನ ಜಯ ಜಯಕಾರವನ್ನು ಮಾಡುವಲ್ಲಿಯೇ ಮಗ್ನರಾಗಿರುತ್ತಾರೆಯೇ ವಿನಃ ಆ ದೇವರ ಸ್ವರೂಪವನ್ನು ಯಥಾರ್ಥವಾಗಿ ಅರಿತು ಅದೇ ತಾವಾಗಲು ಪ್ರಯತ್ನಿಸುವುದಿಲ್ಲ. ನಮ್ಮ ವಿಚಾರದಲ್ಲಿ ಶಿವನನ್ನು ಪೂಜಿಸುವವನು ಶಿವರೂಪನಾಗಬೇಕೇ ವಿನಃ ಶಿವಭಕ್ತನಾಗಿ ಉಳಿಯಬಾರದು. ಇದೇ ಪ್ರಕಾರವಾಗಿ ಉಳಿದೆಲ್ಲ ದೇವರ ಭಕ್ತರೂ ಸಹ ತಮ್ಮ ಆರಾಧನೆಯ ಬಲದಿಂದ ಆ ದೇವರ ಸ್ವರೂಪರೇ ಆಗಬೇಕು. ಅಂದಾಗಲೇನೇ ಈ ದೇಶದಲ್ಲಿ ಧರ್ಮದಿಂದ ಶಾಂತಿಯು ಸ್ಥಾಪಿತವಾಗಬಲ್ಲದು. ಇಲ್ಲದಿದ್ದರೆ ಓರ್ವ ದೇವರ ಅನುಯಾಯಿಯು ಇನ್ನೋರ್ವ ದೇವರ ಅನುಯಾಯಿಯ ಜೊತೆಗೆ ಕಲಹವನ್ನು ಮಾಡುತ್ತ ನಾವು ಮಾಡುತ್ತಿರುವ ಧರ್ಮಾಚರಣೆಯೇ ಜಗತ್ತಿನಲ್ಲಿ ಅಶಾಂತಿಯನ್ನು ಉಂಟುಮಾಡಲು ಕಾರಣವಾಗುವುದು. ಸದ್ಯಃ ಇದೇ ಸ್ಥಿತಿಯನ್ನೇ ನಾವು ಸರ್ವತ್ರ ಕಾಣುತ್ತಿದ್ದೇವೆ. ಇದರಿಂದಾಗಿಯೇ ಪರಸ್ಪರ ಕಲಹ ಮತ್ತು ಧರ್ಮಾಂತರಗೊಳಿಸುವ ಹೀನ ಕೃತ್ಯಗಳು ಜಗತ್ತಿನಲ್ಲಿ ನಡೆಯುತ್ತ ಬಂದಿವೆ. ಇದೆಲ್ಲವನ್ನು ನಾವು ದೂರೀಕರಿಸಬೇಕಾದರೆ ಎಲ್ಲ ಧರ್ಮಾನುಯಾಯಿಗಳಲ್ಲಿ ಸಮಾನ ಮನೋಭಾವನೆಯು ಮೂಡುವುದು ಪರಮಾವಶ್ಯಕವಾಗಿರುತ್ತದೆ. ಯಾವ ದೇವರೂ ಹೆಚ್ಚು-ಕಡಿಮೆಯವರಾಗಿರುವುದಿಲ್ಲ. ದೇವರೊಬ್ಬನೇ ಅವನ ನಾಮ-ರೂಪಾದಿಗಳು ಭಿನ್ನಗಳಾಗಿರುತ್ತವೆ. ಯಾರು ಯಾವುದೇ ದೇವರನ್ನು ಪೂಜಿಸಿದರೂ ಆ ಪೂಜೆಯು ಆ ಒಬ್ಬನೇ ಆದ ದೇವರಿಗೆ ಸಮರ್ಪಿತವಾಗುತ್ತದೆ. ಆದ ಕಾರಣ ವಿಭಿನ್ನ ದೇವರ ಭಕ್ತರು ಕೇವಲ ಅನುಯಾಯಿ ಭಕ್ತರಾಗಿ ಉಳಿಯದೇ ಆ ದೇವರ ಸ್ವರೂಪ ವನ್ನು ಪಡೆಯಲು ಸಾಧನೆಯನ್ನು ಮಾಡಬೇಕು. ದೇವರ ಸ್ವರೂಪವನ್ನು ಪಡೆದಾಗ ಯಾವ ಕಲಹವೂ ಸಂಭವಿಸುವುದಿಲ್ಲ. ಶೈವ ವೈಷ್ಣವಾದಿಗಳು ಪರಸ್ಪರ ಕಲಹ ಮಾಡು ವಂತೆ ಶಿವ-ವಿಷ್ಣುವಾದಿಗಳಲ್ಲಿ ಅದೆಂದೂ ಕಲಹವಾಗಿರುವುದಿಲ್ಲ. ಆದ್ದರಿಂದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವನಿಗೆ ಕಾಯವನ್ನು ಸಮರ್ಪಿಸಿದವನು ಶಿವ ಭಕ್ತನಾಗುವನೆಂದು ಹೇಳದೆ ಶಿವನೇ ಆಗುತ್ತಾನೆ ಎಂದು ನಿಸ್ಸಂಶಯವಾಗಿ ಅಪ್ಪಣೆ ಕೊಡಿಸಿದ್ದಾರೆ. ಶಿವನಾಗುವುದೆಂದರೆ ಸರ್ವರನ್ನೂ ಸಮಾನವಾದ ದೃಷ್ಟಿಯಿಂದ ನೋಡುವ ಸ್ಥಿತಿಯನ್ನು ಪಡೆಯುವುದೆಂದರ್ಥ. ಈ ಕಾಯಾರ್ಪಿತ ಶಿವಯೋಗಿಯು ಅಂತಹ ದಿವ್ಯ ದೃಷ್ಟಿಯನ್ನು ಉನ್ನತವಾದ ಮನೋಭಾವನೆಯನ್ನು ತಳೆದವನಾಗಿ ರೋಣದರಿಂದ ಅವನು ತನ್ನ ಕಾಯದಲ್ಲಿದ್ದರೂ ಸಾಕ್ಷಾತ್ ಶಿವನೇ ಆಗಿರುತ್ತಾನೆ ಎಂಬು ದಾಗಿ ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕಾಯಾರ್ಪಿತಸ್ಥಲದಲ್ಲಿ ಕಾಯಾರ್ಪಣೆಯ ಅರ್ಥವನ್ನು ಇನ್ನಷ್ಟು ಸ್ಪಷ್ಟಗೊಳಿಸಲೋಸುಗ ಪುನಃ–

ಇಂದ್ರಿಯಪ್ರೀತಿಹೇತೂನಿ ವಿಷಯಾಸಂಗಜಾನಿ ಚ ।
ಸುಖಾನಿ ಸುಖಚಿದ್ರೂಪೇ ಶಿವಯೋಗೀ ನಿವೇದಯೇತ್ ॥

(ಸಿ.ಶಿ. ೧೭–೩೬)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಇಂದ್ರಿಯಗಳಿಗೆ ಪ್ರಿಯವಾಗುತ್ತಿರುವ ವಿಷಯ ಸಂಬಂಧದಿಂದ ಉಂಟಾಗುವ ಎಲ್ಲ ಸುಖಗಳನ್ನು ಸಚ್ಚಿದಾನಂದರೂಪನಾದ ಶಿವನಿಗೆ ಈ ಶಿವಯೋಗಿಯು ಅರ್ಪಿಸಬೇಕಾಗುತ್ತದೆ.

ಕಾಯವೆಂದರೆ ಇಂದ್ರಿಯಗಳ ಸಂಘಾತವೇ ಆಗಿರುತ್ತದೆ. ಇಲ್ಲಿ ಕಾಯಾರ್ಪಣವೆಂಬ ಶಬ್ದಕ್ಕೆ ಇಂದ್ರಿಯಜನ್ಯ ಸುಖವನ್ನು ಸಮರ್ಪಿಸುವುದೆಂಬುದಾಗಿ ಪ್ರತಿಪಾದಿಸಲಾಗಿದೆ. ಅಜ್ಞರಾದ ಜೀವಿಗಳು ಇಂದ್ರಿಯ ವಿಷಯಗಳ ಸಂಬಂಧದಿಂದ ಉಂಟಾಗುವ ಸುಖವೇ ನಿಜಸುಖವೆಂದು ಹಗಲಿರುಳು ಪರಿತಪಿಸುತ್ತಿರುತ್ತಾರೆ. ಆದರೆ ಈ ಕಾಯಾರ್ಪಿತ ಸ್ಥಲದ ಶಿವಯೋಗಿಯು ಸದಾ ಆತ್ಮಾನಂದದಲ್ಲಿ ತಲ್ಲೀನನಾಗಿರೋಣದರಿಂದ ಅವನಿಗೆ ವಿಷಯ ಜನ್ಯ ಸುಖಗಳ ಅಭಿಲಾಷೆಯಿರುವುದಿಲ್ಲ. ಆದರೂ ವ್ಯವಹಾರಿಕ ಜೀವನದಲ್ಲಿ ತನಗುಂಟಾದ ಐಂದ್ರಿಯಕ ಸುಖವನ್ನೂ ಸಹ ತತ್ತದಿಂದ್ರಿಯಗಳಲ್ಲಿ ಅಧಿಷ್ಠಿತವಾಗಿರುವ ಆಚಾರಾದಿ ಲಿಂಗಗಳಲ್ಲಿ ಸಮರ್ಪಿಸಿ ಅದನ್ನೂ ಸಹ ಪ್ರಸಾದರೂಪದಲ್ಲಿ ಸ್ವೀಕರಿಸೋಣದರಿಂದ ಅವನು ಸದಾಪ್ರಸನ್ನನೇ ಆಗಿರುತ್ತಾನೆ. ಅಂತೆಯೇ ಪೂಜ್ಯಪಾದರು ಕಾಯಾರ್ಪಿತ ಸ್ಥಲದ ಶಿವಯೋಗಿಗೆ ಕರಣಜನ್ಯ ಸುಖಗಳನ್ನು ಸಹ ಸಮರ್ಪಿಸಬೇಕೆಂಬುದಾಗಿ ಆದೇಶವಿತ್ತಿದ್ದಾರೆ.

ಪೂರ್ವದಲ್ಲಿ ಹೇಳಿದ ವಿಷಯವನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪೂಜ್ಯಪಾದರು ಪುನಃ–

ದರ್ಶನಾತ್ ಸ್ಪರ್ಶನಾದ್ ಭುಕ್ತೇಃ ಶ್ರವಣಾದ್ ಘ್ರಾಣನಾದಪಿ ।
ವಿಷಯೇಭ್ಯೋ ಯದುತ್ಪನ್ನಂ ಶಿವೇ ತತ್ಸುಖಮರ್ಪಯೇತ್ ॥

ದೇಹದ್ವಾರೇಣ ಯದ್ಯತ್ ಸ್ಯಾತ್ ಸುಖಂ ಪ್ರಾಸಂಗಮಾತ್ಮನಃ ।
ತತ್ತನ್ನಿವೇದಯನ್ ಶಂಭೋರ್ಯೋಗೀ ಭವತಿ ನಿರ್ಮಲಃ ॥

(ಸಿ. ಶಿ. ೧೭ ; ೩೭–೩೮)

ಈ ವಿಧವಾಗಿ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ ನೋಡುವ ಸ್ಪರ್ಶಿಸುವ, ಭುಂಜಿಸುವ, ಶ್ರವಣ ಮಾಡುವ, ಮತ್ತು ಆಘ್ರಾಣಿಸುವ ವಿಷಯಗಳಿಂದ ಯಾವ ಸುಖವು ಉತ್ಪನ್ನವಾಗುವುದೋ ಅದೆಲ್ಲವನ್ನು ಶಿವಾರ್ಪಿತವನ್ನಾಗಿ ಮಾಡಬೇಕು. ಇದೂ ಅಲ್ಲದೆ ಈ ದೇಹದಲ್ಲಿರುವ ಸರ್ವ ಇಂದ್ರಿಯಗಳ ಮುಖಾಂತರವಾಗಿ ಯಾವ ಯಾವ ಸುಖವು ತನಗೆ ಪ್ರಾಪ್ತವಾಗುವುದೋ ಅದೆಲ್ಲವನ್ನು ಶಿವನಿಗೆ ಸಮರ್ಪಿಸಿದ ಯೋಗಿಯು ಸದಾ ನಿರ್ಮಲನಾಗಿರುತ್ತಾನೆ. ಅರ್ಥಾತ್ ನಿರ್ಲಿಪ್ತನಾಗಿರುತ್ತಾನೆ.

ನಮ್ಮ ಈ ಸ್ಥೂಲಶರೀರಕ್ಕೆ ಶಾಸ್ತ್ರಗಳು ಭೋಗಾಯತನವೆಂಬುದಾಗಿ ಕರೆದಿವೆ. ಅಂದರೆ ಪ್ರಾರಬ್ಧಕರ್ಮಾನುಸಾರವಾಗಿ ದೊರೆಯುವ ಶಬ್ದ–ಸ್ಪರ್ಶಾದಿ ವಿಷಯ ಜನ್ಯ ಸುಖ ದುಃಖಗಳನ್ನು ನಾವು ಈ ದೇಹದಿಂದಲೇ ಅನುಭವಿಸಬೇಕಾಗುತ್ತದೆ. ಸಾಮಾನ್ಯ ಜೀವಿ ಗಳಿಗೆ ಶರೀರವಿರುವಂತೆ ಯೋಗಿಗೂ ಸಹ ಶರೀರವಿರುವುದು. ಆದರೆ ಯೋಗಿಯಾದ ವನು ತನ್ನ ದೇಹದಲ್ಲಿರುವ ದಶೇಂದ್ರಿಯಗಳ ಮುಖಾಂತರವಾಗಿ ಅನುಭವಿಸುವ ಎಲ್ಲ ಸುಖಗಳನ್ನು ಶಿವನಿಗೆ ಸಮರ್ಪಿಸೋಣದರಿಂದ ಇವನ ಮನಸ್ಸಿನ ಮೇಲೆ ವಿಷಯ ವಾಸನಾರೂಪವಾದ ಸಂಸ್ಕಾರವು ಉಂಟಾಗುವುದಿಲ್ಲ. ಅಂತೆಯೇ ಈತನು ನಿರ್ಲಿಪ್ತನೂ ನಿರ್ಮಲನೂ ಆಗಿರುತ್ತಾನೆ. ಪ್ರಕೃತಿ ಹಾಗೂ ಪರಮಾತ್ಮರಲ್ಲಿ ಮಾಲಿನ್ಯವನ್ನು ದೂರೀಕರಿ ಸುವ ಸಹಜವಾದ ಗುಣವಿರೋಣದರಿಂದ ನಾವು ಏನನ್ನೇ ಆತನಿಗೆ ಸಮರ್ಪಿಸಿದರೂ ಅದನ್ನು ಆತನು ಶುದ್ಧಗೊಳಿಸುತ್ತಾನೆ. ಶಿವಯೋಗಿಯು ತನ್ನ ಇಂದ್ರಿಯಗಳನ್ನು ಇಂದ್ರಿಯಜನ್ಯ ಸುಖಗಳನ್ನು ಶಿವನಿಗೆ ಸಮರ್ಪಿಸಿ ತಾನು ಪ್ರಸನ್ನಚಿತ್ತನಾಗುವುದಲ್ಲದೆ ಪ್ರಸಾದಕಾಯನೂ ಆಗುತ್ತಾನೆ. ಹೀಗೆ ಈ ಕಾಯಾರ್ಪಿತ ಸ್ಥಲದಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕಾಯ, ಕಾಯದ ಮೇಲಿನ ಅಭಿಮಾನ ಮತ್ತು ಇಂದ್ರಿಯ ಜನ್ಯ ವಾದ ಸುಖವನ್ನು ಶಿವನಿಗೆ ಸಮರ್ಪಿಸುವುದೇ ಕಾಯಾರ್ಪಿತವೆಂಬುದಾಗಿ ಸ್ಪಷ್ಟಪಡಿಸಿ ದ್ದಾರೆ. ಕಾರಣ ಶಿವಯೋಗ ಸಾಧನಾ ಶಿಬಿರದಲ್ಲಿ ನಿರತರಾಗಿರುವ ನೀವುಗಳೂ ಸಹ ಈ ರಹಸ್ಯವನ್ನರಿತು ಶಿವನಿಗೆ ಕಾಯಾರ್ಪಣವನ್ನು ಮಾಡಿ ಆತನ ಕೃಪೆಗೆ ಪಾತ್ರರಾಗಿ ರೆಂಬುದನ್ನೂ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ಜುಲೈ, ೧೯೯೪

(ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)



# ಕರಣಾರ್ಪಿತಸ್ಥಲ

ಮುಮುಕ್ಷುಗಳೇ !

ಸುಕ್ಷೇತ್ರ ಸೊನ್ನಲಾಪುರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ನಿತ್ಯನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಕಾಯಾರ್ಪಿತ ಸ್ಥಲದ ಕುರಿತು ಚೆನ್ನಾಗಿ ತಿಳಿದುಕೊಂಡವರಾಗಿದ್ದೀರಿ.

ಶರೀರವೆಂದರೆ ಇದೊಂದು ಮಲಕೋಶವು. ಇದರಲ್ಲಿ ಮಲ–ಮೂತ್ರ–ಮಾಂಸ–ಮಜ್ಜಾ, ಕಫ, ಪಿತ್ತ ಮೊದಲಾದ ಅನೇಕ ಮಲಗಳೇ ತುಂಬಿಕೊಂಡಿರುತ್ತವೆ. ಮಲಪೂರ್ಣವಾದ ಈ ಶರೀರವನ್ನು ಭಗವಂತನಿಗೆ ಸಮರ್ಪಿಸಲಾಗಿ ಅದು ಪವಿತ್ರವೂ ಪರಿಶುದ್ಧವೂ ಆಗುವುದು. ಗುರು ಹಾಗೂ ಶಿವನ ಅನುಗ್ರಹದಿಂದ ಮಾಂಸಪಿಂಡವು ಮಂತ್ರಪಿಂಡವಾಗಿ ಪರಿವರ್ತನೆಗೊಳ್ಳುವುದು. ಭಗವಂತನಿಗೆ ಪತ್ರಿ–ಪುಷ್ಪಾದಿ ಬಾಹ್ಯ ವಸ್ತುಗಳನ್ನು ಅರ್ಪಣಗೊಳಿಸುವುದರ ಜೊತೆಗೆ ತನ್ನ ಶರೀರವನ್ನು ಸಹ ಸಮರ್ಪಿಸ ಬೇಕಾಗುವುದು. ಅಂದಾಗಲೇ ಅರ್ಪಣೆಯು ಪೂರ್ಣವಾಗುವುದು. ಈ ಅರ್ಪಣವಿಧಿ ಯನ್ನೇ ಮುಂದುವರಿಸುತ್ತ ಪೂಜ್ಯಪಾದರು ಇಂದು ಕರಣಾರ್ಪಿತ ಸ್ಥಲದ ಬಗ್ಗೆ–

ಆಸಂಜನಂ ಸಮಸ್ತಾನಾಂ ಕರಣಾನಾಂ ಪರಾತ್ಪರೇ ।
ಶಿವೇ ಯತ್ ತದಿದಂ ಪ್ರೋಕ್ತಂ ಕರಣಾರ್ಪಿತಮಾಗಮೇ ॥

(ಸಿ. ಶಿ. ೧೭–೩೯)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಪರಾತ್ಪರ ಪರಮಾತ್ಮನಲ್ಲಿ ತನ್ನ ಅಂತಃಕರಣ ಬಹಿಃಕರಣಗಳನ್ನೆಲ್ಲ ಸಮರ್ಪಿಸುವ ಯಾವ ವಿಧಿ–ವಿಧಾನವಿದೆಯೋ ಅದಕ್ಕೆ ಆಗಮ–ಶಾಸ್ತ್ರದಲ್ಲಿ ಕರಣಾರ್ಪಿತವೆಂಬುದಾಗಿ ಕರೆಯಲಾಗಿದೆ.

ಶರೀರವು ಇಂದ್ರಿಯಗಳ ಸಂಘಾತವೆಂಬುದಾಗಿ ಈ ಹಿಂದೆ ನೀವೆಲ್ಲ ತಿಳಿದು ಕೊಂಡವರಾಗಿದ್ದೀರಿ. ಈ ಇಂದ್ರಿಯಗಳು ಅತ್ಯಂತ ಬಲಶಾಲಿಗಳಾಗಿರುತ್ತವೆ. ಎಂಥ ವರನ್ನೂ ಸಹ ತಮ್ಮತ್ತ ಎಳೆದುಕೊಂಡು ಹೋಗಿಬಿಡುತ್ತವೆ. ಅಂತೆಯೇ ''ಬಲವಾ ನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ'' ಎಂಬುದಾಗಿ ಪ್ರತಿಪಾದಿಸಲಾಗಿದೆ. ಇಂದ್ರಿಯಗಳಿಗೆ ಉಪನಿಷತ್ತಿನಲ್ಲಿ 'ಅಶ್ವ' ಎಂಬ ಸಂಜ್ಞೆಯನ್ನು ಕೊಡಲಾಗಿದೆ. ಅಶ್ವ

ಎಂದರೆ ಕುದುರೆಯು. ಇದು ಬಲಶಾಲಿಯಾದ ಪ್ರಾಣಿಯಾಗಿದ್ದು, ಓಡುವುದರಲ್ಲಿ ಹೆಸರುವಾಸಿಯಾಗಿರುತ್ತದೆ. ಯಾವುದೇ ಒಂದು ತಿರುಗುವ ಯಂತ್ರಕ್ಕೆ ಅದರ ಶಕ್ತಿಯ ಬಗ್ಗೆ ನಿರೂಪಿಸುವಾಗ ಇಂತಿಷ್ಟು ಅಶ್ವಶಕ್ತಿಯದಾಗಿದೆ ಎಂಬುದಾಗಿ ಹೇಳುವ ಪದ್ಧತಿಯಿದೆ. ರಥವನ್ನು ಎಳೆಯುವುದಕ್ಕೆ ಕುದುರೆಗಳನ್ನು ಉಪಯೋಗಿಸುತ್ತ ಬಂದಿದ್ದಾರೆ. ನಮ್ಮ ಶರೀರವೆಂಬ ರಥಕ್ಕೆ ಪಂಚ ಜ್ಞಾನೇಂದ್ರಿಯಗಳು ಮತ್ತು ಪಂಚ ಕರ್ಮೇಂದ್ರಿಯಗಳೆಂಬ ಹತ್ತು ಕುದುರೆಗಳು ಸಂಯೋಜಿಸಲ್ಪಟ್ಟಿವೆ. ಇವುಗಳಿಗೆ ಮನಸ್ಸೆಂಬ ಕಡಿವಾಣವನ್ನು ಹಾಕಲಾಗಿದೆ. ಇವುಗಳನ್ನು ನಿಯಂತ್ರಣ ಮಾಡಲಿಕ್ಕೆ ಬುದ್ಧಿಯೆಂಬ ಸಾರಥಿಯನ್ನು ನಿಯಮಿಸಲಾಗಿದ್ದು ಈ ರಥದಲ್ಲಿ ಆತ್ಮನೆಂಬ ರಥಿಕನು ಆರೂಢನಾಗಿರುತ್ತಾನೆ. ಇದರಲ್ಲಿ ಕುಳಿತ ರಥಿಕನು ಬುದ್ಧಿ ಹಾಗೂ ಮನಸ್ಸುಗಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಾಗ ಇಂದ್ರಿಯಗಳೆಂಬ ಕುದುರೆಗಳು ಆತನ ವಶದಲ್ಲಿರಲು ಸಾಧ್ಯವಾಗುವುದು, ಇದನ್ನೇ ಕಠೋಪನಿಷತ್ತಿನಲ್ಲಿ–

> ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।
> ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವ ಇವ ಸಾರಥೇಃ ॥

ಹೀಗೆ ಹೇಳಲಾಗಿದೆ. ಜ್ಞಾನಿಯಾದ ಯೋಗಿಯು ಸದಾ ಮನಸ್ಸನ್ನೇ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಾನೆ. ಹೀಗೆ ಮನಸ್ಸನ್ನು ನಿಗ್ರಹಿಸಿಕೊಂಡಿರುವ ಯೋಗಿಯ ಶರೀರದಲ್ಲಿರುವ ಇಂದ್ರಿಯಗಳು ಒಳ್ಳೆಯ ಕುದುರೆಗಳು ಸಾರಥಿಯ ವಶದಲ್ಲಿರುವಂತೆ ಇವನ ವಶೀಭೂತಗಳಾಗಿರುತ್ತವೆ. ಸ್ವಲ್ಪೇನಾದರೂ ಬುದ್ಧಿ–ಮನಸ್ಸುಗಳ ನಿಯಂತ್ರಣ ತಪ್ಪಿದರೆ ಈ ಇಂದ್ರಿಯಗಳೆಂಬ ಅಶ್ವಗಳು ಈ ರಥವನ್ನು ಅಡ್ಡದಾರಿಗೆ ಒಯ್ಯುವಲ್ಲಿ ಯಾವ ಸಂದೇಹವೂ ಇರುವುದಿಲ್ಲ, ಇದಕ್ಕೆ ಅನೇಕ ಉದಾಹರಣೆಗಳುಂಟು. ಕಾಶಿಯಲ್ಲಿ ಸುಪ್ರಸಿದ್ಧನಾಗಿದ್ದ ಜಗನ್ನಾಥ ಪಂಡಿತನು ತನ್ನ ಇಂದ್ರಿಯಗಳ ಮೇಲಿನ ಹತೋಟಿಯನ್ನು ಕಳೆದುಕೊಂಡ ಕಾರಣದಿಂದಾಗಿ ಲವಂಗಿಯೆಂಬ ಯವನ ಸ್ತ್ರೀಯೊಂದಿಗೆ ವಿವಾಹವನ್ನು ಮಾಡಿಕೊಂಡು ಸಮಾಜದಲ್ಲಿಯ ಮಾನ–ಪ್ರತಿಷ್ಠೆಗಳನ್ನೆಲ್ಲ ಕಳೆದುಕೊಂಡು, ಕೊನೆಗೆ ಪಶ್ಚಾತ್ತಾಪ ಪಟ್ಟು ಗಂಗೆಯನ್ನು ತನ್ನ 'ಗಂಗಾಲಹರೀ' ಎಂಬ ಕಾವ್ಯದಿಂದ ಪ್ರಸನ್ನಮಾಡಿಕೊಂಡು ಉದ್ಧಾರನಾದ ಕಥೆಯು ಪಂಡಿತ ಸಮಾಜದಲ್ಲಿ ಪ್ರಸಿದ್ಧವಾಗಿದೆ. ಇಂದ್ರಿಯಗಳನ್ನು ತಾನಾದರೂ ಹತೋಟಿಯಲ್ಲಿಟ್ಟುಕೊಳ್ಳಬೇಕು ಇಲ್ಲವೆ ಅವುಗಳ ನಿಯಂತ್ರಣವನ್ನು ಭಗವಂತನ ಕೈಯಲ್ಲಾದರೂ ಸಮರ್ಪಿಸಬೇಕು. ಅಂತೆಯೇ ಅರ್ಜುನನು ತನ್ನ ರಥದ ಸಾರಥ್ಯವನ್ನು ಭಗವಂತನಾದ ಶ್ರೀಕೃಷ್ಣನಿಗೆ ಸಮರ್ಪಿಸಿದ್ದು ಮಹಾಭಾರತದಲ್ಲಿ ಪ್ರಸಿದ್ಧವಾಗಿದೆ. ಇಂದ್ರಿಯಗಳೆಂಬ ಅಶ್ವಗಳ ಮೇಲೆ ಭಗವಂತನ ನಿಯಂತ್ರಣವಿದ್ದಾಗ ಅದಾವ ಅಪಾಯವೂ ಸಂಭವಿಸಲಾರದು. ನಾವು ಯಾವುದೇ ಒಂದು ವಸ್ತುವನ್ನು ರಕ್ಷಿಸುವುದಕ್ಕಾಗಿ ಬೇರೊಬ್ಬರ ಕೈಗೆ ಸಮರ್ಪಿಸಿದಾಗ ಅದನ್ನು ರಕ್ಷಿಸುವ ಹೊಣೆಯು ಅವರ ಮೇಲೆ ಇರುತ್ತದೆ. ವಿವಾಹ ಮಂಟಪದಲ್ಲಿ ಕನ್ಯಾಪಿತೃಗಳು ತಮ್ಮ ಕನ್ಯಾಮಣಿಯನ್ನು ವರನ ಕೈಯಲ್ಲಿಟ್ಟು ಧಾರೆಯೆರೆದು ಲಗ್ನ ಮಾಡಿಕೊಡುತ್ತಾರೆ. ಲಗ್ನವಾಗುವವರೆಗೆ ಆ ಕನ್ಯೆಯ ಜವಾಬ್ದಾರಿಯು ತಂದೆ–ತಾಯಿಗಳದಿದ್ದರೆ ಲಗ್ನಾನಂತರದಲ್ಲಿ ಅದು ಪತಿಯ ಮೇಲಿರುತ್ತದೆ. ಅಂತೆಯೇ ಪತಿಯು ತಾನು ಪಾಣಿಗ್ರಹಣವನ್ನು

ಮಾಡುವಾಗ ಧರ್ಮ, ಅರ್ಥ ಮತ್ತುಕಾಮಗಳಲ್ಲಿ ನಿನ್ನನ್ನು ವಂಚಿಸಲಾರೆ ಎಂಬುದಾಗಿ ಸರ್ವರ ಸಾಕ್ಷಿಯಾಗಿ ಪ್ರತಿಜ್ಞೆಗೈಯ್ಯುತ್ತಾನೆ.

ಹಿಂದೂ ಸಂಸ್ಕೃತಿಯಲ್ಲಿ ಅಗ್ನಿಯನ್ನು ಮುಖ್ಯ ಸಾಕ್ಷಿಯನ್ನಾಗಿ ಮಾಡಿಕೊಂಡಿದ್ದರೆ ವೀರಶೈವ ಸಿದ್ಧಾಂತದಲ್ಲಿ ಪಂಚಾಚಾರ್ಯರ ಪ್ರತೀಕಗಳಾದ ಪಂಚಕಲಶಗಳ ಸಾಕ್ಷಿಯಲ್ಲಿ ಈ ಪ್ರತಿಜ್ಞಾಪೂರ್ವಕವಾದ ವಿವಾಹ ಸಮಾರಂಭವು ನೆರವೇರುತ್ತದೆ. ಶ್ರೀ ಜಗದ್ಗುರು ಪಂಚಾಚಾರ್ಯರು ಪಂಚಮಹಾಭೂತಗಳ ಅಧಿಪತಿಗಳು. ಆದ್ದರಿಂದ ಕೇವಲ ಒಂದು ಮಹಾಭೂತವಾದ ಅಗ್ನಿಯ ಸಾಕ್ಷಿಯಲ್ಲಿ ವಿವಾಹವನ್ನು ಮಾಡುವುದಕ್ಕಿಂತಲೂ ಪಂಚ ಮಹಾಭೂತಗಳ ಅಧಿಪತಿಗಳಾದ ಪಂಚಾಚಾರ್ಯರ ಸಾಕ್ಷಿತ್ವದಲ್ಲಿ ಮಾಡುವುದು ಹೆಚ್ಚು ಸೂಕ್ತವೆಂದು ಕಂಡುಬರುತ್ತದೆ. ನಮ್ಮೆಲ್ಲರ ದೇಹಗಳು ಪಾಂಚಭೌತಿಕಗಳಾಗಿರು ವುದರಿಂದ ಇದಕ್ಕಾಗುವ ಎಲ್ಲ ಸಂಸ್ಕಾರಗಳು ಪಂಚಭೂತಾಧಿಪತಿಗಳ ಸಾಕ್ಷಿತ್ವದಲ್ಲಿ ಮಾಡುವುದು ಯೋಗ್ಯ ಎಂಬುದಾಗಿ ತಿಳಿದುಕೊಂಡೇ ವೀರಶೈವ ಆಚಾರ್ಯರು ಪಂಚ ಕಲಶಗಳ ಸಾಕ್ಷಿತ್ವವನ್ನು ವಿಧಿಸಿದ್ದಾರೆ. ಹೀಗೆ ಪಂಚಕಲಶ, ಅಗ್ನಿ ಹಾಗೂ ಗುರುಹಿರಿಯರ ಸಾಕ್ಷಿಯಲ್ಲಿ ಪತ್ನಿಯ ಪಾಣಿಗ್ರಹಣ ಮಾಡಿದ ಪತಿಯು ಆಜೀವನ ಪರ್ಯಂತವಾಗಿ ಅವಳ ಯೋಗಕ್ಷೇಮವನ್ನು ನಿರ್ವಹಿಸುತ್ತಿರುತ್ತಾನೆ.

ವೀರಶೈವ ಸಿದ್ಧಾಂತದಲ್ಲಿ ಎಂಟನೇ ವರ್ಷಕ್ಕೆ ಮಾಡುವ ದೀಕ್ಷಾ ಸಂಸ್ಕಾರವು ಒಂದು ವಿಧವಾದ ಆಧ್ಯಾತ್ಮಿಕ ವಿವಾಹ ಸಂಸ್ಕಾರವೆಂಬುದಾಗಿ ಪ್ರತಿಪಾದಿಸಲಾಗಿದೆ. ಇಲ್ಲಿ ಅಂಗ ಅರ್ಥಾತ್ ಜೀವನು ಸತಿಯಾದರೆ ಲಿಂಗ ಅರ್ಥಾತ್ ಶಿವನು ಪತಿಯಾಗಿರುತ್ತಾನೆ. ಎಂಬುದು ಪ್ರಸಿದ್ಧವಾಗಿದೆ. ಸತಿಯಾದ ಅಂಗನು ಪತಿ ರೂಪನಾದ ಲಿಂಗಕ್ಕೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರೆ ಈತನ ಯೋಗಕ್ಷೇಮವೆಲ್ಲವನ್ನು ಅವನೇ ನಿರ್ವಹಿಸುವನು. ಅಂತೆಯೇ ಪೂಜ್ಯಪಾದರು ಈ ಕರಣಾರ್ಪಿತ ಸ್ಥಲದಲ್ಲಿ ಜೀವನು ಶಿವನಿಗೆ ತನ್ನ ಅಂತಃಕರಣ ಬಹಿಃಕರಣಗಳನ್ನೆಲ್ಲ ಸಮರ್ಪಿಸಬೇಕೆಂಬುದಾಗಿ ಪ್ರತಿ ಪಾದಿಸಿದ್ದಾರೆ.

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಕರಣಾರ್ಪಣದ ಅರ್ಥವನ್ನು ಸ್ಪಷ್ಟ ಪಡಿಸುತ್ತ ಪುನಃ–

ಯದ್ಯತ್ಕರಣಮಾಲಂಬ್ಯ ಭುಙ್ಕ್ತೇ ವಿಷಯಜಂ ಸುಖಮ್ ।
ತತ್ತಚ್ಛಿವೇ ಸಮರ್ಪ್ಯೈಷ ಕರಣಾರ್ಪಕ ಉಚ್ಯತೇ ॥

(ಸಿ. ಶಿ. ೧೭–೪೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವ ಯಾವ ಇಂದ್ರಿಯಗಳ ಮುಖಾಂತರ ಯಾವ ಯಾವ ಸುಖವು ಭುಂಜಿಸಲ್ಪಡುವುದೋ ಅದೆಲ್ಲವನ್ನು ಶಿವನಿಗೆ ಯಾರು ಸಮರ್ಪಿಸುತ್ತಾರೆಯೋ ಅವರಿಗೆ ಕರಣಾರ್ಪಕರೆಂಬುದಾಗಿ ಕರೆಯ ಲಾಗುವುದು.

ನಮಗಿರುವ ಬಹಿಃಕರಣ ಮತ್ತು ಅಂತಃಕರಣಗಳಲ್ಲಿ ಅಂತಃಕರಣವಾದ ಮನಸ್ಸೇ ಅತಿ ಬಲಶಾಲಿಯಾದುದು. ಆದ್ದರಿಂದ ಬಹಿಃಕರಣಗಳನ್ನು ನಿಯಂತ್ರಿಸಬೇಕಾದರೆ

ಮೊದಲು ಅಂತಃಕರಣವನ್ನು ನಿಯಂತ್ರಿಸಬೇಕಾಗುವುದು. ಅಂತೆಯೇ ಪೂಜ್ಯಪಾದರು ಅಂತಃಕರಣದ ನಿಗ್ರಹವನ್ನು ಕುರಿತು–

ಅಹಂಕಾರಮದೋದ್ರಿಕ್ತಮಂತಃಕರಣವಾರಣಮ್ ।
ಬಧ್ನೀಯಾದ್ಯಃ ಶಿವಾಲಾನೇ ಸ ಧೀರಃ ಸರ್ವಸಿದ್ಧಿಮಾನ್ ॥
ಇಂದ್ರಿಯಾಣಾಂ ಸಮಸ್ತಾನಾಂ ಮನಃ ಪ್ರಥಮಮುಚ್ಯತೇ ।
ವಶೀಕೃತೇ ಶಿವೇ ತಸ್ಮಿನ್ ಕಿಮನ್ಯೈಸ್ತದ್ವಶಾನುಗೈಃ ॥

(ಸಿ. ಶಿ. ೧೭; ೪೧–೪೨)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಹಂಕಾರವೆಂಬ ಮದದಿಂದ ಕೊಬ್ಬಿದ ಮನಸೆಂಬ ಮದಗಜವನ್ನು ಶಿವನೆಂಬ ಆಲಾನಕ್ಕೆ ಅರ್ಥಾತ್ ಶಿವರೂಪೀ ಗಜ ಬಂಧನ ಸ್ತಂಭಕ್ಕೆ ಯಾವ ಧೀರನು ಕಟ್ಟಿಹಾಕುವನೋ ಅವನು ಸರ್ವಸಿದ್ಧಿಗಳನ್ನು ಪಡೆಯುವನು. ಸಮಸ್ತಗಳಾದ ಇಂದ್ರಿಯಗಳಲ್ಲಿ ಮನಸ್ಸೇ ಪ್ರಧಾನವಾದುದು. ಆ ಮನಸ್ಸನ್ನೇ ಶಿವನಿಗೆ ವಶೀಭೂತ ಮಾಡಲಾಗಿ ಆ ಮನಸ್ಸಿನ ಅನುಯಾಯಿಗಳಾದ ಉಳಿದ ಇಂದ್ರಿಯಗಳಿಂದ ಅದಾವ ಬಾಧೆಯೂ ಉಂಟಾಗಲಾರದು.

ಮನಸ್ಸು, ಬುದ್ಧಿ, ಚಿತ್ತ ಮತ್ತು ಅಹಂಕಾರಗಳಿಗೆ ಅಂತಃಕರಣವೆಂದು ಕರೆಯುತ್ತಾರೆ. ಈ ಅಂತಃಕರಣದಲ್ಲಿ ಅಹಂಕಾರ–ಮಮಕಾರವೆಂಬ ಮದವೇರಿದಾಗ ಅಂತಃಕರಣರೂಪೀ ಮದಗಜವು ಜೀವಿಗಳನ್ನು ತನ್ನ ಪಾದ ತಲದಲ್ಲಿ ತುಳಿದು ಹಾಕುತ್ತದೆ. ಅಹಂಕಾರ–ಮಮಕಾರಗಳೇ ಅಂತಃಕರಣವೆಂಬ ಮದಗಜದ ಎರಡು ಪಾದಗಳಿದ್ದಂತೆ. ಇವೆರಡರ ತುಳಿತಕ್ಕೆ ಸಿಕ್ಕು ಜಗದ ಜೀವಿಗಳೆಲ್ಲ ತಲ್ಲಣಿಸಿ ಹೋಗುತ್ತಿದ್ದಾರೆ. ಆದರೂ ನಾವು ಆನೆಯ ತುಳಿತಕ್ಕೆ ಸಿಲುಕಿಕೊಂಡಿದ್ದೇವೆ ಎಂಬ ಪ್ರಜ್ಞೆಯೂ ಕೂಡ ಜಗದ ಜೀವಿಗಳಿಗೆ ಇರುವುದಿಲ್ಲ. ಆದ್ದರಿಂದ ಲೋಕದಲ್ಲಿ ಅಹಂಕಾರ–ಮಮಕಾರಗಳನ್ನು ಬಿಟ್ಟು ವ್ಯವಹರಿಸುವುದು ಕಷ್ಟಸಾಧ್ಯವಾಗಿರುತ್ತದೆ. ಅಂತೆಯೇ ಶಂಕರಾಚಾರ್ಯರು ''ಅಹಂ–ಮಮೇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ'' ಎಂಬುದಾಗಿ ಹೇಳಿದ್ದಾರೆ. ಆನೆಯ ತುಳಿತವೂ ಸಹಜವಾಗಿ ಹೋದಾಗ ಜೀವಿಗಳನ್ನು ಅವುಗಳಿಂದ ಬಿಡುಗಡೆಗೊಳಿಸುವುದು ಅಷ್ಟೊಂದು ಸುಲಭವಾದುದಲ್ಲ. ಇವೆರಡನ್ನು ಕಳೆದು ಕೊಳ್ಳದೇ ಜೀವಾತ್ಮನಿಗೆ ಲಿಂಗಾಂಗಸಾಮರಸ್ಯರೂಪವಾದ ಮುಕ್ತಿಯು ದೊರೆಯಲಾರದು. ಇವೆರಡರಲ್ಲಿ ಅಹಂಕಾರವೇ ಪ್ರಧಾನವಾದುದು. ಅದಿದ್ದಾಗಲೇ ಮಮಕಾರಕ್ಕೆ ಆಸ್ಪದವಾಗುವುದು. ದೀಪದ ಜ್ವಾಲೆಯಿದ್ದಾಗಲೇ ಅದರ ಪ್ರಭೆಯು ಸುತ್ತಲೂ ಪಸರಿಸುವಂತೆ ಅಹಂಕಾರಿಯಾದ ವ್ಯಕ್ತಿಯಲ್ಲಿಯೇ ಮಮಕಾರಕ್ಕೆ ಸ್ಥಾನ ದೊರೆಯುವುದು. ಒಂದು ವೇಳೆ ಅಹಂಕಾರವೇ ಹೋಯಿತೆಂದರೆ ಮಮಕಾರವು ತನ್ನಿಂದ ತಾನೇ ಇಲ್ಲವಾಗುವುದು. ಈ ಅಹಂಕಾರವೇ ಆತ್ಮ–ಪರಮಾತ್ಮರನ್ನು ಬೇರ್ಪಡಿಸುವ ಅಡ್ಡ ಗೋಡೆಯು. ಎಂದು ಅಹಂಕಾರವು ಅಳಿಯುವುದೋ ಅಂದೇ ಜೀವನು ಪರಶಿವನಾಗುವನು. ಅಂತೆಯೇ ಕನ್ನಡದ ಕವಿಯೋರ್ವನು ''ನಾನಳಿದ ಪಥವೇ ನೀನಿಳಿದ ಪಥವು'' ಎಂಬುದಾಗಿ ಹೇಳಿದ್ದಾನೆ. ಕಬ್ಬಿನ ಮೇಲೆ ಜೇನು ಇಟ್ಟಿದ್ದನ್ನು ನಾವು ನೋಡುತ್ತೇವೆ. ಕಬ್ಬಿನೊಳಗೂ ಮಧುರ ರಸ ಹಾಗೂ ಜೇನಿನ ಹುಟ್ಟಿನೊಳಗೂ

ಮಧುಸಂಚಯವಿರುವುದು. ಅವೆರಡೂ ಮಾಧುರ್ಯ ಗುಣದ ಪದಾರ್ಥಗಳಾಗಿದ್ದರೂ ಅವುಗಳ ಪರಸ್ಪರ ಸಾಮರಸ್ಯಕ್ಕೆ ಆ ಕಬ್ಬಿನ ಸಿಬಿಕೆ ಹಾಗೂ ಜೇನಿನ ಹುಟ್ಟುಗಳು ಅಡ್ಡವಾಗಿರುವಂತೆ ಜೀವಾತ್ಮನಲ್ಲಿಯ ಅಹಂಕಾರ ಮಮಕಾರಗಳು ಈತನ ಪರಮ ಕೈವಲ್ಯ ಪ್ರಾಪ್ತಿಗೆ ಪ್ರತಿಬಂಧಕವಾಗಿರುತ್ತವೆ. ಆದ್ದರಿಂದಲೇ ಪೂಜ್ಯಪಾದರು ಈ ಅಹಂಕಾರದಿಂದ ಮದೋನ್ಮತ್ತವಾದ ಮನವೆಂಬ ಮದ್ದಾನೆಯನ್ನು ಶಿವನೆಂಬ ಗಜಸ್ತಂಭದ ಶಿಲೆಗೆ ಕಟ್ಟಿಹಾಕಬೇಕೆಂಬುದಾಗಿ ಕಿವಿಮಾತು ಹೇಳಿದ್ದಾರೆ.

ಶ್ರದ್ಧಾ–ಭಕ್ತಿಗಳಿಲ್ಲದ ಮನಸ್ಸಿನಲ್ಲಿ ಅಹಂಕಾರವಿರುವಂತೆ ಭಕ್ತಿಸಂಪನ್ನನಾದ ವ್ಯಕ್ತಿಯಲ್ಲಿ ಅಹಂಕಾರವು ಎದ್ದು ಕಾಣುವುದಿಲ್ಲ. ಏಕೆಂದರೆ ಅವನು ಲೌಕಿಕ ಹಾಗೂ ಪಾರಲೌಕಿಕ ಜೀವನದಲ್ಲಿ ಏನನ್ನೇ ಸಾಧಿಸಿದರೂ ಅದೆಲ್ಲವೂ ತನ್ನ ಆರಾಧ್ಯನಾದ ಶಿವನ ಕೃಪೆಯೆಂಬುದಾಗಿ ಭಾವಿಸುತ್ತಿರೋಣದರಿಂದ ನಾನೇ ಮಾಡಿದೆನೆಂಬ ಅಹಂಕಾರಕ್ಕೆ ಅಲ್ಲಿ ಆಸ್ಪದವಿರುವುದಿಲ್ಲ. ನಮ್ಮ ಭಾರತೀಯ ಸಂಸ್ಕೃತಿಯು ತಂದೆ, ತಾಯಿ, ಗುರು ಮತ್ತು ದೇವರುಗಳಲ್ಲಿ ಭಕ್ತಿಯನ್ನು ಒಡಮೂಡಿಸುವ ಮೂಲಕ ಮನುಷ್ಯನ ದೈನಂದಿನ ಜೀವನ ದಲ್ಲಿ ಅಹಂಕಾರವು ಅಂಕುರಿಸದೇ ಇರುವಂತೆ ವ್ಯವಸ್ಥೆ ಮಾಡಿದೆ. ಅಂತೆಯೇ ತಾನು ಪರಿಶ್ರಮಪಟ್ಟು ಸಂಪಾದಿಸಿದ ವಸ್ತುಗಳ ಮೇಲೆ ತನ್ನದೆಂಬ ಅಭಿಮಾನವನ್ನು ತಾಳದೆ ಇದೆಲ್ಲ ತಂದೆ–ತಾಯಿಗಳ ಇಲ್ಲವೆ ಗುರು–ದೇವರುಗಳ ಕೃಪಾಶೀರ್ವಾದವೆಂಬ ಭಾವನೆಯು ಜೀವಿಗಳ ಮನಸ್ಸಿನಲ್ಲಿ ಮೂಡಿ ಬರುತ್ತದೆ. ತಾನು ಕಟ್ಟಿಸಿದ ನೂತನ ಮನೆ–ಮಠಾದಿ ವಸ್ತುಗಳ ಮೇಲೆ 'ಮಾತೃ ಕೃಪಾ' 'ಮಾತಾಪಿತೃಕೃಪಾ' 'ಗುರುಕೃಪಾ' ಮತ್ತು 'ಶಿವಕೃಪಾ' ಮುಂತಾದ ನಾಮ ಫಲಕಗಳನ್ನು ಹಾಕಿರುವುದನ್ನು ನೋಡಿದಾಗ ಆ ವ್ಯಕ್ತಿಯ ಮನಸ್ಸಿನಲ್ಲಿ ಸಂಸ್ಕೃತಿಯ ಪ್ರಭಾವದಿಂದ ಅಹಂಕಾರಕ್ಕೆ ಆಸ್ಪದವಾಗದೇ ಇರು ವುದು ಕಂಡುಬರುತ್ತದೆ. ಹೀಗೆ ಲೌಕಿಕದ ಪ್ರತಿಯೊಂದು ಸಫಲತೆಯಲ್ಲಿ ಯಾವ ಜೀವಿಯು ಅಹಂಕರಿಸದಿರುವನೋ ಅವನೇ ಕ್ರಮವಾಗಿ ಆಧ್ಯಾತ್ಮಿಕ ಸಾಧನೆಯಲ್ಲಿ ಮುನ್ನಡೆದು ಗುರು ಹಾಗೂ ದೇವರುಗಳ ಕೃಪೆಯಿಂದ ಅಹಂಕಾರವನ್ನು ಸಂಪೂರ್ಣ ವಾಗಿ ಇಲ್ಲದಾಗಿಸಿಕೊಂಡು ಶಿವನಲ್ಲಿಯೇ ಸಮರಸನಾಗುವನು. ನಾವು ಏನನ್ನೇ ಮಾಡಿ ದರೂ ನಾನು ಮಾಡಿದೆನೆಂಬ ಭಾವನೆಯು ಮನಸ್ಸಿನಲ್ಲಿ ಬಾರದ ಹಾಗೆ ಬದುಕುವ ಕಲೆಯನ್ನು ನಾವು ಕಲಿತುಕೊಳ್ಳಬೇಕಾಗುವುದು. ಇಂತಹ ಬದುಕನ್ನು ಸಾಧಿಸಿದ ಶ್ರೀ ಬಸವಣ್ಣನವರು–

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ !
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ
ಬೇಡಿದ್ದನೀವ ಕೂಡಲಸಂಗಮದೇವಾ

ತಮ್ಮ ಈ ವಚನದಲ್ಲಿ ಭಕ್ತನಾದವನಿಗೆ ಅಹಂಕಾರ–ಅಭಿಮಾನಗಳು ಸಲ್ಲತಕ್ಕದ್ದಲ್ಲ ಎಂಬುದನ್ನು ತಿಳಿಸಿದ್ದಾರೆ.

ನಮ್ಮ ದೈನಂದಿನ ಜೀವನದಲ್ಲಿ ನಾವು ಅಹಂಕರಿಸದೇ ಬದುಕಬೇಕಾದರೆ ಶಿವನೇ ನಮ್ಮ ಜೀವನದ ಆಧಾರವೆಂಬುದಾಗಿ ಧೃಢ ಭಾವನೆಯನ್ನು ತಾಳಿಕೊಂಡಿರಬೇಕು. ಹೀಗೆ ಶಿವಾಧಿಷ್ಟಿತವಾದ ಬದುಕು ನಮ್ಮದಾದಾಗ ನಮ್ಮ ಜೀವನದ ಪ್ರತಿಯೊಂದು ಸಫಲತೆಯಲ್ಲಿ ನಾವು ಅಹಂಕರಿಸದೇ ಅದು ಶಿವನಪ್ರಸಾದವೆಂಬ ವಿನಮ್ರ ಭಾವನೆಯಿಂದ ಬದುಕಲು ಸಾಧ್ಯವಾಗುವುದು. ಅಂತೆಯೇ ಪೂಜ್ಯಪಾದರು ಮನವೆಂಬ ಮದಗಜವನ್ನು ಶಿವನೆಂಬ ಶಿಲಾಸ್ತಂಭಕ್ಕೆ ಕಟ್ಟಿಹಾಕಬೇಕೆಂಬುದಾಗಿ ಉಪದೇಶಿಸಿದ್ದಾರೆ. ಇಲ್ಲಿ ಶಿವನು ಅತ್ಯಂತ ಸುಸ್ಥಿರನಾದ್ದರಿಂದ ಮನಸ್ಸು ಅದೆಷ್ಟು ಜಗ್ಗಾಡಿದರೂ ಅದರಲ್ಲಿ ಚಲನೆಯು ಉಂಟಾಗುವುದಿಲ್ಲ. ಜಗ್ಗಿ ಜಗ್ಗಿ ಸೋತ ಮನಸ್ಸು ಕೊನೆಗೆ ಅಲ್ಲಿಯೇ ಶಾಂತ ವಾಗಿ ಉಳಿಯುವುದು. ಇಲ್ಲಿ ಮನಸ್ಸೆಂಬ ಮದಗಜವನ್ನು ಶಿವನೆಂಬ ಶಿಲೆಗೆ ಕಟ್ಟಿ ಹಾಕುವುದೆಂದರೆ ಸದಾ ಆ ಮನಸ್ಸನ್ನು ಶಿವಧ್ಯಾನದಲ್ಲಿ ತಲ್ಲೀನಗೊಳಿಸುವುದೆಂದರ್ಥ. ಯಾರ ಮನಸ್ಸು ಶಿವಧ್ಯಾನಾದಿಗಳಲ್ಲಿ ತಲ್ಲೀನವಾಗುವುದೋ ಅದು ಕ್ರಮವಾಗಿ ಧೀರ ವೃತ್ತಿಯನ್ನು ತಾಳಿಕೊಳ್ಳುವುದು. ಮನಸ್ಸು ಒಮ್ಮೆ ಧೀರವಾಯಿತೆಂದರೆ ಅದು ಯಾವ ವಿಕಾರಕ್ಕೂ ಒಳಗಾಗುವುದಿಲ್ಲ. ಇಂತಹ ಧೀರವೃತ್ತಿಯ ಮನಸ್ಸುಳ್ಳವರಿಗೇನೇ ಧೀರರು ಎಂಬುದಾಗಿ ಕರೆಯಲಾಗಿದೆ. ಅಂತೆಯೇ ಮಹಾಕವಿ ಕಾಳಿದಾಸನು–''ವಿಕಾರಿ ಹೇತೌ ಸತಿವಿಕ್ರಿಯಂತೇ ತೇಷಾಂ ಚೇತಾಂಸಿ ಸ ಏವ ಧೀರಾಃ'' ಎಂಬುದಾಗಿ ಹೇಳಿದ್ದಾನೆ. ಯಾರು ಇಂತಹ ಧೀರತನವನ್ನು ಪಡೆದುಕೊಳ್ಳುವರೋ ಅವರಿಗೆ ಸರ್ವಸಿದ್ಧಿಗಳು ಕರಗತವಾಗುವವು. ಆದ್ದರಿಂದ ಮನಸ್ಸನ್ನು ಮಹಾದೇವನ ಚಿಂತನೆಯಲ್ಲಿ ಸದಾ ನಿಮಗ್ನ ಗೊಳಿಸಿರಬೇಕು.

ನಮ್ಮ ದೇಹದಲ್ಲಿರುವ ಸಮಸ್ತ ಇಂದ್ರಿಯಗಳಲ್ಲಿ ಮನಸ್ಸೇ ಪ್ರಧಾನವಾದುದು. ಅಂತೆಯೇ ಅದಕ್ಕೆ ಇಂದ್ರಿಯಾಧ್ಯಕ್ಷವೆಂದು ಕರೆಯುವರು. ಅಧ್ಯಕ್ಷನನ್ನು ನಿಗ್ರಹಿಸಿದರೆ ಅವನ ಅನುಯಾಯಿಗಳನ್ನು ನಿಗ್ರಹಿಸುವುದು ಸುಲಭವಾಗುವಂತೆ ಮನಸ್ಸಿನ ನಿಗ್ರಹ ದಿಂದ ಇಂದ್ರಿಯಗಳ ನಿಗ್ರಹವು ಸುಲಭವಾಗುವುದು. ಒಂದು ದಾರದಲ್ಲಿ ಅನೇಕ ಹೂವುಗಳನ್ನು ಪೋಣಿಸಿ ಒಂದು ಪೂಮಾಲೆಯನ್ನು ತಯಾರಿಸಲಾಗುವುದು. ದಾರದಲ್ಲಿ ಪೋಣಿಸಲ್ಪಟ್ಟ ಎಲ್ಲ ಹೂವುಗಳು ದಾರದ ಅಧೀನವಾಗಿರುತ್ತವೆ. ಹೂವುಗಳಿಂದ ಪೋಣಿಸಲ್ಪಟ್ಟ ಆ ದಾರವನ್ನು ಶಿವಲಿಂಗಕ್ಕೆ ಸಮರ್ಪಿಸಿದಾಗ ಆ ಪುಷ್ಪಗಳೆಲ್ಲ ಶಿವ ಲಿಂಗಾರ್ಪಿತವಾಗುವಂತೆ ಮನಸ್ಸೆಂಬ ಇಂದ್ರಿಯಾಧ್ಯಕ್ಷವನ್ನು ಶಿವಾರ್ಪಿತಗೊಳಿಸಲಾಗಿ ಅದರ ಅಧೀನಗಳಾದ ಉಳಿದೆಲ್ಲ ಇಂದ್ರಿಯಗಳು ಸಹಜವಾಗಿಯೇ ಶಿವಾರ್ಪಿತವಾಗು ತ್ತವೆ. ಹೀಗೆ ಅಂತಃಕರಣಸಮವೇತವಾದ ಸಕಲೇಂದ್ರಿಯಗಳನ್ನು ಶಿವಾರ್ಪಿತಗೊಳಿಸು ವದಕ್ಕೇನೇ ಕರಣಾರ್ಪಣವೆಂಬುದಾಗಿ ಕರೆಯಲಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕರಣಾರ್ಪಿತ ವಿಷಯವನ್ನೇ ಮುಂದುವರೆಸುತ್ತ ಪುನಃ –

ಇಂದ್ರಿಯಾಣಾಂ ವಶೀಕಾರೋ ನಿವೃತ್ತಿರಿತಿ ಗೀಯತೇ ।
ಲಕ್ಷೀಕೃತೇ ಶಿವೇ ತೇಷಾಂ ಕುತಸ್ಸಂಸಾರಗಾಹನಮ್ ॥

(ಸಿ. ಶಿ. ೧೭–೪೩)

ಈ ರೀತಿಯಾಗಿ ಆದೇಶವಿತ್ತಿದ್ದಾರೆ. ತಾತ್ಪರ್ಯವೇನೆಂದರೆ ಇಂದ್ರಿಯಗಳನ್ನು ವಶೀಕರಿಸಿ ಕೊಳ್ಳುವುದಕ್ಕೆ ನಿವೃತ್ತಿಯೆಂದು ಕರೆಯುತ್ತಾರೆ ಆ ಎಲ್ಲ ಇಂದ್ರಿಯಗಳನ್ನು ಶಿವನಿಗೆ ಸಮರ್ಪಿಸಲಾಗಿ ಪುನಃ ಸಂಸಾರದರ್ಶನವೇ ಆಗಲಾರದು.

ನಮ್ಮ ಮನಸ್ಸಿನಲ್ಲಿ ಪ್ರವೃತ್ತಿ ಮತ್ತು ನಿವೃತ್ತಿಗಳೆಂಬ ಎರಡು ಮುಖ್ಯವಾದ ವೃತ್ತಿಗಳಿರುತ್ತವೆ. ಮನಸ್ಸು ವಿಷಯಾಭಿಮುಖವಾಗಲು ಅದು ಸಂಸಾರದಲ್ಲಿ ವ್ಯವಹರಿಸೋಣದರಿಂದ ಅದಕ್ಕೆ ಪ್ರವೃತ್ತಿಯೆಂದು ಕರೆಯುತ್ತಾರೆ. ಇನ್ನು ಅದು ಅಂತರ್ಮುಖವಾಗಿ ಸಕಲೇಂದ್ರಿಯಗಳು ಶಿವಾರ್ಪಿತವಾಗಲು ಬಹಿರಂಗದ ವ್ಯವಹಾರವು ಇಲ್ಲದಾಗಲು ಅದಕ್ಕೆ ನಿವೃತ್ತಿಯೆಂದು ಕರೆಯುವರು. ಹೀಗೆ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡು ಅವುಗಳನ್ನು ಶಿವಾರ್ಪಿತಗೊಳಿಸಿದ ಸಾಧಕನು ನಿವೃತ್ತಿಮಾರ್ಗದ ಮುಖಾಂತರವಾಗಿ ತನ್ನೊಳಗೆ ಪ್ರವೇಶವನ್ನು ಪಡೆದಾಗ ಈ ಸಂಸಾರ ಸಾಗರದಲ್ಲಿ ನಿಮಗ್ನನಾಗದೆ ಪರಮಕೈವಲ್ಯವನ್ನು ಪಡೆಯುವನು. ಅವನಿಗೆ ಪುನಃ ಈ ಸಂಸಾರದಲ್ಲಿ ಗಮನಾಗಮನಗಳು ಇರುವುದಿಲ್ಲ. ಅಂತೆಯೇ ಶ್ರೀ ಮದ್ಭಗವದ್ಗೀತೆಯಲ್ಲಿ ''ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಂ ಮಮ'' ಎಂಬುದಾಗಿ ಉಪದೇಶಿಸಲಾಗಿದೆ. ಈ ಲೋಕದಲ್ಲಿ ಆತ್ಮಸ್ಥಿತಿಯನ್ನು ಪಡೆಯುವುದೇ ಸರ್ವೋತ್ಕೃಷ್ಟವಾದುದು. ಅದನ್ನು ಪಡೆಯದೇ ಬೇರೆ ಏನನ್ನೇ ಪಡೆದಿದ್ದರೂ ಯಾರಿಗೂ ಸಮಾಧಾನವಿರುವುದಿಲ್ಲ. ಅನ್ಯರ ಸ್ಥಾನದಲ್ಲಿ ನಾವು ಕೆಲಕಾಲವಿರಬಹುದೇ ವಿನಃ ಶಾಶ್ವತವಾಗಿ ಅಲ್ಲಿ ಇರಲಿಕ್ಕಾಗುವುದಿಲ್ಲ ಅಂತೆಯೇ ಜೀವನು ಪುನಃ ಪುನಃ ಸ್ಥಾನ ಪಲ್ಲಟಗೊಳಿಸುತ್ತ ಈ ಸಂಸಾರದಲ್ಲಿ ಸುತ್ತುತ್ತಿರುತ್ತಾನೆ ಈ ಸುತ್ತುವಿಕೆಯು ಒಂದಿಲ್ಲೊಂದುದಿನ ಬೇಸರಿಕೆಯನ್ನು ತಂದೇ ತರುತ್ತದೆ. ಯಾರ ಮನಸ್ಸಿನಲ್ಲಿ ಈ ಬೇಸರಿಕೆಯುಂಟಾಗುವುದೋ ಅವನೇ ತನ್ನ ಸಕಲೇಂದ್ರಿಯಗಳನ್ನು ನಿಗ್ರಹಿಸಿಕೊಂಡು ನಿವೃತ್ತಿ ಮಾರ್ಗದಲ್ಲಿ ಪ್ರವೇಶಿಸುವನು. ಹೀಗೆ ನಿವೃತ್ತಿಮಾರ್ಗದಲ್ಲಿ ಮುನ್ನಡೆದು ಶಿವನನ್ನೇ ತನ್ನ ಜೀವನದ ಲಕ್ಷ್ಯವನ್ನಾಗಿ ಮಾಡಿಕೊಂಡ ಶಿವಯೋಗಿಗೆ ಸಂಸಾರ ಸಾಗರದಲ್ಲಿ ಮುಳುಗುವ ಭೀತಿ ಇರುವುದಿಲ್ಲ.

ಹೀಗೆ ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಮತ್ತು ಮನಸ್ಸೆಂಬ ಏಕಾದಶ ಇಂದ್ರಿಯಗಳನ್ನು ಶಿವಾರ್ಪಿತಗೊಳಿಸುವುದೇ ನಿಜವಾದ ಏಕಾದಶೀ ವ್ರತವು. ದೈನಂದಿನ ಆಹಾರವನ್ನು ತ್ಯಜಿಸಿ ಫಲಹಾರವನ್ನು ಸೇವಿಸುವುದೇ ಏಕಾದಶವ್ರತ ಎಂಬುದಾಗಿ ತಿಳಿದುಕೊಂಡಿರುತ್ತಾರೆ. ಆದರೆ ಹನ್ನೊಂದು ಇಂದ್ರಿಯಗಳ ದಶೆಯು ಅರ್ಥಾತ್ ಅಭಿರುಚಿಯು ಒಂದೇ ಆದಾಗ ಅದುವೇ ನಿಜವಾದ ಏಕಾದಶಿಯೆಂದು ಕರೆಯಿಸಿ ಕೊಳ್ಳುವುದು. ಪೂಜ್ಯಪಾದರು ಈ ಕರಣಾರ್ಪಿತ ಸ್ಥಲದಲ್ಲಿ ಉಪದೇಶಿಸಿದ ರೀತಿಯಲ್ಲಿ ಏಕಾದಶೇಂದ್ರಿಯಗಳನ್ನು ಶಿವಾರ್ಪಿತಗೊಳಿಸಿ ಕರಣಾರ್ಪಣ ರೂಪವಾದ ಏಕಾದಶೀ ವ್ರತವನ್ನು ನೀವೆಲ್ಲರೂ ಮಾಡಿ ಶಿವಕೃಪೆಯನ್ನು ಪಡೆದುಕೊಳ್ಳಿರೆಂಬುದಾಗಿ ತಿಳಿಯ ಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೫ ಜುಲೈ, ೧೯೭೪

ಸ್ಥಾನ 'ಶಿವಾನುಭವ ಮಂಗಲ ಭವನ' ಸೋಲಾಪೂರ)

■■

ಆಶೀರ್ವಚನ-೨

# ಕರಣಾರ್ಪಿತಸ್ಥಲ

ಧರ್ಮಾಭಿಮಾನಿಗಳೇ !

ಸುಕ್ಷೇತ್ರ ಸೊನ್ನಲಾಪುರದಲ್ಲಿ ಆಷಾಢ ಮಾಸದ ನಿಮಿತ್ತವಾಗಿ ಶಿವಯೋಗಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ನಿತ್ಯನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಕರಣಾರ್ಪಿತಸ್ಥಲದ ಕುರಿತು ಕೆಲವು ವಿಚಾರ-ವಿಷಯಗಳನ್ನು ತಿಳಿದುಕೊಂಡವ ರಾಗಿದ್ದೀರಿ. ಇಂದು ಅದೇ ವಿಷಯವನ್ನೇ ಮುಂದುವರೆಸುತ್ತ ಪೂಜ್ಯಪಾದರು-

ಸಂಸಾರ ವಿಷಕಾಂತಾರಸಮುಚ್ಛೇದಕುಠಾರಿಕಾ
ಉಪಶಾಂತಿರ್ಭವೇತ್ ಪುಂಸಾಮಿಂದ್ರಿಯಾಣಾಂ ವಶೀಕೃತೌ ||

(ಸಿ. ಶಿ. ೧೭-೪೪)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಇಂದ್ರಿಯಗಳನ್ನು ವಶಪಡಿಸಿ ಕೊಳ್ಳುವಿಕೆಯೇ ಸಂಸಾರವೆಂಬ ವಿಷವೃಕ್ಷಗಳ ಅಡವಿಯನ್ನು ಕಡಿದುಹಾಕುವ ಕೊಡಲಿ ಯಾಗಿರುತ್ತದೆ. ಇಂದ್ರಿಯಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಾಗ ಮನುಷ್ಯನಲ್ಲಿ ನಿರಪೇಕ್ಷ ಭಾವನೆಯು ತಲೆದೋರುವುದು. ಈ ನಿರಪೇಕ್ಷ ಭಾವನೆಯೇ ಸಂಸಾರದ ವಿಶ್ರಾಂತಿಗೆ ಕಾರಣವಾಗುತ್ತದೆ.

ಸಂಸಾರವೆಂದರೆ ವಿಷವೃಕ್ಷಗಳಿಂದ ತುಂಬಿರುವ ಒಂದು ಘೋರವಾದ ಅರಣ್ಯ ವಿದ್ದಂತೆ. ವಿಷವೃಕ್ಷಗಳ ಫಲಗಳು ವಿಷಕಾರಿಗಳೇ ಆಗಿರುತ್ತವೆ. ಅವುಗಳನ್ನು ತಿಂದರೆ ಮರಣವು ಸುನಿಶ್ಚಿತವಾದುದು. ಅಂತೆಯೇ ಪ್ರಪಂಚದ ಜೀವಿಗಳು ಆ ಫಲಗಳನ್ನೇ ತಿನ್ನುತ್ತ ಪುನಃ ಪುನಃ ಮೃತ್ಯು ಮುಖವಾಗುತ್ತಿದ್ದುದನ್ನು ಪ್ರತಿದಿನವೂ ಕಾಣುತ್ತಿದ್ದೇವೆ. ಓರ್ವ ಜೀವನು ಅದೆಷ್ಟು ಸಾರೆ ಮರಣವನ್ನಪ್ಪಿದ್ದಾನೆಂಬುದನ್ನು ಅಂಕಿ ಸಂಖ್ಯೆಗಳ ಮೂಲಕ ಹೇಳುವುದು ಯಾರಿಂದಲೂ ಸಾಧ್ಯವಾಗಲಾರದು. ಶ್ರೀ ಮನ್ನಿಜಗುಣ ಶಿವಯೋಗಿಗಳು ಈ ಜನನ-ಮರಣಗಳ ಬಗ್ಗೆ ಪ್ರತಿಪಾದಿಸುತ್ತ- ''ಧರೆಯನೆಲ್ಲವನು ಸಣ್ಣಿಸಿ ಧೂಳಿಮಾಡಲಾ ಪರಮಾಣುಗಳೆನಿತನಿತು ದೇಹವನು ಧರಿಸುತೊಂದೊಂದು ಜೀವರ ಬಸುರೊಳು ಬಂದು ಮರಳಿ ನೀನತ್ತ ತಿರುಗದಂತೆ ರಚಿಸಿದೆ'' ಎಂಬುದಾಗಿ

ವಿವರಿಸಿದ್ದಾರೆ. ಭೂಮಿಯ ಪರಮಾಣುಗಳನ್ನು ಎಣಿಸುವುದು ಅದಾರಿಂದ ಸಾಧ್ಯ ? ಅಂದರೆ ಅನಂತ ಕೋಟಿ ಕೋಟಿ ಸಾರೆ ಒಂದೊಂದು ದೇಹವನ್ನು ಧರಿಸುತ್ತ ಈ ಜೀವಾತ್ಮನು ಸಂಸಾರದಲ್ಲಿ ಬಂದಿದ್ದಾನೆಂಬುದು ತಿಳಿದುಬರುತ್ತದೆ. ಅದೆಷ್ಟೋ ಸಾರೆ ಇವನು ಯಾವುದೇ ಒಂದು ಜನ್ಮದಲ್ಲಿ ಬಂದಿದ್ದರೂ ವಿಷಯಗಳೆಂಬ ವಿಷಫಲಗಳನ್ನೇ ಭಕ್ಷಿಸುತ್ತ ಬಂದಿದ್ದಾನೆ. ಆ ಭಕ್ಷಣದ ಫಲವಾಗಿ ಪುನಃ ಪುನಃ ಮೃತ್ಯುವಿನ ದವಡೆಯಲ್ಲಿ ಸಿಲುಕುತ್ತಲಿದ್ದಾನೆ. ಇದೊಂದು ಜೀವಾತ್ಮನ ಜನ್ಮ–ಮೃತ್ಯುವನ್ನು ತಿಳಿಸುವ ಮುಗಿಯ ಲಾರದ ಕಥೆಯು, ಎಲ್ಲಿಯವರೆಗೆ ಈ ಸಂಸಾರದಲ್ಲಿಯ ಶಬ್ದ–ಸ್ಪರ್ಶಾದಿ ವಿಷಯಗಳೆಂಬ ವಿಷಕಾಂತಾರವು ನಷ್ಟವಾಗುವುದಿಲ್ಲವೋ ಅಲ್ಲಿಯವರೆಗೆ ಜೀವಾತ್ಮನು ಆ ವಿಷಫಲ ಗಳನ್ನು ತಿನ್ನುತ್ತಲೇ ಇರಬೇಕಾಗುತ್ತದೆ. ಹಾಗಾದರೆ ಈ ಸಂಸಾರವೆಂಬ ವಿಷಕಾಂತಾರ ವನ್ನು ನಷ್ಟಮಾಡಿ ಬಿಡಬಹುದೇ ? ಎಂಬುದಾಗಿ ಯೋಚಿಸುವುದೂ ಸಹ ಸೂಕ್ತ ವಾದುದಲ್ಲ. ದೃಶ್ಯ ಸಂಸಾರವನ್ನು ನಾಶಗೊಳಿಸುವ ಅಧಿಕಾರವು ಜೀವಾತ್ಮನಿಗಿರುವು ದಿಲ್ಲ. ಇದನ್ನು ಸೃಷ್ಟಿ ಮಾಡಿದ ಈಶ್ವರನೇ ಇದನ್ನು ನಾಶಗೊಳಿಸಬಹುದು. ಪುನಃ ಇದನ್ನು ಸೃಷ್ಟಿಸಲೂಬಹುದು. ಇದರ ಸೃಷ್ಟಿ ಸಂಹಾರಗಳ ಹಕ್ಕು ಈಶ್ವರನಿಗೊಬ್ಬನಿಗೇ ಇರುತ್ತದೆ. ಈಶ ಕಾರ್ಯವಾದ ಈ ಸಂಸಾರದಲ್ಲಿ ಜೀವನು ಕೇವಲ ಭೋಕ್ತೃ ಆಗಿದ್ದಾನೆ. ಜೀವಿಗಳ ಭೋಗಕ್ಕಾಗಿಯೇ ಈ ಸೃಷ್ಟಿಯು ರಚಿಸಲ್ಪಟ್ಟಿದೆ. ಸೃಷ್ಟಿಯಲ್ಲಿಯ ಸುಖ–ದುಃಖಗಳನ್ನು ಉಪಭೋಗಿಸುವ ಅಧಿಕಾರವುಳ್ಳ ಜೀವನು ಒಂದು ವೇಳೆ ಅದನ್ನು ವಿನಾಶಗೊಳಿಸಿದರೆ ಶಿಕ್ಷೆಗೊಳಗಾಗುತ್ತಾನೆ. ತನ್ನ ಕರ್ಮಾನುಸಾರವಾಗಿ ಇಲ್ಲಿಯ ಸುಖ–ದುಃಖಗಳನ್ನು ಅನುಭವಿಸಿ ತನ್ನ ಸುಖ–ದುಃಖಗಳಿಗೆ ಸಾಧನೀಭೂತಗಳಾದ ಹೊಲ–ಮನೆ–ಹೆಂಡರು–ಮಕ್ಕಳು ಮತ್ತು ಒಡವೆ–ವಸ್ತುಗಳೆಂಬ ಪದಾರ್ಥಗಳನ್ನು ತನ್ನ ಉಪಭೋಗಕ್ಕಾಗಿ ಬಳಸಬಹುದೇ ವಿನಃ ಮರಣೋತ್ತರದಲ್ಲಿ ಅವುಗಳಲ್ಲಿ ಯಾವುದನ್ನೂ ತನ್ನೊಂದಿಗೆ ತೆಗೆದುಕೊಂಡು ಹೋಗಲು ಬರುವುದಿಲ್ಲ. ಇಹಲೋಕವನ್ನು ಬಿಟ್ಟು ಹೋಗುವ ಪ್ರಸಂಗ ಬಂದಾಗ ಅಲ್ಲಲ್ಲಿಯ ವಸ್ತುಗಳನ್ನು ಅಲ್ಲಲ್ಲೇ ಬಿಡಬೇಕಾಗುವುದು.

ಒಮ್ಮೆ ಓರ್ವ ವ್ಯಕ್ತಿಯು ತನ್ನ ಜೀವನದಲ್ಲಿ ಮೊದಲನೇ ಬಾರಿಗೆ ಹೋಟಲಿಗೆ ಹೋಗಿದ್ದನು. ಅಲ್ಲಿರುವ ಖಾದ್ಯ ಪದಾರ್ಥಗಳ ಬೆಲೆಯನ್ನು ಕುರಿತು ಮಾಣಿಯನ್ನು ವಿಚಾರಿಸಿದನು. ಆ ಮಾಣಿಯು ಅಲ್ಲಿರುವ ಪದಾರ್ಥಗಳ ಬೆಲೆಯನ್ನು ಹೇಳುವಾಗ ಒಂದು ಪ್ಲೇಟು ಉಪ್ಪಿಟ್ಟಿಗೆ ಇಷ್ಟು ಬೆಲೆ. ಒಂದು ಗ್ಲಾಸು ಚಹಾ, ಕಾಫಿ ಇಲ್ಲವೆ ಹಾಲಿಗೆ ಇಂತಿಷ್ಟು ರೂಪಾಯಿ ಎಂಬುದಾಗಿ ಪ್ಲೇಟು ಗ್ಲಾಸುಗಳ ಅಳತೆಯಲ್ಲಿ ಬೆಲೆಯನ್ನು ತಿಳಿಸಿದನು. ಆಗ ಆ ವ್ಯಕ್ತಿಯು ತನ್ನೆದುರಿಗೆ ಕಾಣುತ್ತಿರುವ ಎಲ್ಲಾ ತರದ ತಿಂಡಿಗಳನ್ನು ಒಂದೊಂದು ಪ್ಲೇಟಿನಂತೆ ತೆಗೆದುಕೊಂಡನಲ್ಲದೆ ಸಕಲ ವಿಧ ಪೇಯಗಳನ್ನೂ ಸಹ ಪಾನ ಮಾಡಿದನು. ಅವನು ಫಲಾಹಾರವನ್ನು ಮಾಡುವಾಗ ಅವನ ಮುಂದಿರುವ ಟೇಬಲ್ಲಿನ ತುಂಬೆಲ್ಲ ಪ್ಲೇಟು, ಚಮಚೆ, ಗ್ಲಾಸುಗಳೇ ತುಂಬಿಹೋಗಿದ್ದವು. ತಾನು ತಿಂದ ಪದಾರ್ಥಗಳ ಬೆಲೆಯನ್ನು ಕೊಡಲು ಮಾಲಕನ ಕಡೆಗೆ ಹೋಗುವಾಗ ಇವನು ಆ ಟೇಬಲ್ಲಿನ ಮೇಲಿರುವ ಪ್ಲೇಟು–ಚಮಚೆ ಮುಂತಾದವುಗಳನ್ನೆಲ್ಲ ತಾನು ತಂದ ಒಂದು ಕೈಚೀಲದಲ್ಲಿ ತುಂಬಿಕೊಂಡು ಹೋದನು. ಅಲ್ಲಿ ಹಣವನ್ನು ಕೊಡುತ್ತಿರುವಾಗ ಇವನಿಗೆ

ತಿಂಡಿ ಪದಾರ್ಥಗಳನ್ನು ತಂದೊದಗಿಸಿದ ಮಾಣಿಯು ಟೇಬಲ್ಲಿನ ಮೇಲಿನ ಪ್ಲೇಟು ಮುಂತಾದವುಗಳನ್ನು ತೊಳೆಯುವ ಉದ್ದೇಶದಿಂದ ಹೋಗಿ ನೋಡಿದಾಗ ಅಲ್ಲಿ ಒಂದೂ ಪಾತ್ರೆಯು ಕಾಣಲಿಲ್ಲ. ಗಾಬರಿಯಾದ ಮಾಣಿಯು ಓಡುತ್ತ ಬಂದು ಆ ವ್ಯಕ್ತಿಯ ಕೈ ಚೀಲವನ್ನು ತಪಾಸಿಸಲು ಆ ಎಲ್ಲ ಪಾತ್ರೆಗಳು ಅಲ್ಲಿಯೇ ದೊರೆತವು. ಆಗ ಆ ಮಾಣಿಯು ಯಜಮಾನರೇ ! ಈ ಪಾತ್ರೆಗಳನ್ನು ಕೈಚೀಲದಲ್ಲಿ ಏಕೆ ಹಾಕಿಕೊಂಡು ಹೊರಟಿದ್ದೀರಿ ? ಇವು ನಮ್ಮ ಹೋಟೇಲಿನ ಪಾತ್ರೆಗಳು ಎಂದು ಕೇಳಿದಾಗ ಆ ವ್ಯಕ್ತಿಯು ''ಅಯ್ಯಾ ನಾನು ಇವೆಲ್ಲದರ ಬೆಲೆಯನ್ನು ಕೊಟ್ಟಿದ್ದೇನೆ. ಅಂದ ಬಳಿಕ ಇವು ನನ್ನವು ಆದವಲ್ಲವೇ ? ನಾನು ಪದಾರ್ಥಗಳ ಬೆಲೆಯನ್ನು ಕೇಳಿದಾಗ ಪ್ಲೇಟು ಉಪ್ಪಿಟ್ಟಿನ ಬೆಲೆ, ಗ್ಲಾಸು ಚಹದ ಬೆಲೆ ಮುಂತಾಗಿ ನೀನೇ ಹೇಳಿರುವಿ. ಅಂದಾಗ ಆ ಪ್ಲೇಟು ಹಾಗೂ ಉಪ್ಪಿಟ್ಟು ಚಹಾ ಮತ್ತು ಗ್ಲಾಸುಗಳು ನನ್ನವು ಆದುವಲ್ಲವೆ ? ಅಂತೆಯೇ ಪದಾರ್ಥವನ್ನು ತಿಂದು ಪಾತ್ರೆಗಳನ್ನು ತೆಗೆದುಕೊಂಡು ಹೊರಟಿದ್ದೇನೆ. ಇದರಲ್ಲಿ ನನ್ನದೇನು ತಪ್ಪು ?'' ಎಂದು ಯಜಮಾನನು ಸಹಜವಾಗಿ ನುಡಿದನು. ಆಗ ಆ ಮಾಣಿಯು ಯಜಮಾನನನ್ನು ಕುರಿತು ''ಓ ಯಜಮಾನರೇ ನೀವು ಹೋಟಲ್ಲಿಗೆ ಮೊದಲನೇ ಸಾರೆ ಬಂದಂತೆ ಕಾಣುತ್ತದೆ. ನಾವು ಪ್ಲೇಟು–ಗ್ಲಾಸು–ಕಪ್ಪುಗಳ ಲೆಕ್ಕದಲ್ಲಿ ಪದಾರ್ಥಗಳ ಬೆಲೆಯನ್ನು ಹೇಳಿದರೂ ಆ ಪಾತ್ರೆಯೊಳಗಿನ ಪದಾರ್ಥಗಳನ್ನಷ್ಟೇ ನಿಮಗೆ ಉಪಭೋಗಕ್ಕೆ ಕೊಡಲಾಗಿರುತ್ತದೆ. ಪಾತ್ರೆಗಳನ್ನು ತೆಗೆದುಕೊಂಡು ಹೋಗುವ ಹಕ್ಕು ನಿಮಗಿರುವುದಿಲ್ಲ. ಅವುಗಳನ್ನು ಅಲ್ಲಿಯೇ ಬಿಟ್ಟು ಹೋಗಬೇಕು. ಅವುಗಳು ಪುನಃ ಮತ್ತೊಬ್ಬರ ಉಪಯೋಗಕ್ಕೆ ಬರುತ್ತವೆ. ಇದು ಹೋಟಲ್ಲಿನ ಒಂದು ಸಾಮಾನ್ಯವಾದ ನಿಯಮವು'' ಎಂದು ತಿಳಿಸಿದನು. ಆಗ ನಿರುಪಾಯನಾದ ಯಜಮಾನನು ತನ್ನ ಕೈಚೀಲದೊಳಗಿನ ಪಾತ್ರೆಗಳನ್ನೆಲ್ಲ ಮರಳಿ ಕೊಟ್ಟು ಮನೆಗೆ ಹೋದನು.

ಈ ಸಂಸಾರವೂ ಸಹ ಒಂದು ಹೋಟೆಲಿದ್ದಂತೆ. ಇಲ್ಲಿರುವ ಹೆಂಡತಿ, ಮಕ್ಕಳು, ಹೊಲ, ಮನೆ, ಬಂಧು ಬಳಗ ಇಷ್ಟ–ಮಿತ್ರ ಮತ್ತು ನಮ್ಮ ಶರೀರಾದಿಗಳು ಆ ಹೋಟಲ್‌ದೊಳಗಿನ ಪಾತ್ರೆಗಳಿದ್ದಂತೆ. ಯಾವ ಯಾವ ಪಾತ್ರೆಯೊಳಗೆ ತನ್ನ ಪಾಲಿನ ಭೋಗ್ಯ ಪದಾರ್ಥವಿದೆಯೋ ಅದನ್ನು ಉಪಭೋಗಿಸಲು ಪ್ರತಿಯೊಬ್ಬರೂ ಹಕ್ಕುದಾರರೇ ವಿನಃ ಆ ಉಪಭೋಗದ ಸಾಮಗ್ರಿಗಳನ್ನು ಮರಣೋಪರಾಂತದಲ್ಲಿ ತನ್ನೊಂದಿಗೆ ಒಯ್ಯುವ ಅಧಿಕಾರವು ಯಾರಿಗೂ ಇರುವುದಿಲ್ಲ. ಯಾರೇ ಇದ್ದರೂ ಇವೆಲ್ಲವುಗಳನ್ನು ಇಲ್ಲಿಯೇ ಬಿಟ್ಟು ಹೋಗಬೇಕಾಗುವುದು. ಇದು ಸಂಸಾರದ ಸಾಮಾನ್ಯವಾದ ನಿಯಮವು. ಇಂಥ ಈ ಸಂಸಾರದಲ್ಲಿ ಬಂದ ಜೀವಿಗಳು ಸದಾ ಸುಖವನ್ನು ಪಡೆಯುವ ಅಭಿಲಾಷೆಯುಳ್ಳವರಾಗಿದ್ದರೂ ಸಂಸಾರವೇ ದುಃಖರೂಪವಾಗಿರುವಾಗ ಸುಖವು ಎಲ್ಲಿಂದ ತಾನೇ ಸಿಕ್ಕೀತು ? ಅಂತೆಯೇ ಪೂಜ್ಯಪಾದರು ಈ ಸಂಸಾರಕ್ಕೆ ವಿಷಕಾಂತಾರವೆಂಬುದಾಗಿ ಕರೆದಿದ್ದಾರೆ. ವಿಷವೃಕ್ಷಗಳ ಈ ಘೋರಾರಣ್ಯವನ್ನು ಕಡಿದು ಹಾಕಬೇಕಾದರೆ ಇಂದ್ರಿಯಗಳ ವಶೀಕರಣವೆಂಬ ಕೊಡಲಿಯನ್ನು ಉಪಯೋಗಿಸಬೇಕಾಗುವುದು. ಅಂದರೆ ಇಂದ್ರಿಯಗಳನ್ನು ಆಯಾ ವಿಷಯಗಳತ್ತ ಅಭಿಮುಖ ಮಾಡದೆ ಅವುಗಳನ್ನು ಪರಾವರ್ತನಗೊಳಿಸಿಕೊಳ್ಳಬೇಕು. ಇಂದ್ರಿಯಗಳು ವಿಷಯ

ಗಳಿಂದ ವಿಮುಖಗಳಾದರೆ ಜೀವನಿಗೆ ವಿಷಯರೂಪೀ ವಿಷದಬಾಧೆಯುಂಟಾಗುವುದಿಲ್ಲ.

ಶಬ್ದ–ಸ್ಪರ್ಶಾದಿ ವಿಷಯಗಳು ವಿಷಗಳಿದ್ದಂತೆಯೇ. ಅಂತೆಯೇ ನಿಜಗುಣ ಶಿವಯೋಗಿಗಳು ವಿಷಯಭೋಗವನ್ನು ಕುರಿತು– ನಂಜುವೆರಸಿದ ಸವಿಯೂಟ ಕೊನೆಗೆ ಕೇಡನ್ನು ತಂದೊಡ್ಡುವ ಮಾಯೆಯ ಕೈವಾಡವೆಂಬುದಾಗಿ ತಿಳಿಸಿ ಈ ವಿಷಯ ಸುಖವು ಕನಸು, ಬಿಸಿಲುಗುದುರೆ, ಸುರಧನು, ಸುಳಿಗಾಳಿ, ಘನತತಿ ಮತ್ತು ಮಿಂಚಿನಂತೆ ಕ್ಷಣಿಕವಾದುದೆಂಬುದಾಗಿ ಎಚ್ಚರಿಸಿದ್ದಾರೆ. ಈ ವಿಷಯಗಳಲ್ಲಿ ಒಂದೊಂದು ವಿಷಯದ ವ್ಯಾಮೋಹಕ್ಕೆ ಒಳಗಾಗಿರುವ ಭ್ರಮರ, ಮೀನು, ಗಜ, ಪತಂಗ ಮತ್ತು ಎರಳೆ (ಚಿಗರೆ)ಗಳು ತಮ್ಮ ಪ್ರಾಣವನ್ನೇ ಕಳೆದುಕೊಳ್ಳುತ್ತಿರುವಾಗ ಐದೂ ವಿಷಯಗಳಿಗೆ ಆಶೆ ಪಡುವ ಮನುಷ್ಯನು ಅದು ಹೇಗೆ ತಾನೆ ಸುರಕ್ಷಿತವಾಗಿ ಇರಬಲ್ಲನು ? ಆದ್ದರಿಂದ ಈ ವಿಷಯವೆಂಬ ವಿಷದಿಂದ ತಾನು ಸುರಕ್ಷಿತನಾಗಿರಬೇಕಾದರೆ ಇಂದ್ರಿಯ ನಿಗ್ರಹವೇ ಸರ್ವಶ್ರೇಷ್ಠವಾದ ಉಪಾಯವು. ಶಬ್ದಾದಿ ವಿಷಯಗಳು ವಿಷರೂಪಗಳೆಂದು ಅವುಗಳನ್ನು ವಿನಾಶಗೊಳಿಸಲು ಬರುವುದಿಲ್ಲ. ಆದರೆ ಅವುಗಳತ್ತ ತನ್ನ ಮನವು ಬಳಸದಂತೆ ತಾನು ಎಚ್ಚರಿಕೆ ವಹಿಸಿದರೆ ಸಾಕು. ತಾನು ಆ ವಿಷಬಾಧೆಯಿಂದ ಮುಕ್ತನಾಗಬಹುದು. ಅಂತೆಯೇ ಸಂಸಾರವನ್ನು ನಾಶಮಾಡುವ ಹಕ್ಕು ಯಾರಿಗೂ ಇರುವುದಿಲ್ಲ. ಆದರೆ ಸಂಸಾರದಿಂದ ತನ್ನ ಮನಸ್ಸನ್ನು ನಿವೃತ್ತಿಗೊಳಿಸಿಕೊಳ್ಳಲು ಪ್ರತಿಯೊಬ್ಬರಿಗೂ ಅಧಿಕಾರವಿದೆ. ಪ್ರಸ್ತುತವಾದ ಪ್ರಸಂಗದಲ್ಲಿ ಪೂಜ್ಯರು ಅಪ್ಪಣೆ ಕೊಡಿಸಿದಂತೆ ತನ್ನ ಬಹಿರಿಂದ್ರಿಯ ಹಾಗೂ ಅಂತರಿಂದ್ರಿಯಗಳನ್ನು ವಿಷಯದಿಂದ ವಿಮುಖಗೊಳಿಸಿಕೊಂಡಾಗ ಮನಸ್ಸಿಗೆ ಎಂದಿಲ್ಲದ ಶಾಂತಿ ಸಮಾಧಾನಗಳು ದೊರೆಯುವವು. ಸುಷುಪ್ತಾವಸ್ಥೆಯಲ್ಲಿ ಇಂದ್ರಿಯ ಹಾಗೂ ವಿಷಯಗಳ ಸಂಬಂಧವಿಲ್ಲದಿರೋಣದರಿಂದಲೇ ಪ್ರತಿಯೊಬ್ಬರೂ ಅಲ್ಲಿ ಶಾಂತಿ ಹಾಗೂ ಆನಂದವನ್ನು ಪ್ರತಿನಿತ್ಯ ಅನುಭವಿಸುತ್ತಿರುವುದು ಸರ್ವಾನುಭವ ಸಿದ್ಧವಾದುದು. ಆದ್ದರಿಂದ ಶಾಂತಿ ಸಮಾಧಾನಗಳನ್ನು ಅಪೇಕ್ಷಿಸುತ್ತಿರುವ ವ್ಯಕ್ತಿಯು ಇಂದ್ರಿಯ ನಿಗ್ರಹವನ್ನು ಸಾಧಿಸಬೇಕಾಗುವುದು. ಪಟ್ಟಣದ ಗದ್ದಲಮಯವಾದ ಪರಿಸರದಲ್ಲಿ ಕಾಲಕಳೆದು ಬೇಸರಗೊಂಡ ಓರ್ವ ವ್ಯಕ್ತಿಯು ತಾನೋರ್ವನೇ ಊರಿನಿಂದ ದೂರವಿರುವ ಒಂದು ಪರ್ವತ ಶಿಖರದ ಮೇಲಾಗಲೀ ನದಿಯ ದಡದಲ್ಲಾಗಲೀ ಹೋಗಿ ಕುಳಿತಾಗ ಒಂದು ವಿಲಕ್ಷಣವಾದ ಶಾಂತಿಯ ಅನುಭೂತಿಯು ಅವನಿಗುಂಟಾಗುವುದು. ಅಲ್ಲಿ ಅವನನ್ನು ಹೊರತುಪಡಿಸಿ ಅನ್ಯರಾರೂ ಇಲ್ಲವೆಂತಲೇ ಅವನಿಗಲ್ಲಿ ಶಾಂತಿಯು ದೊರೆಯುವುದು. ಇದೇ ಪ್ರಕಾರವಾಗಿ ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯ ಮತ್ತು ಮನಸ್ಸೆಂಬ ಈ ಇಂದ್ರಿಯಗಳ ವ್ಯವಹಾರಕ್ಕೊಳಗಾಗಿ ಅಲ್ಪ ಸುಖಕ್ಕಾಗಿ ಅನಂತ ದುಃಖವನ್ನನುಭವಿಸಿದ ಜೀವನು ವಿಷಯಗಳ ವಿಷಮಯತೆಯನ್ನು ಅರಿತುಕೊಂಡು ಅದರಿಂದ ದೂರವಿರುವುದಕ್ಕಾಗಿಯೇ ಇಂದ್ರಿಯ ನಿಗ್ರಹವನ್ನು ಮಾಡಬೇಕಾಗುವುದು.

ಶಾಸ್ತ್ರದಲ್ಲಿ ಶಮೆ, ದಮೆಗಳ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಲು ಉಪದೇಶಿಸಲಾಗಿದೆ. ಶಮೆಯಿಂದ ಅಂತರಿಂದ್ರಿಯ ನಿಗ್ರಹವಾದರೆ ದಮೆಯಿಂದ

ಬಹಿರಿಂದ್ರಿಯಗಳ ನಿಗ್ರಹವಾಗುವುದು. ಈ ಶಮೆ–ದಮೆಗಳು ಪರಸ್ಪರ ಸಹಾಯಕ ಗಳಾಗಿರುತ್ತವೆ. ಶಮೆಯಿಂದ ದಮೆ, ದಮೆಯಿಂದ ಶಮೆಯು ಸಾಧಕನಿಗೆ ಸಿದ್ಧಿಸುವುದು. ಹೀಗೆ ಶಮೆ–ದಮೆಗಳ ಮೂಲಕ ಅಂತರಿಂದ್ರಿಯ ಹಾಗೂ ಬಹಿರಿಂದ್ರಿಯಗಳನ್ನು ನಿಗ್ರಹಿಸಿಕೊಂಡ ಕರಣಾರ್ಪಿತಸ್ಥಲದ ಶಿವಯೋಗಿಯು ಇಂದ್ರಿಯಗಳ ವಶೀಕರಣ ದಿಂದ ಒಂದು ಅಲೌಕಿಕವಾದ ಶಾಂತಿ ಸಮಾಧಾನವನ್ನು ಪಡೆಯುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕರಣಾರ್ಪಿತ ವಿಷಯವನ್ನೇ ಮುಂದುವರೆಸುತ್ತ ಪುನಃ–

ಇಂದ್ರಿಯೈರೇವ ಜಾಯಂತೇ ಪಾಪಾನಿ ಸುಕೃತಾನಿ ಚ ।
ತೇಷಾಂ ಸಮರ್ಪಣಾದೀಶೇ ಕುತಃ ಕರ್ಮನಿಬಂಧನಮ್ ॥

(ಸಿ. ಶಿ. ೧೭–೪೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ನಮಗಿರುವ ಈ ಇಂದ್ರಿಯ ಗಳಿಂದಲೇ ಪುಣ್ಯ ಹಾಗೂ ಪಾಪಗಳು ಉತ್ಪನ್ನವಾಗುವವು. ಈ ಇಂದ್ರಿಯಗಳನ್ನೇ ಶಿವನಿಗೆ ಸಮರ್ಪಿಸಿದಾಗ ಅದಾವ ಕರ್ಮದ ಬಂಧನವೂ ಕೂಡ ಉಂಟಾಗಲಾರದು.

ನಾವು ಆಚರಿಸುವ ವಿಹಿತ ಇಲ್ಲವೆ ನಿಷಿದ್ಧ ಕರ್ಮಗಳಿಂದಲೇ ಪುಣ್ಯ–ಪಾಪಗಳು ಸಂಭವಿಸುತ್ತವೆ. ಜೀವಾತ್ಮರು ಇಹಲೋಕದಲ್ಲಿ ಏನೆಲ್ಲವನ್ನು ಸಂಪಾದಿಸಿದ್ದರೂ ಅವೆಲ್ಲ ವನ್ನು ಇಲ್ಲಿಯೇ ಬಿಟ್ಟು ಪುಣ್ಯ–ಪಾಪಗಳನ್ನು ಮಾತ್ರ ತನ್ನೊಂದಿಗೆ ತೆಗೆದುಕೊಂಡು ಹೋಗುತ್ತಾನೆ. ಅಂತೆಯೇ ಓರ್ವ ಸುಭಾಷಿತಕಾರನು–''ಕರ್ಮಾನುಗೋಗಚ್ಛತಿ ಜೀವ ಏಕಃ'' ಎಂಬುದಾಗಿ ಹೇಳಿದ್ದಾನೆ. ಈ ಪುಣ್ಯ–ಪಾಪಗಳನ್ನು ನಿರ್ಣಯಿಸುವಂಥಾದ್ದು ಶಾಸ್ತ್ರವೇ. ಶಾಸ್ತ್ರವೆಂದರೆ ಬೇರಾರೂ ಬರೆದ ಗ್ರಂಥಗಳಲ್ಲ. ಶಿವನ ಶ್ವಾಸೋಚ್ಛ್ವಾಸದ ಮೂಲಕವಾಗಿ ಹೊರಹೊಮ್ಮಿದ ವೇದಗಳು ಹಾಗೂ ಅವನ ವೈಖರಿಯಿಂದ ಉಪದೇಶಿಸಲ್ಪಟ್ಟ ಆಗಮಗಳು ಶಾಸ್ತ್ರವೆಂಬುದಾಗಿ ಕರೆಯಲ್ಪಟ್ಟಿವೆ. ಈ ಶಾಸ್ತ್ರಗಳಲ್ಲಿ ಶಿವನಿಂದ ಜೀವಿಗಳಿಗೆ ಮಾಡಲು ಆದೇಶಿಸಲ್ಪಟ್ಟ ಕರ್ಮವು ವಿಹಿತ ಕರ್ಮವೆಂತಲೂ ನಿಷೇಧಿಸಲ್ಪಟ್ಟ ಕರ್ಮವು ನಿಷಿದ್ಧ ಕರ್ಮವೆಂತಲೂ ಕರೆಯಲ್ಪಡುತ್ತವೆ. ಇಲ್ಲಿ ನಿರೂಪಿಸಿದ ವಿಹಿತ ಕರ್ಮವನ್ನಾಚರಿಸಲು ಪುಣ್ಯವು ಮತ್ತು ನಿಷಿದ್ಧ ಕರ್ಮವನ್ನಾ ಚರಿಸಲು ಪಾಪವು ಪ್ರಾಪ್ತವಾಗುವುದು. ಈ ವಿಹಿತ, ನಿಷಿದ್ಧ ಕರ್ಮ ಆಚರಣೆಗೆ ನಮ್ಮ ಅಂತರಿಂದ್ರಿಯ ಬಹಿರಿಂದ್ರಿಯಗಳೇ ಸಾಧನಗಳಾಗಿರುತ್ತವೆ. ಹೀಗೆ ಇಂದ್ರಿಯ ಜನ್ಯಗಳಾದ ಪುಣ್ಯ–ಪಾಪಗಳು ನಮ್ಮ ಅನಂತ ಜನ್ಮಗಳಿಗೆ ನಿಮಿತ್ತಗಳಾಗುವುವು. ಈ ಪುಣ್ಯ–ಪಾಪವೆಂಬ ಕರ್ಮ ಬಂಧನವು ಜೀವಿಗಳನ್ನು ಸಂಸಾರ ಚಕ್ರದಲ್ಲಿ ಸದಾ ತಿರುಗಿಸುತ್ತಲಿರುತ್ತದೆ. ಈ ಕರ್ಮಬಂಧನದಿಂದ ಪಾರಾಗುವ ಉಪಾಯವೆಂದರೆ ಇಂದ್ರಿಯಗಳನ್ನು ಶಿವಾರ್ಪಣಗೊಳಿಸಬೇಕೆಂಬುದಾಗಿ ಪೂಜ್ಯರು ಆದೇಶವಿತ್ತಿದ್ದಾರೆ. ಅವರ ಆದೇಶದ ಪ್ರಕಾರವಾಗಿ ಅವುಗಳನ್ನು ಶಿವನಿಗೆ ಸಮರ್ಪಿಸಿದರೆ ಈ ಕರ್ಮಬಂಧನವು ತೊಡೆದು ಹೋಗಬಹುದು. ಇಂದ್ರಿಯಗಳನ್ನು ಶಿವಾರ್ಪಿತ ಗೊಳಿಸುವುದೆಂದರೆ ಆ ಇಂದ್ರಿಯಗಳನ್ನೆಲ್ಲ ಶಿವಾರಾಧನೆಯಲ್ಲಿ ತೊಡಗಿಸಿ ಅವುಗಳ

ಮೇಲಿನ ತನ್ನತನವನ್ನು ಕಳೆದುಕೊಳ್ಳುವುದು. ಹೀಗೆ ಯಾವ ಶಿವಯೋಗಿಯು ತನ್ನ ಅಂತಃಕರಣದಿಂದ ಬಹಿಃಕರಣದಿಂದ ಶಿವಪೂಜೆ ಶಿವಧ್ಯಾನಾದಿಗಳನ್ನು ಮಾಡುತ್ತ ಫಲಾಪೇಕ್ಷೆಯಿಲ್ಲದೆ ಕರ್ಮವನ್ನಾಚರಿಸುವನೋ, ಅವನು ನೂತನ ಪುಣ್ಯ-ಪಾಪಗಳೆಂಬ ಕರ್ಮಗಳಿಗೆ ಭಾಜನನಾಗದೆ ಅಲಿಪ್ತನಾಗಿ ಉಳಿಯುತ್ತಾನೆ. ಇಂತಹ ಅಲಿಪ್ತನಾದ ಶಿವಯೋಗಿಗೆ ಯಾವುದೇ ವಿಧವಾದ ಕರ್ಮ ಬಂಧನವು ಇರುವುದಿಲ್ಲ.

ನಾವು ಶಿವನಿಗೆ ಸಮರ್ಪಿಸಿದ ವಸ್ತುವು ಉತ್ತರೋತ್ತರವಾಗಿ ಅಭಿವೃದ್ಧಿಯಾಗುವ ದೆಂಬುದಾಗಿ ಪ್ರತಿಪಾದಿಸಲಾಗುತ್ತಿದೆ. ಹೀಗಿರುವಾಗ ಇಂದ್ರಿಯಗಳನ್ನು ಮತ್ತು ಇಂದ್ರಿಯಜನ್ಯಗಳಾದ ಪುಣ್ಯ-ಪಾಪಗಳನ್ನು ಶಿವಾರ್ಪಿತಗೊಳಿಸಲು ಅವು ಮತ್ತಷ್ಟು ಅಭಿವೃದ್ಧಿಗೊಂಡು ಜೀವಾತ್ಮನ ಬಂಧನಕ್ಕೆ ಕಾರಣವಾಗುವದಿಲ್ಲವೇ? ಎಂಬ ಶಂಕೆಯುಂಟಾಗಲು ಅದಕ್ಕೆ ಉತ್ತರರೂಪವಾಗಿ ಪೂಜ್ಯಪಾದರು-

ಪ್ರಕಾಶಮಾನೇ ಚಿದ್ವಹ್ನೌ ಬಹಿರಂತರ್ಜಗನ್ಮಯೇ ।
ಸಮರ್ಪ್ಯ ವಿಷಯಾನ್ ಸರ್ವಾನ್ ಮುಕ್ತವಜ್ಜಾಯತೇ ಜನಃ ॥

(ಸಿ. ಶಿ. ೧೭-೪೬)

ಈ ವಿಧವಾಗಿ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಬೆಂಕಿಯೊಳಗೆ ಹಾಕಿದ ಪದಾರ್ಥವು ಸುಟ್ಟು ಇಲ್ಲವಾಗಿ ಹೋಗುವಂತೆ ಒಳಹೊರಗೆಲ್ಲ ವ್ಯಾಪಿಸಿಕೊಂಡಿರುವ ಜ್ಞಾನಾಗ್ನಿರೂಪವಾದ ಪರಶಿವನಿಗೆ ಸಮರ್ಪಿಸಿದ ಇಂದ್ರಿಯಗಳಾಗಲೀ ಇಂದ್ರಿಯಜನ್ಯ ಕರ್ಮಗಳಾಗಲೀ ದಹಿಸಿ ಆ ವ್ಯಕ್ತಿಯು ಜೀವನ್ಮುಕ್ತನಾಗುವನೇ ವಿನಃ ಅವನ ಕರ್ಮಾದಿ ಗಳ ಅಭಿವೃದ್ಧಿಗೆ ಅಲ್ಲಿ ಅವಕಾಶವಿರುವದಿಲ್ಲ.

ಪರಮಾತ್ಮನು ಚಿದಗ್ನಿರೂಪನಾಗಿದ್ದಾನೆ. ಅವನು ಜಗದ ಒಳಹೊರಗೆಲ್ಲ ವ್ಯಾಪಿಸಿಯೂಕೊಂಡಿದ್ದಾನೆ. ಅಗ್ನಿಯಲ್ಲಿ ಅರ್ಪಿಸಿದ ಯಾವುದೇ ಪದಾರ್ಥವು ದಹಿಸಿ ಭಸ್ಮವಾಗಿ ಹೋಗುವಂತೆ ಈ ಚಿದಗ್ನಿರೂಪವಾದ ಪರಶಿವನಿಗೆ ಸಮರ್ಪಿಸಿದ ವಿಷಯಾದಿಗಳಾಗಲೀ ಪುಣ್ಯ-ಪಾಪಗಳಾಗಲೀ ದಹಿಸಿ ಹೋಗುತ್ತವೆ. ಅಂತೆಯೇ ಸಮರ್ಪಣ ಮಾಡಿದ ವ್ಯಕ್ತಿಯು ಕರ್ಮಶೂನ್ಯನಾಗಿ ಜನನ ಮರಣ ಚಕ್ರದಿಂದ ದೂರಾಗಿ ಜೀವನ್ಮುಕ್ತನಾಗುತ್ತಾನೆ. ಇಲ್ಲಿ ತನ್ನ ಇಂದ್ರಿಯ ಮತ್ತು ಕರ್ಮಾದಿಗಳನ್ನು ಚಿದಗ್ನಿರೂಪವಾದ ಪರಮಾತ್ಮನಲ್ಲಿ ಸಮರ್ಪಿಸುವುದೆಂದರೆ ಅವುಗಳ ಅಭಿಮಾನವನ್ನು ತ್ಯಜಿಸುವುದೆಂಬುದಾಗಿ ತಿಳಿದುಕೊಳ್ಳಬೇಕು. ವಸ್ತುಗಳು ಎಲ್ಲಿಯೇ ಇದ್ದರೂ ಅವುಗಳ ವಿಷಯಕವಾದ ಅಭಿಮಾನವು ನಮ್ಮಲ್ಲಿದ್ದರೆ ಆ ವಸ್ತುಗಳು ನಮ್ಮೊಳಗಿದ್ದಂತೇನೇ. ನೀವೆಲ್ಲ ಈ ಪ್ರವಚನ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಬಂದಿದ್ದೀರಿ. ಇಲ್ಲಿಗೆ ಬರುವಾಗ ನೀವು ನಿಮ್ಮ ಮನೆ, ನಿಮ್ಮ ಮಡದಿ-ಮಕ್ಕಳು ಮತ್ತು ಧನ-ಕನಕಾದಿಗಳನ್ನು ಅಲ್ಲಿಯೇ ಬಿಟ್ಟು ಬಂದಿದ್ದೀರಿ. ಆದರೂ ಅವುಗಳ ಮೇಲಿನ ಮಮತ್ವಾಭಿಮಾನವು ನಿಮ್ಮ ಜೊತೆಯಲ್ಲಿ ರೋಣದರಿಂದ ನೀವಿಲ್ಲಿ ಕುಳಿತಾಗಲೂ ಅವುಗಳ ನೆನಪಿನ ತರಂಗಗಳು ನಿಮ್ಮ ಮನಸ್ಸಿನ ಮೇಲೆ ಸದಾ ಏಳುತ್ತಲೇ ಇರುತ್ತವೆ. ಆದರೆ ಅವುಗಳ ಮೇಲಿನ ಮಮತ್ವವನ್ನು ತೊರೆದು ನೀವು ಮನೆಯಲ್ಲೇ ಇದ್ದಿದ್ದರೂ ಅವುಗಳ ನೆನಪು ನಿಮಗೆ ಆಗದೇ ಇರಬಹುದಾಗಿತ್ತು.

ಇದೆಲ್ಲವನ್ನು ನೋಡಿದಾಗ ಅಭಿಮಾನವೇ ಬಂಧನಕಾರಿಯೆಂಬುದು ತಿಳಿದು ಬರುತ್ತದೆ. ಪ್ರಜ್ವಲಿಸುವ ಯಜ್ಞಕುಂಡದಲ್ಲಿ ಆಜ್ಯಾದಿ ಹವಿಸ್ಸುಗಳನ್ನು ಹೋಮ ಮಾಡುವಾಗ ಪ್ರತಿಯೊಂದು ಆಹುತಿಗೆ ದೇವರ ಹೆಸರನ್ನು ಉಚ್ಚರಿಸಿ ಸ್ವಾಹಾಕಾರ ಕೊಡುವುದನ್ನು ನಾವೆಲ್ಲಾ ನೋಡುತ್ತಿರುತ್ತೇವೆ. ಹೋಮ ಮಾಡುವ ವ್ಯಕ್ತಿಯು ಅಗ್ನಿಯಲ್ಲಿ ಆಜ್ಯಾದಿಗಳನ್ನು ಸಮರ್ಪಿಸುವಾಗ ಹೇಗೆ ಮಮತ್ವ ಭಾವನೆಯನ್ನು ತೊರೆದು ಸಮರ್ಪಿಸುವನೋ ಅದರಂತೆ ಕರಣಾರ್ಪಿತಸ್ಥಲದ ಶಿವಯೋಗಿಯು ತನ್ನ ಚಿದಗ್ನಿ ರೂಪವಾದ ಪರಮಾತ್ಮನಲ್ಲಿ ಇಂದ್ರಿಯ ವಿಷಯ ಹಾಗೂ ಪುಣ್ಯ-ಪಾಪಗಳನ್ನೆಲ್ಲ ಸಮರ್ಪಿಸಿ ಅವುಗಳ ಮೇಲಿನ ತನ್ನದೆಂಬ ಭಾವನೆಯನ್ನು ಕಳೆದುಕೊಂಡು ಮುಕ್ತನೇ ಆಗಿರುತ್ತಾನೆ. ಆದ್ದರಿಂದ ಅವನಿಗೆ ಕರ್ಮಾದಿಗಳ ಅಭಿವೃದ್ಧಿಯಾಗಲೀ, ತನ್ನಿಮಿತ್ತವಾದ ಬಂಧನವಾಗಲೀ ಉಂಟಾಗುವುದಿಲ್ಲವೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕರಣಾರ್ಪಣ ವಿಷಯವನ್ನು ಹೋಮ ಕ್ರಿಯೆಗೆ ಹೋಲಿಸಿ ಅದನ್ನು ಮತ್ತಷ್ಟು ವಿಸ್ತಾರಗೊಳಿಸುತ್ತಾ ಪುನಃ-

ಚಿತ್ತದ್ರವ್ಯಂ ಸಮಾದಾಯ ಜಗಜ್ಜಾತಂ ಮಹಾಹವಿಃ ।
ಚಿದ್ವಹ್ನೌ ಜುಹ್ವತಾಮಂತಃ ಕುತಃ ಸಂಸಾರವಿಪ್ಲವಃ ॥

ಆತ್ಮಜ್ಯೋತಿಷಿ ಚಿದ್ರೂಪೇ ಪ್ರಾಣವಾಯುನಿಬೋಧಿತೇ ।
ಜುಹ್ವನ್ ಸಮಸ್ತವಿಷಯಾನ್ ತನ್ಮಯೋ ಭವತಿ ಧ್ರುವಮ್ ॥

ಇಂದ್ರಿಯಾಣಿ ಸಮಸ್ತಾನಿ ಶರೀರಂ ಭೋಗಸಾಧನಮ್ ।
ಶಿವಪೂಜಾಂಗಭಾವೇನ ಭಾವಯನ್ ಮುಕ್ತಿಮಾಪ್ನುಯಾತ್ ॥

(ಸಿ. ಶಿ. ೧೭; ೪೭-೪೯)

ಹೀಗೆ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಜಗತ್ತು ಪಂಚತನ್ಮಾತ್ರಾರೂಪ ವಾಗಿರುತ್ತದೆ. ಚಿತ್ತದಲ್ಲಿ ಉತ್ಪನ್ನವಾಗುವ ಶಬ್ದ-ಸ್ಪರ್ಶಾದಿ ವಿಷಯಗಳ ಅಭಿಲಾಷಾ ರೂಪವಾದ ಹವಿರ್ದ್ರವ್ಯವನ್ನು ತನ್ನ ಹೃದಯ ಕಮಲದಲ್ಲಿ ಪ್ರಕಾಶಮಾನವಾಗಿ ಇರುವ ಚಿದಗ್ನಿಯಲ್ಲಿ ಹವನ ಮಾಡಿದರೆ ಈ ಸಂಸಾರದ ಬಾಧೆಯು ಅವನಿಗೆ ಉಂಟಾಗುವುದಿಲ್ಲ. ಪ್ರಾಣವಾಯುವಿನ ಬೀಸುವಿಕೆಯಿಂದ ಚೆನ್ನಾಗಿ ಪ್ರಜ್ವಲಗೊಂಡಿರುವ ಶಿವರೂಪ ಅಗ್ನಿಯಲ್ಲಿ ಆಯಾ ಇಂದ್ರಿಯಜನ್ಯ ಸುಖಾದಿ ವಿಷಯಗಳನ್ನು ಸಮರ್ಪಿಸುವ ಶಿವಯೋಗಿಯು ತಾನೇ ಶಿವಸ್ವರೂಪನಾಗುತ್ತಾನೆ. ಸಕಲ ಇಂದ್ರಿಯಗಳು ಮತ್ತು ಭೋಗಕ್ಕೆ ಸಾಧನವಾದ ಶರೀರವು, ಇವೆಲ್ಲ ಶಿವಪೂಜೆಗೂ ಸಹ ಸಾಧನವಾಗಿರುತ್ತವೆ ಎಂಬುದಾಗಿ ಭಾವಿಸುವ ಶಿವಯೋಗಿಯು ಪರಮ ಕೈವಲ್ಯವನ್ನು ಪಡೆಯುತ್ತಾನೆ.

ಈ ಜಗತ್ತು ಶಬ್ದ-ಸ್ಪರ್ಶಾದಿ ಪಂಚ ವಿಷಯ ರೂಪವಾಗಿರುತ್ತದೆ. ಈ ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಂದು ಜೀವವೂ ಸಹ ಈ ವಿಷಯಗಳ ಅಭಿಲಾಷೆಗೊಳಗಾಗಿ ಅನಂತ ದುಃಖವನ್ನು ಅನುಭವಿಸುತ್ತಿರುತ್ತದೆ. ಎಲ್ಲಿಯವರೆಗೆ ಮನಸ್ಸಿನಿಂದ ವಿಷಯಾಭಿ ಲಾಷೆಯು ತೊಲಗುವುದಿಲ್ಲವೋ ಅಲ್ಲಿಯವರೆಗೆ ಚಿತ್ತಕ್ಕೆ ಶಾಂತಿ ಸಮಾಧಾನಗಳು

ದೊರೆಯಲಾರವು. ಅಂತೆಯೇ ಪೂಜ್ಯಪಾದರು ಚಿತ್ತದ್ರವ್ಯದಿಂದ ಹೋಮ ಮಾಡುವ ಒಂದು ಪ್ರಕ್ರಿಯೆಯನ್ನು ಇಲ್ಲಿ ಬೋಧಿಸಿದ್ದಾರೆ. ಅವರ ಉಪದೇಶದ ಪ್ರಕಾರವಾಗಿ ಹೃದಯಾಂತರಾಳದಲ್ಲಿ ಪ್ರಕಾಶಮಾನವಾಗಿ ಹೊಳೆಯುವ ಚಿಜ್ಜ್ಯೋತಿಯೇ ಒಂದು ಮಹಾ ಅಗ್ನಿಯು. ಈ ಅಗ್ನಿಯಲ್ಲಿ ಮನಸ್ಸಿನ ಸಂಕಲ್ಪ–ವಿಕಲ್ಪಗಳನ್ನು ಬುದ್ಧಿಯ ನಿಶ್ಚಯತನವನ್ನು, ಚಿತ್ತದ ಅವಧಾರಣತೆಯನ್ನು, ಅಹಂಕಾರದ ಅಹಂತೆಯನ್ನು ಹೋಮ ಮಾಡಲಾಗಿ ಶಿವಯೋಗಿಯು ಸಂಸಾರದ ಎಲ್ಲ ಬಾಧೆಗಳಿಂದ ಮುಕ್ತ ನಾಗುತ್ತಾನೆ. ಇಂದ್ರಿಯ ಹಾಗೂ ಅಂತಃಕರಣಗಳ ಅಭಿಮಾನವೇ ಸಂಸಾರಕ್ಕೆ ಕಾರಣ ವಾಗಿರುತ್ತದೆ. ಆ ಅಭಿಮಾನವೇ ಇಲ್ಲದಾಗಿ ಹೋದಾಗ ಸಂಸಾರಬಾಧೆಯು ಅದು ಹೇಗೆ ತಾನೆ ಉಂಟಾದೀತು ? ಅಂತೆಯೇ ಪೂಜ್ಯರು ಚಿತ್ತದ್ರವ್ಯದ ಹವನವನ್ನಿಲ್ಲಿ ಪ್ರತಿಪಾದಿಸಿದ್ದಾರೆ.

ಅಗ್ನಿಕುಂಡದಲ್ಲಿರುವ ಅಗ್ನಿಯನ್ನು ಗಾಳಿ ಬೀಸುವುದರ ಮೂಲಕ ಪ್ರಜ್ವಲ ಗೊಳಿಸುವಂತೆ ಹೃದಯದಲ್ಲಿಯ ಈ ಚಿದಗ್ನಿಯನ್ನು ಪ್ರಾಣಾಯಾಮದಿಂದ ಪ್ರಜ್ವಲ ಗೊಳಿಸಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಹೀಗೆ ಪ್ರಜ್ವಲಿತವಾದ ಚಿದಗ್ನಿಯಲ್ಲಿ ಸಮಸ್ತ ಇಂದ್ರಿಯಗಳ ವಿಷಯಗಳನ್ನು ಶಿವಯೋಗಿಯು ಹೋಮ ಮಾಡುತ್ತ ಕುಳಿತರೆ ಕ್ರಮವಾಗಿ ವಿಷಯಗಳ ವಿಸ್ಮೃತಿಯಾಗಿ ಅವನು ಶಿವಸ್ವರೂಪನೇ ಆಗುತ್ತಾನೆ. ನಮಗೆ ದೊರೆತಿರುವ ಈ ಶರೀರ ಹಾಗೂ ಶರೀರದಲ್ಲಿಯ ಇಂದ್ರಿಯಗಳು ಸಾಂಸಾರಿಕ ಸುಖ ಭೋಗಕ್ಕೆ ಅಷ್ಟೇ ಅಲ್ಲ, ಇವುಗಳು ಶಿವಪೂಜೆಗೂ ಸಹ ಸಾಧನಗಳಾಗಿರುತ್ತವೆ. ಸಾಮಾನ್ಯ ಜೀವಿಗಳು ಅವುಗಳನ್ನು ಕೇವಲ ಭೋಗಕ್ಕಾಗಿ ಬಳಸಿದರೆ ಸಾಧಕರು ಭೋಗ ದೊಂದಿಗೆ ಯೋಗಕ್ಕೂ ಸಹ ಬಳಸುತ್ತಾರೆ. ಇನ್ನು ಸಿದ್ಧರು ಕೇವಲ ಯೋಗಕ್ಕಾಗಿಯೇ ಬಳಸುವರು. ಆದ್ದರಿಂದ ಈ ಕರಣಾರ್ಪಿತ ಸ್ಥಲದ ಶಿವಯೋಗಿಯು ಭೋಗ ಸಾಧನವಾದ ಶರೀರಾದಿ ಗಳನ್ನು ಶಿವಪೂಜಾ ಸಾಧನಗಳನ್ನಾಗಿಸಿಕೊಂಡು ಶರೀರದಿಂದ ಶಿವನಪೂಜೆ, ವಾಣಿ ಯಿಂದ ಶಿವನಸ್ತುತಿ ಮತ್ತು ಮನಸ್ಸಿನಿಂದ ಶಿವಧ್ಯಾನಾದಿಗಳನ್ನು ಮಾಡುತ್ತ ಶಿವರೂಪನೇ ಆಗಿ ಪರಮುಕ್ತಿಯನ್ನು ಪಡೆಯುವನು.

ಸಂಸಾರವನ್ನು ಮಾಡುತ್ತ ಶಿವಭಕ್ತಿಯನ್ನು ಮಾಡುವುದೂ ಸಹ ಒಂದು ಜೀವನದ ಕಲೆಯಾಗಿರುತ್ತದೆ. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು–''ಜಾಣನು ಲೌಕಿಕ ಪಾರಮಾರ್ಥವೆರಡನೂ ಮಾಣದೆ ಕೂಡಿನಡೆಸುತಿಹನಿಂತು'' ಎಂಬುದಾಗಿ ಹೇಳಿದ್ದಾರೆ. ಅದೆಷ್ಟೋ ಜನ ಋಷಿಗಳು, ಮಹರ್ಷಿಗಳು, ಶರಣರು ಸಂಸಾರಿಗಳಾಗಿದ್ದುಕೊಂಡೇನೇ ಪಾರಮಾರ್ಥವನ್ನೂ ಸಹ ಸಾಧಿಸಿಕೊಂಡದ್ದುಂಟು. ಸಂಸಾರದೊಂದಿಗೆ ಪಾರಮಾರ್ಥಿಕ ವನ್ನು ಸಾಧಿಸುತ್ತಿದ್ದರೆ ಸಂಸಾರದಲ್ಲಿ ಬರುವ ದುಃಖಾದಿಗಳನ್ನು ಸಹಿಸುವ ಸಾಮರ್ಥ್ಯವು ಸಹಜವಾಗಿ ಪ್ರಾಪ್ತವಾಗುತ್ತದೆ. ಇಂತಹ ಭಕ್ತರನ್ನು ಕಂಡೇ ಪರಮಾತ್ಮನು ''ಮದ್ಭಕ್ತಾಃ ಮಮಾಧಿಕಾಃ'' ಎಂಬುದಾಗಿ ಉದ್ಗರಿಸಿದ್ದಾನೆ.

ಭೂಲೋಕದ ಜನರೆಲ್ಲ ಒಮ್ಮೆ ಭೂಮಾತೆಯೇ ದೊಡ್ಡವಳು; ಅವಳು ಎಲ್ಲ ಪ್ರಾಣಿಗಳಿಗೂ ಅನ್ನವನ್ನಿತ್ತು ಸಲಹುವವಳು; ಅವಳೇ ಸಕಲ ಸಂಪತ್ತಿಗೂ ಆಗರಳು,

ಅಂತೆಯೇ ಆವಳಿಗೆ ವಸುಂಧರೆಯೆಂತಲೂ ಕರೆಯುವರು ಎಂಬುದಾಗಿ ಭೂದೇವಿಯ ಹಿರಿಮೆ ಗರಿಮೆಗಳನ್ನು ಕೊಂಡಾಡತೊಡಗಿದರು. ಜನರ ಈ ಕೊಂಡಾಡುವಿಕೆಯನ್ನು ಕೇಳಿದ ಭೂಮಾತೆಯು ಜನರನ್ನುದ್ದೇಶಿಸಿ– ''ನಾನೆಂಥ ದೊಡ್ಡವಳು ? ನನ್ನನ್ನು ತನ್ನ ಹೆಡೆಯ ಮೇಲೆ ಒಂದು ಮಣಿಯಂತೆ ಇರಿಸಿಕೊಂಡ ಆದಿಶೇಷನೇ ದೊಡ್ಡವನು.'' ಆಗ ಜನರೆಲ್ಲ ಆದಿಶೇಷನನ್ನು ಕುರಿತು ಸ್ತುತಿಸುತ್ತ ಅವನ ದೊಡ್ಡಸ್ತಿಕೆಯನ್ನು ಕೊಂಡಾಡ ತೊಡಗಿದರು. ಜನರ ಈ ಸ್ತುತಿವಾರ್ತೆಯನ್ನು ಆಲಿಸಿದ ಆದಿಶೇಷನು ಜನರನ್ನುದ್ದೇಶಿಸಿ ''ಅಯ್ಯಾ ಜೀವಿಗಳೇ ನಾನೆಂಥ ದೊಡ್ಡವನು ? ನನ್ನನ್ನು ತನ್ನ ಕಿರಿಬೆರಳಿನ ಉಂಗುರವನ್ನಾಗಿಸಿಕೊಂಡ ಪಾರ್ವತಿಯೇ ದೊಡ್ಡವಳು.'' ಶೇಷನ ಮುಖದಿಂದ ಪಾರ್ವತಿಯ ಮಹಿಮೆಯನ್ನು ಕೇಳಿದ ಜನರು ಪಾರ್ವತಿಯನ್ನು ಸ್ತುತಿಸಹತ್ತಿದರು. ಆಗ ಪಾರ್ವತಿಯು ಜನರೆದುರು ಪ್ರಕಟವಾಗಿ– ''ನಾನೆಂಥ ದೊಡ್ಡವಳು ? ನನ್ನನ್ನು ಅರ್ಧಾಂಗಿನಿಯನ್ನಾಗಿಸಿಕೊಂಡ ಸಾಕ್ಷಾತ್ ಶಿವನೇ ಎಲ್ಲರಿಗಿಂತ ದೊಡ್ಡವನು'' ಎಂದು ಹೇಳಿದಳು. ಪಾರ್ವತಿಯ ಈ ಮಾತನ್ನು ಕೇಳಿದ ಜನಗಳೆಲ್ಲ ಭಕ್ತಿಪರವಶರಾಗಿ ಶಿವನ ಮಹಿಮೆಯನ್ನು ಕೊಂಡಾಡುತ್ತ ಅವನನ್ನು ಸ್ತುತಿಸತೊಡಗಿದರು. ಭಕ್ತರ ಸ್ತುತಿಗೆ ಪ್ರಸನ್ನನಾದ ಶಿವನು ಅವರೆದುರು ಪ್ರಕಟನಾಗಿ ಹೇಳಿದ್ದೇನೆಂದರೆ– ಎಲೈ ನನ್ನ ಭಕ್ತರೇ ! ನಾನು ದೊಡ್ಡವನೆಂದು ನೀವೆಲ್ಲ ಸ್ತುತಿಸುತ್ತೀರೇನೋ ನಿಜ, ಆದರೆ ವಿಚಾರಿಸಿನೋಡಲಾಗಿ ನಾನೇನು ಅಷ್ಟು ದೊಡ್ಡವನಲ್ಲ, ನನಗಿಂತಲೂ ನನ್ನ ಭಕ್ತರಾದ ನೀವೇ ದೊಡ್ಡವರು ! ಏಕೆಂದರೆ ನೀವು ಮನಃಪೂರ್ವಕವಾಗಿ ನನ್ನೊಬ್ಬನನ್ನೇ ಪ್ರೀತಿಸುತ್ತಿಲ್ಲ, ನೀವು ನಿಮ್ಮ ಹೊಲ–ಮನೆ–ಹೆಂಡರು–ಮಕ್ಕಳು–ಉದ್ಯೋಗ–ವ್ಯವಸಾಯಾದಿಗಳನ್ನು ಪ್ರೀತಿಸುತ್ತ ಅವುಗಳ ಜೊತೆಗೇನೇ ನನ್ನನ್ನೂ ಸಹ ಪ್ರೀತಿಸುತ್ತಿದ್ದೀರಿ. ಅಂದಾಗ ನಿಮ್ಮ ಚಿಕ್ಕದಾದ ಆ ಮನಸ್ಸಿನಲ್ಲಿ ಸಂಸಾರದ ಎಲ್ಲ ವಸ್ತುಗಳಿಗೆ ಆಸ್ಪದವನ್ನು ಕೊಟ್ಟು, ಅದರಲ್ಲೆಲ್ಲೋ ಒಂದು ಮೂಲೆಯಲ್ಲಿ ನನಗೂ ನೀವು ಸ್ಥಾನವನ್ನು ಕೊಟ್ಟಿದ್ದೀರಿ. ಹೀಗಿರುವಾಗ ನಿಮ್ಮ ಮನಸ್ಸಿನ ಒಂದು ಮೂಲೆಯಲ್ಲಿರುವ ನಾನು ದೊಡ್ಡವನೋ ? ನನ್ನನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ನೀವು ದೊಡ್ಡವರೋ ? ನೀವೇ ವಿಚಾರಮಾಡಿರಿ. ಅಂತೆಯೇ ನಾನು ಎನಗಿಂತಲೂ ನನ್ನ ಭಕ್ತರೇ ದೊಡ್ಡವರೆಂಬುದಾಗಿ ನಿರ್ಣಯಿಸಿಕೊಂಡಿದ್ದೇನೆ. ಭಕ್ತರ ಈ ದೊಡ್ಡಸ್ತಿಕೆಯನ್ನೇ ಬಸವಣ್ಣನವರು –

ಸಮುದ್ರ ಘನವೆಂಬೆನೆ ? ಧರೆಯ ಮೇಲಡಗಿತ್ತು
ಧರೆಯ ಘನವೆಂಬೆನೆ ?
ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು
ನಾಗೇಂದ್ರ ಘನವೆಂಬೆನೆ ?
ಪಾರ್ವತಿಯ ಕಿರುಕುಣಿಕೆಯ ಮುದ್ರಿಕೆಯಾಯಿತ್ತು
ಅಂತಹ ಪಾರ್ವತಿ ಘನವೆಂಬೆನೆ ?
ಪರಮೇಶ್ವರನ ಅರ್ಧಾಂಗಿಯಾದಳು
ಅಂತಹ ಪರಮೇಶ್ವರನ ಘನವೆಂಬೆನೆ ?

ನಮ್ಮ ಕೂಡಲಸಂಗನ ಶರಣರ ಮನದ ಕೊನೆಯ
ಮೊನೆಯ ಮೇಲಡಗಿದನು !

ತಮ್ಮ ಈ ವಚನದಲ್ಲಿ ವಿವರಿಸಿದ್ದನ್ನು ಕಾಣಬಹುದು. ಇಲ್ಲಿ ದೊಡ್ಡದನ್ನು ಯಾರು ಪ್ರೀತಿಸುತ್ತಾರೆಯೋ ಅವರೇ ನಿಜವಾಗಿ ದೊಡ್ಡವರು. ವಾಸ್ತವಿಕವಾಗಿ ಎಲ್ಲಕ್ಕೂ ದೊಡ್ಡವನು ಪರಮಾತ್ಮನೇ ಆಗಿದ್ದರೂ ಆ ಪರಮಾತ್ಮನನ್ನು ಪ್ರೀತಿಸುವ ಭಕ್ತನು ಪರಮಾತ್ಮ ರೂಪನೇ ಆಗೋಣದರಿಂದ ಅವನನ್ನು ದೊಡ್ಡವನೆಂಬುದಾಗಿ ಹೇಳಲಾಗಿದೆ. ಅಂತೆಯೇ ಪೂಜ್ಯಪಾದರು ಶರೀರಾದಿಗಳನ್ನು ಕೇವಲ ಭೋಗ ಸಾಧನಗಳನ್ನಾಗಿ ಮಾಡಿಕೊಳ್ಳದೆ ಅವುಗಳನ್ನು ಯೋಗಸಾಧನಗಳನ್ನಾಗಿಸಿಕೊಂಡು ಅವುಗಳ ಮುಖಾಂತರವಾಗಿಯೇ ಶಿವಪೂಜೆ, ಶಿವಸ್ತೋತ್ರ ಮತ್ತು ಶಿವಧ್ಯಾನಾದಿಗಳನ್ನು ಮಾಡುತ್ತ ಶಿವಭಾವನೆಯಿಂದ ಕೂಡಿದ ಈ ಕರಣಾರ್ಪಿತಸ್ಥಲದ ಶಿವಯೋಗಿಯು ಕೊನೆಗೆ ಶಿವನೇ ಆಗುತ್ತಾನೆಂಬುದಾಗಿ ಉಪದೇಶಿಸಿದ್ದಾರೆ.

ಯಾರ ಹೃದಯದಲ್ಲಿ ಭಗವಂತನ ಮೂರ್ತಿಯು ಧ್ಯಾನಾದಿಗಳ ಮೂಲಕ ಸ್ಥಾಪಿತವಾಗುತ್ತದೆಯೋ ಅವರ ಸರ್ವ ವ್ಯವಹಾರವು ಭಗವದರ್ಪಿತವಾಗುವುದು. ಭಗವದರ್ಪಣವಾಗದೇ ಅಭಿಮಾನಾದಿಗಳು ನಷ್ಟವಾಗುವುದಿಲ್ಲ. ಪೂಜ್ಯಪಾದರು ಅಪ್ಪಣೆಕೊಡಿಸಿದಂತೆ ಸಕಲ ಕರಣಗಳನ್ನು ಶಿವಾರ್ಪಿತಗೊಳಿಸಬೇಕು. ಆಂದಾಗಲೇ ಅವು ಪ್ರಸಾದರೂಪಗಳಾಗುವವು. ಹೀಗೆ ದೇಹ, ಇಂದ್ರಿಯ ಹಾಗೂ ಅವುಗಳ ವಿಷಯಗಳೆಲ್ಲ ಪ್ರಸಾದರೂಪವಾಗಲು ಮನಸ್ಸು ಸದಾ ಪ್ರಸನ್ನವಾಗಿರುತ್ತದೆ. ಇಂತಹ ಈ ಅರ್ಪಣ ಸದ್ಭಾವನೆಯು ಅತ್ಯಂತ ಶ್ರೇಷ್ಠವಾದುದು. ಈ ವಿಧಿಯನ್ನು ನೀವೆಲ್ಲ ಅರಿತು ಆಚರಿಸಿ ಪರಮುಕ್ತಿಯನ್ನು ಪಡೆಯುವವರಾಗಿರೆಂಬುದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೬ ಜುಲೈ, ೧೯೯೪.
(ಸ್ಥಾನ 'ಶಿವಾನುಭವ ಮಂಗಲ ಭವನ', ಸೋಲಾಪೂರ)



ಆಶೀರ್ವಚನ-೧

# ಭಾವಾರ್ಪಿತಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಸುಕ್ಷೇತ್ರ ಸೊನ್ನಲಾಪುರದಲ್ಲಿ ಆಷಾಢಮಾಸದ ನಿಮಿತ್ತವಾಗಿ ಶಿವಯೋಗಧ್ಯಾನ ಶಿಬಿರ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ಶಿವಯೋಗಿ ಸಾರ್ವಭೌಮನಾದ ಶ್ರೀ ಸಿದ್ಧರಾಮೇಶ್ವರನ ನಿತ್ಯನಿವಾಸದಿಂದ ಭೂಕೈಲಾಸವೆನಿಸಿರುವ ಈ ಸುಕ್ಷೇತ್ರದಲ್ಲಿ ನೀವುಗಳೆಲ್ಲ ಶಿವಯೋಗ ಧ್ಯಾನ ಶಿಬಿರದಲ್ಲಿ ಪಾಲುಗೊಂಡು ಶಿವಯೋಗಾಭ್ಯಾಸವನ್ನು ಮಾಡುವುದರ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತ ಬಂದಿದ್ದೀರಿ. ನಿನ್ನೆಯ ದಿನ ಕರಣಾರ್ಪಿತಸ್ಥಲದ ಬಗ್ಗೆ ವಿಶೇಷವಾಗಿ ತಿಳಿದುಕೊಂಡವರಾಗಿದ್ದೀರಿ. ಇಂದು 'ಭಾವಾರ್ಪಿತಸ್ಥಲ'ದ ಬಗ್ಗೆ ವಿವೇಚಿಸೋಣ.

ನಮ್ಮ ಜೀವನದಲ್ಲಿ ಸಮರ್ಪಣೆಯು ಒಂದು ಮಹತ್ವವಾದ ಕಾರ್ಯವು. ಎಲ್ಲಿಯವರೆಗೆ ನಾವು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿತರಾಗುವುದಿಲ್ಲವೋ ಅಲ್ಲಿಯವರೆಗೆ ಅವನ ಕೃಪೆಯು ನಮಗೆ ದೊರೆಯಲಾರದು. ಆಧ್ಯಾತ್ಮಿಕ ಜೀವನದಲ್ಲಿ ಸಮರ್ಪಣೆಗೆ ಮಹತ್ತ್ವವಿರುವಂತೆ ಲೌಕಿಕ ಜೀವನದಲ್ಲಿಯೂ ಸಹ ಅದಕ್ಕೆ ಅತಿಯಾದ ಮಹತ್ತ್ವವಿದೆ. ಯಾರು ರಾಷ್ಟ್ರಕ್ಕಾಗಿ, ಸಮಾಜಕ್ಕಾಗಿ ಮತ್ತು ಧರ್ಮಕ್ಕಾಗಿ ತಮ್ಮ ತನು-ಮನ ಮತ್ತು ಧನಗಳನ್ನು ಸಮರ್ಪಿಸುತ್ತಾರೆಯೋ, ರಾಷ್ಟ್ರದ ಜನತೆ ಅವರನ್ನು ಅತ್ಯಂತ ಗೌರವದಿಂದ ಕಾಣುತ್ತದೆ. ಸಮರ್ಪಣಾತ್ಮಕವಾದ ಅರ್ಥಾತ್ ತ್ಯಾಗಾತ್ಮಕವಾದ ಗುಣದಿಂದಲೇ ಪಶು-ಪಾಷಾಣಾದಿಗಳೂ ಸಹ ಭಗವಂತನಂತೆ ಪೂಜೆಗೊಳ್ಳುತ್ತಲಿವೆ. ಹಿಮಾಲಯದ ಗಂಗೋತ್ರಿಯಲ್ಲಿ ಉದಿಸಿದ ಗಂಗೆಯು ಸಾಗರವನ್ನು ಸೇರುವವರೆಗೆ ತನ್ನ ಪವಿತ್ರವಾದ ಜಲದಿಂದ ಅನೇಕ ಕಲ್ಯಾಣಕಾರಿ ಕಾರ್ಯಗಳನ್ನು ಮಾಡುತ್ತಿರುತ್ತದೆ. ಕೆಲವರು ಪಾಪವಿಮೋಚನೆಗಾಗಿ ಇದರಲ್ಲಿ ಸ್ನಾನಮಾಡಿದರೆ ಮತ್ತೆ ಕೆಲವರು ತಮ್ಮ ತೃಷೆಯನ್ನು ತೃಪ್ತಿಪಡಿಸಿಕೊಳ್ಳುತ್ತಾರೆ. ಇನ್ನು ಕೆಲವರು ತಮ್ಮ ಹೊಲದ ಪೈರಿಗಾಗಿ ಅದನ್ನು ಬಳಸಿಕೊಳ್ಳುತ್ತಾರೆ. ಈ ರೀತಿಯಾಗಿ ತನ್ನ ಹತ್ತಿರ ಬಂದವರಿಗೆಲ್ಲ ತನ್ನ ಸ್ವಲ್ಪ ಅಂಶವನ್ನು ಸಮರ್ಪಿಸುತ್ತ ಸಮರ್ಪಿಸುತ್ತ ಕೊನೆಗೆ ಉಳಿದಿರುವ ತನ್ನ ಅಸ್ತಿತ್ವವನ್ನೆಲ್ಲ ಸಾಗರಕ್ಕೆ ಸಮರ್ಪಿಸಿ ಬಿಡುತ್ತದೆ. ಗಂಗೆಯ ಈ ಅಖಂಡವಾದ ಪ್ರವಾಹವು ಮಾನವ ಕುಲಕ್ಕೆ ಅಂದಿನಿಂದ ಇಂದಿನವರೆಗೆ ಸಮರ್ಪಣಾ ಸಂದೇಶವನ್ನು ಕೊಡುತ್ತಿರುವುದೋ ಏನೋ ಎನ್ನುವಂತೆ ಭಾಸವಾಗುತ್ತದೆ. ಜನ್ಮದಾರಂಭದಿಂದ ಮೃತ್ಯುವಿನ ಪರ್ಯಂತ ತನ್ನ ಜೀವನವು ಯಾರಿಗಾದರೂ ಉಪಯೋಗವಾಗುವಂತೆ ನಡೆದುಕೊಳ್ಳುತ್ತಿರಬೇಕು.

ಪರಮಾತ್ಮನಿಂದ ವಿರಚಿಸಲ್ಪಟ್ಟ ಪಂಚಮಹಾಭೂತಗಳು ಸದಾ ಇಂತಹ ಸಮರ್ಪಣೆಯನ್ನು ಮಾಡುತ್ತಿರೋಣದರಿಂದಲೇ ನಾವುಗಳೆಲ್ಲ ಅವುಗಳನ್ನು ಪೂಜಿಸುತ್ತ ಬಂದಿದ್ದೇವೆ.

ಪ್ರಕೃತಿಯ ಈ ಮೌನೋಪದೇಶವು ಸರ್ವರಿಗೂ ತಿಳಿಯುವದಿಲ್ಲವೆಂತಲೇ ಮನುಕುಲದ ಉಪದೇಶಕ್ಕಾಗಿ ವೇದ–ಆಗಮ ಮುಂತಾದ ಶಾಸ್ತ್ರಗಳು ಆವಿರ್ಭವಿಸಿದವು. ವಿಶ್ವದ ಪ್ರತಿಯೊಂದು ಧರ್ಮಗ್ರಂಥದಲ್ಲಿ ಸಮರ್ಪಣಾ ಸದ್ಭಾವವು ಪ್ರತಿಪಾದಿಸಲ್ಪಟ್ಟಿರುತ್ತದೆ. ಭಕ್ತಿ ಶಾಸ್ತ್ರದಲ್ಲಿ ನವವಿಧ ಭಕ್ತಿಗಳನ್ನು ಪ್ರತಿಪಾದಿಸುತ್ತ ಕೊನೆಯದಾಗಿ ಆತ್ಮನಿವೇದನೆಯನ್ನು ನಿರೂಪಿಸಲಾಗಿದೆ. ನಾವು ನಮ್ಮ ಇಷ್ಟದೇವರಿಗೆ ಆತ್ಮನಿವೇದನೆಯನ್ನು ಅರ್ಥಾತ್ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳದೇ ಹೋದರೆ ನಮ್ಮ ಮೊದಲಿನ ಶ್ರವಣ–ಕೀರ್ತನಾದಿ ಎಂಟು ವಿಧ ಭಕ್ತಿಗಳು ನಿಷ್ಪ್ರಯೋಜಕಗಳಾಗುವವು. ಆತ್ಮನಿವೇದನೆಯಿಂದ ಭಕ್ತನು ಭಗವದ್ರೂಪನೇ ಆಗುತ್ತಾನೆ. ಅಂತೆಯೇ ಈ ಭಕ್ತಿಗೆ ಇಷ್ಟೊಂದು ಮಹತ್ತ್ವವನ್ನು ಕೊಡಲಾಗಿದೆ. ನಾವು ನಮ್ಮನ್ನು ಯಾರಿಗೆ ಸಮರ್ಪಿಸಿಕೊಳ್ಳುತ್ತೇವೆಯೋ ಅವರೇ ನಾವಾಗಿ ಬಿಡುತ್ತೇವೆ. ಕಾಮಕ್ಕಾಗಿ ನಮ್ಮನ್ನು ಅರ್ಪಿಸಿಕೊಂಡಾಗ ನಾವು 'ಕಾಮೀ' ಎಂತಲೂ, ಕ್ರೋಧಕ್ಕಾಗಿ ಸಮರ್ಪಿಸಿಕೊಂಡಾಗ 'ಕ್ರೋಧೀ' ಎಂತಲೂ, ಲೋಭಕ್ಕಾಗಿ ಸಮರ್ಪಿಸಿಕೊಂಡಾಗ 'ಲೋಭಿ'ಎಂತಲೂ ಕರೆಸಿಕೊಳ್ಳುತ್ತೇವೆ. ಸಮರ್ಪಣೆಯು ನಮ್ಮಿಂದ ಆಗುತ್ತಲೇ ಇರುತ್ತದೆ. ಭಗವಂತನಿಗೆ ನಾವು ಸಮರ್ಪಿತವಾಗದಿದ್ದರೆ ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಗೆ ಸಮರ್ಪಿತವಾಗುವುದಂತೂ ಸುನಿಶ್ಚಿತ. ಅನೇಕ ಜನ್ಮಗಳಲ್ಲಿ ಅವುಗಳಿಗೇನೇ ಸಮರ್ಪಿತವಾಗುತ್ತ ಬಂದಿದ್ದೇವೆ. ಆದರೆ ಸರ್ವಜನ್ಮಗಳಲ್ಲಿ ಶ್ರೇಷ್ಠವಾದ ಈ ಮಾನವ ಜನ್ಮದಲ್ಲಿ ಬಂದ ಬಳಿಕ ಭಗವಂತನಿಗೆ ತನ್ನನ್ನು ಸಮರ್ಪಿಸಿಕೊಳ್ಳುವುದು ಉತ್ಕೃಷ್ಟವಾದ ಸಮರ್ಪಣೆಯು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕಾಯಾರ್ಪಿತ, ಕರಣಾರ್ಪಿತ ಸ್ಥಲಗಳಲ್ಲಿ ಅದನ್ನೇ ಪ್ರತಿಪಾದಿಸುತ್ತ ಸದ್ಯಃ ಅವೆರಡಕ್ಕಿಂತಲೂ ಶ್ರೇಷ್ಠವಾದ ಭಾವಾರ್ಪಿತ ಸ್ಥಲವನ್ನು ಕುರಿತು ಇನ್ನು ಮುಂದೆ ಉಪದೇಶಿಸುವವರಿದ್ದಾರೆ. ತನ್ನ ಭಾವನೆಯನ್ನು ಭಗವಂತನಿಗೆ ಅರ್ಪಿಸುವುದೇ ಭಾವಾರ್ಪಿತವೆಂದು ಕರೆಯಿಸಿಕೊಳ್ಳುವುದು. ಅದನ್ನೇ ಪೂಜ್ಯಪಾದರು–

ಶಿವೇ ನಿಶ್ಚಲಭಾವೇನ ಭಾವಾನಾಂ ಯತ್ಸಮರ್ಪಣಮ್ ।
ಭಾವಾರ್ಪಿತಮಿದಂ ಪ್ರೋಕ್ತಂ ಶಿವಸದ್ಭಾವ ವೇದಿಭಿಃ ॥

(ಸಿ. ಶಿ. ೧೭–೫೦)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನಲ್ಲಿ ದೃಢವಾದ ನಂಬಿಗೆಯನ್ನಿಟ್ಟುಕೊಂಡು ತನ್ನ ಮನಸ್ಸಿನಲ್ಲಿ ಬರುವ ಎಲ್ಲ ಭಾವನೆಗಳನ್ನು ಆತನಿಗೆ ಸಮರ್ಪಿಸುವುದಕ್ಕೆ ಭಾವಾರ್ಪಿತವೆಂಬುದಾಗಿ ಶಿವಸದ್ಭಾವವನ್ನು ಬಲ್ಲವರು ಹೇಳುವರು.

ನಿಶ್ಚಲವಾದ ಮನಸ್ಸಿನಿಂದ ತನ್ನ ಭಾವನೆಗಳನ್ನೆಲ್ಲ ಶಿವನಿಗೆ ಸಮರ್ಪಿಸುವ ವಿಧಿಯನ್ನು ಪ್ರತಿಪಾದಿಸುವ ಸ್ಥಲವೇ ಭಾವಾರ್ಪಿತ ಸ್ಥಲವು. ನಮ್ಮ ಪ್ರತಿಯೊಂದು ವ್ಯವಹಾರದಲ್ಲಿ ಭಾವನೆಯೇ ಪ್ರಧಾನವಾದುದು. ನಾವು ಏನನ್ನು ಮಾಡುತ್ತಿದ್ದೇವೆ ಅಥವಾ ಏನನ್ನು ನೋಡುತ್ತಿದ್ದೇವೆ ಎನ್ನುವದಕ್ಕಿಂತಲೂ ಈ ನೋಡುವ ಮಾಡುವ ಕ್ರಿಯೆಗಳನ್ನು

ಯಾವ ಭಾವನೆಯಿಂದ ಮಾಡುತ್ತೇವೆಂಬುದು ಮುಖ್ಯವಾದುದು. ಸದ್ಯಃ ನೀವುಗಳೆಲ್ಲ ಈ ಕಾರ್ಯಕ್ರಮದಲ್ಲಿ ಪಾಲುಗೊಂಡು ಶ್ರವಣಾದಿಗಳನ್ನು ಮಾಡುತ್ತಿದ್ದೀರಿ. ಕೆಲವರು ಈ ಕ್ರಿಯೆಯಲ್ಲಿ ಭಾವಪೂರ್ಣವಾಗಿ ಭಾಗವಹಿಸಿರಬಹುದು. ಇನ್ನು ಕೆಲವರು ಭಾವಹೀನ ರಾಗಿಯೂ ಪಾಲ್ಗೊಂಡಿರಬಹುದು. ಯಾವ ಕ್ರಿಯೆಯಲ್ಲಿ ನಿಮ್ಮ ಭಾವನೆಯು ಇರುವುದಿಲ್ಲವೋ ಆ ಕ್ರಿಯೆಯು ನಿಷ್ಫಲವಾಗುವುದು. ಭಾವನೆ ಬೇರೆಡೆ ಇಟ್ಟು ನಾವು ಏನನ್ನೇ ನೋಡುತ್ತಿದ್ದರೂ ಅದು ನಮಗೆ ಕಾಣಲಾರದು. ಇದೇ ಪ್ರಕಾರವಾಗಿ ಭಾವ ಹೀನನಾಗಿ ತಾನು ಏನನ್ನೇ ಕೇಳಿದರೂ ಆ ಶಬ್ದಗಳ ಅರ್ಥಗಳು ಅವನಿಗಾಗುವುದಿಲ್ಲ. ನಿಮ್ಮೆಲ್ಲರ ಶರೀರೇಂದ್ರಿಯಾದಿಗಳು ಇಲ್ಲಿಯೇ ಇದ್ದರೂ ಭಾವವೊಂದಿಲ್ಲದಿದ್ದರೆ ಇಲ್ಲಿ ನಡೆಯುವ ಕಾರ್ಯಕ್ರಮದ ಲಾಭವು ಒಂದಿಷ್ಟೂ ಆಗುವುದಿಲ್ಲ. ಆದ್ದರಿಂದಲೇ ನಾವು ಮಾಡುವ ಪ್ರತಿಯೊಂದು ಕ್ರಿಯೆಯಲ್ಲಿ ಮೊದಲು ಭಾವವನ್ನು ನಿಶ್ಚಲಗೊಳಿಸಬೇಕು.

ನಮ್ಮ ಮನಸ್ಸಿನ ಭಾವನೆಯು ಒಂದು ಕೋಮಲವಾದ ಬಳ್ಳಿ ಇದ್ದಂತೆ. ಆ ಬಳ್ಳಿಯು ಮೇಲೇರಬೇಕಾದರೆ ಅದಕ್ಕೊಂದು ಆಧಾರವು ಅವಶ್ಯವಾಗಿ ಬೇಕಾಗುವುದು. ಸಾಮಾನ್ಯವಾದ ಮನುಷ್ಯನು ತನ್ನ ಭಾವನೆಯೆಂಬ ಬಳ್ಳಿಗೆ ಒಂದಿಲ್ಲೊಂದು ವಿಷಯದ ಆಲಂಬನೆಯನ್ನು ಕೊಟ್ಟಿರುತ್ತಾನೆ. ಅಂತೆಯೇ ನಮ್ಮೆಲ್ಲರ ಮನಸ್ಸಿನಲ್ಲಿ ಸದಾ ವಿಷಯಗಳ ಚಿಂತನೆಯೇ ಆಗುತ್ತಿರುತ್ತದೆ. ಯಾವ ವಿಷಯದಲ್ಲಿ ಮನೋಭಾವನೆಯು ದೃಢ ವಾಗಿರುವುದೋ ಅದನ್ನು ಅದು ಮೇಲಿಂದ ಮೇಲೆ ಸ್ಮರಿಸಿಕೊಳ್ಳುತ್ತಿರುತ್ತದೆ. ಸಂಸಾರದ ಸ್ಮರಣೆಯನ್ನು ಮಾಡಿ ಮಾಡಿ ಅನೇಕ ಜನ್ಮಗಳನ್ನು ಹಾಳು ಮಾಡಿಕೊಂಡ ಜೀವಾತ್ಮನಿಗೆ ಜೀವನದ ಕಲ್ಯಾಣ ಮಾರ್ಗವನ್ನು ತೋರಿಸುವುದಕ್ಕಾಗಿ ಪೂಜ್ಯಪಾದರಿಲ್ಲಿ ಸಂಸಾರದ ಮೇಲಿನ ಭಾವನೆಯನ್ನು ಕಿತ್ತು ಶಿವನ ಮೇಲೆ ದೃಢಪಡಿಸಬೇಕೆಂಬುದಾಗಿ ಉಪದೇಶಿಸಿ ದ್ದಾರೆ. ಯೋಗಜ ಆಗಮದಲ್ಲಿ–

ತಸ್ಮಾತ್ ಪ್ರಪಂಚ ಸಂಬಂಧ ಭಾವಂ ಹಿತ್ವಾ ಶಿವಾತ್ಮಕಮ್ ।
ಭಾವಮಾಶ್ರಿತ್ಯ ಯತ್ನೇನ ಕುರ್ಯಾದ್ ವ್ಯಾಪೃತಿಮೀಶ್ವರೇ ॥

ಹೀಗೆ ಅದೇ ವಿಷಯವೇ ಪ್ರತಿಪಾದಿಸಲ್ಪಟ್ಟಿದೆ. ಪ್ರಪಂಚಕ್ಕೆ ಸಂಬಂಧವಾಗಿರುವ ಭಾವನೆಯನ್ನು ಕಡಿಮೆಮಾಡಿಕೊಂಡು ಅದನ್ನು ಪ್ರಯತ್ನಪೂರ್ವಕವಾಗಿ ಈಶ್ವರನಿಗೆ ಸಮರ್ಪಿಸಿ ಶಿವಾತ್ಮಕವನ್ನಾಗಿ ಮಾಡಬೇಕು. ಇದುವೇ ಭಾವಾರ್ಪಿತವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಭಾವಾರ್ಪಿತ ಸ್ಥಲದಲ್ಲಿ ಭಾವವೆಂದರೆ ಏನು ಎಂಬುದನ್ನು ಸ್ಪಷ್ಟಪಡಿಸುತ್ತ ಪುನಃ–

ಚಿತ್ತಸ್ಥಸಕಲಾರ್ಥಾನಾಂ ಮನನಂ ಯತ್ತು ಮಾನಸೇ ।
ತದರ್ಪಣಂ ಶಿವೇ ಸಾಕ್ಷಾನ್ಮಾನಸೋ ಭಾವ ಉಚ್ಯತೇ ॥

(ಸಿ. ಶಿ. ೧೭–೫೧)

ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, 'ವಿಕಾರೋ ಮಾನಸೋ ಭಾವಃ' ಎಂಬ ಅಮರಸಿಂಹನ ಉಕ್ತಿಗನುಸಾರವಾಗಿ ಮನಸ್ಸಿನ ಒಂದು ವೃತ್ತಿಗೇನೇ

ಭಾವವೆಂದು ಕರೆಯುತ್ತಾರೆ. ಹೀಗೆ ತನ್ನ ಮನೋವೃತ್ತಿಯಲ್ಲಿ ಚಿಂತಿಸಲ್ಪಡುತ್ತಿರುವ ಪದಾರ್ಥಗಳನ್ನೆಲ್ಲ ಶಿವಲಿಂಗಕ್ಕೆ ಸಮರ್ಪಿಸುವುದೇ ಭಾವಾರ್ಪಿತವು.

ನಮ್ಮ ಮನಸ್ಸಿನಲ್ಲಿ ಪದಾರ್ಥಗಳ ಅನುಭವರೂಪವಾದ ಚಿಂತನೆಯು ಯಾವಾಗಲೂ ನಡೆದಿರುತ್ತದೆ. ಇದೊಂದು ಮನಸ್ಸಿನ ವಿಕಾರವೇ. ಈ ಮನೋ ವಿಕಾರಕ್ಕೇನೇ ಪೂಜ್ಯಪಾದರು ಭಾವವೆಂದು ಕರೆದಿದ್ದಾರೆ. ಸಾಮಾನ್ಯವಾಗಿ ಮನಸ್ಸಿನಲ್ಲಿ ಸಾಂಸಾರಿಕ ಪದಾರ್ಥಗಳ ಚಿಂತನೆಯೇ ಆಗುತ್ತಿರುತ್ತದೆ. ಮನಸ್ಸಿಗೆ ಹೊಸದಾಗಿ ಚಿಂತನ ಕ್ರಿಯೆಯನ್ನು ಕಲಿಸುವ ಆವಶ್ಯಕತೆಯಿರುವುದಿಲ್ಲ, ಆದರೆ ವಿಷಯ ಪರಿವರ್ತನೆಯನ್ನು ಮಾತ್ರ ಮಾಡಬೇಕಾಗುವುದು. ಸದಾ ಸಾಂಸಾರಿಕ ಚಿಂತನೆಯಲ್ಲಿರುವ ಮನಸ್ಸಿಗೆ ಪರಮಾತ್ಮಚಿಂತನೆಯ ಅಭ್ಯಾಸವನ್ನು ಮಾಡಿಸಬೇಕಾಗುವುದು. ಅಂದರೆ ಸಂಸಾರದ ಸಂಬಂಧವನ್ನು ಬಿಡಿಸಿ ಅದನ್ನು ಪರಮಾತ್ಮನಿಗೆ ಸಂಬಂಧಗೊಳಿಸಬೇಕು. ಮನಸ್ಸಿಗಿರುವ ಸಂಸಾರದ ಸಂಬಂಧವು ಇಂದು ನಿನ್ನೆಯದಲ್ಲ. ಅದೆಷ್ಟೋ ಯುಗ ಯುಗಗಳು ಉರುಳಿ ಹೋಗಿವೆ. ಸಂಸಾರದ ಸಂಬಂಧದಲ್ಲಿಯೇ ಜೀವಿಯು ಕೋಟಿ ಕೋಟಿ ಜನ್ಮಗಳಲ್ಲಿ ತಿರುಗಾಡಿದ್ದಾನೆ. ಅಂತೆಯೇ ಅದರ ಸಂಸ್ಕಾರಗಳು ಚಿತ್ತದಲ್ಲಿ ಅತ್ಯಂತ ಪ್ರಬಲ ವಾಗಿರುತ್ತವೆ. ಚಿತ್ತದಲ್ಲಿರುವ ಅದರ ಪ್ರಬಲವಾಸನೆಯಿಂದಲೇ ಚಿತ್ತವು ಪುನಃ ಸಂಸಾರ ವನ್ನೇ ಚಿಂತಿಸುತ್ತಿರುತ್ತದೆ.

ಬಹುಕಾಲದಿಂದ ಬಂದ ಅಭ್ಯಾಸವನ್ನು ಮನಸ್ಸು ಅಷ್ಟು ಸುಲಭವಾಗಿ ಬಿಡುವುದಿಲ್ಲ, ಅದಕ್ಕೆ ಸತತವಾದ ಪ್ರಯತ್ನವು ಬೇಕು. ಓರ್ವ ವ್ಯಕ್ತಿಯು ಸುಮಾರು ಇಪ್ಪತ್ತು ಮೂವತ್ತು ವರ್ಷಗಳವರೆಗೆ ಸರಕಾರೀ ಬಸ್ಸಿನಲ್ಲಿ ಕಂಡಕ್ಟರನಾಗಿ ಕೆಲಸಮಾಡಿ ಒಂದು ದಿನ ತನ್ನ ಹುದ್ದೆಯಿಂದ ನಿವೃತ್ತನಾದನು. ನಿವೃತ್ತಿ ಹೊಂದಿ ಒಂದು ತಿಂಗಳಾಗಿರಬಹುದು ಒಮ್ಮೆ ಆತನು ಬ್ಯಾಂಕಿನಲ್ಲಿಯ ಹಣವನ್ನು ತರಲು ಬ್ಯಾಂಕಿಗೆ ಹೋದನು. ಅಲ್ಲಿ ಚೆಕ್ಕಿನ ಮೇಲೆ ಹಣವನ್ನು ನಮೂದಿಸಿ ತನ್ನ ಹಸ್ತಾಕ್ಷರವನ್ನು ಮಾಡಿದ್ದ ಚೆಕ್ಕನ್ನು ಅದಕ್ಕೆ ಸಂಬಂಧಪಟ್ಟ ಅಧಿಕಾರಿಗೆ ಕೊಟ್ಟು ಟೋಕನ್ ತೆಗೆದುಕೊಂಡನು. ಸ್ವಲ್ಪ ಸಮಯದನಂತರ ಇವನ ಚೆಕ್ಕು ಎಲ್ಲಕಡೆ ಪಾಸಾಗಿ ಕ್ಯಾಶಿಯರನ ಕಡೆಗೆ ಹೋದಾಗ ಆ ಕ್ಯಾಶಿಯರನು ಇವನು ಕೊಟ್ಟ ಟೋಕನ್ ತೆಗೆದುಕೊಂಡು ಚೆಕ್ಕಿನ ಹಿಂಬದಿಯಲ್ಲಿ ಇನ್ನೊಂದು ಹಸ್ತಾಕ್ಷರ ಅರ್ಥಾತ್ ಸಹಿ ಮಾಡಲು ಹೇಳಿದನು. ಆಗ ಆ ನಿವೃತ್ತನಾದ ಕಂಡಕ್ಟರನು ಪೆನ್ನನ್ನು ತೆಗೆದುಕೊಂಡು ಸಹಿ ಮಾಡಲು ತಯಾರಾಗಿ ಸಹಿಮಾಡದೇ ಹಾಗೇ ನಿಂತುಕೊಂಡನು. ನಾಲ್ಕಾರು ನಿಮಿಷಗಳು ಕಳೆದರೂ ಅವನು ಸಹಿಮಾಡದೇ ಇರುವುದನ್ನು ಕಂಡು ಕ್ಯಾಶಿಯರನು ಬೇಗನೇ ಸಹಿಮಾಡಿಕೊಡೆಂದು ಕೇಳಿದನು. ಆಗ ಆ ವ್ಯಕ್ತಿಯು ವಿನಮ್ರಭಾವದಿಂದ ಕ್ಯಾಶಿಯರನನ್ನು ಹೊರಗೆ ಬರುವಂತೆ ವಿನಂತಿಸಿಕೊಂಡನು. ತನ್ನ ಕೌಂಟರದಿಂದ ಹೊರಬಂದ ಕ್ಯಾಶಿಯರನು ''ಏನು ಸಮಾಚಾರ ? ನಿಮಗೇನು ತೊಂದರೆಯಾಗಿದೆ ? ಏಕೆ ಸಹಿಮಾಡುತ್ತಿಲ್ಲ ?'' ಎಂಬುದಾಗಿ ಕೇಳಲು ಈ ವ್ಯಕ್ತಿಯು ಅವನನ್ನು ಕುರಿತು ಹೇಳಿದ್ದೇನೆಂದರೆ– ''ದಯಮಾಡಿ ನನ್ನ ದೇಹವನ್ನು ಸ್ವಲ್ಪ ಅಲ್ಲಾಡಿಸಿ'' ಅವನ ವಿನಂತಿಯ ಮೇರೆಗೆ ಕ್ಯಾಶಿಯರನು ಅವನ ದೇಹವನ್ನು ಅಲ್ಲಾಡಿಸುತ್ತಿರುವಾಗಲೇ ಆ ವ್ಯಕ್ತಿಯು ಚೆಕ್ಕಿನ ಮೇಲೆ

ಸಹಿಯನ್ನು ಮಾಡಿಬಿಟ್ಟನು. ''ಇದೇನಾಶ್ಚರ್ಯ ? ನಿಮ್ಮನ್ನು ಅಲುಗಾಡಿಸುವವರೆಗೆ ನೀವೇಕೆ ಸಹಿ ಮಾಡಲಿಲ್ಲ ?'' ಎಂದು ಕೇಳಲು ಆ ವ್ಯಕ್ತಿಯು– ''ಅಯ್ಯಾ ! ನಾನು ಸುಮಾರು ಮೂವತ್ತು ನಾಲ್ವತ್ತು ವರ್ಷಗಳವರೆಗೆ ಬಸ್ಸಿನಲ್ಲಿ ಕಂಡಕ್ಟರ ನೌಕರಿ ಮಾಡಿ ಇದೀಗ ತಾನೇ ನಿವೃತ್ತಿಯನ್ನು ಹೊಂದಿದ್ದೇನೆ. ನನಗೆ ಬಸ್ಸಿನಲ್ಲಿ ಅಲುಗಾಡುತ್ತ ಬರೆದ ಅಭ್ಯಾಸವಾಗಿದೆ. ಈಗಲೂ ಅಲುಗಾಡದೆ ಬರೆಯಲಾಗುತ್ತಿಲ್ಲ. ನೀನು ನನಗೊಂದು ಉಪಕಾರಮಾಡಿದೆ'' ಎಂದು ಆತನಿಗೆ ಧನ್ಯವಾದ ಹೇಳಿದನು.

ಈ ಇಪ್ಪತ್ತು–ಮೂವತ್ತು ವರ್ಷಗಳ ಅಭ್ಯಾಸವನ್ನೇ ಬೇಗನೇ ಬಿಡಲಿಕ್ಕಾಗುವುದಿಲ್ಲವೆಂದಾಗ ಅನಂತಾನಂತ ಜನ್ಮಗಳಿಂದ ಮಾಡುತ್ತ ಬಂದಿರುವ ಸಂಸಾರದ ಚಿಂತನೆಯನ್ನು ಚಿತ್ತವು ಅಷ್ಟು ಬೇಗನೇ ಮರೆಯುವುದಿಲ್ಲ. ಅಂತೆಯೇ ಅದರ ಸಂಸ್ಕಾರವನ್ನು ಬದಲಿಸಬೇಕಾದರೆ ಮೊದಲು ಚಿತ್ತವನ್ನು ಶಿವನಲ್ಲಿ ಸ್ಥಿರಗೊಳಿಸಿ ಆ ಚಿತ್ತದಲ್ಲುಂಟಾಗುವ ಸಕಲ ಚಿಂತನೆಗಳನ್ನು ಶಿವಾರ್ಪಿತಗೊಳಿಸಿದಾಗ ಅದು ನಿಜವಾಗಿಯೂ ಭಾವಾರ್ಪಿತವೆಂದು ಕರೆಯಿಸಿಕೊಳ್ಳುವುದು. ಇಲ್ಲಿಯವರೆಗೆ ವಿಷಯಕ್ಕೆ ಸಮರ್ಪಿಸಿದ ನಮ್ಮ ಮನಸ್ಸು ವಿಷಯೋಪಭೋಗದಿಂದ ಎಂಜಲಾಗಿರುವಾಗ ಅದನ್ನು ಹೇಗೆ ಶಿವಾರ್ಪಿತಗೊಳಿಸಬೇಕು ? ಎಂಬುದಾಗಿ ಚಿಂತಿಸಬೇಕಾಗಿಲ್ಲ. ಇರುವುದೊಂದು ಮನ; ಅದು ಎಂಜಲಾಗಿದ್ದರೂ ಸರಿಯೇ ಅದನ್ನು ಭಾವಪೂರ್ಣವಾಗಿ ಸಮರ್ಪಿಸಿದರೆ ಭಗವಂತನು ಅವಶ್ಯವಾಗಿ ಸ್ವೀಕರಿಸುತ್ತಾನೆ. ಶ್ರೀರಾಮಚಂದ್ರನು ವನವಾಸದಲ್ಲಿದ್ದಾಗ ಶಬರಿಯ ಎಂಜಲು ಫಲಗಳನ್ನು ಭಕ್ಷಿಸಿದ ವಿಷಯವು ರಾಮಾಯಣದಲ್ಲಿ ಸುಪ್ರಸಿದ್ಧವಾಗಿದೆ. ಪರಮ ಶಿವಭಕ್ತನಾದ ಬೇಡರ ಕಣ್ಣಪ್ಪನು ತನ್ನ ಬಾಯೊಳಗೆ ತುಂಬಿಕೊಂಡು ತಂದಿರುವ ಎಂಜಲು ಜಲದಿಂದ ಶಿವಲಿಂಗಕ್ಕೆ ಅಭಿಷೇಕಾದಿಗಳನ್ನು ಮಾಡಿ ಶಿವನ ಕೃಪೆಯಿಂದ ಶಿವಸಾಯುಜ್ಯವನ್ನು ಪಡೆದ ಕಥೆಯೂ ಸಹ ಸುಪ್ರಸಿದ್ಧವಾಗಿದೆ. ಅಂದಾಗ ಭಗವಂತನು ನಾವು ಅರ್ಪಿಸುವ ಪದಾರ್ಥದ ಶುದ್ಧಿ–ಅಶುದ್ಧಿಗಳಿಗಿಂತಲೂ ಅರ್ಪಣಭಾವದತ್ತ ಆತನು ಲಕ್ಷಗೊಡುತ್ತಾನೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಚಿತ್ತ ಹಾಗೂ ಚಿತ್ತದಲ್ಲಿ ಚಿಂತಿಸಲ್ಪಡುತ್ತಿರುವ ಸಮಸ್ತ ವಿಷಯಗಳನ್ನು ಪರಮಾತ್ಮನಿಗೆ ಸಮರ್ಪಿಸಿ ಭಾವವನ್ನು ಪರಿಶುದ್ಧ ಮಾಡಿಕೊಳ್ಳಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶುದ್ಧವಾದ ಭಾವವೇ ಮುಕ್ತಿಗೆ ಸಾಧನವಾಗುವುದು ಮತ್ತು ಭಗವದರ್ಪಣದಿಂದಲೇ ಭಾವವೂ ಸಹ ಪರಿಶುದ್ಧವಾಗುವುದೆಂಬ ವಿಷಯವನ್ನು ತಿಳಿಸಲೋಸುಗ ಪುನಃ –

ಭಾವ ಏವ ಹಿ ಜಂತೂನಾಂ ಕಾರಣಂ ಬಂಧಮೋಕ್ಷಯೋಃ ।
ಭಾವಶುದ್ಧೌ ಭವೇನ್ಮುಕ್ತಿರ್ವಿಪರೀತೇ ತು ಸಂಸ್ಕೃತಿಃ॥

ಭಾವಸ್ಯ ಶುದ್ಧಿರಾಖ್ಯಾತಾ ಶಿವೋಽಹಮಿತಿ ಯೋಜನಾ ।
ವಿಪರೀತಸಮಾಯೋಗೇ ಕುತೋ ದುಃಖನಿವರ್ತನಮ್ ॥

(ಸಿ. ಶಿ. ೧೭ ; ೩೨–೩೩)

ಈ ವಿಧವಾಗಿ ಪ್ರಸ್ತಾಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಜೀವಿಗಳ ಭಾವನೆಗಳೇ ಬಂಧ–ಮೋಕ್ಷಕ್ಕೆ ಕಾರಣಗಳಾಗಿರುತ್ತವೆ. ಭಾವವು ಪರಿಶುದ್ಧವಾಗಿದ್ದರೆ ಮುಕ್ತಿಯು ಮತ್ತು ಅದು ವಿಪರೀತವಾಗಿದ್ದರೆ ಅರ್ಥಾತ್ ಅಶುದ್ಧವಾಗಿದ್ದರೆ ಸಂಸಾರವೆಂಬುದಾಗಿ ತಿಳಿದುಕೊಳ್ಳಬೇಕು. ಭಾವನೆಯು 'ಶಿವೋಽಹಂ' ಎಂಬ ಸ್ವರೂಪವನ್ನು ತಾಳಿದಾಗ ಪರಿಶುದ್ಧವೆನಿಸಿಕೊಳ್ಳುವುದು. ಇದಕ್ಕೆ ವಿಪರೀತವಾಗಿದ್ದರೆ ಅದು ಅಶುದ್ಧಭಾವನೆಯೆಂದು ಕರೆಯಿಸಿಕೊಳ್ಳುವುದು. ಅಂತಹ ಅಶುದ್ಧ ಭಾವನೆಯಿಂದ ದುಃಖದ ನಿವೃತ್ತಿಯಾಗುವುದಿಲ್ಲ.

ಈ ಪ್ರಪಂಚದಲ್ಲಿಯ ಯಾವ ಪದಾರ್ಥವೂ ಪರಮಾತ್ಮನಿಗೆ ಬೇಕಾಗಿರುವುದಿಲ್ಲ, ಏಕೆಂದರೆ ಎಲ್ಲವೂ ಅವನವುಗಳೇ ಆಗಿರುತ್ತವೆ. ನಾವು ಅದೆಷ್ಟೋ ಸಾರೆ ಪೂಜಾದಿ ಗಳನ್ನು ಮಾಡುವಾಗ ಅವನ ಪದಾರ್ಥಗಳನ್ನೇ ಅವನಿಗೆ ಸಮರ್ಪಿಸುತ್ತಿರುತ್ತೇವೆ. ಇದರಿಂದ ನಮ್ಮಲ್ಲಿ ಯಾವುದೇ ಪ್ರಕಾರದ ಪರಿವರ್ತನೆಯು ಉಂಟಾಗುವುದಿಲ್ಲ, ನಮ್ಮಲ್ಲಿರುವ ಭಾವನೆಯನ್ನು ಭಗವಂತನಿಗೆ ಸಮರ್ಪಿಸಿದಾಗ ಮಾತ್ರ ನಮ್ಮ ಅಭ್ಯುದಯ ವಾಗುವುದು. ಅಂತೆಯೇ ಮನುಷ್ಯನ ಭಾವನೆಯೇ ಅವನ ಬಂಧ–ಮೋಕ್ಷಗಳಿಗೆ ಕಾರಣವಾಗಿರುತ್ತದೆ. ಯಾವಾಗ ಭಾವನೆಯು ಶಿವಾರ್ಪಿತಗೊಂಡು ಪರಿಶುದ್ಧವಾಗು ವುದೋ ಆಗ ಜೀವಾತ್ಮನಿಗೆ ಮುಕ್ತಿಯು ದೊರೆಯುವುದು. ಇನ್ನು ಅದಕ್ಕೆ ವಿಪರೀತ ವಾಗಿದ್ದಾಗ ಸಂಸಾರದ ಬಂಧನವು.

ಭಾವನೆಯು ಜಲವಿದ್ದಂತೆ, ನಾವು ಜಲವನ್ನು ಯಾವ ಪಾತ್ರೆಯಲ್ಲಿ ಹಾಕುವೆವೋ ಅದು ತದಾಕಾರವನ್ನು ಪಡೆಯುವಂತೆ, ಭಾವನೆಯೂ ಸಹ ತನಗೆ ದೊರೆತ ಆಧಾರಗಳ ಮೇಲಿಂದ ಶುದ್ಧಾಶುದ್ಧವೆಂಬುದಾಗಿ ಕರೆಯಿಸಿಕೊಳ್ಳುವುದು. ಸಾಂಸಾರಿಕ ವಿಷಯಗಳ ಆಲಂಬನೆಯಾದಾಗ ಅದು ಅಶುದ್ಧವೆಂದೂ, ಶಿವನೇ ಅದಕ್ಕೆ ಆಲಂಬನವಾಗಿ ದೊರೆತಾಗ ಅದು ಶುದ್ಧವೆಂದೂ ಕರೆಯಿಸಿಕೊಳ್ಳುವುದು. ಅಂತೆಯೇ ಪೂಜ್ಯಪಾದರು 'ಶಿವೋಽಹಂ' ರೂಪವಾದ ಭಾವನೆಯೇ ಶುದ್ಧವೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಶಿವಯೋಗ ಸಾಧಕನು ಯಾವಾಗ ಶಿವೋಽಹಂ ಭಾವನೆಯಿಂದ ಕೂಡಿಕೊಳ್ಳುವನೋ ಆಗ ಅವನ ಮನಸ್ಸು ತನ್ನ ಸಂಕುಚಿತ ಸ್ವಭಾವವನ್ನು ಬಿಟ್ಟು ವ್ಯಾಪಕ ಸ್ವರೂಪವನ್ನು ತಾಳುವುದು. ಮನಸ್ಸಿನ ಈ ಮಹಾನತೆಯೇ ಸಾಧಕನಿಗೆ ಉನ್ನತ ಸ್ಥಿತಿಯನ್ನು ತಂದು ಕೊಡುವುದು. ಮನೆಯನ್ನು ಕಟ್ಟಿಯಾಗಲೀ, ಉನ್ನತಪದದ ಮೇಲೆ ಕುಳಿತಾಗಲೀ ಯಾರೂ ದೊಡ್ಡವರೆನಿಸಿಕೊಳ್ಳುವುದಿಲ್ಲ, ಮನಸ್ಸು ದೊಡ್ಡದಾದಾಗ ಮಾತ್ರ ಯಾರಾದರೂ ದೊಡ್ಡವರಾಗಬಲ್ಲರು.

ಸಾಧಕನು ತನಗಿರುವ ತನು–ಮನ–ಧನಗಳನ್ನು ಯಾವ ಪ್ರಮಾಣದಲ್ಲಿ ಇಟ್ಟುಕೊಳ್ಳಬೇಕೆಂಬುದರ ಬಗ್ಗೆ ಆಲೋಚಿಸಿದ ಅನುಭವಿಗಳು : ತನುವನ್ನು ಮಧ್ಯಮ ವನ್ನಾಗಿ, ಧನವನ್ನು ಕಡಿಮೆಯನ್ನಾಗಿ ಮತ್ತು ಮನಸ್ಸನ್ನು ಮಹತ್ತನ್ನಾಗಿ ಮಾಡಿಕೊಳ್ಳ ಬೇಕೆಂಬುದಾಗಿ ಹೇಳಿದ್ದಾರೆ. ಅಂದರೆ ಶರೀರವು ಅತಿ ಸ್ಥೂಲವೂ ಅತಿಕೃಶವೂ ಆಗಿರದೆ ಮಧ್ಯಮರೂಪದಲ್ಲಿ ಇರಬೇಕು. ಅಂದಾಗ ಮಾತ್ರ ಆ ಶರೀರದಿಂದ ನಾವು ಯಾವುದೇ ಕಾರ್ಯವನ್ನು ಒಳ್ಳೆಯ ಚಟುವಟಿಕೆಯಿಂದ ನಿರಾಯಾಸವಾಗಿ ಮಾಡಬಹುದು. ಅದೇ

ಪ್ರಕಾರವಾಗಿ ಧನಾಧಿಕ್ಯವಿದ್ದರೆ ಮನುಷ್ಯನು ಸದಾ ಅರ್ಥ ವ್ಯವಹಾರದಲ್ಲಿಯೇ ತತ್ಪರನಾಗಿ ಆತ್ಮ ಚಿಂತನೆಯನ್ನು ಮರೆತುಬಿಡುತ್ತಾನೆ. ಆದ್ದರಿಂದ ಧನವನ್ನು ಕಡಿಮೆ ಮಾಡಿಕೊಂಡಿರಬೇಕು. ಇನ್ನು ಉಳಿದಿರುವ ಕೊನೆಯದಾದ ಮನಸ್ಸನ್ನು ಮಾತ್ರ ಬೇಕಾದಷ್ಟು ವಿಶಾಲವನ್ನಾಗಿ ಮಾಡಿಕೊಳ್ಳಬೇಕು. ಮನಸ್ಸು ದೊಡ್ಡದಾದಾಗಲೇ ನಾವು ದೊಡ್ಡವರಾಗಬಹುದು. ಈ ಮನಸ್ಸು ದೊಡ್ಡದಾಗಬೇಕಾದರೆ ಅದಕ್ಕೆ ದೊಡ್ಡದರ ಆಲಂಬನೆಯನ್ನು ಕೊಡಬೇಕು. ''ಯೋ ವೈ ಭೂಮಾ ತತ್ಸುಖಮ್'' ಎಂಬ ಉಪನಿಷದ್ವಾಕ್ಯದಂತೆ ಪರಮಾತ್ಮನೇ ಎಲ್ಲಕ್ಕೂ ದೊಡ್ಡವನಾಗಿರುತ್ತಾನೆ. ಮನಸ್ಸು ಆ ಪರಮಾತ್ಮನನ್ನು ಅವಲಂಬಿಸಿದಾಗ ಅದೂ ಸಹ ಅವನಷ್ಟೇ ದೊಡ್ಡದಾಗುತ್ತದೆ. ಹೀಗೆ ದೊಡ್ಡದಾದ ಮನಸ್ಸುಳ್ಳವರಿಗೆ ಮಹಾತ್ಮಾ ಎಂದು ಕರೆಯುತ್ತಾರೆ. ಇಂತಹ ಮಹಾತ್ಮರ ಕಾಮನೆಗಳು ಸ್ವಾರ್ಥಪರವಾಗಿರದೆ ಸಮಷ್ಟಿ ಕಲ್ಯಾಣಪರವಾಗಿ ಇರುತ್ತವೆ. ಇಂತಹ ಸಮಷ್ಟಿ ಭಾವನೆಯುಳ್ಳ ನಮ್ಮ ದೇಶದ ಮಹರ್ಷಿಗಳು ಪರಮಾತ್ಮನನ್ನು ಕುರಿತು ಪ್ರಾರ್ಥಿಸುವಾಗ–

> ಸರ್ವೇಽಪಿ ಸುಖಿನಸ್ಸಂತು ಸರ್ವೇಸಂತು ನಿರಾಮಯಾಃ ।
> ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಭಾಗ್ಭವೇತ್ ॥

ಹೀಗೆ ಪ್ರಾರ್ಥಿಸಿದ್ದನ್ನು ಕೇಳುತ್ತೇವೆ. ಎಲ್ಲರೂ ಸದಾ ಸುಖಿಗಳಾಗಿರಬೇಕು. ಎಲ್ಲರೂ ನಿರೋಗಿಗಳಾಗಿರಬೇಕು. ಎಲ್ಲರೂ ಯಾವಾಗಲೂ ಮಂಗಲಗಳನ್ನೇ ಕಾಣಬೇಕು. ಈ ಜಗತ್ತಿನಲ್ಲಿ ಯಾರೊಬ್ಬರೂ ದುಃಖಿಗಳಾಗಬಾರದು ಎಂಬುದು ಅವರ ಪ್ರಾರ್ಥನೆಯ ತಾತ್ಪರ್ಯವಾಗಿದೆ. ಈ ರೀತಿಯಾದ ಮನೋಭಾವನೆಯು ಸಣ್ಣಮನಸ್ಸಿನ ವ್ಯಕ್ತಿಗಳಲ್ಲಿ ಬರುವುದಿಲ್ಲ. ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯು ಸ್ವಾರ್ಥಪರನಾಗಿರದೆ ಸಮಷ್ಟಿಕಲ್ಯಾಣ ಪರವಾದ ಭಾವನೆಯುಳ್ಳವನಾಗಿರಬೇಕು. ಅಂತೆಯೇ ಪೂಜ್ಯಪಾದರು ಭಾವನೆಯನ್ನು ಭಗವದರ್ಪಿತಗೊಳಿಸಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಭಾವನೆಯು ಭಗವದರ್ಪಿತ ವಾದಾಗ ಅದು ಪರಿಶುದ್ಧವಾಗುವುದಷ್ಟೇ ಅಲ್ಲ ಸಂಸಾರ ದುಃಖದಿಂದ ಮುಕ್ತವಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಭಾವನೆಯ ಮಹತ್ತ್ವವನ್ನು ಕುರಿತು ಪುನಃ –

> ಭೋಕ್ತಾ ಭೋಗ್ಯಂ ಭೋಜಯಿತಾ ಸರ್ವಮೇತಚ್ಚರಾಚರಮ್ ।
> ಭಾವಯನ್ ಶಿವರೂಪೇಣ ಶಿವೋ ಭವತಿ ವಸ್ತುತಃ ॥

(ಸಿ. ಶಿ. ೧೭–೫೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಭೋಕ್ತಾ, ಭೋಜ್ಯ ಮತ್ತು ಭೋಜಯಿತಾ ರೂಪವಾದ ಈ ಚರಾಚರ ಪ್ರಪಂಚವೆಲ್ಲವನ್ನು ಶಿವರೂಪದಿಂದ ಭಾವಿಸುವ ಶಿವಯೋಗಿಯು ವಾಸ್ತವಿಕವಾಗಿ ಶಿವನೇ ಆಗುತ್ತಾನೆ.

ತನ್ನ ಕರ್ಮಾನುಸಾರವಾಗಿ ಈ ಪ್ರಪಂಚದಲ್ಲಿ ದೇಹಧರಿಸಿಕೊಂಡು ಬಂದು ಸುಖ–ದುಃಖಗಳೆಂಬ ಫಲಗಳನ್ನು ಅನುಭವಿಸುತ್ತಿರುವ ಜೀವನಿಗೆ ಭೋಕ್ತಾ ಎನ್ನುವರು. ಇನ್ನು ಅವನ ಉಪಭೋಗಕ್ಕಾಗಿ ಶಿವನಿಂದ ನಿರ್ಮಿಸಲ್ಪಟ್ಟಿರುವ ಶಬ್ದ–ಸ್ಪರ್ಶಾದಿ

ವಿಷಯಾತ್ಮಕವಾದ ಪ್ರಪಂಚಕ್ಕೆ ಭೋಗ್ಯವೆಂದು ಕರೆಯುವರು. ಇನ್ನು ಭೋಕ್ತೃವಾದ ಜೀವಾತ್ಮನಿಗೆ ಪ್ರೇರಕ ಶಕ್ತಿಯಾಗಿರುವ ಪರಮಾತ್ಮನಿಗೆ ಭೋಜಯಿತಾ ಎಂದು ಕರೆಯುತ್ತಾರೆ. ಈಶ್ವರನ ಪ್ರೇರಕ ಶಕ್ತಿಯಿಲ್ಲದೆ ಈ ಪ್ರಪಂಚದಲ್ಲಿಯ ಯಾವ ವ್ಯವಹಾರವೂ ಕೂಡಾ ನಡೆಯುವುದಿಲ್ಲ. ಅಂತೆಯೇ ''ತೇನ ವಿನಾ ತೃಣಮಪಿ ನ ಚಲತಿ'' ಎಂಬುದಾಗಿ ಜ್ಞಾನಿಗಳು ಹೇಳಿದ್ದಾರೆ. ನಮಗೆ ಪ್ರೇರಕನಾಗಿರುವ ಆ ಈಶ್ವರನು ನಮಗೆ ದೃಷ್ಟಿಗೋಚರನಾಗದಿದ್ದರೂ ಅವನು ಅವ್ಯಕ್ತನಾಗಿದ್ದುಕೊಂಡೇ ಎಲ್ಲ ವ್ಯವಹಾರ ವನ್ನು ಮಾಡುತ್ತಿರುತ್ತಾನೆ. ಇನ್ನು ಅವನೇ ಪ್ರತಿಯೊಬ್ಬ ಜೀವಿಗಳ ಹೃದಯದಲ್ಲಿ ಜೀವರೂಪನಾಗಿಯೂ ಸಹ ಬಂದಿದ್ದಾನೆ. ಇದೂ ಅಲ್ಲದೆ ಆ ಭೂತ–ಭೌತಿಕ ಸೃಷ್ಟಿಯೂ ಸಹ ಅವನದೇ ಆದ ಒಂದು ವ್ಯಕ್ತರೂಪವು. ಹೀಗೆ ನಾವು ವಿವೇಕ ದೃಷ್ಟಿಯಿಂದ ವಿಚಾರಿಸಿದಾಗ ಜೀವ, ದೇವ ಮತ್ತು ಜಗತ್ತುಗಳಾದವನು ಒಬ್ಬನೇ ಆದ ಶಿವನೆಂಬುದು ಕಂಡುಬರುತ್ತದೆ. ಈ ರಹಸ್ಯದ ವಿವೇಕವಿಲ್ಲದ ಕಾರಣದಿಂದಾಗಿ ಜೀವಿಗಳೆಲ್ಲ ಅಹಂ ಅಹಂ ರೂಪವಾದ ವ್ಯಷ್ಟಿ ಅಭಿಮಾನವನ್ನು ತಾಳಿ ಅಶಿವಭಾವನೆಯ ಮೂಲಕವಾಗಿ ಈ ಪ್ರಪಂಚದಲ್ಲಿ ಅನಂತ ದುಃಖಗಳನ್ನು ಅನುಭವಿಸುತ್ತಿರುತ್ತಾರೆ. ದೂಷಿತಭಾವನೆಯಿಂದಲೇ ಬಂದ ಈ ದುಃಖವನ್ನು ದೂರಮಾಡಿಕೊಳ್ಳಬೇಕಾದರೆ, ಆ ಭಾವನೆಯಲ್ಲಿಯೇ ಸುಧಾರಣೆಯನ್ನು ಮಾಡಿಕೊಳ್ಳಬೇಕಾಗುವುದು.

ಅಂತೆಯೇ ಪೂಜ್ಯಪಾದರಾದ ಶ್ರೀ ರೇಣುಕ ಭಗವತ್ಪಾದರು ಭಾವವನ್ನು ಪರಿಶುದ್ಧಗೊಳಿಸುವ ವಿಚಾರವನ್ನು ತಿಳಿಯಪಡಿಸುತ್ತ ಈ ಭೋಕ್ತಾ, ಭೋಗ್ಯ (ಭೋಜ್ಯ) ಮತ್ತು ಭೋಜಯಿತಾ ಇವರೆಲ್ಲರೂ ಶಿವರೂಪವೆಂಬುದಾಗಿ ಭಾವಿಸಲು ಉಪದೇಶಿಸಿ ದ್ದಾರೆ. ಯಾರ ಭಾವನೆಯು ಶಿವರೂಪವಾಗುವುದೋ ಅವರಿಗೆ ಬ್ರಹ್ಮಾಂಡವೆಲ್ಲವೂ ಶಿವರೂಪವೇ ಆಗಿ ತೋರುವುದು. ಮನಸ್ಸಿನಲ್ಲಿ ಶಿವಭಾವನೆಯು ದೃಢವಾಗಲು ಸರ್ವವೆಲ್ಲವೂ ಶಿವರೂಪವೇ ಆಗುವದಾದ್ದರಿಂದ ನೀವುಗಳೆಲ್ಲ ಇಂತಹ ಭಾವನೆಯನ್ನು ಮಾಡಿಕೊಳ್ಳಲು ಪ್ರಯತ್ನಿಸಬೇಕು. ಹಾಲು ತುಂಬಿದ ಒಂದು ಪಾತ್ರೆಯಲ್ಲಿ ನಾವು ಒಂದಿಷ್ಟು ನೀರನ್ನು ಹಾಕಿದಾಗ ಆ ನೀರು ಹಾಲಿಗೆ ತನ್ನನ್ನು ಸಮರ್ಪಿಸಿಕೊಳ್ಳುವುದು. ಹೀಗೆ ನೀರು ಹಾಲಿಗೆ ಸಮರ್ಪಿತವಾದಾಗ ಹಾಲೂ ಸಹ ತನ್ನೆಲ್ಲ ಗುಣಗಳನ್ನು ನೀರಿಗೆ ಕೊಟ್ಟು ನೀರನ್ನೂ ತನ್ನಂತೆ ಮಾಡಿಕೊಳ್ಳುವುದು. ಇದೊಂದು ಲೋಕದಲ್ಲಿ ನಡೆಯುವ ದೈನಂದಿನ ವ್ಯವಹಾರವು.

ನೀರು ಸ್ವಭಾವತಃ ಹಾಲಿಗಿಂತಲೂ ಭಿನ್ನವಾದ ಸ್ವಭಾವದ್ದಾಗಿದ್ದರೂ ಅದು ಹಾಲಿನೊಂದಿಗೆ ಬೆರೆತಬಳಿಕ ಹಾಲಿನ ಗುಣಗಳನ್ನೇ ಪಡೆಯುತ್ತದೆ. ಆಗ ಅದನ್ನು ಹಾಲಿಗಿಂತಲೂ ಭಿನ್ನವಾಗಿ ನೋಡಲಿಕ್ಕಾಗುವುದಿಲ್ಲ. ಭಿನ್ನ ಗುಣ–ಸ್ವಭಾವಗಳ ಎರಡು ಪದಾರ್ಥಗಳು ಸಮರಸವಾಗಿ ಒಂದಾಗುತ್ತಿರುವಾಗ ಒಂದೇ ಸ್ವರೂಪದ ಶಿವ–ಜೀವರು ಸಮರಸಗೊಂಡಾಗ ಅಲ್ಲಿ ಭಿನ್ನತೆಯು ಅದು ಹೇಗೆ ತಾನೆ ತೋರೀತು ? ಅಂತೆಯೇ ಮೂಲತಃ ಶಿವನ ಅಂಶನಾಗಿರುವ ಈ ಜೀವನು ತನ್ನ ಸಂಕುಚಿತ ಭಾವನೆಯಿಂದಾಗಿ ಜೀವನೆನಿಸಿಕೊಂಡು ಸಂಸಾರದಲ್ಲಿ ಸುಖ–ದುಃಖಗಳನ್ನನುಭವಿಸುತ್ತ ತಿರುಗುತ್ತಿರುತ್ತಾನೆ. ಯಾವಾಗ ಈತನು ಗುರೂಪದೇಶದ ಮೂಲಕವಾಗಿ ಸರ್ವವೆಲ್ಲವೂ ಶಿವನೆಂಬುದಾಗಿ

ತಿಳಿದುಕೊಂಡು ಸರ್ವತ್ರ ಶಿವಭಾವನೆಯನ್ನು ತಾಳುವನೋ, ಆಗ ಇವನ ದೃಷ್ಟಿಯಲ್ಲಿ ಭೋಕ್ತಾ, ಭೋಜ್ಯ ಮತ್ತು ಭೋಜಯಿತಾ ಎಂಬ ಭೇದವೆಲ್ಲವೂ ದೂರಾಗಿ ಅವನು ಶಿವರೂಪನೇ ಆಗುತ್ತಾನೆ.

ಇಂತಹ ಉತ್ಕೃಷ್ಟವಾದ ಶಿವಭಾವನೆಯುಳ್ಳ ಭಾವಾರ್ಪಿತ ಸ್ಥಲದ ಶಿವಯೋಗಿಗೆ ಸಂಸಾರದ ಬಂಧನವಿರುವುದಿಲ್ಲವೆಂಬುದನ್ನು ತಿಳಿಸಲೋಸುಗ ಪೂಜ್ಯಪಾದರು ಪುನಃ–

ಮಿಥ್ಯೇಪಿ ಭಾವಯನ್ ವಿಶ್ವಂ ವಿಶ್ವಾತೀತಂ ಶಿವಂ ಸ್ಮರನ್ ।
ಸತ್ತಾನಂದಚಿದಾಕಾರಂ ಕಥಂ ಬದ್ಧುಮಿಹಾರ್ಹತಿ ॥

(ಸಿ. ಶಿ. ೧೭–೫೫)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ವಿಶ್ವವೆಲ್ಲವನ್ನು ಮಿಥ್ಯೆ ಯೆಂಬುದಾಗಿ ಭಾವಿಸಿ, ಶಿವನನ್ನು ವಿಶ್ವಾತೀತನೆಂತಲೂ ಸಚ್ಚಿದಾನಂದ ಸ್ವರೂಪ ನೆಂತಲೂ ಭಾವಿಸಿ ಸ್ಮರಿಸುವವನನ್ನು ಮಲ–ಮಾಯಾದಿ ಕರ್ಮಗಳು ಬಂಧಿಸಲು ಸಮರ್ಥಗಳಾಗುವುದಿಲ್ಲ.

ಶಿವನು ವಿಶ್ವರೂಪನಾಗಿರುವಂತೆ ವಿಶ್ವಾತೀತನೂ ಸಹ ಆಗಿರುತ್ತಾನೆ. ಅಂತೆಯೇ ಪರಮಾತ್ಮನ ವಿರಾಡ್ರೂಪವನ್ನು ವರ್ಣಿಸುವ ಪುರುಷ ಸೂಕ್ತದಲ್ಲಿ– ''ಅತ್ಯತಿಷ್ಠದ್ದ–ಶಾಂಗುಲಮ್'' ಎಂಬುದಾಗಿ ಹೇಳಲಾಗಿದೆ. ಅಂದರೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಮುಂತಾದ ಪಂಚ ಮಹಾಭೂತಾದಿಗಳನ್ನೆಲ್ಲ ಅವನು ಮೀರಿನಿಂತಿದ್ದಾನೆಂಬುದು ತಿಳಿದು ಬರುತ್ತದೆ. ಭೌತಿಕವಾದ ಪ್ರಪಂಚವು ಅವಿದ್ಯೆಯ ಕಾರ್ಯವಾಗಿರೋಣದರಿಂದ ಪರಮಾತ್ಮನನ್ನು ಅದಕ್ಕಿಂತಲೂ ಭಿನ್ನನನ್ನಾಗಿ ಮತ್ತು ಸಚ್ಚಿದಾನಂದ ನಿತ್ಯ ಪರಿಪೂರ್ಣ ನನ್ನಾಗಿ ಭಾವಿಸಿದಾಗ ಆ ಶಿವಭಾವನೆಯಿಂದಲೇ ಎಲ್ಲ ಬಂಧನಗಳು ಹರಿದು ಹೋಗುವವು. ಹೀಗೆ ಸರ್ವೋತ್ಕೃಷ್ಟವಾದ ಶಿವಭಾವನೆಯಿಂದ ಯುಕ್ತನಾದ ಶಿವಯೋಗಿಯನ್ನು ಮಲ–ಮಾಯಾ ಮತ್ತು ಕರ್ಮಗಳೆಂಬ ಪಾಶಗಳು ಕಟ್ಟಿ ಹಾಕಲು ಸಮರ್ಥಗಳಾಗಲಾರವು. ಇಲ್ಲಿ ಪ್ರಪಂಚಕ್ಕೆ ಮಿಥ್ಯೆಯೆಂಬುದಾಗಿ ಹೇಳಲಾಗಿದೆ. ವಿಶ್ವವನ್ನು ಮಿಥ್ಯೆಯನ್ನಾಗಿ ಭಾವಿಸಬೇಕೆಂದರೆ ಕಾಣುವ ವಿಶ್ವವು ಸುಳ್ಳೆಂಬುದಾಗಿ ಭಾವಿಸಬೇಕೆಂದರ್ಥವಲ್ಲ. ಆದರೆ ವಿಶ್ವದಲ್ಲಿಯ ಪದಾರ್ಥಗಳ ಮೇಲಿನ ಮಮತ್ವ ಭಾವನೆಯನ್ನು ಮಿಥ್ಯೆಯನ್ನಾಗಿ ಭಾವಿಸಬೇಕೆಂದರ್ಥ. ವಿಶ್ವವು ಈಶ್ವರನದಾಗಿರುವಾಗ ಜೀವನು ನನ್ನದೆಂಬ ಮಿಥ್ಯಾಭಿಮಾನವನ್ನು ತಾಳಿ, ಮಲ–ಮಾಯಾದಿ ಪಾಶಗಳಿಂದ ಬದ್ಧನಾಗುತ್ತಾನೆ. ಯಾವಾಗ ಈತನು ಈ ಮಮತ್ವ ಭಾವನೆಯನ್ನು ಮಿಥ್ಯೆಯನ್ನಾಗಿ ಭಾವಿಸಿ ಸಚ್ಚಿದಾನಂದ ಸ್ವರೂಪನಾದ ಪರಶಿವನೇ ನಾನೆಂಬುದಾಗಿ ಸ್ಮರಿಸುತ್ತಾನೆಯೋ ಅವನಿಗೆ ಯಾವುದೇ ಪ್ರಕಾರವಾದ ಪಾಶಬಂಧನವು ಇರುವುದಿಲ್ಲ ಎಂಬುದಾಗಿ ತಿಳಿದು ಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾವಾರ್ಪಣವಿಧಿಯನ್ನೇ ಬೇರೊಂದು ವಿಧವಾಗಿ ತಿಳಿಸಲೋಸುಗ ಪುನಃ–

ಸರ್ವಂ ಕರ್ಮಾರ್ಚನಂ ಶಂಭೋರ್ವಚನಂ ತಸ್ಯಕೀರ್ತನಮ್ ।
ಇತಿ ಭಾವಯತೋ ನಿತ್ಯಂ ಕಥಂ ಸ್ಯಾತ್ ಕರ್ಮಬಂಧನಮ್ ॥

(ಸಿ. ಶಿ. ೧೭–೫೬)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತಾನು ಮಾಡುವ ಎಲ್ಲ ಕ್ರಿಯೆಗಳು ಶಿವಲಿಂಗಾರ್ಚನೆಯೆಂದೂ, ತನ್ನಿಂದ ಹೊರಡುವ ಮಾತುಗಳನ್ನೆಲ್ಲ ಶಿವನ ಸ್ತುತಿಯೆಂಬುದಾಗಿಯೂ ನಿತ್ಯವೂ ಭಾವಿಸುವ ವ್ಯಕ್ತಿಗೆ ಕರ್ಮದ ಬಂಧನವು ಅದು ಹೇಗೆ ತಾನೆ ಉಂಟಾದೀತು ?

ಪ್ರಪಂಚವನ್ನು ಮಿಥ್ಯೆಯನ್ನಾಗಿ ಭಾವಿಸಿ ಜ್ಞಾನಿಯಾದವನು ನಿಷ್ಕ್ರಿಯನಾಗಕೂಡದು. ಅಧ್ಯಾತ್ಮ ಜ್ಞಾನವು ಜನರನ್ನು ಆಲಸಿಗಳನ್ನಾಗಿ ಮಾಡುವುದಿಲ್ಲ, ಆದರೆ ಅವರನ್ನು ಕಾರ್ಯಕುಶಲರನ್ನಾಗಿ ಮಾಡುತ್ತದೆ. ಯಾವುದೇ ಕಾರ್ಯವನ್ನು ಆತ್ಮ ಜ್ಞಾನಿಯಾದವನು ಎಷ್ಟು ಅಚ್ಚುಕಟ್ಟಾಗಿ ಮಾಡಬಲ್ಲನೋ ಅಷ್ಟೊಂದು ಅಚ್ಚುಕಟ್ಟಾಗಿ ಅಜ್ಞಾನಿಯು ಮಾಡಲಾರನು. ಪ್ರಪಂಚದಲ್ಲಿ ನಡೆಯುವ ಜ್ಞಾನಿ ಹಾಗೂ ಅಜ್ಞಾನಿಗಳ ವ್ಯಾವಹಾರಿಕ ಕ್ರಿಯೆಯನ್ನು ನೋಡಿದಾಗ ಹೊರನೋಟದಲ್ಲಿ ಏನೂ ವ್ಯತ್ಯಾಸವಿಲ್ಲದಂತೆ ಕಂಡು ಬಂದರೂ ಒಳಗಿನ ಅವರೀರ್ವರ ಭಾವನೆಯಲ್ಲಿ ಅಜ ಗಜಾಂತರ ವ್ಯತ್ಯಾಸವಿರುವುದು ಕಂಡು ಬರುವುದು. ಅಜ್ಞನು ತಾನು ಮಾಡುವ ಎಲ್ಲ ವ್ಯವಹಾರವನ್ನು ತನಗಾಗಿ ಎಂಬುದಾಗಿ ಭಾವಿಸುತ್ತಿದ್ದರೆ, ಜ್ಞಾನಿಯು ಎಲ್ಲವೂ ಶಿವನಿಗಾಗಿ ಎಂಬುದಾಗಿ ಭಾವಿಸುತ್ತಾನೆ. ಅಂತೆಯೇ ಅವನು ಮಾಡುವ ಕ್ರಿಯೆಗಳೆಲ್ಲವೂ ಶಿವಪೂಜೆಯೇ ಎಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಶಿವಭಾವನಾಯುಕ್ತನಾದ ಶಿವಯೋಗಿಯ ದೈನಂದಿನ ಕ್ರಿಯೆಗಳೆಲ್ಲ ಶಿವಪೂಜೆಯಾಗುವಂತೆ, ಅವನ ವೈಖರಿ ವಾಣಿಯಿಂದ ಹೊರ ಹೊರಟ ಶಬ್ದಗಳೆಲ್ಲವೂ ಶಿವನ ಸ್ತೋತ್ರಗಳೇ ಆಗಿರುತ್ತವೆ.

ಅಂತೆಯೇ ಶ್ರೀ ಶಂಕರಾಚಾರ್ಯರು ತಾವು ವಿರಚಿಸಿದ ಶಿವಮಾನಸ ಸ್ತೋತ್ರದಲ್ಲಿ–

ಆತ್ಮಾತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಮ್ ।
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿ ಸ್ಥಿತಿಃ ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋಸ್ತವಾರಾಧನಮ್ ॥

ಹೀಗೆ ವಿವರಿಸಿದ್ದನ್ನು ಕಾಣಬಹುದು. ಇವರ ವಿವರಣೆಯ ಪ್ರಕಾರ ಶಿವಭಾವನೆಯುಳ್ಳ ಶಿವಯೋಗಿಯ ಆತ್ಮವೇ ಪರಮಾತ್ಮನು, ಅವನ ಬುದ್ಧಿಯೇ ಪಾರ್ವತಿಯು, ಅವನ ಪ್ರಾಣಗಳೇ ಸಹಚರರು. ಅವನ ಶರೀರವೇ ಶಿವಮಂದಿರ ಅರ್ಥಾತ್ ಶಿವನಗೃಹವು. ಅವನು ಅನುಭವಿಸುವ ವಿಷಯೋಪಭೋಗವೇ ಶಿವಪೂಜೆಯು, ಅವನ ನಿದ್ರೆಯೇ ಸಮಾಧಿ ಸ್ಥಿತಿಯು, ಅವನ ಸುಳಿದಾಡುವಿಕೆಯೇ ಪ್ರದಕ್ಷಿಣೆಯು, ಅವನ ಮಾತುಗಳೇ ಸ್ತೋತ್ರಗಳು. ಇಷ್ಟೇ ಅಲ್ಲ ಅವನು ಮಾಡುವ ಪ್ರತಿಯೊಂದು ವ್ಯವಹಾರಗಳು ಶಿವಪೂಜಾ ರೂಪಗಳೇ ಆಗಿರುತ್ತವೆ. ಇಂತಹ ಶಿವಭಾವನೆಯುಳ್ಳ ಶಿವಯೋಗಿಯ ಕರ್ಮಗಳೆಲ್ಲ ಶಿವಪೂಜೆಗಳಾದಾಗ ಯಾವ ಕರ್ಮವು ತಾನೇ ಇವನನ್ನು ಬಂಧಿಸಲು

ಸಾಧ್ಯವಾದೀತು ? ಅಂತೆಯೇ ಇವನು ಯಾವ ಕರ್ಮದ ಬಂಧನಕ್ಕೂ ಒಳಗಾಗುವುದಿಲ್ಲ ವೆಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾವಾರ್ಪಿತ ಸ್ಥಲವನ್ನು ಪರಿಸಮಾಪ್ತಿ ಗೊಳಿಸುತ್ತ ಕೊನೆಯದಾಗಿ–

ಸರ್ವೇಂದ್ರಿಯಗತಂ ಸೌಖ್ಯಂ ದುಃಖಂ ವಾ ಕರ್ಮಸಂಭವಮ್ ।
ಶಿವಾರ್ಥಂ ಭಾವಯನ್ ಯೋಗೀ ಜೀವನ್ಮುಕ್ತೋ ಭವಿಷ್ಯತಿ ॥

(ಸಿ. ಶಿ. ೧೭–೫೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶ್ರೋತ್ರಾದಿ ಸರ್ವೇಂದ್ರಿಯಗಳಿಂದ ಉಂಟಾಗುವ ಸುಖವನ್ನಾಗಲೀ ಅಥವಾ ಪಾಪಕರ್ಮಜನ್ಯವಾದ ದುಃಖವನ್ನಾಗಲೀ ಶಿವಲಿಂಗಾರ್ಪಿತವನ್ನಾಗಿ ಭಾವಿಸುವ ಯೋಗಿಯು ಜೀವನ್ಮುಕ್ತನಾಗುತ್ತಾನೆ.

ಈ ಸಂಸಾರವು ಸುಖ–ದುಃಖರೂಪವಾದುದಾಗಿದೆ. ಇಲ್ಲಿ ದೇಹ ಧರಿಸಿ ಕೊಂಡಿರುವ ಪ್ರತಿಯೊಬ್ಬ ಜೀವಾತ್ಮನೂ ಸಹ ಅವುಗಳನ್ನು ಅನುಭವಿಸಲೇ ಬೇಕಾ ಗುತ್ತದೆ. ಜ್ಞಾನ ಪ್ರಾಪ್ತವಾದರೂ ಸಹ ಪ್ರಾರಬ್ಧಕರ್ಮದ ಕ್ಷಯವಾಗದ ಕಾರಣ ಜ್ಞಾನಿಯು ಆ ಕರ್ಮದ ಫಲಗಳಾದ ಸುಖ–ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಸುಖ–ದುಃಖಗಳೆಂದರೆ ನಮ್ಮ ಮನಸ್ಸಿನ ಅನುಕೂಲ ಪ್ರತಿಕೂಲ ಭಾವನೆಗಳೇ. ಅಂತೆಯೇ ಶಾಸ್ತ್ರಕಾರರು– ''ಅನುಕೂಲವೇದನೀಯಂ ಸುಖಂ, ಪ್ರತಿಕೂಲ ವೇದನೀಯಂ ದುಃಖಮ್'' ಎಂಬುದಾಗಿ ಸುಖ–ದುಃಖಗಳ ಲಕ್ಷಣವನ್ನು ನಿರೂಪಿಸಿ ದ್ದಾರೆ. ನಮ್ಮ ಮನಸ್ಸಿಗೆ ಅನುಕೂಲವೆನಿಸುವುದೇ ಸುಖವು ಮತ್ತು ಅದಕ್ಕೆ ಪ್ರತಿಕೂಲ ವೆನಿಸುವುದೇ ದುಃಖವು. ಶಬ್ದ–ಸ್ಪರ್ಶಾದಿ ವಿಷಯಗಳಿಂದಲೇ ಸುಖ–ದುಃಖಗಳು ದೊರೆಯುತ್ತಿದ್ದರೂ ಯಾವ ಶಬ್ದವು ನಮ್ಮ ಮನಸ್ಸಿಗೆ ಅನುಕೂಲವಾಗಿ ತೋರುವುದೋ ಅದರಿಂದಲೇ ನಮಗೆ ಸುಖವಾಗುವುದು. ಇನ್ನು ಮನಸ್ಸಿಗೆ ಪ್ರತಿಕೂಲವಾಗಿ ತೋರುವ ಶಬ್ದವಿದ್ದರೆ ಅದರಿಂದ ಮನಸ್ಸಿಗೆ ದುಃಖವಾಗುವುದು. ಒಂದೇ ಶಬ್ದವು ಒಂದೇ ಕ್ಷಣದಲ್ಲಿ ಓರ್ವನಿಗೆ ಸುಖವನ್ನು ಕೊಟ್ಟರೆ ಇನ್ನೋರ್ವನಿಗೆ ದುಃಖವನ್ನುಂಟು ಮಾಡುತ್ತದೆ. ಒಬ್ಬ ವ್ಯಕ್ತಿಯು ಸತ್ತನೆಂಬ ಸುದ್ದಿ ಬರಲು ಆ ಶಬ್ದವನ್ನು ಕೇಳಿದಾಗ ಸತ್ತವನ ಮಿತ್ರರಿಗೆಲ್ಲ ದುಃಖ ವಾದರೆ ಅವನ ಶತ್ರುಗಳಿಗೆಲ್ಲ ಸಂತೋಷವೇ ಸಂತೋಷ. ಇಲ್ಲಿ ಮಡಿದನೆಂಬ ವಾರ್ತೆ ಯನ್ನು ಸೂಚಿಸುವ ಶಬ್ದವು ಒಂದೇ ಆಗಿದ್ದರೂ ಅದನ್ನು ಕೇಳಿದೊಡನೆ ಆ ಕೇಳುವ ವ್ಯಕ್ತಿಗಳ ಮನಸ್ಸಿನಲ್ಲಿರುವ ಅನುಕೂಲ–ಪ್ರತಿಕೂಲ ಭಾವನೆಗಳ ಮುಖಾಂತರವಾಗಿ ಅವರವರಿಗೆ ಸುಖ–ದುಃಖಗಳು ಸಂಭವಿಸುವವು. ಆದ್ದರಿಂದಲೇ ಸುಖ–ದುಃಖ ಗಳೆಂದರೆ ಮನಸ್ಸಿನ ಅನುಕೂಲ ವ ಪ್ರತಿಕೂಲ ಭಾವನೆಗಳೆಂಬುದಾಗಿ ತಿಳಿಸಲಾಗಿದೆ.

ಹೀಗೆ ಸುಖದಾಯಕವಾದ ಅನುಕೂಲ ಭಾವನೆಯನ್ನು ಮತ್ತು ದುಃಖದಾಯಕ ವಾದ ಪ್ರತಿಕೂಲ ಭಾವನೆಯನ್ನು ಶಿವನಿಗೆ ಸಮರ್ಪಿಸಿ ಆ ಸುಖ–ದುಃಖಗಳೆರಡನ್ನೂ ಶಿವಪ್ರಸಾದವೆಂಬುದಾಗಿ ಸ್ವೀಕರಿಸುವ ಶಿವಯೋಗಿಯು ಈ ಸುಖ–ದುಃಖಗಳ ಸ್ಥಿತಿ ಯಿಂದ ಮೇಲೆದ್ದು ಜೀವನ್ಮುಕ್ತಸ್ಥಿತಿಯನ್ನು ಅನುಭವಿಸುವನು. ಅಭಿಮಾನವು ದುಃಖಕ್ಕೆ

ಕಾರಣವಾದರೆ ನಿರಭಿಮಾನವು ಸುಖಕ್ಕೆ ಕಾರಣವಾಗುವುದು. ಆದ್ದರಿಂದ ಸರ್ವೇಂದ್ರಿಯಗಳಿಂದುಂಟಾಗುವ ಸುಖ–ದುಃಖಗಳ ಮೇಲಿನ ಅಭಿಮಾನವನ್ನು ತ್ಯಜಿಸಿದ ಭಾವಾರ್ಪಿತ ಸ್ಥಲದ ಶಿವಯೋಗಿಯು ತನ್ನ ಈ ಸಮರ್ಪಣಾರೂಪವಾದ ಉತ್ಕೃಷ್ಟವಾದ ಭಾವನೆಯ ಪರಿಣಾಮವಾಗಿಯೇ ಅವನಿಗೆ ಜೀವನ್ಮುಕ್ತ ಸ್ಥಿತಿಯು ಪ್ರಾಪ್ತವಾಗುವುದು.

ಅರ್ಪಣೆಯಲ್ಲಿರುವ ಈ ಸಹಜ ಸಾಮರ್ಥ್ಯವನ್ನರಿತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅರ್ಪಣಾ ಸದ್ಭಾವವಿಧಿಯನ್ನು ಸವಿಸ್ತಾರವಾಗಿ ನಿರೂಪಿಸುತ್ತ ಕಾಯಕರಣಗಳ ಅರ್ಪಣೆಯ ನಂತರ ಸರ್ವೋತ್ಕೃಷ್ಟವಾದ ಭಾವಾರ್ಪಣೆಯನ್ನಿಲ್ಲಿ ಪ್ರತಿಪಾದಿಸಿದ್ದಾರೆ. ಈ ಸ್ಥಲದಲ್ಲಿ ನಿರೂಪಿಸಿದ ಭಾವಾರ್ಪಣೆಯ ರಹಸ್ಯವನ್ನರಿತು ಅದರಂತೆ ಆಚರಿಸಿ ನೀವೆಲ್ಲ ಜೀವನ್ಮುಕ್ತರಾಗಿರೆಂಬುದಾಗಿ ಹರಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ಜುಲೈ, ೧೯೯೪

(ಸ್ಥಾನ 'ಶಿವಾನುಭವ ಮಂಗಲ ಭವನ', ಸೋಲಾಪೂರ)



ಆಶೀರ್ವಚನ-೧

# ಶಿಷ್ಯಸ್ಥಲ

ಮುಮುಕ್ಷುಗಳೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯ ನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ ಆಶ್ವೀನಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಈ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಭಾವಾರ್ಪಿತ ಸ್ಥಲದವರೆಗಿನ ಆಶೀರ್ವಚನಗಳನ್ನು ಸೊಲ್ಲಾಪೂರದಲ್ಲಿ ಪೂರ್ಣಗೊಳಿಸಲಾಗಿದ್ದು, ಮುಂದಿನ ಸ್ಥಲಗಳನ್ನಿಲ್ಲಿ ವಿವೇಚಿಸಲಾಗುವುದು. ಭಾವಾರ್ಪಿತಸ್ಥಲದ ನಂತರ ಬರುವ ಸ್ಥಲವೇ ಶಿಷ್ಯಸ್ಥಲವು. ಇದೂ ಸಹ ಅತಿ ಮಹತ್ವಪೂರ್ಣವಾದ ಸ್ಥಲವಾಗಿರುತ್ತದೆ. ಇದನ್ನೇ ಕುರಿತು ಇಂದು ಈ ಮುಕ್ತಿಧಾಮದಲ್ಲಿ ಆಶೀರ್ವಚನವನ್ನು ಪ್ರಾರಂಭಿಸಲಾಗುತ್ತದೆ. ಕಾರಣ ಸರ್ವರೂ ಸಾವಧಾನವಾಗಿ ಶ್ರವಣ ಮಾಡಿರಿ.

ಇಹಲೋಕದಲ್ಲಿ ಮನುಷ್ಯನಿಗೆ ಅನೇಕ ವಿಧಗಳಾದ ಸಂಬಂಧಗಳಿರುತ್ತವೆ. ಅವುಗಳಲ್ಲಿ ಪಿತಾ-ಪುತ್ರ, ಪತಿ-ಪತ್ನಿ, ಅಣ್ಣ-ತಮ್ಮ ಮತ್ತು ಅಕ್ಕ-ತಂಗಿ ಮುಂತಾದವು ಗಳು ಲೌಕಿಕ ಸಂಬಂಧಗಳಾದರೆ ಗುರು-ಶಿಷ್ಯ ಎಂಬ ಸಂಬಂಧವು ಆಧ್ಯಾತ್ಮಿಕ ಸಂಬಂಧ ವೆಂಬುದಾಗಿ ಕರೆಯಲ್ಪಡುತ್ತದೆ. ಜಗತ್ತಿನ ಉಳಿದೆಲ್ಲ ಸಂಬಂಧಗಳು ಬಂಧನಕಾರಕ ಗಳಾದರೆ ಗುರು-ಶಿಷ್ಯರೂಪವಾದ ಸಂಬಂಧವು ಸರ್ವಬಂಧನಗಳನ್ನು ಬಿಡಿಸುವ ಸರ್ವ ಶ್ರೇಷ್ಠವಾದ ಸಂಬಂಧವಾಗಿರುತ್ತದೆ. ಅಂತೆಯೇ ಪ್ರತಿಯೊಬ್ಬ ಮನುಷ್ಯನು ಯೋಗ್ಯ ನಾದ ಗುರುವಿಗೆ ಶಿಷ್ಯನಾಗಿ ತನ್ನ ಸಕಲ ಬಂಧನಗಳನ್ನು ಕಳೆದುಕೊಳ್ಳಬೇಕು.

ಭಾರತೀಯ ಸಂಸ್ಕೃತಿಯಲ್ಲಿ ದೇವ ಪೂಜೆಯನ್ನು ವಿಧಿಸಿದಂತೆ ಗುರುಪೂಜೆಯೂ ಸಹ ವಿಧಿಸಲ್ಪಟ್ಟಿರುತ್ತದೆ. ದೇವರಿಗೆ ಶರಣಾಗತನಾಗಿ ದೇವರನ್ನು ಪ್ರೀತಿಸುವವನಿಗೆ ಭಕ್ತನೆಂದು ಕರೆದರೆ, ಗುರುವನ್ನು ಭಕ್ತಿಯಿಂದ ಪೂಜಿಸುವವನಿಗೆ ಶಿಷ್ಯನೆಂದು ಕರೆಯು ತ್ತಾರೆ. ಈಶ್ವರನ ಕೃಪೆಯಿಂದ ಭಕ್ತನಿಗೆ ಸಾಂಸಾರಿಕ ಭೋಗ ಭಾಗ್ಯಗಳು ದೊರೆತರೆ ಗುರುಕೃಪೆಯಿಂದ 'ಸಂಸಾರ' ನಿವೃತ್ತಿ ರೂಪವಾದ ಮುಕ್ತಿಯು ದೊರೆಯುವುದು.

ಅಂತೆಯೇ ಈಶ್ವರನಿಗಿಂತಲೂ ಗುರುವು ಅಧಿಕನೆಂಬುದಾಗಿ ಕರೆದಿದ್ದಾರೆ. ಈ ಗುರು ಮಹಿಮೆಯ ವಿಷಯಕವಾಗಿ ಶ್ರೀ ಮತ್‌ಶಂಕರಾಚಾರ್ಯರು–

ಶರೀರಂ ಸುರೂಪಂ ತಥಾ ವಾ ಕಲತ್ರಮ್ ।
ಧನಂ ಮೇರುತುಲ್ಯಂ ಯಶಶ್ಚಾರು ಚಿತ್ರಮ್ ॥
ಗುರೋಂಘ್ರಿಪದ್ಮೇ ಮನಶ್ಚೇನ್ನ ಲಗ್ನಮ್ ।
ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ?

ಈ ರೀತಿಯಾಗಿ ವರ್ಣಿಸಿದ್ದಾರೆ. ತಾತ್ಪರ್ಯವೇನೆಂದರೆ ಸುಂದರವಾದ ಶರೀರ, ತನ್ನ ಸೌಂದರ್ಯಕ್ಕೆ ತಕ್ಕಂಥ ಲಾವಣ್ಯವತಿಯಾದ ಹೆಂಡತಿ, ಮೇರು ಪರ್ವತಕ್ಕೆ ಸಮಾನ ವಾದ ಸಂಪತ್ತು ಮತ್ತು ದಶದಿಕ್ಕುಗಳಲ್ಲಿ ಹರಡಿದ ಧವಲ ಕೀರ್ತಿ. ಇವೆಲ್ಲವಿದ್ದೂ ಒಂದು ವೇಳೆ ಗುರುವಿನ ಪಾದ ಪದ್ಮದಲ್ಲಿ ಭಕ್ತಿಯೊಂದಿಲ್ಲದಿದ್ದರೆ ಏನು ಪ್ರಯೋಜನ ? ಏನು ಪ್ರಯೋಜನ ? ಏನು ಪ್ರಯೋಜನ ? ಏನು ಪ್ರಯೋಜನ ? ಅಂದರೆ ಎಲ್ಲವೂ ನಿಷ್ಪ್ರಯೋಜಕ ಎಂದರ್ಥ. ಆದ್ದರಿಂದಲೇ ಪ್ರತಿಯೊಬ್ಬ ವ್ಯಕ್ತಿಯು ಸದ್ಗುರುವಿನ ಶಿಷ್ಯನಾಗಿರಬೇಕು.

ಅಂತೆಯೇ ಪೂಜ್ಯಪಾದರು ಈ ಶಿಷ್ಯಸ್ಥಲದಲ್ಲಿ 'ಶಿಷ್ಯ' ಶಬ್ದದ ಪರಿಭಾಷೆಯನ್ನು ಕುರಿತು–

ಶಾಸನೀಯೋ ಭವೇದ್ಯಸ್ತು ಪರಕಾಯೇನ ಸರ್ವದಾ ।
ತತ್ಪ್ರಸಾದಾತ್ತು ಮೋಕ್ಷಾರ್ಥೀ ಸ ಶಿಷ್ಯ ಇತಿ ಕೀರ್ತಿತಃ ॥

(ಸಿ. ಶಿ. ೧೭–೫೮)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರುವಿನ ಅಂಕಿತದಲ್ಲಿದ್ದು ಅವನ ಆಜ್ಞೆಯನ್ನು ಪರಿಪಾಲಿಸುತ್ತಿರುವ ಮತ್ತು ಗುರುವಿನ ಅನುಗ್ರಹದಿಂದಲೇ ಮೋಕ್ಷಾಪೇಕ್ಷೆಯುಳ್ಳವನಾಗಿ ಯಾವನಿರುವನೋ ಅವನಿಗೆ ಶಿಷ್ಯನೆಂಬುದಾಗಿ ಕರೆಯ ಲಾಗುತ್ತದೆ.

ಮನುಷ್ಯನ ಬದುಕಿನಲ್ಲಿ ಗುರುಕೃಪೆಯು ಅತಿ ಮಹತ್ತ್ವಪೂರ್ಣವಾದುದು. ಈ ಕೃಪೆಯು ದೊರೆಯಬೇಕಾದರೆ ಅಪ್ತ, ಅಂಗ, ಸ್ಥಾನ ಮತ್ತು ಸದ್ಭಾವಗಳೆಂಬ ಸೇವೆಯಿಂದ ಆತನನ್ನು ಪ್ರಸನ್ನಗೊಳಿಸಿಕೊಳ್ಳಬೇಕು. ಎಂದು ನಮ್ಮ ಮನಸ್ಸಿನಲ್ಲಿ ಪರಮಪುರುಷಾರ್ಥವಾದ ಮೋಕ್ಷವನ್ನು ಪಡೆಯಬೇಕೆನ್ನುವ ಉತ್ಕಟವಾದ ಬಯಕೆಯು ಉತ್ಪನ್ನವಾಗುವುದೋ ಅಂದೇ ನಮ್ಮ ಮೇಲೆ ಗುರುವಿನ ಪೂರ್ಣವಾದ ಕೃಪೆಯು ಪ್ರಾಪ್ತವಾಗಿದೆ ಎಂದು ತಿಳಿದುಕೊಳ್ಳಬೇಕು. ಈ ಜಗತ್ತಿನಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಜೀವರುಗಳಿಗೆ ಅರ್ಥ ಮತ್ತು ಕಾಮಗಳು ಸದಾ ಬೇಕೆನಿಸುತ್ತವೆ. ಆದರೆ ಧರ್ಮ ಮತ್ತು ಮೋಕ್ಷಗಳ ಅಪೇಕ್ಷೆಯು ಬಹಳಷ್ಟು ಕಡಿಮೆ ಜನರ ಮನಸ್ಸಿನಲ್ಲಿ ಉತ್ಪನ್ನವಾಗುವುದು. ಎಲ್ಲ ಪುರುಷಾರ್ಥಗಳ ಸಿದ್ಧಿಗೆ ಮೂಲ ಕಾರಣವಾದುದು ಧರ್ಮವೇ. ಇದು ಗುರು ಸೇವಾದಿಯಿಂದ ನಿಷ್ಕಾಮ ರೂಪವಾಗಿದ್ದರೆ ಆವಾಗ ತಾನೆ ಮುಕ್ತಿಯ ಅಪೇಕ್ಷೆ ಯುಂಟಾಗುವುದು. ಈ ನಾಶಿಕ ಕ್ಷೇತ್ರದ ಮುಕ್ತಿಧಾಮದಲ್ಲಿ ಕುಳಿತುಕೊಂಡು ನಾವೆಲ್ಲ

ಇಂದು ಮುಕ್ತಿಯ ಬಗ್ಗೆ ವಿಚಾರಿಸುತ್ತಿರುವುದು ಒಂದು ಯೋಗಾಯೋಗವೇ. ಇದರ ಅಪೇಕ್ಷೆಯು ಮನಸ್ಸಿನಲ್ಲುಂಟಾಗಬೇಕಾದರೆ ಅನ್ಯ ಅಪೇಕ್ಷೆಗಳಾವವೂ ಇರಬಾರದಾಗುತ್ತದೆ. ಸರ್ವ ಆಶೆ ಆಮಿಷಗಳನ್ನು ತೊರೆದ ಸಚ್ಛಿಷ್ಯರ ಮನಸ್ಸಿನಲ್ಲಿಯೇ ಈ ವಿಧವಾದ ಅಪೇಕ್ಷೆಯು ಉಂಟಾಗುವುದು.

ಒಂದು ಸಾರೆ ಸ್ವಾಮಿ ವಿವೇಕಾನಂದರ ಕಡೆಗೆ ಓರ್ವ ವ್ಯಕ್ತಿಯು ಬಂದು– ''ಸ್ವಾಮೀಜಿಯವರೇ ! ನೀವು ಈಶ್ವರನನ್ನು ಕಂಡಿರುವಿರಾ ?'' ಎಂಬುದಾಗಿ ಕೇಳಿದನು. ಆಗ ವಿವೇಕಾನಂದರು– ಕಂಡಿದ್ದೇನೆ ಎಂದು ಧೈರ್ಯವಾಗಿಯೇ ನುಡಿದರು. ಆಗ ಆ ವ್ಯಕ್ತಿಯು– ''ಹಾಗಾದರೆ ನನಗೂ ದೇವರನ್ನು ತೋರಿಸುವಿರಾ ?'' ಎಂಬುದಾಗಿ ಕೇಳಿಕೊಂಡನು. ಅವನ ಮಾತುಗಳನ್ನು ಕೇಳಿದ ಶ್ರೀ ವಿವೇಕಾನಂದರು ಅಷ್ಟೇ ಸಹಜವಾಗಿ– ''ಯಾಕಾಗಲೊಲ್ಲದು, ನಡೆ ನನ್ನೊಂದಿಗೆ, ನಾನು ನದಿಯ ಸ್ನಾನಕ್ಕಾಗಿ ಹೊರಟಿದ್ದೇನೆ. ನೀನೂ ನನ್ನೊಂದಿಗೆ ಮಂಗಲಸ್ನಾನವನ್ನು ಮಾಡಿಕೋ. ಅಲ್ಲಿಯೇ ನಿನಗೆ ದೇವರ ದರ್ಶನಮಾಡಿಸುತ್ತೇನೆ'' ಎಂದರು. ವಿವೇಕಾನಂದರ ಈ ಮಾತುಗಳನ್ನು ಕೇಳಿದ ಆ ವ್ಯಕ್ತಿಯು ಸಂತೋಷಭರಿತನಾಗಿ ಅಲ್ಲಿಂದಲೇ ಅವರೊಂದಿಗೆ ನದಿ ಸ್ನಾನಕ್ಕೆ ಹೊರಟೇ ಬಿಟ್ಟನು. ಈರ್ವರೂ ಕೂಡಿಕೊಂಡು ನದಿಯನ್ನು ತಲುಪಿದರು. ಶ್ರೀ ಸ್ವಾಮಿ ವಿವೇಕಾನಂದರು ನದಿಯೊಳಗೆ ಅವನನ್ನು ಕರೆದುಕೊಂಡು ಹೋಗಿ ಸ್ನಾನ ಮಾಡುತ್ತಿರುವ ಸಂದರ್ಭದಲ್ಲಿ ಆ ವ್ಯಕ್ತಿಯು ಆನಂದತುಂದಿಲನಾಗಿ ನೀರಿನಲ್ಲಿ ಮುಳು–ಮುಳುಗಿ ಏಳುತ್ತಿರುವಾಗ ಅವನ ತಲೆಯನ್ನು ಹಿಡಿದು, ನೀರಿನೊಳಗೆ ಒತ್ತತೊಡಗಿದರು. ಸುಮಾರು ಮುಕ್ಕಾಲು ನಿಮಿಷದವರೆಗೆ ಅವನನ್ನು ನೀರಿನಲ್ಲಿಯೇ ಅದುಮಿ ಹಿಡಿದಾಗ ಆ ವ್ಯಕ್ತಿಯು ಅತ್ಯಂತ ಗಾಬರಿಗೊಂಡು ಮೇಲೇಳಲು ಪ್ರಯತ್ನಿಸತೊಡಗಿದನು. ಆದರೆ ಸ್ವಾಮೀಜಿಯವರ ಬಲವಾದ ಹಿಡಿತದಿಂದ ಮೇಲೆದ್ದು ಬರುವುದು ಅವನಿಂದ ಆಗಲಿಲ್ಲ. ಇನ್ನೇನು ನನ್ನ ಪ್ರಾಣಗಳು ಉಳಿಯಲಾರವು. ಇಂದು ನನ್ನ ಮರಣವು ನಿಶ್ಚಿತವಾದಂತಿದೆ ಎಂದು ನಿರಾಶೆಭಾವದಿಂದೊಡಗೂಡಿದ್ದರೂ ಮೇಲೇಳಲು ಬಲವಾಗಿ ಚಡಪಡಿಸುತ್ತಿರುವ ಅವನ ಸ್ಥಿತಿಯನ್ನು ಕಂಡ ಸ್ವಾಮೀಜಿಯವರು ಇನ್ನೇನು ಸತ್ತುಹೋದಾನೆಂದು ತಿಳಿದು ಕೈಯನ್ನು ಬಿಟ್ಟುಬಿಟ್ಟರು. ಆಗ ನೀರಿನಿಂದ ಮೇಲೆ ಬಂದ ಆ ವ್ಯಕ್ತಿಯು– ''ಇದೇನು ಸ್ವಾಮೀಜಿಯವರೇ ! ದೇವರ ದರ್ಶನ ಮಾಡಿಸುವುದಕ್ಕಾಗಿ ನನ್ನನ್ನು ಕರೆದುಕೊಂಡು ಬಂದಿದ್ದಿರೋ ಅಥವಾ ನೀರಿನಲ್ಲಿ ಮುಳುಗಿಸಿ ಪ್ರಾಣವನ್ನು ತೆಗೆಯಲು ಕರೆದುಕೊಂಡು ಬಂದಿರುವಿರೋ ?'' ಎಂದು ಪ್ರಶ್ನಿಸಲಾಗಿ, ಸ್ವಾಮೀಜಿಯವರು ಶಾಂತವಾದ ಮನಸ್ಸಿನಿಂದ ''ಏನಯ್ಯಾ ! ನಿನಗೆ ದೇವರನ್ನು ತೋರಿಸುವುದಕ್ಕಾಗೇನೇ ನಿನ್ನನ್ನಿಲ್ಲಿ ಕರೆದುಕೊಂಡು ಬಂದದ್ದು. ನಾನು ನೀರಿನಲ್ಲಿ ಅದುಮುತ್ತಿರುವಾಗ ನೀನು ಮೇಲೆಬರಲು ಹಾತೊರೆಯುತ್ತಿದ್ದೆ. ಆಗ ನಿನಗೆ ಮೇಲಿನ ಯಾವ ವಸ್ತು ಬೇಕಾಗಿತ್ತು? ಹೊಲ, ಮನೆ, ಹೆಂಡರು ಮಕ್ಕಳು, ಧನ–ಕನಕಾದಿಗಳಲ್ಲಿ ಆಗ ಯಾವುದರ ಅಪೇಕ್ಷೆಯು ನಿನ್ನ ಮನಸ್ಸಿನಲ್ಲಿ ತೀವ್ರವಾಗಿತ್ತು? ಹೇಳು'' ಆಗ ಆ ವ್ಯಕ್ತಿಯು– ''ಸ್ವಾಮೀಜಿಯವರೇ ! ಆ ಕ್ಷಣದಲ್ಲಿ ನನ್ನ ಮನಸ್ಸಿನೊಳಗೆ ಬೇರಾವುದರ ಅಪೇಕ್ಷೆಯು ಇರಲಿಲ್ಲ. ಕೇವಲ ಉಸಿರಾಡಿಸಲು ಹವೆಯೊಂದೇ ಬೇಕೆನಿಸಿತ್ತು. ಅದನ್ನು ಹೊರತುಪಡಿಸಿ ಬೇರಾವುದೂ ನನಗೆ ಬೇಕಾಗಿರಲಿಲ್ಲ''. ಆಗ ಸ್ವಾಮಿ ವಿವೇಕಾನಂದರು– ''ನೋಡಿದೆಯಾ ! ನದಿಯ

ನೀರಿನಲ್ಲಿ ಮುಳುಗಿದ್ದ ನಿನಗೆ ಹವೆಯೊಂದೇ ಬೇಕೆನಿಸುತ್ತಿರುವಂತೆ, ಸಂಸಾರ ಸಾಗರದಲ್ಲಿ ಮುಳುಗಿರುವ ಜೀವರಿಗೆ ದೇವರೇ ಬೇಕೆನ್ನುವ ಉತ್ಕಟವಾದ ಬಯಕೆ ಇದ್ದಾಗ ಮಾತ್ರ ದೇವರನ್ನು ಕಾಣಲು ಸಾಧ್ಯವಾಗುವುದು ಎಂಬುದಾಗಿ ತಿಳಿಸಿಕೊಟ್ಟರು. ನಿನ್ನ ಮನಸ್ಸಿನಲ್ಲಿಯೂ ಸಹ ಎಂದು ಈಶ್ವರ ವಿಷಯಕವಾದ ಅತ್ಯುತ್ಕಟವಾದ ಬಯಕೆಯು ಉತ್ಪನ್ನವಾಗುವುದೋ ಅಂದು ನನ್ನಲ್ಲಿಗೆ ಬಾ. ಆಗ ನಿನಗೆ ಈಶ್ವರ ದರ್ಶನ ಮಾಡಿಸುತ್ತೇನೆ ಎಂದು ಸ್ವಾಮಿಗಳು ಹೇಳಿ ಆತನಿಗೆ ಕಳಿಸಿಕೊಟ್ಟರು.

ಇಚ್ಛೆಯು ಉತ್ಕಟರೂಪವನ್ನು ತಾಳದೆ ಫಲೀಭೂತವಾಗದು. ಶಿಷ್ಯನ ಮನಸ್ಸಿನಲ್ಲಿರುವ ಮೋಕ್ಷಾಪೇಕ್ಷೆಯು ತೀವ್ರವಾದಾಗ ಅವನಿಗೆ ಮುಕ್ತಿ ದೊರೆಯುವುದಲ್ಲದೆ ಅವನೇ ಯೋಗ್ಯ ಶಿಷ್ಯನೆಂಬುದೂ ಸಹ ಸಿದ್ಧವಾಗುವುದು. ಜಗತ್ತಿನ ಅನೇಕ ಜನರ ಮನಸ್ಸಿನಲ್ಲಿ ಮೋಕ್ಷಾಪೇಕ್ಷೆಯು ಇದ್ದೇ ಇರುತ್ತದೆ. ಆದರೆ ಅದು ಅತ್ಯಂತ ದುರ್ಬಲವಾಗಿರೋಣದರಿಂದ ಫಲೀಭೂತವಾಗಲಾರದು. ರೋಗದಿಂದ ಜರ್ಜರವಾದ ಶರೀರವುಳ್ಳವನ ಮನಸ್ಸಿನಲ್ಲಿ ಆಶೀರ್ವಚನವನ್ನು ಆಲಿಸುವ ಅಪೇಕ್ಷೆಯಿದ್ದರೂ ಅಶಕ್ತತೆಯಿಂದಾಗಿ ಅವನು ಇಲ್ಲಿಯವರೆಗೆ ಬರಲು ಅಸಮರ್ಥನಾಗಿರುವಂತೆ ದುರ್ಬಲವಾದ ಇಚ್ಛೆಯು ಅದೆಂದೂ ಫಲಕಾರಿಯಾಗದು.

ಪ್ರಪಂಚದ ಅದೆಷ್ಟೋ ಜನರು ದೇವಾಲಯಗಳಿಗೆ ಹೋಗಿ ವಿಧಿವತ್ತಾಗಿ ದೇವರ ಪೂಜೆಯನ್ನು ನೆರವೇರಿಸಿದ ನಂತರ ತನ್ನ ಬಯಕೆಗಳನ್ನು ದೇವರ ಮುಂದೆ ನಿವೇದಿಸಿಕೊಳ್ಳುತ್ತಾನೆ. ನಮ್ಮ ಪೂಜೆಯಿಂದ ಪ್ರಸನ್ನನಾದ ದೇವರೂ ಸಹ ನಮ್ಮ ಸಾಂಸಾರಿಕ ಅಭೀಪ್ಸೆಯನ್ನು ಪೂರ್ಣಮಾಡಲೂಬಹುದು. ಆದರೆ ಈ ಸಾಂಸಾರಿಕ ಅಭೀಪ್ಸೆಗಳು ಎಂದೂ ಮುಗಿಯುವದಿಲ್ಲವಷ್ಟೇ ಅಲ್ಲ, ಯಾರಿಗೂ ತೃಪ್ತಿಯನ್ನು ನೀಡುವುದಿಲ್ಲ. ಅಂತೆಯೇ ಈ ಭೋಗಾಪೇಕ್ಷೆಯನ್ನು ಕಡಿಮೆ ಮಾಡಿಕೊಂಡು ಮೋಕ್ಷಾಪೇಕ್ಷೆಯುಳ್ಳವನಾಗಿ ಸದ್ಗುರುವಿಗೆ ಶರಣಾಗತನಾಗಬೇಕು. ದೇವರ ಸಾನಿಧ್ಯದಲ್ಲಿದ್ದು ದೇವರನ್ನು ಪೂಜಿಸುವುದಕ್ಕಿಂತಲೂ ಗುರುಸಾನಿಧ್ಯದಲ್ಲಿದ್ದು ಅವರ ಸೇವೆಯನ್ನು ಮಾಡುವುದು ಅತಿ ಕಠಿಣವಾದುದು. ದೇವನು ತನ್ನನ್ನು ಪೂಜಿಸುವ ಭಕ್ತನೊಂದಿಗೆ ಏನೂ ಮಾತನಾಡುವದಿಲ್ಲವಷ್ಟೇ ಅಲ್ಲ, ಅವನು ಹೇಗೇ ಮಾಡಿದರೂ ಸಹ ಸುಮ್ಮನಾಗಿರುತ್ತಾನೆ. ಒಮ್ಮೊಮ್ಮೆ ದೇವರಿಗೆ ನೈವೇದ್ಯವನ್ನು ತೋರಿಸದೆ ಅವನ ಎದುರಿಗೇನೇ ನೀವು ಊಟಮಾಡುತ್ತ ಕುಳಿತಿದ್ದರೂ 'ನನಗೂ ಕೊಡು' ಎಂದು ಯಾರ ಮನೆಯ ದೇವರು ಇನ್ನೂವರೆಗೆ ಬೇಡಿಲ್ಲ. ಒಂದು ವೇಳೆ ಕೇಳಿದರೆ ಆ ದೇವರನ್ನು ನೀವು ಮನೆಯಲ್ಲಿ ಇಟ್ಟುಕೊಳ್ಳಲೂ ಸಹ ಸಾಧ್ಯವಿಲ್ಲ. ಗುರುವೆಂದರೆ 'ಸಾಕ್ಷಾತ್ ಮಾತನಾಡುವ ದೇವರೇ'. ಅವನು ನೀವು ಮಾಡಿದ್ದೆಲ್ಲವನ್ನು ನೋಡುತ್ತ ಸುಮ್ಮನೇ ಕುಳಿತುಕೊಳ್ಳುವುದಿಲ್ಲ. ಹೆಜ್ಜೆ ಹೆಜ್ಜೆಗೂ ನಿಮ್ಮ ತಪ್ಪುಗಳನ್ನು ಕಂಡುಹಿಡಿದು ನಿಮ್ಮನ್ನು ಸುಧಾರಿಸುವ ವಿಚಾರದಲ್ಲಿರುತ್ತಾನೆ. ಗುರುವಿನಿಂದಾಗುವ ಪ್ರತಿಯೊಂದು ಶಾಸನವನ್ನು ಸಹಿಸಿ ಆಚರಿಸುವವನೇ ಶಿಷ್ಯನಾಗಬಲ್ಲನು. ಗುರುವಿನ ಆಣತಿಯನ್ನು ಪಾಲಿಸದವನು ಶಿಷ್ಯನೆಂದು ಕರೆಯಲು ಯೋಗ್ಯನಾಗಲಾರನು. ಅಂತೆಯೇ ಅರ್ಜುನನು ಸಸುಖತ್ವವನ್ನು ಬಿಟ್ಟು ಶಿಷ್ಯತ್ವವನ್ನು ಸ್ವೀಕರಿಸಿ ಭಗವಂತನಿಂದ ತತ್ತ್ವೋಪದೇಶವನ್ನು ಪಡೆದ ವಿಚಾರವು ಶ್ರೀಮದ್ಭಗವದ್ಗೀತೆಯಲ್ಲಿ ಸುಸ್ಪಷ್ಟವಾಗಿದೆ. ಅಲ್ಲಿ ಅರ್ಜುನನು ತನ್ನ ಮುಖಾರವಿಂದದಿಂದ–''ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ

ಪ್ರಪನ್ನಮ್'' ಎಂಬುದಾಗಿ ನುಡಿದಿದ್ದಾನೆ. ಅಂದರೆ ''ಎಲೈ ಕೃಷ್ಣ ಪರಮಾತ್ಮನೇ ! ನಾನು ನಿನ್ನ ಶಿಷ್ಯನಾಗಿ ನಿನಗೆ ಶರಣಾಗತನಾಗಿದ್ದೇನೆ. ನನ್ನ ಮೇಲೆ ನೀನು ಶಾಸನವನ್ನು ಮಾಡಬಹುದು'' ಎಂಬುದು ಅರ್ಜುನನ ಉಕ್ತಿಯ ತಾತ್ಪರ್ಯವು.

ಹೀಗೆ ಗುರುವಿನಲ್ಲಿ ನಿಷ್ಠೆಯುಳ್ಳವನಾಗಿ ಅವನ ಶಾಸನವನ್ನು ಶಿರಸಾ ಪರಿಪಾಲಿಸಿ ಆತನ ಕೃಪೆಯನ್ನು ಪಡೆದವನೇ ನಿಜವಾದ ಶಿಷ್ಯನು. ಅವನೇ ಮೋಕ್ಷವನ್ನು ಪಡೆಯಲೂ ಸಹ ಅರ್ಹನಾಗಿರುತ್ತಾನೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ. ಈ ಶಿಷ್ಯನ ಸ್ವರೂಪದ ಬಗ್ಗೇನೇ ಮತ್ತಷ್ಟು ವಿವರಿಸಲೋಸುಗ ಪೂಜ್ಯಪಾದರು ಪುನಃ–

ಭಾವೋ ಯಸ್ಯ ಸ್ಥಿರೋ ನಿತ್ಯಂ ಮನೋವಾಕ್ಕಾಯಕರ್ಮಭಿಃ ।
ಗುರೌ ನಿಜೇ ಗುಣೋದಾರೇ ಸ ಶಿಷ್ಯ ಇತಿ ಗೀಯತೇ ॥

(ಸಿ. ಶಿ. ೧೭–೫೯)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಯಾವನು ತನ್ನ ಶರೀರ, ವಾಣಿ ಮತ್ತು ಮನಸ್ಸುಗಳಿಂದ ಸದ್ಗುಣ ಸಂಪನ್ನನಾದ ಗುರುವಿನಲ್ಲಿ ದೃಢವಾದ ಭಾಗವುಳ್ಳವನಾಗಿರುತ್ತಾನೆಯೋ ಅವನಿಗೇನೇ ಶಿಷ್ಯನೆಂಬುದಾಗಿ ಕರೆಯುತ್ತಾರೆ.

ಸದ್ಗುರುವು ಗುಣಗಳ ಆಗರನಾಗಿರುತ್ತಾನೆ. ಅಂತೆಯೇ ಪೂಜ್ಯರು ಗುರುವಿಗೆ ಗುಣೋದಾರನೆಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಈತನು ಜ್ಞಾನ, ವೈರಾಗ್ಯಾದಿ ದಿವ್ಯ ಗುಣಗಳಿಂದ ಈ ಜಗತ್ತಿನಲ್ಲಿ ಉತ್ಕೃಷ್ಟನಾಗಿ ತೋರುತ್ತಿರುತ್ತಾನೆ. ಸದ್ಗುಣಗಳಿಂದಲೇ ವ್ಯಕ್ತಿಯು ಉನ್ನತನಾಗುತ್ತಾನೆ. ಅಂತೆಯೇ ಸುಭಾಷಿತಕಾರರು ''ಗುಣಾಃ ಪೂಜಾ ಸ್ಥಾನಮ್'' ಎಂಬುದಾಗಿ ಹೇಳಿದ್ದನ್ನು ಕಾಣಬಹುದು. ಹೀಗೆ ಗುಣ–ಗಣ ಸಮನ್ವಿತ ನಾದ ಸದ್ಗುರುವನ್ನು ತ್ರಿಕರಣಪೂರ್ವಕವಾಗಿ ಸೇವಿಸಬೇಕಾಗುವುದು. ಶರೀರದಿಂದ ಪೂಜೆ, ವಾಣಿಯಿಂದ ಆತನ ಸ್ತೋತ್ರ, ಮನಸ್ಸಿನಿಂದ ಆತನ ದಿವ್ಯಗುಣಗಳ ಚಿಂತನೆ ಯನ್ನು ಮಾಡುವುದೇ ಗುರುವಿನ ತ್ರಿಕರಣ ಸೇವೆಯೆಂದು ಕರೆಯಿಸಿಕೊಳ್ಳುವುದು. ವೇಷ–ಭೂಷಣಗಳಿಂದ ಗುರುಗಳಂತೆ ತೋರುವವರು ಅದೆಷ್ಟೋ ಜನರಿರುತ್ತಾರೆ. ಗುರುವಿನ ವೇಷ ಧರಿಸಿದ ಮಾತ್ರಕ್ಕೆ ಗುರುತ್ವವು ಸಿದ್ಧಿಸುವುದಿಲ್ಲ. ಅದಕ್ಕೆ ತಕ್ಕಂತೆ ಶೀಲ–ಚಾರಿತ್ರ್ಯಾದಿಗಳು ಬೇಕಾಗುತ್ತದೆ. ಆದ್ದರಿಂದ ಗುರುವಿನಂತೆ ಅಭಿನಯಿಸುವುದು ಅತ್ಯಂತ ಸರಳವಾಗಿದ್ದರೂ ಗುಣಸಂಪನ್ನನಾದ ಗುರುವಾಗುವುದು ಬಹು ಕಠಿಣವಾದುದು.

ರಾಮಾಯಣದಲ್ಲಿ ಪಾರ್ವತಿಯು ರಾಮನ ಪರೀಕ್ಷೆ ಮಾಡಿದ್ದೊಂದು ಸುಂದರ ವಾದ ಪ್ರಸಂಗವಿದೆ. ಶ್ರೀ ರಾಮಚಂದ್ರನು ಸೀತಾಪಹರಣದನಂತರ ಸೀತೆಯ ವಿಯೋಗದಿಂದ ವ್ಯಾಕುಲನಾಗಿ ಗಿಡ, ಮರ, ಬಳ್ಳಿಗಳನ್ನಾಲಂಗಿಸುತ್ತ ಹಾ ಸೀತೇ ! ಹಾ ಸೀತೇ ! ಎಂದು ಭ್ರಮಿತನಂತೆ ಸಂಚರಿಸುವ ಸಂದರ್ಭದಲ್ಲಿ ಜಗಜ್ಜನನಿಯಾದ ಪಾರ್ವತಿಯು ಸೀತೆಯ ವೇಷವನ್ನು ಧರಿಸಿಕೊಂಡು ಆತನ ಮುಂದೆ ಮುಂದೆ ಸಂಚರಿಸ ತೊಡಗಿದಳು. ಆಗ ಶ್ರೀರಾಮನು ಅವಳನ್ನು ಗುರುತಿಸಿ– ''ಹೇ ಜಗನ್ಮಾತೆ ! ನೀನೇಕೆ ಈ ವೇಷದಲ್ಲಿ ಬಂದಿರುವೆ ? ಸೀತೆಯ ವೇಷವನ್ನು ಧರಿಸುವುದು ಸುಲಭವಾಗಿದ್ದರೂ ಸೀತೆಯಂತೆ ನಡೆಯುವುದು ನಿನ್ನಿಂದಾಗಲಿಲ್ಲ. ಆ ಸೀತೆ ನನ್ನನ್ನು ಹಿಂಬಾಲಿಸಿ ನನ್ನ ಹೆಜ್ಜೆಯಲ್ಲಿ ಹೆಜ್ಜೆಯಿಡುತ್ತ ಹಿಂದೆ ಹಿಂದೆ ಬರುತ್ತಿದ್ದಳು. ಆದರೆ ನೀನು ನನ್ನ ಮುಂದೆ ನಡೆಯುತ್ತಿರುವಿ. ನನಗೇನೂ ಸೀತೆಯ ಭ್ರಮೆಯಿಲ್ಲ. ಇದೊಂದು ಮರ್ಯಾದಾ

ಪುರುಷೋತ್ತಮನ ಅಭಿನಯವನ್ನು ಮಾಡಬೇಕಾಗಿದೆ. ಕಾರಣ ನನ್ನ ನಾಟಕದಲ್ಲಿ ನಿನ್ನ ಪಾತ್ರ ಸಲ್ಲ, ಕೃಪೆ ಮಾಡಿ ಆಶೀರ್ವದಿಸಿ ಅನುಗ್ರಹಿಸು''. ಆಗ ಸೀತಾ ಪಾತ್ರಧಾರಿಣಿಯಾದ ಸತಿದೇವಿಯು ರಾಮನನ್ನು ಅನುಗ್ರಹಿಸಿ ಕೈಲಾಸಕ್ಕೆ ತೆರಳಿದಳು. ಇಲ್ಲಿ ಸೀತೆಯ ವೇಷವನ್ನು ಧರಿಸುವುದು ಸುಲಭವಾದರೂ ಸೀತೆಯ ಗುಣಗಳನ್ನು ಅಳವಡಿಸಿಕೊಳ್ಳುವುದು ಅಷ್ಟೊಂದು ಸುಲಭವಲ್ಲವೆಂದು ಕಂಡುಬರುತ್ತದೆ.

ಇದೇ ಪ್ರಕಾರವಾಗಿ ಗುರುವಿನ ವೇಷ–ಭೂಷಣಗಳನ್ನು ಧರಿಸುವುದು ಸುಲಭವಾದರೂ ಗುರುವಿನ ಗುಣಗಳನ್ನು ಅಳವಡಿಸಿಕೊಳ್ಳುವುದು ಅಷ್ಟೇ ಕಠಿಣವಾಗಿರುತ್ತದೆ. ಕಾಶೀ ಕ್ಷೇತ್ರದಲ್ಲಿ ಒಮ್ಮೆ ಒಬ್ಬ ಸಾಧುವು ಧೋಬೀಘಾಟದಲ್ಲಿನ ಒಂದು ಕಲ್ಲಿನ ಮೇಲೆ ಕುಳಿತುಕೊಂಡು ಧ್ಯಾನಮಾಡುತ್ತಿದ್ದನು. ಆಗ ದಿನಾಲೂ ಆ ಕಲ್ಲಿನ ಮೇಲೆ ಬಟ್ಟೆ ತೊಳೆಯುತ್ತಿದ್ದ ಅಗಸನು ಬಂದು ಸ್ವಲ್ಪ ವೇಳೆ ಪ್ರತೀಕ್ಷೆ ಮಾಡಿದರೂ ಆ ಸಾಧುವಿನ ಧ್ಯಾನ ಪೂಜಾದಿಗಳು ಮುಗಿಯದಿರುವುದನ್ನು ಕಂಡು– ''ಓ ಸಾಧುಗಳೇ ! ನಾನು ಬಟ್ಟೆ ತೊಳೆಯಬೇಕಾಗಿದೆ. ನನ್ನ ಕಲ್ಲನ್ನು ಖಾಲಿ ಮಾಡಿಕೊಡಿ'' ಎಂಬುದಾಗಿ ಅಗಸನು ಅದೆಷ್ಟು ಹೇಳಿದರೂ ಆತನು ಏಳದಿದ್ದಾಗ ಅವರೀರ್ವರ ಮಧ್ಯೆ ಸ್ವಲ್ಪೇ ಕ್ಷಣದಲ್ಲಿ ವಾಗ್ಯುದ್ಧವೇ ಪ್ರಾರಂಭವಾಯಿತು. ಅದು ಹಾಗೇ ಬೆಳೆಯುತ್ತ ಹೋಗಿ ಮಲ್ಲ ಯುದ್ಧದ ರೂಪವನ್ನು ತಾಳಿತು. ಬಲಶಾಲಿಯಾದ ಅಗಸನು ಅಶಕ್ತನಾದ ಆ ಸಾಧುವನ್ನು ಕೆಳಗೆ ಹಾಕಿ ಅವನ ಎದೆಯ ಮೇಲೆ ಕುಳಿತುಕೊಂಡು ಚೆನ್ನಾಗಿ ಥಳಿಸ ಹತ್ತಿದನು. ಆಗ ತನ್ನ ಶಕ್ತಿ ಸಾಮರ್ಥ್ಯಗಳು ಕಡಿಮೆ ಆದದ್ದರಿಂದ ಆ ಸಾಧುವು ದೇವರ ಮೊರೆ ಹೊಕ್ಕು ತನ್ನನ್ನು ಈ ಅಗಸನಿಂದ ರಕ್ಷಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಆಕಾಶವಾಣಿಯಾದದ್ದೇನೆಂದರೆ–''ನಿಮ್ಮೀರ್ವರಲ್ಲಿ ಅಗಸನಾರೋ ? ಸಾಧು ಯಾರೋ ತಿಳಿಯದಾಗಿದೆ ವೇಷ–ಭೂಷಣಗಳು ಬದಲಿಯಾಗಿದ್ದರೂ ಕಲಹ ಪ್ರಿಯತೆಯು ನಿಮ್ಮೀರ್ವರಲ್ಲಿ ಸಮಾನವಾಗಿದೆ. ಅಂದಾಗ ನಾನು ಯಾರನ್ನು ತಾನೇ ರಕ್ಷಿಸಬೇಕು ?'' ಆ ಆಕಾಶವಾಣಿಯನ್ನು ಕೇಳಿದ ಸಾಧುವಿನ ಮನಸ್ಸಿನಲ್ಲಿ ಪಶ್ಚಾತ್ತಾಪವುಂಟಾಗಿ ತನ್ನ ತಪ್ಪಿನ ಅರಿವು ಅವನಿಗಾಯಿತಂತೆ.

ಹೀಗೆ ವೇಷ–ಭೂಷಣಗಳಿಂದ ನಮ್ಮನ್ನು ನಾವು ಬಹುಬೇಗನೇ ಪರಿವರ್ತಿಸಿಕೊಳ್ಳಬಹುದು. ಆದರೆ ಸದ್ಗುಣಗಳಿಂದ ನಮ್ಮ ಜೀವನವನ್ನು ಮಾರ್ಪಾಡುಗೊಳಿಸುವುದು ಅಷ್ಟೇ ಕಠಿಣವಾಗಿರುತ್ತದೆ. ಸದ್ಗುರು ಕಠೋರವಾದ ತಪಸ್ವಾಧ್ಯಾಯಗಳನ್ನಾಚರಿಸಿ ಉತ್ಕೃಷ್ಟ ಗುಣಗಳ ಆಗರವೇ ಆಗಿರುತ್ತಾನೆ. ಹತ್ತಿಯ ತೊಳೆಯಲ್ಲಿ ಸಣ್ಣ ಸಣ್ಣ ನೂಲಿನ ಎಳೆಗಳೇ ತುಂಬಿಕೊಂಡಿರುವಂತೆ ಒಬ್ಬ ಶ್ರೇಷ್ಠ ಸದ್ಗುರುವಿನ ಹೃದಯದಲ್ಲಿ ಉತ್ತಮೋತ್ತಮಗಳಾದ ಜ್ಞಾನವೈರಾಗ್ಯಾದಿ ಗುಣಗಳೇ ತುಂಬಿಕೊಂಡಿರುತ್ತವೆ. ಹೀಗೆ ಸದ್ಗುಣಗಳ ಆಗರನಾಗಿರುವ ಗುರುವಿನಲ್ಲಿ ತ್ರಿಕರಣಪೂರ್ವಕವಾದ ಭಕ್ತಿ ಸಂಪನ್ನನೇ ಶಿಷ್ಯನೆಂದು ಕರೆಯಿಸಿಕೊಳ್ಳುವನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ಅಕ್ಟೋಬರ, ೧೯೯೪.
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)

■■

ಆಶೀರ್ವಚನ-೨

# ಶಿಷ್ಯಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯ ನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನ ಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾ ಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿ ಸ್ಥಲದ ಶಿಷ್ಯಸ್ಥಲದ ಬಗ್ಗೆ ನಿನ್ನೆಯ ದಿನ ಕೆಲವೊಂದು ವಿಚಾರಗಳನ್ನು ತಿಳಿದುಕೊಂಡವರಾಗಿದ್ದೀರಿ. ಇಂದು ಅದೇ ವಿಷಯವನ್ನು ಕುರಿತು ಇನ್ನಷ್ಟು ಹೆಚ್ಚಿಗೆ ವಿವೇಚಿಸಲಾಗುವುದು.

ತನ್ನ ತ್ರಿಕರಣಪೂರ್ವಕವಾಗಿ ನಿಷ್ಠೆಯಿಂದ ಗುರುವಿನ ಸೇವೆಯನ್ನು ಮಾಡುವವನೇ ಶಿಷ್ಯನೆಂಬುದಾಗಿ ತಿಳಿಸಿದ ಪೂಜ್ಯಪಾದರು ಈ ಶಿಷ್ಯನಲ್ಲಿರಬೇಕಾದ ಉತ್ಕೃಷ್ಟ ಗುಣಗಳನ್ನು ಕುರಿತು ಪುನಃ-

ಶಾಂತೋ ದಾಂತಸ್ತಪಶ್ಶೀಲಃ ಸತ್ಯವಾಕ್ ಸಮದರ್ಶನಃ ।
ಗುರೌ ಶಿವೇ ಸಮಾನಸ್ಥಃ ಸ ಶಿಷ್ಯಾಣಾಮಿಹೋತ್ತಮಃ ॥

(ಸಿ. ಶಿ. ೧೭-೬೦)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಂತರಿಂದ್ರಿಯ ಬಹಿರಿಂದ್ರಿಯಗಳ ಮೇಲೆ ನಿಗ್ರಹವನ್ನು ಸಾಧಿಸಿದವನೂ, ತಪೋನಿಷ್ಠನೂ, ಸತ್ಯವಾದಿಯೂ, ಗುರು ಮತ್ತು ದೇವರನ್ನು ಸಮಾನವಾಗಿ ನೋಡಬಲ್ಲವನೂ, ಮಣ್ಣು ಮತ್ತು ಚಿನ್ನಗಳಲ್ಲಿ ಸಮದರ್ಶಿಯಾದವನೂ ಶಿಷ್ಯರಲ್ಲಿಯೇ ಉತ್ತಮ ಶಿಷ್ಯನೆನಿಸಿಕೊಳ್ಳುವನು.

ಗೃಹಸ್ಥರಾದವರಿಗೆ ಉತ್ತಮಸಂತತಿ ಉತ್ಪನ್ನವಾಗುವದೂ ಹಾಗೂ ಗುರುವಿಗೆ ಉತ್ತಮನಾದ ಶಿಷ್ಯನು ದೊರೆಯುವದೂ ಸಹ ಪುಣ್ಯವಿಶೇಷವೆಂದೇ ಭಾವಿಸಬೇಕು. ಮಗನು ಉತ್ತಮನಾಗಿದ್ದರೆ ಕುಲದ ಕೀರ್ತಿಯು ಬೆಳೆಯುವುದು. ಅದರಂತೆ ಶಿಷ್ಯನು ಉತ್ತಮನಾಗಿದ್ದರೆ ಗುರುವಿಗೆ ಘನತೆಯು ಪ್ರಾಪ್ತವಾಗುವುದು. ಮಕ್ಕಳಲ್ಲಿ ಉತ್ತಮ,

ಮಧ್ಯಮ ಮತ್ತು ಕನಿಷ್ಠವೆಂಬ ತರಗತಿ ಇರುವಂತೆ ಶಿಷ್ಯರಲ್ಲಿಯೂ ಸಹ ಈ ತರ–ತಮ ಭಾವನೆಯು ಇದ್ದೇ ಇರುತ್ತದೆ. ಅಂತೆಯೇ ಪೂಜ್ಯಪಾದರು ಇಲ್ಲಿ ಕನಿಷ್ಠ ಹಾಗೂ ಮಧ್ಯಮ ಶಿಷ್ಯರನ್ನು ಬಿಟ್ಟು, ಉತ್ತಮ ಶಿಷ್ಯನ ಲಕ್ಷಣವನ್ನೇ ನಿರೂಪಿಸಿದ್ದಾರೆ. ಶಮ, ದಮ ತಪಸ್ಸು, ಸತ್ಯನಿಷ್ಠತೆ ಮತ್ತು ಸಮದರ್ಶಿತ್ವಗಳು ಶಿಷ್ಯನ ಉತ್ಕೃಷ್ಟಗಳಾದ ಲಕ್ಷಣ ಗಳು, ಶಿಷ್ಯನಾದವನಲ್ಲಿ ಮೊಟ್ಟ ಮೊದಲು ಶಮೆ–ದಮೆಗಳು ಅವಶ್ಯವಾಗಿ ಬೇಕೇ ಬೇಕು. ಅಂತರಿಂದ್ರಿಯ ನಿಗ್ರಹಕ್ಕೆ ಶಮೆಯೆಂದು ಕರೆಯುತ್ತಾರೆ. ಶಮೆಯನ್ನು ಸಂಪಾದಿಸಿದವನಿಗೇನೇ ಶಾಂತಿಯು ಪ್ರಾಪ್ತವಾಗುವುದು. ಶಿಷ್ಯನ ಚಿತ್ತವು ತನ್ನಚಾಂಚಲ್ಯ ವನ್ನು ಕಳೆದುಕೊಂಡು ಶಾಂತವಾಗಿದ್ದರೆ ಮಾತ್ರ ಗುರುವಿನ ಬೋಧೆಯನ್ನು ಗ್ರಹಿಸಲು ಅವನಿಗೆ ಸಾಧ್ಯವಾಗುವುದು. ಓರ್ವ ವ್ಯಕ್ತಿಯು ತನ್ನ ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಂಡು ಉದಾರಿಯಾದ ವ್ಯಕ್ತಿಯ ಎದುರಿಗೆ ನಿಂತುಕೊಂಡು, ದಾನವನ್ನು ಬೇಡಿದಾಗ ಅವನು ಇವನಿಗೆ ಕೊಡಲುದ್ಯುಕ್ತನಾದಾಗ ತನ್ನ ಕೈಯಲ್ಲಿಯ ಪಾತ್ರೆಯನ್ನು ಅತ್ತಿತ್ತ ತಿರುಗಾಡಿಸುತ್ತ ಹಿಡಿದರೆ ಹಾಕುವ ಪದಾರ್ಥವು ಪಾತ್ರೆಯಲ್ಲಿ ಸ್ವಲ್ಪರ ಮಟ್ಟಿಗೆ ಬಿದ್ದರೂ ಪಾತ್ರೆಯ ಹೊರಗೇನೇ ಹೆಚ್ಚು ಚೆಲ್ಲಾಡಿ ಹೋಗುವುದು. ಅದರಂತೆ ಅತ್ಯಂತ ಉದಾರಿಯಾದ ಗುರುವೆಂಬ ಮಹಾದಾನಿಯ ಎದುರಿಗೆ ಶಿಷ್ಯನು ತನ್ನ ಚಂಚಲವಾದ ಮನಸ್ಸೆಂಬ ಪಾತ್ರೆಯನ್ನು ಹಿಡಿದಾಗ ಗುರುವಿನಿಂದ ಕೊಡಲ್ಪಡುವ ಜ್ಞಾನಾಮೃತವೆಂಬ ಅಮೂಲ್ಯವಾದ ಪದಾರ್ಥವು ಅವನಿಗೆ ಸಂಪೂರ್ಣವಾಗಿ ದೊರೆಯಲಾರದು. ಆದ್ದರಿಂದ ಶಿಷ್ಯನ ಮನಸ್ಸು ಶಾಂತವಾಗಿರಬೇಕು. ಅಂದಾಗಲೇ ಅವನಿಗೆ ಗುರುವಿನ ಉಪದೇಶವು ಗ್ರಹಣವಾಗುವುದು.

ಈ ಅಂತರಿಂದ್ರಿಯವಾದ ಮನಸ್ಸನ್ನು ಶಾಂತವಾಗಿಡಬೇಕಾದರೆ ಬಹಿರಿಂದ್ರಿಯ ಗಳ ನಿಗ್ರಹವೂ ಸಹ ಅತ್ಯಾವಶ್ಯಕವಾದುದು. ಈ ಬಹಿರಿಂದ್ರಿಯಗಳ ನಿಗ್ರಹಕ್ಕೆ ದಮೆ ಎಂಬುದಾಗಿ ಕರೆದಿದ್ದಾರೆ. ಇವುಗಳನ್ನು ನಿಗ್ರಹಿಸಬೇಕಾದರೆ ಮೊದಲು ಶರೀರವನ್ನು ಒಂದು ಆಸನದಲ್ಲಿ ಸುಸ್ಥಿರಗೊಳಿಸಬೇಕಾಗುವುದು. ಪದ್ಮಾಸನ ಇಲ್ಲವೆ ಸುಖಾಸನಾದಿ ಗಳಲ್ಲಿ ಕುಳಿತುಕೊಂಡು ಮನಸ್ಸನ್ನು ಏಕಾಗ್ರಗೊಳಿಸಿದಾಗ ಅದಕ್ಕೆ ಏಕಾಗ್ರತೆಯು ಪ್ರಾಪ್ತ ವಾಗುವುದು. ಪಾತ್ರವು ಸ್ಥಿರವಾಗಿದ್ದರೆ ಪಾತ್ರದೊಳಗಿನ ಜಲವು ಸ್ಥಿರವಾಗಿರಬಲ್ಲದು. ಒಂದು ವೇಳೆ ಪಾತ್ರವೇ ಅಲುಗಾಡುತ್ತಿದ್ದರೆ ಜಲವೆಂದೂ ಸುಸ್ಥಿರವಾಗಲಾರದು. ಅದರಂತೆ ಇಲ್ಲಿ ನಮ್ಮೆಲ್ಲರ ಸ್ಥೂಲ ಶರೀರವು ಒಂದು ಪಾತ್ರವಾದರೆ ಅದರೊಳಗಿನ ಮನಸ್ಸು ಜಲವಿದ್ದಂತೆ, ದೇಹದಲ್ಲಿ ಚಲನ–ವಲನೆಯಾಗುತ್ತಿದ್ದರೆ ಮತ್ತು ಇಂದ್ರಿಯಗಳು ತಮ್ಮ ತಮ್ಮ ವಿಷಯದೊಂದಿಗೆ ವ್ಯವಹರಿಸುತ್ತಿದ್ದರೆ, ಚಿತ್ತದಲ್ಲಿ ಏಕಾಗ್ರತೆಯು ಅದೆಂದಿಗೂ ಸಿದ್ಧಿಸುವುದಿಲ್ಲ. ಅಂತೆಯೇ ಯೋಗಶಾಸ್ತ್ರದಲ್ಲಿ ಮೊದಲು ಶರೀರದ ಶುದ್ಧಿ ಹಾಗೂ ಅದರ ಸುಸ್ಥಿರತೆಗಾಗಿ– ಅಹಿಂಸಾ, ಸತ್ಯ, ಅಸ್ತೇಯ ಬ್ರಹ್ಮಚರ್ಯ, ಅಪರಿಗ್ರಹ ಗಳೆಂಬ ಪಂಚ ಯಮಗಳನ್ನೂ ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನಗಳೆಂಬ ಪಂಚ ನಿಯಮಗಳನ್ನು ಮತ್ತು ಆಸನಗಳನ್ನೂ ಪ್ರತಿಪಾದಿಸ ಲಾಗಿದೆ. ಅಂದರೆ ಅಷ್ಟಾಂಗಯೋಗದಲ್ಲಿ ಯಮ, ನಿಯಮ ಮತ್ತು ಆಸನಗಳೆಂಬ ಮೂರು ಯೋಗಗಳು ಶರೀರದ ಶುದ್ಧಿ ಹಾಗೂ ಸ್ಥಿರತೆಗಾಗಿ ಹೇಳಿದರೆ,

ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳೆಂಬ ಐದು ಯೋಗಗಳನ್ನು ಮನಸ್ಸಿನ ಶುದ್ಧಿ ಹಾಗೂ ಸುಸ್ಥಿರತೆಗಾಗಿ ಉಪದೇಶಿಸಿದ್ದಾರೆ.

ಹೀಗೆ ಯೋಗಶಾಸ್ತ್ರದಲ್ಲಿ ಹೇಳಿದಂತೆ ಯಮ–ನಿಯಮಾದಿಗಳ ಮೂಲಕ ಶರೀರವನ್ನು ಸ್ವಸ್ಥ ಶುದ್ಧ ಮತ್ತು ಸುಸ್ಥಿರವನ್ನಾಗಿ ಮಾಡಿಕೊಂಡಾಗಲೇನೇ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳಲು ಸಾಧ್ಯವಾಗುವುದು. ಅಂತೆಯೇ ಜಗದ್ಗುರು ಶ್ರೀ ರೇಣುಕ ಭಗವತ್ಪಾದರು ಶಿಷ್ಯನಲ್ಲಿರಬೇಕಾದ ಗುಣಗಳ ಬಗ್ಗೆ ಹೇಳುವಾಗ ಮೊದಲು ಶಾಂತಿ–ದಾಂತಿಗಳನ್ನು ಪರಿಗಣಿಸಿದ್ದಾರೆ. ಅಂದರೆ ಶಮೆ–ದಮೆಗಳಿಂದ ಶರೀರ ಹಾಗೂ ಮನಸ್ಸುಗಳನ್ನು ಸುಸ್ಥಿರಗೊಳಿಸಿಕೊಂಡ ಶಿಷ್ಯನೇ ಗುರುವಿನ ಉಪದೇಶವನ್ನು ಗ್ರಹಿಸಲು ಸಮರ್ಥನಾಗುವನು. ಆದ್ದರಿಂದ ಶಿಷ್ಯನಾದವನು ಶಾಂತನೂ, ದಾಂತನೂ ಆಗಿರಬೇಕು. ಇದೂ ಅಲ್ಲದೆ ಅವನು ತಪಶ್ಶೀಲನೂ ಆಗಿರಬೇಕೆಂಬುದಾಗಿ ಪೂಜ್ಯರು ಉಪದೇಶಿಸಿದ್ದಾರೆ. ತಪಸ್ಸೆಂದರೆ ಸಹನಶೀಲತೆಯು. ಹಸಿವೆ ನೀರಡಿಕೆಗಳೆಂಬ ದ್ವಂದ್ವವನ್ನು ಸಹಿಸುವುದು, ಕಾಷ್ಠ ಮೌನ ಆಕಾರಮೌನಾದಿಗಳನ್ನು ಅಭ್ಯಸಿಸುವುದು ಮತ್ತು ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳನ್ನು ಪರಿಪಾಲಿಸುವುದು ಇವೆಲ್ಲವುಗಳು ಯೋಗಶಾಸ್ತ್ರದಲ್ಲಿ ತಪಸ್ಸೆಂಬುದಾಗಿ ಕರೆಯಲ್ಪಟ್ಟಿವೆ. ಇವುಗಳಿಂದ ಒಂದು ವಿಧವಾದ ಶರೀರದ ಶೋಷಣೆಯಾಗುವುದು. ಹೀಗೆ ಶರೀರ ಶೋಷಣಾತ್ಮಕವಾದ ಮತ್ತು ಸಹನ ಶಕ್ತಿ ಪ್ರಧಾನವಾದ ಕ್ರಿಯೆಗೆ ತಪಸ್ಸೆಂಬುದಾಗಿ ಕರೆಯಲಾಗಿದೆ.

ಈ ತಪಸ್ಸು ಕಾಯಿಕ, ವಾಚಿಕ ಮತ್ತು ಮಾನಸಿಕವೆಂಬುದಾಗಿ ಮೂರು ಪ್ರಕಾರವಾಗಿರುತ್ತದೆ. ತನ್ನ ಶರೀರದಿಂದ ತಂದೆ–ತಾಯಿ, ಗುರು ಹಾಗೂ ದೇವರ ಸೇವೆಯನ್ನು ಮಾಡುವುದು ಕಾಯಿಕ ತಪಸ್ಸು. ಭಗವಂತನ ನಾಮ ಜಪ, ಭಜನೆ ಮತ್ತು ಸತ್ಯ ಹಾಗೂ ಪ್ರಿಯಕರವಾಗಿ ಮಾತನಾಡುವುದಕ್ಕೆ ವಾಚಿಕ ತಪಸ್ಸೆನ್ನುವರು. ಸತ್ಯವನ್ನು ನುಡಿಯುವುದು ಮೊದ ಮೊದಲು ಕಠಿಣವಾಗಿ ತೋರಿದರೂ ಅಭ್ಯಾಸದ ಬಲದಿಂದ ಅದನ್ನು ಸಾಧಿಸಬಹುದು. ನಮ್ಮ ರಾಷ್ಟ್ರದ ಧ್ಯೇಯವಾಕ್ಯವೇ 'ಸತ್ಯಮೇವ ಜಯತೇ' ಎಂದಿರುವಾಗ ಈ ರಾಷ್ಟ್ರದ ಜನತೆ ಸತ್ಯವನ್ನು ನುಡಿಯದೇ ಹೋದರೆ ಆ ಧ್ಯೇಯವಾಕ್ಯಕ್ಕೆ ಯಾವುದೇ ಅರ್ಥವಿರುವದಿಲ್ಲ. ಅನಾವಶ್ಯಕವಾಗಿ ಸುಳ್ಳು ಹೇಳುವ ಪ್ರವೃತ್ತಿಯು ಸಮಾಜದಲ್ಲಿ ಬೆಳೆಯುತ್ತ ಬಂದಿದೆ. ಎಲ್ಲಿಯವರೆಗೆ ಪ್ರತಿಯೊಬ್ಬರೂ ಮನಃಪೂರ್ವಕವಾಗಿ ಸತ್ಯನಿಷ್ಠರಾಗುವದಿಲ್ಲವೋ ಅಲ್ಲಿಯವರೆಗೆ ಈ ಅಸತ್ಯ ವ್ಯವಹಾರದ ಮೇಲೆ ನಿಯಂತ್ರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅನಾವಶ್ಯಕ ಮಾತುಗಳನ್ನು ಬೆಳೆಸದೆ ಆವಶ್ಯಕವಾಗಿರುವ ಮತ್ತು ಸತ್ಯವಾಗಿರುವ ಮಾತುಗಳನ್ನೇ ಪ್ರತಿಯೊಬ್ಬರು ಬಳಸಬೇಕು. ಇದುವೇ ವಾಚಕ ತಪಸ್ಸು.

ದೇವರನ್ನು ಸ್ಮರಿಸುವುದು ಮತ್ತು ಜಗತ್ತಿನ ಜೀವಿಗಳ ಬಗ್ಗೆ ಸದ್ಭಾವನೆಯನ್ನು ತಾಳುವುದು ಮಾನಸಿಕ ತಪವೆಂದು ಕರೆಯಲ್ಪಡುವುದು. ನಮಗೆ ಯಾರಿಗೂ ಏನನ್ನೂ ಕೊಡುವುದಾಗದಿದ್ದರೂ ಅವರ ಬಗ್ಗೆ ಒಳ್ಳೆಯ ಭಾವನೆಗಳನ್ನಾದರೂ ತಾಳಿಕೊಂಡಿರಬೇಕು. ಹೀಗೆ ಈ ಪೂರ್ವದಲ್ಲಿ ಹೇಳಿದ ರೀತಿಯಲ್ಲಿ ಯಾವಾತನು ಕಾಯಿಕ, ವಾಚಿಕ

ಮತ್ತು ಮಾನಸಿಕ ತಪಸ್ಸಿನಲ್ಲಿ ನಿಷ್ಠೆಯುಳ್ಳವನಾಗಿರುವನೋ ಅವನೇ ಉತ್ತಮ ಶಿಷ್ಯನೆನಿಸಿ ಕೊಳ್ಳುವನು. ಯಾರಲ್ಲಿ ಸಹನೆ ಮಾಡಿಕೊಳ್ಳುವ ಶಕ್ತಿ ಇರುವುದಿಲ್ಲವೋ ಅವನಿಂದ ಯಾವ ತಪಸ್ಸೂ ಸಹ ಮಾಡಲು ಸಾಧ್ಯವಾಗುವುದಿಲ್ಲ. ನಮ್ಮ ಭಾರತೀಯ ಪರಂಪರೆ ಯಲ್ಲಿ ಅದೆಷ್ಟೋ ಜನ ಶಿಷ್ಯರು ಗುರುವಿನ ಕಠೋರವಾದ ಪರೀಕ್ಷೆಗೊಳಗಾಗಿ ಆ ಪರೀಕ್ಷೆಯಲ್ಲಿ ತಮ್ಮಲ್ಲಿರುವ ಸಹನ ಶಕ್ತಿಯ ಮುಖಾಂತರವಾಗಿಯೇ ತೇರ್ಗಡೆಯನ್ನು ಹೊಂದಿದ ಉಪಮನ್ಯು ಮತ್ತು ಉದ್ದಾಲಕ ಮುಂತಾದ ಮಹರ್ಷಿಗಳ ಕಥೆಗಳು ಪ್ರಸಿದ್ಧವಾಗಿವೆ.

ಶಿಷ್ಯನು ತಪಶ್ಶೀಲನಾಗಿರುವಂತೆ ಸಮದರ್ಶಿಯೂ ಆಗಿರಬೇಕು. ಸಮದರ್ಶಿತ್ವದ ಅಭಾವದಿಂದಲೇ ಈ ಲೋಕದಲ್ಲಿ ಅನಂತ ಉಪದ್ರವಗಳು ಉಂಟಾಗುತ್ತಿರುತ್ತವೆ. ಲೌಕಿಕ ಜೀವನದಲ್ಲಿ ಅತ್ತೆ–ಸೊಸೆ, ಅಣ್ಣ–ತಮ್ಮ ಮತ್ತು ತಂದೆ–ಮಗ ಮುಂತಾದವರಲ್ಲಿ ಆಗುತ್ತಿರುವ ಈ ಸಮದರ್ಶಿತ್ವದ ಅಭಾವವೇ ಕಾರಣವಾಗಿರುತ್ತದೆ. ಲೌಕಿಕ ಜೀವನ ದಲ್ಲಿಯೂ ಸಹ ನಾವು ಸುಖವಾಗಿ ಬದುಕಬೇಕಾದರೆ ಸಮದೃಷ್ಟಿಯು ಪರಮಾವಶ್ಯಕ ವಾದುದು. ಶಿವನು ಜಗತ್ತಿನ ಜೀವಿಗಳಿಗೆ ಈ ಸಮದರ್ಶಿತ್ವವನ್ನು ಕಲಿಸುವುದಕ್ಕಾಗಿಯೇ ಪಂಚಮಹಾಭೂತಗಳನ್ನು ಸೃಷ್ಟಿಸಿದ್ದಾನೆ. ಇವುಗಳು ಯಾರ ಜೊತೆಗೂ ಭಿನ್ನ–ಭೇದ ವನ್ನು ಮಾಡುವುದಿಲ್ಲ. ಸರ್ವರಿಗೂ ಸಮಾನವಾಗಿಯೇ ಇರುತ್ತವೆ. ಸೂಸುವ ಗಾಳಿ, ಹರಿಯುವ ನೀರು, ಸೂರ್ಯ–ಚಂದ್ರಾದಿಗಳ ಪ್ರಕಾಶಗಳು ವ್ಯಕ್ತಿವಿಶೇಷವನ್ನುದ್ದೇಶಿಸಿ ಪಕ್ಷಪಾತವನ್ನು ಮಾಡುವುದಿಲ್ಲ. ಆದ್ದರಿಂದ ಪರಮಾತ್ಮನ ಜ್ಞಾನವನ್ನು ಪಡೆಯುವ ಶಿಷ್ಯನಲ್ಲಿಯೂ ಸಹ ಈ ಸಮದರ್ಶಿತತ್ವವು ಬೇಕಾಗುವುದು. ಜಗತ್ತಿನ ಜೀವಿಗಳನ್ನೆಲ್ಲ ಸಮಾನವಾಗಿ ನೋಡುವುದರ ಜೊತೆಗೆ ಗುರು ಹಾಗೂ ದೇವರನ್ನು ಸಹ ಇವನು ಸಮಾನವಾಗಿಯೇ ನೋಡುತ್ತಾನೆ. ಹೀಗೆ ಶಾಂತನೂ, ದಾಂತನೂ, ಸತ್ಯವಾದಿಯೂ; ಸಮದರ್ಶಿಯೂ ಮತ್ತು ಗುರು ಹಾಗೂ ದೇವರಲ್ಲಿ ಅಭೇದ ಬುದ್ಧಿಯುಳ್ಳವನು ಉತ್ತಮ ಶಿಷ್ಯನೆಂದು ಪೂಜ್ಯಪಾದರು ಅಪ್ಪಣೆಕೊಡಿಸಿದ್ದಾರೆ. ಇಂತಹ ಸದ್ಗುಣ ಸಂಪನ್ನನೇ ಗುರು ಕೃಪೆಗೆ ಪಾತ್ರನಾಗುವನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ಅಕ್ಟೋಬರ, ೧೯೯೪.
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)



ಆಶೀರ್ವಚನ-೩

# ಶಿಷ್ಯಸ್ಥಲ

ಧರ್ಮಾಭಿಮಾನಿಗಳೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯ ನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನ ಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾ ಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲವಾದ ಶಿಷ್ಯಸ್ಥಲದ ಬಗ್ಗೆ ಕಳೆದೆರಡು ದಿನಗಳಿಂದ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶಿಷ್ಯಸ್ಥಲದಲ್ಲಿ ಶಿಷ್ಯನಲ್ಲಿರಬೇಕಾದ ಉತ್ಕೃಷ್ಟಗಳಾದ ಗುಣಗಳ ಬಗ್ಗೆ ನಿರೂಪಿಸುತ್ತ ಇಂದು ಅವನಲ್ಲಿರುವ ಗುರು ಹಾಗೂ ದೇವರ ಬಗೆಗಿನ ಅಭೇದ ದೃಷ್ಟಿಯನ್ನು ಕುರಿತು–

ಗುರುಮೇವ ಶಿವಂ ಪಶ್ಯೇಚ್ಛಿವಮೇವ ಗುರುಂ ತಥಾ ।
ನೈತಯೋರಂತರಂ ಕಿಂಚಿದ್ವಿಜಾನೀಯಾದ್ವಿಚಕ್ಷಣಃ ॥

(ಸಿ. ಶಿ. ೧೩–೬೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರುವನ್ನು ಶಿವನನ್ನಾಗಿಯೂ ಮತ್ತು ಶಿವನನ್ನು ಗುರುವನ್ನಾಗಿಯೂ ಭಾವಿಸುತ್ತಿರುವ ವಿಚಕ್ಷಣನಾದ ಶಿಷ್ಯನಿಗೆ ಅವರೀರ್ವರಲ್ಲಿ ಯಾವುದೇ ವಿಧವಾದ ಭೇದವು ಕಂಡು ಬರುವುದಿಲ್ಲ.

ಉತ್ತಮನಾದ ಶಿಷ್ಯನು ಗುರು ಹಾಗೂ ದೇವರಲ್ಲಿ ಭೇದವನ್ನು ಮಾಡುವುದಿಲ್ಲ. ಅವನು ಗುರುವಿನಲ್ಲಿ ದೇವನನ್ನು ಮತ್ತು ದೇವರಲ್ಲಿ ಗುರುವನ್ನೂ ಕಾಣುತ್ತಿರುತ್ತಾನೆ. ಮಾಯಾಶಕ್ತಿ ವಿಶಿಷ್ಟನಾದ ಶಿವನು ಯಾರಿಗೂ ದೃಷ್ಟಿಗೋಚರನಾಗುವುದಿಲ್ಲ. ಆದರೆ ಅವನೇ ತನ್ನ ಮಾಯಾಶಕ್ತಿಯನ್ನು ಬಿಟ್ಟು, ಗುರುವಾಗಿ ಬಂದಾಗ ಸರ್ವರಿಗೂ ಪ್ರತ್ಯಕ್ಷ ವಾಗಿ ತೋರುತ್ತಾನೆ. ಅಂತೆಯೇ ಗುರುವೆಂದರೆ ಪ್ರತ್ಯಕ್ಷವಾಗಿ ತೋರುವ ದೇವರೆಂತಲೇ ಭಾವಿಸಬೇಕು. ಯಾರು ಯಾರನ್ನು ಅಥವಾ ಯಾವುದನ್ನು ಅತಿಯಾಗಿ ಪ್ರೀತಿಸುತ್ತಾ ರೆಯೋ ಅವರಿಗೆ ಅವರೇ ಅಥವಾ ಅದುವೇ ದೇವರಾಗಿರುತ್ತದೆ. ಲೋಭಿಗೆ ಧನವೂ,

ಕಾಮಿಗೆ ಸ್ತ್ರೀಯೂ ಸತ್ಪುತ್ರನಿಗೆ ಮಾತಾ-ಪಿತರೂ ಪತಿವ್ರತೆಗೆ ಪತಿಯೂ ದೇವರಾಗಿರುವಂತೆ ಉತ್ತಮನಾದ ಶಿಷ್ಯನಿಗೆ ಗುರುವೇ ದೇವನಾಗಿರುತ್ತಾನೆ.

ಗುರುವು ಶ್ರೇಷ್ಠನಾದ ದೇವನೂ ಅಹುದು. ಶಿಷ್ಯನಾದವನಿಗೆ ಗುರುವಿನ ಹೊರತು ಅನ್ಯ ದೈವವಿರುವುದೇ ಇಲ್ಲ. ಅಂತೆಯೇ-

ಗುರುಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।
ಗುರುಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥

ಈ ವಿಧವಾಗಿ ಗುರು ಮಹಿಮೆಯು ಪ್ರತಿಪಾದಿಸಲ್ಪಟ್ಟಿರುತ್ತದೆ. ಶಿಷ್ಯೋತ್ತಮನಿಗೆ ಗುರುವೇ ಬ್ರಹ್ಮನು, ಗುರುವೇ ವಿಷ್ಣುವು, ಗುರುವೇ ಮಹೇಶ್ವರನು. ಇಷ್ಟೇ ಅಲ್ಲ ಅವನು ಸಾಕ್ಷಾತ್ ಪರಬ್ರಹ್ಮನೂ ಸಹ ಆಗಿರುತ್ತಾನೆ. ಸದ್ಗುರುವು ಶಿಷ್ಯನಿಗೆ ದೀಕ್ಷಾದಿ ಸಂಸ್ಕಾರಗಳನ್ನು ಕೊಟ್ಟು, ಅವನ ಮನಸ್ಸಿನಲ್ಲಿ ಉತ್ತಮ ವಿಚಾರಗಳನ್ನು ಸೃಷ್ಟಿಸುವ ಮೂಲಕ ಅವನು ಬ್ರಹ್ಮನಾಗಿರುತ್ತಾನೆ. ತನ್ನ ಶಿಷ್ಯನನ್ನು ದುರ್ಮಾರ್ಗದಿಂದ ಸಂರಕ್ಷಿಸುವ ಕಾರಣ ಅವನು ವಿಷ್ಣುವೂ ಆಗಿರುತ್ತಾನೆ. ಇದೂ ಅಲ್ಲದೆ ಶಿಷ್ಯನ ಮನಸ್ಸಿನಲ್ಲಿಯ ದುರ್ಭಾವನೆಗಳನ್ನು ಸಂಹಾರಮಾಡೋಣದರಿಂದ ಅವನು ಮಹೇಶ್ವರನೂ ಅರ್ಥಾತ್ ರುದ್ರನೂ ಸಹ ಆಗಿರುತ್ತಾನೆ. ಇಷ್ಟೇ ಅಲ್ಲ ತನ್ನ ದಿವ್ಯ ಉಪದೇಶದ ಮೂಲಕ ಶಿಷ್ಯನಿಗೆ ಪರಬ್ರಹ್ಮದ ಅರಿವನ್ನು ಮಾಡಿಕೊಡೋಣದರಿಂದ ಅವನು ಸಾಕ್ಷಾತ್ ಪರಬ್ರಹ್ಮ ಸ್ವರೂಪನೂ ಸಹ ಆಗಿರುತ್ತಾನೆ.

ಅಜ್ಞಾನರೂಪಿ ಅಂಧಕಾರದಿಂದ ಮುಚ್ಚಲ್ಪಟ್ಟ ಶಿಷ್ಯನ ನೇತ್ರವನ್ನು ಜ್ಞಾನವೆಂಬ ಅಂಜನವನ್ನು ಹಚ್ಚುವುದರ ಮೂಲಕ ಉನ್ಮೀಲನವನ್ನು ಮಾಡುವವನೇ ಸದ್ಗುರುವು. ಶಿಷ್ಯನಾದವನು ಗುರುವಿನ ಮೂರ್ತಿಯನ್ನೇ ಧ್ಯಾನಿಸಬೇಕು. ಗುರುವಿನ ಪಾದಗಳೇ ಅವನಿಗೆ ಪೂಜ್ಯವಾದವುಗಳು. ಗುರುವಿನ ವಾಕ್ಯವೇ ಶಿಷ್ಯನಿಗೆ ಮಂತ್ರವಾಗಿ ತೋರುವುದು. ಇದೂ ಅಲ್ಲದೆ ಗುರುವಿನ ಕೃಪೆಯೇ ಶಿಷ್ಯನ ಮುಕ್ತಿಗೆ ಮೂಲ ಕಾರಣವಾಗಿರುತ್ತದೆ.

ಮಹಾರಾಷ್ಟ್ರದ ನಾಂದೇಡ ಜಿಲ್ಹೆಯ ಕಂಧ್ಹಾರ ಎಂಬ ಊರಲ್ಲಿ ಉರಿಲಿಂಗ ದೇವರು ಎಂಬ ಓರ್ವ ವೀರಶೈವ ಸ್ವಾಮಿಗಳಿದ್ದರು. ಅವರು ಆ ಭಾಗದ ಅನೇಕ ಶಿಷ್ಯರಿಗೆ ದೀಕ್ಷಾ ಸಂಸ್ಕಾರವನ್ನು ಮಾಡಿ ಅವರನ್ನೆಲ್ಲ ಧರ್ಮ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತಿದ್ದರು. ಒಮ್ಮೆ ತಮ್ಮ ಮಠದಲ್ಲಿ ದೀಕ್ಷಾ ಕಾರ್ಯಕ್ರಮವನ್ನಿಟ್ಟುಕೊಂಡು ಇಡೀ ರಾತ್ರಿಯಲ್ಲಿ ಭಕ್ತರಿಗೆ ಸಂಸ್ಕಾರ ಕೊಡುತ್ತ ಅವರಿಗೆಲ್ಲ ಉಪದೇಶವನ್ನು ಮಾಡುತ್ತಿದ್ದರು. ಅದೇ ಸಂದರ್ಭದಲ್ಲಿ ಪೆದ್ದಿ ಎಂಬ ಹೆಸರಿನ ಓರ್ವ ಕಳ್ಳನು ಕಳ್ಳತನ ಮಾಡುವುದಕ್ಕಾಗಿ ಅವರ ಮಠಕ್ಕೆ ಬಂದಿದ್ದನು. ಮಠದ ತುಂಬೆಲ್ಲ ಜನರು ತುಂಬಿರುವುದನ್ನು ಕಂಡು ಮಾಳಿಗೆಯನ್ನೇರಿ ಬೆಳಕಿಂಡಿಯ ಮುಖಾಂತರ ಒಳಗೆ ನಡೆದಿರುವ ದೀಕ್ಷೆಯ ಕಾರ್ಯ ಕಲಾಪಗಳನ್ನು ನೋಡುತ್ತ ಕುಳಿತುಕೊಂಡನು. ಆಗ ಉರಿಲಿಂಗದೇವರು ಪ್ರತಿಯೊಬ್ಬ ಶಿಷ್ಯನ ವಾಮ ಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿರಿಸಿ- ''ಇದೋ ಇದಕ್ಕೆ ಇಷ್ಟಲಿಂಗವೆಂದು ಕರೆಯುತ್ತಾರೆ ಇದನ್ನು ದೇಹದ ಮೇಲೆ

ಧರಿಸಿಕೊಂಡಿದ್ದು, ದಿನಾಲೂ ಪೂಜಿಸಿದರೆ ನಿಮ್ಮ ಅನಿಷ್ಟಗಳೆಲ್ಲ ದೂರಾಗಿ ನಿಮಗೆಲ್ಲ ಇಷ್ಟಾರ್ಥಗಳು ದೊರಕೊಳ್ಳುವುವು'' ಎಂಬುದಾಗಿ ಉಪದೇಶಿಸುತ್ತಿದ್ದರು. ಈ ದೃಶ್ಯ ವನ್ನು ಬೆಳಗಾಗುವವರೆಗೆ ಕಂಡ ಪೆದ್ದಿಯು ಇದೇನಾಶ್ಚರ್ಯ ! ಇವರು ಕೊಡುವ ಲಿಂಗವನ್ನು ಧರಿಸಿದರೆ ಮತ್ತು ಅದನ್ನು ಪೂಜಿಸಿದರೆ ಇಷ್ಟಾರ್ಥ ಸಿದ್ಧಿಸುವುದೆಂದರೆ ಯಾಕೆ ಈ ನಿಕೃಷ್ಟವಾದ ಕಳ್ಳತನ ಮಾಡುವುದು ? ನಾನೂ ಹೋಗಿ ಇವರಿಂದ ಒಂದು ಲಿಂಗ ವನ್ನೇ ಪಡೆದುಕೊಳ್ಳಬೇಕು ಎಂಬುದಾಗಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಕಳ್ಳತನದ ವಿಚಾರವನ್ನು ಕೈಬಿಟ್ಟು, ಬೆಳಗಿನ ಜಾವ ಮಾಳಿಗೆಯಿಂದ ಕೆಳಗಿಳಿದು ಬಂದು ಗುರುಗಳಿಗೆ ಸಾಷ್ಟಾಂಗವೆರಗಿ, ತನಗೂ ಲಿಂಗ ಹಾಗೂ ಮಂತ್ರವನ್ನು ಕೊಡಬೇಕೆಂಬುದಾಗಿ ಪ್ರಾರ್ಥಿಸಿಕೊಂಡನು. ಆಗ ಗುರುಗಳು ಇವನ ಬಗ್ಗೆ ಸರಿಯಾಗಿ ಪರಿಚಯವಿರದಿದ್ದ ಕಾರಣ ಇಂಥ ಹೀನ ಕುಲದವನಿಗೆ ಹೇಗೆ ದೀಕ್ಷೆ ಮಾಡಬೇಕೆಂದು ವಿಚಾರಿಸಿ ನಾಳೆ ಬಾ, ನಾಡದು ಬಾ ಎಂದು ಹೊರಳಿ ಹೊರಳಿ ಕಳಿಸುತ್ತಿದ್ದರು. ಅದೆಷ್ಟೇ ಸಾರೆ ಮರಳಿ ಕಳಿಸಿದರೂ ಪುನಃ ಅವರು ಹೇಳಿದ ಸಮಯಕ್ಕೆ ಸರಿಯಾಗಿ ಬಂದು ಹಾಜರಾಗುತ್ತಿದ್ದನು. ಒಂದು ಸಾರೆ ಇವರು ಹೊಲದಲ್ಲಿರುವಾಗ ಈ ಪೆದ್ದಿಯು ಬಂದು ಗುರುವೇ ! ನನಗೆ ಲಿಂಗವನ್ನು ದಯಪಾಲಿಸಿ ಮಂತ್ರವನ್ನು ಬೋಧಿಸಬೇಕೆಂಬುದಾಗಿ ಕೇಳಿಕೊಳ್ಳಲು, ಬೇಸತ್ತ ಗುರುಗಳು ಇವನೇನು ನನ್ನ ಬೆನ್ನು ಬಿಡುವ ಹಾಗೆ ಕಾಣುವದಿಲ್ಲ, ಏನಾದರೂ ಮಾಡಿ ಪುನಃ ನನ್ನಲ್ಲಿಗೆ ಬಾರದಂತೆ ಮಾಡಬೇಕೆಂಬುದಾಗಿ ವಿಚಾರಿಸಿ ಅಲ್ಲಿಯೇ ಹೊಲ ದೊಳಗಿನ ಒಂದು ಗುಂಡುಕಲ್ಲನ್ನು ತೆಗೆದುಕೊಂಡು ಅವನತ್ತ ಬೀಸಿ ಒಗೆದು ''ಘೇ ದಗಡ ಜಾ'' ಎಂಬುದಾಗಿ ನುಡಿದರು. ಗುರುವಿನ ಹಸ್ತದಿಂದ ಬಂದ ಆ ಕಲ್ಲನ್ನು ಲಿಂಗವೆಂದು ಭಾವಿಸಿ, ಅವರ ಮುಖದಿಂದ ಹೊರ ಹೊರಟ ಆ ಶಬ್ದವನ್ನೇ ಮಂತ್ರವೆಂದು ತಿಳಿದು, ಅತೀವ ಸಂತುಷ್ಟನಾಗಿ ಆ ಗುಂಡುಕಲ್ಲನ್ನು ತೆಗೆದುಕೊಂಡು ಗುರುವಿಗೆ ಮತ್ತೊಮ್ಮೆ ಸಾಷ್ಟಾಂಗವೆರಗಿ ಅತ್ಯಂತ ಆನಂದಿತನಾಗಿ ತನ್ನ ಮನೆಗೆ ಮರಳಿದನು. ಲಿಂಗ ಹಾಗೂ ಮಂತ್ರವನ್ನು ಪಡೆಯಬೇಕೆನ್ನುವ ಅತಿ ವ್ಯಾಕುಲತೆಯಿಂದ ಅನೇಕ ದಿನಗಳಿಂದ ವ್ಯಗ್ರವಾಗಿದ್ದ ಅವನ ಮನಸ್ಸಿಗೆ ಅಂದು ಪರಮ ಶಾಂತಿಯು ಲಭಿಸಿತು. ಆತನು ದಿನಾಲೂ ಭಕ್ತಿಯಿಂದ ಆ ಕಲ್ಲನ್ನೇ ಲಿಂಗವೆಂದು ಭಾವಿಸಿ ಪೂಜಿಸ ತೊಡಗಿದನಲ್ಲದೆ ''ಘೇ ದಗಡ ಜಾऽऽ'' ಎಂಬ ಗುರುವಾಕ್ಯವನ್ನೇ ಮಂತ್ರರೂಪವಾಗಿ ಜಪಿಸಿತೊಡಗಿ ದನು. ಇವನಲ್ಲಿರುವ ಅಪಾರವಾದ ಶ್ರದ್ಧೆಯಿಂದಾಗಿ ಇವನ ಆ ಮಂತ್ರವು ಸಿದ್ಧಿಯ ಸ್ಥಿತಿಯನ್ನು ಪಡೆದುಕೊಂಡಿತು.

ಒಮ್ಮೆ ಆ ಕಂದ್ಹಾರ ಪರಿಸರದಲ್ಲಿ ಮಳೆಯ ಅಭಾವದಿಂದಾಗಿ' (ಅಕಾಲವು) ದುಷ್ಕಾಲವು ಪ್ರಾಪ್ತವಾಗಿ ಜನರೆಲ್ಲ ನೀರಿಗಾಗಿ ಹಲುಬತೊಡಗಿದರು. ಆಗ ಆ ಪರಿಸರದ ರಾಜನೋರ್ವನು ನೀರಿಗಾಗಿ ಕೆರೆಯನ್ನು ಕಡಿಸತೊಡಗಿದನು. ಜನರೆಲ್ಲ ಸೇರಿ ಭೂಮಿ ಯನ್ನು ಅಗೆಯುತ್ತಿರುವಾಗ ಒಂದು ಬೃಹದಾಕಾರದ ಬಂಡೆಗಲ್ಲು ಕಾಣಿಸಿಕೊಂಡಿತು ಅದನ್ನು ಒಡೆದು ತೆಗೆಯುವುದು ಅಸಾಧ್ಯವೆಂದೆನಿಸಿದಾಗ ರಾಜ ಹಾಗೂ ಊರಿನ ಜನರೆಲ್ಲ ಉರಿಲಿಂಗದೇವರ ಕಡೆಗೆ ಬಂದು ಏನು ಮಾಡಬೇಕೆಂಬುದಾಗಿ ಕೇಳಿ ಕೊಂಡರು. ಆಗ ಆ ಉರಿಲಿಂಗ ದೇವರೂ ಸಹ ಏನು ಮಾಡಬೇಕೆಂಬುದು ತಿಳಿಯದೇ

ದಿಙ್ಮೂಢರಾಗಿ ಕುಳಿತುಕೊಂಡರು. ಕೆರೆಯ ಈ ವಾರ್ತೆಯು ಆ ಪೆದ್ದಿಗೆ ತಿಳಿದಾಗ ಅವನು ಓಡುತ್ತ ಬಂದು ಗುರುಗಳಿಗೆ ಸಾಷ್ಟಾಂಗವೆರಗಿ, ತಾವು ಅಪ್ಪಣೆ ಕೊಟ್ಟರೆ ಈ ಬಂಡೆಗಲ್ಲನ್ನು ತೆಗೆಯುತ್ತೇನೆಂಬುದಾಗಿ ಹೇಳಿದನು. ಇವನ ಈ ಮಾತನ್ನು ಕೇಳಿ ಎಲ್ಲರಿಗೂ ಆಶ್ಚರ್ಯ ! ಆದರೂ ಗುರುಗಳು ಇವನು ಏನು ಮಾಡುತ್ತಾನೆ ಎಂಬುದನ್ನು ನೋಡಲೋಸುಗ– ''ಆಗಲಿ ಇದನ್ನು ಹೇಗೆ ತೆಗೆಯುತ್ತೀಯೋ ನೋಡೋಣ ತೆಗೆ'' ಎಂದು ಅಪ್ಪಣೆ ಕೊಟ್ಟರು. ಆಗ ಆ ಪೆದ್ದಿಯು ಗುರುವಿನ ಹಸ್ತದಿಂದ ದೊರೆತ ಗುಂಡುಕಲ್ಲನ್ನು ಬಂಡೆಗಲ್ಲ ಮೇಲಿರಿಸಿ ತಾನು ಜಪಿಸುತ್ತಿರುವ ''ಘೇಽಽ ದಗಡ ಜಾ'' ಎಂಬ ಮಂತ್ರವನ್ನು ಉಚ್ಚರಿಸಿದಾಗ ಒಂದು ಕ್ಷಣಾರ್ಧದಲ್ಲಿ ಆ ಬಂಡೆಗಲ್ಲು ಮೇಲೆದ್ದು ಬಹುದೂರದಲ್ಲಿ ಹೋಗಿ ಬಿದ್ದಿತು ಹಾಗೂ ಇವನಿರಿಸಿದ ಆ ಗುಂಡುಕಲ್ಲು ಬಂಡೆಗಲ್ಲನ್ನು ದೂರ ಎಸೆದು ಮರಳಿ ಆತನ ಹತ್ತಿರವೇ ಬಂದಿತು. ಆ ಬಂಡೆಗಲ್ಲು ಕಿತ್ತು ಹೋದೊಡನೆ ಕೆಳಗಿನ ಸಿಹಿಯಾದ ನೀರಿನ ಬೃಹದ್ ಬುಗ್ಗೆಯು ಚಿಮ್ಮತೊಡಗಿತು. ಈ ದೃಶ್ಯವನ್ನು ಕಂಡು ಎಲ್ಲರಿಗೂ ಸಂತೋಷವೇ ಸಂತೋಷ. ಆ ಪೆದ್ದಿಯ ಗುರುಗಳಾದ ಉರಿಲಿಂಗ ದೇವರಿಗಂತೂ ಎಲ್ಲಿಲ್ಲದ ಪರಮ ಹರ್ಷವಾಯಿತು. ಶಿಷ್ಯನ ಮನದಲ್ಲಿರುವ ನಿಷ್ಠೆಯನ್ನು ಕಂಡು ಅವನನ್ನು ಮನಸಾ ಮೈದಡವಿ ಆಶೀರ್ವದಿಸಿದರು. ಒಬ್ಬ ಸಾಮಾನ್ಯವಾದ ವ್ಯಕ್ತಿಯು ಗುರುಕೃಪೆಯಿಂದ ಮಹಾನ್ ಸಂತನಾದನಷ್ಟೇ ಅಲ್ಲ ಶ್ರೇಷ್ಠ ವಚನಕಾರನೂ ಆಗಿ ಹೋದನು. ಅವನು ಬರೆದ ಉರಿಲಿಂಗಪೆದ್ದಿಯ ವಚನಗಳು ಇಂದಿಗೂ ಕೂಡಾ ವಚನ ಸಾಹಿತ್ಯದಲ್ಲಿ ಮಹತ್ತ್ವಪೂರ್ಣವಾದ ಸ್ಥಾನವನ್ನು ಪಡೆದಿವೆ.

ಇದೊಂದು ಕಾಲ್ಪನಿಕ ಕಥೆಯಾಗಿರದೆ ಸತ್ಯ ಘಟನೆಯಾಗಿರುತ್ತದೆ. ಅಂತೆಯೇ ಶಿಷ್ಯನಾದವನಿಗೆ ಗುರುವೇ ಸರ್ವಸ್ವವು. ಅವನ ವಾಕ್ಯಗಳೇ ಮಂತ್ರಗಳು. ಹೀಗೆ ಗುರುವಿನಲ್ಲಿ ಅನನ್ಯವಾದ ಭಕ್ತಿಯುಳ್ಳ ಆ ಶಿಷ್ಯನು ದೇವ ಹಾಗೂ ಗುರುವಿನಲ್ಲಿ ಒಂದಿಷ್ಟೂ ಅಂತರವನ್ನು ಮಾಡದೆ ಗುರುವಿನಲ್ಲಿ ದೇವರನ್ನು, ದೇವರಲ್ಲಿ ಗುರುವನ್ನೂ ಸದಾ ಕಾಣುತ್ತಿರುತ್ತಾನೆ. ಇದುವೇ ಉತ್ತಮ ಶಿಷ್ಯನ ಲಕ್ಷಣವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶಿಷ್ಯಸ್ಥಲವನ್ನೇ ಮುಂದುವರೆಸುತ್ತ ಪುನಃ–

> ಶಿವಾಚಾರೇ ಶಿವಧ್ಯಾನೇ ಶಿವಜ್ಞಾನೇ ಚ ನಿರ್ಮಲೇ ।
> ಗುರೋರಾದೇಶಮಾತ್ರೇಣ ಪರಾಂ ನಿಷ್ಠಾಮವಾಪ್ನುಯಾತ್ ॥
>
> (ಸಿ. ಶಿ. ೧೭–೬೨)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿಷ್ಯನು ಶಿವಾಚಾರ, ಶಿವಧ್ಯಾನ ಮತ್ತು ನಿರ್ಮಲವಾದ ಶಿವಜ್ಞಾನಗಳ ವಿಷಯದಲ್ಲಿ ಗುರುವಿನ ಅಪ್ಪಣೆಯ ಮೇರೆಗೆ ಅತ್ಯಂತ ವಿಶ್ವಾಸವುಳ್ಳವನಾಗಿರಬೇಕು.

ಶಿಷ್ಯನಾದವನು ಗುರುವಿನ ಆದೇಶವನ್ನು ಶಿರಸಾವಹಿಸಿ ಪರಿಪಾಲಿಸಬೇಕಾಗುವುದು. ಸದ್ಗುರುವು ಶಿಷ್ಯನಿಗೆ ಅನೇಕ ವಿಷಯಕವಾಗಿ ಉಪದೇಶವನ್ನು ಮಾಡುತ್ತಿರುತ್ತಾನೆ. ಶಿವನ ವಿಷಯಕವಾದ ಪರಿಪೂರ್ಣ ಜ್ಞಾನವಾಗಬೇಕಾದರೆ

ಶಿವಾಚಾರ, ಶಿವಧ್ಯಾನ ಮತ್ತು ಶಿವಜ್ಞಾನಗಳ ಅರಿವನ್ನು ಗುರುವಿನಿಂದ ಪಡೆಯಬೇಕು. ವೀರಶೈವ ಸಿದ್ಧಾಂತದಲ್ಲಿ ಸಾಧಕನ ಅಂತರಂಗ ಮತ್ತು ಬಹಿರಂಗ ಪರಿಶುದ್ಧಿಗಾಗಿ ಐದು ವಿಧವಾದ ಆಚಾರಗಳು ಪ್ರತಿಪಾದಿಸಲ್ಪಟ್ಟಿವೆ. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರಗಳೇ ಆ ಐದು ಆಚಾರಗಳು. ಇವುಗಳಿಗೆ ಪಂಚಾಚಾರ ವೆಂಬುದಾಗಿ ಕರೆಯುತ್ತಾರೆ. ಇವುಗಳಲ್ಲಿ ಶಿವಜ್ಞಾನಕ್ಕೆ ಶಿವಾಚಾರವು ವಿಶೇಷ ಸಹಕಾರಿ ಯಾಗಿರುತ್ತದೆ. ಚಂದ್ರಜ್ಞಾನಾಗಮದಲ್ಲಿ–

ಶಿವ ಏವ ಪರಂ ಬ್ರಹ್ಮ ಪಂಚಕೃತ್ಯಪರಾಯಣಃ ।
ನ ತತೋऽನ್ಯಾ ಗತಿರಿತಿ ಶಿವಾಚಾರೋಹಿ ಕೀರ್ತಿತಃ ॥

ಎಂಬುದಾಗಿ ಶಿವಾಚಾರದ ಲಕ್ಷಣವು ಪ್ರತಿಪಾದಿಸಲ್ಪಟ್ಟಿದೆ. ತಾತ್ಪರ್ಯವೇನೆಂದರೆ, ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ನಿರ್ವಹಿ ಸುತ್ತಿರುವ ಶಿವನೇ ಪರಬ್ರಹ್ಮಸ್ವರೂಪನಾಗಿದ್ದಾನೆ. ಅವನ ಹೊರತಾಗಿ ನನಗೆ ಬೇರಾವ ಗತಿಯಿರುವುದಿಲ್ಲ ಎಂಬ ಉತ್ಕೃಷ್ಟವಾದ ಮನೋಭಾವನೆಯೇ ಶಿವಾಚಾರವೆಂದು ಕರೆಯಲ್ಪಡುತ್ತದೆ. ಸದ್ಗುರುವು ಉಪದೇಶಿಸಿದ ಈ ಶಿವಾಚಾರದಲ್ಲಿ ಶಿಷ್ಯನು ನಿಷ್ಠೆ ಯುಳ್ಳವನಾಗಿ ಅದರಂತೆ ಆಚರಿಸಬೇಕು. ಇದೇ ಪ್ರಕಾರವಾಗಿ ಶಿವನ ಧ್ಯಾನ ವಿಷಯಕ ವಾಗಿ ಮತ್ತು ಶಿವಾದ್ವೈತ ಜ್ಞಾನವಿಷಯಕವಾಗಿ ಗುರುವಿನಿಂದ ಪ್ರಾಪ್ತವಾದ ಉಪದೇಶ ದಲ್ಲಿ ಪರಮ ನಿಷ್ಠೆಯನ್ನು ಶಿಷ್ಯನು ತಾಳಬೇಕಾಗುವುದು. ಒಟ್ಟಿನಲ್ಲಿ ಶಿವಾಚಾರ, ಶಿವಧ್ಯಾನ ಮತ್ತು ಶಿವಜ್ಞಾನಾದಿಗಳ ವಿಷಯದಲ್ಲಿ ಸದ್ಗುರುವು ಏನೇನು ಆದೇಶಾತ್ಮಕ ವಾದ ಉಪದೇಶವನ್ನು ಮಾಡುವನೋ ಅದೆಲ್ಲದರಲ್ಲಿ ಶಿಷ್ಯನು ವಿಶ್ವಾಸವನ್ನು ಹೊಂದಿರ ಬೇಕು ಎಂಬುದೇ ಪೂಜ್ಯಪಾದರ ಆಶಯವಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶಿಷ್ಯ ಸ್ಥಲದಲ್ಲಿ ಗುರುವಿನ ಕೃಪಾಕಟಾಕ್ಷದ ಮಹತ್ತ್ವವನ್ನು ಕುರಿತು ಪುನಃ–

ಬ್ರಹ್ಮಾಂಡಬುದ್ಬುದೋದ್ಭೂತಂ ಮಾಯಾಸಿಂಧುಂ ಮಹತ್ತರಮ್ ।
ಗುರೋಃ ಕವಲಯತ್ಯಾಶು ಕಟಾಕ್ಷವಡವಾನಲಃ ॥

ಗುರೋಃ ಕಟಾಕ್ಷವೇಧೇನ ಶಿವೋ ಭವತಿ ಮಾನವಃ ।
ರಸವೇಧಾದ್ಯಥಾ ಲೋಹೋ ಹೇಮತಾಂ ಪ್ರತಿಪದ್ಯತೇ ॥

(ಸಿ. ಶಿ. ೧೭; ೬೩–೬೪)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಶ್ರೀಗುರುವಿನ ಕರುಣಾ ಕಟಾಕ್ಷವೆಂಬ ವಡವಾಗ್ನಿಯು ಅನೇಕ ಬ್ರಹ್ಮಾಂಡಗಳೆಂಬ ಗುರುಗಳಿಂದ ಕೂಡಿಕೊಂಡಿ ರುವ ಮಹತ್ತರವಾದ ಮಾಯೆಯೆಂಬ ಸಮುದ್ರವನ್ನು ತತ್‌ಕ್ಷಣದಲ್ಲಿಯೇ ಹೀರಿ ಬಿಡುವುದು. ಸಿದ್ಧರಸದ ವೇಧನೆಯಿಂದ ಕಬ್ಬಿಣವು ಬಂಗಾರವಾಗುವಂತೆ ಶ್ರೀ ಗುರುವಿನ ಕರುಣಾಕಟಾಕ್ಷದಿಂದ ಮಾನವನು ಶಿವನೇ ಆಗುತ್ತಾನೆ.

ಸಂಸಾರವೆಂದರೆ ಒಂದು ಬೃಹತ್ತರವಾದ ಸಾಗರವಿದ್ದಂತೆ. ಅನಂತ ಭುವನ ಬ್ರಹ್ಮಾಂಡಗಳೆಲ್ಲ ಈ ಸಾಗರದಲ್ಲಿಯ ಗುರುಳೆಗಳು. ಸಮುದ್ರದಲ್ಲಿ ಪ್ರಾದುರ್ಭವಿಸಿದ

ವಡವಾಗ್ನಿಯು ಸಮುದ್ರವನ್ನೇ ಶೋಷಣೆ ಮಾಡುವಂತೆ ಗುರುಕೃಪೆಯಿಂದ ಶಿಷ್ಯನ ಮನಸ್ಸಿನಲ್ಲಿ ಉದ್ಭವಿಸಿದ ಜ್ಞಾನಾಗ್ನಿಯು ಅನಂತ ಬ್ರಹ್ಮಾಂಡದಿಂದೊಡಗೂಡಿದ ಮಾಯಾಸಾಗರವನ್ನು ಇಲ್ಲದಾಗಿಸುತ್ತದೆ. ಆದ್ದರಿಂದ ಶಿಷ್ಯನ ಅಭ್ಯುದಯದಲ್ಲಿ ಗುರುಕೃಪೆಯ ಪಾತ್ರವು ಬಹುದೊಡ್ಡದಾಗಿರುತ್ತದೆ. ಸಿದ್ಧರಸವನ್ನು ಲೋಹಕ್ಕೆ ಲೇಪಿಸಿದಾಗ ಲೋಹದೊಳಗೆಲ್ಲ ಪ್ರವೇಶಿಸಿದ ಆ ಸಿದ್ಧರಸವು ಲೋಹವನ್ನು ಸುವರ್ಣವನ್ನಾಗಿ ಪರಿವರ್ತಿಸುವುದೊಂದು ವೈಜ್ಞಾನಿಕವಾದ ರಸಾಯನ ಕ್ರಿಯೆಯು. ಇದೇ ಪ್ರಕಾರವಾಗಿ ಯಾರ ಮೇಲೆ ಗುರು–ಕೃಪಾಕಟಾಕ್ಷವು ಸಂಪೂರ್ಣವಾಗಿ ಬೀಳುವುದೋ ಅವನು ಸಾಮಾನ್ಯ ಮನುಷ್ಯನಿದ್ದರೂ ಗುರುವಿನ ಕೃಪಾದೃಷ್ಟಿಯ ಪ್ರಭಾವದಿಂದ ಶಿವಸ್ವರೂಪನೇ ಆಗುತ್ತಾನೆ.

ಓರ್ವ ಕಳ್ಳನು ಕಳ್ಳತನಕ್ಕಾಗಿ ಒಂದು ದಿನ ರಾಜನ ಅರಮನೆಯನ್ನು ಮಧ್ಯರಾತ್ರಿ ಪ್ರವೇಶಿಸಿದನು. ಆಗ ಅರಮನೆಯಲ್ಲಿ ಎಲ್ಲರೂ ನಿದ್ರಿಸುತ್ತಿದ್ದರೂ ಮಹಾರಾಜಾ ಮತ್ತು ಮಹಾರಾಣಿಯರೀರ್ವರೂ ತಮ್ಮ ರಾಜಕುಮಾರಿಯ ವಿವಾಹದ ವಿಷಯಕವಾಗಿ ಪರಸ್ಪರ ಚರ್ಚಿಸುತ್ತ ಮಲಗಿಕೊಂಡಿದ್ದರು. ಆಗ ಕಳ್ಳನು ಅವರೀರ್ವರ ಮಾತುಗಳನ್ನು ಕದ್ದು ಆಲಿಸುತ್ತ ಕುಳಿತಾಗ ಮಹಾರಾಜನು ರಾಣಿಯನ್ನುದ್ದೇಶಿಸಿ– ''ನಮ್ಮ ರಾಜಕುಮಾರಿಯು ಸದ್ಯಃ ಉಪವರಳಾಗಿದ್ದಾಳೆ. ಇವಳು ಬಾಲ್ಯದಿಂದಲೂ ಅಧ್ಯಾತ್ಮ ಸಂಸ್ಕಾರವುಳ್ಳವಳು ಹಾಗೂ ಸಾತ್ವಿಕ ಸ್ವಭಾವದವಳು. ಇವಳಿಗೆ ಯಾವ ರಾಜಕುಮಾರನನ್ನೂ ಮದುವೆಯಾಗುವ ಅಪೇಕ್ಷೆ ಇಲ್ಲ. ಒಬ್ಬ ಉತ್ತಮ ಯೋಗಿಯ ಜೊತೆಗೆ ಇವಳ ವಿವಾಹನ್ನು ಮಾಡಬೇಕಾಗುವುದು''. ಮಹಾರಾಜನ ಈ ನುಡಿಗಳನ್ನು ಕೇಳಿದ ಮಹಾರಾಣಿಯು ''ಪ್ರಭೂ ! ಅಂತಹ ಯೋಗಿ ಪುರುಷನು ಯಾರು ? ಎಲ್ಲಿರುವನು ? ಅವನನ್ನು ಒಪ್ಪಿಸುವ ಬಗೆ ಹೇಗೆ ?'' ಮಹಾರಾಣಿಯ ಈ ಉತ್ಸುಕ ಭರಿತವಾದ ನುಡಿಗಳನ್ನಾಲಿಸಿದ ಮಹಾರಾಜನು ''ಚಿಂತಿಸುವ ಕಾರಣವೇನಿಲ್ಲ ನಮ್ಮ ರಾಜ್ಯದಲ್ಲಿಯೇ ಒಬ್ಬ ಯೋಗಸಿದ್ಧ ಗುರುಗಳಿದ್ದಾರೆ. ಅವರ ಆಶ್ರಮದಲ್ಲಿ ನೂರಾರು ಜನ ತರುಣ ವಟುಗಳು ಯೋಗಾಭ್ಯಾಸದಲ್ಲಿ ತತ್ಪರರಾಗಿದ್ದಾರೆ. ಗುರುಗಳ ಆದೇಶವನ್ನು ಪಡೆದು ಅವರಲ್ಲಿ ಯಾರಾದರೊಬ್ಬರು ಒಪ್ಪಿದರೆ ಅವರೊಂದಿಗೆ ನಮ್ಮ ರಾಜಕುಮಾರಿಯ ವಿವಾಹವನ್ನು ಮಾಡಿ ಅವನಿಗೇನೇ ಈ ರಾಜ್ಯಭಾರವನ್ನೊಪ್ಪಿಸಿ ನಾವೀರ್ವರೂ ಗುರುಗಳ ಆಶ್ರಮದಲ್ಲಿಯೇ ಸೇವೆ, ಶುಶ್ರೂಷೆಗಳನ್ನು ಮಾಡುತ್ತ ಅವರ ಕೃಪೆಯನ್ನು ಪಡೆದು-ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣ'' ಎಂದನು.

ರಾಜ–ರಾಣಿಯರ ಈ ಸಂವಾದವನ್ನು ಕೇಳುತ್ತ ಕುಳಿತಿದ್ದ ಕಳ್ಳನ ಮನಸ್ಸಿನಲ್ಲಿ ಬಂದ ಯೋಚನೆಯೇನೆಂದರೆ ''ಈ ಚೌರ್ಯ ಕರ್ಮವನ್ನು ಮಾಡಿ ಅಲ್ಪ–ಸ್ವಲ್ಪ ಸಂಪತ್ತನ್ನು ದೋಚಿಕೊಂಡು ಹೋಗುವುದಕ್ಕಿಂತ ಆ ಗುರುಗಳ ಆಶ್ರಮದಲ್ಲಿ ಯೋಗಿಯಂತೆ ಅಭಿನಯಿಸಿ ಈ ರಾಜ್ಯದ ಒಡೆಯನಾಗುವುದೇ ಒಳಿತಲ್ಲವೇ ?'' ಹೀಗೆ ಯೋಚಿಸಿದ ಕಳ್ಳನು ಕಳ್ಳತನವನ್ನು ಬಿಟ್ಟು ಆ ರಾತ್ರಿಯಲ್ಲಿಯೇ ಆಶ್ರಮದ ಪರಿಸರವನ್ನು ತಲುಪಿ ಬೆಳಗಾಗುವುದರೊಳಗಾಗಿ ತನ್ನದೂ ಒಂದು ಕುಟೀರವನ್ನು ನಿರ್ಮಾಣ ಮಾಡಿಕೊಂಡು ಯೋಗಿಯ ವೇಷಭೂಷಣಗಳನ್ನು ಧರಿಸಿ ಎಲ್ಲರೂ ಧ್ಯಾನಕ್ಕೆ ಕುಳಿತಂತೆ

ತಾನೂ ಕೂಡ ಕಣ್ಣುಮುಚ್ಚಿಕೊಂಡು ಕುಳಿತುಕೊಂಡನು. ಆ ಆಶ್ರಮದಲ್ಲಿರುವ ನೂರು ಜನ ವಟುಗಳು ಮನಸ್ಸಿನಲ್ಲಿ ಶಿವಧ್ಯಾನವನ್ನು ಮಾಡುತ್ತಿದ್ದರೆ ಯೋಗಿಯ ವೇಷಧಾರಿ ಯಾದ ಈ ಕಳ್ಳನ ಮನದಲ್ಲಿ ಯಾವಾಗ ಮಹಾರಾಜರು ತನ್ನ ಪರಿವಾರದೊಂದಿಗೆ ಬಂದಾನೋ ಮತ್ತು ಯಾವಾಗ ರಾಜಕುಮಾರಿಯೊಂದಿಗೆ ನನ್ನ ವಿವಾಹವಾದೀತು ? ನಾನು ಎಂದು ಸಿಂಹಾಸನದ ಮೇಲೆ ಕುಳಿತುಕೊಂಡೇನೋ ಎಂಬ ಮನೋರಾಜ್ಯ ದಲ್ಲಿಯೇ ಮಗ್ನನಾಗಿದ್ದನು. ಇತ್ತ ಸರಿಯಾಗಿ ಸೂರ್ಯೋದಯದ ವೇಳೆಗೆ ಮಹಾರಾಜನು ಮಹಾರಾಣಿ, ರಾಜಕುಮಾರಿ ಮತ್ತು ತನ್ನ ಕೆಲ ಸಿಬ್ಬಂದಿಗಳ ಕೂಡ ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಫಲ-ಪುಷ್ಪ ಭೂರಿ ದಕ್ಷಿಣಾದಿಗಳನ್ನು ತೆಗೆದು ಕೊಂಡು ಆ ಗುರುಗಳ ಆಶ್ರಮಕ್ಕೆ ಬಂದು ಗುರುಗಳಿಗೆಲ್ಲವನ್ನೂ ಸಮರ್ಪಿಸಿ, ಸಾಷ್ಟಾಂಗವೆರಗಿ ತನ್ನ ಮನದ ಅಭಿಲಾಷೆಯನ್ನು ನಿವೇದಿಸಿಕೊಂಡನು. ಮಹಾರಾಜನ ಈ ವಿಚಿತ್ರವಾದ ಮನೋಬಯಕೆಯನ್ನು ತಿಳಿದ ಗುರುಗಳು- ''ಮಹಾರಾಜರೇ ! ನಮ್ಮ ಆಶ್ರಮದಲ್ಲಿ ಅತಿವೈರಾಗ್ಯಶೀಲರಾದ ಕೇವಲ ಯೋಗಸಾಧನೆಗಾಗಿಯೇ ತಮ್ಮ ಜೀವನ ವನ್ನು ಮುಡುಪಾಗಿಟ್ಟ ವಟುಗಳಿದ್ದಾರೆ. ನಮಗೆ ತಿಳಿದ ಮಟ್ಟಿಗೆ ರಾಜಕುಮಾರಿ ಯೊಂದಿಗೆ ವಿವಾಹವಾಗಲು ಯಾರೂ ಒಪ್ಪಲಿಕ್ಕಿಲ್ಲ. ನಾವೂ ಸಹ ಒತ್ತಾಯವಾಗಿ ಯಾರನ್ನೂ ಒಪ್ಪಿಸುವಂತಿಲ್ಲ. ಆದರೆ ನೀವು ಸ್ವತಃ ಪ್ರತಿಯೊಂದು ಕುಟೀರಕ್ಕೆ ಹೋಗಿ ಅವರೆಲ್ಲರಿಗೆ ನಿಮ್ಮ ಮನದಿಚ್ಛೆಯನ್ನು ಹೇಳಿಕೊಳ್ಳಿರಿ. ಅವರಲ್ಲಿ ಯಾರೊಬ್ಬರು ಒಪ್ಪಿ ಕೊಂಡರೂ ನಾವು ನಿಮ್ಮ ಮಗಳ ವಿವಾಹವನ್ನು ಮಾಡಲು ಒಪ್ಪಿ ಆಶೀರ್ವದಿಸುತ್ತೇವೆ''. ಗುರುಗಳ ಈ ಮಾತನ್ನು ಕೇಳಿದ ರಾಜನು ಅದೇ ಪ್ರಕಾರವಾಗಿ ಪ್ರತಿಯೊಬ್ಬ ವಟುವಿನಲ್ಲಿಗೆ ಹೋಗಿ ತಮ್ಮ ಮನೋಬಯಕೆಯನ್ನು ನಿವೇದಿಸಿಕೊಂಡನು. ಆಗ ಅವರಾರೂ ಸಿದ್ಧರಾಗಲಿಲ್ಲ. ಇನ್ನು ಉಳಿದದ್ದೊಂದೇ ಒಂದು ಕುಟೀರ. ಅದುವೇ ಆ ಕಳ್ಳನ ಕುಟೀರ. ರಾಜನು ಪರಿವಾರ ಸಮೇತವಾಗಿ ತನ್ನ ಕುಟೀರದತ್ತ ಬರುವುದನ್ನು ಕಂಡು ಅವನಿಗೆ ಎಲ್ಲಿಲ್ಲದ ಸಂತೋಷ. ಆದರೂ ಚಂಚಲನಾಗದೆ ಧೀರ-ಗಂಭೀರನಂತೆ ವರ್ತಿಸಿ ತಾನೂ ಧ್ಯಾನ ಮಗ್ನನಾದಂತೆ ಕುಳಿತುಕೊಂಡನು. ಮಹಾರಾಜನಿಗೂ ಸಹ ಮನದಲ್ಲೊಂದು ವ್ಯಾಕುಲತೆ, ಎಲ್ಲರೂ ತಿರಸ್ಕರಿಸಿದ್ದಾರೆ. ಈತನಾದರೂ ಒಪ್ಪುವನೋ ಇಲ್ಲವೋ ನೋಡೋಣ. ನಮ್ಮ ಮಗಳ ದೈವವಿದ್ದಂತಾಗಲಿ ಎಂದು ಮನದಲ್ಲಿ ಯೋಚಿಸುತ್ತಾನೆ. ಈತನ ಕುಟೀರದ ಮುಂದೆ ಬಂದು ಸಾಷ್ಟಾಂಗವೆರಗಿ ಇಚ್ಛೆಯನ್ನು ಪೂರ್ಣ ಮಾಡುವವರೆಗೆ ನಾನು ಏಳುವುದೇ ಇಲ್ಲ ಎಂದು ನುಡಿದನು. ರಾಜನ ಈ ಧ್ವನಿಯನ್ನು ಕೇಳಿದ ಆ ಕಳ್ಳನಿಗೆ ಹಿಡಿಸಲಾರದಷ್ಟು ಸಂತೋಷ. ಇನ್ನೇನು ನನ್ನ ಇಚ್ಛೆ ಪೂರ್ಣವಾದಂತೆಯೇ ಎಂದು ಮನದಲ್ಲಿಯೇ ಯೋಚಿಸುತ್ತ ಕೆಲಕಾಲ ಸುಮ್ಮನೇ ಕುಳಿತು ನಂತರ ಸಾವಕಾಶವಾಗಿ ಕಣ್ಣನ್ನರಳಿಸಿ ಎಲ್ಲರನ್ನೂ ನೋಡುತ್ತ ''ಏಳು ಮಹಾರಾಜನೇ ! ಚಿಂತಿಸಬೇಡ. ನಿನ್ನ ಚಿಂತೆಯನ್ನು ಅವಶ್ಯವಾಗಿ ಪರಿಹರಿಸುತ್ತೇನೆ'' ವಟುವೇಷಧಾರಿ ಯಾದ ಕಳ್ಳನ ಈ ಮಾತುಗಳನ್ನು ಕೇಳಿ ಮಹಾರಾಜನಿಗೆ ಅಪಾರವಾದ ಸಂತೋಷ ವಾಯಿತು. ಆಗ ರಾಜನು ಅವರಿಗೆ ನಮಸ್ಕರಿಸಿ ಈ ಸಂತೋಷದ ಸುದ್ದಿಯನ್ನು ಗುರು ಗಳಿಗೆ ತಿಳಿಸಲು ಓಡುತ್ತ ಹೋದನು. ಮಹಾರಾಜನು ಹೇಳಿದ ಮಾತುಗಳನ್ನು ಕೇಳಿದಾಗ

ಗುರುಗಳಿಗೆ ಅತ್ಯಾಶ್ಚರ್ಯ– ''ಇದೇನು ? ನನ್ನ ಶಿಷ್ಯರಲ್ಲೊಬ್ಬನು ರಾಜಕುಮಾರಿಯೊಂದಿಗೆ ವಿವಾಹ ವಾಗಲು ಒಪ್ಪಿಕೊಂಡನೆ ? ಅವನ ಕುಟೀರದ ಸಂಖ್ಯೆ ಎಷ್ಟು ?'' ಗುರುಗಳ ಈ ಮಾತನ್ನು ಕೇಳಿದ ಮಹಾರಾಜನು– ''ಗುರುಗಳೇ ಆ ವಟುವಿನ ಕುಟೀರದ ಸಂಖ್ಯೆ ಒಂದು ನೂರಾ ಒಂದು''. ರಾಜನ ಈ ಮಾತನ್ನು ಕೇಳಿ ಗುರುಗಳಿಗೆ ಮತ್ತಷ್ಟು ಆಶ್ಚರ್ಯ ''ಇದೇನು ನನ್ನ ಶಿಷ್ಯರು ಇರುವುದು ನೂರು ಜನ. ಈ ನೂರೊಂದನೆಯಶಿಷ್ಯನು ಎಲ್ಲಿಂದ ಬಂದನು ?'' ಎಂಬುದಾಗಿ ಮನಸ್ಸಿನಲ್ಲಿಯೇ ಯೋಚಿಸುತ್ತ ಆಗಲಿ ಮಹಾರಾಜರೇ ಆತನನ್ನು ಕರೆದುಕೊಂಡು ಬನ್ನಿ. ಪರೀಕ್ಷಿಸಿ ಆಶೀರ್ವದಿಸುತ್ತೇವೆ.

ಗುರುಗಳ ಆದೇಶದಂತೆ ಮಹಾರಾಜನು ಆಗ ವಟುವೇಷಧಾರಿಯಾದ ಕಳ್ಳನನ್ನು ಕರೆದುಕೊಂಡು ಬರುವಾಗ ಆ ಕಳ್ಳನ ಮನಸ್ಸಿನಲ್ಲಿ ವ್ಯಾಕುಲತೆ ಪ್ರಾರಂಭವಾಯಿತು. ''ಎಲ್ಲಿ ನನ್ನ ರಹಸ್ಯ ಹೊರಬೀಳುವುದೋ ? ನನಗಾವ ಶಿಕ್ಷೆ ವಿಧಿಸಲ್ಪಡುವುದೋ ? ಆಗಲಿ ಏನಾದರಾಗಲಿ ಎಲ್ಲದಕ್ಕೂ ಸಿದ್ಧನೇ ಆಗಿದ್ದೇನೆ'' ಎಂದು ಮನದಲ್ಲಿ ಧೈರ್ಯವನ್ನು ತಂದುಕೊಂಡು ಗುರುಗಳ ಎದುರಿಗೆ ಬಂದು ನಿಂತುಕೊಂಡನು. ಗುರುಗಳ ಸಾತ್ವಿಕವಾದ ತೇಜಸ್ಸನ್ನು ಕಣ್ಣು ತುಂಬ ಕಾಣುತ್ತಿರುವಂತೆಯೇ ಅವನ ಮನಸ್ಸು ಒಳಗಿಂದೊಳಗೇ ಪ್ರಭಾವಿತಗೊಳ್ಳತೊಡಗಿತು. ಅಂತೆಯೇ ತನಗರಿಯದಂತೆ ಆತನು ಗುರುಗಳಿಗೆ ಸಾಷ್ಟಾಂಗವೆರಗಿದನು. ತನಗೆ ದಂಡವತ್ ಪ್ರಣಾಮಗೈದ ಆ ವ್ಯಕ್ತಿಯನ್ನು ಮೈದಡವಿ ಗುರುಗಳು ಎಬ್ಬಿಸಿ, ತಮ್ಮೆದುರು ಕುಳ್ಳಿರಿಸಿಕೊಂಡು, ತಮ್ಮ ವರದ ಬಲ ಹಸ್ತವನ್ನು ಆತನ ಮಸ್ತಕದ ಮೇಲಿರಿಸಿ, ತಮ್ಮ ಕರುಣಾಕಟಾಕ್ಷದಿಂದ ಆತನನ್ನು ವೀಕ್ಷಿಸತೊಡಗಿದರು. ಗುರುವಿನ ಈ ಸ್ಪರ್ಶ ಹಾಗೂ ಕೃಪಾದೃಷ್ಟಿಯ ಪರಿಣಾಮವಾಗಿ ಆತನ ಜೀವನವೇ ಸಂಪೂರ್ಣವಾಗಿ ಪರಿವರ್ತನೆಗೊಂಡಿತು. ಆಗ ಗುರುಗಳು ನೀನು ಈ ರಾಜಕುಮಾರಿಯೊಂದಿಗೆ ವಿವಾಹವಾಗುವೆಯಾ ? ಎಂಬುದಾಗಿ ಕೇಳಲು ಆಗ ಅವನು– ''ಯಾವ ರಾಜಕುಮಾರಿ ? ಎಲ್ಲಿಯ ಮಹಾರಾಜಾ ? ಯಾವುದೂ ನನಗೆ ಬೇಕಿಲ್ಲ, ನನಗೆ ಬೇಕಾದುದು ನಿಮ್ಮ ಕೃಪಾಶೀರ್ವಾದವೊಂದೇ ! ಸಂಸಾರದಲ್ಲಿಯ ಯಾವ ಬಯಕೆಯೂ ನನಗಿರುವುದಿಲ್ಲ'' ಎಂಬುದಾಗಿ ನುಡಿದನು. ಆಗ ರಾಜನಿಗೂ ಸಹ ಆಶ್ಚರ್ಯ ನಿರಾಶೆಗಳು ಒಮ್ಮೆಲೇ ಮನದಲ್ಲಿ ಮೂಡಿ ಬಂದವು. ನೋಡಿದಿರಾ ! ಸದ್ಗುರುವಿನ ಕೃಪಾಕಟಾಕ್ಷದಿಂದ ಕಳ್ಳನೂ ಸಹ ಯೋಗಿಯಾಗಿ ಪರಿವರ್ತನೆಗೊಂಡನು. ಇತ್ತ ಗುರುಗಳು ಮಹಾರಾಜ ಹಾಗೂ ರಾಜಕುಮಾರಿಯನ್ನು ತಮ್ಮೆದುರಿಗೆ ಕೂಡ್ರಿಸಿಕೊಂಡು ಅವಳಿಗೆ ತಿಳುವಳಿಕೆ ಹೇಳುತ್ತ– ''ಎಲೈ ರಾಜಕುಮಾರಿಯೇ ! ನೀನು ನಿರಾಶಳಾಗಬೇಡ, ನಿನ್ನ ಭಾಗ್ಯವು ಉಜ್ವಲವಾಗಿದೆ, ನಿನಗೋರ್ವ ಚಾರಿತ್ರ್ಯವಂತನೂ ಅತಿಪರಾಕ್ರಮಿಯೂ ಮತ್ತು ಸಂತಪ್ರೇಮಿಯೂ ಆದ ರಾಜಕುಮಾರನು ದೊರೆಯುತ್ತಾನೆ. ಅವನೊಂದಿಗೆ ವಿವಾಹವಾಗಿ ಗೃಹಸ್ಥಾಶ್ರಮವನ್ನು ಪರಿಪಾಲಿಸು ಕೊನೆಗೆ ಯೋಗಮಾರ್ಗದಿಂದ ನಿನ್ನ ಜೀವನವು ಕಲ್ಯಾಣವಾಗುವುದು'' ಎಂಬುದಾಗಿ ಹರಸಿ ರಾಜಪರಿವಾರವನ್ನು ಬೀಳ್ಕೊಟ್ಟರು.

ಹೀಗೆ ಯಾರ ಮೇಲೆ ಗುರುವಿನ ಸಂಪೂರ್ಣವಾದ ಕೃಪಾಕಟಾಕ್ಷ ಬೀಳುವುದೋ ಅವರು ಸಿದ್ಧರಸದ ಸ್ಪರ್ಶದಿಂದ ಲೋಹವು ಹೇಮವಾಗುವಂತೆ ಸಾಕ್ಷಾತ್ ಶಿವ

ಸ್ವರೂಪರೇ ಆಗುತ್ತಾರೆ ಎಂಬುದಾಗಿ ತಿಳಿಸಿದ ಪೂಜ್ಯಪಾದರು ಇನ್ನು ಮುಂದೆ ಆ ಗುರುವಿನ ಆಜ್ಞೆಯನ್ನು ಪರಿಪಾಲಿಸುವ ವಿಷಯಕವಾಗಿ ಪುನಃ–

ನ ಲಂಘಯೇದ್ಗುರೋರಾಜ್ಞಾಂ ಜ್ಞಾನಮೇವ ಪ್ರಕಾಶಯನ್ ।
ಶಿವಾಸಕ್ತೇನ ಮನಸಾ ಸರ್ವಸಿದ್ಧಿಮವಾಪ್ನುಯಾತ್ ॥

ಶಿವಾದನ್ಯಜ್ಜಗನ್ಮಿಥ್ಯಾ ಶಿವಃ ಸಂವಿತ್ಸ್ವರೂಪಕಃ ।
ಶಿವಸ್ತ್ವಮಿತಿ ನಿರ್ದಿಷ್ಟೋ ಗುರುಣಾ ಮುಕ್ತ ಏವ ಸಃ ॥

ಗುರೋರ್ಲಬ್ಧ್ವಾ ಮಹಾಜ್ಞಾನಂ ಸಂಸಾರಾಮಯಭೇಷಜಮ್ ।
ಮೋದತೇ ಯಃ ಸುಖೀ ಶಾಂತಃ ಸ ಜೀವನ್ಮುಕ್ತ ಏವಹಿ ॥

(ಸಿ. ಶಿ. ೧೭; ೬೫–೬೭)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರುವಿನ ಮಹಿಮೆಯನ್ನರಿತ ಶಿಷ್ಯನು ಅವನ ಆಜ್ಞೆಯನ್ನು ಎಂದೂ ಉಲ್ಲಂಘಿಸಕೂಡದು ಗುರುವಿನ ಆದೇಶದಂತೆ ಶಿವನಲ್ಲಿ ಆಸಕ್ತವಾದ ಮನಸ್ಸುಳ್ಳವನಾದರೆ ಜ್ಞಾನವನ್ನು ಪಡೆಯುವನಲ್ಲದೆ ಆ ವ್ಯಕ್ತಿಯು ಸರ್ವಸಿದ್ಧಿಗಳನ್ನೂ ಸಹ ಪಡೆದುಕೊಳ್ಳುವನು. ಶಿವನಿಗಿಂತಲೂ ಜಗತ್ತು ಭಿನ್ನವಾಗಿರುವುದಿಲ್ಲ, ಅದು ಶಿವಸ್ವರೂಪವೇ ಆಗಿರುತ್ತದೆ. ಶಿವನೂ ಸಹ ಜ್ಞಾನರೂಪನಾಗಿರುತ್ತಾನೆ. ಅಂತಹ ಶಿವನೇ ನೀನಿರುವಿ ಎಂಬುದಾಗಿ ಉಪದೇಶಿಸಿದ ಗುರುವಿನ ಉಪದೇಶವನ್ನಾಲಿಸಿದ ಶಿಷ್ಯನು ಮುಕ್ತನೇ ಆಗುತ್ತಾನೆ. ಸಂಸಾರವೆಂಬ ಮಹಾರೋಗಕ್ಕೆ ಔಷಧರೂಪವಾಗಿರುವ ಶಿವಾದ್ವೈತ ಜ್ಞಾನವನ್ನು ಸದ್ಗುರುವಿನಿಂದ ಪಡೆದ ಯಾವ ಶಿಷ್ಯನು ಸುಖಿಯೂ ಶಾಂತನೂ ಆಗಿ ಆನಂದವನ್ನು ಕೊಡುವನೋ ಅವನು ಜೀವನ್ಮುಕ್ತನೇ ಆಗಿರುತ್ತಾನೆ.

ಸದ್ಗುರುವಿನ ಆದೇಶದಂತೆ ವರ್ತಿಸಿದಾಗಲೇನೇ ಶಿಷ್ಯನ ಸರ್ವಪ್ರಕಾರದ ಕಲ್ಯಾಣವಾಗುವುದು. ಆದ್ದರಿಂದ ಶಿಷ್ಯನಾದವನು ಆದೆಂದೂ ಗುರುವಿನ ಆಜ್ಞೆಯನ್ನು ಉಲ್ಲಂಘಿಸಬಾರದು. ಗುರುವಿನ ಆದೇಶದಂತೆ ವರ್ತಿಸುವ ಶಿಷ್ಯನ ಮನಸ್ಸು ಸಂಸಾರದ ಚಿಂತನೆಯನ್ನು ಬಿಟ್ಟು ಶಿವನಲ್ಲಿ ಆಸಕ್ತವಾಗುವುದು. ಹೀಗೆ ಮನಸ್ಸು ಶಿವನಲ್ಲಿ ಆಸಕ್ತವಾದರೆ ಸರ್ವಸಿದ್ಧಿಗಳೆಲ್ಲ ಅವನಿಗೆ ಸಹಜವಾಗಿಯೇ ಪ್ರಾಪ್ತವಾಗುವುವು.

ಎಲ್ಲ ಸಿದ್ಧಿಗಳಲ್ಲಿ ಮುಕ್ತಿಯೇ ಸರ್ವಶ್ರೇಷ್ಠವಾದ ಸಿದ್ಧಿಯು. ಯಾವುದನ್ನು ಪಡೆದ ಬಳಿಕ ಇನ್ನೊಂದರ ಅಪೇಕ್ಷೆಯಾಗುವುದಿಲ್ಲವೋ ಅದುವೇ ಶ್ರೇಷ್ಠವಾದುದು. ಅಧುವೇ ಮುಕ್ತ ಸ್ಥಿತಿಯು. ಸದ್ಗುರುವು ತನ್ನ ಶಿಷ್ಯನಿಗೆ ಈ ಜಗತ್ತು ಶಿವಸ್ವರೂಪವಾಗಿದೆ. ಶಿವನಿಗಿಂತಲೂ ಅದು ಭಿನ್ನವಾದುದಲ್ಲ, ಶಿವನು ಸಚ್ಚಿದಾನಂದ ಸ್ವರೂಪನಾಗಿದ್ದಾನೆ. ನೀನೂ ಸಹ ಶಿವಸ್ವರೂಪನೇ ಆಗಿರುವಿ. ಎಂಬ ಶಿವಾದ್ವೈತ ಜ್ಞಾನವನ್ನು ಉಪದೇಶಿಸಲಾಗಿ ಶಿಷ್ಯನು ಮುಕ್ತನೇ ಆಗುತ್ತಾನೆ. ಸದ್ಗುರುವಿನಿಂದ ಉಪದೇಶಿಸಲ್ಪಟ್ಟ ಈ ಶಿವಾದ್ವೈತ ಜ್ಞಾನವು ಸಂಸಾರವೆಂಬ ಮಹಾರೋಗಕ್ಕೆ ದಿವ್ಯವಾದ ಔಷಧವಾಗಿರುತ್ತದೆ. ಜ್ಞಾನರೂಪವಾದ ಈ ದಿವ್ಯೌಷಧವನ್ನು ಪಡೆದ ಶಿಷ್ಯನಿಗೆ ಜನನ–ಮರಣವೆಂಬ ಭವರೋಗವು

ಇಲ್ಲದಾಗಿ ಆತನು ಶಾಂತನೂ ನಿತ್ಯ ಸುಖಿಯೂ ಆಗಿ ಆನಂದಮಯನಾಗಿರುತ್ತಾನೆ. ಶಿಷ್ಯನ ಈ ಆನಂದಮಯವಾದ ಸ್ಥಿತಿಯು ಜೀವನ್ಮುಕ್ತಿಯೆಂಬುದಾಗಿ ಕರೆಯಲ್ಪಡುತ್ತದೆ. ನಾಶಿಕದ ಈ ಮುಕ್ತಿಧಾಮದ ಈ ಧರ್ಮಸಭೆಯಲ್ಲಿ ಉಪಸ್ಥಿತರಿರುವ ನೀವುಗಳೆಲ್ಲ ಪೂಜ್ಯರ ಆದೇಶದಂತೆ ಗುರುವಚನದಲ್ಲಿ ವಿಶ್ವಾಸವುಳ್ಳವರಾಗಿ ಗುರುವಾಜ್ಞೆಯನ್ನು ನಿಮ್ಮ ಜೀವನದುದ್ದಕ್ಕೂ ಪರಿಪಾಲಿಸುತ್ತ ಜ್ಞಾನಸಂಪನ್ನರಾಗಿ ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಪಡೆಯುವವರಾಗಿರೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ಅಕ್ಟೋಬರ, ೧೯೯೪.
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)

■■

ಆಶೀರ್ವಚನ-೧

# ಶುಶ್ರೂಷುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯ ನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲವಾದ ಶಿಷ್ಯಸ್ಥಲದ ಬಗ್ಗೆ ಕಳೆದ ಮೂರು ದಿನಗಳಿಂದ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ಇಂದು ಕ್ರಮಪ್ರಾಪ್ತವಾದ ಅದರ ಮುಂದಿನ ಸ್ಥಲವಾದ ಶುಶ್ರೂಷುಸ್ಥಲದ ಬಗ್ಗೆ ವಿವೇಚಿಸೋಣ.

ಶುಶ್ರೂಷು ಎಂದರೆ ಗುರುವಿನ ಉಪದೇಶವನ್ನು ಅತಿ ಉತ್ಕಟವಾದ ಬಯಕೆ ಯಿಂದ ಕೇಳಲಪೇಕ್ಷೆಯುಳ್ಳವನು ಎಂದರ್ಥ. ಕೇಳುವುದರಲ್ಲಿ ಆಸಕ್ತಿ ಇದ್ದಾಗಲೇನೇ ಗುರುವಿನ ಉಪದೇಶದ ಪ್ರಯೋಜನವಾಗುವುದು. ಕೇಳಲಿಚ್ಛೆಯಿಲ್ಲದವನ ಮುಂದೆ ಅದೇನನ್ನೇ ಹೇಳಿದರೂ ಬೋರ್ಗಲ್ಲ ಮೇಲೆ ಮಳೆಯು ಸುರಿದಂತೆ ವ್ಯರ್ಥವಾಗಿ ಹೋಗುವುದು. ಆದ್ದರಿಂದಲೇ ಶಿಷ್ಯನಲ್ಲಿ ಶ್ರವಣಾಭಿಲಾಷೆಯು ಇರಬೇಕೆಂಬುದನ್ನು ಬೋಧಿಸುವುದಕ್ಕಾಗಿಯೇ ಪೂಜ್ಯಪಾದರು ಈ ಶುಶ್ರೂಷು ಸ್ಥಲದಲ್ಲಿ–

> ಬೋಧ್ಯಮಾನಃ ಸ ಗುರುಣಾ ಪರಕಾಯೇನ ಸರ್ವದಾ ।
> ತಚ್ಛುಶ್ರೂಷಾರತಃ ಶಿಷ್ಯಃ ಶುಶ್ರೂಷುರಿತಿ ಕೀರ್ತ್ಯತೇ ॥

(ಸಿ. ಶಿ. ೧೭–೬೮)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಬ್ರಹ್ಮಸ್ವರೂಪನಾದ ಸದ್ಗುರುವಿನಿಂದ ಶಿಷ್ಯನು ಯಾವಾಗಲೂ ಬೋಧಿಸಲ್ಪಡುತ್ತಿರುತ್ತಾನೆ. ಹೀಗೆ ಗುರುವಿ ನಿಂದ ಪ್ರಾಪ್ತವಾಗುವ ಆ ಬೋಧೆಯನ್ನು ಕೇಳಲಪೇಕ್ಷೆಯುಳ್ಳ ಶಿಷ್ಯನಿಗೇನೇ ಇಲ್ಲಿ ಶುಶ್ರೂಷು ಎಂದು ಕರೆಯಲಾಗಿದೆ. ಅಂದರೆ ಗುರುವಿನ ಉಪದೇಶ ಶ್ರವಣದಲ್ಲಿ ಅತಿಯಾದ ಆಸಕ್ತಿಯುಳ್ಳವನೇ ಶುಶ್ರೂಷು ಎಂದು ತಿಳಿದುಕೊಳ್ಳಬೇಕು.

ಶ್ರವಣದಿಂದಲೇ ಆತ್ಮೋನ್ನತಿಯು ಸಿದ್ಧವಾಗುವುದು. ಸ್ವಾತ್ಮಸ್ವರೂಪದ ವಿಸ್ಮರಣೆಯಿಂದ ಸಂಸಾರಿಯಾಗಿ ತಿರುಗುವ ಜೀವನು ಗುರುವಿನ ಉಪದೇಶವನ್ನು ಕೇಳಿ ಆತ್ಮಜ್ಞಾನವನ್ನು ಮಾಡಿಕೊಂಡ ಬಳಿಕ ಅವನು ಈ ಸಂಸಾರದಿಂದ ಮುಕ್ತನಾಗುತ್ತಾನೆ. ಅಂತೆಯೇ ಆತ್ಮಜ್ಞಾನಕ್ಕೆ ಶ್ರವಣವೇ ಮುಖ್ಯವಾದುದು. ಉಪನಿಷತ್ತಿನಲ್ಲಿ– ''ಆತ್ಮಾ ವಾ ಅರೇ ದೃಷ್ಟವ್ಯಃ ಶ್ರೋತವ್ಯಃ, ಮಂತವ್ಯಃ ನಿದಿಧ್ಯಾಸಿತವ್ಯಃ'' ಎಂಬುದಾಗಿ ಉಪದೇಶಿಸಿ ಆತ್ಮದರ್ಶನಕ್ಕೆ ಶ್ರವಣವೇ ಸಾಧನವೆಂಬುದಾಗಿ ಹೇಳಲಾಗಿದೆ. ಶ್ರವಣವು ಶ್ರೋತ್ರೇಂದ್ರಿಯದ ಒಂದು ಆಭರಣವು. ಅಂತೆಯೇ ಓರ್ವ ಸುಭಾಷಿತಕಾರನು– ''ಶ್ರೋತ್ರಂ ಶ್ರುತೇನೈವ ನ ಕುಂಡಲೇನ'' ಎಂಬುದಾಗಿ ಹೇಳಿದ್ದಾನೆ. ಕಿವಿಯಲ್ಲಿ ಹಾಕಿಕೊಂಡ ಬಂಗಾರದ ಕುಂಡಲವು ಶಾಶ್ವತವಾದ ಅಲಂಕಾರವಲ್ಲವು. ದಾರಿದ್ರ್ಯವು ಬಂದಿತೆಂದರೆ ಕುಂಡಲವನ್ನು ಮಾರಿ ಉಪಜೀವನವನ್ನು ಸಾಗಿಸಬೇಕಾಗುತ್ತದೆ. ಒಂದು ವೇಳೆ ತನ್ನ ಜೀವನದಲ್ಲಿ ದರಿದ್ರತೆಯು ಬಾರದಿದ್ದರೂ ಮರಣೋತ್ತರದಲ್ಲಿ ಬಂಧು–ಬಾಂಧವರು ಆ ಕುಂಡಲವನ್ನು ಬಿಚ್ಚಿಕೊಂಡು ಬಿಡುವರು. ಹೀಗೆ ಶಾಶ್ವತವಲ್ಲದ ಆಭೂಷಣದಿಂದ ಕಿವಿಯನ್ನು ಅಲಂಕರಿಸಿಕೊಳ್ಳುವುದಕ್ಕಿಂತ ಶ್ರವಣವೆಂಬ ಆಭೂಷಣದಿಂದ ಕಿವಿಯನ್ನು ಅಲಂಕರಿಸಿಕೊಳ್ಳಬೇಕೆಂಬುದು ಸುಭಾಷಿತಕಾರನ ಅಭಿಪ್ರಾಯವಾಗಿದೆ.

ಶ್ರವಣ ಭಕ್ತಿಯನ್ನು ಮಾಡುತ್ತ, ಸದ್‌ಗ್ರಂಥಗಳ ಪಾಠ ಪ್ರವಚನವನ್ನು ಕೇಳುತ್ತ, ಗುರೂಪದೇಶವನ್ನು ಆಲಿಸುತ್ತಿದ್ದರೆ, ನಮ್ಮ ಜೀವನವನ್ನೇ ಸಾರ್ಥಕವನ್ನಾಗಿ ಮಾಡಿಕೊಳ್ಳಬಹುದು. ಈ ಶ್ರವಣವೆಂಬ ಶ್ರೋತ್ರೇಂದ್ರಿಯದ ಅಲಂಕಾರದಿಂದ ನಾವು ಜೀವಿತಾವಧಿಯಲ್ಲಿ ಅಲಂಕಾರಯುಕ್ತರಾಗಿರುವುದಷ್ಟೇ ಅಲ್ಲ, ಮರಣಾನಂತರದಲ್ಲಿಯೂ ಅದು ನಮಗೆ ಪ್ರಯೋಜನಕಾರಿಯಾಗಿರುತ್ತದೆ. ನಮಗಿರುವ ಪಂಚವಿಧ ಜ್ಞಾನೇಂದ್ರಿಯಗಳಲ್ಲಿ ನೇತ್ರ ಹಾಗೂ ಶ್ರೋತ್ರೇಂದ್ರಿಯಗಳು ಅತ್ಯಂತ ಮಹತ್ತ್ವಪೂರ್ಣವಾದವುಗಳು. ಮನುಷ್ಯನಿಗೆ ಯಾವಾಗಲೂ ಏನನ್ನಾದರೂ ನೋಡಬೇಕು ಮತ್ತು ಕೇಳಬೇಕು ಎನಿಸುತ್ತಿರುತ್ತದೆ. ಬಾಹ್ಯ ಪ್ರಪಂಚದಲ್ಲಿ ನೋಡುವ, ಕೇಳುವ ಸಾಮಗ್ರಿಗಳಿಗೆ ಏನು ಕಡಿಮೆಯೇ ? ಇಂದಿನ ವೈಜ್ಞಾನಿಕ ಯುಗದಲ್ಲಿ ಮನೆಯನ್ನು ಬಿಟ್ಟು ಹೊರಗೆ ಹೋಗದೆ ಇದ್ದರೂ, ಒಂದು ಕೊಠಡಿಯಲ್ಲಿಯೇ ಕುಳಿತುಕೊಂಡು ದೂರದರ್ಶನದ ಮುಖಾಂತರ ವಿಶ್ವವೆಲ್ಲವನ್ನು ನೋಡಬಹುದು ಹಾಗೂ ಎಲ್ಲೆಡೆಯ ಶಬ್ದಗಳನ್ನು ಹಗಲು–ರಾತ್ರಿಗಳೆನ್ನದೆ ಕೇಳಬಹುದು. ಇದನ್ನು ನೋಡುವ ಹಾಗೂ ಕೇಳುವುದರಿಂದ ಮನಸ್ಸಿಗೊಂದು ರಂಜನೆಯಾಗಿ ವ್ಯಾವಹಾರಿಕ ಜೀವನದ ದುಃಖವನ್ನು ಕೆಲಕಾಲ ಮರೆಯಬಹುದಷ್ಟೇ. ಆದರೆ ದುಃಖವನ್ನು ಸಂಪೂರ್ಣವಾಗಿ ನಿವೃತ್ತಿಮಾಡಿಕೊಳ್ಳಬೇಕೆಂದರೆ ಆತ್ಮದರ್ಶನವನ್ನು ಮಾಡಿಕೊಳ್ಳಬೇಕಾಗುವುದು.

ಈ ಆತ್ಮದರ್ಶನಕ್ಕಾಗಿ ಶ್ರವಣವೇ ಅಮೋಘವಾದ ಸಾಧನವು. ಅಂತೆಯೇ ಉಪನಿಷತ್ತು ''ಶ್ರೋತವ್ಯಃ'' ಎಂಬುದಾಗಿ ಉಪದೇಶಿಸಿದೆ. ಆತ್ಮ ವಿಷಯಕವಾಗಿ ಶ್ರವಣ ಮಾಡಬೇಕಾದರೆ ಗುರುವಿಗೆ ಈ ಶ್ರವಣೇಂದ್ರಿಯವನ್ನು ಸಮರ್ಪಿಸಬೇಕು. ಸಂಸಾರಕ್ಕಾಗಿ ಕಿವಿಯನ್ನು ಕೊಟ್ಟರೆ ಜೀವಾತ್ಮನು ಪುನಃ ಮೋಹ–ಮಮಕಾರದಲ್ಲಿ ಬಂಧಿತನಾಗುತ್ತಾನೆ. ಆದರಿಂದ ಪಾರಾಗುವುದಕ್ಕಾಗಿಯೇ ಗುರುವಿಗೆ ಕಿವಿಯನ್ನು

ಸಮರ್ಪಿಸಬೇಕು. ಗುರುವಿನ ಉಪದೇಶದ ಮಾತುಗಳೆಂದರೆ ಅವು ಮಂತ್ರಗಳೇ ಆಗಿರುತ್ತವೆ. ಅಂತೆಯೇ ''ಮಂತ್ರಮೂಲಂ ಗುರೋರ್ವಾಕ್ಯಮ್'' ಎಂಬುದಾಗಿ ಹೇಳಲಾಗಿದೆ. ದೀಕ್ಷಾ ಸಂದರ್ಭದಲ್ಲಿ ಗುರುವಿನಿಂದ ಉಪದೇಶಿಸಲ್ಪಡುವ ಮಂತ್ರವನ್ನು ಲಕ್ಷ್ಯಪೂರ್ವಕವಾಗಿ ಶ್ರವಣ ಮಾಡುವಂತೆ ತತ್ತ್ವೋಪದೇಶವನ್ನು ಕೂಡಾ ಗಮನ ವಿಟ್ಟು ಕೇಳಬೇಕು. ಈ ಕಿವಿಯಿಂದ ಕೇಳಿ, ಆ ಕಿವಿಯಿಂದ ಬಿಟ್ಟರೆ ಊದುವ ಕೊಳವೆ ಯೊಳಗೆ ಊದಿದ ಹವೆಯಂತೆ ವ್ಯರ್ಥವಾಗುತ್ತದೆ. ಬಹಳಷ್ಟು ಜನರು ಇದೇ ಸ್ಥಿತಿಯವರೇ ಇರುತ್ತಾರೆ.

ಒಮ್ಮೆ ರಾಜ ದರ್ಬಾರದಲ್ಲಿ ಮೂರ್ತಿಕಾರನು ಮೂರು ಹಿತ್ತಾಳೆಯ ಮೂರ್ತಿ ಗಳನ್ನು ತೆಗೆದುಕೊಂಡು ಬಂದನು. ಆ ಮೂರ್ತಿಗಳು ಬಾಹ್ಯನೋಟದಲ್ಲಿ ಒಂದೇ ವಿಧ ವಾಗಿ ತೋರುತ್ತಿದ್ದವು. ಆಗ ಅವನು ಮೂರೂ ಮೂರ್ತಿಗಳನ್ನು ರಾಜನ ಮುಂದಿರಿಸಿ– ''ಮಹಾರಾಜರೇ ! ಈ ಮೂರ್ತಿಗಳು ನೋಟದಲ್ಲಿ ಒಂದೇ ತೆರನಾಗಿದ್ದರೂ ಮಾಟದಲ್ಲಿ ಭಿನ್ನಗಳಾಗಿವೆ. ನಿಮ್ಮ ಆಸ್ಥಾನದ ವಿದ್ವಾಂಸರಿಂದ ಪರೀಕ್ಷೆ ಮಾಡಿಸಿ ಅವುಗಳ ಬೆಲೆಯನ್ನು ನನಗೆ ಕೊಡಬೇಕು'' ಎಂಬುದಾಗಿ ವಿನಂತಿಸಿಕೊಂಡನು. ಆಗ ರಾಜನು ತನ್ನ ಆಸ್ಥಾನದ ವಿದ್ವಾಂಸರನ್ನುದ್ದೇಶಿಸಿ, ಇವುಗಳನ್ನು ಪರೀಕ್ಷಿಸಿ ಬೆಲೆ ಕಟ್ಟಬೇಕೆಂದು ಆಜ್ಞಾಪಿಸಿದನು. ಮಹಾರಾಜನ ಆಜ್ಞೆಯಂತೆ ಅನೇಕ ಜನ ವಿದ್ವಾಂಸರು ಬೇಕಾದಷ್ಟು ಪರೀಕ್ಷಿಸಿದರೂ ಆ ತ್ರಿಮೂರ್ತಿಗಳ ರಹಸ್ಯವು ಹೊಳೆಯಲೇ ಇಲ್ಲ. ಕೊನೆಗೆ ಓರ್ವ ಅತಿ ಬುದ್ಧಿಶಾಲಿಯಾದ ವಿದ್ವಾಂಸನು ರಾಜನನ್ನು ಉದ್ದೇಶಿಸಿ ''ಮಹಾರಾಜರೇ, ನನಗೆ ಮೂರುದಿನ ಅವಕಾಶ ಕೊಡಿ, ನಾನು ಪರೀಕ್ಷಿಸಿ ಇವುಗಳ ಯೋಗ್ಯವಾದ ಬೆಲೆ ನಿರ್ಧರಿಸುತ್ತೇನೆ''. ಪಂಡಿತನ ಮಾತಿಗೆ ಮಹಾರಾಜನು ತಥಾಸ್ತು ಎಂದು ಅಪ್ಪಣೆ ಇತ್ತನು. ರಾಜ ದರ್ಬಾರದಲ್ಲೆಲ್ಲ ಮೂರ್ತಿಯದೇ ವಿಚಾರ. ಮೂರನೇ ದಿವಸಕ್ಕೆ ಇದರ ರಹಸ್ಯವನ್ನು ತಿಳಿಯಲು ದರ್ಬಾರ್‌ದಲ್ಲಿ ಸಭಿಕರು ಕಿಕ್ಕಿರಿದು ನೆರೆದಿದ್ದರು. ಆಗ ಆ ಪಂಡಿತನು ಮೂರೂ ಮೂರ್ತಿಗಳನ್ನು ತಂದು ಒಂದು ಟೇಬಲ್ಲಿನ ಮೇಲಿರಿಸಿ, ಅವುಗಳಲ್ಲಿ ಒಂದೊಂದನ್ನಾಗಿ ತೋರಿಸುತ್ತ ಒಂದರ ಬೆಲೆ ಒಂದು ಲಕ್ಷ ವರಹವೆಂತಲೂ, ಇನ್ನೊಂದರ ಬೆಲೆ ಐವತ್ತು ಸಹಸ್ರವೆಂತಲೂ, ಮೂರನೆಯದಕ್ಕೆ ಕೇವಲ ಒಂದು ವರಹವೆಂಬುದಾಗಿ ಬೆಲೆ ಕಟ್ಟಿದನು. ಆಗ ಮಹಾರಾಜನು ಈ ಬೆಲೆಯ ವ್ಯತ್ಯಾಸದ ರಹಸ್ಯವೇನೆಂದು ಕೇಳಿದಾಗ ಆ ಪಂಡಿತನು ಒಂದು ತಿಳುವಾದ ತಂತಿಯನ್ನು ತೆಗೆದುಕೊಂಡು ಮೊದಲನೆಯ ಮೂರ್ತಿಯ ಕಿವಿಯಲ್ಲಿ ಹಾಕಿದನು. ಆಗ ಆ ತಂತಿಯು ಹೊರಗೆಲ್ಲಿಯೂ ಹಾಯದೆ ಒಳಗಿಂದೊಳಗೆ ಅಡಗಿಹೋಯಿತು. ಎರಡನೆಯ ಮೂರ್ತಿಯ ಕಿವಿಯಲ್ಲಿ ಬೇರೊಂದು ತಂತಿಯನ್ನು ಹಾಕಿದಾಗ ಅದು ಬಾಯಿಯಿಂದ ಹೊರ ಹೊರಟಿತು. ಇನ್ನು ಮೂರನೆಯ ಮೂರ್ತಿಯ ಕಿವಿಯೊಳಗೆ ಇನ್ನೊಂದು ತಂತಿಯನ್ನು ಹಾಕಿದಾಗ ಅದು ಅದರ ಮತ್ತೊಂದು ಕಿವಿಯಿಂದ ಹೊರಬಿದ್ದಿತು.

ಈ ಮೂರ್ತಿಯನ್ನು ಪರೀಕ್ಷಿಸಿದ ವಿದ್ವಾಂಸನು ಮಹಾರಾಜನನ್ನುದ್ದೇಶಿಸಿ– ''ಮಹಾರಾಜರೇ ! ಈ ಮೂರ್ತಿಕಾರನು ಬಹುದೊಡ್ಡ ಮನೋವಿಜ್ಞಾನಿಯಾಗಿ ರುತ್ತಾನೆ. ಇವನು ಈ ಮೂರ್ತಿಗಳನ್ನು ರಚಿಸುವುದರ ಮೂಲಕ ಸಮಸ್ತ ಮನುಷ್ಯ

ಕುಲವನ್ನು ಮೂರುವಿಧವಾಗಿ ವಿಂಗಡಿಸಿದ್ದಾನೆ. ಯಾರು ಗುರುವಿನ ಉಪದೇಶವನ್ನು ಶ್ರವಣ ಮಾಡಿ ಮುಂದೆ ಮನನ ಹಾಗೂ ನಿಧಿಧ್ಯಾಸಗಳನ್ನು ಸಾಧಿಸಿ ಆತ್ಮಜ್ಞಾನಿಗಳಾಗುತ್ತಾರೆಯೋ ಅವರು ಪ್ರಥಮ ದರ್ಜೆಯ ವ್ಯಕ್ತಿಗಳು, ಅವರನ್ನು ಮೊದಲನೆಯ ಮೂರ್ತಿಗೆ ಹೋಲಿಸಬಹುದು. ಗುರೂಪದೇಶವನ್ನು ಲಕ್ಷ್ಯಪೂರ್ವಕವಾಗಿ ಕೇಳಿ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳೋಣದರಿಂದ ಆ ಮೊದಲನೇ ಮೂರ್ತಿಯ ಬೆಲೆ ಒಂದು ಲಕ್ಷ ರೂಪಾಯಿಗಳು. ಇನ್ನು ಕೆಲಜನರು ಗುರುವಿನ ಉಪದೇಶವನ್ನು ಕೇಳಿ ಅರ್ಧಮರ್ಧ ನೆನಪಿಟ್ಟುಕೊಂಡು, ಬೇರೊಬ್ಬರಿಗೆ ಅದನ್ನು ಹೇಳಿ ತಾವು ಮರೆತು ಬಿಡುತ್ತಾರೆ. ಇವರು ಈ ಎರಡನೇ ಮೂರ್ತಿಗೆ ಹೋಲಿಕೆಯಾಗಿದ್ದಾರೆ. ಅರ್ಧಮರ್ಧ ಕೇಳುವಿಕೆಯ ಸಂಕೇತವಾಗಿರೋಣದರಿಂದ ಎರಡನೆಯ ಮೂರ್ತಿಗೆ ಮೊದಲನೇ ಮೂರ್ತಿಯ ಬೆಲೆಯ ಅರ್ಧದಷ್ಟು ಬೆಲೆಯನ್ನು ಕಟ್ಟಿದ್ದೇನೆ. ಇನ್ನು ಬಹಳಷ್ಟು ಜನರು ಎಲ್ಲಿ ಕೇಳುತ್ತಾರೆಯೋ ಅಲ್ಲಿಯೇ ಅದನ್ನು ಮರೆತು ಬಿಡುತ್ತಾರೆ. ಇಂಥವರನ್ನು ಮೂರನೆಯ ಮೂರ್ತಿಗೆ ಹೋಲಿಸಬಹುದು. ಇವರು ಕೇಳಿದ ಶಬ್ದದ ಸ್ವಲ್ಪೂ ಪ್ರಯೋಜನವನ್ನು ಪಡೆಯದಿರುವ ಕಾರಣ, ಇವರ ಸಾಂಕೇತಿಕವಾದ ಈ ಮೂರನೆಯ ಮೂರ್ತಿಗೆ ಒಂದು ವರಹ ಬೆಲೆಯನ್ನು ಕಟ್ಟಿದ್ದೇನೆ. ಪಂಡಿತನ ಈ ನಿರ್ಣಯವನ್ನು ಕೇಳಿ ಕಲಾಕಾರನನ್ನೊಳಗೊಂಡು ಸರ್ವರೂ ಸಂತುಷ್ಟರಾದರು.

ಆದ್ದರಿಂದ ಗುರುವಿನ ಉಪದೇಶವನ್ನು ಕೇವಲ ಶ್ರವಣ ಮಾಡಿದರೆ ಸಾಲದು, ಅದರ ಮನನ ಹಾಗೂ ನಿಧಿಧ್ಯಾಸಗಳನ್ನು ಮಾಡಿದಾಗಲೇ ಪ್ರಯೋಜನವು ದೊರೆಯಬಹುದು. ಈ ವಿಧವಾಗಿ ಗುರುವಿನ ಉಪದೇಶವನ್ನು ಲಕ್ಷ್ಯಪೂರ್ವಕವಾಗಿ ಕೇಳುವುದರಲ್ಲಿ ಆಸಕ್ತನಾಗಿರುವ ಶಿಷ್ಯನಿಗೆ ಪೂಜ್ಯಪಾದರು 'ಶುಶ್ರೂಷುಃ' ಎಂದು ಕರೆದಿದ್ದಾರೆ.

ಶಿಷ್ಯನಾದವನು ಗುರುವಿನಿಂದ ಶ್ರವಣ ಮಾಡುವಾಗ ಯಾವ ಯಾವ ವಿಷಯಕವಾಗಿ ಜಿಜ್ಞಾಸೆಯನ್ನು ಮಾಡಬೇಕೆಂಬುದನ್ನು ಕುರಿತು ಪೂಜ್ಯಪಾದರು ಪುನಃ–

ಕಿಂ ಸತ್ಯಂ ಕಿಂ ನು ವಾಽಸತ್ಯಂ ಕ ಆತ್ಮಾ ಕಃ ಪರಶ್ಶಿವಃ ।
ಇತಿ ಶ್ರವಣಸಂಸಕ್ತೋ ಗುರೋಶ್ಶಿಷ್ಯೋ ವಿಶಿಷ್ಯತೇ ॥

ಶ್ರುತ್ವಾ ಶ್ರುತ್ವಾ ಗುರೋರ್ವಾಕ್ಯಂ ಶಿವಸಾಕ್ಷಾತ್ಕ್ರಿಯಾವಹಮ್ ।
ಉಪಶಾಮ್ಯತಿ ಯಃ ಸ್ವಾಂತೇ ಸ ಮುಕ್ತಿಪದಮಾಪ್ನುಯಾತ್ ॥

(ಸಿ.ಶಿ. ೧೭; ೯–೨೦)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸತ್ಯವೆಂದರೆ ಏನು ? ಅಸತ್ಯವೆಂದರೆ ಏನು ? ಆತ್ಮಯೆಂದರೆ ಯಾರು ? ಮತ್ತು ಪರಮಾತ್ಮನೆಂದರೆ ಯಾರು ? ಹೀಗೆ ಜಿಜ್ಞಾಸಾಪೂರ್ವಕವಾಗಿ ಗುರುವಿನಿಂದ ಉಪದೇಶವನ್ನು ಕೇಳುವುದರಲ್ಲಿ ಆಸಕ್ತನಾಗಿರುವ ಶಿಷ್ಯನು ಉಳಿದೆಲ್ಲ ಸಾಮಾನ್ಯ ಶಿಷ್ಯರಿಗಿಂತಲೂ ವಿಲಕ್ಷಣನಾಗಿರುತ್ತಾನೆ. ಅವನು ಶ್ರೇಷ್ಠನು. ಹೇಗೆಂದರೆ ಶಿವಸಾಕ್ಷಾತ್ಕಾರವನ್ನುಂಟುಮಾಡುವ ಗುರುವಿನ ಉಪದೇಶವಾಕ್ಯವನ್ನು ಮೇಲಿಂದ ಮೇಲೆ ಕೇಳಿ ಕೇಳಿ, ಯಾವನು ತನ್ನಲ್ಲಿ ತಾನೇ ಶಾಂತನಾಗುತ್ತಾನೆಯೋ ಅವನೇ ಮುಕ್ತಿಯನ್ನು ಪಡೆಯುತ್ತಾನೆ.

ಗುರುವಿನ ಸಮೀಪದಲ್ಲಿ ಅನೇಕ ಪ್ರಕಾರದ ಶಿಷ್ಯರಿರುತ್ತಾರೆ. ಕೆಲವರು ಸೇವಾ ಶುಶ್ರೂಷೆಗಳನ್ನು ಮಾಡುತ್ತಿದ್ದರೆ ಇನ್ನು ಕೆಲವರು ಆ ಸೇವೆಯನ್ನು ಮಾಡುವುದಲ್ಲದೆ ಗುರುಮುಖದಿಂದ ಶಾಸ್ತ್ರಶ್ರವಣಾದಿಗಳಲ್ಲಿಯೂ ಸಹ ಆಸಕ್ತರಾಗಿರುತ್ತಾರೆ. ಇವರಲ್ಲಿ ಕೇವಲ ಸೇವಾಸಕ್ತನಾದ ಶಿಷ್ಯನಿಗಿಂತಲೂ, ಸೇವೆಯ ಜೊತೆಗೆ ಶ್ರವಣಾಸಕ್ತನಾದ ಶಿಷ್ಯನು ಉತ್ಕೃಷ್ಟನೆಂಬುದಾಗಿ ಪೂಜ್ಯಪಾದರು ಅಪ್ಪಣೆಕೊಡಿಸಿದ್ದಾರೆ. ನಾವು ಅನೇಕ ಕಡೆಗಳಿಂದ ಅನೇಕ ವಿಧವಾದ ಮಾತುಗಳನ್ನು ಕೇಳುತ್ತೇವೆ. ಆದರೆ ಸತ್ಯ–ಅಸತ್ಯಗಳ ಬಗ್ಗೆ, ಆತ್ಮ–ಅನಾತ್ಮಗಳ ಬಗ್ಗೆ ಬಹಳಷ್ಟು ಜನರಲ್ಲಿ ಜಿಜ್ಞಾಸೆಯು ಮೂಡುವುದಿಲ್ಲ ಪ್ರಪಂಚದಲ್ಲಿ ಪರಮಾತ್ಮನು ಸತ್ಯ–ಅಸತ್ಯ ಮತ್ತು ಆತ್ಮ–ಅನಾತ್ಮಗಳನ್ನು ಒಂದರಲ್ಲೊಂದನ್ನು ಬೆರೆಸಿ ಬೇರ್ಪಡಿಸಿ ತಿಳಿಯಲು ಬಾರದ ಹಾಗೆ ಮಾಡಿ ಇಟ್ಟಿದ್ದಾನೆ. ಅಂತೆಯೇ ಶಂಕರಾಚಾರ್ಯರು ಈ ಪ್ರಪಂಚದ ಬಗ್ಗೆ ಹೇಳುವಾಗ– ''ಸತ್ಯಾನೃತೇ ಮಿಥುನೀಕೃತ್ಯ'' ಎಂಬುದಾಗಿ ಹೇಳಿದ್ದಾರೆ. ಇವೆರಡನ್ನೂ ಬೇರ್ಪಡಿಸಿ ತಿಳಿಯುವದಕ್ಕೆ ವಿವೇಕವೆನ್ನುವರು. ಯಾವುದು ಮೂರು ಕಾಲದಲ್ಲಿ ಒಂದೇ ವಿಧವಾಗಿರುತ್ತದೆಯೋ ಅದು ಸತ್ಯವೆಂತಲೂ, ಇನ್ನು ಕ್ಷಣ ಕ್ಷಣಕ್ಕೆ ಯಾವುದು ಪರಿವರ್ತನೆಯನ್ನು ಹೊಂದು ವುದೋ ಅದು ಅಸತ್ಯವೆಂತಲೂ ತಿಳಿದುಕೊಳ್ಳಬೇಕು. ಇದೇ ಲಕ್ಷಣವು ಆತ್ಮ ಅನಾತ್ಮಗಳ ವಿಚಾರದಲ್ಲಿಯೂ ಹೊಂದಿಕೆಯಾಗುವುದು.

ನಮ್ಮೆಲ್ಲರ ಶರೀರವನ್ನೇ ಮೊದಲು ಮಾಡಿಕೊಂಡು ತೋರುವ ಪ್ರಪಂಚ ವೆಲ್ಲವೂ ಷಡ್‌ಭಾವ ವಿಕಾರಗಳಿಂದ ಕೂಡಿ ಕ್ಷಣ ಕ್ಷಣಕ್ಕೆ ಪರಿವರ್ತನೆಯಾಗುತ್ತಿರುತ್ತದೆ. ಅಂತೆಯೇ ಅದಕ್ಕೆಲ್ಲ ಅನಾತ್ಮವೆಂಬುದಾಗಿ ಕರೆಯಬೇಕು. ಇನ್ನು ಈ ಪರಿವರ್ತನಶೀಲ ವಾದ ಜಗತ್ತಿಗೆ ಆಧಾರವಾಗಿದ್ದುಕೊಂಡು ತಾನೆಂದೂ ಪರಿವರ್ತನೆಯನ್ನು ಹೊಂದ ದಿರುವ ತತ್ತ್ವಕ್ಕೇನೇ ಆತ್ಮವೆಂತಲೂ, ಪರಮಾತ್ಮನೆಂತಲೂ ಮತ್ತು ಸತ್ಯವೆಂತಲೂ ಕರೆಯುತ್ತಾರೆ. ಶ್ರೀ ಕೃಷ್ಣ ಪರಮಾತ್ಮನು ಭಗವದ್ಗೀತೆಯ ಸಾಂಖ್ಯಯೋಗದಲ್ಲಿ ಆತ್ಮ–ಅನಾತ್ಮಗಳ ವಿಚಾರವನ್ನು ಪ್ರತಿಪಾದಿಸುತ್ತ ಶರೀರಾದಿಗಳು ಹನ್ಯಮಾನಗಳಾದರೂ ಆತ್ಮನು ಅಹನ್ಯನೆಂಬುದಾಗಿ ಉಪದೇಶಿಸಿದ್ದಾನೆ. ಶರೀರವೆಂದರೆ ವಸ್ತ್ರವಿದ್ದಂತೆ, ಜೀರ್ಣವಾದ ವಸ್ತ್ರವನ್ನು ಬಿಟ್ಟು ನೂತನ ವಸ್ತ್ರವನ್ನು ಓರ್ವ ವ್ಯಕ್ತಿಯು ಧರಿಸುವಂತೆ, ಒಂದೇ ಆದ ಆತ್ಮವು ಅನೇಕ ಶರೀರಗಳನ್ನು ಬದಲಿಸುತ್ತಿರುವುದು ಕಂಡುಬರುತ್ತದೆ. ಹೀಗೆ ಆತ್ಮ–ಅನಾತ್ಮಗಳ ಮಧ್ಯದಲ್ಲಿದ್ದ ಜೀವಾತ್ಮನು ಆತ್ಮ–ಅನಾತ್ಮವನ್ನು ತಿರಸ್ಕರಿಸಿ ಆತ್ಮವನ್ನು ತನ್ನ ಸ್ವರೂಪವನ್ನಾಗಿಯೂ ಹಾಗೂ ಅದು ಸಾಕ್ಷಾತ್ ಪರಮಾತ್ಮ ಸ್ವರೂಪ ವೆಂಬುದಾಗಿಯೂ ತಿಳಿದುಕೊಂಡಾಗಲೇ ಜೀವಾತ್ಮನು ಸಂಸಾರ ಬಂಧನದಿಂದ ಮುಕ್ತನಾಗಬಲ್ಲನು.

ಹೀಗೆ ತನ್ನ ಮುಕ್ತಿಗೆ ಸಾಧನವಾಗಿರುವ ಸತ್ಯ, ಅಸತ್ಯ ಮತ್ತು ಆತ್ಮ–ಅನಾತ್ಮಗಳ ವಿಷಯಕವಾಗಿ ಗುರುವಿನಲ್ಲಿ ಜಿಜ್ಞಾಸೆ ಮಾಡಿ ಅದನ್ನು ತಿಳಿದುಕೊಳ್ಳಬೇಕೆನ್ನುವ ಅತಿ ಆಸಕ್ತಿಯುಳ್ಳ ಶಿಷ್ಯನು ಉಳಿದೆಲ್ಲ ಕೇವಲ ಸೇವಾಸಕ್ತರಾದ ಶಿಷ್ಯರಿಗಿಂತಲೂ ವಿಲಕ್ಷಣ ನಾಗಿರುವನಲ್ಲದೆ ಅವನೇ ಗುರುವಿನ ವಿಶೇಷಕೃಪೆಗೆ ಪಾತ್ರನಾಗುವನು. ಇವನು ಸರ್ವ ಶಿಷ್ಯರಲ್ಲಿ ಏಕೆ ತಾನೇ ಶ್ರೇಷ್ಠನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ ? ಎಂಬ

ಜಿಜ್ಞಾಸೆಯುಂಟಾಗಲು ಪೂಜ್ಯಪಾದರು ಹೇಳಿದ್ದೇನೆಂದರೆ– ಈ ಶಿಷ್ಯನು ಮೇಲಿಂದ ಮೇಲೆ ಗುರುಗಳ ಸಮೀಪಕ್ಕೆ ಹೋಗಿ ಶಿವಸಾಕ್ಷಾತ್ಕಾರವನ್ನುಂಟು ಮಾಡುವ ಮಹಾ ವಾಕ್ಯಗಳನ್ನು ಕೇಳುತ್ತಿರುತ್ತಾನೆ. ಜ್ಞಾನವು ದೃಢವಾಗುವವರೆಗೆ ಶ್ರವಣವನ್ನು ಪುನಃ ಪುನಃ ಮಾಡಲೇಬೇಕು. ಊಟಕ್ಕೆ ಕುಳಿತವನು ತನಗೆ ತೃಪ್ತಿಯಾಗುವವರೆಗೆ ಅನ್ನದ ತುತ್ತುಗಳನ್ನು ತನ್ನ ಬಾಯಿಗೆ ಮೇಲಿಂದ ಮೇಲೆ ಹಾಕುತ್ತಿರುವಂತೆ, ನೀರಡಿಸಿದ ಮನುಷ್ಯನು ತನ್ನ ತೃಷೆಯು ಪ್ರಶಮನವಾಗುವವರೆಗೆ ಜಲಪಾನವನ್ನು ಮಾಡುತ್ತಿರುವಂತೆ, ಜಿಜ್ಞಾಸುವಾದ ಶಿಷ್ಯನೂ ಸಹ ತನಗೆ ದೃಢಜ್ಞಾನವಾಗುವವರೆಗೆ ಗುರುವಿನ ಉಪದೇಶ ವಾಕ್ಯವನ್ನು ಕೇಳುತ್ತಲೇ ಇರಬೇಕು.

ಗುರುವಿನ ಉಪದೇಶವನ್ನು ಒಂದೇ ಸಾರೆ ಶ್ರವಣ ಮಾಡಿದರೆ ಅದು ಏಕೆ ದೃಢಜ್ಞಾನವಾಗುವದಿಲ್ಲ? ಅದಕ್ಕಾಗಿ ಪುನಃ ಪುನಃ ಏಕೆ ತಾನೇ ಶ್ರವಣ ಮಾಡಬೇಕು? ಎಂಬ ಜಿಜ್ಞಾಸೆಯು ಶ್ರೋತೃಗಳ ಮನದಲ್ಲಿ ಮೂಡಬಹುದು. ಇಲ್ಲಿರುವ ರಹಸ್ಯವೆಂದರೆ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಅಹಂಭಾವನೆ ಮತ್ತು ವಿಪರೀತ ಭಾವನೆಗಳೆಂಬ ದೋಷಗಳಿರೋಣದರಿಂದ ಒಂದೇ ಸಾರೆ ಶ್ರವಣ ಮಾಡಿದ ಮಾತ್ರಕ್ಕೆ ದೃಢ ಜ್ಞಾನವು ಉಂಟಾಗುವುದಿಲ್ಲ. ''ನಾನು ಪರಮಾತ್ಮನಾಗಲು ಸಾಧ್ಯವಿಲ್ಲ, ಪರಮಾತ್ಮನೇ ಬೇರೆ, ನಾನೇ ಬೇರೆ'' ಎಂಬ ಮನೋವೃತ್ತಿಗೆ ಅಹಂಭಾವನೆಯನ್ನು ತಳೆಯುತ್ತಾನೆ. ಇನ್ನು ಶರೀರವೇ ನಾನು, ಶರೀರಕ್ಕಿಂತಲೂ ಭಿನ್ನವಾದ ನನ್ನ ಅಸ್ತಿತ್ವವು ಬೇರೆ ಇರುವುದೇ ಇಲ್ಲ ಎಂಬ ವಿಪರೀತವಾದ ತಪ್ಪು ತಿಳುವಳಿಕೆಗೆ 'ವಿಪರೀತ ಭಾವನೆ' ಎನ್ನುವರು. ಇವೆರಡೂ ಭಾವನೆಗಳು ದೃಢಜ್ಞಾನಕ್ಕೆ ಪ್ರತಿಬಂಧಕಗಳಾಗಿರುತ್ತವೆ. ಅನಾದಿಕಾಲದಿಂದ ಬಂದ ಈ ಭಾವನೆಗಳನ್ನು ಒಂದೇ ಕ್ಷಣದಲ್ಲಿ ದೂರಮಾಡುವುದಕ್ಕಾಗುವುದಿಲ್ಲ. ಆದರೆ ಗುರುವಿನ ಸಾನಿಧ್ಯದಲ್ಲಿ ಸತ್ಯ–ಅಸತ್ಯ ಮತ್ತು ಆತ್ಮ–ಅನಾತ್ಮಗಳ ವಿವೇಕ ವಿಷಯಕವಾಗಿ ಮೇಲಿಂದ ಮೇಲೆ ಶ್ರವಣ ಮಾಡುತ್ತಿದ್ದರೆ ಈ ದೋಷಗಳು ಕ್ರಮವಾಗಿ ದೂರಾಗಿ ಜ್ಞಾನವು ದೃಢಗೊಳ್ಳುವುದು. ಅಂತೆಯೇ ಗುರುವಿನ ಉಪದೇಶವನ್ನು ಮೇಲಿಂದ ಮೇಲೆ ಶ್ರವಣ ಮಾಡಬೇಕೆಂದು ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಹೀಗೆ ಗುರೂಪದೇಶವನ್ನು ಮೇಲಿಂದ ಮೇಲೆ ಶ್ರವಣಮಾಡಿದ ಶಿಷ್ಯನು ತನ್ನೆಲ್ಲ ದೋಷಗಳನ್ನು ಕಳೆದುಕೊಂಡು ತನ್ನೊಳಗೇನೇ ಶಾಂತಿಯನ್ನು ಹೊಂದಿ ಮುಕ್ತಿಪದವನ್ನು ಪಡೆಯುವನೆಂಬುದಾಗಿ ತಿಳುಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮಗೈಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೯ ಅಕ್ಟೋಬರ, ೧೯೯೪
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)



ಆಶೀರ್ವಚನ-೨

## ಶುಶ್ರೂಷುಸ್ಥಲ

ಧರ್ಮಾಭಿಮಾನಿಗಳೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನ ಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾ ಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾ ಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲವಾದ ಶುಶ್ರೂಷು ಸ್ಥಲದ ಬಗ್ಗೆ ನಿನ್ನೆಯಿಂದ ಆಲಿಸುತ್ತಿದ್ದೀರಿ. ಇಂದೂ ಸಹ ಅದೇ ವಿಷಯವನ್ನೇ ಮುಂದು ವರಿಸಲಾಗುವುದು.

ಶ್ರವಣದಿಂದಲೇ ಮನುಷ್ಯನು ಸುಧಾರಿಸಬಲ್ಲನು ಹಾಗೂ ಕೆಡಲೂಬಲ್ಲನು. ಸಂಸಾರದ ಮಾತುಗಳನ್ನು ಕೇಳಿ ಕೇಳಿ ಜೀವನು ಸಂಸಾರಿಯಾದರೆ ಅವನೇ ಆತ್ಮ-ಪರಮಾತ್ಮರ ಐಕ್ಯ ಬೋಧಕಗಳಾದ ಮಹಾ ವಾಕ್ಯಗಳನ್ನು ಶ್ರವಣ ಮಾಡಿ ಜೀವನ್ಮುಕ್ತನೂ ಸಹ ಆಗುವನು. ಸಾಮಾನ್ಯವಾಗಿ ನೀರಿನ ಪ್ರವಾಹವು ಅಧೋಮುಖ ವಾಗಿರುವಂತೆ, ಸಂಸಾರದಲ್ಲಿ ಜೀವಿಗಳೂ ಸಹ ನಿಷಿದ್ಧ ಮಾತುಗಳನ್ನು ಕೇಳಿ ಕೇಳಿ ಅಧೋಗತಿಯನ್ನು ಹೊಂದುತ್ತಿರುತ್ತಾರೆ. ಕೆಳಮುಖವಾಗಿ ಹರಿಯುವ ನೀರನ್ನು ಊರ್ಧ್ವ ಮುಖಗೊಳಿಸಲು ಯಂತ್ರಾದಿಗಳ ಸಹಾಯದಿಂದ ಅತಿಪ್ರಯತ್ನಪಡುವಂತೆ ತನ್ನ ಅಧೋಮುಖ ಪ್ರವೃತ್ತಿಯನ್ನು ಬದಲಿಸಿ ಅದನ್ನು ಊರ್ಧ್ವಮುಖಗೊಳಿಸಲು ಸದ್ಗುರುವಿನ ಸಹವಾಸಮಾಡಿ ನಿತ್ಯವೂ ಸಹ ಆತನ ಉಪದೇಶಾಮೃತವನ್ನು ಶ್ರವಣ ಮಾಡಿ, ಮನನ ಹಾಗೂ ನಿದಿಧ್ಯಾಸಗಳೆಂಬ ಪ್ರಯತ್ನವನ್ನು ಮಾಡಬೇಕಾಗುವುದು. ಇಂತಹ ಪ್ರಯತ್ನದಿಂದ ಅಧ್ಯಾತ್ಮವಿದ್ಯೆಯು ಪ್ರಾಪ್ತವಾಗುವುದು.

ಈ ವಿದ್ಯೆಯು ಸರ್ವವಿದ್ಯೆಗಳಲ್ಲಿ ಶ್ರೇಷ್ಠವಾದುದು. ಅಂತೆಯೇ ಭಗವಂತನು ಗೀತೆಯಲ್ಲಿ- ''ಅಧ್ಯಾತ್ಮವಿದ್ಯಾ ವಿದ್ಯಾನಾಂ'' ಎಂಬುದಾಗಿ ಹೇಳಿದ್ದಾನೆ. ಲೌಕಿಕವಾದ ವಿದ್ಯೆಯು ಜೀವನ ನಿರ್ವಾಹಕ್ಕೆ ಸಹಾಯಕವಾದರೆ, ಅಧ್ಯಾತ್ಮವಿದ್ಯೆಯು ಜೀವನ್ಮುಕ್ತಿ ಹಾಗೂ ವಿದೇಹ ಮುಕ್ತಿಗಳಿಗೆ ಮೂಲವಾಗುವುದು.

ಒಮ್ಮೆ ಓರ್ವ ಶಿವಾಚಾರ್ಯರು ಒಬ್ಬ ಸುಶಿಕ್ಷಿತ ವ್ಯಕ್ತಿಯನ್ನು ಕುರಿತು– ''ಏನಯ್ಯಾ ನೀನೇನು ಮಾಡುತ್ತಿರುವೆ ?'' ಎಂಬುದಾಗಿ ಪ್ರಶ್ನಿಸಿದರು. ಆಗ ಅವನು ''ನಾನು ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದೇನೆ'' ಎಂದು ಉತ್ತರಿಸಿದನು. ''ಮುಂದೇನು ಮಾಡುವೆ ?'' ಎಂಬುದಾಗಿ ಅವರು ಕೇಳಲು ''ವಿವಾಹವನ್ನು ಮಾಡಿಕೊಳ್ಳುವೆ'' ''ಆ ಮೇಲೆ ಏನು ಮಾಡುವೆ ?'' ಎಂದು ಪ್ರಶ್ನಿಸಲು ''ಗೃಹಸ್ಥಾಶ್ರಮವನ್ನು ಪರಿಪಾಲಿಸಿ ಸಂತಾನವನ್ನು ಪಡೆಯುವೆನು'', ''ಮುಂದೇನು ಮಾಡುವೆ ?'' ಎಂದು ಕೇಳಲು ''ನನ್ನಂತೆ ಮಕ್ಕಳನ್ನೂ ಸಹ ಸುಶಿಕ್ಷಿತರನ್ನಾಗಿ ಮಾಡುವೆ'' ಎಂದು ಉತ್ತರಿಸಿದನು. ''ಆ ಮೇಲೆ ಏನು ಮಾಡುವೆ ?'' ಎಂದು ಕೇಳಲು ''ನನ್ನಂತೆ ಮಕ್ಕಳಿಗೆ ವಿವಾಹವನ್ನು ಮಾಡುವೆ''. ಮುಂದೇನು ಮಾಡುವೆ ? ಮುಂದೇನು ಮಾಡುವೆ ? ಎಂದು ಕೇಳುತ್ತ ಹೋದಂತೆಲ್ಲ ಅವೆಲ್ಲವುಗಳಿಗೆ ಉತ್ತರಿಸುತ್ತ ಕೊನೆಗೆ ಏನೂ ಹೇಳಲು ಉಳಿಯದಿದ್ದಾಗ ''ಸತ್ತುಹೋಗುವೆ'' ಎಂದು ಹೇಳಿದನು. ಅಷ್ಟಕ್ಕೂ ಬಿಡದೆ ಆ ಶಿವಾಚಾರ್ಯರು ''ಸತ್ತ ಮೇಲೆ ಏನು ಮಾಡುವೆ ?'' ಎಂದು ಪ್ರಶ್ನಿಸಿದರು. ಆಗ ಆ ಗೃಹಸ್ಥನು– ''ಸಾಯುವ ವರೆಗಿನ ಜೀವನದ ಪರಿಜ್ಞಾನ ನನಗಿದೆಯೇ ವಿನಃ ಸತ್ತಮೇಲಿನ ಜೀವನದ ಬಗ್ಗೆ ನನಗೆ ಅರಿವಿಲ್ಲ, ಅದರ ಬಗ್ಗೆ ನಾನೇನನ್ನೂ ತಿಳಿದುಕೊಂಡಿಲ್ಲ'' ಎಂಬುದಾಗಿ ನುಡಿಯಲು ಆ ಶಿವಾಚಾರ್ಯರು– ''ಅಯ್ಯಾ ! ನೀನು ಕಲಿತಿರುವ ಈ ವಿದ್ಯೆ ಲೌಕಿಕವಾದುದು. ಇದು ಕೇವಲ ಭುಕ್ತಿಗೆ ಮಾತ್ರ ಸಹಾಯಕವಾದುದು. ವಿದ್ಯೆಗಳಲ್ಲಿಯೇ ಶ್ರೇಷ್ಠವಾದ ಅಧ್ಯಾತ್ಮ ವಿದ್ಯೆಯನ್ನು ನೀನು ಸಂಪಾದಿಸಿಕೊಂಡರೆ, ಸತ್ತಮೇಲಿನ ಗತಿಯನ್ನು ಸಹ ಅರಿಯ ಬಹುದು. ಆದ್ದರಿಂದ ಲೌಕಿಕ ವಿದ್ಯೆ ಎಷ್ಟಿದ್ದರೂ ಸರಿಯೇ, ಅಧ್ಯಾತ್ಮ ವಿದ್ಯೆಯನ್ನು ಸಂಪಾದಿಸಿಕೋ'' ಎಂಬುದಾಗಿ ತಿಳಿ ಹೇಳಿದರು.

ಈ ಅಧ್ಯಾತ್ಮ ವಿದ್ಯೆಯು ಗುರುವಿನ ಉಪದೇಶದ ಹೊರತು ತಾನಾಗಿಯೇ ಸಹಜವಾಗಿ ದೊರೆಯುವುದಿಲ್ಲವೆಂಬ ವಿಷಯವನ್ನು ಕುರಿತು ಪೂಜ್ಯಪಾದರು–

ನ ಬುದ್ಧ್ಯತಿ ಗುರೋರ್ವಾಕ್ಯಂ ವಿನಾ ಶಿಷ್ಯಸ್ಯ ಮಾನಸಮ್ ।
ತೇಜೋ ವಿನಾ ಸಹಸ್ರಾಂಶೋಃ ಕಥಂ ಸ್ಫುರತಿ ಪಂಕಜಮ್ ॥

ಸೂರ್ಯಸ್ಯೋದಯಮಾತ್ರೇಣ ಸೂರ್ಯಕಾಂತಃ ಪ್ರಕಾಶತೇ ।
ಗುರೋರಾಲೋಕಮಾತ್ರೇಣ ಶಿಷ್ಯೋ ಬೋಧೇನ ಭಾಸತೇ ॥

(ಸಿ. ಶಿ. ೧೭; ೭೧–೭೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸೂರ್ಯನ ಪ್ರಕಾಶವಿಲ್ಲದೆ ಕಮಲವು ಅರಳದಿರುವಂತೆ ಗುರುವಿನ ಉಪದೇಶ ವಾಕ್ಯವಿಲ್ಲದೆ ಶಿಷ್ಯನ ಮನಸ್ಸಿನಲ್ಲಿ ಜ್ಞಾನೋದಯವು ಆಗಲಾರದು. ಸೂರ್ಯನ ಉದಯ ಮಾತ್ರದಿಂದ ಸೂರ್ಯಕಾಂತ ಶಿಲೆಯು ಪ್ರಕಾಶಿಸುವಂತೆ, ಗುರುವಿನ ಆಲೋಕಮಾತ್ರದಿಂದ ಶಿಷ್ಯನು ಜ್ಞಾನದಿಂದ ಪ್ರಕಾಶಿಸುವವನಾಗುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿಷ್ಯನ ಬುದ್ಧಿಯ ವಿಕಾಸವನ್ನು ಕುರಿತು ಎರಡು ದೃಷ್ಟಾಂತಗಳ ಮೂಲಕವಾಗಿ ಇಲ್ಲಿ ತಿಳಿಯಪಡಿಸಿದ್ದಾರೆ. ಕಮಲವು ವಿಕಸಿತ

ವಾಗಬೇಕಾದರೆ ಮತ್ತು ಸೂರ್ಯಕಾಂತ ಮಣಿಯು ಪ್ರಕಾಶವನ್ನೀಯಬೇಕಾದರೆ ಸೂರ್ಯಪ್ರಕಾಶವು ಅವಶ್ಯವಾಗಿ ಬೇಕಾಗುವಂತೆ, ಶಿಷ್ಯನ ಬುದ್ಧಿಯಲ್ಲಿ ಜ್ಞಾನೋದಯ ವಾಗಬೇಕಾದರೆ ಗುರುವಿನ ಉಪದೇಶ ವಾಕ್ಯವು ಬೇಕೇ ಬೇಕಾಗುತ್ತದೆ. ಇಲ್ಲಿ ಕಮಲವು ಅರಳುವಂತೆ ಶಿಷ್ಯನ ಬುದ್ಧಿಯೂ ಸಹ ಗುರುವಿನ ಜ್ಞಾನೋಪದೇಶವನ್ನು ಕೇಳಿ ಅರಳಿ ಜ್ಞಾನ ಪ್ರಕಾಶದಿಂದ ಪರಿಪೂರ್ಣವಾದಾಗಲೇನೇ ಮನುಷ್ಯನಿಗೆ ಪೂರ್ಣ ಸುಖದ ಲಾಭವು ಉಂಟಾಗುವುದು. ಇಂತಹ ಪೂರ್ಣ ಸುಖದ ಲಾಭವಾದಾಗ ಸಂಸಾರದ ಅಸಾರತೆ ಹಾಗೂ ಅನಿತ್ಯತೆಗಳು ತಿಳಿದು ಆತ್ಮ–ಪರಮಾತ್ಮರ ನಿತ್ಯತ್ವದ ಬೋಧೆ ಯುಂಟಾಗುವುದು. ಇದೆಲ್ಲವೂ ಸದ್ಗುರುವಿನ ಕೃಪಾಶೀರ್ವಾದದ ಫಲವೆಂದೇ ಭಾವಿಸಬೇಕು.

ಶಿಷ್ಯನಾದವನು ಸದ್ಗುರುವಿನ ಸಮೀಪಕ್ಕೆ ಹೋಗಿ ಅವನನ್ನು ಸೇವಾದಿಗಳಿಂದ ಸಂತುಷ್ಟಗೊಳಿಸಿ ಆತನು ಪ್ರಸನ್ನನಾದಾಗ ಯಾವ ವಿಧವಾದ ಪ್ರಶ್ನೆಗಳನ್ನು ಕೇಳಬೇಕೆಂಬುದರ ವಿಷಯವಾಗಿ ಪೂಜ್ಯಪಾದರು–

ಅದ್ವೈತಪರಮಾನಂದ ಪ್ರಬೋಧೈಕ ಪ್ರಕಾಶಕಮ್ ।
ಉಪಾಯಂ ಶೃಣುಯಾಚ್ಛಿಷ್ಯಃ ಸದ್ಗುರುಂ ಪ್ರಾಪ್ಯ ಸಾಂಜಲಿಃ ।
ಕಿಂ ತತ್ತ್ವಂ ಪರಮಂ ಜ್ಞೇಯಂ ಕೇನ ಸರ್ವೇ ಪ್ರತಿಷ್ಠಿತಾಃ ।
ಕಸ್ಯ ಸಾಕ್ಷಾತ್ಕ್ರಿಯಾಮುಕ್ತಿಃ ಕಥಯೇತಿ ಸಮಾಸತಃ ॥
ಇತಿ ಪ್ರಶ್ನೇ ಕೃತೇ ಪೂರ್ವಂ ಶಿಷ್ಯೇಣ ನಿಯತಾತ್ಮನಾ ।
ಬ್ರೂಯಾತ್ತತ್ತ್ವಂ ಗುರುಸ್ತಸ್ಮೈ ಯೇನ ಸ್ಯಾತ್ಸಂಸೃತೇರ್ಲಯಃ ॥

(ಸಿ. ಶಿ. ೧೭; ೭೩–೭೫)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅದ್ವಿತೀಯವಾದ ಪರಮಾನಂದದ ಬೋಧವನ್ನು ಪ್ರಕಾಶಗೊಳಿಸುವ ಸದ್ಗುರುವಿನಲ್ಲಿಗೆ ಬಂದ ಶಿಷ್ಯನು ಅಂಜಲಿಬದ್ಧನಾಗಿ ಈ ಕೆಳಗೆ ಹೇಳಿದ ರೀತಿಯಲ್ಲಿ ಜಿಜ್ಞಾಸೆಯನ್ನು ಮಾಡಬೇಕು. ಅದು ಹೇಗೆಂದರೆ– ''ಹೇ ಸದ್ಗುರುವೇ, ಈ ಜಗತ್ತಿನಲ್ಲಿ ತಿಳಿದುಕೊಳ್ಳಲು ಯೋಗ್ಯವಾದ ಶ್ರೇಷ್ಠ ತತ್ತ್ವವಾವುದು ? ಈ ಚರಾಚರ ಪ್ರಪಂಚವೆಲ್ಲವೂ ಯಾವುದರಿಂದ ಪ್ರತಿಷ್ಠಾಪಿ ಸಲ್ಪಟ್ಟಿದೆ ? ಯಾವುದರ ಸಾಕ್ಷಾತ್ಕಾರದಿಂದ ಮುಕ್ತಿಯು ಪ್ರಾಪ್ತವಾಗುವುದು ? ಇದೆಲ್ಲ ವನ್ನು ಸವಿಸ್ತಾರವಾಗಿ ತಿಳುಹಿಸಬೇಕು''. ಏಕಾಗ್ರಚಿತ್ತನಾದ ಶಿಷ್ಯನು ಈ ರೀತಿಯಾಗಿ ಪ್ರಶ್ನೆಯನ್ನು ಮಾಡಲಾಗಿ ಸದ್ಗುರುವು ಅವನಿಗೆ ಸಂಸಾರವನ್ನು ಲಯಗೊಳಿಸುವ ತತ್ತ್ವವನ್ನು ಕುರಿತು ಉಪದೇಶ ಮಾಡಬೇಕು.

''ತದ್ವಿಜ್ಞಾನಾರ್ಥಂ ಸ ಗುರುಮೇವಾಧಿಗಚ್ಛೇತ್ ಸಮಿತ್ಪಾಣಿಃ, ಶ್ರೋತ್ರಿಯಂ ಬ್ರಹ್ಮನಿಷ್ಠಮ್'' ಎಂಬ ಮುಂಡಕ ಶ್ರುತಿಯ ವಚನದಂತೆ ಆತ್ಮಜ್ಞಾನದ ಉಪದೇಶವನ್ನು ಪಡೆದು ಶಿಷ್ಯನಾದವನು ಶಾಸ್ತ್ರಜ್ಞಾನಿಯೂ, ಆತ್ಮಾನುಭವಿಯೂ ಆದ ಸದ್ಗುರುವಿಗೆ ಶರಣಾಗತನಾಗಿ ವಿನಯದಿಂದ ಕರಜೋಡಿಸಿ ಮೂರುವಿಧವಾದ ಪ್ರಶ್ನೆಗಳನ್ನು ಮಾಡಬೇಕು. ಅವು ಯಾವುವು ಅಂದರೆ–ಈ ಜಗತ್ತಿನಲ್ಲಿ ತಿಳಿದುಕೊಳ್ಳಲು ಯೋಗ್ಯ

ವಾದ ಪರಮತತ್ತ್ವವು ಯಾವುದು ? ಈ ಪ್ರಪಂಚಕ್ಕೆ ಯಾವುದು ಆಧಾರವಾಗಿದೆ ? ಯಾವುದರ ಸಾಕ್ಷಾತ್ಕಾರದಿಂದ ಮುಕ್ತಿಯು ಪ್ರಾಪ್ತವಾಗುವುದು ? ಇವುಗಳೇ ಈ ಮೂರು ಪ್ರಶ್ನೆಗಳು. ಹೀಗೆ ಸಂಯಮಿಯಾದ ಶಿಷ್ಯನು ಪೂರ್ವಪಕ್ಷ ರೂಪವಾಗಿ ಪ್ರಶ್ನೆಗಳನ್ನು ಉಪಸ್ಥಾಪನೆಗೊಳಿಸಲು ಸದ್ಗುರುವು ಸಂಸಾರವನ್ನು ಇಲ್ಲದಾಗಿಸುವ ಆ ತತ್ತ್ವವನ್ನು ಕುರಿತು ಉಪದೇಶ ಮಾಡುತ್ತಾನೆ.

ಯಾರು ಇಂತಹ ಪ್ರಶ್ನೆಗಳನ್ನು ಮಾಡುವರೋ ಅವರಿಗೇನೇ ಈ ತತ್ತ್ವವನ್ನು ಉಪದೇಶ ಮಾಡುವುದು. ತತ್ತ್ವದ ಜಿಜ್ಞಾಸೆಯಿಲ್ಲದಿರುವ ಸಾಮಾನ್ಯ ವ್ಯಕ್ತಿಗಳಿಗೆ ತತ್ತ್ವ ಜ್ಞಾನವನ್ನು ಉಪದೇಶ ಮಾಡಿದರೆ ಅದೆಲ್ಲ ನಿಷ್ಪ್ರಯೋಜಕವಾಗುವುದು. ಅಂತೆಯೇ ಶ್ರೀಮನ್ನಿಜಗುಣ ಶಿವಯೋಗಿಗಳು–''ಪರಿಪಕ್ವ ಹೃದಯವಲ್ಲದ ಮಂದಮತಿಗಳಿಗೆ ಬೋಧಿಪೆನೆಂಬ ಭ್ರಮೆಯಾಕೋ ಮನುಜಾ !'' ಎಂಬುದಾಗಿ ಹೇಳಿ ಅನಧಿಕಾರಿಗಳಿಗೆ ತತ್ತ್ವೋಪದೇಶ ಮಾಡುವವರನ್ನು ಕುರಿತು 'ಮಂದಮತಿಗಳು' ಎಂದು ಸಂಬೋಧಿಸಿದ್ದಾರೆ. ಆದ್ದರಿಂದ ಸತ್ಪಾತ್ರಕ್ಕೆ ದಾನವನ್ನು ಮಾಡುವಂತೆ, ಸಚ್ಛಿಷ್ಯನಿಗೇನೇ ತತ್ತ್ವೋಪದೇಶವನ್ನು ಮಾಡಬೇಕು.

ಯಾವುದೊಂದು ಸಮಾರಂಭದಲ್ಲಿ ಅನೇಕ ವಿಷಯಗಳ ಮೇಲೆ ಪ್ರವಚನಾದಿಗಳು ನಡೆದಾಗ ಶ್ರೋತೃಗಳಾಗಿ ಬಂದ ಸಾವಿರಾರು ಜನರು ಒಂದೇ ವಿಚಾರ ಧಾರೆಯವರು ಇರುವುದಿಲ್ಲ, ಕೆಲವರಿಗೆ ಕೆಲವರ ಮಾತು ರುಚಿಸಿದರೆ ಮತ್ತೆ ಕೆಲವರಿಗೆ ಬೇರೆ ಕೆಲವರ ಮಾತುಗಳು ರುಚಿಸುತ್ತವೆ. ಅಂತೆಯೇ ಕೆಲವು ಜನರು ಆಸಕ್ತಿಯಿಂದ ಆಲಿಸುತ್ತಿದ್ದರೆ, ಬೇರೆ ಕೆಲ ಜನರು ನಿರಾಸಕ್ತಿಯಿಂದ ನಿದ್ರೆ ಮಾಡುತ್ತಿರುತ್ತಾರೆ. ಇಲ್ಲವೆ ಪರಸ್ಪರ ಮಾತಾಡುತ್ತ ಕುಳಿತುಕೊಂಡಿರುತ್ತಾರೆ. ಈ ಎಲ್ಲ ಸನ್ನಿವೇಶಗಳನ್ನು ನೋಡಿದಾಗ ಯಾರು ಯಾವ ವಿಷಯಕ್ಕೆ ಅಧಿಕಾರಿಗಳೋ ಅವರಿಗೇನೇ ಆ ವಿಷಯವಾಗಿ ಬೋಧಿಸಿದರೆ ಅದು ಪ್ರಯೋಜನಕಾರಿಯಾಗುವುದು. ಇಲ್ಲವಾದರೆ ಆ ಬೋಧನೆಯು ನಿರರ್ಥಕವಾಗಿ ಹೋಗುವುದು. ಅಂತೆಯೇ ತತ್ತ್ವ ವಿಷಯಕವಾದ ಬೋಧೆಯನ್ನು ಕೇಳಿದವರಿಗೇನೇ ಹೇಳಬೇಕೇ ವಿನಃ ಆಸಕ್ತಿಯಿಲ್ಲದ ಅನ್ಯರಿಗೆ ಉಪದೇಶಿಸಕೂಡದು.

ಈ ಪ್ರಪಂಚದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಒಂದಿಲ್ಲೊಂದು ವಿಷಯಕವಾದ ಅಜ್ಞಾನವು ಇದ್ದೇ ಇರುತ್ತದೆ. ಎಲ್ಲ ಅಜ್ಞಾನಗಳಿಗೆ ಮೂಲ ಕಾರಣವಾದುದು ಮೂಲಾಜ್ಞಾನವು. ಆಯಾ ವಿಷಯಗಳ ತಿಳುವಳಿಕೆಯಾದಾಗ ಆಯಾ ವಸ್ತುನಿಷ್ಠ ಅಜ್ಞಾನವು ದೂರವಾಗುವುದೇ ವಿನಃ ಮೂಲಾಜ್ಞಾನವು ಮಾತ್ರ ದೂರವಾಗುವುದಿಲ್ಲ, ಹೀಗೆ ಮೂಲಾಜ್ಞಾನವನ್ನು ದೂರಮಾಡಿಕೊಳ್ಳದಿರುವ ವ್ಯಕ್ತಿಯು ಲೋಕದಲ್ಲಿ ಅವನೆಂತಹ ಜ್ಞಾನಿ–ವಿಜ್ಞಾನಿಯೆಂದು ಕರೆಸಿಕೊಳ್ಳುತ್ತಿದ್ದರೂ, ಆಧ್ಯಾತ್ಮದ ಕ್ಷೇತ್ರದಲ್ಲಿ ಅವನು ಅಜ್ಞನೇ ಅರ್ಥಾತ್ ಅಜ್ಞಾನಿಯು. ಪರತತ್ತ್ವವನ್ನು ತಿಳಿದವನೇ ಜ್ಞಾನಿಯಲ್ಲದೆ ಉಳಿದವರೆಲ್ಲರೂ ಅಜ್ಞಾನಿಗಳೇ. ಅಂತೆಯೇ ಶ್ರೀ ಮನ್ನಿಜಗುಣ ಶಿವಯೋಗಿಗಳು–

ಅಜ್ಞಾನಿಯಲ್ಲವೆ ನೀನು ಜೀವನೇ ।
ಸುಜ್ಞಾನಿಯೆಂದು ನುಡಿವರೆ ॥ ಪ ॥

ಚೈತನ್ಯರೂಪನಾಗಿರ್ದು ಜಡಪಂಚ ।
ಭೂತದೇಹವಿದನೀನೆಂಬೆ ॥
ಪೂತ ನಿರ್ಮಲ ನಿಜತತ್ತ್ವಮಯನಾಗಿ ।
ಸೂತಕಾದಿ ವಿಧಿವಿಡಿದಿರ್ಪೆ ॥ ೧ ॥

ಮೂರವಸ್ಥೆಗಳೊಂದರೊಳಗೊಂದಿಲ್ಲ ।
ಮೂರವಸ್ಥೆಯನರಿಯುತ ॥
ಬೇರೆ ಸಾಕ್ಷಿಕನಾಗಿರ್ದು ನೀ ಸಂಸೃತಿ ।
ದೂರಿಗೀಡಾಗಿ ಬಳಲುವೆ ॥ ೨ ॥

ಚಿತ್ತೊಂದೇಯದು ಗುರುಶಂಭುಲಿಂಗ ವೆಂ ।
ದುತ್ತಮ ಶ್ರುತಿ ಸಾರುತಿರೆ ॥
ಮತ್ತೆ ನೀನೋರ್ವನಲ್ಲದೆ ಬರಿದೆ ।
ಮೋಹಿಸುತಿರ್ಪೆ ನಾಮರೂಪವನ್ನು ॥ ೩ ॥

ಎಂಬುದಾಗಿ ಜೀವಸಂಬೋಧನ ಸ್ಥಲದಲ್ಲಿ ಜೀವಿಗಳನ್ನು ಕುರಿತು ಉಪದೇಶಿಸಿದ್ದಾರೆ. ತನ್ನ ಚಿದ್ರೂಪವನ್ನು ಮರೆತು ಜಡವಾದ ದೇಹಾದಿಗಳೇ ಅಹಂಕರಿಸುವ ವ್ಯಕ್ತಿಯು ತನ್ನ ನಿರ್ಮಲ ಸ್ವರೂಪವನ್ನು ಮರೆತು ಸೂತಕದಲ್ಲಿ ಸುತ್ತಾಡುತ್ತಿರುವವರು ಅಜ್ಞಾನಿಯಲ್ಲದೆ ಮತ್ತಿನ್ನೇನು ? ಜಾಗ್ರತ, ಸ್ವಪ್ನ ಮತ್ತು ಸುಷುಪ್ತಿಗಳೆಂಬ ಅವಸ್ಥೆಗಳು ಭಿನ್ನ–ಭಿನ್ನ ಗಳಾಗಿದ್ದರೂ ಆ ಮೂರೂ ಅವಸ್ಥೆಗಳನ್ನು ಅರಿಯುವ ತಾನು ಅವೆಲ್ಲಕ್ಕೂ ಸಾಕ್ಷಿ ಯಾಗಿದ್ದರೂ ತನ್ನ ಆ ಚಿದ್ರೂಪವನ್ನು ಮರೆತು ನಾಮ–ರೂಪಾದಿಗಳನ್ನು ಮೋಹಿಸುವವನೂ ಸಹ ಅಜ್ಞನೇ. ಆದ್ದರಿಂದ ಲೌಕಿಕದ ಬೇರೆ ಬೇರೆ ಜ್ಞಾನವನ್ನು ಪಡೆದುಕೊಂಡಿದ್ದರೂ ಆತ್ಮಜ್ಞಾನವಿಲ್ಲದವನು ಅಜ್ಞನೆನ್ನುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಆದ್ದರಿಂದ ಈ ಅಜ್ಞತನವನ್ನು ದೂರ ಮಾಡಿಕೊಳ್ಳಲು ವಿವೇಕ, ವೈರಾಗ್ಯ, ಶಮಾದಿ ಷಟ್ಕ ಸಂಪತ್ತಿ ಮತ್ತು ಮುಮುಕ್ಷುತಾ ಎಂಬ ಸಾಧನ ಚತುಷ್ಟಯ ಸಂಪನ್ನನಾದ ಅಧಿಕಾರಿ ಶಿಷ್ಯನು ಸದ್ಗುರುವಿನಲ್ಲಿಗೆ ಬಂದು ತತ್ತ್ವಜಿಜ್ಞಾಸೆಯನ್ನೂ ಮಾಡಿದಾಗ ಸದ್ಗುರುಗಳು ಅವನಿಗೆ ತತ್ತ್ವೋಪದೇಶವನ್ನು ಮಾಡುತ್ತಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪೂರ್ವದಲ್ಲಿ ಶಿಷ್ಯನ ಮುಖಾರ ವಿಂದದಿಂದ ಮೂರು ವಿಧಗಳಾದ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರವನ್ನೀಯುವ ಉದ್ದೇಶದಿಂದ ಮೊದಲನೆಯದಾದ ಪ್ರಶ್ನೆಗೆ ಉತ್ತರವನ್ನು–

ಶಿವ ಏವ ಪರಂ ತತ್ತ್ವಂ ಚಿದಾನಂದ ಸದಾಕೃತಿಃ ।
ಸ ಯಥಾರ್ಥಸ್ತದನ್ಯಸ್ಯ ಜಗತೋ ನಾಸ್ತಿ ನಿತ್ಯತಾ ॥

(ಸಿ. ಶಿ. ೧೭–೭೬)

ಈ ವಿಧವಾಗಿ ಪ್ರಧಾನ ಮಾಡಿದ್ದಾರೆ. ತಾತ್ಪರ್ಯವೇನೆಂದರೆ, ಸಚ್ಚಿದಾನಂದ ಸ್ವರೂಪ ನಾದ ಶಿವನೋರ್ವನೇ ಪರಮತತ್ತ್ವನಾಗಿದ್ದಾನೆ. ಅವನೋರ್ವನೆ ಯಥಾರ್ಥನೂ ಆಗಿರುತ್ತಾನೆ. ಅವನ ಹೊರತಾಗಿ ಉಳಿದಾವ ತತ್ತ್ವಗಳೂ ನಿತ್ಯಗಳಾಗಿರುವುದಿಲ್ಲ.

ಈ ಪ್ರಪಂಚದಲ್ಲಿ ಶಿವನೇ ಸರ್ವೋತ್ಕೃಷ್ಟವಾದ ತತ್ತ್ವನಾಗಿರುತ್ತಾನೆ– ''ಅನಾರೋಪಿತಂ ರೂಪಂ ತತ್ತ್ವಮ್'' ಎಂಬ ಲಕ್ಷಣೋಕ್ತಿಗನುಸಾರವಾಗಿ ಯಾವುದರ ಸ್ವರೂಪವು ಆರೋಪಿತವಾಗಿರುವುದಿಲ್ಲವೋ ಅದಕ್ಕೇನೇ ತತ್ತ್ವ ಎಂಬುದಾಗಿ ಕರೆಯ ಲಾಗುತ್ತದೆ. ವೀರಶೈವ ಸಿದ್ಧಾಂತದಲ್ಲಿ ಪ್ರಪಂಚವೆಲ್ಲವೂ ತತ್ತ್ವಾತ್ಮಕವಾಗಿ ಪ್ರತಿಪಾದಿ ಸಲ್ಪಟ್ಟಿದೆ. ಪೃಥ್ವೀ ತತ್ತ್ವವನ್ನೇ ಮೊದಲುಗೊಂಡು ಶಿವತತ್ತ್ವ ಪರ್ಯಂತವಾಗಿ ಮೂವತ್ತಾರು ತತ್ತ್ವಗಳು ಪ್ರತಿಪಾದಿಸಲ್ಪಟ್ಟಿವೆ. ಈ ಎಲ್ಲ ತತ್ತ್ವಗಳಿಗೆ ಪರಶಿವನೇ ಮೂಲ ತತ್ತ್ವನಾಗಿರುತ್ತಾನೆ. ಅವನು ಸತ್ತು, ಚಿತ್ತು ಹಾಗೂ ಆನಂದರೂಪನೂ ಆಗಿರುತ್ತಾನೆ. ಯಾವುದು ಸದಾ ಸದಾ ಇರುವುದೋ ಅದಕ್ಕೆ 'ಸತ್' ಎಂತಲೂ ಯಾವಾಗಲೂ ಪ್ರಕಾಶರೂಪವಾಗಿರುವುದಕ್ಕೆ 'ಚಿತ್' ಎಂತಲೂ, ಇನ್ನೂ ಸದಾ ಸುಖರೂಪವಾಗಿರುವುದಕ್ಕೆ 'ಆನಂದ'ವೆಂತಲೂ ಕರೆಯುತ್ತಾರೆ. ಇಂತಹ ಸಚ್ಚಿದಾನಂದ ಸ್ವರೂಪವಾದ ಪರಮ ತತ್ತ್ವವೆಂದರೆ ಪರಶಿವನೋರ್ವನೇ. ಅಂತೆಯೇ ಅವನಿಗೆ 'ಯಥಾರ್ಥ'ವೆಂತಲೂ ಕರೆಯಲಾಗಿದೆ. ಅವನನ್ನು ಹೊರತುಪಡಿಸಿ ವಿಷ್ಣ್ವಾದಿ ತತ್ತ್ವಗಳಾವವೂ ನಿತ್ಯಗಳಲ್ಲ. ಅವನೋರ್ವನೇ ಸನಾತನ ತತ್ತ್ವನಾಗಿದ್ದಾನೆ ಎಂಬುದಾಗಿ ಪೂಜ್ಯಪಾದರು ಮೊದಲನೆಯದಾದ ಪ್ರಶ್ನೆಗೆ ಉತ್ತರವನ್ನು ತಿಳಿಯಪಡಿಸಿದ್ದಾರೆಂಬು ದಾಗಿ ನಿರೂಪಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ಅಕ್ಟೋಬರ, ೧೯೯೪
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)

■■

ಆಶೀರ್ವಚನ-೩

# ಶುಶ್ರೂಷುಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನ ಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾ ಸನ್ನಿಧಿಯ ಮಹಾಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸುತ್ತಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರಸ್ಥಲವಾದ ಶುಶ್ರೂಷು ಸ್ಥಲದ ಬಗ್ಗೆ ಕಳೆದೆರಡು ದಿನಗಳಿಂದ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಇಂದೂ ಸಹ ಅದೇ ವಿಷಯವನ್ನೇ ಮುಂದುವರೆಸಲಾಗುವುದು.

ಈ ಹಿಂದೆ ಶಿಷ್ಯನು ಕೇಳಿದ ಮೂರು ಪ್ರಶ್ನೆಗಳ ಪೈಕಿ ಮೊದಲನೆಯದಾದ ಪ್ರಶ್ನೆಯ ಉತ್ತರವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಿಳಿಸಿ ಇಂದು ಈ ಜಗತ್ತಿಗೆ ಆಧಾರನಾರು ? ಯಾರಿಂದ ಈ ಜಗತ್ತು ಪ್ರತಿಷ್ಠೆಯನ್ನು ಪಡೆದಿದೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತ–

ಅಯಥಾರ್ಥಪ್ರಪಂಚೋಽಯಂ ಪ್ರತಿತಿಷ್ಠತಿ ಶಂಕರೇ ।
ಸದಾತ್ಮನಿ ಯಥಾಶುಕ್ತೌ ರಜತತ್ವಂ ವ್ಯವಸ್ಥಿತಮ್ ॥

(ಸಿ. ಶಿ. ೧೭–೭೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಯತಾರ್ಥವಾದ ಈ ಪ್ರಪಂಚವು ಸದ್ರೂಪನಾದ ಪರಮಾತ್ಮನಲ್ಲಿ ಶುಕ್ತಿಯೊಳಗೆ ರಜತತ್ವದಂತೆ ಪ್ರತಿಷ್ಠಾಪಿಸಲ್ಪಟ್ಟಿರುತ್ತದೆ.

ಪ್ರಪಂಚದಲ್ಲಿಯ ನಾಮ–ರೂಪಗಳು ಪರಿವರ್ತನಶೀಲಗಳಾಗಿರೋಣದರಿಂದ ಅವುಗಳಿಗೆ ಅನಿತ್ಯಗಳೆಂದು ಕರೆಯಲಾಗಿದೆ. ನದಿಯಲ್ಲಿಯ ನೀರು ಸದಾ ಮುಂದೆ ಮುಂದೆ ಹರಿಯುತ್ತಿರುವಂತೆ, ದೀಪದ ಜ್ವಾಲೆಯು ಊರ್ಧ್ವಮುಖವಾಗಿ ಉರಿಯುತ್ತಿರು ವಂತೆ, ಪ್ರಪಂಚದ ಈ ನಾಮರೂಪಗಳೂ ಸಹ ಕ್ಷಣ ಕ್ಷಣಕ್ಕೆ ಪರಿವರ್ತನಗೊಳ್ಳು ತ್ತಿರುತ್ತವೆ. ಆದರೂ ಸಾಮ್ಯತೆಯ ಮೂಲಕ ಅಂದಿನಿಂದ ಇಂದಿನವರೆಗೆ ಒಂದೇ ಯಾಗಿರುವದೆಂಬ ಭ್ರಮೆಯು ಸರ್ವರಿಗೂ ಉಂಟಾಗುತ್ತದೆ. ನದಿಯ ನೀರು ಕ್ಷಣ ಕ್ಷಣಕ್ಕೆ

ಬದಲಿಯಾಗುತ್ತಿದ್ದರೂ ಅದೇ ನೀರೆಂದು ಭಾಸವಾಗುತ್ತಿರುವಂತೆ ಎಂದಿನಿಂದಲೂ ಪರಿವರ್ತನಗೊಳ್ಳುತ್ತಿರುವ ಈ ಪ್ರಪಂಚವನ್ನು ಒಂದೇ ಎಂದು ಭಾವಿಸುವುದು ಭ್ರಮೆಯಲ್ಲದೆ ಮತ್ತೇನು ? ಹೀಗೆ ಒಂದು ವಸ್ತುವು ಕ್ಷಣ ಕ್ಷಣಕ್ಕೂ ಮುಂದೆ ಸರಿಯುತ್ತಿದ್ದರೆ ಅದರ ಸರಿಯುವಿಕೆಗೆ ಒಂದು ಆಧಾರವು ಬೇಕಾಗುತ್ತದೆ. ನಿರಾಧಾರದಲ್ಲಿ ವಸ್ತುವಿನ ಸಂಚಲನೆಯು ಸಂಭವಿಸುವುದಿಲ್ಲ. ಚಲನಶೀಲವಾದ ವಸ್ತುವಿಗೆ ಯಾವುದು ಆಧಾರವಾಗುವುದೋ ಅದು ಮಾತ್ರ ಸ್ಥಿರವಾಗಿರಬೇಕಾಗಿರುತ್ತದೆ.

ಒಂದು ರಥದಲ್ಲಿಯ ಎರಡು ಗಾಲಿಗಳು ತಿರುಗುತ್ತಿರುವುದನ್ನು ನಾವು ನೋಡುತ್ತಿರುತ್ತೇವೆ. ಇಲ್ಲಿ ತಿರುಗುವ ಈ ಗಾಲಿಗಳಿಗೆ ತಿರುಗದೇ ಇರುವ ಅದರ 'ಅಚ್ಚು' ಆಧಾರವಾಗಿರುವುದು ಕಂಡುಬರುತ್ತದೆ. ಅದರಂತೆ ಕ್ಷಣ ಕ್ಷಣಕ್ಕೂ ಪರಿವರ್ತನ ರೂಪದಲ್ಲಿ ತಿರುಗುತ್ತಿರುವ ಈ ಜಗತ್ತಿಗೆ ತಿರುಗದಿರುವ ತತ್ತ್ವವೇ ಆಧಾರವಾಗಬಲ್ಲದು. ಹಾಗಾದರೆ ಆ ಆಧಾರನಾರು ? ಎಂಬುದಾಗಿ ವಿಚಾರಿಸಲು ಶಿವನೇ ಎಂಬುದಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಮೇಜಿನ ಮೇಲೆ ಒಂದು ಪುಸ್ತಕವನ್ನಿಟ್ಟು ಈ ಪುಸ್ತಕಕ್ಕೆ ಆಧಾರವಾವುದು ಎಂದು ಕೇಳಿದಾಗ 'ಮೇಜು' ಎಂದು ಹೇಳಲಾಗುವುದು. ಆ ಮೇಜಿಗೆ ಆಧಾರವಾವುದು ? ಎಂದು ಪ್ರಶ್ನಿಸಲು 'ಭೂಮಿ' ಎಂತಲೂ ಸಹ ಸಾಮಾನ್ಯವಾಗಿ ಸರ್ವರೂ ಉತ್ತರಿಸುತ್ತಾರೆ. ಈ ಪ್ರಶ್ನೆಯನ್ನು ಹಾಗೆಯೇ ಮುಂದುವರೆಸುತ್ತ ಭೂಮಿಗೆ ಆಧಾರವಾದದ್ದು ಯಾವುದು ಎಂದು ಕೇಳಲು ಸಹಸಾ ಎಲ್ಲರಿಗೂ ಉತ್ತರಿಸ ಲಿಕ್ಕಾಗುವುದಿಲ್ಲ. ನಾವೆಲ್ಲರೂ ಭೂಮಿಯ ಮೇಲೆ ವಾಸವಾಗಿದ್ದರೂ ಭೂಮಿಗೆ ಆಧಾರ ವಾದದ್ದು ಯಾವುದೆಂಬುದನ್ನು ತಿಳಿದುಕೊಳ್ಳಲು ಯಾರಿಗೆ ತಾನೆ ಸಮಯವಿದೆ ? ಎಲ್ಲರೂ ಉಣ್ಣುವ ತಿನ್ನುವ ವ್ಯವಹಾರದಲ್ಲಿಯೇ ಮದ–ಮತ್ತರಾಗಿ ಹೋಗಿದ್ದಾರೆ. ಈ ಆಧಾರ–ಅಧಿಷ್ಠಾನಗಳ ಗೊಡವೆ ಯಾರಿಗೂ ಬೇಕಾಗಿರುವುದಿಲ್ಲ. ಅಂತೆಯೇ ಯಾವನೋ ಒಬ್ಬ ಧೀರನು ಈ ಆಧಾರ–ಅಧಿಷ್ಠಾನಗಳ ವಿಷಯಕವಾಗಿ ಜಿಜ್ಞಾಸೆಯನ್ನು ತಾಳಿ ಈ ಪ್ರಪಂಚವು ಎಲ್ಲಿ ಪ್ರತಿಷ್ಠಿತವಾಗಿದೆ ? ಎಂಬುದಾಗಿ ಸದ್ಗುರುವನ್ನು ಪ್ರಶ್ನಿಸುತ್ತಾನೆ. ಆಗ ಸದ್ಗುರುಗಳು ಈ ಪ್ರಪಂಚಕ್ಕೆ ಆಧಾರ ಶಿವನೆಂಬುದಾಗಿ ಹೇಳಿ ಸಮಾಧಾನಗೈಯುತ್ತಾರೆ.

ಈ ಪೂರ್ವದಲ್ಲಿ ಮೇಜಿಗೆ ಭೂಮಿಯು ಆಧಾರವಾಗಿದ್ದರೆ, ಭೂಮಿಗೆ ಆಧಾರ ವಾದುದು ಏನು ? ಎಂಬುದಾಗಿ ನಾವು ವಿಚಾರಮಾಡಲು ಯಾವುದು ಯಾವುದರಿಂದ ಜನಿಸುವುದೋ ಅದುವೇ ಅದಕ್ಕೆ ಆಧಾರವೆಂಬ ನಿಯಮವನ್ನು ಹಿಡಿದುಕೊಂಡು ಸಾಗಿದರೆ ಯಾವುದಕ್ಕೆ ಯಾವುದು ಆಧಾರ ? ಮತ್ತು ಸರ್ವಕ್ಕೂ ಆಧಾರವಾದುದು ಯಾವದೆಂಬುದು ತಿಳಿದುಬರುತ್ತದೆ. ಭೂಮಿಯ ಉತ್ಪತ್ತಿಗೆ ಕಾರಣವಾದದ್ದು ಜಲವಾದ್ದ ರಿಂದ ಜಲತತ್ತ್ವವು ಭೂಮಿ ತತ್ತ್ವಕ್ಕೆ ಆಧಾರವಾಗಿರುತ್ತದೆ. ಇದೇ ಪ್ರಕಾರವಾಗಿ ನೀರಿಗೆ ಆಧಾರವಾದುದು ಅಗ್ನಿ, ಅಗ್ನಿಗೆ ಆಧಾರವಾದದ್ದು ವಾಯು, ವಾಯುವಿಗೆ ಆಧಾರ ವಾದದ್ದು ಆಕಾಶ, ಆಕಾಶಕ್ಕೆ ಆಧಾರವಾದದ್ದು ಮಾಯೆ. ಮಾಯೆಗೆ ಆಧಾರವಾದದ್ದು ಪರಶಿವ–ಬ್ರಹ್ಮವು ಅದಕ್ಕೆ ಆಧಾರವಾದದ್ದು ಬೇರಾವುದೂ ಇಲ್ಲ. ಅದುವೇ ಪರಮತತ್ತ್ವವು. ಅಂತೆಯೇ ಸರ್ವಾಧಾರವೂ ಆಗಿರುತ್ತದೆ.

ಇಲ್ಲಿ ಪೂಜ್ಯಪಾದರು ಶುಕ್ತಿ–ರಜತದ ಉದಾಹರಣೆಯನ್ನು ಕೊಟ್ಟು ತಿಳಿಸಿದ್ದನ್ನು ಗಮನಿಸಬೇಕು. ಮಧ್ಯಾಹ್ನದ ಬಿಸಿಲಿನೊಳಗೆ ಅಂಗಾತಾಗಿ ಬಿದ್ದಿರುವ ಒಂದು ಶಿಂಪೆಯು ಬಿಸಿಲಿನಿಂದಾಗಿ ಬೆಳ್ಳಿಯಂತೆ ಹೊಳೆಯುತ್ತಿರುತ್ತದೆ. ಬೆಳ್ಳಿಯ ಬಗ್ಗೆ ಆಸಕ್ತಿಯುಳ್ಳ ಓರ್ವ ವ್ಯಕ್ತಿಗೆ ಆ ದೃಶ್ಯವು ಕಣ್ಣಿಗೆ ಬಿದ್ದಾಗ ಅವನು ಅದನ್ನು ಬೆಳ್ಳಿಯೆಂದು ಭಾವಿಸಿ ತೆಗೆದು ಕೊಳ್ಳಲು ಧಾವಿಸಿ ಹೋಗುತ್ತಾನೆ. ಆದರೆ ಅಲ್ಲಿ ಹೋಗಿ ನೋಡಲಾಗಿ ರಜತವು ಸಿಗದೆ ಸಿಂಪೆಯೇ ಕೈಗೆ ಹತ್ತುವುದು. ಇಲ್ಲಿ ತಾತ್ಕಾಲಿಕವಾಗಿ ತೋರುವ ಬೆಳ್ಳಿಯ ನಾಮ–ರೂಪ ಗಳಿಗೆ ಶಿಂಪೆಯೇ ಆಧಾರವಾಗಿರುವಂತೆ ತೋರುವ ನಾಮ–ರೂಪಾತ್ಮಕವಾದ ಪ್ರಪಂಚಕ್ಕೆ ಶಿವನೇ ಆಧಾರನಾಗಿದ್ದಾನೆ. ಶಿವನ ಅಸ್ತಿತ್ವದಿಂದಲೇ ಈ ಪ್ರಪಂಚವು 'ಅಸ್ತಿ'ಯಾಗಿ ತೋರುತ್ತದೆ. ಇದಕ್ಕೆ ಸ್ವತಂತ್ರವಾದ ಅಸ್ತಿತ್ವವಿರುವುದಿಲ್ಲ. ಹೀಗೆ ಶಿಷ್ಯನ ಎರಡನೆಯದಾಗಿರುವ ಪ್ರಶ್ನೆಗೆ ಉತ್ತರಿಸಿದ ಪೂಜ್ಯಪಾದರು ಅವನ ಮೂರನೆಯದಾದ ಪ್ರಶ್ನೆಗೆ ಉತ್ತರಿಸುತ್ತ ಪುನಃ–

ಶಿವೋಽಹಮಿತಿ ಭಾವೇನ ಶಿವೇ ಸಾಕ್ಷಾತ್ಕೃತೇ ಸ್ಥಿರಮ್ ।
ಮುಕ್ತೋ ಭವತಿ ಸಂಸಾರಾನ್ಮೋಹಗ್ರಂಥೇರ್ವಿಭೇದತಃ ॥

(ಸಿ. ಶಿ. ೧೭–೭೮)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ನಾನು ಶಿವಸ್ವರೂಪನಿದ್ದೇನೆ ಎಂಬ ದೃಢಭಾವನೆಯಿಂದ ಶಿವಸಾಕ್ಷಾತ್ಕಾರವನ್ನು ಮಾಡಿಕೊಂಡಾಗ ಜೀವಾತ್ಮನು ಸಂಸಾರದ ಮೋಹಗ್ರಂಥಿಗಳಿಂದ ಬಿಡಲ್ಪಟ್ಟವನಾಗಿ ಮುಕ್ತನಾಗುತ್ತಾನೆ.

ಈ ಪೂರ್ವದಲ್ಲಿ ಶಿಷ್ಯನು, ಮುಕ್ತಿಯು ಸಿಗಬೇಕಾದರೆ ಯಾರ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂಬುದಾಗಿ ಪ್ರಶ್ನಿಸಿದ್ದರಿಂದ ಇಲ್ಲಿ ಪೂಜ್ಯರು ಅದಕ್ಕೆ ಉತ್ತರ ವನ್ನಿತ್ತಿದ್ದಾರೆ. ಮುಕ್ತಿಗೆ ಶಿವನ ಸಾಕ್ಷಾತ್ಕಾರವೇ ಮೂಲವಾದುದು. ಆದರೆ ಆ ಶಿವನನ್ನು ತನಗಿಂತಲೂ ಭಿನ್ನವಾಗಿ ತಿಳಿದುಕೊಂಡರೆ ಅದರಿಂದ ಮುಕ್ತಿ ದೊರೆಯದು. ಆ ಶಿವನನ್ನು ತನ್ನ ಆತ್ಮರೂಪವನ್ನಾಗಿ ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಪೂಜ್ಯರು ಇಲ್ಲಿ ಅಪ್ಪಣೆಕೊಡಿಸಿ ದ್ದಾರೆ. ಅಂತೆಯೇ ಸಾಧಕನು 'ಶಿವೋಽಹಂ' ಎಂಬ ಭಾವನೆಯನ್ನು ದೃಢಪಡಿಸಿಕೊಳ್ಳ ಬೇಕಾಗುವುದು. ತನ್ನ ಸ್ವರೂಪದ ಅಜ್ಞಾನಮೂಲಕವಾಗಿ ಬಂದಿರುವ ಈ ಸಂಸಾರ ಬಂಧನವು ಈ ಸ್ವರೂಪಜ್ಞಾನದಿಂದಲೇ ನಿವೃತ್ತಿಯಾಗುತ್ತದೆ. ಯಾವಾಗ ತನ್ನ ಆತ್ಮವು ಪರಮಾತ್ಮರೂಪವಾದುದು ಎಂಬ ದೃಢಜ್ಞಾನವಾಗುವುದೋ ಆಗ ಶರೀರಾದಿಗಳಲ್ಲಿ ರುವ ಈತನ ಮೋಹ ಮಮಕಾರಗಳೆಲ್ಲ ಇಲ್ಲವಾಗಿ ಹೃದಯಗ್ರಂಥಿಯು ಬಿಟ್ಟು ಹೋಗುತ್ತದೆ. ಈ ಹೃದಯಗ್ರಂಥಿಯ ವಿಮೋಚನೆಯೇ ಮುಕ್ತಿಯು.

ಅಂತೆಯೇ ''ಮಮೇತಿ ಬದ್ಧ್ಯತೇ ಜಂತುಃ ನ ಮಮೇತಿ ವಿಮುಚ್ಯತೇ'' ಎಂಬುದಾಗಿ ಹೇಳಿದ್ದಾರೆ. ನಾವು ಅನಾತ್ಮ ಪದಾರ್ಥಗಳಿಗೆಲ್ಲ ನಾನು–ನನ್ನದೆಂಬುದಾಗಿ ಭಾವಿಸುತ್ತ ಹೋದಂತೆ ಬದ್ಧಿತರಾಗುತ್ತ ಹೋಗುತ್ತೇವೆ. ಯಾವಾಗ ಈ ಶರೀರಾದಿಗಳು 'ನಾನೂ ಅಲ್ಲ ಇವುಗಳು ನನ್ನವೂ ಸಹ ಅಲ್ಲ' ಎಂಬ ದೃಢಭಾವನೆ ಬರುವುದೋ ಆಗ ಇವನು 'ಅಹಂ' ಮತ್ತು 'ಮಮ' ಎಂಬ ಬಂಧನದಿಂದ ಬಿಡುಗಡೆಯಾಗಿ ಮುಕ್ತನಾಗುತ್ತಾನೆ. ಈ ತೆರನಾಗಿ ಜೀವಾತ್ಮನು ಮುಕ್ತಿಯನ್ನು ಪಡೆಯಬೇಕಾದರೆ

''ಶಿವೋऽಹಮ್'' ಭಾವನೆಯಿಂದ ಶಿವಸಾಕ್ಷಾತ್ಕಾರವನ್ನು ಪಡೆಯಬೇಕೆಂಬುದಾಗಿ ಪೂಜ್ಯರು ಮೂರನೆಯದಾದ ಪ್ರಶ್ನೆಗೆ ಉತ್ತರಿಸಿದ್ದಾರೆ. ಇನ್ನು ಈ ಮುಕ್ತನಾದ ಜೀವಿಯನ್ನು ಕುರಿತು ಪೂಜ್ಯಪಾದರು ಜೀವನ್ಮುಕ್ತಿಯ ವಿಷಯಕವಾಗಿ ತಿಳಿಯಪಡಿಸುತ್ತ ಪುನಃ–

ಶಿವಂ ಭಾವಯ ಚಾತ್ಮಾನಂ ಶಿವಾದನ್ಯಂ ನ ಚಿಂತಯ ।
ಏವಂ ಸ್ಥಿರೇ ಶಿವಾದ್ವೈತೇ ಜೀವನ್ಮುಕ್ತೋ ಭವಿಷ್ಯಸಿ ॥

ಏವಂ ಪ್ರಚೋದಿತಃ ಶಿಷ್ಯೋ ಗುರುಣಾ ಗುಣಶಾಲಿನಾ ।
ಶಿವಮೇವ ಜಗತ್ಪಶ್ಯನ್ ಜೀವನ್ಮುಕ್ತೋऽಭಿಜಾಯತೇ ॥

(ಸಿ. ಶಿ. ೧೭; ೭೯–೮೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಎಲೈ ಶಿಷ್ಯನೇ ! ನಿನ್ನನ್ನು ಶಿವರೂಪವನ್ನಾಗಿ ಭಾವಿಸು. ಶಿವನ ಹೊರತು ಬೇರಾವುದನ್ನು ಚಿಂತಿಸಬೇಡ. ಹೀಗೆ ನಿನ್ನಲ್ಲಿ ಶಿವಾದ್ವೈತ ಭಾವನೆಯು ಸ್ಥಿರವಾದರೆ ನೀನು ಜೀವನ್ಮುಕ್ತನೇ ಆಗುವಿ. ಈ ತೆರನಾಗಿ ಗುಣಶಾಲಿಯಾದ ಗುರುವಿನಿಂದ ಪ್ರಚೋದಿಸಲ್ಪಟ್ಟ ಶಿಷ್ಯನು ಈ ವಿಶ್ವವೆಲ್ಲವನ್ನು ಶಿವಮಯವಾಗಿ ಕಾಣುತ್ತ ಜೀವನ್ಮುಕ್ತವೇ ಆಗುತ್ತಾನೆ.

ಅತ್ಯಂತ ಭಕ್ತಿ–ಶ್ರದ್ಧೆ ಹಾಗೂ ವಿಶ್ವಾಸಗಳಿಂದ ಆತ್ಮ ಜಿಜ್ಞಾಸೆಗಾಗಿ ಬಂದ ಶಿಷ್ಯನನ್ನು ಕುರಿತು ಸದ್ಗುರುಗಳು ಅವನ ಆತ್ಮವನ್ನೇ ಪರಮಾತ್ಮವನ್ನಾಗಿ ತಿಳಿಯಪಡಿಸಿ ಅದರ ಚಿಂತನೆಯಲ್ಲಿ ಅವನನ್ನು ತೊಡಗಿಸುತ್ತಾರೆ. ಈ ಚಿಂತನೆಯಲ್ಲಿ ತೊಡಗಿದ ಅವನು ಶಿವನ ಹೊರತಾಗಿ ಬೇರಾವ ಚಿಂತನೆಯನ್ನು ಮಾಡುವುದಿಲ್ಲ. ಏಕೆಂದರೆ ತನ್ನ ಆತ್ಮವೇ ಪರಮಾತ್ಮವಾದಾಗ ತನ್ನನ್ನೇ ಸರ್ವತ್ರ ಆತನು ಕಾಣುತ್ತಿರುವುದರಿಂದ ಅನ್ಯಪದಾರ್ಥಗಳು ಭಾಸಿಸುವ ಪ್ರಶ್ನೆಯೇ ಇರುವುದಿಲ್ಲ. ಹೀಗೆ ಅನ್ಯಚಿಂತನೆಯಿಲ್ಲದೆ ಶಿವಾದ್ವೈತ ಚಿಂತನೆಯಲ್ಲಿಯೇ ಸ್ಥಿರಗೊಂಡ ವ್ಯಕ್ತಿಯು ಜೀವನ್ಮುಕ್ತನಾಗುತ್ತಾನೆ. ಸರ್ವರಂತೆ ಅವನು ಬಾಹ್ಯದಲ್ಲಿ ವ್ಯವಹರಿಸುತ್ತಿದ್ದರೂ ಅಂತರಂಗದಲ್ಲಿ ಅಸಂಗನಾಗಿರೋಣದರಿಂದ ಜೀವನದ ಜೊತೆಗೇನೇ ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸುತ್ತಿರೋಣದರಿಂದ ಅವನಿಗೆ ಜೀವನ್ಮುಕ್ತನೆಂಬುದಾಗಿ ಕರೆಯಲಾಗಿದೆ. ಜ್ಞಾನ–ವೈರಾಗ್ಯಾದಿಗಳೆಂಬ ಉತ್ಕೃಷ್ಟಗುಣಸಂಪನ್ನನಾದ ಸದ್ಗುರುವಿನಿಂದ ಚೆನ್ನಾಗಿ ಬೋಧಿಸಲ್ಪಟ್ಟ ಶಿಷ್ಯನು ತನ್ನ ಜೀವನ್ಮುಕ್ತಾವಸ್ಥೆಯಲ್ಲಿ ಜಗತ್ತೆಲ್ಲವನ್ನು ಶಿವಮಯವನ್ನಾಗಿಯೇ ನೋಡುತ್ತಿರುತ್ತಾನೆ. ಶುಶ್ರೂಷುಗಳಾಗಿ ಬಂದಿರುವ ನೀವೂ ಸಹ ಇಂತಹ ಸ್ಥಿತಿಯನ್ನು ಪಡೆದುಕೊಳ್ಳಿರೆಂಬುದಾಗಿ ಅಪ್ಪಣೆ ಕೊಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ. ಇಲ್ಲಿಗೆ ಶುಶ್ರೂಷುಸ್ಥಲವು ಪೂರ್ಣವಾದುದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ಅಕ್ಟೋಬರ, ೧೯೯೪
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)



ಆಶೀರ್ವಚನ-೧

# ಸೇವ್ಯಸ್ಥಲ

ಮುಮುಕ್ಷುಗಳೇ !

ದ್ವಾದಶ ಜ್ಯೋತಿರ್ಲಿಂಗಗಳಲ್ಲೊಂದಾದ ತ್ರ್ಯಂಬಕೇಶ್ವರ ಮಹಾದೇವನ ನಿತ್ಯನಿವಾಸದಿಂದ ಪಾವನಗೊಂಡಿರುವ ನಾಶಿಕ ಕ್ಷೇತ್ರದ ಈ ಮುಕ್ತಿಧಾಮದಲ್ಲಿ, ಆಶ್ವೀನಮಾಸದ ಶರನ್ನವರಾತ್ರಿಯ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಶ್ರೀ ಮಹಾಸನ್ನಿಧಿಯ ಮಹಾಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ನೀವೆಲ್ಲ ಶ್ರದ್ಧೆಯಿಂದ ಭಾಗವಹಿಸುತ್ತಿದ್ದೀರಿ.

ಶ್ರೀ ಜಗದ್ಗುರು ರೇಣುಕಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಸಾದಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನ ಗಳನ್ನು ಆಲಿಸುತ್ತಿದ್ದೀರಿ. ಕಳೆದು ಮೂರುದಿನಗಳಿಂದ ಶುಶ್ರೂಷು ಸ್ಥಲದ ಬಗ್ಗೆ ನೀವೆಲ್ಲ ಕೂಲಂಕಷವಾಗಿ ತಿಳಿದುಕೊಂಡಿದ್ದೀರಿ. ಇಂದು ಈ ಪ್ರಸಾದಿಸ್ಥಲದ ಕೊನೆಯ ಅವಾಂತರ ಸ್ಥಲವಾದ ಸೇವ್ಯಸ್ಥಲದ ಬಗ್ಗೆ ವಿವೇಚಿಸೋಣ.

''ಸೇವಿತುಂ ಯೋಗ್ಯಃ ಸೇವ್ಯಃ'' ಎಂಬ ವ್ಯುತ್ಪತ್ತಿಗನುಸಾರವಾಗಿ ಸೇವಿಸಲ್ಪಡಲು ಯೋಗ್ಯವಾದ ಜೀವನ್ಮುಕ್ತನೇ ಇಲ್ಲಿ ಸೇವ್ಯನೆಂದು ಕರೆಯಿಸಿಕೊಳ್ಳುತ್ತಾನೆ. ಯೋಗಜ ಆಗಮದಲ್ಲಿ ಈ ಸೇವ್ಯವನ್ನು ಕುರಿತು–

ದೃಷ್ಟಿಃ ಸ್ಥಿರಾ ಯಸ್ಯ ವಿನೈವದೃಶ್ಯಮ್ ।
ವಾಯುಃ ಸ್ಥಿರೋ ಯಸ್ಯ ವಿನಾ ಪ್ರಯತ್ನಮ್ ॥
ಚಿತ್ತಂ ಸ್ಥಿರಂ ಯಸ್ಯ ವಿನಾವಲಂಬಮ್ ।
ಸ ಏವ ಯೋಗಿ ಸ ಗುರುಃ ಸ ಸೇವ್ಯಃ ॥

ಹೀಗೆ ಹೇಳಲಾಗಿದೆ. ತಾತ್ಪರ್ಯವೇನೆಂದರೆ ದೃಶ್ಯವಸ್ತುವಿಲ್ಲದೆ ಯಾರ ದೃಷ್ಟಿಯು ಸ್ಥಿರವಾಗಿ ಇದೆಯೋ, ಕುಂಭಕಾದಿ ಪ್ರಯತ್ನವಿಲ್ಲದೆ ಯಾರ ಪ್ರಾಣವಾಯುವು ಸ್ಥಿರವಾಗಿರುವುದೋ, ಸಾಕಾರ ನಿರಾಕಾರಗಳ ಯಾವ ಆಲಂಬನೆಯೂ ಇಲ್ಲದೆ ಯಾರ ಚಿತ್ತವು ಸುಸ್ಥಿರವಾಗಿರುತ್ತದೆಯೋ, ಅವನೇ ಯೋಗಿಯು. ಅವನೇ ಸದ್ಗುರುವು ಮತ್ತು ಅವನೇ ನಿಜವಾಗಿಯೂ ಸಹ ಸೇವ್ಯನಾಗಿರುತ್ತಾನೆ, ಜೀವನ್ಮುಕ್ತಿಯ ವಿಲಕ್ಷಣವಾದ ಅವಸ್ಥೆಯನ್ನು ಪಡೆದುಕೊಂಡಿರುವ ಸಹಜನಾದ ಶಿವಯೋಗಿಯೇ ಸರ್ವರಿಂದಲೂ ಸೇವೆ ಹೊಂದಲು ಯೋಗ್ಯನಾಗಿರೋಣದರಿಂದ ಅವನಿಗೆ ಸೇವ್ಯನೆಂಬುದಾಗಿ ಕರೆಯಲಾಗಿದೆ. ಈ ಸೇವ್ಯನನ್ನೇ ಕುರಿತು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಗುರುವಾಕ್ಯಾಮೃತಾಸ್ವಾದಾತ್ಪ್ರಾಪ್ತಬೋಧಮಹಾಫಲಃ ।
ಶುಶ್ರೂಷುರೇವ ಸರ್ವೇಷಾಂ ಸೇವ್ಯತ್ವಾತ್ಸೇವ್ಯ ಉಚ್ಯತೇ ॥

ಗುರೂಪದಿಷ್ಟೇ ವಿಜ್ಞಾನೇ ಚೇತಸಿ ಸ್ಥಿರತಾಂ ಗತೇ ।
ಸಾಕ್ಷಾತ್ಕೃತ ಶಿವಃ ಶಿಷ್ಯೋ ಗುರುವತ್ಪೂಜ್ಯತೇ ಸದಾ ॥

(ಸಿ. ಶಿ. ೧೭; ೮೧-೮೨)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪೂರ್ವ ಸ್ಥಲದಲ್ಲಿ ಹೇಳಿದ ಗುರೂಪದೇಶ ವಾಕ್ಯರೂಪವಾದ ಅಮೃತದ ಆಸ್ವಾದನೆಯಿಂದ ಉತ್ಪನ್ನವಾದ ಶಿವಾದ್ವೈತಜ್ಞಾನರೂಪವಾದ ಮಹಾಫಲವನ್ನು ಹೊಂದಿದ ಶುಶ್ರೂಷುಸ್ಥಲದ ಜೀವನ್ಮುಕ್ತನೇ ಸರ್ವರಿಂದಲೂ ಸೇವಿಸಲ್ಪಡಲು ಯೋಗ್ಯನಾಗಿರೋಣದರಿಂದ ಅವನಿಗೆ ಸೇವ್ಯನೆಂದು ಕರೆಯುತ್ತಾರೆ. ಗುರುವಿನಿಂದ ಉಪದೇಶಿಸಲ್ಪಟ್ಟ ಶಿವಾದ್ವೈತ ಜ್ಞಾನವು ಮನಸ್ಸಿನಲ್ಲಿ ಸ್ಥಿರವಾಗಿರೋಣದರಿಂದ ಶಿವಸಾಕ್ಷಾತ್ಕಾರವನ್ನು ಹೊಂದಿದ ಶಿಷ್ಯನೂ ಸಹ ಗುರುವಿನಂತೆ ಲೋಕದಲ್ಲಿ ಯಾವಾಗಲೂ ಪೂಜಿಸಲ್ಪಡುತ್ತಾನೆ ಎಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ.

ಜಗತ್ತಿನ ಜನರು ಪಶು, ಪಾಷಾಣ, ಪಾದಪ; ನದಿ, ಸೂರ್ಯ, ಚಂದ್ರ ಮತ್ತು ಸಜ್ಜನ ಮುಂತಾದವರನ್ನು ಪ್ರಸಂಗಾನುಸಾರವಾಗಿ ಪೂಜಿಸುತ್ತಿರುತ್ತಾರೆ. ನಾವು ಯಾವುದೇ ಒಂದು ವಸ್ತುವನ್ನು ಅಥವಾ ವ್ಯಕ್ತಿಯನ್ನು ಪೂಜಿಸಬೇಕಾದರೆ ಗುಣಗಳೇ ಕಾರಣಗಳಾಗಿರುತ್ತವೆ. ಅಂತೆಯೇ ಒಬ್ಬ ಸುಭಾಷಿತಕಾರನು- ''ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ'' ಎಂಬುದಾಗಿ ಹೇಳಿದ್ದಾರೆ. ಪೂಜನೀಯತ್ವಕ್ಕೆ ಲಿಂಗ ವಯಸ್ಸುಗಳು ಮುಖ್ಯವಾಗಿರುವುದಿಲ್ಲ. ಆದರೆ ಆ ವ್ಯಕ್ತಿಯಲ್ಲಿಯ ಗುಣಗಳೇ ಮುಖ್ಯವಾದವುಗಳು. ಗೋವು ಮುಂತಾದ ಪಶುಗಳಾಗಲೀ, ಬಿಲ್ವ ಮುಂತಾದ ವೃಕ್ಷಗಳಾಗಲೀ ತಮ್ಮಲ್ಲಿರುವ ಉತ್ಕೃಷ್ಟವಾದ ತ್ಯಾಗಗುಣದಿಂದಲೇ ಪೂಜ್ಯಗಳಾಗಿರುತ್ತವೆ. ಅದರಂತೆ ಈ ಹಿಂದಿನ ಸ್ಥಲದಲ್ಲಿ ಉಪದೇಶಿಸಲ್ಪಟ್ಟ ಶುಶ್ರೂಷು ಸ್ಥಲದ ಸಾಧಕನು ಗುರುವಾಕ್ಯಾಮೃತವನ್ನು ಆಸ್ವಾದಿಸಿ ''ಮಹಾಬೋಧ'' ಎಂಬ ಫಲವನ್ನು ಪಡೆದುಕೊಂಡಿರುತ್ತಾನೆ. ಈ ಬೋಧವೇ ಅವನನ್ನು ಲೋಕಪೂಜ್ಯನನ್ನಾಗಿ ಮಾಡುತ್ತದೆ.

ನಾವು ಜೀವನದಲ್ಲಿ ಪಡೆಯಬೇಕಾಗಿರುವ ಅನೇಕ ಫಲಗಳಲ್ಲಿ ಜ್ಞಾನವೆಂಬ ಫಲವು ಸರ್ವಶ್ರೇಷ್ಠವಾದುದು. ಅಂತೆಯೇ ಇದಕ್ಕೆ 'ಮಹಾಫಲ'ವೆಂದು ಕರೆದಿದ್ದಾರೆ. ಇದರ ನಾಶವು ಎಂದೂ ಆಗದ ಕಾರಣದಿಂದಾಗಿಯೂ ಇದಕ್ಕೆ ಮಹಾಫಲವೆಂದು ಕರೆಯುವರು. ಇದು ಗುರುವಿನ ವಾಕ್ಯಾಮೃತವನ್ನು ಆಸ್ವಾದಿಸಿದವರಿಗೆ ಮಾತ್ರ ದೊರೆಯುವುದು. ಸಾಮಾನ್ಯವಾಗಿ ಶಾಸ್ತ್ರಗಳಲ್ಲಿ ಅಮೃತವು ಸ್ವರ್ಗ, ಚಂದ್ರಕಿರಣ, ಸಮುದ್ರ, ವಧುವಿನ ಅಧರ ಮತ್ತು ನಾಗಲೋಕ ಮುಂತಾದವುಗಳಲ್ಲಿ ಇರುವುದಾಗಿ ವರ್ಣಿಸಲ್ಪಟ್ಟಿದೆ. ವಿಚಾರಮಾಡಿ ನೋಡಲು ಇವಾವುಗಳಲ್ಲಿಯೂ ಅಮೃತವು ಇರುವುದಿಲ್ಲ.

ಸಮುದ್ರದಲ್ಲಿ ಅಮೃತವಿದ್ದಿದ್ದರೆ ಅದರ ಜಲವು ಕ್ಷಾರವಾಗಿರುತ್ತಿರಲಿಲ್ಲ. ವಧುವಿನ ಅಧರದಲ್ಲಿ ಅಮೃತವಿದ್ದುದು ನಿಜವೇ ಆಗಿದ್ದರೆ, ಆ ಅಧರಾಮೃತವನ್ನು ಪಾನಮಾಡಿದ ಪತಿಯು ಮೃತ್ಯುಮುಖನಾಗಬಾರದಿತ್ತು. ಚಂದ್ರನಲ್ಲಿ ಅಮೃತವಿದ್ದದ್ದು ನಿಜವಾಗಿದ್ದರೆ ಅವನಿಗೆ ಕ್ಷಯರೋಗವಾಗಬಾರದಾಗಿತ್ತು. ಇನ್ನು ನಾಗಲೋಕದಲ್ಲಿ ಒಂದು ವೇಳೆ ಅಮೃತವಿದ್ದಿದ್ದರೆ ಸರ್ಪಗಳಾವವೂ ವಿಷಮಯವಾಗಬಾರದಿತ್ತು. ಆದರೆ ಇವೆಲ್ಲವುಗಳು ಅಮೃತಕ್ಕೆ ವಿಪರೀತವಾದ ಸ್ಥಿತಿಯನ್ನು ಹೊಂದಿರೋಣದರಿಂದ ಇವಾವುಗಳಲ್ಲಿಯೂ ಅಮೃತವಿರುವುದಿಲ್ಲ. ನಿಜವಾಗಿಯೂ ಅಮೃತವಿರುವುದೆಂದರೆ ಸದ್ಗುರುವಿನ ಉಪದೇಶ ದಲ್ಲಿ ಮಾತ್ರ. ಅಂತೆಯೇ ಗುರುವಿನ ಉಪದೇಶಕ್ಕೆ ಅಮೃತೋಪದೇಶವೆಂದು ಕರೆಯುತ್ತಾರೆ. ಶ್ರೀ ಮನ್ನಿಜಗುಣ ಶಿವಯೋಗಿಗಳು– ''ಶ್ರೀ ಗುರುವಚನದಿಂದಧಿಕ ಸುಧೆಯುಂಟೆ ?'' ಎಂಬುದಾಗಿ ಪ್ರಶ್ನಿಸಿ ಶ್ರೀಗುರುವಿನ ವಚನವೇ ಅಮೃತವೆಂಬುದಾಗಿ ಸಿದ್ಧಪಡಿಸಿದ್ದಾರೆ. ಇಂತಹ ಗುರುವಾಕ್ಯಾಮೃತವನ್ನು ಆಸ್ವಾದಿಸಿ ಮಹಾಜ್ಞಾನವೆಂಬ ಅಕ್ಷಯ ಫಲವನ್ನು ಪಡೆದರೆ, ಪೂರ್ವದಲ್ಲಿ ಹೇಳಿದ ಶುಶ್ರೂಷುಸ್ಥಲದ ಜೀವನ್ಮುಕ್ತನೇ ಸಮಾಜದಲ್ಲಿ ಸರ್ವರಿಂದಲೂ ಸೇವೆಗೊಳ್ಳಲ್ಪಡುವುದರಿಂದ ಅವನನ್ನು ಸೇವ್ಯನೆಂಬು ದಾಗಿ ಕರೆಯಲಾಗುವುದೆಂದು ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಗುರುವಿನ ಉಪದೇಶವು ಯಾವಾಗ ಶಿಷ್ಯನ ಮನಸ್ಸಿನಲ್ಲಿ ಸ್ಥಿರಗೊಳ್ಳುವುದೋ ಆಗ ಶಿಷ್ಯನಿಗೆ ಶಿವಸಾಕ್ಷಾತ್ಕಾರವುಂಟಾಗುವುದು. ಈ ತೆರನಾಗಿ ಶಿವಸಾಕ್ಷಾತ್ಕಾರವನ್ನು ಹೊಂದಿದ ಶಿಷ್ಯನೂ ಸಹ ಗುರುವಿನಂತೆ ಪೂಜ್ಯನಾಗುತ್ತಾನೆ. ಅಂತೆಯೇ ಅವನಿಗೆ ಸೇವ್ಯನೆಂದು ಕರೆಯಲಾಗುತ್ತದೆ. ಈ ಜಗತ್ತಿನಲ್ಲಿ ಗುರುವಿಗೆ ಪೂಜ್ಯತೆ ದೊರೆತದ್ದು ಅವನಲ್ಲಿರುವ ಜ್ಞಾನದಿಂದಾಗಿ. 'ಗುರು' ಎಂಬ ಶಬ್ದದೊಳಗಿನ ಆ ಎರಡಕ್ಷರಗಳೂ ಸಹ ಅವನಲ್ಲಿರುವ ಜ್ಞಾನವನ್ನು ಕೊಂಡಾಡುತ್ತವೆ. 'ಗು' ಎಂದರೆ ಅಜ್ಞಾನವೆಂತಲೂ 'ರು' ಎಂದರೆ ಆ ಅಜ್ಞಾನವನ್ನು ದೂರಮಾಡುವ ಜ್ಞಾನವೆಂತಲೂ ಹೇಳಿ ಗುರುಪದಕ್ಕೆ ವಾಚ್ಯನಾದ ವ್ಯಕ್ತಿಯನ್ನು ಮಹಾಜ್ಞಾನಿಯೆಂಬುದಾಗಿ ಶಾಸ್ತ್ರಗಳು ಬೋಧಿಸಿರುತ್ತವೆ. ಶಿವಾದ್ವೈತಜ್ಞಾನ ಸಂಪನ್ನನಾದ ಶಿವಯೋಗಿಯು ತನ್ನನ್ನಾಶ್ರಯಿಸಿದ ಶಿಷ್ಯನಿಗೆ ತನ್ನಲ್ಲಿರುವ ಜ್ಞಾನವನ್ನನುಗ್ರಹಿಸಿ ಅವನನ್ನು ತನ್ನಂತೆ ಮಾಡಿ ಕೊಳ್ಳುತ್ತಾನೆ. ಆದ್ದರಿಂದ ಶ್ರೀ ಮತ್‌ಶಂಕರಾಚಾರ್ಯರು– ''ದೃಷ್ಟಾಂತೋ ನೈವದೃಷ್ಟ ಸ್ತ್ರಿಭುವನಜಠರೇ ಸದ್ಗುರೋರ್ಜ್ಞಾನದಾತುಃ'' ಎಂಬುದಾಗಿ ಹೇಳಿ ಶಿಷ್ಯನನ್ನು ತನ್ನಂತೆ ಮಾಡಿಕೊಳ್ಳುವ ಗುರುವಿಗೆ ಯೋಗ್ಯವಾದ ದೃಷ್ಟಾಂತವು ಜಗತ್ತಿನಲ್ಲಿ ಇಲ್ಲವೇ ಇಲ್ಲ ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ.

ಹೀಗೆ ಗುರೂಪದೇಶದಿಂದ ಶಿವಸಾಕ್ಷಾತ್ಕಾರವನ್ನು ಪಡೆದ ಶಿಷ್ಯನೂ ಸಹ ಗುರುರೂಪನೇ ಆಗೋಣದರಿಂದ ಲೋಕದಲ್ಲಿ ಅವನೂ ಗುರುವಿನಂತೆ ಸದಾ ಪೂಜ್ಯನೂ, ಸರ್ವಜನ ಸೇವ್ಯನೂ ಆಗುತ್ತಾನೆಂಬುದಾಗಿ ಅಪ್ಪಣೆಕೊಡಿಸಿದ ಪೂಜ್ಯರು ಅವನ ಪೂಜ್ಯತೆಯನ್ನೇ ವಿವರಿಸುತ್ತ ಪುನಃ–

ಜ್ಞಾನಾದಾಧಿಕ್ಯಸಂಪತ್ತಿರ್ಗುರೋರ್ಯಸ್ಮಾದುಪಸ್ಥಿತಾ ।
ತಸ್ಮಾದ್‌ಜ್ಞಾನಾಗಮಾಚ್ಛಿಷ್ಯೋ ಗುರುವತ್ಪೂಜ್ಯತಾಂ ವ್ರಜೇತ್ ॥
ಶಿವೋಽಹಮಿತಿಭಾವಸ್ಯ ನೈರಂತರ್ಯಾದ್ವಿಶೇಷತಃ ।
ಶಿವಭಾವೇ ಸಮುತ್ಪನ್ನೇ ಶಿವವತ್ಪೂಜ್ಯ ಏವ ಸಃ ।

(ಸಿ. ಶಿ. ೧೭; ೮೩–೮೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವ ಜ್ಞಾನದಿಂದ ಗುರುವಿಗೆ ಜಗತ್ತಿನಲ್ಲಿ ಅಧಿಕ ಪೂಜ್ಯತೆಯು ಪ್ರಾಪ್ತವಾಗಿರುತ್ತದೆಯೋ ಅದೇ ಜ್ಞಾನವೇ ಗುರುವಿನಿಂದ ಶಿಷ್ಯನಿಗೆ ಪ್ರಾಪ್ತವಾಗಿರೋಣದರಿಂದ ಶಿಷ್ಯನೂ ಸಹ ಗುರುವಿನಂತೆ ಪೂಜ್ಯನೇ ಆಗಿರುತ್ತಾನೆ. 'ಶಿವೋಽಹಂ' ಎಂಬ ಭಾವನೆಯನ್ನು ನಿರಂತರವಾಗಿ ಅಭ್ಯಾಸ ಮಾಡುವುದರಿಂದ ಯಾವ ಶಿಷ್ಯನ ಮನಸ್ಸಿನಲ್ಲಿ ಶಿವಭಾವವು ಉತ್ಪನ್ನವಾಗಿರುತ್ತದೆಯೋ ಅಂತಹ ಈ ಶುಶ್ರೂಷುವು ಶಿವನಂತೆ ಪೂಜ್ಯನೇ ಆಗಿರುತ್ತಾನೆ.

ಜ್ಞಾನವು ಪವಿತ್ರವೂ, ಪೂಜ್ಯನೀಯವೂ ಆಗಿರುತ್ತದೆ. ಈ ಜ್ಞಾನವನ್ನು ಪಡೆದಾಗಲೇನೇ ಒಬ್ಬ ಸಾಮಾನ್ಯ ವ್ಯಕ್ತಿಯು ಗುರುವೆಂಬುದಾಗಿ ಕರೆಯಲ್ಪಡುತ್ತಾನೆ. ಅಂದರೆ ಗುರುವಿಗೆ ಗುರುತ್ವವು ದೊರೆಯುವುದು ಜ್ಞಾನದಿಂದಲೇ. ಈ ಜ್ಞಾನದಿಂದ ಜನಸಾಮಾನ್ಯರಿಗಿಂತಲೂ ವಿಲಕ್ಷಣವಾಗಿ ತೋರುವ ಗುರುವು ಸರ್ವರಿಂದ ಪೂಜ್ಯನಾಗಿರುವಂತೆ, ಆ ಗುರುವಿನಲ್ಲಿಯ ಯಥಾರ್ಥವಾದ ಜ್ಞಾನವನ್ನು ಪಡೆದ ಶಿಷ್ಯನೂ ಸಹ ಗುರುವೇ ಆಗೋಣದರಿಂದ ಗುರುವಿನಂತೆ ಇವನಿಗೂ ಸಹ ಪೂಜ್ಯತೆಯು ದೊರೆಯುವದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಶ್ರೀ ಗುರುವು ತನ್ನ ಶಿಷ್ಯನಿಗೆ "ತತ್ತ್ವಮಸಿ" ಎಂಬ ಮಹಾವಾಕ್ಯವನ್ನು ಬೋಧಿಸಿದಾಗ ಗುರುವಿನ ಆ ಉಪದೇಶಾಮೃತವನ್ನು ಆಸ್ವಾದನೆ ಮಾಡಿದ ಶಿಷ್ಯನ ಮನಸ್ಸಿನಲ್ಲಿ 'ಶಿವೋಽಹಂ' "ನಾನು ಶಿವರೂಪನೇ ಇದ್ದೇನೆ" ಎಂಬ ಅನುಭವಾತ್ಮಕವಾದ ಶಿವಭಾವನೆಯು ಉತ್ಪನ್ನವಾಗುವುದು. ಈ ಶಿವಭಾವನೆಯನ್ನೇ ಕೀಟ–ಭ್ರಮರ ನ್ಯಾಯದಂತೆ ನಿರಂತರವಾಗಿ ಭಾವಿಸುತ್ತಿರಲು ಹಾಗೆ ಭಾವಿಸುವ ವ್ಯಕ್ತಿಯು ಶಿವರೂಪನೇ ಆಗುತ್ತಾನೆ. ಹೀಗೆ ಶಿವರೂಪನಾದವನು ಶಿವನಷ್ಟೇ ಪೂಜ್ಯನೂ ಸಹ ಆಗುವನು.

ಭಗವಂತನು ನಮ್ಮೆಲ್ಲರಿಗೆ ದಯಪಾಲಿಸಿದ ಮನೋಬುದ್ಧಿಗಳಲ್ಲಿ ಅಪಾರವಾದ ಸಾಮರ್ಥ್ಯವಿರುತ್ತದೆ. ಅವುಗಳನ್ನು ನಿಯಂತ್ರಣದಲ್ಲಿಟ್ಟು ಧ್ಯಾನ–ಚಿಂತನಾದಿಗಳನ್ನು ಮಾಡಿದರೆ ಆ ಚಿಂತನೆಯ ಪರಿಣಾಮವಾಗಿ ಹೊಸ ಹೊಸ ಆವಿಷ್ಕಾರಗಳನ್ನು ಸಹ ಮಾಡಬಹುದು. ಇಂದಿನ ವೈಜ್ಞಾನಿಕ ಆವಿಷ್ಕಾರಗಳೆಲ್ಲ ನಿಯಂತ್ರಿತ ಬುದ್ಧಿಯ ಚಿಂತನೆಯ ಚಮತ್ಕಾರಗಳೇ ಆಗಿರುತ್ತವೆ. ಮನುಷ್ಯನ ಬುದ್ಧಿಯೆಂಬ ಸಂಗಣಕ ಯಂತ್ರದಲ್ಲಿ ಕೋಟಿ ಕೋಟಿ ಜನ್ಮಗಳ ಸಂಸ್ಕಾರವಿದೆಯಷ್ಟೇ ಅಲ್ಲ, ಮುಂಬರುವ ಕೋಟಿ ಕೋಟಿ ಜನ್ಮಗಳ ಸಂಸ್ಕಾರಗಳನ್ನು ಹಿಡಿದಿಡುವ ಸಾಮರ್ಥ್ಯವೂ ಅದಕ್ಕಿರುತ್ತದೆ. ಇದನ್ನು ವ್ಯವಸ್ಥಿತವಾಗಿ ಬಳಸಿಕೊಂಡರೆ ವಿಜ್ಞಾನಿಯೂ ಆಗಬಹುದು ಇಲ್ಲವೇ ಶ್ರೇಷ್ಠ ತತ್ತ್ವಜ್ಞಾನಿಯೂ ಆಗಬಹುದು. ಒಂದು ಕೀಟವೇ ಭ್ರಮರವನ್ನು ಚಿಂತಿಸಿ ಭ್ರಮರವೇ ಆಗುವಂತೆ

ಮನುಷ್ಯನು ತನ್ನ ಮನೋಬುದ್ಧಿಗಳಿಂದ ಶಿವನನ್ನು ಚಿಂತಿಸಿ ಶಿವಸ್ವರೂಪನೇ ಆಗುತ್ತಾನೆ. ಶಿವನು ಅನಂತ ಕಲ್ಯಾಣ ಗುಣಗಳ ಕೇಂದ್ರವಾಗಿ ರೋಣದರಿಂದ ಧ್ಯಾನ ಮೂಲಕವಾಗಿ ಅವನೊಂದಿಗೆ ಸಂಬಂಧವನ್ನು ಸಾಧಿಸಿದ ಶಿವಯೋಗಿಯೂ ಸಹ ಅನೇಕ ಸದ್ಗುಣಗಳ ಆಗರವೇ ಆಗುತ್ತಾನೆ. ನಮ್ಮ ದೇಶದ ಪ್ರಾಚೀನ ಮಹರ್ಷಿಗಳು ರಚಿಸಿರುವ ಶಾಸ್ತ್ರಗಳು ಆ ಶಿವಧ್ಯಾನದ ಸರ್ವೋತ್ಕೃಷ್ಟ ಫಲಗಳಾಗಿರುತ್ತವೆ.

ಸರ್ವಜ್ಞನಾದ ಶಿವನೊಂದಿಗೆ ನಮ್ಮ ಬುದ್ಧಿ ಮೂಲಕವಾಗಿ ಸಂಬಂಧ ಮಾಡಿದಾಗ ಆ ಶಿವನಲ್ಲಿರುವ ಜ್ಞಾನಾದಿಗಳು ನಮ್ಮ ಬುದ್ಧಿಯಲ್ಲಿ ಇಳಿದು ಬರುತ್ತವೆ. ಹೀಗೆ ನಿರಂತರ ವಾದ ಸಂಬಂಧವಾದಾಗ ಸಂಬಂಧವನ್ನು ಸ್ಥಾಪಿಸಿದ ವ್ಯಕ್ತಿಯೂ ಸಹ ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ. ಈ ತೆರನಾಗಿ ಶಿವಸ್ವರೂಪವನ್ನು ಪಡೆದ ಶಿವಯೋಗಿಯೂ ಶಿವರೂಪನೇ ಆಗೋಣದರಿಂದ ಶಿವನಂತೆ ಅವನೂ ಸಹ ಪೂಜ್ಯನೂ ಮತ್ತು ಸೇವ್ಯನೂ ಆಗುತ್ತಾನೆಂಬುದಾಗಿ ತಿಳಿದುಕೊಳ್ಳಲು ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸೇವ್ಯ ಸ್ಥಲವನ್ನು ಪೂರ್ಣ ಗೊಳಿಸುತ್ತ ಕೊನೆಯದಾಗಿ–

ವಿಷಯಾಸಕ್ತ ಚಿತ್ತೋಪಿ ವಿಷಯಾ ಸಂಗ ವರ್ಜಿತಃ ।
ಶಿವಭಾವಯುತೋ ಯೋಗೀಸೇವ್ಯಃ ಶಿವ ಇವಾಪರಃ ॥

ಮುಕ್ತಃ ಸಂಶಯಪಾಶತಃ ಸ್ಥಿರಮನಾ ಬೋಧೇ ಚ ಮುಕ್ತಿಪ್ರದೇ ।
ಮೋಹಂ ದೇಹ ಭೃತಾಂದೃಶಾ ವಿಘಟಯನ್ ಮೂಲಂ ಮಹಾ ಸಂಸೃತೇಃ ॥

ಸತ್ತಾನಂದ ಚಿದಾತ್ಮಕೇ ನಿರುಪಮೇ ಶೈವೇಪರಸ್ಮಿನ್ಪದೇ ।
ಲೀನಾತ್ಮಾ ಕ್ಷಯಿತ ಪ್ರಪಂಚ ವಿಭವೋ ಯೋಗಿ ಜನೈಃ ಸೇವ್ಯತೇ ॥

(ಸಿ. ಶಿ. ೧೭; ೮೫–೮೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವಭಾವನೆಯಿಂದ ಕೂಡಿದ ಶಿವಯೋಗಿಯು ವಿಷಯಾಸಕ್ತ ಚಿತ್ತನಾಗಿದ್ದರೂ ವಿಷಯ ಸಂಗವರ್ಜಿತನಾಗಿರುತ್ತಾನೆ. ಅಂತೆಯೇ ಅಪರ ಶಿವನಂತೆ ಇವನೂ ಸಹ ಪೂಜ್ಯನೇ ಆಗಿರುತ್ತಾನೆ.

ಇವನು ನಾನು ಮುಕ್ತನೋ ಅಲ್ಲವೋ ? ಎಂಬ ಸಂಶಯ ವಿರಹಿತನಾಗಿ ಮುಕ್ತಿಪ್ರದವಾದ ಬೋಧೆಯಲ್ಲಿ ಸ್ಥಿರವಾದ ಮನಸ್ಸುಳ್ಳವನಾಗಿರುತ್ತಾನೆ. ಈ ಸಂಸಾರಕ್ಕೆ ಮೂಲಕಾರಣವಾಗಿರುವ ಜೀವಿಗಳ ಮೋಹವನ್ನು ಕೇವಲ ತನ್ನ ದೃಷ್ಟಿಪಾತದಿಂದ ವಿನಾಶಗೊಳಸಬಲ್ಲ ಸಾಮರ್ಥ್ಯವುಳ್ಳ ಇವನು ಸಚ್ಚಿದಾನಂದ ಸ್ವರೂಪನೂ, ನಿರುಪಮನೂ ಆದ ಪರಶಿವನಲ್ಲಿ ಲೀನಾತ್ಮನಾಗಿ ಪ್ರಪಂಚದ ವಿಭವವನ್ನೆಲ್ಲ ಕ್ಷಯಗೊಳಿಸಿಕೊಂಡ ಶಿವಯೋಗಿಯು ಜನರಿಂದ ಸದಾ ಸೇವಿಸಲ್ಪಡುತ್ತಿರುತ್ತಾನೆ.

ಈ ಜಗತ್ತಿನಲ್ಲಿರುವ ಜ್ಞಾನಿಗಳು ಒಂದೇ ವಿಧವಾಗಿ ಇರುವುದಿಲ್ಲ, ಅವರವರ ಪ್ರಾರಬ್ಧಕರ್ಮಾನುಸಾರವಾಗಿ ಕೆಲವರು ಅತ್ಯಂತ ವಿರಕ್ತರಾಗಿದ್ದರೆ, ಇನ್ನು ಕೆಲವರು ಗೃಹಸ್ಥರೂ ಸಹ ಆಗಿರುತ್ತಾರೆ. ಇವರ ಬಾಹ್ಯ ಜೀವನ ಶೈಲಿಯು ಭಿನ್ನ ಭಿನ್ನವಾಗಿದ್ದರೂ

ಸಹ ಅಂತರಂಗದ ಜ್ಞಾನವು ಮಾತ್ರ ಒಂದೇ ವಿಧವಾಗಿರುತ್ತದೆ– ''ಕೃಷ್ಣೋ ಭೋಗೀ ಶುಕಸ್ತ್ಯಾಗೀ ನೃಪೌ ಜನಕರಾಘವೌ'' ಎಂಬ ಈ ವಾಕ್ಯದಲ್ಲಿ ಜ್ಞಾನಿಗಳ ಬಾಹ್ಯ ಪ್ರಕಾರವನ್ನು ನಿರೂಪಿಸಲಾಗಿದೆ. ಕೃಷ್ಣನು ಭೋಗಿಯಾಗಿದ್ದರೆ ಶುಕಮುನಿಯು ತ್ಯಾಗಿಯಾಗಿದ್ದನು. ಇನ್ನು ಜನಕರಾಮಾದಿಗಳು ದೇಶವನ್ನಾಳುವ ಪ್ರಭುಗಳಾಗಿದ್ದರು. ಹೀಗೆ ತೋರುವ ಜ್ಞಾನಿಗಳ ಬಾಹ್ಯ ಜೀವನದ ವೈಪರೀತ್ಯಕ್ಕೆ ಅವರವರ ಪ್ರಾರಬ್ಧಕರ್ಮಗಳೇ ಕಾರಣಗಳಾಗಿರುತ್ತವೆ. ಪ್ರಾರಬ್ಧಕರ್ಮಾನುಸಾರ ಓರ್ವ ಯೋಗಿಯು ಬಹಿರಂಗದಲ್ಲಿ ವಿಷಯಾಸಕ್ತನಂತೆ ತೋರುತ್ತಿದ್ದರೂ ಅಂತರಂಗದಲ್ಲಿ ಆತನು ವಿಷಯದಿಂದ ಅಸಂಗನಾಗಿರುತ್ತಾನೆ. ವಿಷಯೋಪಭೋಗಜನ್ಯ ಸಂಸ್ಕಾರಗಳು ಮನಸ್ಸಿನಲ್ಲಿ ಉಳಿದು, ತಾನು ಹಿಂದೆ ಭೋಗಿಸಿದ ವಿಷಯಗಳ ಸ್ಮೃತಿಯು ಮನಸ್ಸಿನಲ್ಲಿ ಸದಾ ಕಾಡುತ್ತಿದ್ದರೆ ಅವನನ್ನು ವಿಷಯಾಸಕ್ತನೆಂಬುದಾಗಿ ತಿಳಿದುಕೊಳ್ಳಬೇಕು. ಇನ್ನು ಯಾವಾತನು ವಿಷಯೋಪಭೋಗವನ್ನು ಮಾಡಿದನಂತರ ಅದರ ಸ್ಮೃತಿಯೇ ಮನಸ್ಸಿನಲ್ಲಿ ಉಳಿಯದಂತಿರುತ್ತಾನೆಯೋ ಅವನನ್ನು ಅಸಂಗಿಯೆಂಬುದಾಗಿ ಕರೆಯಬೇಕು.

ಬಹಿರಂಗದಲ್ಲಿ ವಿಷಯಾಸಕ್ತನಾಗಿದ್ದರೂ ಅಂತರಂಗದಲ್ಲಿ ಶಿವಭಾವದಿಂದ ಕೂಡಿಕೊಂಡಿರೋಣದರಿಂದ ಇವನು ಶಿವನಷ್ಟೇ ಪೂಜ್ಯನಾಗಿರುತ್ತಾನೆ. ನಮ್ಮ ಶ್ರೇಷ್ಠತೆ ಹಾಗೂ ಕನಿಷ್ಠತೆಗಳಿಗೆ ದೈಹಿಕ ಕಾರ್ಯಕಲಾಪಗಳಿಗಿಂತ ಮಾನಸಿಕ ಕಾರ್ಯಕಲಾಪಗಳೇ ಮುಖ್ಯವಾದವುಗಳು. ದೇಹದಿಂದ ಏನನ್ನು ಮಾಡುತ್ತೇವೆ ಎಂಬುವುದಕ್ಕಿಂತ ಮನಸ್ಸಿನಲ್ಲಿ ಏನನ್ನು ಚಿಂತಿಸುತ್ತೇವೆಂಬುದು ಮುಖ್ಯವಾದುದಾಗಿರುತ್ತದೆ. ಅಂತೆಯೇ ಪೂಜ್ಯಪಾದರು ಶಿವಭಾವನೆಯಿಂದ ಯುಕ್ತನಾದ ಶಿವಯೋಗಿಯು ವಿಷಯಾಸಕ್ತನಂತೆ ತೋರಿದರೂ ಅವನು ವಿಷಯಸಂಗವಿವರ್ಜಿತನಾಗಿ ಶಿವನಂತೆ ಪೂಜ್ಯನಾಗಿರುತ್ತಾನೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

ಈ ಶಿವಯೋಗಿಯು ನಿಸ್ಸಂದಿಗ್ಧನಾಗಿರುತ್ತಾನೆ. ಮುಕ್ತಿಪ್ರದವಾದ ಜ್ಞಾನದಲ್ಲಿ ಅವನು ಸ್ಥಿರಚಿತ್ತನಾಗಿರುತ್ತಾನೆ. ಈತನ ಕೇವಲ ದೃಷ್ಟಿಪಾತದಿಂದಲೇ ಜೀವಿಗಳ ಮೋಹವು ಇಲ್ಲದಾಗಿ ಹೋಗುತ್ತದೆ. ಸಚ್ಚಿದಾನಂದ ಸ್ವರೂಪನಾದ ಪರಶಿವನಲ್ಲಿ ಸಾಮರಸ್ಯದಿಂದ ವಿಲೀನನಾದ ಈ ಶಿವಯೋಗಿಯು ಜಗತ್ತಿನ ಸರ್ವಜನರಿಂದಲೂ ಪೂಜ್ಯನಾಗಿರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ
ಸಪ್ತದಶ ಪರಿಚ್ಛೇದವು ಪೂರ್ಣವಾದುದು

ದಿನಾಂಕ ೧೨ ಅಕ್ಟೋಬರ, ೧೯೯೪
(ಸ್ಥಾನ ಮುಕ್ತಿಧಾಮ ನಾಶಿಕರೋಡ್, ನಾಶಿಕ)



# ಅಷ್ಟಾದಶ ಪರಿಚ್ಛೇದಃ

# ಪ್ರಾಣಲಿಂಗಿಸ್ಥಲ

ಆಶೀರ್ವಚನ-೧

## ಆತ್ಮಸ್ಥಲ

ಭಕ್ತ ಮುಮುಕ್ಷುಗಳೇ !

ಕಾಶೀ ವೀರಶೈವ ವಿದ್ವತ್ ಸಂಘದ ಸಮಸ್ತವಿದ್ಯಾರ್ಥಿಗಳೇ ಹಾಗೂ ಬೇರೆ ಬೇರೆ ಪ್ರಾಂತಗಳಿಂದ ಬಂದಿರುವ ಭಕ್ತ ಮುಮುಕ್ಷಗಳೇ! ಶ್ರೀಕಾಶೀಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕಮಾಸದ ನಿಮಿತ್ತವಾಗಿ ಶ್ರೀಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳು ಇಂದಿನಿಂದ ಪ್ರಾರಂಭವಾಗುತ್ತಲಿವೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಹದಿನೆಂಟನೆಯ ಪರಿಚ್ಛೇದವು ಅಗಸ್ತ್ಯ ಮಹರ್ಷಿಯ ಪ್ರಶ್ನೆಯಿಂದ ಪ್ರಾರಂಭ ವಾಗುತ್ತದೆ. ಮಹಾಮುನಿಯಾದ ಅಗಸ್ತ್ಯನು ಪ್ರಸಾದಿಸ್ಥಲದಲ್ಲಿರುವ ಅವಾಂತರ ಸ್ಥಲಗಳ ಬಗ್ಗೆ ಸಂಪೂರ್ಣವಾಗಿ ತಿಳಿದುಕೊಂಡವನಾಗಿ ಇನ್ನು ಮುಂದೆ ಪ್ರಾಣಲಿಂಗಿಸ್ಥಲವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಶ್ರೀ ರೇಣುಕರನ್ನುದ್ದೇಶಿಸಿ–

ಪ್ರಸಾದಿಸ್ಥಲಸಂಬಂಧಾಃ ಸ್ಥಲಭೇದಾಃ ಪ್ರಕೀರ್ತಿತಾಃ ।
ಪ್ರಾಣಲಿಂಗಿಸ್ಥಲಾರೂಢಾನ್ ಸ್ಥಲಭೇದಾನ್ವದಸ್ವ ಮೇ ॥

(ಸಿ. ಶಿ. ೧೮–೧)

ಈ ತೆರನಾಗಿ ಪ್ರಶ್ನಿಸುತ್ತಾನೆ. ತಾತ್ಪರ್ಯವೇನೆಂದರೆ ''ಹೇ ಗಣೇಶ್ವರನೇ ! ಪ್ರಸಾದಿ ಸ್ಥಲಕ್ಕೆ ಸಂಬಂಧಪಟ್ಟ ಸ್ಥಲಭೇದಗಳು ಅರ್ಥಾತ್ ಅವಾಂತರ ಸ್ಥಲಗಳು ನಿನ್ನಿಂದ ಪ್ರತಿಪಾದಿಸಲ್ಪಟ್ಟಿವೆ. ಇನ್ನು ಅದರ ಮುಂದಿನ ಸ್ಥಲವಾದ ಪ್ರಾಣಲಿಂಗಿ ಸ್ಥಲಾಂತರ್ಗತ ವಾದ ಅವಾಂತರ ಸ್ಥಲಗಳ ಬಗ್ಗೆ ಉಪದೇಶ ಮಾಡುವಂಥವನಾಗು.

ಅಗಸ್ತ್ಯನು ಹೀಗೆ ವಿನಂತಿಸಿಕೊಂಡಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಸ್ಥಲಾನಾಂ ನವಕಂ ಪ್ರೋಕ್ತಂ ಪ್ರಾಣಲಿಂಗಿಸ್ಥಲಾಶ್ರಿತಮ್ ।
ಆದಾವಾತ್ಮಸ್ಥಲಂ ಪ್ರೋಕ್ತಮಂತರಾತ್ಮಸ್ಥಲಂ ತತಃ ॥

ಪರಮಾತ್ಮಸ್ಥಲಂ ಪಶ್ಚಾನ್ನಿರ್ದೇಹಾಗಮ ಸಂಜ್ಞಕಮ್ ।
ನಿರ್ಭಾವಾಗಮ ಸಂಜ್ಞಂ ಚ ತತೋ ನಷ್ಟಾಗಮಸ್ಥಲಮ್ ॥
ಆದಿಪ್ರಸಾದನಾಮಾಥ ತತೋಽಪ್ಯಂತ್ಯಪ್ರಸಾದಕಮ್ ।
ಸೇವ್ಯಪ್ರಸಾದಕಂ ಚಾಥ ಶೃಣು ತೇಷಾಂ ಚ ಲಕ್ಷಣಮ್ ॥

(ಸಿ. ಶಿ. ೧೮; ೨–೪)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ–

ಹೇ ತಪಸ್ವಿಯಾದ ಅಗಸ್ತ್ಯನೇ ! ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿ ಸ್ಥಲದಲ್ಲಿ ಒಂಭತ್ತು ವಿಧವಾದ ಅವಾಂತರ ಸ್ಥಲಗಳಿರುತ್ತವೆ. ಅವು ಯಾವುವೆಂದರೆ– ''ಆತ್ಮಸ್ಥಲ, ಅಂತರಾತ್ಮಸ್ಥಲ, ಪರಮಾತ್ಮಸ್ಥಲ, ನಿರ್ದೇಹಾಗಮಸ್ಥಲ, ನಿರ್ಭಾವಾಗಮ ಸ್ಥಲ, ನಷ್ಟಾಗಮಸ್ಥಲ, ಆದಿಪ್ರಸಾದಿಸ್ಥಲ, ಅಂತ್ಯ ಪ್ರಸಾದಿಸ್ಥಲ ಮತ್ತು ಸೇವ್ಯ ಪ್ರಸಾದಿ ಸ್ಥಲವೆಂಬುವೇ ಆ ಒಂಭತ್ತು ಅವಾಂತರ ಸ್ಥಲಗಳು. ಕ್ರಮವಾಗಿ ಇವುಗಳ ಲಕ್ಷಣವನ್ನು ನಿರೂಪಿಸುತ್ತೇವೆ. ಲಕ್ಷ್ಯಪೂರ್ವಕವಾಗಿ ಶ್ರವಣಮಾಡುವಂಥವನಾಗು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪ್ರಾಣಲಿಂಗಿ ಸ್ಥಲದಲ್ಲಿ ಮೊದಲನೇ ಅವಾಂತರ ಸ್ಥಲವಾದ ಆತ್ಮಸ್ಥಲವನ್ನು ಕುರಿತು–

ಜೀವಭಾವಂ ಪರಿತ್ಯಜ್ಯ ಯದಾ ತತ್ತ್ವಂ ವಿಭಾವ್ಯತೇ ।
ಗುರೋಶ್ಚ ಬೋಧಯೋಗೇನ ತದಾತ್ಮಾಯಂ ಪ್ರಕೀರ್ತಿತಃ ॥

(ಸಿ.ಶಿ.೧೮–೫)

ಹೀಗೆ ಬೋಧಿಸಿದ್ದಾರೆ. ತಾತ್ಪರ್ಯವೇನೆಂದರೆ, ಗುರುವಿನ ಉಪದೇಶದಿಂದ ಶಿಷ್ಯನು ಜೀವಭಾವವನ್ನು ಕಳೆದುಕೊಂಡು ಯಾವಾಗ ಪರತತ್ತ್ವವನ್ನು ತಿಳಿದುಕೊಳ್ಳು ತ್ತಾನೆಯೋ ಆಗ ಅವನು 'ಆತ್ಮಾ' ಎಂಬುದಾಗಿ ಕರೆಯಲ್ಪಡುತ್ತಾನೆ.

ಆತ್ಮಭಾವದಿಂದ ಇರುವ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ಆತ್ಮಸ್ಥಲವು. ಈ ಆತ್ಮನ ಸ್ವರೂಪವನ್ನುದ್ದೇಶಿಸಿ ಛಾಂದೋಗ್ಯೋಪನಿಷತ್ತಿನಲ್ಲಿ–

''ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽ ವಿಜಿಗಿತ್ಸೋಽ ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ'' ಎಂಬುದಾಗಿ ಹೇಳಲಾಗಿದೆ. ಅಂದರೆ ಆತ್ಮವು ಪಾಪ, ಜರಾ, ಮೃತ್ಯು, ಶೋಕ, ಹಿಂಸೆ ಮತ್ತು ತೃಷ್ಣಾದಿಗಳಿಂದ ರಹಿತ ವಾಗಿರುತ್ತದೆ. ಅಂತೆಯೇ ಅದು ಸತ್ಯಕಾಮವೂ ಸತ್ಯಸಂಕಲ್ಪವೂ ಆಗಿರುತ್ತದೆ. ಪುಣ್ಯಪಾಪಗಳು ಅಂತಃಕರಣದ ಧರ್ಮಗಳಾಗಿದ್ದರಿಂದ ಇವುಗಳ ಸ್ಪರ್ಶವು ಆತ್ಮಕ್ಕೆ ಉಂಟಾಗುವುದಿಲ್ಲ, ಅಂತೆಯೇ ಅದಕ್ಕೆ 'ಅಪಹತಪಾಪ್ಮಾ' ಎಂದು ಕರೆಯಲಾಗಿದೆ. ಇದೇ ಪ್ರಕಾರವಾಗಿ ಆತ್ಮಕ್ಕೆ ಜರಾ–ಮರಣಗಳೂ ಸಹ ಇರುವುದಿಲ್ಲ, ಜರಾ–ಮರಣ ಗಳು ದೇಹದ ಧರ್ಮಗಳಾಗಿರುತ್ತವೆ. ಆತ್ಮವು ದೇಹಕ್ಕಿಂತಲೂ ಭಿನ್ನವಾಗಿರೋಣದ ರಿಂದ ದೇಹ ಧರ್ಮಗಳ ಲೇಪವು ಅದಕ್ಕೆ ಉಂಟಾಗುವುದಿಲ್ಲ, ಅಂತೆಯೇ ಅದನ್ನು ''ವಿಜರ'' ''ವಿಮೃತ್ಯು''ವೆಂಬುದಾಗಿ ಕರೆಯಲಾಗಿದೆ. ಇನ್ನು ಈ ಆತ್ಮನಿಗೆ ಹಸಿವೆ

ನೀರಡಿಕೆಗಳೂ ಸಹ ಉಂಟಾಗುವುದಿಲ್ಲ. ಹಸಿವೆ ನೀರಡಿಕೆಗಳು ಪ್ರಾಣದ ಧರ್ಮ ಗಳಾಗಿರುತ್ತವೆ. ಇದು ಪ್ರಾಣಕ್ಕಿಂತಲೂ ಭಿನ್ನವಾಗಿರೋಣದರಿಂದ ಪ್ರಾಣದ ಧರ್ಮಗಳೂ ಸಹ ಇದಕ್ಕೆ ಲೇಪವಾಗುವುದಿಲ್ಲ. ಅಂತೆಯೇ ಇದಕ್ಕೆ ''ಅಪಿಪಾಸಃ'' ಎಂದೂ ಕರೆದಿದ್ದಾರೆ.

ಆತ್ಮನಿಗೆ ಶೋಕಾದಿಗಳು ಸಹ ಉಂಟಾಗಲಾರವು. ಏಕೆಂದರೆ ಶೋಕಾದಿಗಳೂ ಸಹ ಅಂತಃಕರಣದ ಧರ್ಮಗಳಾಗಿರುತ್ತವೆ. ಈ ಪೂರ್ವದಲ್ಲಿಯೇ ಹೇಳಿರುವಂತೆ ಆತ್ಮವು ಅಂತಃಕರಣಕ್ಕಿಂತಲೂ ಭಿನ್ನವಾಗಿರೋಣದರಿಂದ ಇದಕ್ಕೆ ''ವಿಶೋಕಃ'' ಎಂದು ಕರೆದಿದ್ದಾರೆ. ಆತ್ಮಕ್ಕೆ ಸ್ಥೂಲವಾದ ಆಕಾರ-ಪ್ರಕಾರಗಳಿಲ್ಲದಿರುವುದರಿಂದ ಅದನ್ನು ಹಿಂಸಿಸಲು ಯಾರೂ ಸಮರ್ಥರಾಗರು. ಅಂತೆಯೇ ಅದಕ್ಕೆ ''ಅವಿಜಗಿತ್ಸಃ'' ಎಂದು ಕರೆದಿದ್ದಾರೆ. ಹೀಗೆ ಶರೀರ, ಪ್ರಾಣ ಮತ್ತು ಅಂತಃಕರಣಾದಿಗಳಿಗಿಂತಲೂ ಇದು ಭಿನ್ನವಾಗಿರೋಣದರಿಂದ ಅವುಗಳ ಯಾವ ಧರ್ಮಗಳೂ ಸಹ ಆತ್ಮದಲ್ಲಿ ಪ್ರತೀತಿಯಾಗುವುದಿಲ್ಲ. ಹೀಗೆ ಅನಾತ್ಮ ಪದಾರ್ಥಗಳ ಧರ್ಮದ ಸೋಂಕಿಲ್ಲದ ಈ ಆತ್ಮವು ಸತ್ಯಕಾಮರೂಪವೂ ಮತ್ತು ಸತ್ಯಸಂಕಲ್ಪರೂಪವೂ ಆಗಿರುತ್ತದೆಂಬ ವಿಷಯವು ಛಾಂದೋಗ್ಯೋಪನಿಷತ್ತಿನಲ್ಲಿ ನಿರೂಪಿಸಲ್ಪಟ್ಟಿರುತ್ತದೆ. ಇಂತಹ ಆತ್ಮಸ್ವರೂಪದ ಅರಿವಾಗಿ ಜೀವಭಾವವು ಯಾರದು ತೊಲಗಲ್ಪಟ್ಟಿರುವುದೋ ಅವನಿಗೆ ಆತ್ಮನೆಂಬು ದಾಗಿ ಕರೆಯಲಾಗಿದೆ.

ಈ ಆತ್ಮವನ್ನು ಅರಿತವನಿಗೆ ಜರಾ-ಮರಣಗಳಾಗಲೀ-ಕ್ಷುತ್‌ಪಿಪಾಸೆಗಳಾಗಲೀ ಶೋಕ-ಮೋಹಗಳಾಗಲೀ ಮತ್ತು ಪುಣ್ಯ-ಪಾಪಾದಿಗಳಾಗಲೀ ಉಂಟಾಗುವುದೇ ಇಲ್ಲವೆಂದು ಯಾರೂ ತಿಳಿದುಕೊಳ್ಳಬಾರದು. ವ್ಯಾವಹಾರಿಕ ಜೀವನದಲ್ಲಿ ಅನ್ಯಜೀವಿ ಗಳಿಗೆ ಉಂಟಾಗುವಂತೆ ಈ ಕ್ಷುತ್ ಪಿಪಾಸಾದಿಗಳು ಇವನಲ್ಲಿ ಉಂಟಾದರೂ ಸಹ ಇವನು ಅವುಗಳನ್ನು ಪ್ರಾಣಾದಿಗಳ ಧರ್ಮವೆಂಬುದಾಗಿ ತಿಳಿದುಕೊಂಡ ಕಾರಣ ದಿಂದಾಗಿ ಇವನಿಗೆ ಅವುಗಳ ಅಭಿಮಾನವಿರುವುದಿಲ್ಲ. ಹೀಗೆ ದೇಹ- ಪ್ರಾಣ-ಮನಸ್ಸು ಇವುಗಳ ಧರ್ಮಾಭಿಮಾನದಿಂದ ಮುಕ್ತನಾಗಿ ಜೀವಭಾವವನ್ನು ತೊರೆದಿರುವ ಕಾರಣದಿಂದಾಗಿ ಇವನಿಗೆ ಆತ್ಮನೆಂಬುದಾಗಿ ಕರೆಯಲಾಗಿದೆ.

ಶ್ರೀಜಗದ್ಗುರು ರೇಣುಕ ಭಗವತ್ಪಾದರು ಈ ಆತ್ಮಸ್ಥಲದಲ್ಲಿ ಜೀವಾತ್ಮನ ಸ್ವರೂಪವನ್ನು ತಿಳಿಸಲೋಸುಗ-

ವಾಲಾಗ್ರಶತಭಾಗೇನ ಸದೃಶೋ ಹೃದಯಸ್ಥಿತಃ।
ಅಶ್ನನ್ ಕರ್ಮಫಲಂ ಸರ್ವಮಾತ್ಮಾ ಸ್ಫುರತಿ ದೀಪವತ್ ॥

(ಸಿ. ಶಿ. ೧೮-೬)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಜೀವಾತ್ಮನು ಕೂದಲಿನ ತುದಿಯ ಒಂದು ನೂರಾಂಶದಷ್ಟು ಅಣುರೂಪನಾಗಿ ಹೃದಯದಲ್ಲಿ ನಿವಾಸಿಸುತ್ತಿದ್ದು ತನ್ನ ಕರ್ಮ-ಫಲಗಳನ್ನು ಅನುಭವಿಸುತ್ತ ತನ್ನ ಜ್ಞಾನವೆಂಬ ಪ್ರಕಾಶವನ್ನು ಶರೀರದ ತುಂಬೆಲ್ಲ ಪಸರಿಸಿಕೊಂಡು ಇರುವವನಾಗಿರುತ್ತಾನೆ.

ಭಾರತೀಯ ದಾರ್ಶನಿಕರು ಆತ್ಮನ ಸ್ವರೂಪದ ವಿಷಯದಲ್ಲಿ ಬಹಳಷ್ಟು ಚಿಂತನೆಗಳನ್ನು ಮಾಡಿ ಇದರ ಪರಿಮಾಣದ ಬಗ್ಗೆ ಅಣು, ಮಧ್ಯಮ ಮತ್ತು ವಿಭು ಎಂಬುದಾಗಿ ಮೂರು ಸಿದ್ಧಾಂತಗಳನ್ನು ಪ್ರತಿಷ್ಠಾಪಿಸಿದ್ದಾರೆ. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸಾ ಮತ್ತು ವೇದಾಂತ ದರ್ಶನಗಳು ಆತ್ಮವನ್ನು ವಿಭುವನ್ನಾಗಿ ಒಪ್ಪಿಕೊಂಡಿರುತ್ತವೆ. ಆತ್ಮವನ್ನು 'ವಿಭು'ವನ್ನಾಗಿ ಒಪ್ಪುವುದರಲ್ಲಿ ಈ ದಾರ್ಶನಿಕರ ವಿಚಾರವು ಸಮಾನವಾಗಿದ್ದರೂ, ಆತ್ಮನ ಸಂಖ್ಯೆಯ ವಿಷಯಕವಾಗಿ ಇವರೆಲ್ಲರಲ್ಲಿ ಒಮ್ಮತವು ಕಂಡುಬರುವುದಿಲ್ಲ. ಅದ್ವೈತ ವೇದಾಂತ ಶಾಸ್ತ್ರದಲ್ಲಿ ವಿಭು ರೂಪನಾದ ಆತ್ಮನು ಒಬ್ಬನೇ ಎಂಬುದಾಗಿ ಹೇಳಲಾದರೆ ಈ ಉಳಿದೆಲ್ಲ ದಾರ್ಶನಿಕರು ಆತ್ಮರು ಅನೇಕರೆಂಬುದಾಗಿ ಪ್ರತಿಪಾದಿಸುತ್ತಾರೆ. ಎಷ್ಟು ಶರೀರಗಳು ಇವೆಯೋ ಅಷ್ಟು ಆತ್ಮಗಳು ಭಿನ್ನ ಭಿನ್ನವಾಗಿ ಇರಬೇಕೆಂಬುದು ಅವರ ಅಭಿಮತವಾಗಿದೆ. ಇನ್ನು ಜೈನ ಸಿದ್ಧಾಂತಿಗಳು ಆತ್ಮದ ಪರಿಮಾಣವನ್ನು ಮಧ್ಯಮ ಎಂಬುದಾಗಿ ಆತ್ಮದ ಸಂಖ್ಯೆಯನ್ನೂ ಸಹ ಅನೇಕವೆಂಬುದಾಗಿ ಹೇಳುತ್ತಾರೆ. ವೀರಶೈವ ಸಿದ್ಧಾಂತದಲ್ಲಿ ಆತ್ಮವನ್ನು ಅಣು ಪರಿಮಾಣವನ್ನಾಗಿ ಹೇಳಿ ಅದರ ಅನೇಕತ್ವವನ್ನೂ ಸಹ ಒಪ್ಪಿಕೊಂಡಿರುತ್ತಾರೆ. ಈ ಎಲ್ಲ ದಾರ್ಶನಿಕರ ವಿಚಾರಧಾರೆಯನ್ನು ಕೇಳಿದಾಗ ಈ ವಾದಗಳಲ್ಲಿ ಯಾವ ವಾದವು ಹೆಚ್ಚು ಸೂಕ್ತವಾದುದು ? ಎಂಬ ವಿಚಾರವು ಶ್ರೋತೃಗಳ ಮನಸ್ಸಿನಲ್ಲಿ ಮೂಡುವುದು ಸಹಜ ವಾಗಿರುತ್ತದೆ.

ಈ ಸೂಕ್ತಾಸೂಕ್ತತೆಯ ಬಗ್ಗೆ ಒಂದಿಷ್ಟು ಇಲ್ಲಿ ವಿಚಾರಿಸೋಣ. ಶರೀರಕ್ಕಿಂತಲೂ ಭಿನ್ನವಾಗಿರುವ ಆತ್ಮವು ಅನೇಕ ಯುಗ ಯುಗಗಳಿಂದ ಎಂಭತ್ನಾಲ್ಕು ಲಕ್ಷ ಪ್ರಕಾರದ ಶರೀರಗಳನ್ನು ಧರಿಸುತ್ತ ಮತ್ತು ಬಿಡುತ್ತ ಬಂದಿರೋಣದರಿಂದ ಶರೀರಕ್ಕಿಂತಲೂ ಆತ್ಮವು ನಿತ್ಯವಾಗಿರಬೇಕೆಂಬುದು ಒಂದು ಸಹಜವಾದ ವಿಚಾರವು. ಹಾಗಾದರೆ ಯಾವುದೇ ವಸ್ತು ನಿತ್ಯವಾಗಿರಬೇಕಾದರೆ ಅದು ಅಣು ಪರಿಮಾಣವಾದರೂ ಆಗಿರಬೇಕು ಇಲ್ಲವೆ ವಿಭು ಪರಿಮಾಣವಾದರೂ ಆಗಿರಬೇಕು. 'ಅಣು' ಮತ್ತು 'ವಿಭು'ವಾದ ವಸ್ತುಗಳು ಎಂದೂ ನಾಶವಾಗುವುದಿಲ್ಲ. ಈ ತತ್ತ್ವವನ್ನು ತಿಳಿದುಕೊಂಡ ದಾರ್ಶನಿಕರು ಆತ್ಮದ ನಿತ್ಯತ್ವವನ್ನು ಪ್ರತಿಪಾದಿಸಲೋಸುಗ ಕೆಲವರು ಅದನ್ನು 'ವಿಭು'ವೆಂಬುದಾಗಿ ಸ್ವೀಕರಿಸಿದರೆ ಮತ್ತೆ ಕೆಲವರು 'ಅಣು'ವೆಂಬುದಾಗಿ ಸ್ವೀಕರಿಸಿದ್ದಾರೆ. ಆತ್ಮದ ನಿತ್ಯತ್ವದ ದೃಷ್ಟಿಯಿಂದ 'ವಿಭು' ಮತ್ತು 'ಅಣು' ಎಂಬುದಾಗಿ ಸ್ವೀಕರಿಸಿದರೂ ಅದರ ವ್ಯವಹಾರದ ದೃಷ್ಟಿಯಿಂದ ಇವೆರಡೂ ಪರಿಮಾಣಗಳು ಸೂಕ್ತವಾದವುಗಳಲ್ಲ. ಆದ್ದರಿಂದ ಆತ್ಮವನ್ನು ಮಧ್ಯಮ ಪರಿಮಾಣವನ್ನಾಗಿ ಒಪ್ಪಿಕೊಳ್ಳಬೇಕೆಂದು ಜೈನ ದಾರ್ಶನಿಕರ ಅಭಿಮತ ವಾಗಿದೆ. ಅವರ ವಿಚಾರಧಾರೆಯಂತೆ ಜೀವಾತ್ಮನಿಗೆ ದೊರೆಯುವ ಶರೀರಗಳು ಭಿನ್ನ ಭಿನ್ನಗಾತ್ರದವುಗಳಿರುತ್ತವೆ. ಶಿವನ ಸೃಷ್ಟಿಯಲ್ಲಿ ಬರುವ ಎಂಭತ್ನಾಲ್ಕು ಲಕ್ಷ ಪ್ರಕಾರದ ಶರೀರಗಳಲ್ಲಿ ಕ್ರಿಮಿ–ಕೀಟಾದಿಗಳ ಶರೀರವು ಅತಿ ಚಿಕ್ಕದಾಗಿದ್ದರೆ ಆನೆ, ತಿಮಿಂಗಲು ಮುಂತಾದ ಪ್ರಾಣಿಗಳ ಶರೀರಗಳು ಅತ್ಯಂತ ವಿಶಾಲಗಳಾಗಿರುತ್ತವೆ. ಹೀಗಿರುವಾಗ ಈ ಎಲ್ಲ ದೇಹಗಳಲ್ಲಿ ಪ್ರವೇಶಿಸಿ ವ್ಯವಹರಿಸುವ ಜೀವಾತ್ಮವನ್ನು ಅಣು ಎಂಬುದಾಗಿ ಒಪ್ಪಿದರೆ ಅಣುಗಾತ್ರದ ದೇಹದ ತುಂಬೆಲ್ಲ ಅದು ತುಂಬಿಕೊಂಡು ವ್ಯವಹರಿಸುವುದು

ಸಂಭವಿಸಿದರೂ, ಅದೇ ಅಣುವಾದ ಆತ್ಮವು ಆನೆ ಮುಂತಾದ ವಿಶಾಲ ಗಾತ್ರದ ಶರೀರದಲ್ಲಿ ಪ್ರವೇಶಿಸಿದಾಗ ಆ ಆತ್ಮವು ಆ ಶರೀರದ ಯಾವುದೊಂದು ಮೂಲೆಯಲ್ಲಿ ಇರುವಂಥಾದ್ದಾಗಿ ಶರೀರದ ಸರ್ವಾವಯವಗಳ ವ್ಯವಹಾರದಿಂದ ಅದು ಅಭಿಜ್ಞವಾಗಿರ ಬೇಕಾಗುತ್ತದೆ. ಆದ್ದರಿಂದ ಆತ್ಮದ ಅಣುವಾದವು ಅಷ್ಟೊಂದು ಸೂಕ್ತವಾದುದಲ್ಲ.

ಇನ್ನು ಆತ್ಮವನ್ನು ವಿಭುವನ್ನಾಗಿ ಒಪ್ಪಿಕೊಂಡರೆ ಅಣುದೇಹದಲ್ಲಿ ಅದರ ಪ್ರವೇಶ ವಾದರೂ ಹೇಗೆ ಸಂಭವಿಸುತ್ತದೆ ? ಆದ್ದರಿಂದ ಆತ್ಮವನ್ನು ಅಣು ಮತ್ತು ವಿಭುವನ್ನಾಗಿ ಒಪ್ಪದೆ ಅದನ್ನು ಮಧ್ಯಮ ಪರಿಮಾಣವನ್ನಾಗಿ ಒಪ್ಪಿಕೊಳ್ಳಬೇಕು. ಮಧ್ಯಮ ಪರಿಮಾಣವೆಂದರೆ ಯಾವ ಗಾತ್ರದ ದೇಹ ದೊರೆಯುವುದೋ ಆ ಗಾತ್ರದಷ್ಟು ಆಗುವ ಸಾಮರ್ಥ್ಯವುಳ್ಳದ್ದೆಂದರ್ಥ. ಕ್ರಿಮಿ–ಕೀಟ ಮುಂತಾದ ಅಣುದೇಹಗಳು ದೊರೆತಾಗ ಅಣುರೂಪವಾಗಿಯೂ, ಇನ್ನು ಆನೆ–ತಿಮಿಂಗಲು ಮುಂತಾದ ಬೃಹದ್ ಗಾತ್ರದ ದೇಹಗಳು ದೊರೆತಾಗ ಅವುಗಳ ತುಂಬೆಲ್ಲ ವ್ಯಾಪಿಸಿಕೊಂಡಿರುವ ಸಾಮರ್ಥ್ಯವು ಮಧ್ಯಮ ಪರಿಮಾಣದಲ್ಲಿ ಇರುತ್ತದೆ. ಆದ್ದರಿಂದ ಆತ್ಮವನ್ನು ಅಣು ಮತ್ತು ವಿಭುವನ್ನಾಗಿ ಒಪ್ಪದೆ ಮಧ್ಯಮ ಪರಿಮಾಣವನ್ನಾಗಿ ಸ್ವೀಕರಿಸಿದರೆ ಯಾವ ತೊಂದರೆಗಳೂ ಬರುವುದಿಲ್ಲವಷ್ಟೇ ಅಲ್ಲ, ಅಣುವಿಗಿಂತಲೂ ಅಣುವಾದ, ಬೃಹತ್ತಿಗಿಂತಲೂ ಬೃಹತ್ತಾದ ಸ್ವರೂಪವನ್ನು ತಾಳುವ ಆತ್ಮವನ್ನು ನಿತ್ಯವಾಗಿಯೂ ಸಹ ಸ್ವೀಕರಿಸೋಣದರಿಂದ ಆತ್ಮದ ಅನಿತ್ಯತ್ವ ಶಂಕೆಯೂ ಸಹ ಉಂಟಾಗುವುದಿಲ್ಲವೆಂಬುದು ಜೈನ ಸಿದ್ಧಾಂತಿಗಳ ಅಭಿಮತ ವಾಗಿರುತ್ತದೆ. ಅಂತೆಯೇ ಅವರು ಆತ್ಮವನ್ನು ಮಧ್ಯಮ ಪರಿಮಾಣವನ್ನಾಗಿ ಸ್ವೀಕರಿಸಿದ್ದಾರೆ.

ಇನ್ನು ಆತ್ಮವನ್ನು ವಿಭುವನ್ನಾಗಿ ಒಪ್ಪುವ ದಾರ್ಶನಿಕರಲ್ಲಿ ವಿಭುತ್ವ ವಿಷಯದಲ್ಲಿ ವಿವಾದವಿರದಿದ್ದರೂ ಅದರ ಸಂಖ್ಯೆ ಮತ್ತು ಚಿದ್ರೂಪಾದಿಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ನ್ಯಾಯ, ವೈಶೇಷಿಕ, ಸಾಂಖ್ಯ, ಪೂರ್ವ ಮೀಮಾಂಸಾ ಮತಗಳಲ್ಲಿ ಆತ್ಮವನ್ನು ವಿಭುವನ್ನಾಗಿ ಸ್ವೀಕರಿಸಿರುವರಲ್ಲದೆ ಅದು ಪ್ರತಿ ಶರೀರದಲ್ಲಿ ಭಿನ್ನ ಭಿನ್ನವಾಗಿರುತ್ತದೆ. ಅಂತೆಯೇ ಆತ್ಮವು ಒಂದಾಗಿರುವುದಿಲ್ಲ. ಅದು ಎಷ್ಟು ಶರೀರಗಳೋ ಅಷ್ಟು ಸಂಖ್ಯೆಯಲ್ಲಿರುತ್ತದೆ ಎಂದು ಹೇಳಿ ಆತ್ಮದ ವಿಭುತ್ವದ ಜೊತೆಗೆ ಅನಂತತೆಯನ್ನೂ ಸಹ ಪ್ರತಿಪಾದಿಸಿದ್ದಾರೆ. ಆತ್ಮದ ವಿಭುತ್ವ ಮತ್ತು ಅನಂತತ್ವದ ವಿಷಯದಲ್ಲಿ ನ್ಯಾಯ, ವೈಶೇಷಿಕ, ಪೂರ್ವ ಮೀಮಾಂಸಾ ಮತ್ತು ಸಾಂಖ್ಯಾಚಾರ್ಯರ ವಿಚಾರದಲ್ಲಿ ಸಾಮ್ಯತೆಯಿದ್ದರೂ ಆತ್ಮದ ಚಿದ್ರೂಪದ ವಿಷಯದಲ್ಲಿ ಇವರೆಲ್ಲರೂ ಏಕಾಭಿಪ್ರಾಯವನ್ನು ತಾಳಿರುವುದಿಲ್ಲ.

ಸಾಂಖ್ಯರು ಆತ್ಮವನ್ನು ಚಿದ್ರೂಪವನ್ನಾಗಿ ಒಪ್ಪಿದರೆ ನ್ಯಾಯ–ವೈಶೇಷಿಕರು ಅದನ್ನು ಜಡವೆಂಬುದಾಗಿ ಒಪ್ಪಿಕೊಂಡು ಅದರೊಂದಿಗೆ ಮನಸ್ಸಿನ ಸಂಯೋಗವಾದಾಗ ಮಾತ್ರ ಜ್ಞಾನಾದಿಗುಣಗಳು ಆತ್ಮದಲ್ಲಿ ಉತ್ಪನ್ನವಾಗುತ್ತವೆ ಎಂಬುದಾಗಿ ಪ್ರತಿಪಾದಿ ಸುತ್ತಾರೆ. ಇವರ ಸಿದ್ಧಾಂತದ ಪ್ರಕಾರವಾಗಿ– ''ಜ್ಞಾನಾಧಿಕರಣಮಾತ್ಮಾ'' ಅಂದರೆ ಜ್ಞಾನದ ಉತ್ಪತ್ತಿಗೆ ಅಧಿಕರಣವಾದದ್ದು ಅರ್ಥಾತ್ ಆಧಾರವಾದದ್ದು ಆತ್ಮವು. ಈ ಆತ್ಮ

ದೊಂದಿಗೆ ಮನಸ್ಸಿನ ಸಂಯೋಗವಾಗಲು ಜ್ಞಾನ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರಗಳೆಂಬ ಒಂಭತ್ತು ವಿಶೇಷ ಗುಣಗಳು ಅರ್ಥಾತ್ ಧರ್ಮಗಳು ಆತ್ಮನಲ್ಲಿ ಉತ್ಪನ್ನವಾಗುತ್ತವೆ. ಈ ದೃಷ್ಟಿಯಿಂದ ನ್ಯಾಯ ವೈಶೇಷಿಕರ ಆತ್ಮವು ಸಗುಣವೆಂಬುದಾಗಿ ತಿಳಿದುಬರುತ್ತದೆ. ಸಾಂಖ್ಯರ ಆತ್ಮವು ಸ್ವತಃ ಚಿದ್ರೂಪವಾಗಿರೋಣದರಿಂದ ಅದರಲ್ಲಿ ಯಾವುದೇ ಗುಣಗಳು ಉತ್ಪನ್ನವಾಗದಿರೋಣದರಿಂದ ಅದಕ್ಕೆ ನಿರ್ಗುಣವೆಂದು ಕರೆಯಲಾಗುತ್ತದೆ.

ಆತ್ಮದಲ್ಲಿ ಸ್ವಾಭಾವಿಕವಾದ ಚಿದ್ರೂಪವನ್ನು ಒಪ್ಪದೆ ಎರಡು ಕಲ್ಲುಗಳ ಘರ್ಷಣೆಯಿಂದ ಕಿಡಿಯು ಉತ್ಪನ್ನವಾಗುವಂತೆ ಜಡಗಳಾದ ಆತ್ಮ–ಮನಸ್ಸುಗಳ ಸಂಯೋಗದಿಂದ ಜ್ಞಾನಾದಿಗುಣಗಳು ಉತ್ಪನ್ನವಾಗುತ್ತವೆಯೆಂದು ಪ್ರತಿಪಾದಿಸುವ ನ್ಯಾಯ–ವೈಶೇಷಿಕರ ಈ ವಾದವು ಒಂದು ಭೌತಿಕವಾದದಂತೆ ಕಂಡುಬರುತ್ತದೆ. ಇದೂ ಅಲ್ಲದೆ ಆತ್ಮವು ವಿಭುವಾಗಿರೋಣದರಿಂದ ಮನಸ್ಸು ಅಣುವಾಗಿರೋಣದರಿಂದ ಇವೆರಡೂ ನಿರವಯವಗಳಾಗಿರುತ್ತವೆ. ಹೀಗಿರುವಾಗ ಅವೆರಡರ ಸಂಯೋಗವನ್ನು ಕಲ್ಪಿಸುವದೂ ಸಹ ಅಶಕ್ಯವಾಗಿಯೇ ತೋರುತ್ತದೆ. ಒಂದು ವೇಳೆ ಅವುಗಳ ಸಂಯೋಗವು ಹಾಗೋ ಹೀಗೋ ಆಗುತ್ತದೆಯೆಂದು ಒಪ್ಪಿಕೊಂಡರೂ, ವಿಭುವಾದ ಆತ್ಮದೊಂದಿಗೆ ಅಣುವಾದ ಮನಸ್ಸಿನ ಸಂಯೋಗವು ಸರ್ವದಾ ಉಂಟಾಗೋಣದರಿಂದ ಆತ್ಮನಲ್ಲಿ ಯಾವಾಗಲೂ ಜ್ಞಾನಾದಿಗುಣಗಳು ಉತ್ಪನ್ನವಾಗಬೇಕಾಗುತ್ತದೆ. ಇದೂ ಅಲ್ಲದೆ ಅಣುವಾದ ಮನಸ್ಸು ಆತ್ಮದೊಂದಿಗೆ ಸಂಯೋಗವಾಗುವಂತೆ ಆಯಾ ಇಂದ್ರಿಯಗಳ ಜೊತೆಗೂ ಸಹ ಸಂಯೋಗವಾದಾಗ ಮಾತ್ರ ತತ್ತದಿಂದ್ರಿಯ ಸಂಬಂಧವಾದ ಜ್ಞಾನಾದಿಗಳು ಉತ್ಪನ್ನವಾಗುತ್ತವೆ. ಹೀಗಿರುವಾಗ ಅಣುವಾದ ಮನಸ್ಸು ಒಂದೇ ಸಮಯದಲ್ಲಿ ಆತ್ಮ ಮತ್ತು ಇಂದ್ರಿಯಗಳೊಂದಿಗೆ ಸಂಯೋಗವನ್ನು ಅದೂ ಹೇಗೆ ತಾನೆ ಸ್ಥಾಪಿಸಬಲ್ಲದು ? ಎಂಬ ಪ್ರಶ್ನೆಗೆ ಉತ್ತರಿಸಲಸಮರ್ಥರಾದ ನ್ಯಾಯ ವೈಶೇಷಿಕರು ಆ ಸಂಯೋಗವಿಧಿಯಲ್ಲಿ ಈಶ್ವರ ಶಕ್ತಿಯನ್ನು ನಿಯಾಮಕವನ್ನಾಗಿ ಒಪ್ಪಿಕೊಳ್ಳುತ್ತಾರೆ. ಇದೆಲ್ಲವನ್ನು ಪರ್ಯಾಲೋಚಿಸಿದಾಗ ಆತ್ಮ–ಮನಸ್ಸಿನ ಸಂಯೋಗಾದಿಗಳಿಂದ ಆತ್ಮನಲ್ಲಿ ಚೈತನ್ಯವನ್ನು ನಿರೂಪಿಸುವುದಕ್ಕಿಂತಲೂ ಸ್ವತಃ ಆತ್ಮವನ್ನೇ ಚಿದ್ರೂಪವನ್ನಾಗಿ ಒಪ್ಪುವುದು ಹೆಚ್ಚು ಸೂಕ್ತವೆಂದು ಕಂಡುಬರುತ್ತದೆ. ಈ ವಿಷಯದಲ್ಲಿ ನ್ಯಾಯ–ವೈಶೇಷಿಕರಿಗಿಂತಲೂ ಸಾಂಖ್ಯಶಾಸ್ತ್ರಾಚಾರ್ಯರ ಮತವು ಸ್ವಲ್ಪ ಸೂಕ್ತವಾಗಿ ಕಂಡುಬರುತ್ತದೆ. ಇವರು ಆತ್ಮವನ್ನು ಚಿದ್ರೂಪವನ್ನಾಗಿ ಒಪ್ಪಿಕೊಂಡಿರುತ್ತಾರೆ. ಆದರೆ ಈ ಆತ್ಮಕ್ಕೆ ಜ್ಞಾನಾದಿ ಯಾವ ಗುಣಗಳು ಇರುವುದಿಲ್ಲ, ಇದು ನಿರ್ಗುಣವಾಗಿದ್ದು, ಶುದ್ಧ ಸ್ಫಟಿಕದಂತೆ ಸ್ವಚ್ಛವಾಗಿರುತ್ತದೆ.

ಸಾಂಖ್ಯ ಸಿದ್ಧಾಂತದ ಪ್ರಕಾರ ಜ್ಞಾನ–ಇಚ್ಛಾದಿಗಳು ಅಂತಃಕರಣದ ಧರ್ಮಗಳಾಗಿರುತ್ತವೆ. ಕೆಂಪು ಕುಸುಮದ ಸಂಪರ್ಕದಿಂದ ಸ್ಫಟಿಕವು ಕೆಂಪಾಗಿ ತೋರುವಂತೆ ಅಂತಃಕರಣದ ಸಾನ್ನಿಧ್ಯದಿಂದ ಆತ್ಮದಲ್ಲಿ ಜ್ಞಾನಾದಿಗುಣಗಳ ಪ್ರತೀತಿಯಾಗುತ್ತದೆಂಬುದಾಗಿ ಸಾಂಖ್ಯರು ಪ್ರತಿಪಾದಿಸುತ್ತಾರೆ.

ಇನ್ನು ಮೀಮಾಂಸಕರು ಆತ್ಮವನ್ನು ನೈಯ್ಯಾಯಿಕರಂತೆ ಕೇವಲ ಜಡವೆಂದಾಗಲೀ, ಸಾಂಖ್ಯರಂತೆ ಸಂಪೂರ್ಣವಾಗಿ ಚಿದ್ರೂಪವೆಂತಾಗಲೀ ಒಪ್ಪಿಕೊಳ್ಳದೇ ಅದನ್ನು ಖದ್ಯೋತದಂತೆ ಅರ್ಥಾತ್ ಹೊನ್ನಿ ಹುಳುವಿನಂತೆ ಚಿಜ್ಜಡರೂಪವನ್ನಾಗಿ ಪ್ರತಿಪಾದಿಸಿದ್ದಾರೆ. ನ್ಯಾಯ, ವೈಶೇಷಿಕ, ಸಾಂಖ್ಯ, ಪೂರ್ವ ಮೀಮಾಂಸಾಚಾರ್ಯರು ಆತ್ಮನನ್ನು 'ವಿಭು'ವೆಂಬುದಾಗಿ ಒಪ್ಪಿ ಸಂಖ್ಯೆಯಲ್ಲಿ ಅದು ಅನಂತವೆಂಬುದಾಗಿ ಹೇಳಿದ್ದಾರೆ. ವಿಭುರೂಪಗಳಾದ ಆತ್ಮರು ಒಂದೇ ರೀತಿಯಾಗಿರೋಣದರಿಂದ ಅವುಗಳಲ್ಲಿ ಪರಸ್ಪರ ಭೇದಮಾಡುವುದು ಹೇಗೆ ? ಎಂಬುದರ ಬಗ್ಗೆ ಅವರು ನಿರುತ್ತರರಾಗುತ್ತಾರೆ. ಈ ವಿಷಯದಲ್ಲಿ ಅವರು ಇನ್ನೂ ಹೆಚ್ಚಿಗೆ ಚಿಂತಿಸಿಲ್ಲವೆಂಬುದು ಕಂಡುಬರುತ್ತದೆ.

ವಿಭುವಾದ ಆತ್ಮಗಳು ಸರ್ವ ದೇಶದಲ್ಲಿ ಅರ್ಥಾತ್ ಎಲ್ಲ ಸ್ಥಾನಗಳಲ್ಲಿ ಸಮಾನವಾಗಿರೋಣದರಿಂದ ಮನಸ್ಸು, ಲಿಂಗ ಶರೀರ ಅಥವಾ ಸ್ಥೂಲ ಶರೀರವು ತನ್ನದೇ ಆದ ಒಂದೇ ಆತ್ಮದೊಂದಿಗೆ ಹೇಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳಬಹುದು ? ಮತ್ತು ಆ ಆತ್ಮಗಳು ಭಿನ್ನ ಭಿನ್ನ ದೇಹಗಳಿಂದ ಹೇಗೆ ತಾನೆ ಸುಖ–ದುಃಖರೂಪ ಫಲಗಳನ್ನು ಅನುಭವಿಸಬಹುದು ? ಎಂಬುದಾಗಿ ಪ್ರಶ್ನಿಸಲು, ಅದಕ್ಕೆ ಸಮಾಧಾನ ರೂಪವಾಗಿ ಅವರು ಹೇಳುವುದೇನೆಂದರೆ– ಸಂಬಂಧಗಳು ಎರಡು ಪ್ರಕಾರವಾಗಿರುತ್ತವೆ. ಒಂದು ಸಾಮಾನ್ಯ ಸಂಬಂಧವೆಂದು ಕರೆಯಿಸಿಕೊಂಡರೆ, ಇನ್ನೊಂದು ವಿಶೇಷ ಸಂಬಂಧವೆಂದು ಕರೆಯಲ್ಪಡುತ್ತದೆ. ಬೇರೆ ಬೇರೆ ಶರೀರಾದಿಗಳು ಅನ್ಯಾನ್ಯ ಆತ್ಮದೊಂದಿಗೆ ಸಾಮಾನ್ಯವಾದ ಸಂಬಂಧವನ್ನು ಹೊಂದಿದ್ದರೂ, ತನ್ನದೇ ಆದ ಆತ್ಮದೊಂದಿಗೆ ವಿಶೇಷವಾದ ಸಂಬಂಧವನ್ನು ಹೊಂದಿರುತ್ತವೆ. ಈ ವಿಶೇಷವಾದ ಸಂಬಂಧದ ಪ್ರಭಾವದಿಂದಲೇ ಆಯಾ ಆತ್ಮಗಳು ಆಯಾ ಶರೀರಾದಿಗಳ ಮೂಲಕ ಸುಖ–ದುಃಖಾದಿ ಫಲಗಳನ್ನು ಅನುಭವಿಸುತ್ತವೆ ಎಂಬುದು ವಿಭು–ಆತ್ಮವಾದಿಗಳ ವಿಚಾರವಾಗಿರುತ್ತದೆ. ಆದರೆ ಇವರ ಈ ವಿಚಾರವು ಅಷ್ಟೊಂದು ಸೂಕ್ತವಾಗಿ ಕಂಡುಬರುವುದಿಲ್ಲ. ವಿಭುವಾದ ಆತ್ಮವು ತನಗೆ ಸಂಬಂಧಪಟ್ಟ ಶರೀರದೊಳಗೆ ಮನಸ್ಸು ಮುಂತಾದವುಗಳಿಂದ ಸುಖ–ದುಃಖಾದಿಗಳನ್ನು ಅನುಭವಿಸುತ್ತಿದ್ದರೂ, ತನ್ನ ಶರೀರವನ್ನು ಹೊರತುಪಡಿಸಿ ಹೊರದೇಶದಲ್ಲಿರುವ ಆತ್ಮಕ್ಕೆ ಸುಖ–ದುಃಖಾದಿಗಳ ಅರಿವು ಇರುವುದಿಲ್ಲವೆಂಬುದಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಿದ್ದಾಗ ಶರೀರದ ಹೊರಗಿರುವ ಆ ಆತ್ಮವು ಇದ್ದೂ ಸಹ ಇಲ್ಲದಂತೆ ನಿಷ್ಪ್ರಯೋಜನವಾಗಿರುತ್ತದೆ. ಹೀಗೆ ಅನೇಕ ಆತ್ಮಗಳ ವಿಭುತ್ವವು ಅನ್ಯಥಾ ಸಿದ್ಧವಾಗೋಣದರಿಂದ ಅನೇಕಾತ್ಮಗಳನ್ನೊಪ್ಪಿ ಅವೆಲ್ಲವುಗಳನ್ನು ವಿಭುವೆಂದು ಹೇಳುವುದು ನಿರರ್ಥಕವೆನ್ನುವುದರಲ್ಲಿ ಸಂದೇಹವಿರುವುದಿಲ್ಲ.

ಇದೂ ಅಲ್ಲದೆ ಆತ್ಮವನ್ನು ವಿಭುವನ್ನಾಗಿ ಒಪ್ಪಿದರೆ, ಅದು ಯಾವಾಗಲೂ ಎಲ್ಲ ಕಡೆ ಇರೋಣದರಿಂದ ಮೃತದೇಹದಿಂದ ಅದರ ಉತ್ಕ್ರಾಂತಿ, ಗತಿ–ಆಗತಿ (ಆಗಮನ) ಮುಂತಾದವುಗಳು ಸಂಭವಿಸಲಾರವು. ಒಂದು ವೇಳೆ ಮೃತದೇಹದಿಂದ ಆತ್ಮದ ಉತ್ಕ್ರಾಂತ್ಯಾದಿಗಳನ್ನು ಒಪ್ಪದೇ ಹೋದರೆ, ಆ ಉತ್ಕ್ರಾಂತ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿ–ಸ್ಮೃತಿ ವಾಕ್ಯಗಳು ನಿರರ್ಥಕಗಳಾಗಬೇಕಾಗುತ್ತವೆ.

ಇನ್ನು ಅದ್ವೈತ ವೇದಾಂತಿಗಳು ಆತ್ಮವನ್ನು ವಿಭುವನ್ನಾಗಿ ಒಪ್ಪಿ ಆ ಆತ್ಮವು ಒಂದೇ ಆಗಿರುತ್ತದೆಂಬುದಾಗಿ ಹೇಳುತ್ತಾರೆ. ಆ ಒಂದೇ ಆದ ಆತ್ಮವು ಶರೀರ, ಮನಸ್ಸು ಮುಂತಾದ ಉಪಾಧಿಗಳ ಮೂಲಕ ಅನೇಕ ವಿಧವಾಗಿ ತೋರುತ್ತದೆ. ಇದರ ಈ ತೋರುವಿಕೆಯು ಔಪಾಧಿಕವೆಂಬುದಾಗಿ ಅವರು ಔಪಾಧಿಕ ಭೇದವನ್ನು ವ್ಯವಸ್ಥೆಗೊಳಿಸುತ್ತಾರೆ. ಇವರು ಹೇಳುವ ಹಾಗೆ ಭೇದವು ಔಪಾಧಿಕವಾಗಿದ್ದರೂ, ವಿಭುವಾದ ಆತ್ಮವು ಒಂದೇ ಇರುತ್ತದೆಂಬುದು ಸಿದ್ಧವಾಗುತ್ತದೆ. ಆತ್ಮವನ್ನು ವಿಭುವೆಂದು ಒಪ್ಪಿದಾಗ ಈ ಪೂರ್ವದಲ್ಲಿ ಹೇಳಿದ ಉತ್ಕ್ರಾಂತಿ–ಗತಿ ಮುಂತಾದ ವ್ಯವಹಾರವು ಸಂಭವಿಸದೇ ಇರುವ ದೋಷವು ಇಲ್ಲಿಯೂ ಬಂದೊದಗುತ್ತದೆ. ಆದ್ದರಿಂದ ಆತ್ಮನ ವಿಭುತ್ವ ವಿಚಾರವು ಅಷ್ಟೊಂದು ಸಮಂಜಸವಾಗಿ ತೋರುವುದಿಲ್ಲ.

ಈ ಅಸಮಂಜಸತೆಯನ್ನು ವಿಚಾರಮಾಡಿಯೇ ವೀರಶೈವ ಸಿದ್ಧಾಂತದಲ್ಲಿ ಆತ್ಮವನ್ನು ''ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ'', ''ಅಂಗುಷ್ಟ ಮಾತ್ರಃ ಪುರುಷೋಽಂತರಾತ್ಮ'', ಮುಂತಾದ ಮುಂಡಕ ಹಾಗೂ ಕಠೋಪನಿಷತ್ತುಗಳ ಪ್ರಮಾಣಾನುಸಾರವಾಗಿ ಜೀವಾತ್ಮನನ್ನು ಅಣುಪರಿಮಾಣವನ್ನಾಗಿ ಸ್ವೀಕರಿಸಲಾಗಿದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ ಸಹ–

ವಾಲಾಗ್ರಶತಭಾಗೇನ ಶತಧಾ ಕಲ್ಪಿತೇನ ತು ।
ಭಾಗ ಆತ್ಮಾ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪ್ಯತೇ ॥

ಎಂಬುದಾಗಿ ಹೇಳಿ ಆತ್ಮದ ಅಣುಪರಿಮಾಣತೆಯನ್ನು ಸಿದ್ಧಮಾಡುವುದರ ಜೊತೆಗೆ ಅದರ ಅನೇಕತ್ವವನ್ನೂ ಸಹ ಪ್ರತಿಪಾದಿಸಲಾಗಿದೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರೂ ಸಹ ಈ ಆತ್ಮಸ್ಥಲದಲ್ಲಿ ಆತ್ಮವು ಅಣುರೂಪವೆಂಬುದಾಗಿ ಆದೇಶಿಸಿದ್ದಾರೆ.

ಆತ್ಮವನ್ನು ಅಣುವಾಗಿ ಒಪ್ಪಿದರೆ, ಅದು ಶರೀರದ ಯಾವುದೊಂದು ಭಾಗದಲ್ಲಿದ್ದಾಗ ಆಪಾದಮಸ್ತಕ ಪರ್ಯಂತವಾಗಿ ಆಗುವ ಶರೀರದ ಎಲ್ಲ ವ್ಯವಹಾರಗಳ ತಿಳುವಳಿಕೆಯು ಅದಕ್ಕೆ ಹೇಗೆ ತಾನೆ ಉಂಟಾಗುವುದು ? ಎಂಬ ಪ್ರಶ್ನೆಯನ್ನು ಪರಿಹರಿಸುವುದಕ್ಕಾಗಿಯೇ ಪೂಜ್ಯಪಾದರು ಇಲ್ಲಿ ದೀಪದ ಉಪಮಾನವನ್ನು ಕೊಟ್ಟಿದ್ದಾರೆ. ಒಂದು ಚಿಕ್ಕದಾದ ದೀಪವನ್ನು ಮನೆಯ ಮಧ್ಯದಲ್ಲಿರಿಸಿದಾಗ ಅದರ ಪ್ರಭೆಯು ಮನೆಯ ತುಂಬೆಲ್ಲ ಪಸರಿಸಿ ಮನೆಯನ್ನೆಲ್ಲ ಬೆಳಕಾಗಿಸುವಂತೆ ಪ್ರತಿಯೊಬ್ಬರ ಹೃದಯದಲ್ಲಿ ನಿವಾಸಿಸುತ್ತಿರುವ ಆತ್ಮವು ಕೂದಲಿನ ಅಗ್ರಭಾಗದ ಶತಾಂಶ ಪರಿಮಾಣದ್ದಾಗಿದ್ದರೂ ಅದು ತನ್ನ ಜ್ಞಾನರೂಪೀ ಪ್ರಭೆಯಿಂದ ಶರೀರವೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತದೆ. ಅಂದಾಗ ಶರೀರದ ಪ್ರತಿಯೊಂದು ಇಂದ್ರಿಯಗಳ ಮುಖಾಂತರ ಆಗುವ ವ್ಯವಹಾರಗಳನ್ನು ಅದು ತಿಳಿಯುವಂಥಾದ್ದಾಗಿರುತ್ತದೆ. ಆದ್ದರಿಂದ ಆತ್ಮವನ್ನು ಅಣುಪರಿಮಾಣವನ್ನಾಗಿ ಒಪ್ಪಿಕೊಳ್ಳುವುದೇ ಯೋಗ್ಯವೆನಿಸುತ್ತದೆ. ಆತ್ಮವು ಅಣುರೂಪವಾಗಿದ್ದಾಗಲೇ ಅದರ ಉತ್ಕ್ರಾಂತಿ, ಗತಿ ಮತ್ತು ಆಗತಿ ಮುಂತಾದವುಗಳು ಸಹಜವಾಗಿ ಸಂಭವಿಸುತ್ತವೆ. ಇದೂ ಅಲ್ಲದೆ ಅದನ್ನು ಅಣುವಾಗಿ ಒಪ್ಪಿದ್ದರಿಂದಲೇ ಅದರ ನಿತ್ಯತ್ವವೂ ಸಹ ಸಿದ್ಧವಾಗುತ್ತದೆ.

ಹೀಗೆ ಅಣುಪರಿಮಾಣವೂ, ನಿತ್ಯವೂ ಮತ್ತು ತನ್ನ ಜ್ಞಾನಪ್ರಭೆಯಿಂದ ಶರೀರವೆಲ್ಲವನ್ನು ವ್ಯಾಪಿಸಿಕೊಂಡಿರುವ ಆ ಆತ್ಮವು ತಾನು ಮಾಡಿದ ಕರ್ಮಗಳ ಫಲಗಳಾದ ಸುಖ–ದುಃಖಾದಿಗಳನ್ನು ಅನುಭವಿಸುತ್ತ ಇರುತ್ತದೆ ಎಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಈ ಜೀವ ಭಾವವು ಆಣವಾದಿ ಮಲಸಂಬಂಧ ಮೂಲಕವೆಂಬುದನ್ನು ತಿಳಿಸಲೋಸುಗ ಪೂಜ್ಯಪಾದರು ಪುನಃ–

ಆತ್ಮಾऽಪಿ ಸರ್ವಭೂತಾನಾಮಂತಃಕರಣಮಾಶ್ರಿತಃ ।
ಅಣುಭೂತೋ ಮಲಾಸಂಗಾದಾದಿ ಕರ್ಮನಿಯಂತ್ರಿತಃ ॥

(ಸಿ.ಶಿ.೧೮–೭)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಜೀವಾತ್ಮನು ಪಂಚಭೂತ ಗಳಿಗೆ ಮೂಲತಃ ಆತ್ಮರೂಪನಾಗಿದ್ದಾನೆ. ಅರ್ಥಾತ್ ಆಶ್ರಯನಾದವನಾಗಿದ್ದಾನೆ. ಆದರೂ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳ ಆವರಣದಿಂದಾಗಿ ಅಣುರೂಪನೆನಿಸಿ ಪ್ರಾಕ್ತನಗಳಾದ ತನ್ನ ಕರ್ಮಗಳಿಂದ ಕಟ್ಟಲ್ಪಟ್ಟಂಥವನಾಗಿ ಅಂತಃಕರಣವನ್ನು ಆಶ್ರಯಿಸಿ ಇರುವಂಥವನಾಗಿದ್ದಾನೆ.

ಮೂಲತಃ ಆತ್ಮತತ್ತ್ವವು ವ್ಯಾಪಕವೂ, ಸರ್ವಕ್ಕೂ ಕಾರಣವೂ ಆಗಿರುತ್ತದೆ. ಅದರಿಂದಲೇ ಸಕಲ ಮಹಾಭೂತಗಳು ಉತ್ಪನ್ನಗಳಾಗಿರುತ್ತವೆ. ಅಂತೆಯೇ ಶ್ರುತಿ ಯಲ್ಲಿ–''ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ ವಾಯೋ ಗರಗ್ನಿಃ ಅಗ್ನೇರಾಪಃ, ಅದ್ಭ್ಯಃ ಪೃಥಿವೀ, ಪೃಥಿವ್ಯಾದೋಷಧಯ ಓಷಧಿಭ್ಯೋऽನ್ನಂ ಅನ್ನಾತ್ಪ್ರಜಾಃ'' ಹೀಗೆ ಆತ್ಮನಿಂದಲೇ ಪಂಚಮಹಾಭೂತಗಳ ಉತ್ಪತ್ತಿಕ್ರಮವು ಪ್ರತಿಪಾದಿ ಸಲ್ಪಟ್ಟಿದೆ. ಆತ್ಮವು ಆಕಾಶಾದಿ ಪಂಚಮಹಾಭೂತಗಳ ಉತ್ಪತ್ತಿಗೆ ಕಾರಣವಾಗಿರ ಬೇಕಾದರೆ ಅದು ಎಷ್ಟು ಬೃಹದಾಕಾರವಾಗಿದೆಯೆಂಬುದನ್ನು ಊಹಿಸಬಹುದಾಗಿದೆ. ಹೀಗೆ ಮೂಲತಃ ಆತ್ಮವು ವ್ಯಾಪಕವಾಗಿದ್ದರೂ ಮಲಸಂಬಂಧದಿಂದ ಅಣುರೂಪ ವಾಗಿದೆಯೆಂದು ಪೂಜ್ಯರು ಅಪ್ಪಣೆಕೊಡಿಸಿದ್ದಾರೆ.

ವೀರಶೈವ ಸಿದ್ಧಾಂತದಲ್ಲಿ ಆತ್ಮನಿಗೆ ಆಣವಾದಿ ಮಲತ್ರಯಗಳೇ ಜೀವತ್ವವನ್ನು ತಂದುಕೊಡುತ್ತವೆ ಎಂಬುದಾಗಿ ಅಂಗೀಕರಿಸಲಾಗಿದೆ. ಮೂರುವಿಧ ಮಲಗಳಲ್ಲಿ ಮೊದಲನೆಯದಾದ ಆಣವ ಮಲವು ಆತ್ಮವನ್ನು ಆವರಿಸಿ ಅದರಲ್ಲಿ ಅಣುಭಾವನೆಯನ್ನು ತಂದುಕೊಡುತ್ತದೆ. ಇದರ ಆವರಣದಿಂದಾಗಿ ಆತ್ಮವು ತನ್ನ ವ್ಯಾಪಕ ಸ್ವರೂಪವನ್ನು ಮರೆತು ತನ್ನನ್ನು ಅತ್ಯಂತ ಸಂಕುಚಿತವನ್ನಾಗಿ ತಿಳಿದುಕೊಳ್ಳುತ್ತದೆ. ಹೀಗೆ ಆಣವಮಲದ ಆವರಣದ ನಂತರ ಅದೇ ಆತ್ಮವನ್ನೇ ಮಾಯಾಮಲವೂ ಸಹ ಆವರಿಸುವುದು. ಆ ಮಾಯೀಯ ಮಲದ ಆವರಣದಿಂದಾಗಿ ಜೀವಾತ್ಮನಲ್ಲಿ ಭೇದಜ್ಞಾನವುಂಟಾಗಿ ನಾನು–ನನ್ನದು ಎಂಬ ಮೋಹವು ಪ್ರಾದುರ್ಭವಿಸುವುದು. ಹೀಗೆ ಆಣವ–ಮಾಯಾ ಮಲಗಳಿಂದ ಆವೃತನಾದ ಜೀವನು ಶುಭಾಶುಭ ಕರ್ಮಗಳನ್ನು ಎಸಗುತ್ತಿರುತ್ತಾನೆ. ಅವನ ಆ ಶುಭಾಶುಭ ಕರ್ಮಗಳಿಂದ ಜನಿಸಿದ ಸುಕೃತ–ದುಷ್ಕೃತಗಳು ಹಾಗೂ ಅವುಗಳ

ವಾಸನೆಗಳೇ ಕಾರ್ಮಿಕಮಲ ಎಂಬುದಾಗಿ ಕರೆಯಲ್ಪಡುತ್ತವೆ. ಹೀಗೆ ಈ ಮಲ ಗಳಿಂದಲೇ ಸಂಕುಚಿತಗಳಾದ ಶಕ್ತಿಗಳೆಂಬುದಾಗಿಯೂ ಸಹ ತಿಳಿದುಕೊಳ್ಳಬೇಕು. ಪರಶಿವನ ಇಚ್ಛಾಶಕ್ತಿಯೇ ಸಂಕುಚಿತವಾಗಿ ಆಣವ ಮಲವೆಂದು ಕರೆಯಿಸಿಕೊಳ್ಳುವುದು. ಈ ಆಣವ ಮಲದ ಆವರಣದ ಪರಿಣಾಮವಾಗಿ ಜೀವನು ತನ್ನ ಮೂಲವಾದ ವಿಭು ರೂಪವನ್ನು ಮರೆತು ''ಅಪೂರ್ಣೋಽಸ್ಮಿ'' ಎಂಬುದಾಗಿ ವ್ಯವಹರಿಸುತ್ತಾನೆ. ಅಂತೆಯೇ ಕ್ಷೇಮರಾಜಾಚಾರ್ಯನು ''ಅಪೂರ್ಣಮ್ಮನ್ಯತಾರೂಪಮಾಣವಂ ಮಲಮ್'' ಎಂಬು ದಾಗಿ ಆಣವ ಮಲದ ಲಕ್ಷಣವನ್ನು ನಿರೂಪಿಸಿರುತ್ತಾನೆ.

ಇದೇ ಪ್ರಕಾರವಾಗಿ ಪರಶಿವನ ಇಚ್ಛಾಶಕ್ತಿಯು ಸಂಕುಚಿತವಾಗಿ ಮಾಯೀಯ ಮಲರೂಪ ತಾಳುವುದು. ಈ ಮಲದ ಆವರಣದಿಂದ ಜೀವನು ತನ್ನನ್ನು ಪರಿಶಿವನಿ ಗಿಂತಲೂ ಭಿನ್ನನನ್ನಾಗಿ ತಿಳಿದು ಶರೀರಾದಿಗಳಲ್ಲಿ ನಾನೆಂತಲೂ, ಸತಿ-ಸುತಾದಿಗಳಲ್ಲಿ ನನ್ನದೆಂತಲೂ ವ್ಯವಹರಿಸತೊಡಗುವನು. ಅಂತೆಯೇ- ''ಭಿನ್ನವೇದ್ಯ ಪ್ರಥಾರೂಪಂ ಮಾಯೀಯಂ ಮಲಮ್'' ಎಂಬುದಾಗಿ ಕ್ಷೇಮರಾಜಾಚಾರ್ಯನು ಮಾಯೀಯ ಮಲದ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ.

ಇದರಂತೆಯೇ ಪರಶಿವನ ಕ್ರಿಯಾಶಕ್ತಿಯ ಸಂಕೋಚಕ್ಕೆ ಕಾರ್ಮಿಕ ಮಲವೆಂದು ಕರೆಯುತ್ತಾರೆ. ಇದು ಶುಭಾಶುಭ ವಾಸನಾರೂಪವಾದುದಾಗಿರುತ್ತದೆ. ಈ ವಾಸನೆಯ ಬಲದಿಂದಲೇ ಜೀವಾತ್ಮನು ವಿಹಿತ ಹಾಗೂ ನಿಷಿದ್ಧ ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳಾದ ಸುಖ-ದುಃಖಗಳನ್ನನುಭವಿಸುತ್ತ, ತನ್ನ ಕರ್ಮಾನುಸಾರವಾಗಿ ದೇವ, ತಿರ್ಯಕ್ ಮತ್ತು ಮನುಷ್ಯಾದಿ ಯೋನಿಗಳಲ್ಲಿ ಸದಾ ಪರಿಭ್ರಮಿಸುತ್ತಿರುತ್ತಾನೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕಾರ್ಮಮಲವನ್ನು ಕುರಿತೇ-

ಅವಿದ್ಯಾ ಮೋಹಿತಾ ಜೀವಾ ಬ್ರಹ್ಮೈಕ್ಯಜ್ಞಾನವರ್ಜಿತಃ
ಪರಿಭ್ರಮಂತಿ ಸಂಸಾರೇ ನಿಜಕರ್ಮಾನುಸಾರತಃ ।
ದೇವತಿರ್ಯಙ್ ಮನುಷ್ಯಾದಿ ನಾನಾಯೋನಿವಿಭೇದತಃ ॥
ಚಕ್ರನೇಮಿಕ್ರಮೇಣೈವ ಭ್ರಮಂತಿ ಹಿ ಶರೀರಿಣಃ ।
ಜಾತ್ಯಾಯುರ್ಭೋಗವೈಷಮ್ಯಕಾರಣಂ ಕರ್ಮ ಕೇವಲಮ್ ॥

(ಸಿ. ಶಿ. ೫-೪೯-೫೦)

ಈ ತೆರನಾಗಿ ಹೇಳಿದ್ದಾರೆ. ಜೀವಾತ್ಮನ ಜನ್ಮ ಹಾಗೂ ಭೋಗ ವೈಷಮ್ಯಾದಿಗಳಿಗೆ ಅವನ ಶುಭಾಶುಭ ಕರ್ಮಗಳೇ ಕಾರಣವೆಂಬುದು ತಿಳಿದುಬರುತ್ತದೆ. ಈ ಕರ್ಮಗಳಿಗೆ ಕಾರಣೀಭೂತವಾದ ಶುಭಾಶುಭ ವಾಸನೆಗಳೇ ಕಾರ್ಮಮಲವಾಗಿರುತ್ತವೆ. ಅಂತೆಯೇ ಕ್ಷೇಮರಾಜಾಚಾರ್ಯನು- ''ಶುಭಾಶುಭಾನುಷ್ಠಾನಮಯಂ ಕಾರ್ಮಮಲಮ್'' ಎಂಬು ದಾಗಿ ಅದರ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ.

ಹೀಗೆ 'ಆಣವ ಮಲವು' ಅಣುತ್ತ್ವ ಭಾವನೆಯನ್ನು ತಂದುಕೊಡುವುದರ ಮೂಲಕ 'ಮಾಯೀಯ ಮಲವು' ಪರಮಾತ್ಮನೊಂದಿಗೆ ಭೇದಬುದ್ಧಿಯನ್ನು ಹುಟ್ಟಿಸಿ ದೇಹಾದಿಗಳ ಸಂಬಂಧವನ್ನು ಮಾಡಿಸುವುದರ ಮೂಲಕ ಅದೇ ಪ್ರಕಾರವಾಗಿ

'ಕಾರ್ಮಮಲವು' ಶುಭಾಶುಭ ಕರ್ಮಗಳಲ್ಲಿ ಪ್ರವೃತ್ತಿಗೊಳಿಸುವುದರ ಮೂಲಕ ಜೀವನಿಗೆ ಬಂಧನಕಾರಕಗಳಾಗಿರುತ್ತವೆ. ಹೀಗೆ ಮಲಾವೃತವಾದ ಆತ್ಮದ ಅರ್ಥಾತ್ ಪರಮ ತತ್ತ್ವದ ಅಂಶವೇ ಇಲ್ಲಿ ಜೀವನೆಂದು ಕರೆಯಿಸಿಕೊಳ್ಳುತ್ತದೆ. ಅಂತೆಯೇ ಪೂಜ್ಯಪಾದರೂ ಸಹ– ''ಜೀವತ್ವಂ ದುಃಖ ಸರ್ವಸ್ವಂ ತದಿದಂ ಮಲಕಲ್ಪಿತಮ್'' ಎಂಬುದಾಗಿ ಜೀವಾತ್ಮನ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ. ಇಲ್ಲಿರುವ ಒಂದು ರಹಸ್ಯವೇನೆಂದರೆ ವೀರಶೈವ ಸಿದ್ಧಾಂತದ ಪ್ರಕಾರವಾಗಿ ಆತ್ಮವು ಅರ್ಥಾತ್ ಪರಮ ತತ್ತ್ವವು ಒಂದೇ ಆಗಿರುತ್ತದೆ. ಅದು ವ್ಯಾಪಕವೂ ಮತ್ತು ಸಚ್ಚಿದಾನಂದ ಸ್ವರೂಪವೂ ಆಗಿರುತ್ತದೆ. ಈ ಆತ್ಮರೂಪವಾದ ಪರಮತತ್ತ್ವವು ತನ್ನ ಲೀಲಾವಸ್ಥೆಯಲ್ಲಿ ತನ್ನಲ್ಲಿರುವ ಅಪರಿಮಿತಗಳಾದ ಜ್ಞಾನ, ಇಚ್ಛಾ ಮತ್ತು ಕ್ರಿಯಾಶಕ್ತಿಗಳನ್ನು ಸಂಕುಚಿತಗೊಳಿಸಿ ಕೊಳ್ಳುತ್ತದೆ. ಹೀಗೆ ಸಂಕುಚಿತಗೊಂಡ ಆ ಶಕ್ತಿಗಳೇ ಮಲಗಳೆಂಬುದಾಗಿ ಕರೆಯಲ್ಪಡುತ್ತವೆ. ಈ ಮಲಗಳಿಂದ ಆವೃತವಾದ ಆ ಪರಮತತ್ತ್ವದ ಒಂದು ಅಂಶವೇ ಜೀವವೆಂಬುದಾಗಿ ಕರೆಯಲ್ಪಡುತ್ತದೆ. ಆಕಾಶವು ವ್ಯಾಪಕವಾಗಿ ಒಂದೇ ಇದ್ದರೂ ಸಾವಿರ ಸಾವಿರ ಸಣ್ಣ–ದೊಡ್ಡ ಘಟಗಳಿಂದ ಆವೃತವಾದಾಗ ಅದು ಘಟಾಕಾಶವೆಂಬುದಾಗಿ ಕರೆಯಲ್ಪಡುತ್ತದೆ. ತನಗೆ ಉಪಾಧಿಯಾದ ಘಟವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಈ ಘಟಾಕಾಶವು ತನಗೆ ಮೂಲವಾದ ಮಹಾಕಾಶಕ್ಕಿಂತಲೂ ಭಿನ್ನವಾಗಿಯೇ ತೋರುತ್ತಿರುತ್ತದೆ. ಯಾವಾಗ ಘಟರೂಪವಾದ ಉಪಾಧಿಯು ನಷ್ಟವಾಗುವುದೋ ಆಗ ಅದು ಅಖಂಡಾಕಾಶ ರೂಪವಾಗಿ ತೋರುವುದು.

ಇದೇ ಪ್ರಕಾರವಾಗಿ ಅಖಂಡವೂ, ಅದ್ವಿತೀಯವೂ, ಸಚ್ಚಿದಾನಂದ ಸ್ವರೂಪವೂ ಆದ ಪರಮಾತ್ಮತತ್ತ್ವವು ತನ್ನದೇ ಆದ ಲೀಲಾ ವಿನೋದಕ್ಕಾಗಿ ತನ್ನಲ್ಲಿರುವ ಇಚ್ಛಾಶಕ್ತಿಗಳನ್ನು ಸಂಕುಚಿತಗೊಳಿಸಿಕೊಂಡು ಅವುಗಳಿಂದುಂಟಾದ ಆಣವಾದಿ ಮಲಗಳಿಂದ ಆವೃತವಾಗಿ ಅಂಶರೂಪನಾದ ಜೀವನೆನಿಸಿ ಜಗತ್ತಿನಲ್ಲಿ ವ್ಯವಹರಿಸುತ್ತಿರುತ್ತದೆ. ಯಾವಾಗ ಸದ್ಗುರುವಿನ ದೀಕ್ಷಾ ಸಂಸ್ಕಾರ ಹಾಗೂ ತತ್ತ್ವೋಪದೇಶದ ಮೂಲಕ ಆ ಮಲತ್ರಯಗಳು ಇಲ್ಲವಾಗಿ ಹೋಗುವುವೋ ಆಗ ಇವನ ಜೀವಭಾವವು ಅರ್ಥಾತ್ ಜೀವತ್ವವು ತೊಲಗಿ ಇವನ ಸಂಕುಚಿತಗಳಾದ ಶಕ್ತಿಗಳು ಪುನಃ ವಿಕಾಸಗೊಂಡು ಕೊನೆಗೆ ಪರಮಾತ್ಮರೂಪನೇ ಆಗುತ್ತಾನೆ.

ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜೀವಭಾವವು ಬಂದ ಬಗೆಯನ್ನು ನಿರೂಪಿಸುತ್ತ–''ಆತ್ಮ ತತ್ತ್ವವು ಅಖಂಡವೂ, ವ್ಯಾಪಕವೂ ಆಗಿರುತ್ತದೆ. ಅದುವೇ ಪಂಚಮಹಾಭೂತಗಳಿಗೆ ಕಾರಣವಾಗಿರುತ್ತದೆ. ಇಂತಹ ಆ ಆತ್ಮತತ್ತ್ವವು ಆಣವಾದಿ ಮಲಗಳ ಸಂಬಂಧದಿಂದ ಅಣುಭಾವವನ್ನು ತಾಳಿ ಅಂತಃಕರಣವನ್ನು ಆಶ್ರಯಿಸಿ 'ಅಹಂ–ಮಮ' ಎಂಬುದಾಗಿ ವ್ಯವಹರಿಸುತ್ತ ತಾನೇ ಮಾಡಿದ ಶುಭಾ–ಶುಭ ಕರ್ಮಗಳ ಅಧೀನವಾಗಿ ಜೀವವೆಂದು ಕರೆಯಿಸಿಕೊಳ್ಳುತ್ತದೆ.

ಆತ್ಮಕ್ಕೆ ಬಂದಿರುವ ಈ ದೇಹಾಭಿಮಾನವನ್ನು ಕುರಿತು ಇನ್ನಷ್ಟು ಸ್ಪಷ್ಟಪಡಿಸುತ್ತ ಪೂಜ್ಯಪಾದರು–

ಜಪಾಯೋಗಾದ್ಯಥಾ ರಾಗಃ ಸ್ಫಟಿಕಸ್ಯ ಮಣೇರ್ಭವೇತ್ ।
ತಥಾऽಹಂಕಾರಸಂಬಂಧಾದಾತ್ಮನೋ ದೇಹಮಾನಿತಾ ॥

(ಸಿ. ಶಿ. ೧೮-೮)

ಹೀಗೆ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ''ಕೆಂಪುದಾಸಾಳ ಹೂವಿನ ಸಂಬಂಧದಿಂದ ಶುದ್ಧವಾದ ಸ್ಫಟಿಕವು ಕೆಂಪು ವರ್ಣದ್ದಾಗಿ ತೋರುವಂತೆ ಅಹಂಕಾರದ ಸಂಬಂಧದಿಂದ ಈ ಆತ್ಮವೂ ಸಹ ದೇಹಾಭಿಮಾನವನ್ನು ಮಾಡಿಕೊಳ್ಳುತ್ತದೆ.

ಸ್ಫಟಿಕಮಣಿಯು ಅತ್ಯಂತ ಶುಭ್ರವಾಗಿರುತ್ತದೆ. ಅಂತೆಯೇ ಅದಕ್ಕೆ ಸ್ಫಟಿಕವೆಂದು ಕರೆದಿದ್ದಾರೆ. ಅದರಲ್ಲಿ ಶುಭ್ರತೆಯನ್ನು ಬಿಟ್ಟು ಬೇರೆಯಾದ ಬಣ್ಣಗಳು ಇರುವುದೇ ಇಲ್ಲ. ಇಂತಹ ಸ್ವಚ್ಛವಾದ ಒಂದು ಸ್ಫಟಿಕವನ್ನು ಕೆಂಪು ಹೂವಿನ ಮೇಲಿಟ್ಟಾಗ ನೋಡು ವವರಿಗೆ ಅದು ಲೋಹಿತವರ್ಣದ್ದಾಗಿ ಅರ್ಥಾತ್ ಕೆಂಪುಬಣ್ಣದ್ದಾಗಿ ತೋರುವುದು. ಅಂತೆಯೇ ಬಹಳಷ್ಟು ಜನರು ಭ್ರಮೆಯಿಂದ ''ಲೋಹಿತಸ್ಫಟಿಕಃ'' ಎಂಬುದಾಗಿ ವ್ಯವಹರಿಸುವುದನ್ನು ಕಾಣುತ್ತೇವೆ. ಸ್ವತಃ ತನ್ನಲ್ಲಿ ಲೋಹಿತವರ್ಣವಿರದೇ ಇದ್ದರೂ ಸಮೀಪದಲ್ಲಿರುವ ಲೋಹಿತ ಪುಷ್ಪದ ಸಂಬಂಧದಿಂದ ತಾನು ಲೋಹಿತವರ್ಣದ್ದಾಗಿ ತೋರುವಂತೆ ಅತ್ಯಂತ ಶುದ್ಧವಾದ ಆತ್ಮವೂ ಸಹ ಯಾವಾಗ ಅಹಂಕಾರದೊಂದಿಗೆ ಸಂಬಂಧವನ್ನು ಪಡೆಯುವುದೋ ಆಗ ಅದರಲ್ಲಿ ದೇಹಾಭಿಮಾನವು ಉತ್ಪನ್ನ ವಾಗುವುದು. ಈ ಅಭಿಮಾನದಿಂದಾಗಿಯೇ ಪರಮಾತ್ಮತತ್ತ್ವವು ಜೀವಾತ್ಮವೆಂಬುದಾಗಿ ಕರೆಯಿಸಿಕೊಳ್ಳುವದೆಂಬುದು ಪೂಜ್ಯಪಾದರ ಆಶಯವಾಗಿದೆ ಎಂಬುದಾಗಿ ತಿಳಿಯ ಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ನವ್ಹಂಬರ, ೧೯೯೪
(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೨

# ಆತ್ಮಸ್ಥಲ

ಕಾಶೀವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ಸಾಧಕರೇ ! ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ವಿಭಿನ್ನ ಪ್ರಾಂತಗಳಿಂದಾಗಮಿಸಿದ ಸಮಸ್ತ ಸದ್ಭಕ್ತರೇ ! ಈ ಪವಿತ್ರವಾದ ಕಾಶೀ ಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ ಶ್ರೀಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಲಿವೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನುದ್ದೇಶಿಸಿ ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗ ಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಈ ಪ್ರಾಣಲಿಂಗಿಸ್ಥಲದ ಮೊದಲನೆಯ ಅವಾಂತರ ಸ್ಥಲವಾದ ಆತ್ಮಸ್ಥಲದ ಬಗ್ಗೆ ನಿನ್ನೆ ಕೆಲವು ವಿಚಾರಗಳನ್ನು ಶ್ರವಣಮಾಡಿದ್ದೀರಿ. ಇಂದು ಅದೇ ಸ್ಥಲದ ಮುಂದಿನ ವಿಚಾರಗಳನ್ನು ವಿವೇಚಿಸೋಣ.

ಈ ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಬ್ಬ ವ್ಯಕ್ತಿಯು ಏನನ್ನಾದರೂ ತಿಳಿದುಕೊಳ್ಳಲು ಸದಾ ಪ್ರಯತ್ನಶೀಲನಾಗಿರುತ್ತಾನೆ. ಪ್ರಪಂಚದೊಳಗಿನ ಎಲ್ಲವನ್ನೂ ತಿಳಿದುಕೊಂಡರೂ, ತನ್ನಾತ್ಮವೊಂದನ್ನು ತಿಳಿದುಕೊಳ್ಳದಿದ್ದರೆ ಅವನಾರೇ ಇದ್ದರೂ ಅವನು ಅಜ್ಞನೇ ಸರಿ. ಆದ್ದರಿಂದ ಎಲ್ಲ ಜ್ಞಾನಗಳಲ್ಲಿ ಆತ್ಮಜ್ಞಾನವೇ ಶ್ರೇಷ್ಠವಾದುದು. ಆತ್ಮತತ್ತ್ವವು ನಮ್ಮೊಳಗೇ ಇದ್ದರೂ ನಮ್ಮ ಪ್ರವೃತ್ತಿಯು ಸದಾ ಬಹಿರ್ಮುಖವಾಗಿರೋಣದರಿಂದ ಅದನ್ನು ತಿಳಿದುಕೊಳ್ಳಲಾಗುತ್ತಿಲ್ಲ. ಆದರೆ ಸಂಯಮಶೀಲನಾದ ಮತ್ತು ಅಂತರ್ಮುಖಿಯಾದ ಶಿವಯೋಗಿಯು ಮಾತ್ರ ಅದನ್ನು ತಿಳಿದುಕೊಳ್ಳಲು ಸಾಧ್ಯವಾಗುವುದು. ಅಂತೆಯೇ ಶ್ರುತಿಯಲ್ಲಿ– ''ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್। ವ್ಯಾವೃತ್ತ ಚಕ್ಷುಃ ಅಮೃತತ್ತ್ವಮಿಚ್ಛನ್'' ಹೀಗೆ ಪ್ರತಿಪಾದಿಸಲಾಗಿದೆ. ಲಕ್ಷ ಹಾಗೂ ಕೋಟಿ ಜೀವಿಗಳಲ್ಲಿ ಯಾವನೋ ಒಬ್ಬ ಧೈರ್ಯಶಾಲಿಯು ಅರ್ಥಾತ್ ಮನೋನಿಗ್ರಹ ಸಂಪನ್ನನು ಅಮೃತತ್ತ್ವವನ್ನು ಪಡೆಯುವ ಉದ್ದೇಶದಿಂದ ತನ್ನೆಲ್ಲ ಇಂದ್ರಿಯಗಳನ್ನು ಅಂತರ್ಮುಖವಾಗಿ ಮಾಡಿಕೊಂಡು ತನ್ನೊಳಗಿನ ಆತ್ಮ ತತ್ತ್ವವನ್ನು ಅರಿಯುತ್ತಾನೆಂಬುದು ಈ ಶ್ರುತಿಯ ಸಾರಾಂಶವಾಗಿದೆ.

ಸಾಮಾನ್ಯವಾಗಿ ಸಕಲ ಜೀವಿಗಳ ದೇಹದಲ್ಲಿಯ ಇಂದ್ರಿಯಗಳ ನಿರ್ಮಿತಿಯು ಬಹಿರ್ಮುಖವಾಗಿರೋಣದರಿಂದ ಎಲ್ಲ ಜೀವಿಗಳು ಸದಾ ಬಹಿರ್ಮುಖ ಪ್ರವೃತ್ತರೇ

ಆಗಿರುತ್ತಾರೆ. ಹೊರಗಿನ ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗಂಧಗಳನ್ನು ಪ್ರತಿಯೊಬ್ಬ ಜೀವಿಗಳು ಸಹಜವಾಗಿಯೇ ಅನುಭವಿಸುತ್ತಿರುತ್ತಾರೆ. ಇದಕ್ಕಾಗಿ ಅವರಿಗೆ ವಿಶೇಷವಾದ ತರಬೇತಿಯನ್ನು ಕೊಡುವ ಅವಶ್ಯಕತೆಯಿರುವುದಿಲ್ಲ. ಆದರೆ ಆ ಬಾಹ್ಯ ವಿಷಯಗಳಿಂದ ಮನಸ್ಸನ್ನು ಅಂತರ್ಮುಖವಾಗಿ ಮಾಡಿಕೊಂಡು ಅಂತರಾತ್ಮವನ್ನರಿಯಬೇಕಾದರೆ ಬಹಳಷ್ಟು ಸಾಧನೆಯನ್ನು ಮಾಡಬೇಕಾಗುತ್ತದೆ. ಹೊರಗಿನದಾವುದನ್ನು ನೋಡಿದರೂ ತೃಪ್ತಿಹೊಂದದ ಮನಸ್ಸು ಆತ್ಮದರ್ಶನ ಮಾತ್ರದಿಂದ ಪರಿಪೂರ್ಣವಾದ ತೃಪ್ತಿಯನ್ನು ಪಡೆಯುತ್ತದೆ. ಅಂತೆಯೇ ಉಪನಿಷತ್ತಿನಲ್ಲಿ ಆತ್ಮದರ್ಶನವು ವಿಧಿಸಲ್ಪಟ್ಟಿದೆ.

ಹೊರಗೆ ಏನೆಲ್ಲವನ್ನು ನೋಡಲುತ್ಕಂಠಿತರಾದ ಜೀವಿಗಳಿಗೆ ತಮ್ಮ ಕಡೆಗೇನೇ ನೋಡಲು ಅಭಿರುಚಿಯೂ ಇಲ್ಲ ಮತ್ತು ಅವಕಾಶವೂ ಇರುವುದಿಲ್ಲ. ಇದೊಂದು ಪರಮಾಶ್ಚರ್ಯವೇ ಸರಿ. ಇನ್ನೊಂದು ಇದಕ್ಕಿಂತ ಆಶ್ಚರ್ಯಕರವಾದ ಪ್ರಸಂಗವೆಂದರೆ ಕೆಲವು ಜೀವಿಗಳು ಬಾಹ್ಯ ಪ್ರಪಂಚದ ವ್ಯವಹಾರದಲ್ಲಿ ಆತ್ಮವನ್ನೇನೋ ತಿರಸ್ಕರಿಸಿರು ತ್ತಾರೆ. ಮತ್ತೆ ಕೆಲ ಜನ ಮಹಾಶಯರು ಪ್ರತ್ಯಕ್ಷವಾಗಿ ತೋರುವ ಶರೀರವನ್ನೂ ಸಹ ನಿರ್ಲಕ್ಷಿಸಿ ಅರ್ಥ ಸಂಪಾದನಾದಿ ವ್ಯವಹಾರದಲ್ಲಿ ನಿಮಗ್ನರಾಗಿರುತ್ತಾರೆ. ಯಾವ ಶರೀರದ ಸುಖಕ್ಕಾಗಿ ಮನುಷ್ಯನು ವ್ಯವಹಾರವನ್ನು ಮಾಡುತ್ತಾನೆಯೋ ಆ ವ್ಯವಹಾರ ದಲ್ಲಿ ಶರೀರವನ್ನೇ ದುರ್ಲಕ್ಷಿಸುವ ಮನುಷ್ಯನು ಅದೆಂಥ ಬುದ್ಧಿಶಾಲಿಯು ? ಇನ್ನು ಶರೀರವನ್ನೇ ನಿರ್ಲಕ್ಷಿಸುವವನು ಆತ್ಮದತ್ತ ತನ್ನ ಲಕ್ಷ್ಯವನ್ನೀಯಬಲ್ಲನು ? ಈ ತೆರನಾಗಿ ಸರ್ವರಿಂದ ದುರ್ಲಕ್ಷಿಸಲ್ಪಟ್ಟ, ಆದರೆ ಅಮೃತತತ್ವಕ್ಕೆ ಸಾಧನವಾಗಿರುವ ಆತ್ಮವಿಷಯಕ ವಾದ ಜ್ಞಾನವನ್ನು ಮಾಡಿಕೊಡುವ ದೃಷ್ಟಿಯಿಂದಲೇ ಪೂಜ್ಯಪಾದರು–

ಅಶರೀರೋಽಪಿ ಸರ್ವತ್ರ ವ್ಯಾಪಕೋಽಪಿ ನಿರಂಜನ ಃ।
ಆತ್ಮಾ ಮಾಯಾ ಶರೀರಸ್ಥಃ ಪರಿಭ್ರಮತಿ ಸಂಸೃತೌ ॥

(ಸಿ. ಶಿ. ೧೮–೯)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆತ್ಮನಿಗೆ ಸ್ವಾಭಾವಿಕವಾಗಿ ಶರೀರವು ಇರುವುದಿಲ್ಲ, ಅವನು ವ್ಯಾಪಕನಾಗಿರುತ್ತಾನೆ ಮತ್ತು ಅವನಿಗೆ ಯಾವ ದೋಷವೂ ಸಹ ಇರುವುದಿಲ್ಲ. ಹೀಗಿದ್ದರೂ ಈ ಆತ್ಮವು ಅಧೋಮಾಯೆಯಿಂದ ಕಲ್ಪಿಸಲ್ಪಟ್ಟ ಶರೀರದಲ್ಲಿ ಇರುವಂಥಾದ್ದಾಗಿ ಸಂಸಾರದಲ್ಲಿ ಸುತ್ತಾಡುತ್ತಿರುತ್ತದೆ.

ಈ ಸಂಸಾರದಲ್ಲಿ ಪಾಂಚಭೌತಿಕ ದೇಹವನ್ನು ಧರಿಸಿಕೊಂಡು ಸಂಚರಿಸುತ್ತಿರುವ ಈ ಜೀವಾತ್ಮನು ವಾಸ್ತವಿಕವಾಗಿ ಅಶರೀರಿಯಾಗಿ ಇರುತ್ತಾನೆ. ಅಂದರೆ ಶರೀರದ ಸಂಬಂಧವು ಇವನಿಗೆ ಸದಾ ಇರುವುದಿಲ್ಲ. ಏನೋ ಪ್ರಾಕ್ತನ ಕರ್ಮಮೂಲಕವಾಗಿ ಶರೀರಾದಿಗಳು ಇವನಿಗೆ ಪ್ರಾಪ್ತವಾಗುತ್ತವೆ. ಶರೀರದ ಜೊತೆಗಿರುವ ಇವನ ಈ ಸಂಬಂಧವು ನೈಮಿತ್ತಿಕವಾದ ಕಾರಣ ನಿಮಿತ್ತವಿಲ್ಲದಾದಾಗ ಅದೂ ಸಹ ಇಲ್ಲದಾಗಿ ಹೋಗುತ್ತದೆ. ಹೀಗೆ ಶರೀರದೊಂದಿಗೆ ಆತ್ಮನ ನಿತ್ಯಸಂಬಂಧವಿಲ್ಲದಿರೋಣದರಿಂದ ಅವನಿಗೆ ಅಶರೀರಿ ಎಂಬುದಾಗಿ ಕರೆಯಲಾಗಿದೆ. ಇದೂ ಅಲ್ಲದೆ ಈ ಆತ್ಮತತ್ತ್ವವು ಸರ್ವತ್ರ ವ್ಯಾಪಕವಾಗಿರುತ್ತದೆ. ನಮಗೆ ತೋರುತ್ತಿರುವ ಪಂಚಮಹಾಭೂತಗಳಲ್ಲಿ

ಆಕಾಶವು ಸರ್ವತ್ರ ವ್ಯಾಪಕವಾಗಿರುತ್ತದೆ. ಆದರೆ ಆತ್ಮತತ್ತ್ವವು ಆಕಾಶದ ಉತ್ಪತ್ತಿಗೆ ಮೂಲವಾಗಿರೋಣದರಿಂದ ಇದು ಆಕಾಶಕ್ಕಿಂತಲೂ ವ್ಯಾಪಕವಾಗಿರುತ್ತದೆ. ಆತ್ಮತತ್ತ್ವವು ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ದೊಡ್ಡದಾಗಿರೋಣದರಿಂದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ತಾನು ದೊಡ್ಡವನಾಗಬೇಕೆಂಬ ಬಯಕೆಯು ಇರುತ್ತದೆ. ಈ ಬಯಕೆಯು ಆತ್ಮತತ್ತ್ವವನ್ನು ಸರಿಯಾಗಿ ತಿಳಿದುಕೊಳ್ಳುವವರೆಗೆ ಪೂರ್ಣವಾಗುವುದಿಲ್ಲ. ಅಂತೆಯೇ ಲೌಕಿಕ ಜೀವನದಲ್ಲಿ ಸಾತಿಶಯಗಳಾದ ಸ್ಥಾನಮಾನಗಳನ್ನು ಯಾರೇ ಪಡೆದುಕೊಂಡಿದ್ದರೂ ಅವರ ಮನಸ್ಸಿನಲ್ಲಿ ಯಾವುದೋ ಒಂದು ವಸ್ತುವಿನ ಅಭಾವವು ಕೊರೆಯುತ್ತಿರುತ್ತದೆ. ಆದ್ದರಿಂದ ಲೋಕದಲ್ಲಿಯ ಆತ್ಮಜ್ಞಾನರಹಿತರಾದ ಪ್ರತಿಯೊಬ್ಬ ವ್ಯಕ್ತಿಯು ಅತೃಪ್ತನೂ, ಅಸಮಾಧಾನಿಯೂ ಆಗಿರುತ್ತಾನೆ. ಈ ಅತೃಪ್ತತೆಯ ಪರಿಹಾರ ವನ್ನು ಮಾಡಿಕೊಳ್ಳಬೇಕಾದರೆ ಆತ್ಮಜ್ಞಾನಕ್ಕೇನೇ ಶರಣು ಹೋಗಬೇಕು. ಆತ್ಮವನ್ನರಿತವನಿಗಿಂತಲೂ ಜಗತ್ತಿನಲ್ಲಿ ಬೇರಾರೂ ದೊಡ್ಡವರಿರುವುದಿಲ್ಲ.

ಈ ವಿಷಯದಲ್ಲಿ ರೈಕ್ವ ಹಾಗೂ ಜಾನುಶ್ರುತಿಯ ಕಥೆಯು ಉಪನಿಷತ್ತಿನಲ್ಲಿ ಬಹು ಮನೋಹರವಾಗಿ ನಿರೂಪಿಸಲ್ಪಟ್ಟಿದೆ. ಒಮ್ಮೆ ಜಾನುಶ್ರುತಿ ಮಹಾರಾಜನು ತನ್ನ ಧರ್ಮಪತ್ನಿ ಸಮೇತನಾಗಿ ಅಂತಃಪುರದ ಮಾಳಿಗೆಯ ಮೇಲೆ ಸಾಯಂಕಾಲ ವಿನೋದ ದಲ್ಲಿ ಮಗ್ನನಾಗಿದ್ದಾಗ ಆಕಾಶದಲ್ಲಿ ಎರಡು ಹಂಸಪಕ್ಷಿಗಳು ಹಾರುತ್ತ ಬರುತ್ತಿದ್ದವು. ಅವೆರಡೂ ಅರಮನೆಯ ಮಾಳಿಗೆಯ ಮೇಲ್ಭಾಗದಲ್ಲಿ ಬಂದಾಗ ಹೆಣ್ಣು ಪಕ್ಷಿಯು ಗಂಡು ಪಕ್ಷಿಯನ್ನು ಕುರಿತು– ''ಇದೋ ನೋಡು ಈತನೇ ಜಾನುಶ್ರುತಿ ಮಹಾರಾಜನು ಮಹಾಪುಣ್ಯಶಾಲಿಯು'' ಎಂಬುದಾಗಿ ರಾಜನಬಗ್ಗೆ ಪರಿಚಯವನ್ನು ಮಾಡಿಕೊಡುವ ಕೆಲವು ಮಾತುಗಳನ್ನು ಹೇಳಿತು. ಆಗ ಆ ಗಂಡು ಪಕ್ಷಿಯು ಹೆಣ್ಣು ಪಕ್ಷಿಯನ್ನು ಕುರಿತು– ''ಇದೇನು ನೀನು ಹೇಳುತ್ತಿರುವೆ ! ನಿನಗೆ ಆ ರೈಕ್ವನ ವಿಷಯವು ತಿಳಿದಿಲ್ಲವೆ ! ಅವನಂತಹ ಪುಣ್ಯಶಾಲಿಯು ಈ ದೇಶದಲ್ಲಿ ಬೇರೊಬ್ಬನಿಲ್ಲ. ಅವನ ಪುಣ್ಯದ ಎದುರು ಈ ಜಾನುಶ್ರುತಿ ಮಹಾರಾಜನ ಪುಣ್ಯವೆಂದರೆ ಸಾಗರದ ಮುಂದೆ ಸಾಸುವೆಕಾಳಿದ್ದಂತೆ''. ಎಂಬುದಾಗಿ ಹೇಳುತ್ತಿರುವಾಗಲೇ ಅವೆರಡೂ ಪಕ್ಷಿಗಳು ರಾಜನ ಮೇಲ್ಮಾಳಿಗೆಯನ್ನು ದಾಟಿಹೋದವು. ಪಕ್ಷಿಯ ಭಾಷೆಯನ್ನು ಬಲ್ಲ ರಾಜನು ಅವೆರಡರ ಸಂವಾದವನ್ನು ಕೇಳಿ ಕಳವಳಗೊಂಡು ತನಗಿಂತಲೂ ಪುಣ್ಯಶಾಲಿಯಾದ ಆ ರೈಕ್ವನು ಎಲ್ಲಿರಬಹುದು ? ಆತನು ಆ ಪುಣ್ಯವನ್ನು ಹೇಗೆ ತಾನೆ ಸಂಪಾದಿಸಿರಬಹುದು ? ಎಂಬುದಾಗಿ ಮನದಲ್ಲಿ ವಿಚಾರಿಸುತ್ತಲೇ ಅಂದಿನ ರಾತ್ರಿಯನ್ನು ಕಳೆದನು.

ಮರುದಿನ ಪ್ರಾತಃಕಾಲ ರೈಕ್ವನನ್ನು ಹುಡುಕಿ ಕರೆದುಕೊಂಡು ಬರಲು ತನ್ನ ರಾಜಭಟರನ್ನು ಎಲ್ಲೆಡೆ ಕಳಿಸಿಕೊಟ್ಟನು. ಆ ರಾಜಭಟರು ಎಲ್ಲೆಡೆ ಹುಡುಕುತ್ತಿರಲು ರೈಕ್ವನು ಒಂದು ಚಿಕ್ಕದಾದ ಗ್ರಾಮದಲ್ಲಿ ಇರುವ ವಿಷಯವು ಅವರಿಗೆ ತಿಳಿದುಬಂದಿತು. ಆಗ ಭಟರು ಆ ಗ್ರಾಮಕ್ಕೆ ಹೋದಾಗ 'ರೈಕ್ವ'ನು ಒಂದು ಚಕ್ಕಡಿಯ ಕೆಳಗೆ ದಿಗಂಬರನಾಗಿ ಹುಡಿಯಲ್ಲಿ ಮಲಗಿಕೊಂಡಿದ್ದನ್ನು ಕಂಡರು. ಇವನ ವಿಚಿತ್ರವಾದ ಸ್ಥಿತಿಯನ್ನು ಕಂಡು– ''ಇಂಥವನನ್ನು ಕರೆದುಕೊಂಡು ಬರಲು ಮಹಾರಾಜರು ನಮಗೆ ಆಜ್ಞಾಪಿಸಿದ್ದು ಒಂದು ಆಶ್ಚರ್ಯವೇ'' ಎಂದು ಯೋಚಿಸುತ್ತ ರಾಜಾಜ್ಞೆಯನ್ನು

ಪಾಲಿಸಬೇಕೆಂಬ ಉದ್ದೇಶದಿಂದ– ರಾಜಭಟರು ಆ ರೈಕ್ವನ ಸಮೀಪಕ್ಕೆ ಹೋಗಿ ರಾಜನ ಇಚ್ಛೆಯನ್ನು ಆತನ ಮುಂದೆ ನಿವೇದಿಸಿಕೊಂಡರು. ಇವರ ನಿವೇದನೆಯನ್ನು ಕೇಳಿ ರೈಕ್ವನು ಅರೆಗಣ್ಣಿನಿಂದಲೇ ಅವರನ್ನು ನೋಡುತ್ತ– ''ನಾನು ಯಾವ ರಾಜನಲ್ಲಿಯೂ ಬರಲಾರೆ; ರಾಜನಿಂದ ನನಗಾವ ಪ್ರಯೋಜನವೂ ಇಲ್ಲ, ನಿಮ್ಮ ರಾಜನದೇನಾದರೂ ಪ್ರಯೋಜನ ವಿದ್ದರೆ ಅವನನ್ನೇ ಇಲ್ಲಿ ಬರಹೇಳಿ'' ಎಂದು ಗಂಭೀರವಾಗಿಯೇ ನುಡಿದು ಪುನಃ ತನ್ನದೇ ಆದ ಆನಂದದೊಳಗೆ ಲೀನನಾಗುತ್ತಾನೆ.

ಇತ್ತ ರಾಜಭಟರು ರಾಜನಲ್ಲಿಗೆ ಬಂದು ರೈಕ್ವನ ವಿಚಾರವನ್ನರುಹಿದಾಗ ರಾಜನೂ ಕೂಡಾ ಅಚ್ಚರಿಗೊಂಡನು. ಆದರೂ ತನ್ನ ಜಿಜ್ಞಾಸೆಯನ್ನು ಪೂರ್ಣಮಾಡಿಕೊಳ್ಳ ಲೋಸುಗ ಅಭಿಮಾನಾದಿಗಳನ್ನು ತೊರೆದು ವಿನೀತ ವೇಷದಲ್ಲಿ ರೈಕ್ವನಲ್ಲಿಗೆ ಬಂದು ಆತನ ಆನಂದಭರಿತವಾದ ಮುಖಮಂಡಲವನ್ನು ನೋಡಿದಾಗ ಅವನ ಆ ವ್ಯಕ್ತಿತ್ವದ ಎದುರಿಗೆ ರಾಜನು ಸಣ್ಣವನಾಗಿ ತೋರತೊಡಗಿದನು. ಅಂತೆಯೇ ರಾಜನು ಆ ರೈಕ್ವನಿಗೆ ಅಭಿವಂದಿಸಿ ಹಂಸ ಪಕ್ಷಿಯು ಹೇಳಿದ ವಿಚಾರವನ್ನು ಮುಂದಿಟ್ಟು– ''ನೀವು ಅದಾವ ಪುಣ್ಯವನ್ನು ಸಂಪಾದಿಸಿದ್ದೀರಿ ? ಮತ್ತು ಹೇಗೆ ಸಂಪಾದಿಸಿದ್ದೀರಿ ?'' ಎಂಬುದಾಗಿ ಕೇಳಿಕೊಂಡನು. ಆಗ ರೈಕ್ವನು– ''ಎಲೈ ರಾಜನೇ ! ದೇಹಾತ್ಮ ಬುದ್ಧಿಜಂ ಪಾಪಂ ನತದ್ಗೋವಧ ಕೋಟಿಭಿಃ । ಆತ್ಮಾಹಂ ಬುದ್ಧಿಜಂ ಪುಣ್ಯಂ ನ ಭೂತೋ ನ ಭವಿಷ್ಯತಿ ॥'' ಎಂಬ ಈ ಉಕ್ತಿಗನುಸಾರವಾಗಿ ದೇಹವೇ ನಾನೆಂದು ನಂಬಿ ವ್ಯವಹರಿಸುವವರಿಗೆ ಕೋಟಿ ಗೋವುಗಳನ್ನು ಕೊಂದುದಕ್ಕಿಂತಲೂ ಹೆಚ್ಚಿನದಾದ ಪಾಪವು ಪ್ರಾಪ್ತವಾಗುವುದು. ಇನ್ನು ಆತ್ಮವೇ ನಾನೆಂದು ದೃಢವಾಗಿ ತಿಳಿದುಕೊಂಡಾಗ ಅದರಿಂದ ಬರುವ ಪುಣ್ಯಕ್ಕೆ ಅದಾವ ಪುಣ್ಯವೂ ಸರಿಸಾಟಿಯಾಗುವುದಿಲ್ಲ, ಆದ್ದರಿಂದ ಅನ್ನಛತ್ರ ಅರವಟ್ಟಿಗೆ ಮುಂತಾದ ಕರ್ಮಗಳಿಂದ ಬರುವ ಪುಣ್ಯಕ್ಕಿಂತಲೂ ಆತ್ಮಜ್ಞಾನದಿಂದ ಪ್ರಾಪ್ತವಾಗುವ ಪುಣ್ಯವು ಅತಿ ಹೆಚ್ಚಿನದಾಗಿರುತ್ತದೆ.

ನಿನ್ನಲ್ಲಿರುವ ಪುಣ್ಯವು ಅನ್ನಛತ್ರ, ಅರವಟ್ಟಿಗೆಗಳ ಮೂಲಕವಾಗಿ ಪ್ರಾಪ್ತವಾದು ದಾಗಿದ್ದರೆ, ನನ್ನ ಪುಣ್ಯವು ಆತ್ಮಜ್ಞಾನದಿಂದ ಪ್ರಾಪ್ತವಾದುದಾಗಿದೆ. ಅಂತೆಯೇ ಆ ಪಕ್ಷಿಗಳು ಈ ಪುಣ್ಯದ ಹಿರಿಮೆಯನ್ನು ಕೊಂಡಾಡಿವೆ ಎಂದು ಹೇಳಲಾಗಿ– ರೈಕ್ವನ ನುಡಿ ಯನ್ನು ಕೇಳಿದ ಆ ರಾಜನೂ ಸಹ ಅವನಲ್ಲಿ ಶ್ರದ್ಧಾತಿಶಯನ್ನು ತಾಳಿ ಆತ್ಮೋಪದೇಶ ವನ್ನು ಪಡೆದು ಆತ್ಮಜ್ಞಾನಿಯಾದನಂತೆ.

ಹೀಗೆ ಆತ್ಮವೇ ಬಹುದೊಡ್ಡದಾದ ತತ್ತ್ವವಾಗಿರೋಣದರಿಂದ ಅದನ್ನರಿತಾಗ ಅರಿತವ್ಯಕ್ತಿಯೂ ಸಹ ಮಹಾನ್ ಎಂದು ಕರೆಯಿಸಿಕೊಳ್ಳುವನು. ಹೀಗೆ ಆತ್ಮವು ವ್ಯಾಪಕವಾಗಿರುವುದಲ್ಲದೆ ನಿರಂಜನವೂ ಸಹ ಆಗಿರುತ್ತದೆ. ಅಂದರೆ ಅದರಲ್ಲಿ ಯಾವುದೇ ಪ್ರಕಾರದ ದೋಷಾದಿಗಳು ಇರುವುದಿಲ್ಲ, ಹೀಗೆ ನಿರಂಜನವು, ವ್ಯಾಪಕವೂ ಮತ್ತು ಅಶರೀರಿಯೂ ಆಗಿದ್ದರೂ ಮಾಯೆಯಿಂದ ನಿರ್ಮಿಸಲ್ಪಟ್ಟ ಶರೀರದಲ್ಲಿ ವಾಸಿಸುವವ ನಾಗಿ ಈ ಸಂಸಾರದಲ್ಲಿ ಪರಿಭ್ರಮಿಸುತ್ತಿರುತ್ತಾನೆ.

ಮಾಯೆಯು ಪರಮಾತ್ಮನಲ್ಲಿರುವ ಒಂದು ಅಮೋಘವಾದ ಶಕ್ತಿಯು ಇದ ರಿಂದಾಗಿಯೇ ಪರಮಾತ್ಮನು ಸೃಷ್ಟಿ ಮೊದಲಾದ ಪಂಚಕೃತ್ಯಗಳನ್ನು ನಿರ್ವಹಿಸುವನು.

ಸೃಷ್ಟಿಯ ನಿರ್ಮಾಣದಲ್ಲಿ ಶಿವನಿಗೆ ಸಹಾಯಕವಾದ ಈ ಮಾಯೆಯು ಶಿವನ ಸ್ವರೂಪವನ್ನೇ ಮುಚ್ಚಿಹಾಕಿ ಅದನ್ನು ಯಾರಿಗೂ ತಿಳಿಯದಂತೆ ಮಾಡಿಬಿಡುತ್ತದೆ. ತಾನು ಶಿವನ ಪ್ರಕಾಶದಿಂದಲೇ ತೋರುತ್ತಿದ್ದರೂ ತನ್ನನ್ನು ಪ್ರಕಾಶಿಸುವ ಆ ಶಿವನನ್ನೇ ಮೋಡಗಳು ಸೂರ್ಯನನ್ನು ಮುಚ್ಚಿಹಾಕುವಂತೆ ಮುಚ್ಚಿರುತ್ತವೆ. ಅಂತೆಯೇ ಸಂಸಾರದ ಜೀವಿಗಳು ಈ ಮಾಯಾಮಯ ಪ್ರಪಂಚದಲ್ಲಿಯೇ ಸುತ್ತುತ್ತಿರುತ್ತಾರೆ.

ಒಮ್ಮೆ ಲಂಕಾಧಿಪತಿಯಾದ ರಾವಣನು ಆತ್ಮಲಿಂಗ ಪ್ರಾಪ್ತಿಗಾಗಿ ಕಠೋರವಾದ ತಪಸ್ಸನ್ನಾಚರಿಸಿದನು. ಅವನ ಆ ತಪಸ್ಸಿಗೆ ಶಿವನು ಪ್ರಸನ್ನನಾಗಿ ''ವರಂ ಬ್ರೂಹಿ'' 'ನಿನಗೇನು ವರಬೇಕು ಕೇಳಿಕೋ' ಎಂಬುದಾಗಿ ನುಡಿಯಲು ಇನ್ನೇನು ರಾವಣನು ಶಿವನ ಆತ್ಮಲಿಂಗವನ್ನು ಕೇಳಬೇಕೆನ್ನುವಷ್ಟರಲ್ಲಿ ಅವನ ಮನಸ್ಸಿನೊಳಗೆ ಮಾಯೆಯು ಪ್ರವೇಶ ಮಾಡಿ ಅವನ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಿತು. ಇದರಿಂದಾಗಿ ಅವನು ಶಿವನ ಆತ್ಮಲಿಂಗವನ್ನು ಕೇಳುವುದನ್ನು ಬಿಟ್ಟು ಪಾರ್ವತಿಯನ್ನು ಕೊಡು ಎಂಬುದಾಗಿ ಕೇಳಿದನು. ರಾವಣನ ಈ ಸ್ಥಿತಿಯನ್ನು ಕಂಡಾಗ ನಮಗೆಲ್ಲರಿಗೂ ನಗೆಯು ಬರಬಹುದೇನೋ ನಿಜ. ಆದರೆ ದೇವರಮುಂದೆ ನಿಂತು ಪ್ರಾರ್ಥನೆಯನ್ನು ಸಲ್ಲಿಸುವ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಪರಮಾತ್ಮನೇ ಬೇಕೆನ್ನುವ ಬಯಕೆಯು ಇರದೆ ಅವನ ಮಾಯೆಯೇ ಬೇಕೆನ್ನುವ ಪ್ರಬಲವಾದ ಅಭಿಲಾಷೆಯು ಇರುವುದು ಕಂಡುಬರುತ್ತದೆ. ಧನ, ಕನಕ, ವಸ್ತು, ವಾಹನ ಮತ್ತು ಅಧಿಕಾರಾದಿಗಳು ಮಾಯೆಯ ಅನೇಕ ರೂಪಗಳು. ದೇವರಲ್ಲಿ ಭಕ್ತಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಮೇಲೆ ನಿರೂಪಿಸಿದ ಮಾಯೆಯ ಯಾವುದೊಂದು ರೂಪದ ಅಭಿಲಾಷೆಯು ಇರೋಣದರಿಂದ ಭಕ್ತನೆನಿಸಿಕೊಂಡರೂ ಮುಕ್ತಿಯನ್ನು ಪಡೆಯದೆ ಪುನಃ ಪುನಃ ಭವಬಂಧನದಲ್ಲಿ ಈ ಜೀವಿಯು ಕಟ್ಟಿಹಾಕಲ್ಪಡು ತ್ತಾನೆ. ಆದ್ದರಿಂದ ಈ ಮಾಯಿಕ ವಸ್ತುಗಳ ಭೋಗಾಭಿಲಾಷೆಯು ಎಲ್ಲಿಯವರೆಗೆ ದೂರವಾಗುವದಿಲ್ಲವೋ ಅಲ್ಲಿಯವರೆಗೆ ಆತ್ಮ– ಪರಮಾತ್ಮರ ವಾಸ್ತವಿಕವಾದ ಸ್ವರೂಪ ವನ್ನು ಅರಿಯಲು ಯಾರಿಗೂ ಸಾಧ್ಯವಾಗುವುದಿಲ್ಲ. ಅಂತೆಯೇ ಉಪನಿಷತ್ತುಗಳು– ''ಕಶ್ಚಿತ್‌ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎಂಬುದಾಗಿ ಹೇಳಿ ಆತ್ಮ ಜಿಜ್ಞಾಸುಗಳ ದುರ್ಲಭತೆಯನ್ನು ಪ್ರತಿಪಾದಿಸಿವೆ. ಅಂತೆಯೇ ಶರಣರೂ ಸಹ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ ಮತ್ತು ಕೋಟಿಗೊಬ್ಬ ಶರಣನೆಂಬುದಾಗಿ ಹೇಳಿ ಅದೇ ಮಾತನ್ನೇ ದೃಢಪಡಿಸಿರುತ್ತಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ದುರ್ಲಭವಾದ ಆತ್ಮಜ್ಞಾನವನ್ನು ಪಡೆಯುವ ಒಂದು ಸುಲಭವಾದ ಉಪಾಯವನ್ನು ತಿಳಿಯಪಡಿಸುತ್ತ–

ಆತ್ಮಸ್ವರೂಪವಿಜ್ಞಾನಂ ದೇಹೇಂದ್ರಿಯ ವಿಭಾಗತಃ ।<br>
ಅಖಂಡ ಬ್ರಹ್ಮರೂಪೇಣ ತದಾತ್ಮಪ್ರಾಪ್ತಿರುಚ್ಯತೇ ॥

(ಸಿ.ಶಿ. ೧೮–೧೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ದೇಹ ಮತ್ತು ಇಂದ್ರಿಯಾದಿಗಳಿಂದ ಬೇರ್ಪಡಿಸಿದ ಆತ್ಮತತ್ತ್ವವನ್ನು ಅಖಂಡ ಬ್ರಹ್ಮಸ್ವರೂಪವನ್ನಾಗಿ ಯಾವಾಗ ತಿಳಿದು ಕೊಳ್ಳುತ್ತಾನೆಯೋ ಅದಕ್ಕೇನೇ ಆತ್ಮಪ್ರಾಪ್ತಿ ಎಂದು ಕರೆಯುತ್ತಾರೆ.

ವಾಸ್ತವಿಕವಾದ ಆತ್ಮದ ಅರಿವಿಲ್ಲದ ಕಾರಣದಿಂದಾಗಿ ಪ್ರಪಂಚದಲ್ಲಿಯ ಬಹಳಷ್ಟು ಜನರು ಶರೀರಾದಿಗಳನ್ನೇ ಆತ್ಮವನ್ನಾಗಿ ತಿಳಿದುಕೊಂಡಿರುತ್ತಾರೆ. ಕೆಲವರು ಶರೀರಾತ್ಮವಾದಿಗಳಾದರೆ, ಇನ್ನೂ ಕೆಲವರು ಇಂದ್ರಿಯಾತ್ಮವಾದಿಗಳಾಗಿರುತ್ತಾರೆ. ಮತ್ತೆ ಕೆಲವರು ಪ್ರಾಣ-ಮನ ಮತ್ತು ಬುದ್ಧಿಗಳನ್ನೇ ಆತ್ಮವನ್ನಾಗಿ ತಿಳಿದಿರುತ್ತಾರೆ. ವಾಸ್ತವಿಕವಾಗಿ ವಿಚಾರಮಾಡಲಾಗಿ ಶರೀರವನ್ನೇ ಮೊದಲು ಮಾಡಿಕೊಂಡು ಬುದ್ಧಿಪರ್ಯಂತ ವಾಗಿರುವ ಎಲ್ಲ ತತ್ತ್ವಗಳು ಅನಾತ್ಮರೂಪಗಳೇ ಆಗಿರುತ್ತವೆ. ಆತ್ಮವು ಮಾತ್ರ ಇವೆಲ್ಲವು ಗಳಿಗಿಂತಲೂ ಭಿನ್ನವಾಗಿದ್ದು ನಿತ್ಯವೂ, ಸಚ್ಚಿದಾನಂದ ರೂಪವೂ ಆಗಿರುತ್ತದೆ. ಹೀಗೆ ದೇಹ-ಇಂದ್ರಿಯಾದಿಗಳಿಂದ ಅದನ್ನು ಬೇರ್ಪಡಿಸಿ ಯಾರು ಅರಿಯುವರೋ ಅವರಿಗೇನೇ ಆತ್ಮಜ್ಞಾನಿಯೆಂದು ಕರೆಯಲಾಗುತ್ತದೆ. ಆತ್ಮವನ್ನು ತಿಳಿದುಕೊಳ್ಳುವುದೇ ಆತ್ಮಪ್ರಾಪ್ತಿಯು. ಆತ್ಮಪ್ರಾಪ್ತಿಯೆಂದರೆ ತನ್ನಲ್ಲಿ ಇಲ್ಲದೇ ಇರುವ ಯಾವುದೋ ಒಂದು ಅಪೂರ್ವವಾದ ವಸ್ತುವು ಸಿಗುವುದೆಂದರ್ಥವಲ್ಲ, ನಿತ್ಯಪ್ರಾಪ್ತವಾದ ವಸ್ತುವೂ ಸಹ ಮರೆವೆಯ ಮೂಲಕ ಅಪ್ರಾಪ್ತವೆನಿಸುತ್ತದೆ. ಯಾವಾಗ ಅದರ ಅರಿವಾಗುವುದೋ ಆದು ಪ್ರಾಪ್ತವಾದಂತೆ ಭಾಸವಾಗುವುದು. ವಾಸ್ತವಿಕವಾಗಿ ಅಲ್ಲಿ ಹೊಸದೇನೂ ಪ್ರಾಪ್ತಿ ಯಾಗುವುದಿಲ್ಲ.

ಓರ್ವ ವ್ಯಕ್ತಿಯು ತನ್ನ ಮನೆಯ ಬೀಗದ ಕೈಯನ್ನು ತನ್ನ ಕೈಯಲ್ಲೇ ಹಿಡಿದು ಕೊಂಡು, ಹಿಡಿದುಕೊಂಡಿದ್ದರ ಮರವೆಯಾಗಿ ಮನೆಯಲ್ಲೆಲ್ಲಾ ಹುಡುಕುತ್ತಿರುತ್ತಾನೆ. ಯಾವಾಗ ಅವನಿಗೆ ಅದು ತನ್ನ ಕೈಯಲ್ಲಿಯೇ ಇರುತ್ತದೆಂಬ ಅರಿವಾಗುವುದೋ ಆಗ ಅವನು ದೊರಕಿತೆಂದು ತಿಳಿದು ಸಂತೋಷಪಡುತ್ತಿರುತ್ತಾನೆ. ಇಲ್ಲಿ ಬೀಗದಕೈಯು ತನ್ನ ಕೈಯಲ್ಲೇ ಇದ್ದರೂ ಅದರ ಮರವೆಯಿಂದ ಅದು ಅಪ್ರಾಪ್ತವಾಗಿ ತೋರಿ ಕೊನೆಗೆ ಅದರ ಅರಿವಾದೊಡನೆ ಪ್ರಾಪ್ತವಾಯಿತೆಂಬ ಭಾಸವು ಹೇಗೆ ಉಂಟಾಗುವುದೋ ಹಾಗೆಯೇ ಸಕಲ ಜೀವಿಗಳು ದೇಹೇಂದ್ರಿಯಾದಿಗಳ ವ್ಯವಹಾರದಲ್ಲಿ ತನ್ನ ಮೂಲ ಆತ್ಮ ಸ್ವರೂಪವನ್ನೇ ಮರೆತು ದುಃಖಿಗಳಾಗಿರುತ್ತಾರೆ. ಸದ್ಗುರುವಿನ ಉಪದೇಶದ ಮೂಲಕ ಯಾವಾಗ ಆತ್ಮದ ಅರಿವಾಗುವುದೋ ಆಗ ಆತ್ಮಪ್ರಾಪ್ತಿಯಾದಂತೆನಿಸಿ ಆನಂದವು ಉಂಟಾಗುತ್ತದೆ. ಆದಕಾರಣ ಆತ್ಮಪ್ರಾಪ್ತಿಯೆಂದೆನಿಸಿ ಯಾವುದೇ ಒಂದು ಹೊಸವಸ್ತು ನಮಗೆ ಸಿಗುತ್ತದೆಯೆಲ್ಲ. ಆದರೆ ಮರೆತದ್ದನ್ನು ಅರಿಯುವುದೇ ಇಲ್ಲಿ ಪ್ರಾಪ್ತಿಯೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಶರೀರಾದಿಗಳನ್ನೇ ಏಕೆ ಆತ್ಮವೆಂದು ಭಾವಿಸಬಾರದು ? ಅವುಗಳ ಜ್ಞಾನಕ್ಕೇನೇ ಆತ್ಮಜ್ಞಾನವೆಂದು ಏಕೆ ತಾನೆ ಕರೆಯಬಾರದು ? ತೋರುವ ತತ್ತ್ವವನ್ನು ಬಿಟ್ಟು ತೋರದಿರುವ ತತ್ತ್ವದಕಡೆಗೆ ಹಂಬಲಿಸುವುದು ಎಷ್ಟು ಸೂಕ್ತ? ಎಂಬುದಾಗಿ ಭೌತಿಕ ವಾದಿಗಳು ವಿಚಾರಿಸಬಹುದು. ಇಲ್ಲಿ ಪೂಜ್ಯಪಾದರು ದೇಹಾದಿಗಳಿಂದ ಅದನ್ನು ಬೇರ್ಪಡಿಸಿ ತಿಳಿದುಕೊಳ್ಳಲು ಹೇಳಿರುವಲ್ಲಿ ಇರುವ ರಹಸ್ಯವೇನೆಂದರೆ ಶ್ರುತಿಯಲ್ಲಿ-

''ತರತಿ ಶೋಕಮಾತ್ಮವಿತ್'' ಅಂದರೆ ಆತ್ಮಜ್ಞಾನಿಯು ಶೋಕ-ಮೋಹಗಳಿಂದ ಮುಕ್ತನಾಗಿರುತ್ತಾನೆಂಬುದಾಗಿ ಹೇಳಲಾಗಿದೆ. ಯಾವುದರ ಅರಿವಾದಾಗ ನಮ್ಮ ಶೋಕ-ಮೋಹಾದಿಗಳು ದೂರವಾಗುವವೋ ಅದುವೇ ಆತ್ಮತತ್ತ್ವವು. ಲೋಕದಲ್ಲಿ

ಸೃಷ್ಟಿಯ ನಿರ್ಮಾಣದಲ್ಲಿ ಶಿವನಿಗೆ ಸಹಾಯಕವಾದ ಈ ಮಾಯೆಯು ಶಿವನ ಸ್ವರೂಪವನ್ನೇ ಮುಚ್ಚಿಹಾಕಿ ಅದನ್ನು ಯಾರಿಗೂ ತಿಳಿಯದಂತೆ ಮಾಡಿಬಿಡುತ್ತದೆ. ತಾನು ಶಿವನ ಪ್ರಕಾಶದಿಂದಲೇ ತೋರುತ್ತಿದ್ದರೂ ತನ್ನನ್ನು ಪ್ರಕಾಶಿಸುವ ಆ ಶಿವನನ್ನೇ ಮೋಡಗಳು ಸೂರ್ಯನನ್ನು ಮುಚ್ಚಿಹಾಕುವಂತೆ ಮುಚ್ಚಿರುತ್ತವೆ. ಅಂತೆಯೇ ಸಂಸಾರದ ಜೀವಿಗಳು ಈ ಮಾಯಾಮಯ ಪ್ರಪಂಚದಲ್ಲಿಯೇ ಸುತ್ತುತ್ತಿರುತ್ತಾರೆ.

ಒಮ್ಮೆ ಲಂಕಾಧಿಪತಿಯಾದ ರಾವಣನು ಆತ್ಮಲಿಂಗ ಪ್ರಾಪ್ತಿಗಾಗಿ ಕಠೋರವಾದ ತಪಸ್ಸನ್ನಾಚರಿಸಿದನು. ಅವನ ಆ ತಪಸ್ಸಿಗೆ ಶಿವನು ಪ್ರಸನ್ನನಾಗಿ ''ವರಂ ಬ್ರೂಹಿ'' 'ನಿನಗೇನು ವರಬೇಕು ಕೇಳಿಕೋ' ಎಂಬುದಾಗಿ ನುಡಿಯಲು ಇನ್ನೇನು ರಾವಣನು ಶಿವನ ಆತ್ಮಲಿಂಗವನ್ನು ಕೇಳಬೇಕೆನ್ನುವಷ್ಟರಲ್ಲಿ ಅವನ ಮನಸ್ಸಿನೊಳಗೆ ಮಾಯೆಯು ಪ್ರವೇಶ ಮಾಡಿ ಅವನ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಿತು. ಇದರಿಂದಾಗಿ ಅವನು ಶಿವನ ಆತ್ಮಲಿಂಗವನ್ನು ಕೇಳುವುದನ್ನು ಬಿಟ್ಟು ಪಾರ್ವತಿಯನ್ನು ಕೊಡು ಎಂಬುದಾಗಿ ಕೇಳಿದನು. ರಾವಣನ ಈ ಸ್ಥಿತಿಯನ್ನು ಕಂಡಾಗ ನಮಗೆಲ್ಲರಿಗೂ ನಗೆಯು ಬರಬಹುದೇನೋ ನಿಜ. ಆದರೆ ದೇವರಮುಂದೆ ನಿಂತು ಪ್ರಾರ್ಥನೆಯನ್ನು ಸಲ್ಲಿಸುವ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಪರಮಾತ್ಮನೇ ಬೇಕೆನ್ನುವ ಬಯಕೆಯು ಇರದೆ ಅವನ ಮಾಯೆಯೇ ಬೇಕೆನ್ನುವ ಪ್ರಬಲವಾದ ಅಭಿಲಾಷೆಯು ಇರುವುದು ಕಂಡುಬರುತ್ತದೆ. ಧನ, ಕನಕ, ವಸ್ತು, ವಾಹನ ಮತ್ತು ಅಧಿಕಾರಾದಿಗಳು ಮಾಯೆಯ ಅನೇಕ ರೂಪಗಳು. ದೇವರಲ್ಲಿ ಭಕ್ತಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಮೇಲೆ ನಿರೂಪಿಸಿದ ಮಾಯೆಯ ಯಾವುದೊಂದು ರೂಪದ ಅಭಿಲಾಷೆಯು ಇರೋಣದರಿಂದ ಭಕ್ತನೆನಿಸಿಕೊಂಡರೂ ಮುಕ್ತಿಯನ್ನು ಪಡೆಯದೆ ಪುನಃ ಪುನಃ ಭವಬಂಧನದಲ್ಲಿ ಈ ಜೀವಿಯು ಕಟ್ಟಿಹಾಕಲ್ಪಡುತ್ತಾನೆ. ಆದ್ದರಿಂದ ಈ ಮಾಯಿಕ ವಸ್ತುಗಳ ಭೋಗಾಭಿಲಾಷೆಯು ಎಲ್ಲಿಯವರೆಗೆ ದೂರವಾಗುವದಿಲ್ಲವೋ ಅಲ್ಲಿಯವರೆಗೆ ಆತ್ಮ- ಪರಮಾತ್ಮರ ವಾಸ್ತವಿಕವಾದ ಸ್ವರೂಪವನ್ನು ಅರಿಯಲು ಯಾರಿಗೂ ಸಾಧ್ಯವಾಗುವುದಿಲ್ಲ. ಅಂತೆಯೇ ಉಪನಿಷತ್ತುಗಳು- ''ಕಶ್ಚಿತ್‌ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎಂಬುದಾಗಿ ಹೇಳಿ ಆತ್ಮ ಜಿಜ್ಞಾಸುಗಳ ದುರ್ಲಭತೆಯನ್ನು ಪ್ರತಿಪಾದಿಸಿವೆ. ಅಂತೆಯೇ ಶರಣರೂ ಸಹ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ ಮತ್ತು ಕೋಟಿಗೊಬ್ಬ ಶರಣನೆಂಬುದಾಗಿ ಹೇಳಿ ಅದೇ ಮಾತನ್ನೇ ದೃಢಪಡಿಸಿರುತ್ತಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ದುರ್ಲಭವಾದ ಆತ್ಮಜ್ಞಾನವನ್ನು ಪಡೆಯುವ ಒಂದು ಸುಲಭವಾದ ಉಪಾಯವನ್ನು ತಿಳಿಯಪಡಿಸುತ್ತ-

ಆತ್ಮಸ್ವರೂಪವಿಜ್ಞಾನಂ ದೇಹೇಂದ್ರಿಯ ವಿಭಾಗತಃ |
ಅಖಂಡ ಬ್ರಹ್ಮರೂಪೇಣ ತದಾತ್ಮಪ್ರಾಪ್ತಿರುಚ್ಯತೇ ||

(ಸಿ.ಶಿ. ೧೮-೧೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ದೇಹ ಮತ್ತು ಇಂದ್ರಿಯಾದಿಗಳಿಂದ ಬೇರ್ಪಡಿಸಿದ ಆತ್ಮತತ್ತ್ವವನ್ನು ಅಖಂಡ ಬ್ರಹ್ಮಸ್ವರೂಪವನ್ನಾಗಿ ಯಾವಾಗ ತಿಳಿದುಕೊಳ್ಳುತ್ತಾನೆಯೋ ಅದಕ್ಕೇನೇ ಆತ್ಮಪ್ರಾಪ್ತಿ ಎಂದು ಕರೆಯುತ್ತಾರೆ.

ವಾಸ್ತವಿಕವಾದ ಆತ್ಮದ ಅರಿವಿಲ್ಲದ ಕಾರಣದಿಂದಾಗಿ ಪ್ರಪಂಚದಲ್ಲಿಯ ಬಹಳಷ್ಟು ಜನರು ಶರೀರಾದಿಗಳನ್ನೇ ಆತ್ಮವನ್ನಾಗಿ ತಿಳಿದುಕೊಂಡಿರುತ್ತಾರೆ. ಕೆಲವರು ಶರೀರಾತ್ಮವಾದಿಗಳಾದರೆ, ಇನ್ನೂ ಕೆಲವರು ಇಂದ್ರಿಯಾತ್ಮವಾದಿಗಳಾಗಿರುತ್ತಾರೆ. ಮತ್ತೆ ಕೆಲವರು ಪ್ರಾಣ–ಮನ ಮತ್ತು ಬುದ್ಧಿಗಳನ್ನೇ ಆತ್ಮವನ್ನಾಗಿ ತಿಳಿದಿರುತ್ತಾರೆ. ವಾಸ್ತವಿಕವಾಗಿ ವಿಚಾರಮಾಡಲಾಗಿ ಶರೀರವನ್ನೇ ಮೊದಲು ಮಾಡಿಕೊಂಡು ಬುದ್ಧಿಪರ್ಯಂತ ವಾಗಿರುವ ಎಲ್ಲ ತತ್ತ್ವಗಳು ಅನಾತ್ಮರೂಪಗಳೇ ಆಗಿರುತ್ತವೆ. ಆತ್ಮವು ಮಾತ್ರ ಇವೆಲ್ಲವು ಗಳಿಗಿಂತಲೂ ಭಿನ್ನವಾಗಿದ್ದು ನಿತ್ಯವೂ, ಸಚ್ಚಿದಾನಂದ ರೂಪವೂ ಆಗಿರುತ್ತದೆ. ಹೀಗೆ ದೇಹ–ಇಂದ್ರಿಯಾದಿಗಳಿಂದ ಅದನ್ನು ಬೇರ್ಪಡಿಸಿ ಯಾರು ಅರಿಯುವರೋ ಅವರಿಗೇನೇ ಆತ್ಮಜ್ಞಾನಿಯೆಂದು ಕರೆಯಲಾಗುತ್ತದೆ. ಆತ್ಮವನ್ನು ತಿಳಿದುಕೊಳ್ಳುವುದೇ ಆತ್ಮಪ್ರಾಪ್ತಿಯು. ಆತ್ಮಪ್ರಾಪ್ತಿಯೆಂದರೆ ತನ್ನಲ್ಲಿ ಇಲ್ಲದೇ ಇರುವ ಯಾವುದೋ ಒಂದು ಅಪೂರ್ವವಾದ ವಸ್ತುವು ಸಿಗುವುದೆಂದರ್ಥವಲ್ಲ, ನಿತ್ಯಪ್ರಾಪ್ತವಾದ ವಸ್ತುವೂ ಸಹ ಮರೆವೆಯ ಮೂಲಕ ಅಪ್ರಾಪ್ತವೆನಿಸುತ್ತದೆ. ಯಾವಾಗ ಅದರ ಅರಿವಾಗುವುದೋ ಅದು ಪ್ರಾಪ್ತವಾದಂತೆ ಭಾಸವಾಗುವುದು. ವಾಸ್ತವಿಕವಾಗಿ ಅಲ್ಲಿ ಹೊಸದೇನೂ ಪ್ರಾಪ್ತಿ ಯಾಗುವುದಿಲ್ಲ.

ಓರ್ವ ವ್ಯಕ್ತಿಯು ತನ್ನ ಮನೆಯ ಬೀಗದ ಕೈಯನ್ನು ತನ್ನ ಕೈಯಲ್ಲೇ ಹಿಡಿದು ಕೊಂಡು, ಹಿಡಿದುಕೊಂಡಿದ್ದರ ಮರವೆಯಾಗಿ ಮನೆಯಲ್ಲೆಲ್ಲಾ ಹುಡುಕುತ್ತಿರುತ್ತಾನೆ. ಯಾವಾಗ ಅವನಿಗೆ ಅದು ತನ್ನ ಕೈಯಲ್ಲಿಯೇ ಇರುತ್ತದೆಂಬ ಅರಿವಾಗುವುದೋ ಆಗ ಅವನು ದೊರಕಿತೆಂದು ತಿಳಿದು ಸಂತೋಷಪಡುತ್ತಿರುತ್ತಾನೆ. ಇಲ್ಲಿ ಬೀಗದಕೈಯು ತನ್ನ ಕೈಯಲ್ಲೇ ಇದ್ದರೂ ಅದರ ಮರವೆಯಿಂದ ಅದು ಅಪ್ರಾಪ್ತವಾಗಿ ತೋರಿ ಕೊನೆಗೆ ಅದರ ಅರಿವಾದೊಡನೆ ಪ್ರಾಪ್ತವಾಯಿತೆಂಬ ಭಾಸವು ಹೇಗೆ ಉಂಟಾಗುವುದೋ ಹಾಗೆಯೇ ಸಕಲ ಜೀವಿಗಳು ದೇಹೇಂದ್ರಿಯಾದಿಗಳ ವ್ಯವಹಾರದಲ್ಲಿ ತನ್ನ ಮೂಲ ಆತ್ಮ ಸ್ವರೂಪವನ್ನೇ ಮರೆತು ದುಃಖಿಗಳಾಗಿರುತ್ತಾರೆ. ಸದ್ಗುರುವಿನ ಉಪದೇಶದ ಮೂಲಕ ಯಾವಾಗ ಆತ್ಮದ ಅರಿವಾಗುವುದೋ ಆಗ ಆತ್ಮಪ್ರಾಪ್ತಿಯಾದಂತೆನಿಸಿ ಆನಂದವು ಉಂಟಾಗುತ್ತದೆ. ಆದಕಾರಣ ಆತ್ಮಪ್ರಾಪ್ತಿಯೆಂದೆನಿಸಿ ಯಾವುದೇ ಒಂದು ಹೊಸವಸ್ತು ನಮಗೆ ಸಿಗುತ್ತದೆಯೆಲ್ಲ. ಆದರೆ ಮರೆತದ್ದನ್ನು ಅರಿಯುವುದೇ ಇಲ್ಲಿ ಪ್ರಾಪ್ತಿಯೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಶರೀರಾದಿಗಳನ್ನೇ ಏಕೆ ಆತ್ಮವೆಂದು ಭಾವಿಸಬಾರದು ? ಅವುಗಳ ಜ್ಞಾನಕ್ಕೇನೇ ಆತ್ಮಜ್ಞಾನವೆಂದು ಏಕೆ ತಾನೆ ಕರೆಯಬಾರದು ? ತೋರುವ ತತ್ತ್ವವನ್ನು ಬಿಟ್ಟು ತೋರದಿರುವ ತತ್ತ್ವದಕಡೆಗೆ ಹಂಬಲಿಸುವುದು ಎಷ್ಟು ಸೂಕ್ತ ? ಎಂಬುದಾಗಿ ಭೌತಿಕ ವಾದಿಗಳು ವಿಚಾರಿಸಬಹುದು. ಇಲ್ಲಿ ಪೂಜ್ಯಪಾದರು ದೇಹಾದಿಗಳಿಂದ ಅದನ್ನು ಬೇರ್ಪಡಿಸಿ ತಿಳಿದುಕೊಳ್ಳಲು ಹೇಳಿರುವಲ್ಲಿ ಇರುವ ರಹಸ್ಯವೇನೆಂದರೆ ಶ್ರುತಿಯಲ್ಲಿ–

''ತರತಿ ಶೋಕಮಾತ್ಮವಿತ್'' ಅಂದರೆ ಆತ್ಮಜ್ಞಾನಿಯು ಶೋಕ–ಮೋಹಗಳಿಂದ ಮುಕ್ತನಾಗಿರುತ್ತಾನೆಂಬುದಾಗಿ ಹೇಳಲಾಗಿದೆ. ಯಾವುದರ ಅರಿವಾದಾಗ ನಮ್ಮ ಶೋಕ–ಮೋಹಾದಿಗಳು ದೂರವಾಗುವವೋ ಅದುವೇ ಆತ್ಮತತ್ತ್ವವು. ಲೋಕದಲ್ಲಿ

ದೇಹ–ಇಂದ್ರಿಯ–ಪ್ರಾಣ–ಮನಸ್ಸು ಮತ್ತು ಬುದ್ಧ್ಯಾದಿಗಳನ್ನು ಆತ್ಮವೆಂದು ಭಾವಿಸಿಕೊಂಡಿರುವ ಪ್ರತಿಯೊಬ್ಬರು ಸಹ ಶೋಕ–ಮೋಹಗಳಲ್ಲಿಯೇ ಮುಳುಗಿ ಹೋಗಿರುತ್ತಾರೆ.

ನಮಗೆ ಯಾರಾದರೂ ಪರಿಚಿತರೊಬ್ಬರು ಭೆಟ್ಟಿಯಾದರೆ ಪರಸ್ಪರ ಯೋಗ ಕ್ಷೇಮವನ್ನು ಕೇಳುತ್ತಿರುವಾಗ ಆತ್ಮೀಯತೆ ಬೆಳೆದು ಹೃದಯಬಿಚ್ಚಿ ಮಾತನಾಡುವಾಗ ಈರ್ವರ ಕಣ್ಣುಗಳಲ್ಲಿ ಕಣ್ಣೀರು ಬಂದೇ ಬಿಡುತ್ತವೆ. ತನ್ನೊಳಗೆ ಹುದುಗಿಸಿಕೊಂಡಿದ್ದ ದುಃಖದ ಘಟನೆಗಳನ್ನು ಆತ್ಮೀಯ ವ್ಯಕ್ತಿಯೆದುರಿಗೆ ಹೇಳಿದಾಗ ಕಂಬನಿಗಳು ಬರುವುದು ಸಹಜವೇ. ದೈನಂದಿನ ವ್ಯವಹಾರದಲ್ಲಿ ಇಂತಹ ಅನೇಕ ಘಟನೆಗಳನ್ನು ನಾವೆಲ್ಲಾ ನೋಡುತ್ತಲೇ ಇರುತ್ತೇವೆ. ಇದರಿಂದ ಪ್ರತಿಯೊಬ್ಬ ವ್ಯಕ್ತಿಯು ಶೋಕ–ಮೋಹಗಳಲ್ಲಿ ಮುಳುಗಿಹೋಗಿದ್ದಾನೆಂಬುದು ತಿಳಿದುಬರುತ್ತದೆ. ಈ ಶೋಕ–ಮೋಹಗಳಿಗೆ ಕಾರಣ ವಾದದ್ದೇ ಅನಾತ್ಮಜ್ಞಾನವು. ದೇಹವನ್ನು ಅಭಿಮಾನಿಸಿ, ಇಂದ್ರಿಯಗಳನ್ನು ಅಭಿಮಾನಿಸಿ, ಪ್ರಾಣ–ಮನಸ್ಸುಗಳನ್ನು ಅಭಿಮಾನಿಸಿ ಮತ್ತು ಕೊನೆಯದಾಗಿ ಬುದ್ಧಿಯನ್ನು ಅಭಿಮಾನಿಸಿ ಅದಾರೂ ಸುಖಿಗಳಾಗಿಲ್ಲ ; ಸುಖಿಗಳಾಗಲು ಸಾಧ್ಯವೂ ಇಲ್ಲ. ಆದುದರಿಂದ ಇವೆಲ್ಲವುಗಳನ್ನು ಅನಾತ್ಮವೆಂದು ಪರಿಭಾವಿಸಿ ಇವೆಲ್ಲವುಗಳಿಗಿಂತಲೂ ವಿಲಕ್ಷಣವಾದ ಅಖಂಡ ಬ್ರಹ್ಮಸ್ವರೂಪವಾದ ತನ್ನ ಆತ್ಮವನ್ನು ತಿಳಿದುಕೊಂಡಾಗಲೇ ಶೋಕ–ಮೋಹಗಳೆಲ್ಲ ಇಲ್ಲದಾಗಿ ಹೋಗುವವು.

ಸುಷುಪ್ತಾವಸ್ಥೆಯಲ್ಲಿ ನಾವು ಕೆಲಕಾಲ ಈ ಶರೀರಾದಿ ಅನಾತ್ಮ–ತತ್ತ್ವಗಳನ್ನು ಮರೆತಿರುತ್ತೇವೆ. ಅಂತಲೇ ಆ ಅವಸ್ಥೆಯಲ್ಲಿ ಪ್ರತಿಯೊಬ್ಬರೂ ಆತ್ಮಾನಂದವನ್ನೇ ಅನುಭವಿಸುತ್ತಿರುತ್ತಾರೆ ಇದು ಸರ್ವಾನುಭವವೇದ್ಯವೇ ಸರಿ. ದೇಹಾದಿಗಳ ಅರುವಿನಿಂದ ದುಃಖವೂ ಹಾಗೂ ಅವುಗಳ ಮರವೆಯಿಂದ ಆನಂದವೂ ದೊರೆಯುತ್ತದೆಯೆಂಬುದು ಸರ್ವಾನುಭವ ಸಿದ್ಧವಾಗಿರುವಾಗ ದುಃಖದಾಯಕಗಳಾದ ದೇಹಾದಿಗಳು ಅನಾತ್ಮ ವೆಂಬುದಾಗಿ ಸಹಜವಾಗಿ ಸಿದ್ಧವಾಗುತ್ತದೆ. ಆದ್ದರಿಂದ ಇವುಗಳ ಮೇಲಿನ 'ನಾನು' 'ನನ್ನದೆಂಬ' ಅಭಿಮಾನವನ್ನು ತ್ಯಜಿಸಿ, ಅಖಂಡ ಬ್ರಹ್ಮಸ್ವರೂಪವಾದ ತನ್ನ ಆತ್ಮ ವನ್ನರಿತು ಆತ್ಮಲಾಭವನ್ನು ಮಾಡಿಕೊಳ್ಳಬೇಕು. ಈ ಜಗತ್ತಿನಲ್ಲಿ ಆತ್ಮಲಾಭಕ್ಕಿಂತಲೂ ಶ್ರೇಷ್ಠವಾದ ಲಾಭವು ಮತ್ತೊಂದಿರುವುದಿಲ್ಲ ಅಂತೆಯೇ ಶಾಸ್ತ್ರಗಳು ''ಆತ್ಮಲಾಭಾತ್ ಪರಂ ಲಾಭೋ ನ ವಿದ್ಯತೇ'' ಎಂಬುದಾಗಿ ಹೇಳಿವೆ. ಕಾರಣ ಪ್ರತಿಯೊಬ್ಬರೂ ಆತ್ಮವನ್ನರಿತು ಆತ್ಮಲಾಭವನ್ನು ಪಡೆದುಕೊಳ್ಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ನವ್ಹಂಬರ, ೧೯೯೪

(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



# ಆತ್ಮಸ್ಥಲ

ಕಾಶೀ ವೀರಶೈವ ವಿದ್ವತ್‌ಸಂಘದ ಧರ್ಮಾಸಕ್ತರಾದ ಸಾಧಕರೇ ! ವಿದ್ವಾಂಸರಾದ ಶಿವಾಚಾರ್ಯರೇ। ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ವಿಭಿನ್ನ ಪ್ರಾಂತಗಳಿಂದಾಗಮಿಸಿದ ಸಮಸ್ತ ಭಕ್ತಮುಮುಕ್ಷುಗಳೇ ! ಹಾಗೂ ತಾಯಂದಿರೇ ! ಶ್ರೀಕಾಶೀ ಮಹಾಕ್ಷೇತ್ರದ ಶ್ರೀಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕಮಾಸದ ನಿಮಿತ್ತವಾಗಿ ಶ್ರೀಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನಗಳು ಸಾಂಗಮಂಗಲವಾಗಿ ಸಾಗುತ್ತಬಂದಿವೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನುದ್ದೇಶಿಸಿ ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರಸ್ಥಲದ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ಈ ಸ್ಥಲದ ಮೊದಲನೇ ಅವಾಂತರ ಸ್ಥಲವಾದ ಆತ್ಮಸ್ಥಲದ ಬಗ್ಗೆ ಕಳೆದೆರಡು ದಿನಗಳಿಂದ ವಿವೇಚಿಸುತ್ತ ಬಂದಿದ್ದೇವೆ. ಇಂದೂ ಸಹ ಅದೇ ಸ್ಥಳದ ಅವಶಿಷ್ಟ ವಿಷಯಗಳನ್ನು ಪರ್ಯಾಲೋಚಿಸೋಣ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಆತ್ಮದ ವಿಷಯಕವಾಗಿ ತಿಳಿಯಪಡಿಸುತ್ತ ಪುನಃ–

ನ ಚಾಸ್ತಿ ದೇಹಸಂಬಂಧೋ ನಿರ್ದೇಹಸ್ಯ ಸ್ವಭಾವತಃ।
ಅಜ್ಞಾನಕರ್ಮಯೋಗೇನ ದೇಹೀ ಭವತಿ ಭುಕ್ತಯೇ ॥

ನಾಸೌ ದೇವೋ ನ ಗಂಧರ್ವೋ ನ ಯಕ್ಷೋ ನೈವ ರಾಕ್ಷಸ ಃ।
ನ ಮನುಷ್ಯೋ ನ ತಿರ್ಯಕ್ಚ ನ ಚ ಸ್ಥಾವರವಿಗ್ರಹ ಃ॥

(ಸಿ. ಶಿ. ೧೮; ೧೧–೧೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ನಿರ್ದೇಹಿಯಾದ ಆತ್ಮನಿಗೆ ಸ್ವಾಭಾವಿಕವಾದ ದೇಹಸಂಬಂಧವು ಇರುವುದಿಲ್ಲ, ಆದರೂ ಸಹ ತನ್ನ ಅಜ್ಞಾನ ಹಾಗೂ ಪ್ರಾರಬ್ಧಾದಿ ಕರ್ಮಗಳ ಯೋಗದಿಂದ ಅವನು ಆ ಕರ್ಮದ ಭೋಗಕ್ಕಾಗಿ ದೇಹವನ್ನು ಧರಿಸಿ ದೇಹೀ ಎಂದು ಕರೆಯಲ್ಪಡುತ್ತಾನೆ. ಇವನು ತನ್ನ ಕರ್ಮಾನುಸಾರವಾಗಿ ದೇವ, ಗಂಧರ್ವ, ರಾಕ್ಷಸ, ಮನುಷ್ಯ, ಮತ್ತು ಸ್ಥಾವರಾದಿ ದೇಹಗಳನ್ನು ಧರಿಸಿರುತ್ತಾನೆ. ಆದರೆ ಮೂಲತ ಃ ಇವನು ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯ ತಿರ್ಯಕ್ ಮತ್ತು ಸ್ಥಾವರ ಇದಾವುದೂ ಆಗಿರುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು.

ವಾಸ್ತವಿಕವಾಗಿ 'ಅಶರೀರಿ'ಯಾಗಿರುವ ಆತ್ಮನಿಗೆ ಶರೀರ ಸಂಬಂಧವು ಇರುವುದಿಲ್ಲ. ಆದರೂ ಕರ್ಮಭೋಗಕ್ಕಾಗಿ ಈತನು 'ದೇಹೀ' ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ಇಲ್ಲಿರುವ ರಹಸ್ಯವೇನೆಂದರೆ ಈ ಸೃಷ್ಟಿಯು ಶಿವನ ಒಂದು ಲೀಲಾವಿನೋದವು. ಶಿವನು ತಾನೋರ್ವನೇ ಇದ್ದು ಇದ್ದು ಬೇಸತ್ತಾಗ ಲೀಲಾ ರೂಪವನ್ನು ಧರಿಸಿ ಈ ಪ್ರಪಂಚದ ವ್ಯವಹಾರವನ್ನು ಮಾಡುತ್ತಿರುತ್ತಾನೆ ''ಸ ವೈ ನೈವ ರೇಮೇ । ತಸ್ಮಾದೇಕಾಕೀ ನ ರಮತೇ । ಸ ದ್ವಿತೀಯಮೈಚ್ಛತ್ । ಸ ಏತಾವಾನಾಸ । ತತ್ಸೃಷ್ಟ್ವಾ ತದೇವಾನುಪ್ರಾವಿಶತ್ । ತದಮಪ್ರವಿಶ್ಯಸಚ್ಚ ತ್ಯಚ್ಚಾಭವತ್ ।'' ಎಂಬ ಈ ಶ್ರುತಿಯಲ್ಲಿ ಪರಮಾತ್ಮನ ಲೀಲೆಯು ವರ್ಣಿಸಲ್ಪಟ್ಟಿದೆ. ತಾತ್ಪರ್ಯವೇನೆಂದರೆ ನಿರ್ಗುಣನೂ, ನಿರಾಕಾರನೂ ಆದ ಆ ಪರಶಿವನು ಅನೇಕ ಕಾಲಗಳವರೆಗೆ ತಾನೇ ತಾನಾಗಿ ಓರ್ವನೇ ಇದ್ದನು. ಹೀಗಿರುವಾಗ ಅವನೋರ್ವನೇ ಇದ್ದು ಇದ್ದು ಅವನಿಗೆ ಬೇಸರಿಕೆಯುಂಟಾಯಿತು. ಏಕೆಂದರೆ ಒಬ್ಬನೇ ಆದ ವ್ಯಕ್ತಿಯು ಬಹಳ ವೇಳೆಯವರೆಗೆ ಒಬ್ಬೊಂಟಿಗನೇ ಆಗಿದ್ದರೆ ಬೇಸರಿಕೆಯು ಬರುವುದು ಸಹಜವಾದುದು. ಲೋಕ ದಲ್ಲಿಯೂ ಸಹ ಇಂತಹ ಅನುಭವವು ಸರ್ವರಿಗೂ ಇದ್ದೇ ಇರುತ್ತದೆ.

ಹಾಗೆ ಆ ಪರಮಾತ್ಮನಿಗೆ ಬೇಸರಿಕೆಯುಂಟಾದಾಗ ಅವನಲ್ಲಿ ಇನ್ನೊಂದು ಬೇಕು ಎನ್ನುವ ಬಯಕೆಯು ಉಂಟಾಯಿತು. ಆಗ ಅವನೇ ಅನೇಕ ರೂಪವನ್ನು ತಾಳಿದನು. ತನ್ನದೇ ಆದ ಆ ಅನೇಕ ರೂಪಗಳಲ್ಲಿ ತಾನು ಪುನಃ ಎಲ್ಲದರಲ್ಲಿ ಜೀವರೂಪನಾಗಿ ಪ್ರವೇಶಿಸಿದನು. ಹೀಗೆ ಸೃಷ್ಟಿಯಲ್ಲಿರುವ ಪ್ರತಿಯೊಂದು ದೇಹಾದಿಗಳಲ್ಲಿ ಪ್ರವೇಶಿಸಿದ ಇವನು ಜೀವನೆಂತಲೂ, ಪರಶಿವನ ಅಂಶನೆಂತಲೂ ಕರೆಯಿಸಿಕೊಳ್ಳತೊಡಗಿದನು. ಶ್ರೀಮದ್ಭಗವದ್ಗೀತೆಯಲ್ಲಿ-''ಮಮೈವಾಂಶೋ ಜೀವಲೋಕೆ ಜೀವಭೂತಃ ಸನಾತನಃ'' ಎಂಬುದಾಗಿ ಹೇಳಿ ಜೀವನೆಂದರೆ ಪರಮಾತ್ಮನ ಅಂಶನೆಂತಲೇ ಪ್ರತಿಪಾದಿಸ ಲಾಗಿದೆ. ಹೀಗೆ ಅಖಂಡನಾಗಿದ್ದ ಆ ಪರಶಿವನು ತನ್ನ ವಿನೋದಕ್ಕಾಗಿ ತಾನೇ ಅನೇಕ ಅಂಶರೂಪಗಳನ್ನು ಧರಿಸಿ ಜೀವನೆಂಬುದಾಗಿ ಕರೆಯಲ್ಪಟ್ಟು ಈ ಸಂಸಾರದಲ್ಲಿ ಸ್ವಕರ್ಮಾನುರೂಪವಾದ ಫಲಗಳನ್ನು ಅನುಭವಿಸುತ್ತ ಲೀಲೆಯನ್ನು ಮಾಡುತ್ತಿರುತ್ತಾನೆ.

ಓರ್ವ ಚಕ್ರವರ್ತಿ ದಿನಾಲೂ ತನ್ನ ವೈಭವೋಪೇತವಾದ ವ್ಯವಹಾರವನ್ನು ಮಾಡಿ ಮಾಡಿ ಅದರಿಂದ ಬೇಸತ್ತು ಸಾಮಾನ್ಯವಾದ ಆಟಿಗೆಯ ಸಾಮಗ್ರಿಯೊಂದಿಗೆ ಚಿಕ್ಕಮಕ್ಕಳ ಮಧ್ಯದಲ್ಲಿ ಕೆಲಕಾಲ ಕ್ರೀಡಿಸುವಂತೆ, ಪರಮಾತ್ಮನೂ ಸಹ ಅಖಂಡಾನಂದ ಪರಿಪೂರ್ಣ ನಾಗಿದ್ದರೂ, ಖಂಡಿತವಾದ ಶಬ್ದಸ್ಪರ್ಶಾದಿ ವಿಷಯಜನ್ಯ ಸುಖಗಳೆಂಬ ಖಂಡಿತ ರಸಾಸ್ವಾದವನ್ನು ಮಾಡುವ ಅಪೇಕ್ಷೆಯುಳ್ಳವನಾಗಿ ತನ್ನ ಸ್ವಾತಂತ್ರ್ಯ ಶಕ್ತಿಯಿಂದ ಪರಿಕಲ್ಪಿಸಲ್ಪಟ್ಟ ಆಣವಾದಿ ಮಲತ್ರಯಗಳ ಸಂಬಂಧವನ್ನು ಹೊಂದಿ ದೇಹವನ್ನು ಧರಿಸಿಕೊಂಡು ದೇಹೀ ಎಂಬುದಾಗಿ ಕರೆಯಲ್ಪಡುತ್ತಾನೆ.

ಲೋಕದಲ್ಲಿ ಯಾವಾಗಲೂ ಮಧುರರಸವನ್ನು ಅನುಭವಿಸುತ್ತಿರುವ ವ್ಯಕ್ತಿಗೆ ಅದು ಬೇಸರಿಸಿದಾಗ ಕಟು, ತಿಕ್ತ, ಲವಣ ಮುಂತಾದ ರಸಗಳನ್ನನುಭವಿಸುವ ಇಚ್ಛೆ ಯುಂಟಾಗುವಂತೆ ಸದಾ ಅಖಂಡಾನಂದದಲ್ಲಿರುವ ಆ ಶಿವನಿಗೂ ಸಹ ಅದು ಬೇಸರಿಸಿದಾಗ ಖಂಡಿತವಾದ ವಿಷಯಾನಂದವನ್ನು ಅನುಭವಿಸುವ ಇಚ್ಛೆಯಿಂದ ಅವನೇ

ಅಂಶರೂಪವನ್ನು ತಾಳಿ ಅನೇಕ ದೇಹಗಳಲ್ಲಿ ನಿವಾಸಿಸಿ ಪರಸ್ಪರ ಭಿನ್ನನೆನಿಸಿ ಲೀಲೆಯನ್ನು ಮಾಡುತ್ತಿರುತ್ತಾನೆ. ಶಿವನು ಒಬ್ಬ ಬಹುದೊಡ್ಡ ಏಕಪಾತ್ರಾಭಿನಯವನ್ನು ಮಾಡುವ ನುರಿತ ನಟನೆಂಬುದಾಗಿ ತಿಳಿದುಕೊಳ್ಳಬೇಕು. ಅಂತೆಯೇ ಅವನಿಗೆ ನಟರಾಜ, ನಟಸಾರ್ವಭೌಮ ಎಂಬುದಾಗಿ ಕರೆಯಲಾಗಿದೆ. ಹೀಗೆ ಜಗತ್ತೆಲ್ಲವೂ ಶಿವನ ಒಂದು ಲೀಲಾವಿನೋದವು. ''ಲೋಕವತ್ತು ಲೀಲಾ ಕೈವಲ್ಯಮ್'' ಎಂಬ ಬ್ರಹ್ಮಸೂತ್ರದಲ್ಲಿ ಮಹರ್ಷಿ ಬಾದರಾಯಣನೂ ಸಹ ಈ ಜಗತ್ತಿನ ಸೃಷ್ಟಿ, ಸ್ಥಿತಿ ಮುಂತಾದವುಗಳೆಲ್ಲ ಶಿವನ ಲೀಲೆಯೆಂಬುದಾಗಿ ಪ್ರತಿಪಾದಿಸಿದ್ದಾನೆ.

''ಅಲ್ಪಾಯಾಸದಿಂದ ಸಿದ್ಧವಾಗುವ ಕರ್ತೃವಿನ ವಿಶೇಷವಾದ ಪ್ರಯೋಜನ ವಿಲ್ಲದ ಕ್ರಿಯೆಯೇ ಲೀಲೆಯು. ಶಿವನು ಇಂತಹ ವಿಶಾಲವಾದ ಸೃಷ್ಟಿಯನ್ನು ರಚಿಸಲಿಕ್ಕೆ ಬಹಳೇನೂ ಪರಿಶ್ರಮಪಡುವುದಿಲ್ಲ. ಕೇವಲ ಅವನ ಇಚ್ಛೆಯಾದೊಡನೆ ಈ ಸೃಷ್ಟಿಯು ನಿರ್ಮಾಣಗೊಳ್ಳುವುದು. ಇದೂ ಅಲ್ಲದೆ ಈ ಸೃಷ್ಟಿಯನ್ನು ನಿರ್ಮಿಸುವಲ್ಲಿ ಅವನದೇ ಆದ ಯಾವ ಪ್ರಯೋಜನವೂ ಸಿದ್ಧವಾಗುವುದಿಲ್ಲ. ಆದ್ದರಿಂದ ಈ ಜಗತ್ತಿನ ರಚನೆಯೊಂದು ಶಿವನ ಲೀಲೆಯಲ್ಲದೆ ಇನ್ನೇನು ? ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯ ಮಂಗಲಾಚರಣ ಶ್ಲೋಕದಲ್ಲಿ ಶಿವನನ್ನು ಸ್ತುತಿಸುವ ನೆಪದಲ್ಲಿ ಅವನ ಲೀಲಾಕೃತ್ಯವನ್ನು–

ಸ್ವೇಚ್ಛಾವಿಗ್ರಹಯುಕ್ತಾಯ ಸ್ವೇಚ್ಛಾವರ್ತನವರ್ತಿನೇ ।
ಸ್ವೇಚ್ಛಾಕೃತ ತ್ರಿಲೋಕಾಯ ನಮಸ್ಸಾಂಬಾಯ ಶಂಭವೇ ॥

(ಸಿ. ಶಿ. ೧–೬)

ಈ ತೆರನಾಗಿ ವರ್ಣಿಸಿದ್ದಾರೆ. ಸೃಷ್ಟಿಯನ್ನು ಶಿವನ ಲೀಲೆಯೆಂದು ಸ್ವೀಕರಿಸಿದಾಗ ಶಿವನ ಆಪ್ತಕಾಮತ್ವಕ್ಕೆ ಭಂಗಬರುವುದಿಲ್ಲವಷ್ಟೇ ಅಲ್ಲ, ಅವನಿಗೆ ಉನ್ಮತ್ತಪ್ರವೃತ್ತಿ ಪ್ರಸಂಗವೂ ಸಹ ಉಂಟಾಗುವುದಿಲ್ಲ.

ಯಾರೇ ಒಬ್ಬರು ಯಾವುದೊಂದು ಕಾರ್ಯದಲ್ಲಿ ಪ್ರವೃತ್ತರಾಗಬೇಕಾದರೆ ಅಲ್ಲಿ ಪ್ರಯೋಜನವನ್ನು ಹೇಳಬೇಕಾಗುವುದು. ''ಪ್ರಯೋಜನಮನುದ್ದಿಶ್ಯ ಮಂದೋಽಪಿ ನ ಪ್ರವರ್ತತೇ'' ಎಂಬ ಉಕ್ತಿಗನುಸಾರವಾಗಿ ಅಲ್ಪಜ್ಞನೂ ಸಹ ಅರ್ಥಾತ್ ಮೂರ್ಖನೂ ಸಹ ಪ್ರಯೋಜನವಿಲ್ಲದೆ ಯಾವ ಕಾರ್ಯದಲ್ಲಿಯೂ ಪ್ರವೃತ್ತನಾಗುವುದಿಲ್ಲ. ಹೀಗಿರು ವಾಗ ಈ ಸೃಷ್ಟಿಯ ರಚನೆ–ಪಾಲನೆ–ಸಂಹಾರ ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಾತ್ಮಕವಾದ ಈ ವ್ಯವಹಾರವನ್ನು ಶಿವನು ಮಾಡುತ್ತಾನೆಂದರೆ ಇದಕ್ಕೆ ಯಾವು ದಾದರೊಂದು ಪ್ರಯೋಜನವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಒಂದುವೇಳೆ ಶಿವನಿಗೆ ಪ್ರಯೋಜನವಿದೆಯೆಂದು ಹೇಳಿದರೆ ಅವನು ನಿತ್ಯತೃಪ್ತನೂ, ಆಪ್ತಕಾಮನೂ, ಆಗಿದ್ದಾನೆಂದು ತಿಳಿಸುವ ಶ್ರುತಿಗಳು ನಿರರ್ಥಕಗಳೆಂಬುದಾಗಿ ಹೇಳಬೇಕಾಗುತ್ತದೆ. ಇನ್ನು ಯಾವ ಪ್ರಯೋಜನವೂ ಇಲ್ಲದೆ ಹಾಗೆಯೇ ಸೃಷ್ಟಿಯನ್ನು ಮಾಡುತ್ತಾನೆಂದು ಹೇಳಿದರೆ ಈಶ್ವರನನ್ನು ಉನ್ಮತ್ತ ಅರ್ಥಾತ್ ಹುಚ್ಚನೆಂದು ಒಪ್ಪಿಕೊಳ್ಳಬೇಕಾಗುವುದು. ಈ ತೆರನಾಗಿ ಸೃಷ್ಟಿಯ ಕಾರ್ಯದಲ್ಲಿ ಈಶ್ವರನಿಗೆ ಪ್ರಯೋಜನವನ್ನು ಹೇಳಲಿ, ಹೇಳದೇ ಇರಲಿ ಎರಡೂ ವಿಧದಲ್ಲಿಯೂ ದೋಷಗಳು ಇದ್ದೇ ಇರುತ್ತವೆ ಎಂಬುದಾಗಿ

ಯಾರಾದರೂ ಶಂಕಿಸಿದರೆ, ವೀರಶೈವ ಆಚಾರ್ಯರು ಲೀಲಾವಾದದಿಂದ ಇವೆರಡೂ ದೋಷಗಳನ್ನು ಇಲ್ಲವಾಗಿಸುತ್ತಾರೆ. ಸೃಷ್ಟಿ ಕ್ರಿಯೆಯು ಶಿವನ ಲೀಲೆಯೆಂದು ಹೇಳಿದಾಗ ಅವನ ಆಪ್ತಕಾಮತ್ವಕ್ಕೆ ಭಂಗಬರುವುದಿಲ್ಲವಷ್ಟೇ ಅಲ್ಲ, ಉನ್ಮತ್ತ ಪ್ರವೃತ್ತಿಯೆಂದು ಹೇಳಲು ಅವಕಾಶವೂ ಸಹ ಇರುವುದಿಲ್ಲ. ಹೀಗೆ ಶಿವನು ತನ್ನ ಲೀಲಾವಿನೋದಕ್ಕಾಗಿ ಅಂಶರೂಪವನ್ನು ತಾಳಿ ದೇಹಿಯೆನಿಸಿಕೊಂಡು ಕರ್ಮಫಲಗಳನ್ನನುಭವಿಸುತ್ತ ಈ ಜಗತ್ತಿನಲ್ಲಿ ಸಂಚರಿಸುತ್ತಿರುತ್ತಾನೆ.

ತನ್ನ ಕರ್ಮಾನುಸಾರವಾಗಿ ಸಂಚರಿಸುವ ಈ ಜೀವನು ಪುಣ್ಯ–ಪಾಪಗಳ ತಾರ–ತಮ್ಯದಿಂದಾಗಿ ಒಮ್ಮೆ ದಿವ್ಯ ದೇಹಧಾರಿಯಾಗಿ ದೇವನೆನಿಸಿಕೊಂಡರೆ ಮತ್ತೊಮ್ಮೆ ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯ, ತಿರ್ಯಕ್ ಮತ್ತು ವೃಕ್ಷಾದಿ ಸ್ಥಾವರ ಶರೀರಗಳನ್ನು ಧರಿಸಿಕೊಂಡಿರುತ್ತಾನೆ. ಇವನಿಗೆ ಈ ದೇಹಾದಿಗಳು ಪ್ರಾಕ್ತನ ಪುಣ್ಯ–ಪಾಪಾದಿಗಳ ಫಲವಾಗಿ ದೊರೆತಿರುತ್ತವೆ. ಆದ್ದರಿಂದಲೇ ಶ್ರೀಮನ್ನಿಜಗುಣ ಶಿವಯೋಗಿಗಳು–

ಪಾಪಾನುಗುಣದಿಂದೆ ಗಿಡ–ಮರ–ಕ್ರಿಮಿಗಳ ।
ರೂಪಾಗಿ ಕೀಟ–ಪತಂಗಾದಿಯಾಗಿ ।

ಆ ಪಕ್ಷಿಕುಲವಾಗಿ ಮೃಗಜಾತಿಯಾಗಿ ಮೇ ।
ಲಾ ಪಶುರೂಪಾಗಿ ಬಹುಬಾಧೆಗೇಳಿ ॥

ಎಂಬ ಪದ್ಯದಲ್ಲಿ ಜೀವಿಗಳಿಗೆ ದೊರೆತಿರುವ ಸಕಲವಿಧ ಶರೀರಗಳಿಗೆ ಪುಣ್ಯ ಪಾಪಗಳೇ ಕಾರಣ ಎಂಬುದಾಗಿ ಪ್ರತಿಪಾದಿಸಿದ್ದಾರೆ. ಆದ್ದರಿಂದ ವಾಸ್ತವಿಕವಾಗಿ ಆತ್ಮವು ದೇವ, ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯ, ತಿರ್ಯಕ್ ಮತ್ತು ಸ್ಥಾವರ ರೂಪವು ಇವನಲ್ಲಿವೆ ಎಂಬುದಾಗಿ ಪೂಜ್ಯಪಾದರು ತಿಳಿಯಪಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜಗತ್ತಿನ ಎಲ್ಲ ಜೀವಿಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ಅನೇಕ ಶರೀರಗಳನ್ನು ಧರಿಸಿ ಸಂಚರಿಸುತ್ತಿರುವ ವಿಷಯವನ್ನು ಪುನಃ–

ನಾನಾಕರ್ಮ ವಿಪಾಕಾಶ್ಚ ನಾನಾಯೋನಿ ಸಮಾಶ್ರಿತಾಃ ।
ನಾನಾಯೋಗಸಮಾಪನ್ನಾ ನಾನಾಬುದ್ಧಿ ವಿಚೇಷ್ಟಿತಾಃ ।

ನಾನಾಮಾರ್ಗಸಮಾರೂಢಾ ನಾನಾ ಸಂಕಲ್ಪಕಾರಿಣಃ ।
ಅಸ್ವತಂತ್ರಾಶ್ಚ ಕಿಂಚಿಜ್ಞಾಃ ಕಿಂಚಿತ್ಕರ್ತೃತ್ವ ಹೇತವಃ
ಲೀಲಾಭಾಜನತಾಂ ಪ್ರಾಪ್ತಾಃ ಶಿವಸ್ಯ ಪರಮಾತ್ಮನಃ ॥

(ಸಿ. ಶಿ. ೧೮; ೧೩–೧೪)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಜಗತ್ತಿನಲ್ಲಿಯ ಜೀವಾತ್ಮರು ತಮ್ಮ ಪರಿಪಕ್ವಗೊಂಡ ಪ್ರಾಕ್ತನ ಕರ್ಮದಿಂದಾಗಿ ದೇವಾದಿ ಅನೇಕ ಯೋನಿಗಳನ್ನು ಆಶ್ರಯಿಸಿ ಸ್ವರ್ಗಾದಿ ಭೋಗಗಳ ಉಪಾಯವನ್ನು ಚಿಂತಿಸುತ್ತ ಅನೇಕ ವಿಧವಾದ ಬುದ್ಧಿಗಳಿಂದ ಕೂಡಿದವರಾಗಿ ಶೈವ, ವೈಷ್ಣವಾದಿ ಅನೇಕ ಧರ್ಮದರ್ಶನಗಳಲ್ಲಿ ಪ್ರವಿಷ್ಟರಾದವರಾಗಿ, ಮನಸ್ಸಿನಲ್ಲಿ ನಾನಾ ಪ್ರಕಾರದ ಸಂಕಲ್ಪಗಳನ್ನು ಮಾಡುತ್ತ

ಅಸ್ವತಂತ್ರರು, ಕಿಂಚಿಜ್ಞರು, ಕಿಂಚಿತ್ ಕರ್ತೃತ್ವಶಾಲಿಗಳಾಗಿ ಪರಮ ಶಿವನಿಗೆ ಲೀಲಾ ಸಾಮಗ್ರಿಗಳಾದಂಥವರಾಗಿದ್ದಾರೆ.

ಈ ಪ್ರಪಂಚದಲ್ಲಿ ಅಸಂಖ್ಯಾತಗಳಾದ ಜೀವಿಗಳಿದ್ದಾರೆ. ಆ ಜೀವಿಗಳ ಕರ್ಮಗಳೂ ಸಹ ಅನಂತ ಪ್ರಕಾರವಾಗಿರುತ್ತವೆ. ಈ ಕರ್ಮಗಳ ವೈಪರೀತ್ಯದಿಂದಾಗಿ ಅನಂತ ಯೋನಿಗಳಲ್ಲಿ ಈ ಜೀವಿಗಳು ಜನ್ಮತಾಳುತ್ತವೆ. ಸ್ಕಂದ ಮಹಾಪುರಾಣದಲ್ಲಿ ಶ್ರೀವ್ಯಾಸಮಹರ್ಷಿಗಳು ಏಳು ವಿಧವಾದ ಜನ್ಮಗಳನ್ನು ಹೇಳಿ ಅವುಗಳಲ್ಲಿಯೇ ಎಂಭತ್ನಾಲ್ಕು ಲಕ್ಷ ಪ್ರಕಾರದ ಶರೀರಗಳ ವ್ಯವಸ್ಥೆಯನ್ನು ಮಾಡಿರುವದು–

ದೇವಾಃ ಷೋಡಶ ಲಕ್ಷಾಣಿ, ನವ ಲಕ್ಷಾಣಿ ಮಾನುಷಾಃ ।
ದಶಭಿರ್ದಶಭಿಸ್ತದ್ವಜ್ಜಲಜಾ ವಿಹಗಾ ಮೃಗಾಃ ॥

ಸರೀಸೃಪಾಸ್ತು ಲಕ್ಷಾಣಿ ಏಕಾದಶ ಚರೇತರಾಃ ।
ಅಷ್ಟೌ ಚ ದಶಲಕ್ಷಾಣಿ ಸಪ್ತಜನ್ಮಾನ್ಯಮೂನಿ ವೈ ॥

ಇದರಿಂದ ಕಂಡುಬರುತ್ತದೆ. ತಾತ್ಪರ್ಯವೇನೆಂದರೆ, ದೇವ, ಮನುಷ್ಯ, ಜಲಚರ, ವಿಹಗ, ಮೃಗ, ಸರ್ಪ ಮತ್ತು ಸ್ಥಾವರ ಎಂಬುದಾಗಿ ಜನ್ಮಗಳು ಮುಖ್ಯವಾಗಿ ಏಳು ಪ್ರಕಾರವಾಗಿರುತ್ತವೆ. ಈ ಪ್ರತಿಯೊಂದು ಜನ್ಮಗಳ ದೇಹದ ಸಂಖ್ಯೆಯು ಭಿನ್ನ ಭಿನ್ನವಾಗಿರುತ್ತದೆ. ದೇವ ಜನ್ಮದಲ್ಲಿ ಹದಿನಾರು ಲಕ್ಷ ಪ್ರಕಾರದ ಶರೀರಗಳು, ಮನುಷ್ಯ ಜನ್ಮದಲ್ಲಿ ಒಂಭತ್ತು ಲಕ್ಷ ಪ್ರಕಾರದ ದೇಹಗಳು, ಜಲಚರ ಜನ್ಮದಲ್ಲಿ ಹತ್ತು ಲಕ್ಷ, ಪಕ್ಷಿ ಜನ್ಮದಲ್ಲಿ ಹತ್ತು ಲಕ್ಷ ಮತ್ತು ಮೃಗ ಜನ್ಮದಲ್ಲಿ ಹತ್ತು ಲಕ್ಷ ಪ್ರಕಾರದ ದೇಹಗಳಿರುತ್ತವೆ. ಸರೀಸೃಪ ಜನ್ಮದಲ್ಲಿ ಅರ್ಥಾತ್ ಸರ್ಪಜನ್ಮದಲ್ಲಿ ಹನ್ನೊಂದು ಲಕ್ಷ ಪ್ರಕಾರದ ದೇಹಗಳು ಮತ್ತು ಸ್ಥಾವರ ಜನ್ಮದಲ್ಲಿ ಹದಿನೆಂಟು ಲಕ್ಷ ಪ್ರಕಾರದ ಶರೀರಗಳು ಇರುತ್ತವೆ. ಹೀಗೆ ಒಟ್ಟು ಈ ಏಳೂ ಜನ್ಮಗಳಲ್ಲಿ ಎಂಭತ್ನಾಲ್ಕು ಲಕ್ಷ ಪ್ರಕಾರದ ದೇಹಗಳಿರುವುದಾಗಿ ಸ್ಕಂದ ಪುರಾಣದ ವಚನದಿಂದ ತಿಳಿದುಬರುತ್ತದೆ.

ಈ ದೇಹಗಳು ಜೀವಿಗಳಿಗೆ ಅವರವರ ಕರ್ಮಾನುಸಾರವಾಗಿ ಪ್ರಾಪ್ತವಾಗುತ್ತಿರುತ್ತವೆ. ಈ ದೇಹಗಳನ್ನು ಧರಿಸಿಕೊಂಡ ಜೀವಿಗಳು ಅನೇಕ ಸಂಕಲ್ಪವುಳ್ಳವರಾಗಿ ಶೈವ–ವೈಷ್ಣವ ಮುಂತಾದ ವಿಭಿನ್ನ ಧರ್ಮದರ್ಶನಗಳ ಮಾರ್ಗದಲ್ಲಿ ನಡೆಯುತ್ತಿರುತ್ತಾರೆ. ಎಲ್ಲ ಜೀವಿಗಳು ಅಸ್ವತಂತ್ರರಾಗಿದ್ದು ಅಲ್ಪಜ್ಞರೂ ಅಲ್ಪಕರ್ತೃತ್ವ ಶಕ್ತಿಯುಳ್ಳವರೂ ಆಗಿರುತ್ತಾರೆ. ಇಂತಹ ಅನೇಕ ಜೀವಿಗಳಿಂದೊಡಗೂಡಿಕೊಂಡು ಪರಮಾತ್ಮನು ತನ್ನ ಅನಂತ ಲೀಲೆಗಳನ್ನು ಮಾಡುತ್ತಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪ್ರಪಂಚದ ಎಲ್ಲ ಜೀವಿಗಳ ಕರ್ಮಗಳಿಗೆ ಶಿವನೇ ಪ್ರೇರಕ ಶಕ್ತಿಯಾಗಿದ್ದಾನೆ ಎಂಬ ವಿಷಯವನ್ನು ತಿಳಿಸಲೋಸುಗ–

ಚೋದಿತಾಃ ಪರಮೇಶೇನ ಸ್ವ ಸ್ವಕರ್ಮಾನುರೂಪತಃ ।
ಸ್ವರ್ಗಂ ವಾ ನರಕಂ ವಾ ಪಿ ಪ್ರಾಣಿನೋ ಯಾಂತಿ ಕರ್ಮಿಣಃ ॥

ಪುನಃ ಕರ್ಮಾವಶೇಷೇಣ ಜಾಯಂತೇ ಗರ್ಭಕೋಟರಾತ್ ।
ಜಾತಾ ಮೃತಾಃ ಪುನರ್ಜಾತಾಃ ಪುನರ್ಮರಣಭಾಜಿನಃ ॥

ಭ್ರಮಂತಿ ಘೋರ ಸಂಸಾರೇ ವಿಶ್ರಾಂತಿಕಥಯಾ ವಿನಾ ||
ಜೀವತ್ವಂ ದುಃಖಸರ್ವಸ್ವಂ ತದಿದಂ ಮಲಕಲ್ಪಿತಮ್ |
ನಿರಸ್ಯತೇ ಗುರೋರ್ಬೋಧಾತ್ ಜ್ಞಾನಶಕ್ತಿಃ ಪ್ರಕಾಶತೇ ||

(ಸಿ. ಶಿ. ೧೮; ೧೫-೧೮)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವನಿಂದ ಪ್ರೇರೇಪಿಸಲ್ಪಟ್ಟ ಕರ್ಮಿಗಳಾದ ಜೀವಿಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ಸ್ವರ್ಗ ಅಥವಾ ನರಕಾದಿಗಳ ಗತಿಗಳನ್ನು ಹೊಂದುತ್ತಿರುತ್ತಾರೆ. ಆ ಸ್ವರ್ಗ ನರಕಗಳಲ್ಲಿಯ ಫಲಭೋಗ ವನ್ನು ಮಾಡಿ ಸ್ವಲ್ಪು ಕರ್ಮಾವಶೇಷವುಳ್ಳವರಾಗಿ ಪುನಃ ಕರ್ಮಾನು ರೂಪವಾದ ಗರ್ಭದಲ್ಲಿ ಪ್ರವೇಶಿಸಿ ಜನ್ಮವನ್ನು ಪಡೆಯುತ್ತಾರೆ. ಹೀಗೆ ಹುಟ್ಟುತ್ತ- ಸಾಯುತ್ತ, ಮತ್ತೆ ಹುಟ್ಟುತ್ತ ಮತ್ತೆ ಸಾಯುತ್ತ, ವಿಶ್ರಾಂತಿಯೆಂಬುದೇ ಇಲ್ಲದೆ ಈ ಘನಘೋರವಾದ ಸಂಸಾರದಲ್ಲಿ ಚಕ್ರದಂತೆ ಸುತ್ತುತ್ತಿರುತ್ತಾರೆ. ಹೀಗೆ ಸುತ್ತಾಡುತ್ತಿರುವ ಈ ಜೀವಿಗಳಿಗೆ ಮುಕ್ತಿಯೆಂಬುದು ಇದೆಯೋ ಇಲ್ಲವೋ ಎಂಬ ಶಂಕೆಯುಂಟಾಗಲು ಪೂಜ್ಯಪಾದರು ಅಪ್ಪಣೆಕೊಡಿಸಿದ್ದೇನೆಂದರೆ, ಆತ್ಮನಿಗೆ ಬಂದಿರುವ ಜೀವ ಭಾವಕ್ಕೆ ಆಣವಾದಿ ಮಲತ್ರಯಗಳೇ ಕಾರಣಗಳಾಗಿರುತ್ತವೆ. ಅತಿ ದುಃಖರೂಪವಾದ ಈ ಜೀವ ಭಾವವು ಸದ್ಗುರುವಿನಿಂದ ಮಾಡಲ್ಪಡುವ ದೀಕ್ಷೆ ಹಾಗೂ ಕೊಡಲ್ಪಡುವ ಬೋಧೆಯಿಂದ ನಿವಾರಿತವಾಗುತ್ತದೆ. ಈಗ ಜೀವನ ಸಂಕುಚಿತಗಳಾಗಿದ್ದ ಇಚ್ಛಾ-ಜ್ಞಾನಾದಿ ಶಕ್ತಿಗಳು ವಿಕಾಸವನ್ನು ಪಡೆಯುತ್ತವೆ. ಈಗ ಈ ಜೀವನು ಸಂಸಾರದಲ್ಲಿಯ ಜನನ-ಮರಣ ಚಕ್ರದಿಂದ ಪಾರಾಗಿ ಮುಕ್ತನೆನಿಸುವನು.

ಜೀವಿಗಳು ಮಾಡಿರುವ ಪುಣ್ಯ-ಪಾಪಗಳೆಂಬ ಕರ್ಮಗಳು ಆಯಾ ಜೀವಿಗಳಿಗೆ ಸ್ವರ್ಗ ನರಕಾದಿ ಫಲಗಳನ್ನು ಕೊಡಲು ಕಾರಣಗಳಾಗಿದ್ದರೂ ಆ ಕರ್ಮಗಳು ಸ್ವತಃ ಜಡರೂಪಗಳಾಗಿರುವುದರಿಂದ ಅವುಗಳನ್ನು ಪ್ರೇರೇಪಿಸಲು ಈಶ್ವರನು ಬೇಕಾಗುತ್ತಾನೆ. ಈಶ್ವರನ ಪ್ರೇರಣೆಯಿಲ್ಲದೆ ಈ ಕರ್ಮಿಗಳು ಏನನ್ನೂ ಮಾಡಲು ಸಮರ್ಥ ವಾಗುವದಿಲ್ಲ.

ಭಾರತೀಯ ದರ್ಶನಗಳಲ್ಲಿ ಕೆಲವು ದಾರ್ಶನಿಕರು ಈಶ್ವರನನ್ನು ಒಪ್ಪಿದರೆ, ಮತ್ತೆ ಕೆಲವರು ಒಪ್ಪುವುದಿಲ್ಲ. ಮುಖ್ಯವಾಗಿ ನಾವು ಮಾಡಿದ ಕರ್ಮಾನುಸಾರವಾಗಿಯೇ ನಮಗೆ ಜಾತಿ-ಆಯು-ಭೋಗ-ಸ್ವರ್ಗ ಮತ್ತು ನರಕಾದಿ ಲೋಕಗಳು ಪ್ರಾಪ್ತ ವಾಗುತ್ತವೆಯಲ್ಲದೆ, ನಮ್ಮ ಜನ್ಮ-ಮರಣಗಳೂ ಸಹ ನಮ್ಮ ಕರ್ಮದ ಅಧೀನಗಳೇ ಆಗಿರುತ್ತವೆ. ಹೀಗೆ ನಾವು ಮಾಡಿದ ಕರ್ಮಾನುಸಾರವಾಗಿಯೇ ಏನೆಲ್ಲವೂ ದೊರೆಯುತ್ತಿರುವಾಗ ಮಧ್ಯದಲ್ಲಿ ಈಶ್ವರನನ್ನು ಒಪ್ಪುವ ಅವಶ್ಯಕತೆಯೇನು ? ಎಂದು ವಿಚಾರಿಸಿ ಪೂರ್ವಮೀಮಾಂಸಾ ದಾರ್ಶನಿಕರು ಕರ್ಮಕ್ಕೇನೇ ದೇವರೆಂದು ಕರೆದಿದ್ದಾರೆ. ಅಂತೆಯೇ ಅವರ ವಿಷಯದಲ್ಲಿ- ''ಕರ್ಮೇತಿ ಮೀಮಾಂಸಕಾಃ'' ಎಂಬ ಉಕ್ತಿಯು ಪ್ರಸಿದ್ಧವಾಗಿರುತ್ತದೆ. ಇದೇ ಪ್ರಕಾರವಾಗಿ ಸಾಂಖ್ಯದರ್ಶನಾಚಾರ್ಯರೂ ಸಹ ಪ್ರಕೃತಿ ಮತ್ತು ಪುರುಷರ ವ್ಯತಿರಿಕ್ತವಾಗಿ ಬೇರೊಬ್ಬ ಈಶ್ವರನನ್ನು ಕಲ್ಪಿಸುವ ಅವಶ್ಯಕತೆಯಿಲ್ಲ ವೆಂಬುದಾಗಿ ಹೇಳಿ ಅವರೂ ಸಹ ಈಶ್ವರನನ್ನು ನಿರಾಕರಿಸಿದ್ದಾರೆ. ಆದರೆ ಯೋಗ

ಶಾಸ್ತ್ರದ ಆಚಾರ್ಯರು ಯೋಗಾಭ್ಯಾಸ ಮಾಡುತ್ತಿರುವ ಸಾಧಕನಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಸಾಮಾನ್ಯ ಪುರುಷನಿಗಿಂತಲೂ ವಿಲಕ್ಷಣನಾದ ಮತ್ತು ಕ್ಲೇಶ–ಕರ್ಮ–ವಿಪಾಕ–ಆಶಯಗಳಿಂದ ಅಸಂಪೃಕ್ತನಾದ ಅರ್ಥಾತ್ ಸಂಬಂಧವಿಲ್ಲದಿರುವ ಓರ್ವ ವಿಶೇಷ ಪುರುಷನಿದ್ದಾನೆ. ಅವನೇ ಈಶ್ವರನೆಂಬುದಾಗಿ ಹೇಳುತ್ತಾರೆ. ಇನ್ನು ನಾಸ್ತಿಕದ ಚಾರುವಾಕ್, ಜೈನ ಮತ್ತು ಬೌದ್ಧ ದಾರ್ಶನಿಕರು ಈಶ್ವರನನ್ನು ಒಪ್ಪುವುದೇ ಇಲ್ಲ.

ಆಸ್ತಿಕ ದರ್ಶನಗಳಾದ ನ್ಯಾಯ, ವೈಶೇಷಿಕ, ಯೋಗ, ಅದ್ವೈತ ವೇದಾಂತ ಮತ್ತು ವೀರಶೈವ ದರ್ಶನಗಳಲ್ಲಿ ಈಶ್ವರನನ್ನು ಒಪ್ಪಿಕೊಳ್ಳಲಾಗಿದೆ. ಈ ದಾರ್ಶನಿಕರು ಜಗತ್ತಿನ ಸೃಷ್ಟಿ ಮತ್ತು ಪ್ರಳಯಾದಿಗಳನ್ನು ವ್ಯವಸ್ಥಿಗೊಳಿಸಲು ಹಾಗೂ ವೇದಾಗಮಗಳ ಪ್ರಾಮಾಣ್ಯವನ್ನು ಸಿದ್ಧಮಾಡಲು ಮತ್ತು ಪ್ರಾಣಿಗಳ ಕರ್ಮಗಳನ್ನು ನಿಯಂತ್ರಿಸುವುದಕ್ಕಾಗಿ ಈಶ್ವರನನ್ನು ಒಪ್ಪಿಕೊಂಡಿದ್ದಾರೆ.

ಅನೇಕ ವೈಚಿತ್ರ್ಯಗಳಿಂದ ಕೂಡಿದ ಈ ಸೃಷ್ಟಿಯನ್ನು ರಚಿಸುವುದು ಪ್ರಪಂಚದ ಯಾವ ಸಾಮಾನ್ಯ ಜೀವಿಗೂ ಸಾಧ್ಯವಾಗುವುದಿಲ್ಲ. ಅಂತೆಯೇ ಜೀವಿಗಳಿಗಿಂತಲೂ ವಿಲಕ್ಷಣನಾದ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ಶಕ್ತಿಸಂಪನ್ನನಾದ ಈಶ್ವರನನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇದೂ ಅಲ್ಲದೆ ನಮ್ಮ ದೇಶದ ಪ್ರಾಚೀನ ವಾಙ್ಮಯವಾದ ವೇದಾಗಮಗಳೂ ಸಹ ಅಪಾರವಾದ ಜ್ಞಾನ ಭಂಡಾರದಿಂದ ತುಂಬಿಕೊಂಡಂಥವುಗಳಾಗಿವೆ. ಇಂತಹ ಈ ವಾಙ್ಮಯವನ್ನು ಸರ್ವಜ್ಞನಾದ ಈಶ್ವರನ ಹೊರತು ಬೇರಾರಿಂದಲೂ ನಿರ್ಮಿಸಲು ಸಾಧ್ಯವಾಗುವುದಿಲ್ಲ. ಇನ್ನು ಸಾಮಾನ್ಯವಾದ ಜೀವಿಗಳು ರಾಗ– ದ್ವೇಷಾದಿಗಳಿಂದ ಕೂಡಿಕೊಂಡಿರೋಣದರಿಂದ ಅವರಿಂದ ರಚಿತವಾದ ಸಾಹಿತ್ಯವು ಸಂಪೂರ್ಣ ಪ್ರಾಮಾಣಿಕವೆಂದು ಹೇಳಲಾಗುವುದಿಲ್ಲ. ಆದ್ದರಿಂದ ವೇದಾಗಮಗಳ ಪ್ರಾಮಾಣ್ಯವನ್ನು ಸಿದ್ಧಗೊಳಿಸಲೋಸುಗ ಅವುಗಳ ಆವಿಷ್ಕಾರ ಮಾಡಿದವನು ಈಶ್ವರನೆಂಬುದಾಗಿ ಸ್ವೀಕರಿಸಲೇಬೇಕಾಗುತ್ತದೆ. ಇನ್ನು ಜಗತ್ತಿನಲ್ಲಿರುವ ಪ್ರಾಣಿಗಳ ಕರ್ಮಗಳನ್ನು ತಿಳಿದು ಆಯಾ ಕರ್ಮಗಳಿಗೆ ಯೋಗ್ಯವಾದ ಫಲವನ್ನು ಕೊಡಬೇಕಾದರೂ ಸರ್ವಜ್ಞನಾದ ಓರ್ವ ವ್ಯಕ್ತಿಯ ಅವಶ್ಯಕತೆಯು ಕಂಡುಬರುತ್ತದೆ. ಈ ವ್ಯವಹಾರವು ಸಂಸಾರದಲ್ಲಿಯೇ ಯಾವಜ್ಜೀವಿಗಳಿಂದಲೂ ಸಂಭವಿಸುವುದಿಲ್ಲ. ಹೀಗೆ ಇದೆಲ್ಲವನ್ನು ವಿಚಾರಿಸಿಯೇ ಈ ಆಸ್ತಿಕ ದಾರ್ಶನಿಕರು ಈಶ್ವರನನ್ನೊಪ್ಪಿಕೊಂಡು ಎಲ್ಲದರ ವ್ಯವಸ್ಥೆಯನ್ನು ಮಾಡಿರುತ್ತಾರೆ.

ಅಂತೆಯೇ ವೀರಶೈವ ಆಚಾರ್ಯರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಈಶ್ವರನನ್ನು ಜೀವಿಗಳ ಕರ್ಮನಿಯಂತ್ರಕನೆಂಬುದಾಗಿ ಹೇಳಿದ್ದಾರೆ. ಈ ಪೂರ್ವದಲ್ಲಿ ಹೇಳಿದಂತೆ ಕರ್ಮಗಳು ಜಡಗಳಾದ್ದರಿಂದ ಯಾವ ಕರ್ಮಕ್ಕೆ ಎಷ್ಟು ಫಲವನ್ನು ಕೊಡಬೇಕೆಂಬುದನ್ನು ನಿರ್ಧರಿಸಲು ಈಶ್ವರನನ್ನು ಅವಶ್ಯವಾಗಿ ಒಪ್ಪಿಕೊಳ್ಳಲೇಬೇಕಾಗುತ್ತದೆ. ವ್ಯಾವಹಾರಿಕ ಜೀವನದಲ್ಲಿ ಓರ್ವ ಅಂಗಡಿಕಾರನು ತನ್ನ ಅಂಗಡಿಯಲ್ಲಿ ಕುಳಿತುಕೊಂಡು ಹಣವನ್ನು ತಂದ ಗ್ರಾಹಕರಿಗೆ ಆ ಹಣಕ್ಕೆ ಬರುವಷ್ಟು ಅವರಿಗೆ ಬೇಕಾದ ವಸ್ತುವನ್ನು ತೂಗಿ, ಎಣಿಸಿ ಇಲ್ಲವೆ ಅಳೆದು ಕೊಡುವುದನ್ನು ನೋಡುತ್ತೇವೆ. ಇಲ್ಲಿ ಅವರು ತಂದಿರುವ ಹಣ ಹಾಗೂ ಅವರಿಗೆ ಬೇಕಾದ ವಸ್ತುಗಳ

ಮಧ್ಯದಲ್ಲಿ ಅವೆರಡನ್ನು ವಿಚಾರಿಸಿ ಕೊಡುವ ಹಾಗೂ ತೆಗೆದುಕೊಳ್ಳುವ ವ್ಯವಹಾರವನ್ನು ಮಾಡುವ ಓರ್ವ ಪ್ರಾಮಾಣಿಕ ವ್ಯಕ್ತಿಯ ಅವಶ್ಯಕತೆಯಿರುವಂತೆ ಪ್ರಾಣಿಗಳ ಕರ್ಮಗಳ ವ್ಯವಸ್ಥೆಯಲ್ಲಿಯೂ ಸಹ ಈಶ್ವರನು ಅವಶ್ಯಕನಾಗಿದ್ದಾನೆ. ಅಂತೆಯೇ ಪೂಜ್ಯರು ಅವನನ್ನು ಕರ್ಮಯಂತ್ರ ನಿಯಂತ್ರಕನೆಂಬುದಾಗಿ ಹೇಳಿದ್ದಾರೆ. ಇದೇ ವಿಷಯವನ್ನೇ ಶ್ರೀ ಬಸವಣ್ಣನವರು–

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ,
ಹರದ ಕುಳ್ಳಿರ್ದ ನಮ್ಮ ಮಹದೇವಶೆಟ್ಟಿ,
ಒಮ್ಮನವಾದರೆ ನುಡಿವನು, ಇಮ್ಮನವಾದರೆ ನುಡಿಯನು,
ಅರ್ಧಕಾಣಿಯ ಸೋಲ, ಅರ್ಧಕಾಣಿಯ ಗೆಲ್ಲ,
ಜಾಣನೋಡವ್ವ ನಮ್ಮ ಕೂಡಲಸಂಗಮದೇವ.

ಎಂಬ ತಮ್ಮ ಈ ವಚನದಲ್ಲಿ ರೂಪಕದ ಮೂಲಕ ಅದೇ ವಿಷಯವನ್ನು ಚಿತ್ರಿಸಿದ್ದನ್ನು ಕಾಣಬಹುದು. ಹೀಗೆ ಜೀವಿಗಳು ಈಶ್ವರನಿಂದ ನಿಯಂತ್ರಿಸಲ್ಪಟ್ಟ ಕರ್ಮದ ಅಧೀನರಾಗಿ ಒಂದು ಜನ್ಮದಿಂದ ಇನ್ನೊಂದು ಜನ್ಮಕ್ಕೆ, ಒಂದು ಲೋಕದಿಂದ ಮತ್ತೊಂದು ಲೋಕಕ್ಕೆ ಸಂಚರಿಸುತ್ತಿರುವ ಇವರಿಗೆ ವಿಶ್ರಾಂತಿ ಎಂಬುದೇ ಉಳಿದಿಲ್ಲ ಸ್ವರ್ಗ–ನರಕಾದಿ ಲೋಕಗಳಿಗೆ ಹೋದ ಜೀವಿಯು ತನ್ನ ಕರ್ಮದ ಫಲಗಳಾದ ಸುಖ–ದುಃಖಗಳನ್ನು ಅಲ್ಲಿ ಅನುಭವಿಸಿ ಅವಶಿಷ್ಟವಾದ ಸ್ವಲ್ಪು ಕರ್ಮವನ್ನು ತೆಗೆದುಕೊಂಡೇನೇ ಪುನಃ ಜೀವಿಯು ಭೂಲೋಕಕ್ಕೆ ಬಂದು ಕರ್ಮಾನುರೂಪವಾದ ಗರ್ಭದಲ್ಲಿ ಪ್ರವೇಶವನ್ನು ಪಡೆಯು ತ್ತಾನೆ. ಹೀಗೆ ಈ ಗರ್ಭವಾಸದ ಚಕ್ರವು ಅನಂತ ದುಃಖದಾಯಿಯಾಗಿರುತ್ತದೆ.

ಈ ಸಂಸಾರ ದುಃಖದಿಂದ ದೂರವಾಗಬೇಕೆನ್ನುವ ಅಭಿಲಾಷೆಯುಳ್ಳ ಜೀವಿಯು ಯಾವಾಗ ಸದ್ಗುರುವಿಗೆ ಶರಣಾಗತನಾಗುವನೋ, ಆಗ ಗುರುವು ಇವನಲ್ಲಿಯ ಶಕ್ತಿ ಪಾತಾದಿ ಚಿಹ್ನಗಳನ್ನು ಅರ್ಥಾತ್ ಲಕ್ಷಣಗಳನ್ನು ಪರೀಕ್ಷಿಸಿ, ವೇಧಾ ಮುಂತಾದ ದೀಕ್ಷೆಗಳನ್ನು ಅನುಗ್ರಹಿಸಿ, ಇವನನ್ನು ಆಣವಾದಿ ಮಲತ್ರಯಗಳಿಂದ ಮುಕ್ತನನ್ನಾಗಿ ಮಾಡುತ್ತಾನೆ. ಈ ಮಲಗಳಿಂದ ಮುಕ್ತನಾದ ಈ ಜೀವನು ಗುರುವಿನ ಉಪದೇಶಾ ಮೃತವನ್ನು ಶ್ರವಣ ಮಾಡುತ್ತಾ ಶಿವಾದ್ವೈತ ಜ್ಞಾನವನ್ನು ಪಡೆದು, ತನ್ನ ಸಂಕುಚಿತಗಳಾದ ಇಚ್ಛಾ–ಜ್ಞಾನಾದಿ ಶಕ್ತಿಗಳನ್ನು ವಿಕಾಸಮಾಡಿಕೊಂಡು, ತನ್ನದೇ ಆದ ಮೂಲವಾದ ಆತ್ಮಸ್ಥಿತಿಯಲ್ಲಿ ಒಯ್ಯುತ್ತಾನೆ. ಇದುವೇ ಆತ್ಮಸ್ಥಲವು, ನೀವೆಲ್ಲರೂ ಸಹ ಆತ್ಮದ ವಾಸ್ತವಿಕ ವಾದ ಅರಿವನ್ನು ಮಾಡಿಕೊಳ್ಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ನವ್ಹೆಂಬರ, ೧೯೯೪
(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಅಂತರಾತ್ಮಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಧರ್ಮಾಸಕ್ತ ಸಾಧಕರೇ ! ವಿದ್ವಾಂಸರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ವಿಭಿನ್ನ ಪ್ರಾಂತಗಳ ಸಮಸ್ತ ಸದ್ಭಕ್ತರೇ ! ಹಾಗೂ ತಾಯಂದಿರೇ ! ಶ್ರೀಕಾಶೀಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ, ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಸಹ ಮಂಗಲಮಯವಾದ ಮಾಸದಲ್ಲಿ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ, ಸದ್ಯಃ ಜ್ಞಾನಗಂಗೆಯಲ್ಲಿ ಅವಗಾಹನೆಗೈಯುತ್ತಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನುದ್ದೇಶಿಸಿ ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ಈ ಸ್ಥಲದ ಮೊದಲನೇ ಅವಾಂತರ ಸ್ಥಲವಾದ ಆತ್ಮಸ್ಥಲದ ಬಗ್ಗೆ ಕಳೆದು ಮೂರು ದಿನಗಳಿಂದ ಸವಿಸ್ತಾರವಾಗಿ ತಿಳಿದುಕೊಂಡವರಾಗಿದ್ದೀರಿ. ಸದ್ಯ ಕ್ರಮಪ್ರಾಪ್ತವಾದ, ಎರಡನೇ ಅವಾಂತರ ಸ್ಥಲವಾದ ಅಂತರಾತ್ಮ ಸ್ಥಲದ ಬಗ್ಗೆ ವಿವೇಚಿಸಲಾಗುವುದು. ಸರ್ವರೂ ಸಮಾಹಿತ ಚಿತ್ತರಾಗಿ ಆಲಿಸಿರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಅಂತರಾತ್ಮ ಸ್ಥಲವನ್ನು ಪ್ರಾರಂಭಿಸುತ್ತ–

ಯದಾ ನಿರಸ್ತಂ ಜೀವತ್ವಂ ಭವೇದ್ಗುರ್ವನುಬೋಧತಃ ।
ತದಾಂತರಾತ್ಮಭಾವೋಽಪಿ ನಿರಸ್ತಸ್ಯ ಭವೇದ್ಧ್ರುವಮ್ ॥

ದೇಹಸ್ಥಿತೋಽಪ್ಯಯಂ ಜೀವೋ ದೇಹಸಂಗವಿವರ್ಜಿತಃ ।
ಬೋಧಾತ್ಪರಾತ್ಮ ಭಾವಿತ್ವಾದಂತರಾತ್ಮೇತಿ ಕೀರ್ತಿತಃ ॥

ಆತ್ಮಾಂತರಾಲವರ್ತಿತ್ವಾಜ್ಜೀವಾತ್ಮಪರಮಾತ್ಮನೋಃ ।
ಯೋಗಾದುಭಯಧರ್ಮಾಣಾಮಂತರಾತ್ಮೇತಿ ಕೀರ್ತಿತಃ ॥

(ಸಿ.ಶಿ. ೧೮; ೧೯–೨೧)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸದ್ಗುರುವಿನ ಉಪದೇಶ ದಿಂದ ಯಾವಾಗ ಜೀವಾತ್ಮನ ಜೀವಭಾವವು ತೊರೆದು ಹೋಗುವುದೋ ಆಗ ಅವನಿಗೆ ಅಂತರಾತ್ಮಭಾವವು ಪ್ರಾಪ್ತವಾಗುವುದು. ಇವನು ದೇಹದಲ್ಲಿ ಇದ್ದರೂ ದೇಹಸಂಗದಿಂದ ಬಿಡಲ್ಪಟ್ಟವನಾಗಿರುತ್ತಾನೆ. ಇದೂ ಅಲ್ಲದೆ ಗುರುವಿನ ಬೋಧೆಯಿಂದ ತನ್ನಲ್ಲಿ ಪರಮಾತ್ಮ ಭಾವನೆಯನ್ನು ತಾಳಿಕೊಂಡಿರುತ್ತಾನೆ. ಹೀಗೆ ದೇಹದಲ್ಲಿದ್ದೂ ಜೀವಭಾವವನ್ನು ತ್ಯಜಿಸಿ ಪರಮಾತ್ಮ ಭಾವವನ್ನು ಹೊಂದಿದ ಕಾರಣದಿಂದ ಇವನಿಗೆ ಅಂತರಾತ್ಮನೆಂದು ಕರೆಯುತ್ತಾರೆ. ಇವನಿಗೆ ಅಂತರಾತ್ಮವೆನ್ನಲು ಕಾರಣವೇನೆಂದರೆ ಇವನ ಸ್ಥಿತಿಯು ಜೀವಾತ್ಮ ಹಾಗೂ ಪರಮಾತ್ಮರ ಮಧ್ಯದಲ್ಲಿ ಇರುವಂಥದಾಗಿರುತ್ತದೆ. ಅಂತೆಯೇ ಜೀವ ಧರ್ಮ, ಪರಮಾತ್ಮ ಧರ್ಮಗಳೆರಡೂ ಇವನಲ್ಲಿ ತೋರುತ್ತಿರುತ್ತವೆ. ಹೀಗೆ ಎರಡೂ ಧರ್ಮಗಳಿಗೆ ಹೊಂದಿಕೊಂಡು ಅವೆರಡರ ಅಂತರಾಲದಲ್ಲಿ ಅರ್ಥಾತ್ ಮಧ್ಯದಲ್ಲಿ ಇವನು ಇರುವುದರಿಂದ ಇವನಿಗೆ ಅಂತರಾತ್ಮಾ ಎಂಬುದಾಗಿ ಕರೆಯಲಾಗುವುದೆಂಬುದು ಪೂಜ್ಯಪಾದರ ಆಶಯವಾಗಿದೆ.

ಈ ಪೂರ್ವದಲ್ಲಿ ಹೇಳಿದಂತೆ ಆತ್ಮವು ಶುದ್ಧವೂ, ನಿರಂಜನವೂ ಆಗಿರುತ್ತದೆ. ಅದಕ್ಕೆ ಆಣವಾದಿ ಮಲಗಳ ಆವರಣವಾಗಲು ಜೀವನೆಂದು ಕರೆಯಲ್ಪಡುತ್ತದೆ. ಹೀಗೆ ಜೀವಭಾವದಿಂದ ಸಂಸಾರದಲ್ಲಿ ತಿರುಗುತ್ತಿರುವ ಈ ಜೀವಿಯು ಸದ್ಗುರುವಿಗೆ ಶರಣಾಗತನಾಗಲು ಗುರುವು ದೀಕ್ಷೆ ಹಾಗೂ ತತ್ತ್ವ ಬೋಧನೆಯ ಮೂಲಕ ಇವನ ಜೀವಭಾವವನ್ನು ಇಲ್ಲದಾಗಿಸಿ ಇವನಲ್ಲಿ ಆತ್ಮಭಾವವನ್ನು ಸ್ಥಿರಗೊಳಿಸುತ್ತಾನೆ. ಹೀಗೆ ಆತ್ಮಭಾವ ಸ್ಥಿರಗೊಂಡ ಇವನು ಪ್ರಾರಬ್ಧಕರ್ಮದ ಕ್ಷಯವಾಗುವವರೆಗೆ ದೇಹದಲ್ಲಿಯೇ ವಾಸಿಸಿ ಕರ್ಮಫಲವನ್ನು ಅನುಭವಿಸಬೇಕಾಗುತ್ತದೆ. ಹೀಗೆ ಇವನು ಕರ್ಮಫಲವನ್ನು ಅನುಭವಿಸುತ್ತಿದ್ದರೂ ಅಸಂಗಭಾವವುಳ್ಳವನಾಗಿರುವುದರಿಂದ ದೇಹದಲ್ಲಿದ್ದೂ ಸಹ ದೇಹದ ಸಂಗವಿಲ್ಲದಂತಿರುತ್ತಾನೆ.

ಇವನ ಈ ಸ್ಥಿತಿಯು ಜೀವಾತ್ಮ–ಪರಮಾತ್ಮರ ಮಧ್ಯದ ಸ್ಥಿತಿಯಾಗಿರುತ್ತದೆ. ಇವನು ಅವೆರಡೂ ಸ್ಥಿತಿಗಳನ್ನು ಅನುಭವಿಸುತ್ತಿರುತ್ತಾನೆ. ಲೌಕಿಕ ಜನರಂತೆ ಊಟ ವ್ಯವಹಾರಾದಿ ಗಳನ್ನು ಮಾಡುತ್ತಿರೋಣದರಿಂದ ಜೀವನಂತೆ ಕಂಡರೂ, ಆತ್ಮದ ಅರಿವುಳ್ಳವನಾಗಿ–ರೋಣದರಿಂದ ಪರಮಾತ್ಮರೂಪನೂ ಆಗಿರುತ್ತಾನೆ. ಈ ತೆರನಾಗಿ ಜೀವ–ಪರಮಾತ್ಮರುಭಯರ ಧರ್ಮಗಳಿಂದ ಸಂಬಂಧಿತನಾಗಿ ಅವರೀರ್ವರ ಮಧ್ಯಾವಸ್ಥೆಯಲ್ಲಿ ಇರೋಣದರಿಂದಲೇ ಇವನಿಗೆ ಅಂತರಾತ್ಮಾ ಎಂಬುದಾಗಿ ಕರೆಯಲಾಗುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಅಂತರಾತ್ಮನ ಸ್ಥಿತಿಯನ್ನೇ ಇನ್ನಷ್ಟು ಸ್ಪಷ್ಟಪಡಿಸಲೋಸುಗ ವಿಭಿನ್ನ ದೃಷ್ಟಾಂತಗಳ ಮೂಲಕವಾಗಿ–

ಅಹಂಕಾರಸ್ಥ್ಯ ಸಂಬಂಧಾನ್ಮನುಷ್ಯತ್ವಾದಿವಿಭ್ರಮಃ ।
ನ ಸ್ವಭಾವ ಇತಿ ಜ್ಞಾನದಂತರಾತ್ಮೇತಿ ಕಥ್ಯತೇ ॥

ಯಥಾ ಪದ್ಮಪಲಾಶಸ್ಯ ನ ಸಂಗೋ ವಾರಿಣಾ ಭವೇತ್ ।
ತಥಾ ದೇಹಜುಷೋಽಪ್ಯಸ್ಯ ನ ಶರೀರೇಣ ಸಂಗತಿಃ ॥

ನೀಡಸ್ಥಿತೋ ಯಥಾ ಪಕ್ಷೀ ನೀಡಾದ್ಭಿನ್ನಃ ಪ್ರದೃಶ್ಯತೇ ।
ದೇಹಸ್ಥಿತಸ್ತಥಾತ್ಮಾಯಂ ದೇಹಾದನ್ಯಃ ಪ್ರಕಾಶ್ಯತೇ ॥

(ಸಿ.ಶಿ. ೧೮; ೨೨–೨೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಜೀವಾತ್ಮನಿಗೆ ಅಹಂಕಾರದ ಸಂಬಂಧದಿಂದಾಗಿಯೇ ಅವನಿಗೆ ಮನುಷ್ಯತ್ವ–ಜೀವತ್ವಾದಿ ಭ್ರಮೆಗಳು ಉಂಟಾಗುತ್ತವೆ. ಆದರೆ ಈ ಮನುಷ್ಯತ್ವಾದಿಗಳು ಅವನಲ್ಲಿ ಸ್ವಾಭಾವಿಕವಾಗಿ ಇರುವಂಥವುಗಳು. ಈ ಪ್ರಕಾರವಾದ ಜ್ಞಾನವುಳ್ಳವನೇ ಅಂತರಾತ್ಮನೆಂದು ಕರೆಯಲ್ಪಡುತ್ತಾನೆ. ನೀರಿನಲ್ಲಿ ಉತ್ಪನ್ನವಾಗಿರುವ ಕಮಲದ ಎಲೆಗಳು ನೀರಿನೊಂದಿಗೆ ಸಂಗವನ್ನು ಪಡೆಯದೇ ಇರುವಂತೆ ಈ ಆತ್ಮನು ಶರೀರವನ್ನು ಹೊಂದಿದ್ದರೂ ಇವನಿಗೆ ಶರೀರದ ಜೊತೆಗೆ ಯಾವ ಸಂಗವೂ ಇರುವುದಿಲ್ಲ. ಗೂಡಿನೊಳಗಿರುವ ಪಕ್ಷಿಯು ಆ ಗೂಡಿಗಿಂತಲೂ ಭಿನ್ನವಾಗಿ ಇರುವಂತೆ ದೇಹದಲ್ಲಿರುವ ಆತ್ಮವು ದೇಹಕ್ಕಿಂತಲೂ ಭಿನ್ನವಾಗಿಯೇ ಪ್ರಕಾಶಿಸುತ್ತಿರುತ್ತದೆ.

ಆತ್ಮವು ಅಹಂಕಾರದೊಂದಿಗೆ ಸಂಬಂಧವನ್ನು ಪಡೆದಾಗ ಅದಕ್ಕೆ ಅಹಂ–ಮಮ ಎಂಬ ಭಾವನೆಗಳು ಮೂಡಿ ತನಗೆ ಪ್ರಾಪ್ತವಾಗಿರುವ ಮನುಷ್ಯಾದಿ ದೇಹಗಳ ಮೇಲೆ ಅಭಿಮಾನವನ್ನು ತಾಳುತ್ತದೆ. ಆದರೆ ಆತ್ಮವು ಸ್ವಾಭಾವಿಕವಾಗಿ ಮನುಷ್ಯ, ದೇವ, ರಾಕ್ಷಸ ಮತ್ತು ಯಕ್ಷಾದಿಗಳು ಇದಾವುದೂ ಅಲ್ಲ. ಅದೆಲ್ಲವೂ ಆಯಾ ಜನ್ಮಗಳ ಪ್ರಾಪ್ತಿಯಿಂದ ಉಂಟಾದ ಒಂದು ಅಭಿಮಾನಿಕ ಭ್ರಮವು. ಈ ತೆರನಾದ ಜ್ಞಾನವು ಯಾವಾಗ ಜೀವಾತ್ಮನಿಗೆ ಉಂಟಾಗುವುದೋ ಆಗ ಅವನು ಅಂತರಾತ್ಮನೆಂದು ಕರೆಯಲ್ಪಡುತ್ತಾನೆ. ಕಮಲವು ನೀರಿನಲ್ಲಿಯೇ ಜನಿಸಿದ್ದರೂ ನೀರಿನೊಂದಿಗೆ ಸಂಗವನ್ನು ಪಡೆಯದೇ ಸುಂದರವಾದ ತನ್ನತನವನ್ನು ಉಳಿಸಿಕೊಂಡಿರುತ್ತದೆ. ಒಂದು ಕಾಗದದಿಂದ ನಿರ್ಮಿಸಿದ ಕಮಲದ ಮೇಲೆ ನಾಲ್ಕಾರು ನೀರಿನ ಹನಿಗಳನ್ನು ಹಾಕಲು ಆ ಕಾಗದದ ಕಮಲವು ನೀರಿನ ಹನಿಗಳನ್ನು ತನ್ನಲ್ಲಿ ಹೀರಿಕೊಳ್ಳುವುದನ್ನು ನಾವೆಲ್ಲ ನೋಡುತ್ತೇವೆ. ಆದರೆ ವಾಸ್ತವಿಕವಾದ ಕಮಲವು ತನ್ನ ಮೇಲೆ ಅದೆಷ್ಟೇ ಜಲಬಿಂದುಗಳು ಬಿದ್ದರೂ ಅವುಗಳನ್ನು ಅದು ಗ್ರಹಿಸುವುದಿಲ್ಲ. ಅಂತೆಯೇ ಅದರ ಸುಂದರತೆಯು ಸ್ಥಿರವಾಗಿ ಇರುತ್ತದೆ. ಆದರೆ ಕಾಗದದ ಕಮಲವು ನೀರಿನ ಹನಿಗಳನ್ನು ತನ್ನೊಳಗೆ ಗ್ರಹಿಸುವುದರಿಂದ ನಾವು ನೀರಿನ ಹನಿಗಳನ್ನು ಹಾಕುತ್ತಿರುವಂತೆ ತನ್ನ ಸ್ವರೂಪವನ್ನು ಕೆಡಿಸಿಕೊಂಡು ಬಿಡುತ್ತದೆ.

ಹೀಗೆ ಅಹಂಕಾರದೊಂದಿಗೆ ಸಂಗಿಯಾದವನು ಸಂಸಾರಿಯಾಗುತ್ತಾನೆ. ಆದರೆ ಆತ್ಮ–ಅಹಂಕಾರಗಳನ್ನು ಬೇರ್ಪಡಿಸಿ ತಿಳಿದ ಜ್ಞಾನಿಯು ಅಸಂಗನೆನಿಸಿ ಅಂತರಾತ್ಮನೆಂದು ಕರೆಯಲ್ಪಡುತ್ತಾನೆ. ಈ ಅಂತರಾತ್ಮನು ಶರೀರದಲ್ಲಿದ್ದರೂ ಶರೀರದ ಅದಾವ ಧರ್ಮಗಳನ್ನು ಆರೋಪಮಾಡಿಕೊಳ್ಳದೆ ಅಶರೀರಿಯಾಗಿರುತ್ತಾನೆ. ರಾಜಾ ಜನಕನು ಜ್ಞಾನಿಯಾಗಿದ್ದರಿಂದಲೇ ತನ್ನ ರಾಜ್ಯದ ಆಗು–ಹೋಗುಗಳ ಬಗ್ಗೆ ಅವನೆಂದೂ ಚಿಂತಿಸುತ್ತಿರಲಿಲ್ಲವೆಂಬುದು ಅವನ ಅನೇಕ ಘಟನೆಗಳಿಂದ ನಮಗೆ ತಿಳಿದುಬರುತ್ತದೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಅಂತರಾತ್ಮನ ಸ್ಥಿತಿಯನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ, ಇಲ್ಲಿ ಪಕ್ಷಿ ಹಾಗೂ ಗೂಡಿನ ಉದಾಹರಣೆಯನ್ನು ಕೊಟ್ಟಿದ್ದಾರೆ.

ಗೂಡಿನೊಳಗೆ ಸದಾ ವಾಸಿಸುವ ಪಕ್ಷಿಯು ಗೂಡಿಗಿಂತಲೂ ಭಿನ್ನವಾಗಿದ್ದದ್ದು ನಮ್ಮೆಲ್ಲರಿಗೆ ಒಂದು ಸ್ಪಷ್ಟವಾದ ನಿದರ್ಶನವಾಗಿರುತ್ತದೆ. ಇದೇ ಪ್ರಕಾರವಾಗಿ ಈ ಅಂತರಾತ್ಮ ಸ್ಥಿತಿಯನ್ನು ಪಡೆದ ಶಿವಯೋಗಿಯು ತಾನು ದೇಹದಲ್ಲಿದ್ದರೂ ತನ್ನನ್ನು ದೇಹದಿಂದ ಭಿನ್ನನನ್ನಾಗಿಯೇ ಭಾವಿಸುತ್ತಾನೆ. ಹೀಗೆ ದೇಹಾದಿಗಳೊಂದಿಗೆ ತಾದಾತ್ಮ್ಯ ಭಾವನೆಯನ್ನು ಕಳೆದುಕೊಂಡಾಗಲೇನೇ ಆ ಆತ್ಮಕ್ಕೆ ಅಂತರಾತ್ಮವೆನ್ನುವರು.

ಪೂಜ್ಯಪಾದರು ಈ ಅಂತರಾತ್ಮನ ಅಸಂಗತೆಯನ್ನು ಇನ್ನಷ್ಟು ಸ್ಪಷ್ಟಪಡಿಸುತ್ತ ಪುನಃ–

ಆಚ್ಛಾದ್ಯತೇ ಯಥಾ ಚಂದ್ರೋ ಮೇಘೈರಾಸಂಗವರ್ಜಿತೈಃ ।
ತಥಾತ್ಮಾ ದೇಹಸಂಘಾತೈರಸಂಗಪರಿವೇಷ್ಟಿತಃ ॥

(ಸಿ.ಶಿ. ೧೮–೨೫)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಕಾಶದಲ್ಲಿರುವ ಚಂದ್ರನು ಅಲ್ಲಿರುವ ಮೋಡಗಳಿಂದ ಆವರಿಸಲ್ಪಟ್ಟರೂ ಆ ಮೋಡಗಳಿಗೆ ಹಾಗೂ ಚಂದ್ರನಿಗೆ ಸಾಕ್ಷಾತ್ ಸಂಬಂಧವಿರುವುದೇ ಇಲ್ಲ. ಅದೇ ಪ್ರಕಾರವಾಗಿ ಆತ್ಮವು ದೇಹಾದಿಗಳಿಂದ ಪರಿವೇಷ್ಟಿಸಲ್ಪಟ್ಟರೂ ದೇಹದೊಂದಿಗೆ ಅದರ ನೇರವಾದ ಸಂಬಂಧವು ಇರುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು.

ಪೂಜ್ಯಪಾದರು ಇಲ್ಲಿ ಉದಾಹರಿಸಿರುವ ಮೇಘ–ಚಂದ್ರರ ಉದಾಹರಣೆಯು ಆತ್ಮನ ಅಸಂಗತೆಯನ್ನು ತಿಳಿಯಪಡಿಸುವ ಒಂದು ಶ್ರೇಷ್ಠವಾದ ಉದಾಹರಣೆಯಾಗಿರುತ್ತದೆ. ಗೂಡಿನೊಳಗಿರುವ ಪಕ್ಷಿಯು ಗೂಡಿಗಿಂತಲೂ ಭಿನ್ನವಾಗಿದ್ದರೂ ಗೂಡಿನೊಂದಿಗೆ ಆ ಪಕ್ಷಿಗೆ ಸಂಯೋಗ ಸಂಬಂಧವಿರುತ್ತದೆ. ಆದ್ದರಿಂದ ಆ ಉದಾಹರಣೆಯು ಆತ್ಮನ ಅಸಂಗತೆಯನ್ನು ತಿಳಿಸಲು ಅಷ್ಟೊಂದು ಶಕ್ತವಾದ ಉದಾಹರಣೆಯಾಗಿರಲಿಲ್ಲ. ಅಂತೆಯೇ ಇಲ್ಲಿ ಮೇಘ–ಚಂದ್ರರ ಉದಾಹರಣೆಯನ್ನು ಕೊಟ್ಟು ಪುನಃ ತಿಳಿಸಲಾಗಿದೆ.

ಮೇಘಕ್ಕೂ ಚಂದ್ರನಿಗೂ ಲಕ್ಷ–ಲಕ್ಷ ಮೈಲುಗಳಷ್ಟು ಅಂತರವಿದ್ದರೂ, ಮೇಘವು ಚಂದ್ರನಿಗೆ ಸಾಕ್ಷಾತ್ ಸಂಗವಿಲ್ಲದೆ ಚಂದ್ರನನ್ನು ಆಚ್ಛಾದಿಸುವಂತೆ ಅಸಂಗನಾದ ಆತ್ಮನೊಂದಿಗೆ ಸಾಕ್ಷಾತ್ ಸಂಬಂಧವನ್ನು ಪಡೆಯುವ ಸಾಮರ್ಥ್ಯವಿರದೇ ಇದ್ದರೂ, ಶರೀರಾದಿಗಳು ಆತ್ಮವನ್ನು ಆವರಿಸುತ್ತವೆ. ಈ ರೀತಿಯಾದ ಜ್ಞಾನವುಂಟಾದ ಜೀವಾತ್ಮನೇ ಅಂತರಾತ್ಮನೆಂದು ಕರೆಯಲ್ಪಡುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಅಂತರಾತ್ಮಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ನಿರ್ಮಮೋ ನಿರಹಂಕಾರೋ ನಿರಸ್ತೋಪಾಧಿವಿಕ್ಲವಃ ।
ದೇಹಸ್ಥೋಽಪಿ ಸದಾ ಹ್ಯಾತ್ಮಾ ಶಿವಂ ಪಶ್ಯತಿ ಯೋಗತಃ ॥

ಭೋಕ್ತೃಭೋಜ್ಯ ಪರಿತ್ಯಾಗಾತ್ಪ್ರೇರಕಸ್ಯ ಪ್ರಸಾದತಃ ।
ಭೋಕ್ತೃತಾಭಾವಗಲಿತಃ ಸ್ಫುರತ್ಯಾತ್ಮಾ ಸ್ವಭಾವತಃ ॥

ಸರ್ವೇಷಾಂ ಪ್ರೇರಕತ್ವೇನ ಶಂಭುರಂತಃ ಸ್ಥಿತಃ ಸದಾ ।
ತತ್ಪರಿಜ್ಞಾನಯೋಗೇನ ಯೋಗೀ ನಂದತಿ ಮುಕ್ತವತ್ ॥

(ಸಿ.ಶಿ. ೧೮; ೨೬–೨೮)

ಹೀಗೆ ವರ್ಣಿಸಿದ್ದಾರೆ. ತಾತ್ಪರ್ಯವೇನೆಂದರೆ ದೇಹದಲ್ಲಿರುವ ಈ ಆತ್ಮನು ಅಹಂಕಾರ ಮಮಕಾರಗಳಿಲ್ಲದವನಾಗಿ, ಎಲ್ಲ ವಿಧ ಉಪಾಧಿಗಳ ಬಾಧೆಯಿಂದ ಮುಕ್ತನಾದಂಥವನಾಗಿ, ತನ್ನ ಯೋಗ ಸಾಮರ್ಥ್ಯದಿಂದ ಯಾವಾಗಲೂ ಸದಾ ಶಿವನನ್ನೇ ನೋಡುತ್ತಿರುತ್ತಾನೆ. ಅಂತರಾತ್ಮನೆಂದು ಕರೆಯಿಸಿಕೊಂಡ ಈ ಶಿವಯೋಗಿಯು ಪ್ರೇರಕನಾದ ಶಿವನ ಕೃಪೆಯಿಂದ ಭೋಕ್ತೃತಾ ಭಾವವಿಲ್ಲದವನಾಗಿ ಕೇವಲ ಸ್ವಾಭಾವಿಕವಾದ ಆತ್ಮರೂಪದಿಂದಲೇ ಪ್ರಕಾಶಿಸುತ್ತಿರುತ್ತಾನೆ. ಹೀಗೆ ಆತ್ಮಸ್ಥಿತಿಯಲ್ಲಿದ್ದ ಈ ಶಿವಯೋಗಿಯು, ಪರಮಾತ್ಮನು ಎಲ್ಲರ ಹೃದಯದಲ್ಲಿದ್ದು ಪ್ರೇರಕನಾಗಿರುತ್ತಾನೆಂಬುದನ್ನು ತಿಳಿದುಕೊಂಡವನಾಗಿ, ಸರ್ವದರ ಅಭಿಮಾನವನ್ನು ತ್ಯಜಿಸಿ, ಮುಕ್ತನಂತೆ ಸದಾ ಆನಂದವನ್ನನುಭವಿಸುತ್ತಿರುತ್ತಾನೆ.

ಜೀವಾತ್ಮನಲ್ಲಿರುವ ಅಹಂಕಾರ, ಮಮಕಾರ ಮತ್ತು ಭೋಕ್ತೃ ರೂಪಗಳಾದ ಭಾವನೆಗಳು ಅವನನ್ನು ಸಂಗಿಯನ್ನಾಗಿಯೂ ಮತ್ತು ಸಂಸಾರಿಯನ್ನಾಗಿಯೂ ಮಾಡುತ್ತವೆ. ಯಾವಾತನಲ್ಲಿ ಈ ಭಾವನೆಗಳು ಇಲ್ಲದಾಗಿ ಹೋಗುತ್ತವೆಯೋ ಅವನು ದೇಹಾದಿಗಳಲ್ಲಿದ್ದರೂ, ಅವುಗಳ ಮೇಲಿನ ಅಭಿಮಾನಾದಿಗಳಿಲ್ಲದ ಕಾರಣ ನಿಸ್ಸಂಗಿಯಾಗಿ ಮುಕ್ತನೆನಿಸುತ್ತಾನೆ. ಹೀಗೆ ದೇಹದಲ್ಲಿದ್ದೂ ದೇಹದ ಧರ್ಮಗಳಿಗೆ ಒಳಪಡದೇ ಇರುವ, ಸದಾ ಆನಂದವಾಗಿರುವ ಆತ್ಮನಿಗೇನೇ ಅಂತರಾತ್ಮನೆಂಬುದಾಗಿ ಕರೆಯಲಾಗುತ್ತಿದೆ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ನವ್ಹಂಬರ, ೧೯೯೪

(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಪರಮಾತ್ಮಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ಸಾಧಕರೇ ! ವಿದ್ವಾಂಸರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ವಿಭಿನ್ನ ಪ್ರಾಂತಗಳ ಸಮಸ್ತಸದ್ಭಕ್ತರೇ ! ಹಾಗೂ ತಾಯಂದಿರೇ ! ಶ್ರೀ ಕಾಶೀ ಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ, ಕಾರ್ತಿಕಮಾಸದ ನಿಮಿತ್ತವಾಗಿ ಶ್ರೀ ಮಹಾಸನ್ನಿಧಿಯ ಶಿವ ಪೂಜಾನುಷ್ಠಾನ ಮತ್ತು ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಪಾಪನಾಶಿನಿಯಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ ಸದ್ಯಃ ಜ್ಞಾನಗಂಗೆಯಲ್ಲಿ ಅವಗಾಹನೆಗೈಯ್ಯುತ್ತಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆಯ ದಿನ ಇದರ ದ್ವಿತೀಯ ಅವಾಂತರ ಸ್ಥಲವಾದ ಅಂತರಾತ್ಮಸ್ಥಲದ ಬಗ್ಗೆ ಸಾಕಷ್ಟು ತಿಳಿದುಕೊಂಡವರಾಗಿದ್ದೀರಿ.

ಆದರೆ ಪೂಜ್ಯಪಾದರು ನಿನ್ನೆ ಅಂತರಾತ್ಮ ಸ್ಥಿತಿಯನ್ನು ವಿವರಿಸುವಾಗ, ಗೂಡಿ ನೊಳಗಿನ ಪಕ್ಷಿಯ ಉದಾಹರಣೆಯನ್ನು ಕೊಟ್ಟು, ಆತ್ಮನ ಅಸಂಗತಿಯ ಬಗ್ಗೆ ಪ್ರತಿಪಾದಿಸಿದ್ದನ್ನು ಕೇಳಿದ್ದೀರಿ. ಒಂದು ಪಕ್ಷಿಯು ಗೂಡಿನೊಳಗಿದ್ದರೆ, ಇನ್ನೊಂದು ಪಕ್ಷಿಯು ಪಂಜರದೊಳಗಿರುತ್ತದೆ. ಕೆಲವು ಜನರು ತಮ್ಮ ಮನೋವಿನೋದಕ್ಕಾಗಿ ಗಿಳಿ ಮುಂತಾದ ಪಕ್ಷಿಗಳನ್ನು ಪಂಜರದೊಳಗಿಟ್ಟು ಅವುಗಳಿಗೆ ಹಣ್ಣು ನೀರುಗಳನ್ನು ಕೊಟ್ಟು ಸಲುಹುತ್ತಿರುತ್ತಾರೆ. ಗೂಡಿನ ಪಕ್ಷಿಯು ಸ್ವತಂತ್ರವಾಗಿದ್ದರೆ, ಪಂಜರದ ಪಕ್ಷಿಯು ಪರತಂತ್ರವಾಗಿರುತ್ತದೆ. ಪಂಜರದೊಳಗೆ ಇದ್ದೂ, ಇದ್ದೂ ಆ ಪಕ್ಷಿಯು ತನ್ನ ಗಗನ ವಿಹಾರವನ್ನು ಮರೆತುಬಿಟ್ಟಿರುತ್ತದೆ. ಯಾರಾದರೂ ಪಂಜರದ ಪಕ್ಷಿಯನ್ನು ಹೊರ ತೆಗೆದರೆ ಅದು ಗಾಬರಿಗೊಂಡು ಪುನಃ ಪಂಜರವನ್ನೇ ಪ್ರವೇಶಿಸುತ್ತದೆ. ಸಾಂಸಾರಿಕ ಜೀವಿಯೂ ಸಹ ಈ ಪಂಜರದ ಪಕ್ಷಿ ಇದ್ದಂತೆ. ತನ್ನ ಮನೆಯನ್ನು ಬಿಟ್ಟು ಹೊರಹೋಗಲು ಸದಾ ಹೆದರುತ್ತಲೇ ಇರುತ್ತಾನೆ. ಹೊರಗೆ ತನ್ನ ಅಸುರಕ್ಷತೆಯನ್ನು ಭಾವಿಸುವ ಈತನು, ಮನೆಯೊಳಗೆ ಬಂದೊಡನೆ ಸುರಕ್ಷತೆಯ ಅನುಭವವನ್ನು ಪಡೆಯುತ್ತಾನೆ. ಇವನಲ್ಲಿರುವ ಮನೆ, ಮಡದಿ ಮತ್ತು ಸುತಾದಿಗಳ ಮೇಲಿನ ಮಮತ್ವ ಭಾವನೆಯೇ ಇವನನ್ನು ಪುನಃ ಪುನಃ ಸಂಸಾರದಲ್ಲಿ ತಿರುಗಿಸುತ್ತಿರುತ್ತದೆ. ಆದರೆ ಅಂತರಾತ್ಮಸ್ಥಲದ ಸಾಧಕನು ನೀಡದೊಳಗಿನ ಅರ್ಥಾತ್ ಗೂಡಿನೊಳಗಿನ

ಪಕ್ಷಿಯಿದ್ದಂತೆ. ಕೆಲಕಾಲ ಗೂಡಿನೊಳಗಿರುವ ಆ ಪಕ್ಷಿಯು ಸ್ವತಂತ್ರವಾಗಿ ಆಕಾಶದಲ್ಲೆಲ್ಲ ವಿಹರಿಸಿ ಗೂಡಿನ ಹೊರಗೂ ಸಹ ಕಾಲವನ್ನು ಕಳೆಯುತ್ತಿರುತ್ತದೆ. ಅದರಂತೆ ಅಂತರಾತ್ಮ ಸ್ಥಲದ ಶಿವಯೋಗಿಯು ಕೆಲಕಾಲ ದೇಹದೊಂದಿಗೆ ವ್ಯವಹರಿಸಿದರೂ ಅದರ ಬಗ್ಗೆ ಅತ್ಯಾಸಕ್ತಿಯನ್ನು ವಹಿಸದೆ ಕೆಲಕಾಲ ಆತ್ಮನಿಷ್ಠನಾಗಿಯೂ ಕಾಲಕಳೆಯುತ್ತಿರುತ್ತಾನೆ. ಹೀಗೆ ದೇಹದೊಳಗಿದ್ದು ಇಲ್ಲದಂತಿರುವ ಶಿವಯೋಗಿಯೇ ಅಂತರಾತ್ಮನೆಂದು ಕರೆಯಿಸಿ ಕೊಳ್ಳುತ್ತಾನೆ.

ಈ ಅಂತರಾತ್ಮಸ್ಥಲದ ಶಿವಯೋಗಿಯೇ ಮುಂದಿನದಾದ ಪರಮಾತ್ಮಸ್ಥಲವನ್ನು ಪಡೆದುಕೊಳ್ಳುತ್ತಾನೆ. ಆ ಪರಮಾತ್ಮಸ್ಥಲವನ್ನು ಕುರಿತು ಪೂಜ್ಯಪಾದರು–

ನಿರ್ಧೂತೇ ತತ್ವಬೋಧೇನ ಮಲೇ ಸಂಸಾರ ಕಾರಣೇ ।
ಸಾಮರಸ್ಯಾತ್ಪರಾತ್ಮಸ್ಥಾತ್ಪರಮಾತ್ಮಾಯಮುಚ್ಯತೇ ॥

(ಸಿ. ಶಿ. ೧೮–೨೯)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಪೂರ್ವದಲ್ಲಿ ಹೇಳಲ್ಪಟ್ಟ ಅಂತರಾತ್ಮನು ಶಿವಾದ್ವೈತಜ್ಞಾನವನ್ನು ಪಡೆದುಕೊಂಡು ಸಂಸಾರಕ್ಕೆ ಕಾರಣೀಭೂತವಾದ ಮಲವನ್ನು ಅರ್ಥಾತ್ ಅಜ್ಞಾನವನ್ನು ದೂರಮಾಡಿಕೊಂಡು ಆ ಪರಾತ್ಪರ ಪರಮಾತ್ಮ ನೊಂದಿಗೆ ಯಾವಾಗ ಸಾಮರಸ್ಯ ಸ್ಥಿತಿಯನ್ನು ಪಡೆದುಕೊಳ್ಳುವನೋ ಆಗ ಅವನಿಗೆ ಪರಮಾತ್ಮ ಎಂದು ಕರೆಯಲಾಗುತ್ತದೆ.

ಕೈವಲ್ಯೋಪನಿಷತ್ತಿನಲ್ಲಿ ಈ ಪರಮಾತ್ಮಸ್ವರೂಪವನ್ನು ಕುರಿತು–

ಏವಂ ವಿದಿತ್ವಾ ಪರಮಾತ್ಮರೂಪಂ ಗುಹಾಶಯಂ
ನಿಷ್ಕಲಮದ್ವಿತೀಯಮ್ । ಸಮಸ್ತಸಾಕ್ಷಿಂ ಸದಸದ್ವಿಹೀನಂ
ಪ್ರಯಾತಿ ಶುದ್ಧಂ ಪರಮಾತ್ಮ ರೂಪಮ್ ॥

ಹೀಗೆ ಹೇಳಲಾಗಿದೆ. ತಾತ್ಪರ್ಯವೇನೆಂದರೆ, ಹೃದಯ ಗುಹೆಯಲ್ಲಿ ಇರುವ, ದೋಷ ರಹಿತವಾದ, ಅದ್ವಿತೀಯವಾದ ಎಲ್ಲದಕ್ಕೂ ಸಾಕ್ಷೀಸ್ವರೂಪವಾದ, ಸದಸದ್ವಿಹೀನವಾದ ಮತ್ತು ಶುದ್ಧವಾದ ಪರಮಾತ್ಮ ರೂಪವನ್ನು ತಿಳಿದು ಪರಮಾತ್ಮ ರೂಪವೇ ಆಗುತ್ತಾನೆ.

ಈ ಪೂರ್ವದಲ್ಲಿ ಹೇಳಿದ ಅಂತರಾತ್ಮಸ್ಥಲದ ಶಿವಯೋಗಿಯು ಪರಮಾತ್ಮ ಸ್ವರೂಪವನ್ನು ತಿಳಿದುಕೊಂಡು ಯಾವಾಗ ಅದನ್ನೇ ಚಿಂತಿಸತೊಡಗುವನೋ ಆಗ ಅವನು ಕೀಟ–ಭ್ರಮರನ್ಯಾಯದಂತೆ ಪರಮಾತ್ಮ ರೂಪವೇ ಆಗಿರುತ್ತಾನೆ. ಪರಮಾತ್ಮ ನೆಂದರೆ ಸರ್ವೋತ್ಕೃಷ್ಟವಾದ ಆತ್ಮ ತತ್ತ್ವವೆಂದರ್ಥ. ಅದುವೇ ಪರಶಿವರೂಪವು. ಜೀವಾತ್ಮನು ಮೂಲತಃ ಪರಮಾತ್ಮ ಸ್ವರೂಪನಾಗಿದ್ದರೂ, ಆಣವಾದಿ ಮಲಗಳ ಆವರಣದಿಂದ ಅಂಶರೂಪನಾದ ಜೀವಭಾವವನ್ನು ತಾಳಿ, ಈ ಸಂಸಾರದಲ್ಲಿ ಸಂಚರಿಸುತ್ತಿರುತ್ತಾನೆ. ಯಾವಾಗ ಇವನಿಗೆ ಗುರುವಿನಿಂದ ಶಿವಾದ್ವೈತ ತತ್ತ್ವಬೋಧೆ ಯುಂಟಾಗುವುದೋ ಆಗ ಇವನು ತನ್ನ ಮಲಾವೃತ ರೂಪವನ್ನು ಬಿಟ್ಟು ಪರಮಾತ್ಮ ಸ್ವರೂಪವನ್ನು ಪಡೆದುಕೊಳ್ಳುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಆ ಪರಮಾತ್ಮಸ್ವರೂಪವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತ–

> ಸರ್ವೇಷಾಮಾತ್ಮ ಭೇದಾನಾಮುತ್ಕೃಷ್ಟತ್ವಾತ್ಸ್ವತೇಜಸಾ ।
> ಪರಮಾತ್ಮಾ ಶಿವಃ ಪ್ರೋಕ್ತಃ ಸರ್ವಗೋಽಪಿ ಪ್ರಕಾಶವಾನ್ ॥
>
> ಬ್ರಹ್ಮಾಂಡಬುದ್ಬುದಸ್ತೋಮಾ ಯಸ್ಯಮಾಯಾಮಹೋದಧೌ ।
> ಉನ್ಮಜ್ಜಂತಿ ನಿಮಜ್ಜಂತಿ ಪರಮಾತ್ಮಾ ಸ ಉಚ್ಯತೇ ॥
>
> ಯಸ್ಮಿನ್ ಜ್ಯೋತಿರ್ಗಣಾಃ ಸರ್ವೇ ಸ್ಫುಲಿಂಗಾ ಇವ ಪಾವಕಾತ್ ।
> ಉತ್ಪತ್ಯವಿಲಯಂ ಯಾಂತಿ ತದ್ರೂಪಂ ಪರಮಾತ್ಮನಃ ॥
>
> ಯಸ್ಮಿನ್ ಸಮಸ್ತವಸ್ತೂನಿ ಕಲ್ಲೋಲಾ ಇವ ವಾರಿಧೌ ।
> ಸಂಭೂಯ ಲಯಮಾಯಾಂತಿ ತದ್ರೂಪಂ ಪರಮಾತ್ಮನಃ ॥
>
> (ಸಿ. ಶಿ. ೧೮; ೩೦–೩೩)

ಈ ರೀತಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ತೇಜಸ್ಸಿನಿಂದ ಸರ್ವತ್ರ ಪ್ರಕಾಶಿಸುವ ಶಿವನು ಉಳಿದೆಲ್ಲ ಆತ್ಮಗಳಿಗಿಂತಲೂ ಉತ್ಕೃಷ್ಟನಾಗಿರೋಣದರಿಂದ ಅವನಿಗೆ ಪರಮಾತ್ಮನೆಂದು ಕರೆಯುತ್ತಾರೆ. ಯಾರ ಮಾಯೆಯೆಂಬ ಸಮುದ್ರದಲ್ಲಿ ಸಮಸ್ತಬ್ರಹ್ಮಾಂಡಗಳೆಂಬ ಬುದ್ಬುದಗಳ ಅರ್ಥಾತ್ ಗುರುಳೆಗಳ ಸಮೂಹವು ಉತ್ಪನ್ನವಾಗುವುದೋ ಮತ್ತು ಕೊನೆಗೆ ಒಡೆದು ಹೋಗುವುದೋ ಅರ್ಥಾತ್ ಅನಂತಕೋಟಿ ಬ್ರಹ್ಮಾಂಡಗಳು ಯಾವುದರಲ್ಲಿ ಉತ್ಪನ್ನವಾಗಿ ಕೊನೆಗೆ ಎಲ್ಲಿ ಲಯಗೊಳ್ಳುವವೋ ಅದುವೇ 'ಪರಮಾತ್ಮ'ವೆಂದು ಕರೆಯಲ್ಪಡುತ್ತದೆ. ಇದೇ ಪ್ರಕಾರವಾಗಿ ಅಗ್ನಿಯಿಂದ ಸಣ್ಣ ಸಣ್ಣ ಕಿಡಿಗಳು ಉತ್ಪನ್ನವಾಗಿ ವಿಲಯವಾಗುವಂತೆ ಯಾವ ಪರಮತತ್ತ್ವದಲ್ಲಿ ಸಕಲಜೀವಿಗಳೆಂಬ ತೇಜಸ್ಸಮೂಹವು ಪ್ರಾದುರ್ಭವಿಸಿ ಪುನಃ ಎಲ್ಲಿ ವಿಲಯವನ್ನು ಹೊಂದುವುದೋ ಅದುವೇ ಪರಮಾತ್ಮಸ್ವರೂಪವು. ಸಮುದ್ರದಲ್ಲಿ ತರಂಗಗಳು ಎದ್ದು ಪುನಃ ಅಲ್ಲಿಯೇ ವಿಲಯವಾಗುವಂತೆ ಯಾವುದರಲ್ಲಿ ಭೂಮ್ಯಾದಿ ಸಮಸ್ತ ತತ್ತ್ವಗಳು ಉತ್ಪನ್ನವಾಗಿ ಕೊನೆಗೆ ಎಲ್ಲಿ ಲಯವನ್ನು ಹೊಂದುವವೋ, ಅದುವೇ ಪರಮಾತ್ಮವೆಂಬುದಾಗಿ ತಿಳಿದುಕೊಳ್ಳಬೇಕೆಂದು ಪೂಜ್ಯರು ಅಪ್ಪಣೆಯನ್ನು ಕೊಟ್ಟಿದ್ದಾರೆ.

ಈ ಜಗತ್ತಿನಲ್ಲಿ ಅನೇಕ ಜೀವಾತ್ಮರು ಒಂದೊಂದು ಶರೀರವನ್ನು ಆಶ್ರಯಿಸಿ ವಿಭಿನ್ನ ವ್ಯವಹಾರಗಳನ್ನು ಮಾಡುತ್ತಿರುತ್ತಾರೆ. ಈ ಎಲ್ಲ ಸಾಮಾನ್ಯ ಆತ್ಮರಿಗಿಂತಲೂ ತೇಜಸ್ಸಿನಿಂದ ಉತ್ಕೃಷ್ಟವಾಗಿ ತೋರುವ ಆತ್ಮಕ್ಕೇನೇ ಪರಮಾತ್ಮನೆಂಬುದಾಗಿ ಪೂಜ್ಯಪಾದರು ಪ್ರತಿಪಾದಿಸಿದ್ದಾರೆ. ಇಲ್ಲಿರುವ ಅಸಂಖ್ಯ ಮನುಷ್ಯಾದಿ ಜೀವಿಗಳ ಬಾಹ್ಯ ಶರೀರಾದಿಗಳು ನೋಡಲಿಕ್ಕೆ ಸಮಾನವಾಗಿ ಕಂಡರೂ, ಒಂದೊಂದು ಆತ್ಮಗಳಲ್ಲಿ ಒಂದೊಂದು ವೈಶಿಷ್ಟ್ಯವು ತೋರಿಬರುತ್ತದೆ. ಒಂದೇ ಜಾತಿಯ ಜೀವಿಗಳಲ್ಲಿಯೂ ಸಹ ತರತಮ ಭಾವಗಳನ್ನು ಕಾಣುತ್ತೇವೆ. ಒಬ್ಬನು ತನ್ನ ಜ್ಞಾನ–ಶೀಲ–ತಪಸ್ಸ್ಯಾದಿಗಳಿಂದ ಉತ್ಕೃಷ್ಟನಾಗಿ ಕಂಡರೆ ಇನ್ನೊಬ್ಬನು ತನ್ನ ಆಲಸ್ಯ ಅಜ್ಞಾನಾದಿಗಳ ಮೂಲಕವಾಗಿ ನಿಕೃಷ್ಟನಾಗಿ ತೋರುತ್ತಿರುತ್ತಾನೆ. ಇದಕ್ಕೆಲ್ಲ ಕಾರಣವೇನೆಂದರೆ ಆಯಾ ದೇಹದಲ್ಲಿರುವ ಆತ್ಮವು ಪರಮಾತ್ಮನ ಸಂಬಂಧದಿಂದ ಪ್ರಾಪ್ತಿಮಾಡಿಕೊಂಡ ತೇಜಸ್ಸೇ ಕಾರಣವಾಗಿರುತ್ತದೆ.

ಅಂದರೆ ಸಾಮಾನ್ಯ ಆತ್ಮವೂ ಸಹ ಪರಮಾತ್ಮನಲ್ಲಿ ಗುಣ ಸ್ವಭಾವಾದಿಗಳನ್ನು ತನ್ನಲ್ಲಿ ಅಳವಡಿಸಿಕೊಂಡಾಗ ಅವನು ಲೋಕದಲ್ಲಿ ಪರಮಾತ್ಮನಂತೆ ಪೂಜ್ಯತೆಯನ್ನು ಪಡೆಯುತ್ತಾನೆ.

ಶ್ರೀ ಮದ್ಭಗವದ್ಗೀತೆಯ ವಿಭೂತಿಯೋಗದಲ್ಲಿ–
ಮದ್ ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವವಾ ।
ತತ್ತದೇವಾವಗಚ್ಛತ್ವಂ ಮಮತೇಜೋಽಂಶಸಂಭವಮ್ ॥

ಎಂಬುದಾಗಿ ಭಗವಂತನು ಹೇಳಿ ಯಾವ ಯಾವ ವಸ್ತುಗಳಲ್ಲಿ ಹಾಗೂ ವ್ಯಕ್ತಿಗಳಲ್ಲಿ ಯಾವುದು ಎಲ್ಲಕ್ಕಿಂತಲೂ ವಿಲಕ್ಷಣವಾಗಿ ಎದ್ದು ತೋರುವುದೋ ಅದೆಲ್ಲವೂ ನನ್ನದೇ ಆದ ವಿಶೇಷ ಅಂಶವೆಂಬುದಾಗಿ ತಿಳಿದುಕೊಳ್ಳಬೇಕೆಂದು ಅಪ್ಪಣೆ ಕೊಟ್ಟಿದ್ದಾನೆ.

ಈ ಸಂದರ್ಭದಲ್ಲಿ ಭಗವಂತನು ''ಎಲ್ಲ ದೇಹಗಳಲ್ಲಿ ಆತ್ಮನಾಗಿ, ದ್ವಾದಶ ಆದಿತ್ಯರಲ್ಲಿ ಸೂರ್ಯನಾಗಿ, ನಕ್ಷತ್ರಗಳಲ್ಲಿ ಶಶಿಯಾಗಿ, ವೇದಗಳಲ್ಲಿ ಸಾಮವೇದವಾಗಿ, ಇಂದ್ರಿಯಗಳಲ್ಲಿ ಮನಸ್ಸಾಗಿ, ಏಕಾದಶ ರುದ್ರರಲ್ಲಿ ಶಂಕರನಾಗಿ, ಯಕ್ಷ–ರಾಕ್ಷಸರಲ್ಲಿ ಕುಬೇರನಾಗಿ, ಪುರೋಹಿತರಲ್ಲಿ ಬೃಹಸ್ಪತಿಯಾಗಿ, ಸೇನಾಪತಿಗಳಲ್ಲಿ ಸ್ಕಂದನಾಗಿ, ಸರೋವರಗಳಲ್ಲಿ ಸಾಗರನಾಗಿ, ಮಹರ್ಷಿಗಳಲ್ಲಿ ಭೃಗುವಾಗಿ, ಅಕ್ಷರಗಳಲ್ಲಿ ಪ್ರಣವ ವಾಗಿ, ಯಜ್ಞಗಳಲ್ಲಿ ಜಪಯಜ್ಞವಾಗಿ, ಪರ್ವತಗಳಲ್ಲಿ ಹಿಮಾಲಯವಾಗಿ, ವೃಕ್ಷಗಳಲ್ಲಿ ಅಶ್ವತ್ಥವಾಗಿ ಅರ್ಥಾತ್ ಅರಳೀಗಿಡವಾಗಿ, ದೇವರ್ಷಿಗಳಲ್ಲಿ ನಾರದನಾಗಿ, ಗಂಧರ್ವ ರಲ್ಲಿ 'ಚಿತ್ರರಸ'ನಾಗಿ, ಸಿದ್ಧರಲ್ಲಿ ಕಪಿಲಮುನಿಯಾಗಿ, ಅಶ್ವಗಳಲ್ಲಿ ಉಚ್ಚೈಶ್ರವವಾಗಿ, ಗಜೇಂದ್ರಗಳಲ್ಲಿ ಐರಾವತವಾಗಿ, ಮನುಷ್ಯರಲ್ಲಿ ರಾಜನಾಗಿ, ಆಯುಧಗಳಲ್ಲಿ ವಜ್ರವಾಗಿ, ಗೋವುಗಳಲ್ಲಿ ಕಾಮಧೇನುವಾಗಿ, ಆಕರ್ಷಣೆಯಲ್ಲಿ ಕಂದರ್ಪನಾಗಿ, ಸರ್ಪ ಗಳಲ್ಲಿ ವಾಸುಕಿಯಾಗಿ, ದೈತ್ಯರಲ್ಲಿ ಪ್ರಹ್ಲಾದನಾಗಿ, ಗಣಕರಲ್ಲಿ ಕಾಲನಾಗಿ, ಮೃಗಗಳಲ್ಲಿ ಸಿಂಹವಾಗಿ, ಪಕ್ಷಿಗಳಲ್ಲಿ ಗರುಡವಾಗಿ, ಪವಿತ್ರಗೊಳಿಸುವುದರಲ್ಲಿ ಪವನವಾಗಿ, ಶಸ್ತ್ರ ಧಾರಿಗಳಲ್ಲಿ ರಾಮನಾಗಿ, ಮತ್ಸ್ಯಗಳಲ್ಲಿ ಮಕರನಾಗಿ, ನದಿಗಳಲ್ಲಿ ಗಂಗೆಯಾಗಿ, ವಿದ್ಯೆ ಗಳಲ್ಲಿ ಆಧ್ಯಾತ್ಮವಾಗಿ, ಅಕ್ಷರಗಳಲ್ಲಿ ಅಕಾರವಾಗಿ, ಸಮಾಸಗಳಲ್ಲಿ ದ್ವಂದ್ವ ಸಮಾಸ ವಾಗಿ, ಸರ್ವರನ್ನು ಸಂಹರಿಸುವವರಲ್ಲಿ ಮೃತ್ಯುದೇವತೆಯಾಗಿ, ಸ್ತ್ರೀಯರಲ್ಲಿ ಶ್ರೀಯಾಗಿ, ಛಂದಸ್ಸುಗಳಲ್ಲಿ ಗಾಯತ್ರಿಯಾಗಿ, ಮಾಸಗಳಲ್ಲಿ ಮಾರ್ಗಶೀರ್ಷವಾಗಿ, ಋತುಗಳಲ್ಲಿ ವಸಂತವಾಗಿ, ತೇಜಸ್ವಿಗಳಲ್ಲಿ ತೇಜಸ್ಸಾಗಿ, ವೃಷ್ಣಿವಂಶಜರಲ್ಲಿ ವಾಸುದೇವನಾಗಿ, ಪಾಂಡವರಲ್ಲಿ ಧನಂಜಯನಾಗಿ, ಮುನಿಗಳಲ್ಲಿ ವ್ಯಾಸನಾಗಿ ಮತ್ತು ಜ್ಞಾನಿಗಳಲ್ಲಿ ಜ್ಞಾನ ವಾಗಿ ನಾನೇ ಇದ್ದೇನೆ ಎಂಬುದಾಗಿ ಹೇಳಿ ತನ್ನ ವಿಶೇಷ ಅಂಶವಾದ ವಿಭೂತಿಯನ್ನು ಅರ್ಥಾತ್ ಐಶ್ವರ್ಯವನ್ನು ಪ್ರತಿಪಾದಿಸಿದ್ದಾನೆ.

ಇಲ್ಲಿ ಯಾವ ಯಾವುದನ್ನು ತನ್ನ ವಿಶೇಷಾಂಶವೆಂದು ಪರಮಾತ್ಮನು ಹೇಳಿ ದ್ದಾನೆಯೋ ಅವೆಲ್ಲವುಗಳಲ್ಲಿ ಲೋಕಕಲ್ಯಾಣಕ್ಷಮತೆಯು ಎದ್ದುಕಾಣುತ್ತದೆ. ಅಂದರೆ ಔದಾರ್ಯಾದಿ ಗುಣಗಳು ಎಲ್ಲಿ ಇರುತ್ತವೆಯೋ ಅಲ್ಲಿ ದೇವರ ವಿಶೇಷಾಂಶ ವಿದೆಯೆಂದು ತಿಳಿದುಕೊಳ್ಳಬೇಕು. ಅಂದರೆ ಅನ್ಯರಿಗೆ ಯಾವಾಗಲೂ ಕೊಡುವ ವಿಚಾರವು ದೇವತ್ವದ ಪ್ರತೀಕವಾದರೆ ಸದಾ ಅನ್ಯರಿಂದ ಪಡೆದುಕೊಳ್ಳುವುದು

ಜೀವತ್ವದ ಸಂಕೇತವಾಗಿರುತ್ತದೆ. ಅರ್ಥಾತ್ ಕೊಡುವವನು ದೇವನು, ತೆಗೆದು ಕೊಳ್ಳುವವನು ಜೀವನೆಂಬುದಾಗಿ ಭಾವಿಸಬೇಕು.

ಸದಾ ತೆಗೆದುಕೊಳ್ಳುವ ಸ್ವಭಾವದ ಜೀವನು ಯಾವಾಗ ಅನ್ಯರಿಗೆ ಕೊಡುವ ಭಾವನೆಯುಳ್ಳವನಾಗುವನೋ ಆಗಲೇ ಅವನಲ್ಲಿ ದೇವತ್ವದ ದಿವ್ಯಗುಣಗಳು ಬಂದಿವೆ ಯೆಂಬುದಾಗಿ ಭಾವಿಸಬೇಕು. ಮಹಾರಾಷ್ಟ್ರದ ಓರ್ವ ಸಂತನು ದಾತೃತ್ವ ರೂಪವಾದ ಔದಾರ್ಯ ಗುಣವನ್ನುದ್ದೇಶಿಸಿ–

ದೇಣಾರ್ಯಾನಿ ದೇತ ರಹಾವೇ
ಘೇಣಾರ್ಯಾನಿ ಕ್ಷೀತ ರಹಾವೇ
ಘೇತಾ ಘೇತಾ ಏಕ ದಿವಸ ದೇಣಾರ್ಯಾಂಚೀ ಹಾತ ಘ್ಯಾವೇ ।

ಈ ರೀತಿಯಾಗಿ ಹೇಳಿದ್ದಾನೆ. ತಾತ್ಪರ್ಯವೇನೆಂದರೆ, ಕೊಡುವವನು ಯಾವಾಗಲೂ ಕೊಡುತ್ತಲೇ ಇರಬೇಕು, ತೆಗೆದುಕೊಳ್ಳುವವನು ಯಾವಾಗಲೂ ತೆಗೆದುಕೊಳ್ಳುತ್ತಲೇ ಇರಬೇಕು. ತೆಗೆದುಕೊಳ್ಳುತ್ತ ತೆಗೆದುಕೊಳ್ಳುತ್ತ ಒಂದು ದಿನ ಆತನು ಕೊಡುವವನ ಕೈಯ್ಯನ್ನೇ ತೆಗೆದುಕೊಳ್ಳಬೇಕು. ಅಂದರೆ ಕೊಡುವವನಲ್ಲಿಯ ದಾತೃತ್ವವನ್ನು ಅರ್ಥಾತ್ ದಾನಗುಣವನ್ನು ಸಹ ತೆಗೆದುಕೊಳ್ಳಬೇಕು. ಒಟ್ಟಿನಲ್ಲಿ ದಾತೃತ್ವವು ದೇವತ್ವದ ಪ್ರತೀಕವಾದುದರಿಂದ ಆ ಗುಣವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ವ್ಯಕ್ತಿಯು ಎಲ್ಲರಿಗಿಂತಲೂ ವಿಲಕ್ಷಣವಾಗಿ ತೋರಿ ಶಿವನ ವಿಶೇಷಾಂಶನೆನಿಸಿಕೊಳ್ಳುವನು. ಕ್ರಮವಾಗಿ ಇವನಲ್ಲಿ ಶಿವನ ಉತ್ಕೃಷ್ಟಗುಣಗಳು ಅಳವಡುತ್ತ ಹೋಗಲು ಕೊನೆಗೊಂದು ದಿನ ಅವನು ಪರಮಾತ್ಮನೆನಿಸಿಕೊಳ್ಳುವನು.

ಪರಮಾತ್ಮನೆಂದರೆ ಬಹುದೊಡ್ಡದಾದ ಆತ್ಮವೆಂದರ್ಥ. ಅದರ ದೊಡ್ಡತನವನ್ನು ತಿಳಿಸುತ್ತ ಪೂಜ್ಯಪಾದರು ಅದನ್ನೊಂದು ಮಹಾಸಾಗರಕ್ಕೆ ಹೋಲಿಸಿದ್ದನ್ನಿಲ್ಲಿ ಕಾಣಬಹುದು. ಸಮುದ್ರದಲ್ಲಿ ಅನೇಕ ನೊರೆ, ತೆರೆ ಮತ್ತು ಗುರುಳೆಗಳು ಉತ್ಪನ್ನವಾಗಿ ಪುನಃ ಅಲ್ಲಿಯೇ ವಿಲಯಗೊಳ್ಳುವಂತೆ, ಅನಂತ ಭುವನ ಬ್ರಹ್ಮಾಂಡಗಳೆಂಬ ನೊರೆ–ತೆರೆಗಳು ಯಾರ ಮಾಯಾರೂಪೀ ಮಹಾಸಾಗರದಲ್ಲಿ ಉತ್ಪನ್ನವಾಗಿ ವಿಲಯವಾಗುತ್ತವೆಯೋ ಅದುವೇ ಪರಮಾತ್ಮವು. ಸೃಷ್ಟಿಯಲ್ಲಿಯ ಬ್ರಹ್ಮಾಂಡಗಳನ್ನು ನೊರೆ–ತೆರೆಗೆ ಹೋಲಿಸಿದಾಗ ಆ ಪರಮಾತ್ಮನು ಎಷ್ಟು ವಿಶಾಲನೆಂಬುದನ್ನು ಊಹಿಸ ಬಹುದು.

ಇದೂ ಅಲ್ಲದೆ ಅಗ್ನಿಯಿಂದ ವಿಸ್ಫುಲಿಂಗಗಳು ಉತ್ಪನ್ನವಾಗುವಂತೆ, ಸೂರ್ಯ–ಚಂದ್ರಾದಿಗಳೆಂಬ ಜ್ಯೋತಿರ್ಗಣಗಳು ಯಾವುದರಿಂದ ಉತ್ಪನ್ನವಾಗಿ ಕೊನೆಗೆ ಯಾವುದರಲ್ಲಿ ವಿಲಯವನ್ನು ಹೊಂದುವುವೋ ಅದಕ್ಕೇನೇ ಪರಮಾತ್ಮವೆನ್ನುವರು. ಇದೂ ಅಲ್ಲದೆ ಪೃಥ್ವಿ, ಅಪ್ಪು, ತೇಜ, ವಾಯು ಮತ್ತು ಆಕಾಶಗಳೆಂಬ ಪಂಚ ಮಹಾಭೂತಗಳ ಆವಿರ್ಭಾವ ಮತ್ತು ವಿಲಯಗಳಿಗೆ ಕಾರಣೀಭೂತವಾದದ್ದು ಯಾವುದೋ ಅದುವೇ ಪರಮಾತ್ಮವು. ಹೀಗೆ ಈ ಎಲ್ಲ ವ್ಯಾಖ್ಯಾನವನ್ನು ನೋಡಿದಾಗ ಯಾವುದು ಎಲ್ಲದರ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆಲ್ಲ ಕಾರಣೀಭೂತವಾದುದೊ, ಅದಕ್ಕೇನೇ ಪರಮಾತ್ಮನೆಂಬುದಾಗಿ ಕರೆಯಲಾಗುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪರಮಾತ್ಮಸ್ಥಲವನ್ನು ಪೂರ್ಣಗೊಳಿಸುತ್ತ ಕೊನೆಯದಾಗಿ–

ನಿರಸ್ತಮಲಸಂಬಂಧಂ ನಿಃಶೇಷ ಜಗದಾತ್ಮಕವಮ್ ।
ಸರ್ವತತ್ತ್ವೋಪರಿ ಪ್ರೋಕ್ತಂ ಸ್ವರೂಪಂ ಪರಮಾತ್ಮನಃ ॥

ಯಥಾ ವ್ಯಾಪ್ಯ ಜಗತ್ಸರ್ವಂ ಸ್ವಭಾಸಾ ಭಾತಿ ಭಾಸ್ಕರಃ ।
ತಥಾ ಸ್ವಶಕ್ತಿಭಿರ್ವ್ಯಾಪ್ಯ ಪರಮಾತ್ಮಾ ಪ್ರಕಾಶತೇ ॥

ವಿಶ್ವತೋ ಭಾಸಮಾನೋಽಪಿ ವಿಶ್ವಮಾಯಾ ವಿಲಕ್ಷಣಃ ।
ಪರಮಾತ್ಮಾ ಸ್ವಯಂಜ್ಯೋತಿರೂಪೋ ಜೀವಾತ್ಮನಾಂ ಭವೇತ್ ॥

(ಸಿ. ಶಿ. ೧೮; ೩೪–೩೬)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಣವಾದಿ ಮಲತ್ರಯಗಳ ಸಂಬಂಧವಿಲ್ಲದಿರುವ, ಸಂಪೂರ್ಣ ಜಗತ್‌ಸ್ವರೂಪವಾಗಿರುವ ಮತ್ತು ಭೂಮ್ಯಾದಿ ಶಿವಪರ್ಯಂತಗಳಾದ ಸಕಲ ತತ್ತ್ವಗಳನ್ನೂ ಮೀರಿನಿಂತಿರುವ ಸ್ವರೂಪವೇ ಪರಮಾತ್ಮ ವಾಗಿರುತ್ತದೆ. ಸೂರ್ಯನು ತನ್ನ ಪ್ರಕಾಶದಿಂದ ಜಗತ್ತೆಲ್ಲವನ್ನು ವ್ಯಾಪಿಸಿಕೊಂಡಿರುವಂತೆ ಪರಮಾತ್ಮನು ತನ್ನ ಶಕ್ತಿಗಳಿಂದ ವಿಶ್ವವೆಲ್ಲವನ್ನು ವ್ಯಾಪಿಸಿ ತಾನು ಪ್ರಕಾಶಿಸುವಂಥವ ನಾಗಿರುತ್ತಾನೆ. ಇವನು ಈ ವಿಶ್ವದಲ್ಲಿ ಎಲ್ಲೆಡೆ ತೋರುತ್ತಿದ್ದರೂ ವಿಶ್ವಕ್ಕೆ ಉಪಾದಾನ ಕಾರಣೀಭೂತವಾದ ಮಾಯೆಗಿಂತಲೂ ವಿಲಕ್ಷಣನಾಗಿರುತ್ತಾನೆ. ಅರ್ಥಾತ್ ವಿಶ್ವದಲ್ಲಿ ರುವ ಷಢ್‌ಭಾವ ವಿಕಾರಗಳೆಂಬ ದೋಷಗಳಿಲ್ಲದವನಾಗಿರುತ್ತಾನೆ. ಸಚ್ಚಿದಾನಂದ ಸ್ವರೂಪನಾದ ಈತನು ಸಂಸಾರದಲ್ಲಿ ಹೇಯಬುದ್ಧಿ ಉತ್ಪನ್ನವಾದ ಜೀವಿಗಳಿಗೆ ಜ್ಯೋತಿ ರೂಪನಾಗಿ ಪ್ರಕಾಶಿಸುತ್ತಿರುತ್ತಾನೆ.

ವಿಶ್ವಕ್ಕೆ ಕಾರಣೀಭೂತನಾದ ಪರಮಾತ್ಮನು ವಿಶ್ವವೆಲ್ಲವನ್ನು ವ್ಯಾಪಿಸಿಕೊಂಡಿ ರುತ್ತಾನೆ. ಇವನಲ್ಲಿರುವ ಐದು ವಿಧವಾದ ವಿಲಕ್ಷಣ ಶಕ್ತಿಗಳು ಪಂಚಮಹಾ ಭೂತಗಳಲ್ಲೆಲ್ಲ. ವ್ಯಾಪಿಸಿಕೊಂಡಿರುತ್ತವೆ. ಇವನ ತಿರೋಧಾನ ಶಕ್ತಿಯು ಭೂಮಿಯನ್ನು, ಪಾಲನಶಕ್ತಿಯು ಜಲವನ್ನು, ಸೃಷ್ಟಿಶಕ್ತಿಯು ಅಗ್ನಿಯನ್ನು, ಸಂಹಾರಶಕ್ತಿಯು ವಾಯುವನ್ನು ಮತ್ತು ವಿಭುತ್ವ ಶಕ್ತಿಯು ಆಕಾಶವನ್ನು ವ್ಯಾಪಿಸಿಕೊಂಡಿರುತ್ತವೆ. ಸೂರ್ಯನು ತನ್ನ ಪ್ರಕಾಶದಿಂದ ವಿಶ್ವವೆಲ್ಲವನ್ನು ವ್ಯಾಪಿಸಿರುವಂತೆ ಇವನು ತನ್ನ ಶಕ್ತಿಗಳಿಂದ ವ್ಯಾಪಿಸಿ ಕೊಂಡಿರುತ್ತಾನೆ. ಹೀಗೆ ಪ್ರಪಂಚದಲ್ಲೆಲ್ಲ ವ್ಯಾಪಿಸಿಕೊಂಡಿದ್ದರೂ ಪರಮಾತ್ಮನು ಪ್ರಪಂಚದ ಷಡ್‌ಭಾವ ವಿಕಾರಗಳಿಂದ ಅಲಿಪ್ತನಾಗಿರುತ್ತಾನೆ. ಇದುವೇ ಪರಮಾತ್ಮನ ವಾಸ್ತವಿಕವಾದ ಸ್ವರೂಪವು. ಈ ಸ್ವರೂಪವನ್ನು ಯಾರು ಅರಿಯುವರೋ ಅವರೂ ಸಹ ಪರಮಾತ್ಮರೂಪರೇ ಆಗುವರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೯ ನವ್ಹಂಬರ, ೧೯೯೪

(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ನಿರ್ದೇಹಾಗಮಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಸದ್ಧರ್ಮ ಸಾಧಕರೇ ! ಶಿವಯೋಗಿ ಸ್ವರೂಪರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ವಿಭಿನ್ನ ಪ್ರಾಂತಗಳ ಸಮಸ್ತ ಸದ್ಭಕ್ತರೇ ! ಹಾಗೂ ತಾಯಂದಿರೇ ! ಶ್ರೀ ಕಾಶೀ ಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕಮಾಸದ ನಿಮಿತ್ತವಾಗಿ, ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಮತ್ತು ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನ ಗಳು ಸಾಂಗಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಪಾಪನಾಶಿನಿಯಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ, ಸದ್ಯಃ ಜ್ಞಾನಗಂಗೆಯ ಪಾನಮಾಡಲಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಶ್ರವಣ ಮಾಡುತ್ತಿದ್ದೀರಿ. ನಿನ್ನೆಯ ದಿನ ಪರಮಾತ್ಮಸ್ಥಲದ ಬಗ್ಗೆ ಸವಿಸ್ತಾರವಾಗಿ ತಿಳಿಸಲಾಗಿದ್ದು, ಇಂದು ಅದರ ಮುಂದಿನ ಸ್ಥಲವಾದ ನಿರ್ದೇಹಾಗಮ ಸ್ಥಲದ ಬಗ್ಗೆ ವಿವೇಚಿಸೋಣ.

ಈ ಸ್ಥಲದ ಹೆಸರೇ ಹೇಳುವಂತೆ ಇದರಲ್ಲಿ ಬಹು ಮಹತ್ತ್ವಪೂರ್ಣವಾದ ವಿಷಯವು ಅಡಗಿಕೊಂಡಿದೆ. ಈ ಜಗತ್ತಿನಲ್ಲಿ ಜನ್ಮತಾಳಿದ ಪ್ರತಿಯೊಬ್ಬ ಜೀವಾತ್ಮನಿಗೆ ಸ್ಥೂಲ, ಸೂಕ್ಷ್ಮ ಮತ್ತು ಕಾರಣಗಳೆಂಬ ಮೂರು ದೇಹಗಳ ಸಂಬಂಧವಿರುತ್ತದೆ. ತನಗೆ ಸಂಬಂಧಪಟ್ಟ ಎಲ್ಲ ದೇಹಗಳ ಮೇಲೆ ಈ ಜೀವಾತ್ಮನು ಅಭಿಮಾನವನ್ನು ತಾಳಿರುತ್ತಾನೆ. ಇವನ ಈ ಅಭಿಮಾನವೇ ದುಃಖಕ್ಕೆ ಕಾರಣವಾಗಿರುತ್ತದೆ. ಎಲ್ಲಿಯವರೆಗೆ ಈ ಮೂರೂ ದೇಹಗಳಿಂದ ಇವನಿಗೆ ಬಿಡುಗಡೆ ಉಂಟಾಗುವುದಿಲ್ಲವೋ ಅಲ್ಲಿಯವರೆಗೆ ಇವನಿಗೆ ದುಃಖಗಳಿಂದ ಬಿಡುಗಡೆಯಾಗುವುದೇ ಇಲ್ಲ. ಜೀವಾತ್ಮನಿಗೆ ಸ್ಥೂಲ ಶರೀರದ ಬಿಡುಗಡೆಯು ಅದೆಷ್ಟೋ ಸಾರೆ ಆಗಿರುತ್ತದೆ. ಆ ಶರೀರವನ್ನು ಬಿಡುವ ಇಚ್ಛೆ ಇರಲಿ ಇಲ್ಲದೇ ಇರಲಿ ಮೃತ್ಯುವಿನ ಸಮಯದಲ್ಲಿ ಪ್ರತಿಯೊಬ್ಬರೂ ಅದನ್ನು ತ್ಯಜಿಸಲೇ ಬೇಕಾಗುತ್ತದೆ. ಒಂದು ಸ್ಥೂಲ ದೇಹವನ್ನು ಬಿಟ್ಟರೆ ಆ ಜೀವಾತ್ಮನಿಗೆ ಮತ್ತೊಂದು ಸ್ಥೂಲ ಶರೀರವು ಆಗಲೇ ಪ್ರಾಪ್ತವಾಗುತ್ತದೆ. ಹೀಗೆ ಈ ಘಟನೆಯು ಅನೇಕ ಯುಗ ಯುಗಗಳಿಂದ ನಡೆದುಕೊಂಡು ಬಂದುದಾಗಿದೆ.

ದೇಹದ ಮೇಲಿನ ಜೀರ್ಣವಾದ ವಸ್ತ್ರವನ್ನು ಕಳಚಿ ಒಗೆದು ಹೊಸ ವಸ್ತ್ರವನ್ನು ಧರಿಸಿಕೊಳ್ಳುವಂತೆ, ಈ ಸ್ಥೂಲ ಶರೀರದ ಬದಲಾವಣೆಯೆಂಬುದಾಗಿ ತಿಳಿದುಕೊಳ್ಳ ಬೇಕು. ಜೀವಾತ್ಮನು ಸ್ಥೂಲ ಶರೀರವನ್ನು ಮೇಲಿಂದ ಮೇಲೆ ಬದಲಿಸುತ್ತಿರುವಂತೆ

ಸೂಕ್ಷ್ಮ ಹಾಗೂ ಕಾರಣ ಶರೀರಗಳನ್ನು ಮಾತ್ರ ಮೇಲಿಂದ ಮೇಲೆ ಬದಲಿಸುವುದಿಲ್ಲ. ಸೃಷ್ಟಿಯ ಆರಂಭದಲ್ಲಿ ಪ್ರಾಪ್ತವಾದ ಈ ಸೂಕ್ಷ್ಮ ಹಾಗೂ ಕಾರಣ ದೇಹಗಳು ಜೀವಾತ್ಮನಿಗೆ ಮುಕ್ತಿ ದೊರೆಯುವವರೆಗೆ ಸಂಗಾತಿಗಳೇ ಆಗಿರುತ್ತವೆ. ಅನೇಕ ಜನ್ಮಗಳ ಶುಭ ಹಾಗೂ ಅಶುಭ ವಾಸನೆಗಳು ಪ್ರತಿಯೊಬ್ಬ ಜೀವಾತ್ಮನ ಸೂಕ್ಷ್ಮ ಶರೀರದಲ್ಲಿ ಸಂಗ್ರಹೀತಗಳಾಗಿರುತ್ತವೆ. ಸ್ಥೂಲ ದೇಹವು ಭೌತಿಕಾಗ್ನಿಯಿಂದ ದಹಿಸಲ್ಪಟ್ಟರೆ, ವಾಸನಾ ರೂಪವಾದ ಸೂಕ್ಷ್ಮ ಶರೀರವು ಜ್ಞಾನಾಗ್ನಿಯಿಂದ ಮಾತ್ರ ದಗ್ಧವಾಗುವದು. ''ದಹ್ಯತೇ ಇತಿ ದೇಹಃ'' ಎಂಬ ವ್ಯುತ್ಪತ್ತಿಗನುಸಾರವಾಗಿ ದಹಿಸಿ ಹೋಗುವದಕ್ಕೇನೇ ದೇಹವೆಂದು ಕರೆಯಲಾಗಿದೆ.

ಭೌತಿಕಾಗ್ನಿಯಲ್ಲಿ ಸ್ಥೂಲದೇಹವು ತತ್‌ಕ್ಷಣದಲ್ಲಿ ದಹಿಸಿಹೋಗುವಂತೆ ಸೂಕ್ಷ್ಮ ಮತ್ತು ಕಾರಣ ಶರೀರಗಳು ಆತ್ಮಜ್ಞಾನವಾದೊಡನೆ ದಹಿಸಿ ಹೋಗುವುವೇ ಹೇಗೆ ? ಹಾಗೇನಾದರೂ ದಹಿಸಿ ಹೋದರೆ ತತ್‌ಕ್ಷಣದಲ್ಲಿಯೇ ಜ್ಞಾನಿಯ ಜೀವನವು ಪರಿಸಮಾಪ್ತವಾಗಬೇಕಾಗುವುದು ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುವುದು. ಅದಕ್ಕಾಗಿ ಶಾಸ್ತ್ರಕಾರರು ಪ್ರಾರಬ್ಧ ಕರ್ಮದ ಮೂಲಕ ವ್ಯವಸ್ಥೆಯನ್ನು ಪ್ರತಿಷ್ಠಾಪಿಸಿದ್ದಾರೆ. ಜ್ಞಾನಾಗ್ನಿಯಿಂದ ಸಂಚಿತ ಮತ್ತು ಆಗಾಮೀ ಕರ್ಮಗಳು ದಹಿಸಿಹೋದರೂ, ಪ್ರಾರಬ್ಧಕರ್ಮವು ಮಾತ್ರ ಹಾಗೆಯೇ ಉಳಿಯುತ್ತದೆ. ''ನಾ ಭುಕ್ತಂ ಕ್ಷೀಯತೆ ಕರ್ಮ ಕಲ್ಪಕೋಟಿ ಶತೈರಪಿ'' ಎಂಬ ಪ್ರಮಾಣೋಕ್ತಿಗನುಸಾರವಾಗಿ ಪ್ರಾರಬ್ಧಕರ್ಮವನ್ನು ಯಾರೇ ಆದರೂ ಅನುಭೋಗಿಸಿಯೇ ತೀರಿಸಬೇಕಾಗುತ್ತದೆ. ಆದ್ದರಿಂದ ಜ್ಞಾನವಾದ ಮೇಲೆಯೂ ಸಹ ಪ್ರಾರಬ್ಧಕರ್ಮವು ಇರೋಣದರಿಂದ ಅದು ಕ್ಷಯಿಸುವವರೆಗೆ ಸ್ಥೂಲ, ಸೂಕ್ಷ್ಮ ಹಾಗೂ ಕಾರಣ ಶರೀರಗಳು ಹಾಗೆಯೇ ಉಳಿದುಕೊಂಡಿರುತ್ತವೆ. ಎಂದು ಆ ಪ್ರಾರಬ್ಧಕರ್ಮವು ಉಪಭೋಗದಿಂದ ಇಲ್ಲವಾಗಿ ಹೋಗುವುದೋ, ಅಂದೇ ಈ ಮೂರೂ ದೇಹಗಳು ಶಾಶ್ವತವಾಗಿ ಇಲ್ಲವಾಗಿ ಹೋಗುವವು.

ಹೀಗೆ ಜ್ಞಾನಾನಂತರದಲ್ಲಿ ಪ್ರಾರಬ್ಧ ಕರ್ಮವನ್ನು ಅನುಭವಿಸುತ್ತಿರುವ ಜ್ಞಾನಿಯ ಸ್ಥಿತಿಯು ಹೇಗಿರುತ್ತದೆ ಎಂಬುದನ್ನು ಪ್ರತಿಪಾದಿಸುವ ಸ್ಥಲವೇ ಈ ನಿರ್ದೇಹಾಗಮ ಸ್ಥಲವು. ''ನಿರ್ಗತಃ ದೇಹಭಾವಃ ಯಸ್ಮಾತ್ ಸಃ ನಿರ್ದೇಹಃ'' ಎಂಬ ವ್ಯುತ್ಪತ್ತಿಗನು ಸಾರವಾಗಿ ಯಾವ ಜ್ಞಾನಿಯ ಮನಸ್ಸಿನಿಂದ ದೇಹಭಾವವು ಸಂಪೂರ್ಣವಾಗಿ ಇಲ್ಲದಾಗಿ ಹೋಗಿರುವುದೋ ಅವನೇ 'ನಿರ್ದೇಹೀ' ಎಂದು ಕರೆಯಲ್ಪಡುವನು. ಗಮನ ಹಾಗೂ ನಿರ್ಗಮನ ಎಂಬ ಎರಡು ಶಬ್ದಗಳ ಅರ್ಥವು ಸಾಮಾನ್ಯವಾಗಿ ಒಂದೇ ಎಂಬುದಾಗಿ ತಿಳಿದು ಬಂದರೂ 'ನಿರ್' ಎಂಬ ಉಪಸರ್ಗಯುಕ್ತವಾದ 'ಗಮನ' ಶಬ್ದದ ಅರ್ಥವು ಕೇವಲ ಗಮನ ಶಬ್ದಕ್ಕಿಂತಲೂ ಬಹಳಷ್ಟು ವಿಲಕ್ಷಣವಾಗಿರುತ್ತದೆ. ಸಾಮಾನ್ಯವಾಗಿ ಗಮನವೆಂದರೆ 'ಹೋಗುವುದು' ಎಂದರ್ಥ. ಆದರೆ 'ನಿರ್ಗಮನ' ಎಂದರೆ ಹೊರಳಿ ಎಂದೂ ಬಾರದಂತೆ ಹೋಗುವುದು ಎಂದರ್ಥವಾಗುವುದು. ಅದರಂತೆ ಇಲ್ಲಿ ನಿರ್ದೇಹವೆಂದರೆ ಈ ಪೂರ್ವದಲ್ಲಿ ಹೇಳಿದ ವ್ಯುತ್ಪತ್ತಿಗನುಸಾರವಾಗಿ ದೇಹಾಭಿಮಾನ ವನ್ನು ಕಳೆದುಕೊಂಡವನು ಎಂದರ್ಥ. ಕಳೆದುಕೊಂಡ ಅಭಿಮಾನವು ಅವನಿಗೆ ಎಂದೂ ಮರಳಿ ಬರುವುದಿಲ್ಲ. ಜ್ಞಾನಿಯು ದೇಹಗಳಿಂದ ವ್ಯವಹರಿಸುತ್ತಿದ್ದರೂ ಸಂಪೂರ್ಣವಾಗಿ ದೇಹಾಭಿಮಾನ ಶೂನ್ಯನಾಗಿರುತ್ತಾನೆ. ಜ್ಞಾನಿಯ ಈ ನಿರ್ದೇಹ ಸ್ಥಿತಿಯನ್ನು ಪ್ರತಿಪಾದಿ

ಸುವ ಸ್ಥಲವೇ 'ನಿರ್ದೇಹಾಗಮಸ್ಥಲವು. ಈ ಸ್ಥಲವನ್ನು ಕುರಿತು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ದೇಹಿನೋಽಪಿ ಪರಾತ್ಮತ್ವಭಾವಿನೋ ನಿರಹಂಕೃತೇಃ ।
ನಿರಸ್ತದೇಹಧರ್ಮಸ್ಯ ನಿರ್ದೇಹಾಗಮ ಉಚ್ಯತೇ ॥

ಗಲಿತೇ ಮಮತಾಹಂತೇ ಸಂಸಾರ ಭ್ರಮಕಾರಣೇ ।
ಪರಾಽಹಂತಾಂ ಪ್ರವಿಷ್ಟಸ್ಯ ಕುತೋ ದೇಹಃ ಕುತೋ ರತಿಃ ॥

ಕೇವಲೇ ನಿಷ್ಪ್ರಪಂಚೌಘೇ ಗಂಭೀರೇ ಚಿನ್ಮಹೋದಧೌ ।
ನಿಮಗ್ನಮಾನಸೋ ಯೋಗೀ ಕಥಂ ದೇಹಂ ವಿಚಿಂತಯೇತ್ ॥

(ಸಿ.ಶಿ.೧೮; ೩೭–೩೯)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನನ್ನು ಪರಮಾತ್ಮನನ್ನಾಗಿ ಭಾವಿಸುತ್ತಿರುವ ಅಹಂಕಾರ ರಹಿತನಾದ ದೇಹವನ್ನು ಧರಿಸಿಕೊಂಡಿದ್ದರೂ ದೇಹದ ಧರ್ಮಗಳ ಅಭಿಮಾನವನ್ನು ಬಿಟ್ಟಿರುವಂತಹ ಶಿವಯೋಗಿಗೆ 'ನಿರ್ದೇಹ' ಎಂದು ಕರೆಯುತ್ತಾರೆ. ಆ ನಿರ್ದೇಹ ಪ್ರಾಪ್ತಿಯನ್ನು ಹೇಳುವುದಕ್ಕೇನೇ ನಿರ್ದೇಹಾಗಮ ವೆಂಬುದಾಗಿ ಕರೆಯಲಾಗುತ್ತದೆ. ಸಂಸಾರದ ಭ್ರಮೆಗೆ ಕಾರಣೀಭೂತವಾಗಿರುವ ಅಹಂಕಾರ ಮಮಕಾರಗಳು ನಷ್ಟವಾಗಲು ಪರಾಅಹಂತೆಯನ್ನು ಪ್ರವೇಶಿಸಿದ ಯೋಗಿಗೆ ದೇಹವೂ ಇಲ್ಲ, ದೇಹದ ಮೇಲಿನ ರತಿಯೂ ಕೂಡ ಇರುವುದಿಲ್ಲ, ಚರಾಚರ ಪ್ರಪಂಚವೆಲ್ಲವೂ ಇಲ್ಲದಿರುವ ಅತ್ಯಂತ ಗಂಭೀರವಾದ ಚೈತನ್ಯವೆಂಬ ಸಮುದ್ರದಲ್ಲಿ ನಿಮಗ್ನವಾದ ಮನಸ್ಸುಳ್ಳ ಶಿವಯೋಗಿಯು ಅದು ಹೇಗೆ ತಾನೆ ದೇಹವನ್ನು ಕುರಿತು ಚಿಂತಿಸಿಯಾನು ? ಅರ್ಥಾತ್ ಅವನ ಮನಸ್ಸಿನಲ್ಲಿ ದೇಹದ ವಿಚಾರವೇ ಬರುವುದಿಲ್ಲ ವೆಂಬುದಾಗಿ ತಿಳಿದುಕೊಳ್ಳಬೇಕು.

ಈ ಪೂರ್ವದಲ್ಲಿ ಹೇಳಿದ ಪರಮಾತ್ಮಸ್ಥಲದ ಶಿವಯೋಗಿಯು ತನ್ನ ಭಾವನೆ ಯನ್ನು ಪರಮಾತ್ಮ ಸ್ವರೂಪದೊಂದಿಗೆ ಸಮರಸವನ್ನಾಗಿ ಮಾಡಿಕೊಂಡಿರುತ್ತಾನೆ. ಮನೋಭಾವನೆಯು ಎಲ್ಲಿ ಇರುವುದೋ ಆ ವ್ಯಕ್ತಿಯ ಅಸ್ತಿತ್ವವಿರುವುದಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ ಮನಸ್ಸೇ ಎಲ್ಲ ವ್ಯವಹಾರಗಳನ್ನು ಮಾಡಲು ಮೂಲವಾದಂಥಾದ್ದಾಗಿರುತ್ತದೆ. ಓರ್ವ ಮನುಷ್ಯನು ಮನೆಯಲ್ಲೇ ಕುಳಿತುಕೊಂಡು ಕಾಶೀ ಮುಂತಾದ ಕ್ಷೇತ್ರಗಳ ಬಗ್ಗೆ ಚಿಂತಿಸುತ್ತಿದ್ದರೆ, ಅವನು ಭೌತಿಕವಾಗಿ ಊರಲ್ಲಿರುವ ದಾಗಿ ಕಂಡುಬಂದರೂ ಭಾವನಾತ್ಮಕವಾದ ಅಸ್ತಿತ್ವವು ಕಾಶಿಯಲ್ಲಿಯೇ ಇರುತ್ತದೆ. ಇಲ್ಲಿ ಭೌತಿಕವಾದ ಅಸ್ತಿತ್ವಕ್ಕಿಂತಲೂ ಭಾವನಾತ್ಮಕವಾದ ಅಸ್ತಿತ್ವಕ್ಕೆ ಮಹತ್ವ ಇದೆ. ಏಕೆಂದರೆ ಕಾಶೀ ಕ್ಷೇತ್ರದ ವಿಚಾರದಲ್ಲಿ ಮಗ್ನನಾದ ಆ ವ್ಯಕ್ತಿಯು ತನ್ನ ದೇಹ, ಪರಿವಾರ, ಮನೆ ಮತ್ತು ಉದ್ಯೋಗಾದಿಗಳೆಲ್ಲವನ್ನೂ ಒಂದು ಕ್ಷಣಕಾಲ ಸಂಪೂರ್ಣವಾಗಿ ಮರೆತುಬಿಟ್ಟಿ ರುತ್ತಾನೆ. ಹೀಗೆ ಮರೆತು ಕುಂತಿರುವ ಅವನೆದುರಿಗೆ ಓರ್ವ ವ್ಯಕ್ತಿಯು ಹೋಗಿ ಅವನ ದೇಹವನ್ನು ಮುಟ್ಟಿ ಎಚ್ಚರಿಸಿದಾಗ ಅವನು ಆ ಭಾವನಾಲೋಕವನ್ನು ಬಿಟ್ಟು ಭೌತಿಕ

ಲೋಕಕ್ಕೆ ಬಂದು ಒಂದು ಕ್ಷಣ ಕಾಲ ತಾನು ಆಶ್ಚರ್ಯಕ್ಕೊಳಗಾಗುವನಲ್ಲದೆ ಅನ್ಯರನ್ನೂ ಸಹ ಆಶ್ಚರ್ಯಕ್ಕೊಳಗುಮಾಡುವನು.

ಇಂತಹ ಘಟನೆಗಳು ಪ್ರತಿಯೊಬ್ಬರಿಗೂ ದಿನ ನಿತ್ಯದಲ್ಲಿ ಅದೆಷ್ಟೋ ಸಾರೆ ಘಟಿಸುತ್ತಿರುತ್ತವೆ. ಇದರಿಂದ ತಿಳಿದು ಬರುವುದೇನೆಂದರೆ, ನಮ್ಮ ಮನಸ್ಸಿನ ಅಸ್ತಿತ್ವವು ಎಲ್ಲಿ ಇರುವುದೋ ಅಲ್ಲಿಯೇ ನಮ್ಮ ವಾಸ್ತವಿಕವಾದ ಸ್ಥಿತಿಯು ಇರುತ್ತದೆ. ಅನ್ಯತ್ರ ಆಸಕ್ತವಾದ ಮನಸ್ಸುಳ್ಳವನು ತನ್ನ ದೇಹಾದಿಗಳನ್ನು ಮರೆತಿರುವಂತೆ ಪರಮಾತ್ಮನಲ್ಲಿ ಸಮರಸವಾದ ಮನಸ್ಸುಳ್ಳ ಶಿವಯೋಗಿಯು ತಾನು ದೇಹದಲ್ಲಿ ಇದ್ದರೂ ದೇಹವನ್ನು ಹಾಗೂ ದೇಹದ ಧರ್ಮಗಳೆಲ್ಲವನ್ನೂ ಮರೆತು ಪರಮಾತ್ಮನೊಂದಿಗೆ ತಾನೇ ತಾನಾಗಿರುತ್ತಾನೆ. ಹೀಗೆ ದೇಹ ಹಾಗೂ ದೇಹ ಧರ್ಮಗಳ ಅಭಿಮಾನವಿಲ್ಲದೆ ದೇಹದಲ್ಲಿಯೇ ವಾಸಿಸುವ ಆ ಶಿವಯೋಗಿಗೆ 'ನಿರ್ದೇಹಃ' ಎಂಬುದಾಗಿ ಕರೆಯಲಾಗುತ್ತದೆ. ಇವನ ಈ ನಿರ್ದೇಹ ಸ್ಥಿತಿಯನ್ನು ವಿವರಿಸುವ ಸ್ಥಲವೇ ನಿರ್ದೇಹಾಗಮ ಸ್ಥಲವು.

ತನ್ನ ಆರಾಧ್ಯನಾದ ಮಲ್ಲಿಕಾರ್ಜುನನೊಂದಿಗೆ ಸಮರಸಳಾದ ಅಕ್ಕಮಹಾದೇವಿಯು ರಾಜ, ರಾಜನ ಅರಮನೆ ಮತ್ತು ತನ್ನ ಭೌತಿಕ ಭೋಗ–ಭಾಗ್ಯಗಳನ್ನೆಲ್ಲ ತೊರೆದು, ದೇಹಾಭಿಮಾನವಿಲ್ಲದೆ ನಿರ್ವಸ್ತ್ರಳಾಗಿ ಅರಮನೆಯಿಂದ ಹೊರ ಹೊರಟ ಅವಳ ಆ ಪ್ರಸಂಗವು ನಿರ್ದೇಹಾವಸ್ಥೆಯ ಪ್ರತ್ಯಕ್ಷವಾದ ಉತ್ಕೃಷ್ಟ ಉದಾಹರಣೆಯಾಗಿದೆ. ಜೈನ ಸಂಪ್ರದಾಯದಲ್ಲಿ ಬಂದಿರುವ ದಿಗಂಬರ ಪದ್ಧತಿಯು ಈ ನಿರ್ದೇಹ ಸ್ಥಿತಿಯನ್ನೇ ಸೂಚಿಸುವಂಥಾದ್ದಾಗಿರುತ್ತದೆ. ಈ ಸ್ಥಿತಿಯು ಯಾವುದೇ ಧರ್ಮ–ಜಾತಿ–ಸಿದ್ಧಾಂತ ಮತ್ತು ಪರಂಪರೆಗೆ ಸೀಮಿತವಾಗಿರುವುದಿಲ್ಲ. ಪರಮಾತ್ಮನಲ್ಲಿ ವಿಲೀನವಾದ ಮನೋಭಾವನೆಯುಳ್ಳ ವ್ಯಕ್ತಿಯು ಯಾವುದೇ ಧರ್ಮದವನಾಗಿರಬಹುದು ಅವನಿಗೆ ಈ ಸ್ಥಿತಿಯು ಬಂದೇ ಬರುತ್ತದೆ.

ಯಾವಾಗ ದೇಹಭಾವವು ನಷ್ಟವಾಗುವುದೋ ಆಗ ಈ ಲೋಕದ ಸಂಬಂಧಗಳೆಲ್ಲವೂ ಕತ್ತರಿಸಿ ಹೋಗುವವು. ಅಜ್ಞ ಜೀವಿಗಳ ಈ ದೈಹಿಕ ಸಂಬಂಧಗಳು ಅವರು ದೇಹವನ್ನು ಬಿಟ್ಟನಂತರ ಇಲ್ಲವಾದರೆ ಜ್ಞಾನಿಯು ನಿರ್ದೇಹ ಸ್ಥಿತಿಯನ್ನು ಪಡೆದುಕೊಂಡಾಗಲೇ ಆ ಸಂಬಂಧಗಳೆಲ್ಲ ಇಲ್ಲವಾಗಿ ಹೋಗುತ್ತವೆ. ಅಕ್ಕಮಹಾದೇವಿಯ ದೇಹಭಾವವು ನಷ್ಟವಾಗಿದ್ದ ಕಾರಣದಿಂದಾಗಿಯೇ ಅವಳು ಎಲ್ಲ ಲೌಕಿಕ ಸಂಬಂಧಗಳನ್ನು ತೊಡೆದುಹಾಕಿ ಬೇರಾವುದರ ವಿಚಾರವನ್ನು ಮಾಡದೇ ಮಲ್ಲಿಕಾರ್ಜುನನಲ್ಲಿಯೇ ತಲ್ಲೀನಳಾಗಿ ಅರಮನೆಯನ್ನು ತ್ಯಜಿಸಿಬಿಡುತ್ತಾಳೆ.

ಯಾವುದೇ ಒಂದು ಕಾರ್ಯ ನಿಮಿತ್ತವಾಗಿ ತನ್ನ ಮನೆ, ಮಡದಿ ಮತ್ತು ಮಕ್ಕಳು ಮುಂತಾದ ಪರಿವಾರವನ್ನು ಕೆಲ ಸಮಯಕ್ಕಾಗಿ ಬಿಟ್ಟು ಹೋಗುವ ಪ್ರಸಂಗ ಬಂದಾಗ ವ್ಯಕ್ತಿಯ ಮನಸ್ಸಿನಲ್ಲಿ ಅನೇಕ ಪ್ರಕಾರದ ಚಿಂತೆಯ ಭಾವನೆಗಳು ಒಡಮೂಡುತ್ತವೆ. ನಾನು ಹೋದ ಸ್ಥಾನದಲ್ಲಿ ಇರಲು ಸರಿಯಾದ ವ್ಯವಸ್ಥೆ ಸಿಗುವುದೋ ಇಲ್ಲವೋ ? ಅಲ್ಲಿಯ ಊಟ ವ್ಯವಹಾರಾದಿಗಳು ನನಗೆ ಅನುಕೂಲವಾಗುವುವೋ ಇಲ್ಲವೋ ? ಮುಂತಾಗಿ ಹಲವಾರು ಚಿಂತೆಗಳು ಪರಿವಾರವನ್ನು ತೊರೆದು ಹೋಗುವ ವ್ಯಕ್ತಿಯ

ಮನಸ್ಸಿನಲ್ಲಿ ಮೂಡಿಬರುತ್ತವೆ. ಇಂತಹ ಚಿಂತೆಗಳು ಮನಸ್ಸಿನಲ್ಲಿ ಮೂಡುತ್ತವೆಯೆಂದರೆ ಅವನಲ್ಲಿ ಮನೆಯನ್ನು ಬಿಡುವ ಸಂಪೂರ್ಣವಾದ ತಯಾರಿಯು ಇಲ್ಲವೆಂದೇ ಭಾವಿಸಬೇಕು.

ಅಕ್ಕಮಹಾದೇವಿಯು ಅರಮನೆಯನ್ನು ತೊರೆದು ಹೋಗುವಾಗ ಅವಳು ಹೇಳಿದ–

ಹಸಿವಾದೊಡೆ ಭಿಕ್ಷಾನ್ನಗಳುಂಟು,
ತೃಷೆಯಾದೊಡೆ ಕೆರೆ, ಹಳ್ಳ, ಭಾವಿಗಳುಂಟು,
ಶಯನಕ್ಕೆ ಹಾಳು ದೇಗುಲಗಳುಂಟು,
ಚೆನ್ನಮಲ್ಲಿಕಾರ್ಜುನಯ್ಯ
ಆತ್ಮಸಂಗಾತಕ್ಕೆ ನೀನೆನಗುಂಟು.

ಈ ವಚನವು ಅವಳ ಮಾನಸಿಕ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ. ಇಂತಹ ವಿರಕ್ತಿ ಪ್ರಧಾನವಾದ ಮನೋಬಲವಿದ್ದಾಗಲೇನೇ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮನುಷ್ಯನ ಪ್ರಗತಿಯು ಆಗಲು ಸಾಧ್ಯವಾಗುವುದು. ಅಂತೆಯೇ ಶ್ರೀ ಮನ್ನಿಜಗುಣ ಶಿವ ಯೋಗಿಗಳೂ ಸಹ ''ಊಟಕ್ಕೆ ವಿಷಯಕ್ಕೆ ಮರುಗುತಿಪ್ಪಾತಂಗೆ ಕೂಟವಪ್ಪುದೇ ಘನಪದ ದೊಳು''. ಎಂಬುದಾಗಿ ಹೇಳಿ ನಿರ್ದೇಹ ಸ್ಥಿತಿಯನ್ನು ಪಡೆಯಬೇಕೆಂಬ ವ್ಯಕ್ತಿಯಲ್ಲಿರ ಬೇಕಾದ ಮಾನಸಿಕ ಸಿದ್ಧತೆಯ ಬಗ್ಗೆ ಸೂಚಿಸಿದ್ದಾರೆ. ಪರಮಾತ್ಮನ ಪ್ರಾಪ್ತಿಗಾಗಿಯೇ ಈ ಮಾನವ ದೇಹವು ದೊರೆತಿರುವಾಗ ಈ ದೇಹದಿಂದ ಪರಮಾತ್ಮನನ್ನು ಪಡೆಯುವ ಕಾರ್ಯವನ್ನು ಮಾಡಬೇಕೇ ವಿನಃ ದೇಹದ ಸೇವಾ ಶುಶ್ರೂಷೆಯಲ್ಲಿಯೇ ಕಾಲವನ್ನು ಕಳೆಯಬಾರದು. ಅಂತೆಯೇ ಪೂಜ್ಯಪಾದರು ದೇಹದಲ್ಲಿದ್ದೂ ದೇಹ ಧರ್ಮದ ಅಭಿಮಾನವನ್ನು ತ್ಯಜಿಸಬೇಕೆಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಜೀವಾತ್ಮನು ಸಂಸಾರದಲ್ಲಿ ಸುತ್ತಾಡುತ್ತಿರುವುದಕ್ಕೆ ಅವನಲ್ಲಿರುವ ಅಹಂಕಾರ ಮಮಕಾರಗಳೇ ಕಾರಣಗಳಾಗಿರುತ್ತವೆ. ಈ ಸಂಕುಚಿತಗಳಾದ ಅಹಂಕಾರ– ಮಮಕಾರ ಗಳನ್ನು ತೊರೆದು ಮನಸ್ಸು 'ಪರಾಹಂತೆ'ಯನ್ನು ಪ್ರವೇಶಿಸಿತೆಂದರೆ ದೇಹರತಿಯು ಅಂದರೆ ಸ್ಥೂಲದೇಹದ ಮೇಲಿನ ಪ್ರೀತಿಯು ಇಲ್ಲದಾಗಿ ಹೋಗುತ್ತದೆ. ವ್ಯಷ್ಟಿಯಾದ ಅಹಂಕಾರವು ದೇಹರತಿಗೆ ಕಾರಣವಾದರೆ, ಸಮಷ್ಟೀ ಅಹಂಭಾವನೆಯು ಆತ್ಮರತಿಗೆ ಕಾರಣವಾಗುತ್ತದೆ. ದೇಹರತಿಯುಳ್ಳ ಅಜ್ಞಜೀವಿಗಳು ದೇಹ ಶೃಂಗಾರದಲ್ಲಿ ತತ್ಪರರಾದರೆ ಆತ್ಮರತಿಯುಳ್ಳ ಶಿವಯೋಗಿಯು ಆತ್ಮಾನಂದದಲ್ಲಿ ತಲ್ಲೀನನಾಗಿರುತ್ತಾನೆ. ಹೀಗೆ 'ಪೂರ್ಣಾಹಂತಾ' ಅರ್ಥಾತ್ 'ಸಂಪೂರ್ಣವೆಲ್ಲವೂ ನಾನೇ ಇದ್ದೇನೆ' ಎಂಬ 'ಸಮಷ್ಟಿ ಅಹಂ' ರೂಪವನ್ನು ಪಡೆದ ನಿರ್ದೇಹಾಗಮಸ್ಥಲದ ಶಿವಯೋಗಿಗೆ ವ್ಯಷ್ಟಿದೇಹದ ರತಿಯು ಅದೆಂದೂ ಉಂಟಾಗುವುದೇ ಇಲ್ಲ.

ಶರೀರದೊಳಗಿದ್ದು ಶರೀರದ ಭಾವವಿಲ್ಲದೆ ಇರುವುದಾದರೂ ಹೇಗೆ ? ಮನೆಯೊಳಗೆ ಇದ್ದು ಮನೆಯನ್ನು ಮರೆಯಲಾದೀತೇ ? ಹಾಗೆಯೇ ಶರೀರದೊಳಗಿದ್ದು ಶರೀರವನ್ನು ಹೇಗೆ ಮರೆಯಲು ಸಾಧ್ಯ ? ಎಂಬ ವಿಚಾರವು ಸರ್ವರಿಗೂ ಬರುವುದು

ಸಾಮಾನ್ಯವಾದುದು. ಜನರ ಈ ಸಂದೇಹವನ್ನು ದೂರಮಾಡುವುದಕ್ಕಾಗಿಯೇ ಪೂಜ್ಯಪಾದರು ಈ ನಿರ್ದೇಹೀ ಶಿವಯೋಗಿಯ ಮನಸ್ಸಿನ ನಿಮಗ್ನಾವಸ್ಥೆಯನ್ನು ಇಲ್ಲಿ ನಿರೂಪಿಸಿದ್ದಾರೆ. ನಮ್ಮ ಮನಸ್ಸಿಗೆ ನಾಲ್ಕು ಪ್ರಕಾರದ ಅವಸ್ಥೆಗಳಿರುತ್ತವೆ. ಆಸಕ್ತಿ, ಅನುರಕ್ತಿ, ಮಗ್ನತೆ ಮತ್ತು ನಿಮಗ್ನತೆಗಳೇ ಆ ಅವಸ್ಥೆಗಳು.

ಸಣ್ಣ ಮಕ್ಕಳಿಗೆ ಇರುವ ಆಟದ ಮೇಲಿನ ಅತಿಯಾದ ಪ್ರೀತಿಗೆ ಆಸಕ್ತಿ ಎಂದು ಕರೆಯುತ್ತಾರೆ. ಅವುಗಳಿಗೆ ಆಟವೆಂದರೆ ಬಲು ಇಷ್ಟ. ಆಹಾರ ನೀರುಗಳ ಪರಿವೆಯಿಲ್ಲದೆ, ಆಡುತ್ತಿರುತ್ತವೆ. ಎಷ್ಟೋ ಸಾರೆ ತಂದೆ–ತಾಯಿಗಳು ಹೆದರಿಸಿ–ಬೆದರಿಸಿ ಅವುಗಳಿಗೆ ಉಣಿಸುವುದನ್ನೂ, ತಿನಿಸುವುದನ್ನೂ ಕಾಣುತ್ತೇವೆ. ಇದೊಂದು ಮಕ್ಕಳ ಮನಸ್ಸಿನಲ್ಲಿರುವ ಆಟದ ಮೇಲಿನ ಅತಿಯಾದ ಪ್ರೀತಿಯು, ಇದ್ಕಕೇನೇ 'ಆಸಕ್ತಿ' ಎಂದು ಕರೆಯುವರು. ಇನ್ನು ಒಬ್ಬ ತರುಣನು ಓರ್ವ ತರುಣಿಯನ್ನು ಮನಸಾರೆ ಪ್ರೀತಿಸುತ್ತಿರುತ್ತಾನೆ. ಆ ತರುಣನ ಮನದಲ್ಲಿ ತರುಣಿಯ ಬಗ್ಗೆ ಇರುವ ಅತಿಯಾದ ಪ್ರೀತಿಗೆ 'ಅನುರಕ್ತಿ' ಎಂದು ಕರೆಯುತ್ತಾರೆ. ಅವಳ ಮೇಲಿನ ಆ ಅನುರಕ್ತಿಯಿಂದಾಗಿಯೇ ಅವನು ಸದಾ ಅವಳನ್ನು ಕುರಿತೇ ಚಿಂತಿಸುತ್ತಿರುತ್ತಾನೆ. ಈ ಅನುರಕ್ತಿಯು ತರುಣ–ತರುಣಿಯರೀರ್ವರಲ್ಲಿಯೂ ಪರಸ್ಪರವಾಗಿ ಇರುತ್ತದೆ. ಅಂದರೆ ತರುಣನು ತರುಣಿಯಲ್ಲಿ ಅನುರಕ್ತನಾದರೆ, ತರುಣಿಯು ತರುಣನಲ್ಲಿ ಅನುರಕ್ತಳಾಗಿರುತ್ತಾಳೆ. ಈ 'ಅನುರಕ್ತಿ'ಯೆಂಬ ಅವಸ್ಥೆಯು ಆಸಕ್ತಿ ಎಂಬ ಅವಸ್ಥೆಗಿಂತಲೂ ಗಹನವಾದುದಾಗಿರುತ್ತದೆ. ಅಂತೆಯೇ ಮಕ್ಕಳು ಆಟದಲ್ಲಿ ದಂಪತಿಗಳಾಗಿ ಆಡಿದರೂ, ಅವರ ಮನಸ್ಸಿನ ಮೇಲೆ ಆ ದಾಂಪತ್ಯ ಭಾವನೆಯ ರೇಖೆಗಳು ಮೂಡಿರುವುದಿಲ್ಲ. ಆದರೆ ಈರ್ವ ತರುಣ–ತರುಣಿಯರು ಪರಿಣಯ ಬಂಧನದಲ್ಲಿ ಬದ್ಧರಾಗಿ ಒಮ್ಮೆ ದಂಪತಿಗಳಾದರೆಂದರೆ ಸಾಯುವವರೆಗೆ ಅವರು ಆ ದಾಂಪತ್ಯ ಭಾವನೆಯಲ್ಲಿಯೇ ಇರುತ್ತಾರೆ. ಆದ್ದರಿಂದ 'ಅನುರಕ್ತಿ' ಎಂಬ ಅವಸ್ಥೆಯು 'ಆಸಕ್ತಿ' ಎಂಬ ಅವಸ್ಥೆಗಿಂತ ಗಹನವಾದುದೆಂದು ತಿಳಿದುಬರುತ್ತದೆ.

ಇನ್ನು ಮೂರನೆಯದಾದ ಅವಸ್ಥೆಯೇ ಮಗ್ನಾವಸ್ಥೆ, ಇದು ಅನುರಕ್ತಿಗಿಂತಲೂ ಇನ್ನೂ ಹೆಚ್ಚು ಗಹನವಾಗಿರುತ್ತದೆ. ಈ ಅವಸ್ಥೆಯು ವೃದ್ಧ ವ್ಯಕ್ತಿಗಳಲ್ಲಿ ಕಂಡುಬರುತ್ತದೆ. ತರುಣ–ತರುಣಿಯರು ಜೀವಿಸಿರುವಾಗ ಪರಸ್ಪರ ದೇಹಗಳ ಮೇಲೆ ಅನುರಕ್ತರಾಗಿದ್ದರೆ, ವೃದ್ಧರಾದ ವ್ಯಕ್ತಿಗಳು ಮರಣ ಹೊಂದಿದ ಗಂಡ ಇಲ್ಲವೆ ಹೆಂಡತಿಯ ಚಿಂತೆಯಲ್ಲಿ ಮಗ್ನರಾಗಿರುತ್ತಾರೆ, ಅಂದರೆ ವೃದ್ಧಾವಸ್ಥೆಯಲ್ಲಿರುವ ಮನಸ್ಸಿನ ಈ ಮಗ್ನತೆಯು ಇಲ್ಲದ ಅರ್ಥಾತ್ ತನ್ನ ಕೈಬಿಟ್ಟು ಹೋದ ವಸ್ತು ಇಲ್ಲವೆ ವ್ಯಕ್ತಿಯ ಚಿಂತನೆಯಲ್ಲಿ ಮುಳುಗಿ ಹೋಗಿರುತ್ತದೆ. ಇದುವೇ ಮಗ್ನಾವಸ್ಥೆಯು.

ಈ ಮೂರು ವಿಧಗಳಾದ ಅವಸ್ಥೆಗಳ ಯಥಾವತ್ತಾದ ಚಿತ್ರಣವನ್ನು ಶ್ರೀ ಶಂಕರಾಚಾರ್ಯರು–

ಬಾಲಸ್ತಾವತ್ ಕ್ರೀಡಾಸಕ್ತಃ ತರುಣಸ್ತಾವತ್ ತರುಣೀರಕ್ತಃ ।
ವೃದ್ಧಸ್ತಾವತ್ ಚಿಂತಾಮಗ್ನಃ ಪರೇ ಬ್ರಹ್ಮಣಿಕೋಽ ಪಿ ನ ಲಗ್ನಃ ॥

ತಮ್ಮ ಈ ಪದ್ಯದಲ್ಲಿ ಮಾಡಿರುವುದನ್ನು ನೋಡಬಹುದು. ಇಲ್ಲಿ ಹೇಳಲ್ಪಟ್ಟ ಆಸಕ್ತಿ,

ಅನುರಕ್ತಿ ಮತ್ತು ಮಗ್ನತೆಗಳು ಉತ್ತರೋತ್ತರವಾಗಿ ಮನಸ್ಸಿನ ಪ್ರೇಮಾತಿಶಯವನ್ನು ತೋರಿಸುತ್ತವೆ. ಈ ಮೂರು ಅವಸ್ಥೆಗಳಿಗಿಂತಲೂ ವಿಲಕ್ಷಣವಾದ ಇನ್ನೊಂದು ಅವಸ್ಥೆ ಇದೆ. ಅದಕ್ಕೇನೇ ಲಗ್ನತೆ, ನಿಮಗ್ನತೆ ಎಂಬುದಾಗಿ ಕರೆಯುತ್ತಾರೆ. ಪರಶಿವಬ್ರಹ್ಮದಲ್ಲಿ ಮನಸ್ಸು ಅತ್ಯಾಸಕ್ತಿಯನ್ನು ಪಡೆಯಿತೆಂದರೆ ಅದಕ್ಕೇನೇ ಲಗ್ನತೆ ಅಥವಾ ನಿಮಗ್ನತೆಯೆಂದು ಕರೆಯಬಹುದು. ನೀರಿನಲ್ಲಿ ಸ್ವಲ್ಪು ಮುಳುಗಿದರೆ ಜಲಮಗ್ನನೆನ್ನುವರು. ಇನ್ನು ಮುಳುಗಿ ತಳವನ್ನು ಸೇರಿದರೆ ನಿಮಗ್ನವೆನ್ನುವರು. ಹಾಗೆಯೇ ಈ ನಿರ್ದೇಹಾಗಮ ಸ್ಥಲದ ಶಿವಯೋಗಿಯು ನಿಷ್ಪ್ರಪಂಚರೂಪವಾದ, ಅತಿ ಗಂಭೀರವಾದ ಚೈತನ್ಯ ಸಾಗರದಲ್ಲಿ ಅರ್ಥಾತ್ ಪರಮಾತ್ಮಸ್ವರೂಪದಲ್ಲಿ ನಿಮಗ್ನನಾಗಿರೋಣದರಿಂದ ಅವನು ದೇಹದಲ್ಲಿದ್ದರೂ ಅವನಿಗೆ ದೇಹಾದಿಗಳ ಅಭಿಮಾನವು ಇರುವುದಿಲ್ಲ. ಶಿವಯೋಗಿಯು ಮನಃಪೂರ್ವಕವಾಗಿ ಪರಮತತ್ತ್ವದಲ್ಲಿ ನಿಮಗ್ನನಾಗಿರುವುದೇ ಈ ದೇಹಾದಿಗಳ ನಿರಭಿಮಾನತೆಗೆ ಕಾರಣವಾಗಿರುತ್ತದೆ. ಹೀಗೆ ಇಂತಹ ಸ್ಥಿತಿಯನ್ನು ಪಡೆದ ಕಾರಣ ದಿಂದಾಗಿಯೇ ಅವನಿಗೆ 'ನಿರ್ದೇಹಿ' ಎಂದು ಕರೆಯಲಾಗಿದೆ. ಮಹಾರಾಷ್ಟ್ರದ ಸಂತರಲ್ಲೋರ್ವನಾದ 'ಗೋರಾಕುಂಬಾರ'ನು ಭಗವಂತನ ಭಜನೆಯಲ್ಲಿ ನಿಮಗ್ನನಾಗಿ ಕೆಸರನ್ನು ತುಳಿಯುತ್ತಿರುವಾಗ ಅವನ ಚಿಕ್ಕದಾದ ಮಗುವು ಆಡುತ್ತ ಅವನಲ್ಲಿಗೆ ಬಂದಾಗ ತನ್ನ ಮಗನ ಪರಿವೆಯಿಲ್ಲದೆ ಆ ಗೋರಾಕುಂಬಾರನು ಮಣ್ಣಿನೊಂದಿಗೆ ಆ ಮಗುವನ್ನೂ ಸಹ ತುಳಿದ ಒಂದು ಘಟನೆಯು ಭಕ್ತಿಯ ಪರಕಾಷ್ಠೆಯನ್ನು ಎತ್ತಿ ತೋರಿಸುತ್ತದೆ. ಭಗವಂತನಲ್ಲಿ ಆಸಕ್ತನಾದ ಭಕ್ತನಿಗೇನೇ ಇಂತಹ ಅವಸ್ಥೆಯು ಪ್ರಾಪ್ತವಾಗಿರುವಾಗ ಇನ್ನು ಭಗವತ್ ಸ್ವರೂಪದೊಂದಿಗೆ ಸಮರಸನಾಗಿರುವ ಶಿವಯೋಗಿಯ ನಿರ್ದೇಹ ಸ್ಥಿತಿಯು ಅದೆಷ್ಟು ಉತ್ಕೃಷ್ಟವಾಗಿರಬಹುದೆಂಬುದಾಗಿ ಊಹಿಸಬಹುದಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ದೇಹಾಗಮ ಸ್ಥಲದ ಶಿವಯೋಗಿಯು ದೇಹದಲ್ಲಿದ್ದೂ ದೇಹದ ವಿಕಾರಗಳಿಂದ ಹೇಗೆ ಅಲಿಪ್ತನಾಗಿರುತ್ತಾನೆಂಬುದನ್ನು ತಿಳಿಸಲೋಸುಗ ಪುನಃ–

ಅಪರಿಚ್ಛೇದ್ಯಮಾತ್ಮಾನಂ ಚಿದಂಬರಮಿತಿ ಸ್ಮರನ್ ।
ದೇಹಯೋಗೇಽಪಿ ದೇಹಸ್ಥೈರ್ವಿಕಾರೈರ್ನ ವಿಲಿಪ್ಯತೇ ॥

ಅಖಂಡ ಸಂವಿದಾಕಾರಮದ್ವಿತೀಯಂ ಸುಖಾತ್ಮಕಮ್ ।
ಪರಮಾಕಾಶಮಾತ್ಮಾನಂ ಮನ್ವಾನಃ ಕುತ್ರ ಮುಹ್ಯತಿ ॥

ಉಪಾಧಿವಿಹಿತಾ ಭೇದಾ ದೃಶ್ಯಂತೇ ಚೈಕವಸ್ತುನಿ ।
ಇತಿ ಯಸ್ಯ ಮತಿಃ ಸೋಽಯಂ ಕಥಂ ದೇಹಮಿತೋ ಭವೇತ್ ॥

ಭೇದಬುದ್ಧಿಸ್ತಮಸ್ತಾನಾಂ ಪರಿಚ್ಛೇದಸ್ಯ ಕಾರಣಮ್ ।
ಅಭೇದಬುದ್ಧೌ ಜಾತಾಯಾಂ ಪರಿಚ್ಛೇದಸ್ಯ ಕಾ ಕಥಾ ॥

ಶಿವೋಽಹಮಿತಿ ಯಸ್ಯಾಸ್ತಿ ಭಾವನಾ ಸರ್ವಗಾಮಿನೀ ।
ತಸ್ಯದೇಹೇನ ಸಂಬಂಧಃ ಕಥಂ ಸ್ಯಾದಮಿತಾತ್ಮನಃ ॥

(ಸಿ.ಶಿ.೧೮; ೪೦–೪೪)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ಆತ್ಮವು ಅಪರಿಚ್ಛಿನ್ನವೂ ಮತ್ತು ಚಿದಾಕಾಶ ರೂಪವೂ ಆಗಿರುತ್ತದೆ ಎಂಬುದಾಗಿ ಸದಾ ಚಿಂತಿಸುತ್ತಿರುವ ಶಿವಯೋಗಿಯು ದೇಹಧಾರಿಯಾಗಿದ್ದರೂ ದೇಹದೊಳಗಿನ ಇಂದ್ರಿಯಗಳ ವಿಕಾರಗಳಿಗೆ ಅವನು ಲಿಪ್ತನಾಗುವುದಿಲ್ಲ, ತನ್ನ ಆತ್ಮವು ಅಖಂಡವೂ, ಅದ್ವಿತೀಯವೂ, ಚಿದ್ರೂಪವೂ ಹಾಗೂ ಆನಂದರೂಪವೂ ಆಗಿರುತ್ತದೆ ಎಂಬುದಾಗಿ ತಿಳಿದುಕೊಂಡು ತನ್ನನ್ನು ಪರಮಾಕಾಶ ರೂಪವನ್ನಾಗಿ ಭಾವಿಸುತ್ತಿರುವ ಶಿವಯೋಗಿಗೆ ಅದಾವ ಪ್ರಕಾರದ ಮೋಹವು ಉಂಟಾಗುವುದಿಲ್ಲ, ಆಕಾಶವು ಅಖಂಡವಾಗಿದ್ದರೂ ಘಟ–ಮಠಾದಿ ಉಪಾಧಿಗಳ ಮೂಲಕ ಪರಿಚ್ಛಿನ್ನವಾಗಿ ತೋರುವಂತೆ ಅಖಂಡವಾದ ಚಿದಾಕಾಶರೂಪವಾದ ಪರಮಾತ್ಮನೂ ಸಹ ದೇಹಾದಿ ಉಪಾಧಿಗಳಿಂದಾಗಿ ಭಿನ್ನನಾಗಿ ತೋರುತ್ತಾನೆಂಬುದಾಗಿ ಯಾರಿಗೆ ನಿಶ್ಚಯವಾದ ಜ್ಞಾನವಾಗಿರುತ್ತದೆಯೋ ಅಂತಹ ಶಿವಯೋಗಿಗೆ ದೇಹಪರಿಚ್ಛಿನ್ನತೆಯು ಅದು ಹೇಗೆ ತಾನೆ ಸಂಭವಿಸಬಲ್ಲದು ? ಪರಿಚ್ಛಿನ್ನತೆಗೆ ಭೇದ ಬುದ್ಧಿಯೇ ಕಾರಣವಾಗಿರುತ್ತದೆ. ಬುದ್ಧಿಯಲ್ಲಿ ಅಭೇದಸ್ಥಿತಿಯು ಪ್ರಾಪ್ತವಾದಾಗ ಪರಿಚ್ಛಿನ್ನತೆಯಾದರೂ ಅದು ಹೇಗೆ ಉಂಟಾಗಬಲ್ಲದು ? ಅರ್ಥಾತ್ ಉಂಟಾಗುವುದೇ ಇಲ್ಲ. ಇನ್ನು ಶಿವೋಹಂ ಎಂಬ ವ್ಯಾಪಕ ಸ್ವರೂಪವಾದ ಶಿವಾದ್ವೈತ ಭಾವನೆಯು ಯಾರಲ್ಲಿ ಉಂಟಾಗುವುದೋ ಅಂತಹ ವ್ಯಾಪಕ ಭಾವನೆಯುಳ್ಳ ಶಿವಯೋಗಿಗೆ ಪರಿಚ್ಛಿನ್ನವಾದ ದೇಹದೊಂದಿಗೆ ಸಂಬಂಧವು ಎಂದೂ ಉಂಟಾಗುವುದಿಲ್ಲ, ಅರ್ಥಾತ್ ಆತನು ದೇಹದಲ್ಲಿದ್ದೂ ಸಹ ದೇಹದ ಸಂಬಂಧದಿಂದ ದೂರವಿರುತ್ತಾನೆಂಬುದಾಗಿ ಪೂಜ್ಯಪಾದರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ದೇಹಾಗಮಸ್ಥಲದ ಶಿವಯೋಗಿಯ ಸ್ವರೂಪದ ಬಗ್ಗೆ ವರ್ಣಿಸುತ್ತ, ಈ ಹಿಂದೆ ಸಾಗರದ ಉದಾಹರಣೆ ಯನ್ನು ಕೊಟ್ಟು ಆತನ ಸ್ವರೂಪ ಗಾಂಭೀರ್ಯವನ್ನು ತಿಳಿಸಿ, ಸದ್ಯ ಆಕಾಶದ ಉದಾಹರಣೆಯನ್ನು ಕೊಟ್ಟು ಆತನ ನಿರ್ಲಿಪ್ತತೆಯನ್ನು ನಿರೂಪಿಸಿದ್ದಾರೆ. ಈ ನಿರ್ದೇಹಾಗಮಸ್ಥಲದ ಶಿವಯೋಗಿಯು ತನ್ನಾತ್ಮವನ್ನು ಚಿದಾಕಾಶರೂಪವಾಗಿ ಚಿಂತಿಸುತ್ತಿರುವುದರಿಂದ ಅವನು ದೇಹಧಾರಿಯಾಗಿದ್ದರೂ ಸಹ ದೇಹದಲ್ಲಿಯ ಇಂದ್ರಿಯಗಳ ವಿಕಾರಗಳಿಂದ ಅಲಿಪ್ತನಾಗಿರುತ್ತಾನೆ. ಅಪರಿಚ್ಛಿನ್ನವಾದ ಆಕಾಶವು ಸರ್ವದಾ ಅಲಿಪ್ತವಾಗಿರುವಂತೆ ಇವನ ಆತ್ಮಸ್ವರೂಪವೂ ಸಹ ಅಪರಿಚ್ಛಿನ್ನವೂ ಅಲಿಪ್ತವೂ ಆಗಿರುತ್ತದೆ. ಯಾವುದನ್ನು ದೇಶ, ವಸ್ತು ಮತ್ತು ಕಾಲಗಳ ಮುಖಾಂತರ ವಿಭಾಗಿಸಲು ಅರ್ಥಾತ್ ಖಂಡಿತವಾಗಿ ಮಾಡಲು ಸಾಧ್ಯವಾಗುವುದಿಲ್ಲವೋ ಅದಕ್ಕೆ ಅಪರಿಚ್ಛಿನ್ನವೆಂದು ಕರೆಯುತ್ತಾರೆ. ಆತ್ಮವು ಅಪರಿಚ್ಛಿನ್ನವಾದ್ದರಿಂದಲೇ ಅದರಲ್ಲಿ ವಿಭಾಗವೂ ಸಂಭವಿಸುವುದಿಲ್ಲ ಹಾಗೂ ಲಿಪ್ತತೆಯೂ ಸಹ ಉಂಟಾಗುವುದಿಲ್ಲ.

ಇಂತಹ ಅಖಂಡವೂ, ಜ್ಞಾನರೂಪವೂ, ಸುಖಾತ್ಮಕವೂ ಮತ್ತು ಅದ್ವಿತೀಯ ಸ್ವರೂಪವೂ ಆದ, ತನ್ನ ಆತ್ಮವನ್ನು ಪರಮಾಕಾಶ ರೂಪದಲ್ಲಿ ಭಾವಿಸುವ ಶಿವಯೋಗಿಗೆ ಯಾವುದೇ ಪ್ರಕಾರವಾದ ಮೋಹಾದಿಗಳು ಆವರಿಸುವುದಿಲ್ಲ, ವಸ್ತು ಒಂದೇ ಆಗಿದ್ದರೂ ಅದರಲ್ಲೇನಾದರೂ ಭೇದವು ತೋರುತ್ತಿದ್ದರೆ ಅದಕ್ಕೆ ಔಪಾಧಿಕ ಭೇದವೆಂಬುದಾಗಿ

ಭಾವಿಸಬೇಕು. ಈ ಶಿವಯೋಗಿಗೆ ಈ ರೀತಿಯಾದ ಪರಿಜ್ಞಾನವಿದ್ದುದರಿಂದಲೇ ಅವನಿಗೆ ದೇಹ ಬಂಧನವು ಇರುವುದಿಲ್ಲ.

ಜಗತ್ತಿನಲ್ಲಿ ಭೇದ ಬುದ್ಧಿಯುಳ್ಳವನಿಗೆ ದೇಶ, ಕಾಲ ಮತ್ತು ವಸ್ತುಗಳ ಪರಿಚ್ಛೇದವು. ಕಂಡುಬರುತ್ತದೆ. ಇನ್ನು ಯಾರಿಗೆ ಆ ಭೇದ ಬುದ್ಧಿಯೇ ಇರುವುದಿಲ್ಲವೋ ಅವರಿಗೆ ಈ ಪರಿಚ್ಛೇದ ಜ್ಞಾನವು ಉಂಟಾಗುವುದಿಲ್ಲ. ಅವರಲ್ಲಿ ಒಂದೇ ಆದ ಅಖಂಡ ಬೋಧವಿರುತ್ತದೆ. ಇನ್ನು ಯಾರಲ್ಲಿ ಸರ್ವವೆಲ್ಲವನ್ನು ತನ್ನಾತ್ಮವೆಂದು ಭಾವಿಸಿರುವ 'ಶಿವೋಹಂ' ಭಾವನೆಯು ಉಂಟಾಗುವುದೋ ಅವನಿಗೆ ದೇಹ ಸಂಬಂಧವೇ ಉಂಟಾಗುವುದಿಲ್ಲ. ಹೀಗೆ ಆತ್ಮದ ಅಖಂಡತೆ, ವ್ಯಾಪಕತೆ ಮತ್ತು ಪ್ರಕಾಶತೆಯ, ಅಪರೋಕ್ಷ ಜ್ಞಾನವನ್ನು ಪಡೆದ ಶಿವಯೋಗಿಗೆ ದೇಹಾದ್ಯಭಿಮಾನಗಳು ಇಲ್ಲದಾಗಿ ಅವನು ನಿರ್ದೇಹ ಸ್ಥಿತಿಯನ್ನು ಪಡೆಯುತ್ತಾನೆಂಬುದಾಗಿ ತಿಳಿಯಪಡಿಸಿ ಈ ನಿರ್ದೇಹಾಗಮಸ್ಥಲದ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೦ ನವ್ಹಂಬರ, ೧೯೯೪

(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)

ಆಶೀರ್ವಚನ-೧

# ನಿರ್ಭಾವಾಗಮಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಸಹೃದಯೀ ಸಾಧಕರೇ ! ಆಚಾರ ಸಂಪನ್ನರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡ ಬೇರೆ ಬೇರೆ ಪ್ರಾಂತಗಳ ಎಲ್ಲ ಸದ್ಭಕ್ತರೇ ! ಹಾಗೂ ತಾಯಂದಿರೇ ! ಶ್ರೀ ಕಾಶೀ ಮಹಾ ಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ, ಶ್ರೀ ಮಹಾ ಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಪಾಪನಾಶಿನಿ ಯಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ ಸದ್ಯಃ ಜ್ಞಾನಗಂಗೆಯಲ್ಲಿ ಮೀಯಲಿಚ್ಛಿಸಿ ದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ ! ನಿನ್ನೆಯ ದಿನ ನಿರ್ದೇಹಾಗಮಸ್ಥಲದ ಬಗ್ಗೆ ಕೂಲಂಕಷವಾಗಿ ವಿವರಿಸಲಾಗಿದೆ. ಇಂದು ಅದರ ಮುಂದಿನ ಸ್ಥಲವಾದ ನಿರ್ಭಾವಾಗಮ ಸ್ಥಲದ ಬಗ್ಗೆ ವಿವೇಚಿಸಲಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ಭಾವಾಗಮ ಸ್ಥಲವನ್ನು ಕುರಿತು ಉಪದೇಶವನ್ನು ಪ್ರಾರಂಭಿಸುತ್ತ-

> ವ್ಯತಿರೇಕಾತ್ ಸ್ವರೂಪಸ್ಯ ಭಾವಾಂತರ ನಿರಾಕೃತೇಃ ।
> ಭಾವೋ ವಿಕಾರನಿರ್ಮುಕ್ತೋ ನಿರ್ಭಾವಾಗಮ ಉಚ್ಯತೇ ॥
>
> (ಸಿ.ಶಿ. ೧೮-೪೫)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಆತ್ಮಸ್ವರೂಪದ ಹೊರತಾಗಿ ಭಾವನೆಯಲ್ಲಿ ಬೇರಾವ ಆಕಾರಗಳು ಬಾರದಂತೆ ತಡೆದು, ಭಾವನೆಯನ್ನು ಯಾವುದೇ ವಿಕಾರಕ್ಕೊಳಗಾಗದಂತೆ ಅದನ್ನು ಪರಿಶುದ್ಧವಾಗಿಟ್ಟುಕೊಳ್ಳುವುದಕ್ಕೇನೇ ನಿರ್ಭಾ ವಾಗಮವೆಂದು ಕರೆಯುತ್ತಾರೆ.

ಭಾವನೆಯೆಂಬುದು ಮನಸ್ಸಿನ ಒಂದು ವೃತ್ತಿಯು. ''ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಃ ಶಿವಾತ್ಮಕಃ'' ಎಂಬ ಆಚಾರ್ಯರ ಉಕ್ತಿಗನುಸಾರವಾಗಿ ಸಂಪೂರ್ಣವಾಗಿ ಶಿವಮಯವಾಗಿರುವ ಮನೋವೃತ್ತಿಗೆ ಭಾವನೆಯೆಂದು ಕರೆಯಲಾಗುತ್ತದೆ. ನಮ್ಮೆಲ್ಲರಿಗೆ ಪರಮಾತ್ಮನು ಲೌಕಿಕ ಹಾಗೂ ಆಧ್ಯಾತ್ಮ ವ್ಯವಹಾರದ ಬಳಕೆಗಾಗಿ ಶರೀರ, ವಾಣಿ ಮತ್ತು

ಮನಸ್ಸುಗಳೆಂಬ ತ್ರಿಕರಣಗಳನ್ನು ದಯಪಾಲಿಸಿರುತ್ತಾನೆ. ನಾವು ನಮ್ಮ ಸ್ಥೂಲ ಶರೀರ ದಿಂದ ಭಗವಂತನ ಮೂರ್ತಿಯನ್ನು ಮುಟ್ಟಿ ಪೂಜಿಸಬಹುದು. ಆದರೆ ಅವನ ದಿವ್ಯವಾದ ಸರ್ವಜ್ಞತೆ, ನಿತ್ಯತೃಪ್ತತೆ, ಅನಾದಿಬೋಧತೆ ಮತ್ತು ಅಲುಪ್ತ ಶಕ್ತಿಮತ್ವತೆ ಯೆಂಬ ಗುಣಗಳನ್ನು ಹಸ್ತದಿಂದ ಸ್ಪರ್ಶಿಸಲಾಗುವುದಿಲ್ಲ. ಅವುಗಳನ್ನು ವಾಣಿಯ ಮುಖಾಂತರ ಸ್ತುತಿಸಿ ಸ್ಪರ್ಶಿಸಬಹುದು. ಇನ್ನು ಪರಮಾತ್ಮನ ಸಚ್ಚಿದಾನಂದ ಸ್ವರೂಪ ವನ್ನು ವಾಣಿಯಿಂದಲೂ ಸಹ ಸ್ಪರ್ಶಿಸಲಾಗುವುದಿಲ್ಲ, ಅದನ್ನು ಮನಸ್ಸಿನಿಂದಲೇ ಅನುಭವಿಸಬೇಕು. ಹೀಗೆ ತ್ರಿಕರಣಗಳಿಂದ ನಾವು ಪರಮಾತ್ಮನ ಮೂರ್ತಿ, ಗುಣ ಹಾಗೂ ಸ್ವರೂಪಗಳನ್ನು ಅನುಭವಿಸಬಹುದಾಗಿದೆ.

ಪರಮಾತ್ಮನ ಆ ಸಚ್ಚಿದಾನಂದ ಸ್ವರೂಪವನ್ನು ಮೊದಲು ಶ್ರವಣ ಮೂಲಕ ವಾಗಿ ತಿಳಿದುಕೊಂಡು, ಮನನದಿಂದ ಅನ್ಯಾಕಾರವೃತ್ತಿಯನ್ನು ತಡೆದು, ನಿದಿಧ್ಯಾಸದ ಮೂಲಕ ಮನೋವೃತ್ತಿಯನ್ನು ಸದಾ ಆತ್ಮರೂಪವಾಗಿಯೇ ಇಡಲಿಕ್ಕೆ ಸಾಧ್ಯವಾಗು ವುದು. ಇಲ್ಲಿ ನಿರ್ಭಾವವೆಂದರೆ ನಿದಿಧ್ಯಾಸವುವೆಂದೇ ಅರ್ಥವಾಗುವುದು. ಭಾವನೆಯಲ್ಲಿ ಆತ್ಮಾತಿರಿಕ್ತವಾದ ಬೇರಾವ ವಿಕಾರಗಳು ಬಾರದಂತೆ ಕೇವಲ ಆತ್ಮರೂಪದಲ್ಲಿ ನೆಲೆ ಗೊಂಡ ಮನೋವೃತ್ತಿಗೇನೇ ನಿರ್ಭಾವವೆಂದು ಪೂಜ್ಯಪಾದರು ಅಪ್ಪಣೆಕೊಡಿಸಿದ್ದರಿಂದ ನಿದಿಧ್ಯಾಸ ಹಾಗೂ ನಿರ್ಭಾವಗಳ ಸ್ವರೂಪವು ಒಂದೇ ವಿಧವಾಗಿ ಕಂಡುಬರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ಭಾವದ ಲಕ್ಷಣವನ್ನು ಸ್ಪಷ್ಟಪಡಿಸುತ್ತ ಪುನಃ–

> ಅಹಂ ಬ್ರಹ್ಮೇತಿ ಭಾವಸ್ಯ ವಸ್ತುದ್ವಯ ಸಮಾಶ್ರಯಃ ।
> ಏಕೀಭೂತಸ್ಯ ಚಿದ್‌ವ್ಯೋಮ್ನಿ ತದಭಾವೋ ವಿನಿಶ್ಚಿತಃ ॥
>
> ಏಕಭಾವನಿರೂಢಸ್ಯ ನಿಷ್ಕಲಂಕೇ ಚಿದಂಬರೇ ।
> ಕ್ವ ಜಾತಿವಾಸನಾಯೋಗಃ ಕ್ವ ದೇಹಿತ್ವಂ ಪರಿಭ್ರಮಃ ॥

(ಸಿ.ಶಿ.೧೮; ೪೬–೪೭)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, 'ಅಹಂ ಬ್ರಹ್ಮಾಸ್ಮಿ' ಅಂದರೆ 'ನಾನು ಬ್ರಹ್ಮನಿದ್ದೇನೆ' ಎಂಬ ಭಾವನೆಯಲ್ಲಿ ಅಹಂ ಮತ್ತು ಬ್ರಹ್ಮ ಎಂಬ ಎರಡು ವಸ್ತುಗಳ ಅಪೇಕ್ಷೆಯು ಕಂಡುಬರುತ್ತದೆ. ಪರಶಿವ ಬ್ರಹ್ಮದ ಜೊತೆಗೆ ಸಮರಸವಾಗಿರುವ ಶಿವಯೋಗಿಗೆ ಈ ಅಹಂ ಮತ್ತು ಬ್ರಹ್ಮ ಎಂಬ ಎರಡು ಭಾವನೆಗಳು ಇಲ್ಲದಾಗಿರುತ್ತವೆ. ಹೀಗೆ ಈ ಎರಡೂ ಭಾವನೆಗಳಿಲ್ಲದಿರುವ ಅವಸ್ಥೆಗೇನೇ ನಿರ್ಭಾವವೆಂದು ಕರೆಯುತ್ತಾರೆ.

'ಅಹಂ ಬ್ರಹ್ಮಾಸ್ಮಿ' ಎಂಬ ಈ ಭಾವನೆಯಲ್ಲಿ ಅಹಂ ಮತ್ತು ಬ್ರಹ್ಮವೆಂಬ ದ್ವಿಪಕ್ಷೀಯವಾದ ಜ್ಞಾನವಿರುತ್ತದೆ. ಈ ಜ್ಞಾನಕ್ಕೆ ವಿಕಲ್ಪ ಘಟಿತ ಜ್ಞಾನವೆಂದು ಕರೆಯು ತ್ತಾರೆ. ಇನ್ನು ಕೇವಲ ಅಹಂ ಎಂಬ ಭಾವವು ವಿಕಲ್ಪ ಶೂನ್ಯವಾಗಿರುತ್ತದೆ. ಇಂತಹ ವಿಕಲ್ಪ ಶೂನ್ಯವಾದ ಏಕರೂಪವಾದ ಭಾವನೆಯಲ್ಲಿರುವವನಿಗೆ ಜಾತಿ, ವರ್ಣ ಮತ್ತು ಆಶ್ರಮಾದಿಗಳ ವಾಸನೆಯು ಇರುವುದಿಲ್ಲ. ಅಂದರೆ ನಿರಂಜನ ರೂಪವಾದ ಚಿದಾಕಾಶ ದೊಂದಿಗೆ ಸಾಮರಸ್ಯ ರೂಪವಾದ ತಾದಾತ್ಮ್ಯವನ್ನು ಹೊಂದಿದ ಶಿವಯೋಗಿಗೆ

ಜಾತಿ–ವರ್ಣಾಶ್ರಮಗಳ ಸಂಬಂಧವಾಗಲೀ ಅಥವಾ ಶರೀರಾದಿಗಳ ಸಂಬಂಧವಾಗಲೀ ಇರುವುದಿಲ್ಲ. ಅಂದರೆ ಸರ್ವಥಾ ಅಲಿಪ್ತನಾಗಿರುತ್ತಾನೆ. ಈ ತೆರನಾದ ಅಲಿಪ್ತತೆಯೇ ನಿರ್ಭಾವವೆಂದು ಕರೆಯಲ್ಪಡುತ್ತದೆ.

ಜನಕ ಮಹಾರಾಜನ ಆಸ್ಥಾನಕ್ಕೆ ಒಮ್ಮೆ ಅಷ್ಟಾವಕ್ರ ಮಹರ್ಷಿಯು ಬಂದಿದ್ದನು. ಅವನು ಉತ್ಕೃಷ್ಟ ಜ್ಞಾನಸಂಪನ್ನನಾಗಿದ್ದನು. ಜನಕ ಮಹಾರಾಜನ ವಾರ್ತೆಯನ್ನು ಕೇಳಿ ಅವನನ್ನು ಭೆಟ್ಟಿಯಾಗಲು ಬಂದು ದರ್ಬಾರವನ್ನು ಪ್ರವೇಶಿಸಿದಾಗ ಇವನ ದೇಹದ ವಕ್ರಸ್ಥಿತಿಯನ್ನು ಕಂಡು ಆಸ್ಥಾನದ ವಿದ್ವಾಂಸರೆಲ್ಲರು ''ಘೊಳ್ಳನೆ'' ನಕ್ಕು ಬಿಟ್ಟರು. ಅವರೆಲ್ಲರೂ ನಗುವವರೆಗೆ ಸುಮ್ಮನಿದ್ದ ಅಷ್ಟಾವಕ್ರನು ಅವರ ನಗುವು ಮುಗಿದ ಬಳಿಕ ತಾನೂ ಸಹ ಜೋರು ಜೋರಾಗಿ ನಗತೊಡಗಿದನು. ಇವನು ನಗುವುದನ್ನು ಕಂಡು ಆಶ್ಚರ್ಯಚಕಿತನಾದ ಜನಕ ಮಹಾರಾಜನು ''ಇದೇನು ನೀವು ನಗಲು ಕಾರಣ ವೇನು?'' ಎಂದು ಪ್ರಶ್ನಿಸಲು–''ಎಲೈ ಮಹಾರಾಜನೆ ! ಜ್ಞಾನಿಯಾದ ಜನಕ ಮಹಾರಾಜನ ಆಸ್ಥಾನದಲ್ಲಿ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರೇ ಇರುವರೆಂದು ಭಾವಿಸಿದ್ದೆನು. ಆದರೆ ನಿನ್ನ ಆಸ್ಥಾನದಲ್ಲೆಲ್ಲ ಚಮ್ಮಾರರೇ ತುಂಬಿಕೊಂಡಿರುವುದನ್ನು ನೋಡಿ ನನಗೆ ಎಲ್ಲಿಲ್ಲದ ನಗುವು ಉಕ್ಕಿಬಂದಿತು'' ಎಂದು ಮಾರುತ್ತರವಿತ್ತನು. ಮಹರ್ಷಿಯ ಈ ಮಾತನ್ನು ಕೇಳಿ ಪ್ರಭಾವಿತನಾದ ಜನಕನು ಅವರಿಂದಲೇ ತತ್ತ್ವೋಪದೇಶವನ್ನು ಪಡೆದ ಪ್ರಸಂಗವು ಸುಪ್ರಸಿದ್ಧವಾಗಿದೆ. ಜನಕನಿಗೆ ಮಾಡಿದ ಆ ಉಪದೇಶವೇ ''ಅಷ್ಟಾವಕ್ರ ಗೀತೆ'' ಎಂಬುದಾಗಿ ಪ್ರಸಿದ್ಧವಾಗಿದೆ. ಇಲ್ಲಿ ಜನಕನ ಆಸ್ಥಾನದಲ್ಲಿರುವ ವಿದ್ವಾಂಸರೆಲ್ಲ ಆತ್ಮಜ್ಞಾನಿಗಳಾಗಿರಬಹುದೇನೋ ನಿಜ. ಅವರಲ್ಲಿ ಇನ್ನೂ ನಿರ್ಭಾವ ಸ್ಥಿತಿಯು ಆಳವಟ್ಟಿರಲಿಲ್ಲವೆಂದು ತಿಳಿದುಬರುತ್ತದೆ. ಈ ನಿರ್ಭಾವ ವಳವಟ್ಟ ಶಿವಯೋಗಿಯ ಸ್ಥಿತಿಯು ಸಮಸ್ತ ಜ್ಞಾನಿಗಳಲ್ಲಿ ಸರ್ವೋತ್ಕೃಷ್ಟವಾಗಿರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಿರ್ಭಾವಸ್ಥಲದ ಶಿವಯೋಗಿಯ ಸ್ಥಿತಿಯನ್ನೇ ಇನ್ನಷ್ಟು ಸೂಕ್ಷ್ಮವಾಗಿ ವಿವರಿಸುತ್ತ ಪುನಃ–

> ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನಸಾಧ್ವನಃ ।
> ವಿಲೀನಾತ್ಮಾ ಮಹಾಯೋಗೀ ಕೇನ ಕಿಂವಾಽಪಿ ಭಾವಯೇತ್ ॥
>
> ಅವಿಶುದ್ಧೇ ವಿಶುದ್ಧೇ ವಾ ಸ್ಥಲೇ ದೀಪ್ತಿರ್ಯಥಾ ರವೇಃ ।
> ಪತತ್ಯೇವಂ ಸದಾಽದ್ವೈತೀ ಸರ್ವತ್ರ ಸಮವೃತ್ತಿಮಾನ್ ॥
>
> ನ ಬಿಭೇತಿ ಜರಾಮೃತ್ಯೋರ್ನ ಕ್ಷುಧಾಯಾವಶಂ ವ್ರಜೇತ್ ।
> ಪರಿಪೂರ್ಣನಿಜಾನಂದಂ ಸಮಾಸ್ವಾದನ್ ಮಹಾಸುಖೀ ॥

(ಸಿ.ಶಿ. ೧೮; ೪೮–೫೦)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ವಾಕ್ ಮತ್ತು ಮನಸ್ಸುಗಳಿಗೆ ಅಗೋಚರವಾದ ನೀಲ–ಪೀತಾದಿ ಆಕಾರಶೂನ್ಯವಾದ, ಚಿದಾಕಾಶದೊಂದಿಗೆ ತಾದಾತ್ಮ್ಯನಾಗಿರುವ ಶಿವಯೋಗಿಯು ಯಾವುದರಿಂದ ಏನನ್ನು ಭಾವಿಸಬೇಕು? ಅರ್ಥಾತ್ ಯಾವುದೇ ಪ್ರಕಾರವಾದ ಭಾವನೆಯು ಅವನಲ್ಲಿ ಸಂಭವಿಸುವುದಿಲ್ಲವೆಂಬ

ಈ ನಿರ್ಭಾವಸ್ಥಲದ ಶಿವಯೋಗಿಯು ಸೂರ್ಯಪ್ರಕಾಶದಂತೆ ಸಮವೃತ್ತಿಯುಳ್ಳವ ನಾಗಿರುತ್ತಾನೆ. ಅಂದರೆ ಸೂರ್ಯಪ್ರಕಾಶವು ಶುದ್ಧ–ಅಶುದ್ಧವೆಂಬ ಭೇದವನ್ನು ಮಾಡದೆ ಎಲ್ಲಾ ಸ್ಥಾನಗಳಲ್ಲಿ ಸಮಾನವಾಗಿ ಹೇಗೆ ಪ್ರಸರಿಸಿರುತ್ತದೆಯೋ ಅದೇ ಪ್ರಕಾರ ವಾಗಿ ಸದಾ ಅದ್ವೈತ ಸ್ಥಿತಿಯಲ್ಲಿರುವ ಈ ನಿರ್ಭಾವ ಸ್ಥಲದ ಶಿವಯೋಗಿಯು ಸರ್ವತ್ರ ಸಮವೃತ್ತಿಯುಳ್ಳವನಾಗಿರುತ್ತಾನೆ. ಎಂದರೆ ಇವನ ದೃಷ್ಟಿಯಲ್ಲಿ ಯಾವುದೇ ಪ್ರಕಾರದ ಭೇದ ಭಾವವು ಇರುವುದಿಲ್ಲ.

ಹೀಗೆ ಸಮವೃತ್ತಿಯುಳ್ಳ ಈ ಶಿವಯೋಗಿಯು ಮೃತ್ಯು–ಮರಣಗಳಿಗೆ ಎಂದೂ ಅಂಜುವುದಿಲ್ಲ. ಇದೂ ಅಲ್ಲದೆ ಹಸಿವೆ–ತೃಷೆಗಳಿಗೆ ಒಳಗಾಗುವುದೂ ಇಲ್ಲ. ಅವನು ಪರಿಪೂರ್ಣವಾದ ತನ್ನದೇ ಆದ ಆತ್ಮಾನಂದವನ್ನು ಆಸ್ವಾದಿಸುತ್ತ ಸದಾ ಮಹಾಸುಖಿ ಯಾಗಿ ಸರ್ವತ್ರ ಸಂಚರಿಸುತ್ತಿರುತ್ತಾನೆ.

ಆತ್ಮತತ್ತ್ವವು ವಾಣಿ–ಮನಸ್ಸುಗಳಿಗೆ ಮೀರಿದ ಸ್ಥಿತಿಯಲ್ಲಿ ಇರುವಂಥಾದ್ದಾಗಿ ರುತ್ತದೆ. ಅಂತೆಯೇ ಶ್ರುತಿಯು– ''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' ಎಂಬುದಾಗಿ ಹೇಳಿದೆ. ಇಂತಹ ಅಗೋಚರವಾದ ಸ್ಥಿತಿಯಲ್ಲಿರುವ ಆತ್ಮದೊಂದಿಗೆ ಸಮರಸನಾಗಿರುವ ಶಿವಯೋಗಿಗೆ 'ಇದು ಶುದ್ಧ' 'ಇದು ಅಶುದ್ಧ' ಎಂಬ ಭಾವನೆಯು ಇರುವುದಿಲ್ಲ. ಸೂರ್ಯನ ಪ್ರಕಾಶವು ಪವಿತ್ರ ಹಾಗೂ ಅಪವಿತ್ರ ಸ್ಥಾನಗಳೆರಡರಲ್ಲಿಯೂ ಸಮಾನವಾಗಿ ದೇದೀಪ್ಯಮಾನವಾಗಿರುವಂತೆ ಇವನ ವೃತ್ತಿಯೂ ಸಹ ಸಮಾನ ವಾಗಿರುತ್ತದೆ. ಇದುವೇ ಪರಿಪೂರ್ಣ ಜ್ಞಾನಿಯ ಸ್ಥಿತಿಯು.

ಕಾಶೀ ಕ್ಷೇತ್ರದಲ್ಲಿ ನಿವಾಸಿಸುತ್ತಿದ್ದ ಶ್ರೀ ಶಂಕರಾಚಾರ್ಯರು ಆತ್ಮಜ್ಞಾನಿಗಳಾಗಿದ್ದ ರೇನೋ ನಿಜ. ಆದರೆ ಅವರಲ್ಲಿನ್ನೂ ಈ ನಿರ್ಭಾವ ಸ್ಥಿತಿಯು ಅಳವಟ್ಟಿರಲಿಲ್ಲ. ಇದನ್ನರಿತ ಕಾಶಿಯ ಅಧಿಪತಿಯಾದ ವಿಶ್ವೇಶ್ವರನು ಶಂಕಾರಾಚಾರ್ಯರಿಗೆ ನಿರ್ಭಾವಸ್ಥಿತಿಯನ್ನು ಪ್ರದಾನ ಮಾಡಲೋಸುಗ ಒಮ್ಮೆ ಚಾಂಡಾಲ ವೇಷವನ್ನು ಧರಿಸಿ, ಒಂದು ಇಕ್ಕಟ್ಟಾದ ಸಂದಿಯೊಳಗೆ ಶಂಕರಾಚಾರ್ಯರಿಗೆ ಎದುರಾಗಿ ಬಂದನು. ಶ್ರೀ ಶಂಕರಾಚಾರ್ಯರು ಗಂಗೆಯಲ್ಲಿ ಮಿಂದು ಮಡಿವಸ್ತ್ರವನ್ನು ಧರಿಸಿ ಪವಿತ್ರವಾದ ಗಂಗೋದಕವನ್ನು ಕಮಂಡಲದಲ್ಲಿ ತುಂಬಿಕೊಂಡು ವಿಶ್ವನಾಥನಿಗೆ ಅಭಿಷೇಕ ಮಾಡಲು ಹೊರಬಿದ್ದರು. ಆಗ ತಮ್ಮೆದುರಿಗೆ ಬರುತ್ತಿದ್ದ ಚಾಂಡಾಲನನ್ನು ಅವರು ಕಂಡು– ''ಸರೆ, ಹಿಂದಕ್ಕೆ ಸರೆ !'' ಎಂಬುದಾಗಿ ಗಟ್ಟಿಯಾದ ಧ್ವನಿಯಲ್ಲಿಯೇ ಗದರಿಸಿದರು. ಆಗ ಚಾಂಡಾಲನು ಅಂಜದೆ ಅಲ್ಲಿಯೇ ನಿಂತು ಧೈರ್ಯವಾಗಿ– ''ಏನು ನೀನು ಸರೆ ಎನ್ನುತ್ತಿರುವುದು ಈ ಸ್ಥೂಲ ದೇಹವನ್ನುದ್ದೇಶಿಸಿಯೋ ? ದೇಹವನ್ನು ಸರಿಸುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ ನಿನ್ನ ದೇಹವು ಹೇಗೆ ಅನ್ನಮಯವಾದುದೋ ನನ್ನದಾದರೂ ಹಾಗೆಯೇ ಇರುವುದು. ಇಂತಿರುವಾಗ ಇದನ್ನು ಸರಿಸಿ ಏನು ಪ್ರಯೋಜನ ?'' ಆತ್ಮವನ್ನುದ್ದೇಶಿಸಿ ಸರೆ ಎಂಬುದಾಗಿ ಹೇಳುತ್ತಿದ್ದರೆ ಅದು ಸರ್ವತ್ರ ವ್ಯಾಪಕವಾಗಿರೋಣದರಿಂದ ಅದರಲ್ಲಿ ಸರಿದಾಡುವುದು ಸಂಭವಿಸುವುದೇ ಇಲ್ಲ. ಹೀಗಿರುವಾಗ 'ನೀನು ಸರೆ' ಎಂದು ಹೇಳಿದ ಶಬ್ದಕ್ಕೆ ಅದಾವ ಪ್ರಯೋಜನವಿದೆ ? ಚಾಂಡಾಲನ ಮುಖದಿಂದ ಹೊರ ಹೊರಟ ಈ

ತಾತ್ವಿಕವಾದ ನುಡಿಗಳನ್ನು ಕೇಳಿದಾಗ ಶ್ರೀ ಶಂಕರಾಚಾರ್ಯರ ಮನಸ್ಸಿನಲ್ಲಿಯ ಭೇದ ಬುದ್ಧಿಯು ದೂರಾಗಿ ಪಶ್ಚಾತ್ತಾಪ ಭಾವನೆಯು ಒಡಮೂಡುತ್ತಿರುವಂತೆಯೇ ಆ ಚಾಂಡಾಲನಲ್ಲಿ ವಿಶ್ವೇಶ್ವರನು ಪ್ರಕಟನಾಗಿ ಅವರನ್ನು ಅನುಗ್ರಹಿಸಿದನು.

ಅಂದಿನಿಂದ ಅವರು ಮೇಲು–ಕೀಳು, ಶುದ್ಧ–ಅಶುದ್ಧ, ಮುಂತಾದ ಭಾವನೆ ಗಳನ್ನೆಲ್ಲ ಬಿಟ್ಟು ನಿರ್ಭಾವಸ್ಥಿತಿಯನ್ನು ಅಳವಡಿಸಿಕೊಂಡರು.

ಇಂತಹ ನಿರ್ಭಾವಸ್ಥಿತಿಯಳವಟ್ಟ ಶಿವಯೋಗಿಗೆ ಜರಾ–ಮರಣಗಳ ಭೀತಿಯೇ ಇರುವುದಿಲ್ಲ, ಕಾಲನಿಗೂ ಕಾಲನಾದ ಮಹಾಕಾಲ ಸ್ವರೂಪವೇ ತಾನಾಗಿರುವ ಸ್ಥಿತಿಯು ಬಂದೊದಗಿದ ಅವನಿಗೆ ಅದಾವ ಭೀತಿಯುಂಟಾದೀತು ? ಹಸಿವು–ತೃಷೆಗಳಿಗೆ ವಶನಾಗದ ಈ ಶಿವಯೋಗಿಯು ಪರಿಪೂರ್ಣವಾದ ಆತ್ಮಾನಂದವನ್ನೇ ಅನುಭವಿಸುತ್ತ ಸದಾ ಅಚ್ಚಸುಖಿಯಾಗಿರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೧ ನವ್ಹಂಬರ, ೧೯೯೪
(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ನಷ್ಟಾಗಮಸ್ಥಲ

ಕಾಶೀ ವೀರಶೈವ ವಿದ್ವತ್‌ಸಂಘದ ಜಿಜ್ಞಾಸುಗಳಾದ ಸಾಧಕರೇ ! ವಿದ್ವಾಂಸರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡಿರುವ ವಿವಿಧ ರಾಜ್ಯಗಳ ಸದ್ಭಕ್ತರೇ ! ಮತ್ತು ತಾಯಂದಿರೇ ! ಈ ಕಾಶೀ ಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ, ಶ್ರೀಮಹಾಸನ್ನಿಧಿಯ ಶಿವ ಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಪರಮಪಾವನವಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ ಸದ್ಯಃ ಜ್ಞಾನಗಂಗೆಯಲ್ಲಿ ಅವಗಾಹನೆಗೈಯ್ಯುತ್ತಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ನಿರ್ಭಾವಾಗಮಸ್ಥಲದ ಬಗ್ಗೆ ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಇಂದು ಅದರ ಮುಂದಿನ ಸ್ಥಲವಾದ ನಷ್ಟಾಗಮ ಸ್ಥಲದ ಬಗ್ಗೆ ವಿವೇಚಿಸೋಣ.

ತ್ರಿಪುಟಿರೂಪವಾದ ಭೇದವು ನಷ್ಟವಾಗಿ ಕೇವಲ ಜ್ಞಾನಮಾತ್ರವಿರುವುದಕ್ಕೆ ನಷ್ಟಾಗಮವೆಂದು ಕರೆಯುತ್ತಾರೆ. ಇದನ್ನು ಪ್ರತಿಪಾದಿಸುವ ಸ್ಥಲವೇ ನಷ್ಟಾಗಮ ಸ್ಥಲವು ಅದರ ಸ್ವರೂಪವನ್ನೇ ಪೂಜ್ಯಪಾದರು–

ಭೇದಶೂನ್ಯೇ ಮಹಾಬೋಧೇ ಜ್ಞಾತ್ರಾದಿತ್ರಯಹೀನತಃ ।
ಜ್ಞಾನಸ್ಯ ನಷ್ಟಭಾವೇನ ನಷ್ಟಾಗಮ ಇಹೋಚ್ಯತೇ ॥

ಅದ್ವೈತವಾಸನಾವಿಷ್ಟಚೇತಸಾಂ ಪರಯೋಗಿನಾಮ್ ।
ಪಶ್ಯತಾಮಂತರಾತ್ಮಾನಂ ಜ್ಞಾತೃತ್ವಂ ಕಥಮನ್ಯಥಾ ॥

ಅಕರ್ತಾಹಮವೇತ್ತಾಹಮದೇಹೋಽಹಂ ನಿರಂಜನಃ ।
ಇತಿ ಚಿಂತಯತಃ ಸಾಕ್ಷಾತ್ಸಂವಿದೇವ ಪ್ರಕಾಶತೇ ॥

(ಸಿ. ಶಿ. ೧೮; ೫೧–೫೩)

ಈ ತೆರನಾಗಿ ಉಪದೇಶಿಸಿದ್ದಾರೆ. ಸಾರವೇನೆಂದರೆ, ಭೇದವಿಲ್ಲದಿರುವ ಮಹಾ ಶಿವಾದ್ವೈತ ಜ್ಞಾನದಲ್ಲಿ ಜ್ಞಾತಾ, ಜ್ಞಾನ ಮತ್ತು ಜ್ಞೇಯವೆಂಬ ತ್ರಿಪುಟಿ ರೂಪವಾದ ಪ್ರಪಂಚವು ಇಲ್ಲವಾಗಿರುತ್ತದೆ. ಅಂತಹ ಜ್ಞಾನವನ್ನು ಪಡೆದುಕೊಂಡ ಈ ಪೂರ್ವದ

ನಿರ್ಭಾವಾಗಮಸ್ಥಲದ ಶಿವಯೋಗಿಯಲ್ಲಿರುವ ಜ್ಞಾನವು ತ್ರಿಪುಟಿಭಾವವನ್ನು ಕಳೆದು ಕೊಂಡಿರೋಣದರಿಂದ ಅದಕ್ಕೆ ನಷ್ಟಾಗಮವೆಂದು ಕರೆಯಲಾಗುತ್ತದೆ. ಎಲ್ಲವೂ ಶಿವಮಯವೆಂದು ತಿಳಿಯುವ ಜ್ಞಾನವೇ ಮನದಲ್ಲಿ ತುಂಬಿರುವ ಶಿವಯೋಗಿಯು ತನ್ನ ಹೃದಯದಲ್ಲಿ ಸದಾ ಸ್ವ ಸ್ವರೂಪವನ್ನೇ ಕಾಣುತ್ತಿರುತ್ತಾನೆ. ಅಂಥವರಿಗೆ ತನಗನ್ಯವಾದ ಬೇರೊಂದು ಪದಾರ್ಥವಿರುವುದಾಗಲೀ ಮತ್ತು ಅದನ್ನು ತಿಳಿಯುವತನಕವಾಗಲೀ ಅದು ಹೇಗೆ ತಾನೇ ಸಂಭವಿಸಬಲ್ಲದು ? ಅರ್ಥಾತ್ ಅಲ್ಲಿ ಅನನ್ಯವಾದ ಜ್ಞಾತೃತ್ವವು ಇರುವುದೇ ಇಲ್ಲ. ''ನಾನು ಕರ್ತನೂ ಅಲ್ಲ, ತಿಳಿಯುವವನೂ ಅಲ್ಲ, ನನಗೆ ದೇಹವೂ ಇರುವುದಿಲ್ಲ, ಮತ್ತು ನಾನು ನಿರಂಜನನಾಗಿದ್ದೇನೆ'' ಎಂಬುದಾಗಿ ಸದಾ ಧ್ಯಾನಿಸುತ್ತಿರುವ ಆ ಶಿವಯೋಗಿಗೆ ಅಖಂಡವಾದ ಜ್ಞಾನವೊಂದೇ ಪ್ರಕಾಶಿಸುತ್ತಿರುತ್ತದೆ. ಅಲ್ಲಿ ಜ್ಞಾತೃ-ಜ್ಞಾನ ಮತ್ತು ಜ್ಞೇಯವೆಂಬ ತ್ರಿಪುಟಿಯು ನಷ್ಟವಾಗಿ ಹೋಗಿರುತ್ತದೆ. ಅರ್ಥಾತ್ ಈ ತ್ರಿಪುಟಿರಹಿತವಾದ ಕೇವಲ ಜ್ಞಾನವೊಂದೇ ಪ್ರಕಾಶಿಸುತ್ತಿರುತ್ತದೆ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಪ್ರಾರಂಭಿಕಾವಸ್ಥೆಯಲ್ಲಿ ಲೌಕಿಕ ಜ್ಞಾನವೇ ಇರಲಿ ಮತ್ತು ಅಲೌಕಿಕ ಜ್ಞಾನವೇ ಇರಲಿ ಅವುಗಳಲ್ಲಿ ತ್ರಿಪುಟಿ ವ್ಯವಹಾರವು ಅವಶ್ಯವಾಗಿ ಇದ್ದೇ ಇರುತ್ತದೆ. ಜ್ಞಾತೃ, ಜ್ಞಾನ ಮತ್ತು ಜ್ಞೇಯಗಳೇ ಆ ತ್ರಿಪುಟಿಗಳು. ಇವುಗಳಿಗೇನೇ ಪ್ರಮಾತೃ, ಪ್ರಮಾಣ ಮತ್ತು ಪ್ರಮೇಯ ಎಂಬುದಾಗಿಯೂ ಕರೆಯುತ್ತಾರೆ. ಇಲ್ಲಿ ಜ್ಞಾತೃ ಎಂದರೆ ತಿಳಿದುಕೊಳ್ಳುವ ವ್ಯಕ್ತಿ, ಜ್ಞಾನವೆಂದರೆ ತಿಳುವಳಿಕೆ ಮತ್ತು ಜ್ಞೇಯವೆಂದರೆ ತಿಳಿದುಕೊಳ್ಳುವ ವಸ್ತು ಎಂದು ಅರ್ಥವಾಗುತ್ತದೆ. ಉದಾಹರಣೆಗಾಗಿ ''ನಾನು ಸಿದ್ಧಾಂತ ಶಿಖಾಮಣಿಯನ್ನು ತಿಳಿದು ಕೊಳ್ಳುತ್ತಿದ್ದೇನೆ'' ಎಂಬ ಈ ವಾಕ್ಯದಲ್ಲಿ ನಾನು ಎಂಬ ವ್ಯಕ್ತಿಯೇ ಇಲ್ಲಿ ಜ್ಞಾತೃ ಆಗಿರುತ್ತಾನೆ.

ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಜ್ಞಾನಕ್ಕೆ ವಿಷಯವಾಗಿರೋಣದರಿಂದ ಅದು ಜ್ಞೇಯವಾಗಿರುತ್ತದೆ. ಇನ್ನು ಅದರ ವಿಷಯಕವಾಗಿ ಉತ್ಪನ್ನವಾದ ತಿಳುವಳಿಕೆಯೇ ಜ್ಞಾನವೆಂದು ಕರೆಯಲ್ಪಡುತ್ತದೆ. ಈ ಪ್ರಕಾರವಾಗಿ ತ್ರಿಪುಟಿ ವ್ಯವಹಾರವು ಪ್ರತಿ ಯೊಂದು ಜ್ಞಾನದಲ್ಲಿ ಇದ್ದೇ ಇರುತ್ತದೆ. ಆದರೆ ಈ ನಷ್ಟಾಗಮಸ್ಥಲದ ಶಿವಯೋಗಿಗೆ ಉಂಟಾದ ಮಹಾಬೋಧದಲ್ಲಿ ಈ ತ್ರಿಪುಟಿಗಳ ವ್ಯವಹಾರವು ಇಲ್ಲದಾಗಿರುತ್ತದೆ. ಇಲ್ಲಿ ಜ್ಞಾತಾ, ಜ್ಞಾನ ಮತ್ತು ಜ್ಞೇಯಗಳೆಂಬ ಭಾವವು ಇಲ್ಲದಾಗಿ ಹೋಗಿ ಕೇವಲ ಅಖಂಡ ವಾದ ಬೋಧೆಯೊಂದೇ ಇರುತ್ತದೆ.

ಜಾಗೃದಾವಸ್ಥೆಯಲ್ಲಿ ಓರ್ವ ವ್ಯಕ್ತಿಯು ತ್ರಿಪುಟಿಮಯ ವ್ಯವಹಾರವನ್ನು ಮಾಡಿ ಮಾಡಿ ಬೇಸತ್ತು ಸುಷುಪ್ತಾವಸ್ಥೆಯನ್ನು ಹೊಂದಿದಾಗ, ಅಲ್ಲಿ ತ್ರಿಪುಟಿಮಯ ವ್ಯವಹಾರವು ಸಂಪೂರ್ಣವಾಗಿ ನಿಂತುಹೋಗಿರುತ್ತದೆ. ಆ ಅವಸ್ಥೆಯಲ್ಲಿರುವ ಪ್ರತಿಯೊಬ್ಬ ಜೀವಾತ್ಮನು ಅಲ್ಲಿ ಕೇವಲ ಆನಂದರೂಪನೇ ಆಗಿರುತ್ತಾನೆ. ಆ ಅವಸ್ಥೆಯಲ್ಲಿ ಜ್ಞಾನವಿದ್ದರೂ ಅದು ಭೇದಶೂನ್ಯವಾಗಿರೋಣದರಿಂದ ಅದರ ಪ್ರತೀತಿಯು ಉಂಟಾಗುವುದಿಲ್ಲ. ಯಾವಾಗ ಆ ವ್ಯಕ್ತಿಯು ಸುಷುಪ್ತಿಯಿಂದ ಎಚ್ಚರವಾಗುವನೋ ಆಗ ''ಸುಖೇನ ಸುಪ್ತೋಽಹಂ ನ ಕಿಂಚಿದವೇದಿಷಂ'', ಅಂದರೆ ''ನಾನು ಸುಖವಾಗಿ

ಮಲಗಿಕೊಂಡಿದ್ದೆ ನನಗಾವ ಅರಿವು ಇರಲಿಲ್ಲ'' ಎಂಬುದಾಗಿ ನುಡಿಯುವುದನ್ನು ಕೇಳುತ್ತೇವೆ. ಇಲ್ಲಿ ಸುಷುಪ್ತಾವಸ್ಥೆಯಲ್ಲಿ ಅನುಭವಿಸಿದ ಅನುಭವವನ್ನು ನೆನಪಿಸಿಕೊಂಡು ಹೇಳುತ್ತಿರುತ್ತಾನೆ. ಎಚ್ಚರಾದ ಮೇಲೆ ಅದರ ಸ್ಮೃತಿಯಾಗುತ್ತಿದೆಯೆಂದರೆ ಸುಷುಪ್ತಿಯಲ್ಲಿ ಅದರ ಅನುಭವವಾಗಿತ್ತೆಂಬುದು ತಿಳಿದುಬರುತ್ತದೆ. ಆದರೆ ಸುಷುಪ್ತಾವಸ್ಥೆಯಲ್ಲಿಯೇ ಅದರ ಅನುಭೂತಿಯು ನಮಗೆ ತಿಳಿಯುವುದಿಲ್ಲ, ಇದಕ್ಕೆ ಕಾರಣವೇನೆಂದರೆ ಸುಷುಪ್ತಾವಸ್ಥೆಯಲ್ಲಿ ಅಂತಃಕರಣವೃತ್ತಿಯು ವಿಲಯವಾಗಿ ಹೋಗಿರುತ್ತದೆ. ಅಂತೆಯೇ ಅಲ್ಲಿ ಪ್ರಮಾತೃ ಭಾವನೆಯಾಗಲಿ ಪ್ರಮಾಣ ವೃತ್ತಿಯಾಗಲಿ ಮತ್ತು ತನಗಿಂತ ಭಿನ್ನವಾದ ಪ್ರಮೇಯ ವಸ್ತುವಾಗಲಿ ಇಲ್ಲದಿರೋಣದರಿಂದ ಅಲ್ಲಿ ತ್ರಿಪುಟಿಗಳ ವ್ಯವಹಾರವಿಲ್ಲದ ಕಾರಣ ಅಲ್ಲಿ ಜ್ಞಾನವಿದ್ದರೂ ಅದು ಅನುಭವಾತ್ಮಕವಾಗಿರುತ್ತದೇನೋ ನಿಜ, ಆದರೆ ಅನುಭೂತಿಯ ಅಭಿವ್ಯಕ್ತಿಯ ಸಾಧನೆಗಳು ಅಲ್ಲಿ ಇಲ್ಲದಿರೋಣದರಿಂದ ಅದರ ವ್ಯವಹಾರವು ಅಲ್ಲಿ ಉಂಟಾಗುವುದಿಲ್ಲ.

ಹೀಗೆ ಸುಷುಪ್ತಿಯಲ್ಲಿ ತ್ರಿಪುಟಿಗಳ ವ್ಯವಹಾರವಿಲ್ಲದೆ ತಾನೇ ತಾನಾದ ತನ್ನ ಆನಂದದ ಸ್ಥಿತಿಯು ಇರುವಂತೆ ಈ ನಷ್ಟಾಗಮಸ್ಥಲದ ಶಿವಯೋಗಿಗೆ ಶಿವಾದ್ವೈತ ಜ್ಞಾನವು ದೃಢವಾಗಿರೋಣದರಿಂದ ಅವನು ತ್ರಿಪುಟಿಯ ಅವಸ್ಥೆಯನ್ನು ಮೀರಿ ಹೋಗಿರುತ್ತಾನೆ. ಹೀಗೆ ತ್ರಿಪುಟಿಗಳ ವ್ಯವಹಾರವಿಲ್ಲದಿರುವ ಕೇವಲ ಸ್ವರೂಪಜ್ಞಾನ ಸ್ಥಿತಿಯನ್ನೇ ಇಲ್ಲಿ ನಷ್ಟಾಗಮಸ್ಥಲವೆಂಬುದಾಗಿ ಪ್ರತಿಪಾದಿಸಲಾಗಿದೆ.

ವ್ಯವಹಾರದಲ್ಲಿ ತ್ರಿಪುಟಿಜ್ಞಾನವು ಹೇಗಾಗುತ್ತದೆಂಬುದನ್ನೂ ಸಹ ಈ ಸಂದರ್ಭ ದಲ್ಲಿ ತಿಳಿದುಕೊಳ್ಳುವುದು ಅವಶ್ಯಕವಾಗಿರೋಣದರಿಂದ ಅದನ್ನಿಲ್ಲಿ ಸ್ವಲ್ಪ ವಿವೇಚಿ ಸೋಣ. ಓರ್ವ ವ್ಯಕ್ತಿಯು ''ಅಹಂ ಘಟಂ ಪಶ್ಯಾಮಿ'' ನಾನು ಕೊಡವನ್ನು ನೋಡು ತ್ತೇನೆ ಎಂಬ ಒಂದು ವಾಕ್ಯವನ್ನು ಉಚ್ಚರಿಸಿದಾಗ ಅಲ್ಲಿ ಕೊಡವನ್ನು ನೋಡುವ ವ್ಯಕ್ತಿಯು 'ಜ್ಞಾತಾ' ಎಂತಲೂ ಘಟವು 'ಜ್ಞೇಯ'ವೆಂತಲೂ ಕರೆಯಲ್ಪಡುತ್ತದೆ. ಇನ್ನು ಮನಸ್ಸಿನ ವೃತ್ತಿಯು ನೇತ್ರೇಂದ್ರಿಯದ ಮುಖಾಂತರವಾಗಿ ಹೊರಹೋಗಿ ಆ ಘಟದ ಆಕಾರವನ್ನು ತಾಳಿದಾಗ ಅದಕ್ಕೆ ಜ್ಞಾನವೆಂದು ಕರೆಯುತ್ತಾರೆ. ಇವುಗಳೇ ತ್ರಿಪುಟಿಗಳು. ನಮ್ಮ ಎದುರಿಗಿರುವ ವಸ್ತುವು ಯಾವುದಿರುವುದೋ ಮನಸ್ಸು ಆ ಆಕಾರವನ್ನು ತಾಳುವುದು. ಇಲ್ಲಿ ತ್ರಿಪುಟಿಗಳ ಮೂಲಕ ಒಂದು ಜ್ಞಾನ ಪ್ರಾದುರ್ಭವಿಸುವಾಗ ಮೂರು ಚೈತನ್ಯಗಳ ಅಭೇದವು ಉತ್ಪನ್ನವಾಗುತ್ತದೆ. ಪ್ರಮಾತೃ ಚೇತನ, ಪ್ರಮಾಣ ಚೇತನ ಮತ್ತು ಪ್ರಮೇಯ ಚೇತನ, ಇವುಗಳೇ ಆ ಮೂರು ಚೇತನಗಳು.

ಜೀವಾತ್ಮನಿಗೆ ಅಧಿಷ್ಠಾನವಾದ ಚೈತನ್ಯಕ್ಕೆ ಪ್ರಮಾತೃ ಚೈತನ್ಯವೆನ್ನುತ್ತಾರೆ. ಮನೋ ವೃತ್ತಿಗೆ ಅಧಿಷ್ಠಾನವಾದುದುಕ್ಕೆ ಪ್ರಮಾಣ ಚೈತನ್ಯವೆನ್ನುವರು. ಇನ್ನು ವಿಷಯಕ್ಕೆ ಅಧಿಷ್ಠಾನವಾದ ಚೈತನ್ಯಕ್ಕೆ ಪ್ರಮೇಯ ಚೈತನ್ಯವೆನ್ನುತ್ತಾರೆ. ಇಲ್ಲಿ ಪ್ರಮಾತೃ ಚೈತನ್ಯವು ಪ್ರಮಾಣ ಚೈತನ್ಯದ ಮುಖಾಂತರ ಪ್ರಮೇಯ ಚೈತನ್ಯದ ಆಕಾರವನ್ನು ಯಾವಾಗ ತಾಳುವುದೋ ಆಗ ಒಂದು ವಿಷಯದ ಸರಿಯಾದ ತಿಳುವಳಿಕೆಯು ಉಂಟಾಗುತ್ತದೆ. ಇದನ್ನೇ ಸರಳಭಾಷೆಯಲ್ಲಿ ಹೇಳುವುದಾದರೆ ನಮ್ಮ ಮನಸ್ಸು ನೇತ್ರೇಂದ್ರಿಯದ

ಮುಖಾಂತರ ಘಟಪರ್ಯಂತವಾಗಿ ಹೋಗಿ ಯಾವಾಗ ಘಟಾಕಾರವನ್ನು ತಾಳು ವುದೋ ಆಗ ನಮಗೆ ಘಟದ ಜ್ಞಾನವು ಉಂಟಾಗುತ್ತದೆ. ಜೀವಾತ್ಮ ಹಾಗೂ ವಿಷಯಗಳ ಸಂಬಂಧವನ್ನು ಮುಂಡಿಸುವ ಕಾರ್ಯವನ್ನು ಮನೋವೃತ್ತಿಯು ಮಾಡುತ್ತಿರುತ್ತದೆ. ಮನೋವೃತ್ತಿಯು ವಿಷಯಾಕಾರವಾಗುವವರೆಗೆ ಜೀವಾತ್ಮನಿಗೆ ಆ ವಿಷಯದ ಜ್ಞಾನವು ಉಂಟಾಗುವುದಿಲ್ಲ. ಭಾವಿಯೊಳಗಿನ ನೀರು ಕಾಲುವೆಗಳ ಮುಖಾಂತರ ಹರಿದು ಆಯಾ ಗಿಡಗಳ ಮಡಿಗಳ ಆಕಾರವನ್ನು ತಾಳುವಂತೆ ಮನಸ್ಸೂ ಸಹ ಇಂದ್ರಿಯ ಮುಖಾಂತರ ಹರಿದು ವಿಷಯಾಕಾರವನ್ನು ತಾಳುತ್ತಿರುತ್ತದೆ.

ನಮ್ಮ ಇಂದ್ರಿಯಗಳಲ್ಲಿ ನೇತ್ರ ಹಾಗೂ ಶ್ರೋತ್ರಗಳು ಮನೋವೃತ್ತಿಯನ್ನು ಹೊರಗೆ ಹರಿಸುವ ಸಾಧನಗಳಾಗಿರುತ್ತವೆ. ಅಂತೆಯೇ ಮನಸ್ಸು ಇವುಗಳ ಮುಖಾಂತರ ಹೊರ ಹರಿದುಹೋಗಿ, ರೂಪ ಹಾಗೂ ಶಬ್ದಗಳ ಜ್ಞಾನವನ್ನು ಮಾಡಿಕೊಳ್ಳುತ್ತಿರುತ್ತದೆ. ಆದರೆ ಉಳಿದ ಇಂದ್ರಿಯಗಳಾದ ಘ್ರಾಣ, ರಸನೆ ಮತ್ತು ಚರ್ಮಗಳ ಮೂಲಕ ಮನಸ್ಸು ಹೊರಗೆ ಹರಿಯುವುದಿಲ್ಲ. ಆದರೆ ಅವುಗಳ ಜ್ಞಾನವನ್ನು ಮನಸ್ಸು ಮಾಡಿಕೊಳ್ಳಬೇಕಾ ದರೆ ಆ ವಿಷಯಗಳೇ ಬಂದು ಆ ಇಂದ್ರಿಯಗಳಿಗೆ ಸ್ಪರ್ಶವಾಗಬೇಕಾಗುತ್ತದೆ. ತಮ್ಮೆದುರಿಗೆ ಒಂದು ಮಿಠಾಯಿಯ ತಾಟನ್ನಿರಿಸಿದಾಗ ಅವುಗಳು ಕಣ್ಣಿಗೆ ಕಾಣುತ್ತಿದ್ದರೂ ಅವುಗಳ ರಸಾನುಭೂತಿಯು ಉಂಟಾಗುವುದಿಲ್ಲ. ಯಾವಾಗ ತಾಟಿನೊಳಗಿನ ಮಿಠಾಯಿ ಯನ್ನು ರಸನೇಂದ್ರಿಯಕ್ಕೆ ಸ್ಪರ್ಶಮಾಡಿಸುವೆವೋ ಆಗಲೇ ಅದರ ರಸಾನುಭೂತಿಯು ಉಂಟಾಗುತ್ತದೆ. ರಸನೇಂದ್ರಿಯಕ್ಕೆ ಸ್ಪರ್ಶವಾಗದೇ ರಸಾನುಭೂತಿಯೇನಾದರೂ ಉಂಟಾಗುತ್ತಿದ್ದರೆ ಅಂಗಡಿಯಿಂದ ಮಿಠಾಯಿಯನ್ನು ಖರೀದಿಮಾಡುವ ಅವಶ್ಯಕತೆ ಇರುತ್ತಿದ್ದಿಲ್ಲ.

ರಸ, ಗಂಧ ಹಾಗೂ ಸ್ಪರ್ಶಗಳೆಂಬ ವಿಷಯಗಳ ಜ್ಞಾನವಾಗಬೇಕಾದರೆ ಆ ವಿಷಯಗಳೇ ಇಂದ್ರಿಯಗಳೊಂದಿಗೆ ಸಂಬಂಧವನ್ನು ಪಡೆಯಬೇಕಾಗುತ್ತದೆ. ಇಲ್ಲಿ ವಿಷಯಗಳು ಇಂದ್ರಿಯ ಪರ್ಯಂತವಾಗಿ ಬಂದಾಗ ಇಲ್ಲವೇ ಇಂದ್ರಿಯ ಮುಖಾಂತರ ಮನಸ್ಸೇ ವಿಷಯ ಪರ್ಯಂತವಾಗಿ ಹೋದಾಗ ವಿಷಯಾಕಾರ ವೃತ್ತಿಯು ಸಂಭವಿಸಿ ಆ ವಿಷಯದ ಜ್ಞಾನವುಂಟಾಗುವುದು. ಹೀಗೆ ಜ್ಞಾತಾ, ಜ್ಞಾನ ಮತ್ತು ಜ್ಞೇಯಗಳೆಂಬ ತ್ರಿಪುಟಿಗಳ ಮುಖಾಂತರ ಜೀವಾತ್ಮನಿಗೆ ಬಾಹ್ಯ ವಿಷಯಗಳ ಜ್ಞಾನವು ಉಂಟಾಗುತ್ತದೆ. ಆದರೆ ಮನಸ್ಸಿಗೆ ಆತ್ಮಜ್ಞಾನವಾಗಬೇಕಾದಾಗ ಮನೋವೃತ್ತಿಯು ಆತ್ಮವನ್ನರಿಯಲು ಹೊರಗೆ ಹೋಗದೆ ಅಹಂ ಬ್ರಹ್ಮಾಸ್ಮಿ ಎಂಬುದಾಗಿ ಅಂತರ್ಮುಖವಾಗುವುದು. ಹೀಗೆ ಅಂತರ್ಮುಖವಾದಾಗ ಪ್ರಮಾತೃ, ಪ್ರಮಾಣ ಮತ್ತು ಪ್ರಮೇಯ ಚೈತನ್ಯಗಳು ಅಭಿನ್ನ ವಾಗಿ 'ನಾನು ಬ್ರಹ್ಮ ಸ್ವರೂಪನಿದ್ದೇನೆ' ಎಂಬ ಜ್ಞಾನವಾಗಲು ಅಲ್ಲಿ ಪ್ರಮಾತೃ ಪ್ರಮೇಯಗಳ ಅಭೇದವುಂಟಾಗಲು ಪ್ರಮಾಣವೂ ಸಹ ತದ್ರೂಪವೇ ಆಗಿಬಿಡುತ್ತದೆ. ಹೀಗಿರುವಾಗ ತ್ರಿಪುಟಿಗಳ ಅಭಾವಸ್ಥಿತಿಯು ಅಲ್ಲಿ ಪ್ರಾಪ್ತವಾಗುವುದು. ತ್ರಿಪುಟಿಗಳ ವ್ಯವಹಾರವು ಇಲ್ಲವಾದರೂ ಅಖಂಡವಾದ ಜ್ಞಾನವು ಮಾತ್ರ ಇದ್ದೇ ಇರುತ್ತದೆ. ಹೀಗೆ ತ್ರಿಪುಟಿ ಭೇದಶೂನ್ಯವಾದ ಅಖಂಡವಾದ ಮಹಾಬೋಧವೇ ಇಲ್ಲಿ ನಷ್ಟಾಗಮಸ್ಥಲ ವೆಂಬುದಾಗಿ ಕರೆಯಲ್ಪಟ್ಟಿದೆ.

ಹೀಗೆ ಅದ್ವೈತ ಸ್ಥಿತಿಯನ್ನು ತಲುಪಿದ ತನ್ನಂತರಾತ್ಮವನ್ನೇ ಸದಾನೋಡುತ್ತಿರುವ ಪರಶಿವಯೋಗಿಗೆ ಜ್ಞಾತೃತ್ವಾದಿಗಳು ಇರುವುದಿಲ್ಲ. ಇದೂ ಅಲ್ಲದೆ ಅವನಲ್ಲಿ ಅಕರ್ತೃತ್ವಾದಿ ಭಾವನೆಗಳೊಡಮೂಡಿ ನಿರಂಜನ ಸ್ವರೂಪವಾದ ತನ್ನದೇ ಆದ ಸ್ಥಿತಿಯಲ್ಲಿ ಆತನು ಉಳಿದುಕೊಂಡಿರುತ್ತಾನೆ. ಆಗ ಅವನಲ್ಲಿ ಕೇವಲ ಸಂವಿತ್ ಅರ್ಥಾತ್ ಜ್ಞಾನವೊಂದೇ ಇರುತ್ತದೆ. ಅದರಲ್ಲಿ ಯಾವುದೇ ಪ್ರಕಾರದ ಭೇದಗಳು ಇರುವುದಿಲ್ಲ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ನಷ್ಟಾಗಮ ಸ್ಥಿತಿಯನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪುನಃ–

ನಿರಸ್ತಭೇದಜಲ್ಪಸ್ಯ ನಿರೀಹಸ್ಯ ಪ್ರಶಾಮ್ಯತಃ ।
ಸ್ವೇ ಮಹಿಮ್ನಿ ವಿಲೀನಸ್ಯ ಕಿಮನ್ಯದ್‌ಜ್ಞೇಯಮುಚ್ಯತೇ ॥
ಏಕೀಭೂತೇ ನಿಜಾಕಾರೇ ಸಂವಿದಾ ನಿಷ್‌ಪ್ರಪಂಚಯಾ ।
ಕೇನ ಕಿಂ ವೇದನೀಯಂ ತದ್ವೇತ್ತಾಕಃ ಪರಿಭಾಷ್ಯತೇ ॥
ಮಹಾಸತ್ತಾ ಮಹಾಸಂವಿದ್ ವಿಶ್ವರೂಪಾ ಪ್ರಕಾಶತೇ ।
ತದ್ವಿನಾ ನಾಸ್ತಿವಸ್ತ್ವೇಕಂ ಭೇದಬುದ್ಧಿಂ ವಿಮುಂಚತಃ ॥

(ಸಿ. ಶಿ. ೧೮; ೫೪–೫೭)

ಹೀಗೆ ಉಪದೇಶಿಸಿದ್ದಾರೆ. ಇದರರ್ಥವೇನೆಂದರೆ, ಯಾವುದೇ ಪ್ರಕಾರದ ಭೇದವಿಲ್ಲದಿರುವ, ರಾಗ ದ್ವೇಷಾದಿಗಳಿಂದ ರಹಿತನಾದ, ಶಾಂತನಾಗಿರುವ ತನ್ನ ಸ್ವರೂಪ ಮಹಿಮೆಯಲ್ಲಿಯೇ ವಿಲೀನವಾಗಿರುವ ಶಿವಯೋಗಿಗೆ ತಿಳಿಯಬೇಕಾದ ಬೇರೊಂದು ವಸ್ತು ಯಾವುದೂ ಇರುವುದಿಲ್ಲ. ವಿಕಲ್ಪರಹಿತವಾದ ಶಿವಾದ್ವೈತ ಜ್ಞಾನದಿಂದ ಸ್ವಸ್ವರೂಪದಲ್ಲಿ ಸಮರಸನಾದವನಿಗೆ ಯಾವುದರಿಂದ ಏನನ್ನು ತಿಳಿಯಬೇಕಾದುದು ಇರುವುದು ? ಇಲ್ಲಿ ತಿಳಿದುಕೊಳ್ಳುವಂಥವನಾದರೂ ಯಾರು ? ಅರ್ಥಾತ್ ತಿಳಿದುಕೊಳ್ಳುವಂಥಾದ್ದೂ ಏನೂ ಇಲ್ಲ ಮತ್ತು ತಿಳಿದುಕೊಳ್ಳುವವನೂ ಸಹ ಬೇರೆ ಯಾರೂ ಇಲ್ಲ ಎಂಬ ಭಾವವು. ಸದ್ರೂಪ ಮತ್ತು ಅಸದ್ರೂಪವಾದ ಸಕಲವಸ್ತುಗಳನ್ನು ವ್ಯಾಪಿಸಿಕೊಂಡಿರುವ ಮಹಾಜ್ಞಾನ ಸ್ವರೂಪವಾದ ಬ್ರಹ್ಮ ಚೈತನ್ಯವೇ ಜಗತ್‌ಸ್ವರೂಪವಾಗಿ ಪ್ರಕಾಶಿಸುತ್ತದೆ. ಭೇದ ಬುದ್ಧಿ ರಹಿತನಾದ ಶಿವಯೋಗಿಗೆ ಆ ಬ್ರಹ್ಮಚೈತನ್ಯದ ವ್ಯತಿರಿಕ್ತವಾಗಿ ಮತ್ತೊಂದೇನೂ ತೋರುವುದಿಲ್ಲ. ಅಂದರೆ ಈ ಶಿವಯೋಗಿಗೆ ಜಗತ್ತು ಬ್ರಹ್ಮರೂಪವಾಗಿ ತೋರುವುದೇ ಹೊರತು ಬೇರೆ ಬೇರೆ ವಸ್ತುಗಳ ರೂಪದಲ್ಲಿ ತೋರುವುದಿಲ್ಲ.

ಈ ಜಗತ್ತಿನಲ್ಲಿ ಅಜ್ಞರಾದ ಜೀವಿಗಳಿಗೆ ಪಂಚವಿಧಗಳಾದ ಭೇದಗಳು ಸದಾ ತೋರುತ್ತಿರುತ್ತವೆ. ಜೀವ–ಈಶ್ವರ ಭೇದ, ಜೀವ–ಜಡಗಳ ಭೇದ, ಜಡ–ಜಡಗಳ ಭೇದ, ಜೀವ–ಜೀವಗಳ ಭೇದ ಮತ್ತು ಜಡ–ಈಶ್ವರಗಳ ಭೇದ ಎಂಬುವೇ ಆ ಪಂಚವಿಧಗಳಾದ ಭೇದಗಳು. ಶಿವಾದ್ವೈತ ಜ್ಞಾನವು ಪ್ರಾಪ್ತವಾಗುವವರೆಗೆ ಈ ಐದು ವಿಧವಾದ ಭೇದಗಳು ತೋರುತ್ತಲಿರುತ್ತವೆ. ಯಾವಾಗ ಸರ್ವವೆಲ್ಲವೂ ಶಿವನೆಂಬ ಜ್ಞಾನವು ಉದಿಸುವುದೋ ಆಗ ಆ ಭೇದವೆಲ್ಲವೂ ಇಲ್ಲವಾಗಿ ಹೋಗುವುದು. ಈ

ನಷ್ಟಾಗಮಸ್ಥಲದ ಶಿವಯೋಗಿಯು 'ವಿಜಿಗೀಷು' ರೂಪವಾದ ಜಲ್ಪಕಥೆಯಲ್ಲಿ ಆಸಕ್ತಿಯುಳ್ಳವನಾಗಿರುವುದಿಲ್ಲ; ಶಾಸ್ತ್ರದಲ್ಲಿ 'ವಾದ ಕಥಾ', 'ಜಲ್ಪ ಕಥಾ' ಮತ್ತು 'ವಿತಂಡ ಕಥಾ' ಎಂಬುದಾಗಿ ಮೂರು ಪ್ರಕಾರದ ಕಥೆಗಳಿರುತ್ತವೆ. ಕಥೆಯೆಂದರೆ ವಾಗ್ ವ್ಯವಹಾರವೆಂದರ್ಥ. ತತ್ತ್ವ ಜಿಜ್ಞಾಸೆಗಾಗಿ ಮಾಡುವ ಚರ್ಚಾತ್ಮಕವಾದ ವ್ಯವಹಾರಕ್ಕೆ 'ವಾದಕಥಾ' ಎನ್ನುವರು. ಎದುರಾಳಿಯನ್ನು ಸೋಲಿಸಿ ತಾನು ಗೆಲ್ಲಬೇಕೆಂಬ ಉದ್ದೇಶದಿಂದ ನಡೆಯುವ ಚರ್ಚಾತ್ಮಕ ವಾಗ್ವ್ಯವಹಾರಕ್ಕೆ 'ಜಲ್ಪಕಥಾ' ಎನ್ನುವರು. ಇನ್ನು ತನ್ನ ಮತವನ್ನು ಮಂಡಿಸಲಾರದೆ ಕೇವಲ ಪರಪಕ್ಷವನ್ನು ಖಂಡಿಸುವುದಕ್ಕಾಗಿಯೇ ಪ್ರಾರಂಭಿಸಿದ ವಾಗ್ವ್ಯವಹಾರಕ್ಕೆ 'ವಿತಂಡ ಕಥಾ' ಎಂದು ಕರೆಯುವರು.

ಇಲ್ಲಿ ಭೇದ-ಬುದ್ಧಿಯುಳ್ಳ ವ್ಯಕ್ತಿಯ ಮನಸ್ಸಿನಲ್ಲಿ ತಾನು ಗೆಲ್ಲಬೇಕೆನ್ನುವ, ಅನ್ಯರನ್ನು ಸೋಲಿಸಬೇಕೆನ್ನುವ ಭಾವನೆಯು ಇರುತ್ತದೆಯೇ ವಿನಃ ಸರ್ವವೆಲ್ಲವನ್ನು ತನ್ನ ಆತ್ಮರೂಪವಾಗಿ ನೋಡುವ ಶಿವಯೋಗಿಯ ಮನಸ್ಸಿನಲ್ಲಿ ಜಲ್ಪಕಥೆಯ ವಿಚಾರವೇ ಉಂಟಾಗುವುದಿಲ್ಲ. ಹೀಗೆ ಭೇದ, ಜಲ್ಪಗಳಿಂದ ಮುಕ್ತನಾದ ಇವನ ಮನಸ್ಸಿನಲ್ಲಿ ಯಾವುದೇ ಪ್ರಕಾರದ ಆಸಕ್ತಿಯಾಗಲಿ ಮತ್ತು ರಾಗ-ದ್ವೇಷಾದಿಗಳಾಗಲಿ ಇರುವುದಿಲ್ಲ. ಅಂತೆಯೇ ಅವನು ಅತ್ಯಂತ ಪ್ರಶಾಂತನಾಗಿರುತ್ತಾನೆ. ಹೀಗೆ ತನ್ನ ಮಹಿಮೆಯಲ್ಲಿಯೇ ತಾನು ಲೀನನಾಗಿರುವ ಈ ಶಿವಯೋಗಿಗೆ 'ಜ್ಞೇಯ'ವೆಂಬುದು ಬೇರಾವುದೂ ಇರುವುದಿಲ್ಲ.

ಹೀಗೆ ಅಖಂಡವಾದ ಪರಬ್ರಹ್ಮ ಸ್ವರೂಪವೇ ತಾನಾಗಿರುವ ಈ ನಷ್ಟಾಗಮಸ್ಥಲದ ಶಿವಯೋಗಿಯ ಮನಸ್ಸಿನಲ್ಲಿ ಆ ಪರಶಿವ ಬ್ರಹ್ಮದ ಹೊರತು ಬೇರಾವುದೂ ತೋರುವುದಿಲ್ಲ. ಈ ತೆರನಾಗಿ ಸರ್ವವಿಧವಾದ ಭೇದವಿಲ್ಲದಿರುವ ಶಿವಯೋಗಿಯ ಈ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ನಷ್ಟಾಗಮಸ್ಥಲವೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೨ ನವ್ಹಂಬರ, ೧೯೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಆದಿಪ್ರಸಾದಿಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ಸಾಧಕರೇ ! ವಿದ್ವಾಂಸರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡಿರುವ ವಿಭಿನ್ನ ಪ್ರಾಂತ ಗಳ ಸದ್ಭಕ್ತರೇ ! ಮತ್ತು ತಾಯಂದಿರೇ ! ಈ ಕಾಶೀ ಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ, ಶ್ರೀ ಮಹಾಸನ್ನಿಧಿಯ ಶಿವಪೂಜಾನು ಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ಪರಮಪವಿತ್ರವಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿ ಸದ್ಯಃ ಜ್ಞಾನಗಂಗೆಯಲ್ಲಿ ಅವಗಾಹನೆಗೈಯ್ಯುತ್ತಲಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ನಷ್ಟಾಗಮಸ್ಥಲದ ಬಗ್ಗೆ ಸವಿಸ್ತಾರ ವಾಗಿ ಶ್ರವಣ ಮಾಡಿದ್ದೀರಿ. ಇಂದು ಅದರ ಮುಂದಿನ ಸ್ಥಲವಾದ ಆದಿಪ್ರಸಾದಿಸ್ಥಲದ ಬಗ್ಗೆ ವಿವೇಚಿಸೋಣ.

ನಾವು ಮೊದಲು ಆದಿಪ್ರಸಾದಿ ಎಂಬ ಶಬ್ದದ ಅರ್ಥದ ಬಗ್ಗೆ ವಿಚಾರಿಸಬೇಕಾಗು ವುದು. ಪ್ರಸಾದವೆಂದರೆ ಅನುಗ್ರಹವೆಂದರ್ಥ. ಅದನ್ನು ಪಡೆದವನಿಗೆ ಪ್ರಸಾದಿ ಎಂದು ಕರೆಯುತ್ತಾರೆ. ಯಾರ ಪ್ರಸಾದವನ್ನು ಈತನು ಪಡೆದಿದ್ದಾನೆ ಎಂಬುದಾಗಿ ವಿಚಾರಿಸಲು ಅದಕ್ಕೆ ಉತ್ತರ ರೂಪವಾಗಿ ಆದಿ ಎಂಬ ಶಬ್ದವು ಇಲ್ಲಿ ಪ್ರಯೋಗಿಸಲ್ಪಟ್ಟಿದೆ. ಅಂದರೆ ಈ ಜಗತ್ತಿನ ಉತ್ಪತ್ತ್ಯಾದಿಗಳಿಗೆ ಯಾವುದು ಆದಿಯಾಗಿರುತ್ತದೆಯೋ ಅರ್ಥಾತ್ ಮೂಲ ಕಾರಣವಾಗಿರುತ್ತದೆಯೋ ಅದಕ್ಕೇನೆ ಇಲ್ಲಿ ಆದಿಯೆಂಬುದಾಗಿ ಹೇಳಲಾಗಿದೆ. ಆ ದೃಷ್ಟಿ ಯಿಂದ ಆದಿಯೆಂದರೆ ಪರಶಿವಬ್ರಹ್ಮ ಎಂದರ್ಥ. ಅಂತಹ ಆ ಪರಶಿವಬ್ರಹ್ಮದ ಪ್ರಸಾದ ವನ್ನು ಯಾವನು ಪ್ರಾಪ್ತ ಮಾಡಿಕೊಂಡಿರುವನೋ ಅವನಿಗೇನೇ ಆದಿಪ್ರಸಾದಿ ಎಂದು ಇಲ್ಲಿ ಕರೆಯಲಾಗಿದೆ. ಅಂತಹ ಆದಿಪ್ರಸಾದಿಯ ವಿಷಯಕವಾಗಿ ಪ್ರತಿಪಾದಿಸುವ ಸ್ಥಲವೇ ಆದಿ ಪ್ರಸಾದಿಸ್ಥಲವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಆದಿಪ್ರಸಾದಿಯನ್ನು ಕುರಿತು–

ಸರ್ವಾಧಿಷ್ಠಾತೃಕಃ ಶಂಭುರಾದಿಸ್ತಸ್ಯ ಪ್ರಸಾದತಃ ।
ಆದಿಪ್ರಸಾದೀತ್ಯುಕ್ತೋಽಯಂ ನಿರ್ವಿಕಾರಪದೇ ಸ್ಥಿತಃ ॥

ಅನೇಕ ಜನ್ಮ ಶುದ್ಧಸ್ಯ ನಿರಹಂಕಾರ ಭಾವಿನಃ ।
ಅಪ್ರಪಂಚಸ್ಯಾದಿದೇವಃ ಪ್ರಸೀದತಿ ವಿಮುಕ್ತಯೇ ॥

(ಸಿ. ಶಿ. ೧೮; ೫೭–೫೮)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ವಿಶ್ವಕ್ಕೆ ಆಧಾರನೂ ಮತ್ತು ನಿಯಾಮಕನೂ ಆದ ಶಂಭುವಿಗೆ ಆದಿ ಎಂಬುದಾಗಿ ಕರೆಯುತ್ತಾರೆ. ಆ ಶಂಭುವಿನ ಕೃಪೆಯಿಂದ ಅರ್ಥಾತ್ ಅನುಗ್ರಹದಿಂದ ವಿಕಾರರಹಿತವಾದ ಸ್ಥಿತಿಯನ್ನು ಪ್ರಾಪ್ತ ಮಾಡಿಕೊಂಡ ನಷ್ಟಾಗಮಸ್ಥಲದ ಶಿವಯೋಗಿಯೇ ಆದಿಪ್ರಸಾದಿಯೆಂಬುದಾಗಿ ಕರೆಯಲ್ಪಡುತ್ತಾನೆ. ಅನೇಕ ಜನ್ಮಗಳಲ್ಲಿ ಸಂಪಾದಿಸಿದ ನಿಷ್ಕಾಮ ಪುಣ್ಯದ ಫಲವಾಗಿ ಪರಿಶುದ್ಧನಾಗಿರುವ ಅರ್ಥಾತ್ ಪರಿಚ್ಛಿನ್ನವಾದ ದೇಹಾದಿಗಳ ಅಭಿಮಾನ ರಹಿತನಾದ ಮತ್ತು ಪ್ರಾಪಂಚಿಕವಾದ ಭೇದವಿಲ್ಲದಿರುವ ಶಿವಯೋಗಿಗೆ ಮುಕ್ತಿಯನ್ನು ಕೊಡುವುದ ಕ್ಕಾಗಿ ಆದಿದೇವನಾದ ಶಿವನು ಅವನ ಮೇಲೆ ಪ್ರಸನ್ನನಾಗುತ್ತಾನೆ.

ಈ ಜಗತ್ತಿಗೆ ಆದಿಪುರುಷನು ಶಿವನೇ ಆಗಿದ್ದಾನೆ ಅವನೇ ಸರ್ವಕ್ಕೂ ಮೂಲನು. ಅಂತೆಯೇ ಶ್ವೇತಾಶ್ವತರೋಪನಿಷತ್ತಿನಲ್ಲಿ–''ಯೋ ಬ್ರಹ್ಮಾಣಂ ವಿದಧಾತಿ ಪೂರ್ವಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂ ಮಹಾದೇವಮಾತ್ಮಬುದ್ಧಿಃ ಪ್ರಕಾಶಂ । ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ।'' ಎಂಬುದಾಗಿ ಹೇಳಲಾಗಿದೆ. ತಾತ್ಪರ್ಯವೇನೆಂದರೆ, ಸೃಷ್ಟಿಯ ಆರಂಭದಲ್ಲಿ ಶಿವನೇ ಹಿರಣ್ಯಗರ್ಭ ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ಎಲ್ಲ ವೇದಗಳ ಜ್ಞಾನವನ್ನು ಮಾಡಿಕೊಟ್ಟಿದ್ದಾನೆ. ಎಲ್ಲ ಜೀವಿಗಳ ಬುದ್ಧಿಗೆ ಹತಾಶವನ್ನುಂಟುಮಾಡುವ ಸರ್ವದೇವರ ದೇವರಾದ ಆ ಮಹಾದೇವನಿಗೆ ಮುಮುಕ್ಷುವಾದ ನಾನು ಶರಣಾಗತನಾಗಿದ್ದೇನೆ.

ಉಪನಿಷತ್ತಿನ ಈ ಪ್ರತಿಪಾದನೆಯಿಂದ ತಿಳಿದುಬರುವುದೇನೆಂದರೆ, ಜಗತ್ತನ್ನು ಸೃಷ್ಟಿಸಿದ ಬ್ರಹ್ಮನನ್ನೂ ಸಹ ಶಿವನೇ ಸೃಷ್ಟಿಸಿರುತ್ತಾನೆ. ಇದೂ ಅಲ್ಲದೆ ಶಿವನಿಂದಲೇ ಬ್ರಹ್ಮನು ವೇದಾಭ್ಯಾಸವನ್ನು ಮಾಡಿರುತ್ತಾನೆ. ಇಂತಹ ಆ ಶಿವನಿಗೆ ಆದಿ ಅಥವಾ ಆದಿ ದೇವನೆಂದು ಕರೆಯುವರು. ಮುಮುಕ್ಷು ಆದವನು ಮುಕ್ತಿಯನ್ನು ಪಡೆಯಬೇಕಾದರೆ ಆ ಆದಿದೇವನಾದ ಶಿವನ ಅನುಗ್ರಹವನ್ನು ಹೊಂದಬೇಕಾಗುವುದು. ಈ ಶಿವನ ಅನುಗ್ರಹ ವನ್ನು ಪಡೆಯಲು ಬಹಳಷ್ಟು ಕಷ್ಟಪಡಬೇಕಾಗಿಲ್ಲ, ಕೇವಲ ಅವನಿಗೆ ಅನನ್ಯ ಭಾವದಿಂದ ಶರಣಾಗತನಾಗಬೇಕಷ್ಟೆ. ಆಗ ಅವನ ಅನುಗ್ರಹವು ಅವಶ್ಯವಾಗಿ ದೊರೆಯುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು, ಮುಮುಕ್ಷು ಆದವನು ಶಿವಾನು ಗ್ರಹವನ್ನು ಪಡೆಯಬೇಕಾದರೆ ಅಂತಃಕರಣದ ಶುದ್ಧಿ, ನಿರಹಂಕಾರ ಭಾವನೆ ಮತ್ತು ದ್ವೈತಭಾವರಾಹಿತ್ಯಗಳು ಇರಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಪರಮಾತ್ಮನು ಅತ್ಯಂತ ಪರಿಶುದ್ಧನಾಗಿರೋಣದರಿಂದ ಪರಿಶುದ್ಧನಾದ ಜೀವಾತ್ಮನ ಮೇಲೆಯೇ ಅವನು ಅನುಗ್ರಹವನ್ನು ಮಾಡುವನು.

ಜೀವಿಗಳ ಶುದ್ಧಾಶುದ್ಧಿಗೆ ಅಂತಃಕರಣವೇ ಮೂಲವಾದುದು. ಅದು ಶುದ್ಧವಿದ್ದರೆ ಜೀವನು ಶುದ್ಧನೆಂತಲೂ, ಅದು ಅಶುದ್ಧವಾಗಿದ್ದರೆ ಜೀವಾತ್ಮನು ಅಶುದ್ಧನೆಂತಲೂ ಕರೆಯಿಸಿಕೊಳ್ಳುತ್ತಾನೆ. ಶುಭ ಕರ್ಮಗಳನ್ನು ನಿಷ್ಕಾಮಬುದ್ಧಿಯಿಂದ ಮಾಡಿದಾಗ ಅಂತಃ ಕರಣವು ಪರಿಶುದ್ಧವಾಗುವುದು. ಸಾಮಾನ್ಯವಾಗಿ ಜೀವಾತ್ಮನು ಯಾವುದೇ ಶುಭ ಕರ್ಮವನ್ನು ಮಾಡುವಾಗ ಒಂದಿಲ್ಲೊಂದು ಆಶೆ ಆಕಾಂಕ್ಷೆಗಳನ್ನು ಮನಸ್ಸಿನಲ್ಲಿ ಇಟ್ಟು ಕೊಂಡಿರುತ್ತಾನೆ. ಅದರಿಂದಾಗಿಯೇ ರಾಗ-ದ್ವೇಷಗಳಿಗೊಳಗಾಗಿ ತನ್ನ ಅಂತಃಕರಣ ವನ್ನು ಮಲಿನಗೊಳಿಸಿಕೊಳ್ಳುವನು. ''ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ'' ಎಂಬ ಗೀತೋಕ್ತಿಯಂತೆ ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನಾಚರಿಸಿದಾಗ ಜೀವಾತ್ಮನ ಅಂತಃಕರಣವು ಪರಿಶುದ್ಧವಾಗುವುದು. ಹೀಗೆ ಪರಿಶುದ್ಧವಾದ ಜೀವಿಯ ಆ ಅಂತಃಕರಣದಲ್ಲಿ ಅಹಂಕಾರಾದಿ ಅಭಿಮಾನಗಳಾಗಲೀ ಭೇದಬುದ್ಧಿರೂಪವಾದ ಪ್ರಪಂಚವಾಗಲೀ ಇರುವುದಿಲ್ಲ. ಹೀಗೆ ಯಾವಾಗ ಜೀವಿಯು ನಿರಹಂಕಾರಿಯೂ ನಿಷ್ ಪ್ರಪಂಚಿಯೂ ಮತ್ತು ಶುದ್ಧಾಂತಃಕರಣಿಯೂ ಆಗುವನೋ ಆಗ ಅವನ ಮೇಲೆ ಈಶ್ವರನ ಅನುಗ್ರಹವು ಉಂಟಾಗುವುದು. ಆ ಅನುಗ್ರಹದಿಂದಲೇ ಅರ್ಥಾತ್ ಪ್ರಸಾದ ದಿಂದಲೇ ಜೀವಾತ್ಮನಿಗೆ ಮುಕ್ತಿಯು ಪ್ರಾಪ್ತವಾಗುವುದು. ಹೀಗೆ ಜೀವಾತ್ಮನ ಮುಕ್ತಿಗೆ ಕಾರಣೀಭೂತವಾದ ಶಿವನ ಅನುಗ್ರಹವೇ ಪ್ರಸಾದವು. ಆ ಶಿವನು ಪ್ರಪಂಚಕ್ಕೆಲ್ಲ ಆದಿಕಾರಣನಾಗಿರೋಣದರಿಂದ ಅವನ ಈ ಪ್ರಸಾದಕ್ಕೆ ಆದಿಪ್ರಸಾದವೆನ್ನುತ್ತಾರೆ. ಅದನ್ನು ಪಡೆದವನೇ ಆದಿಪ್ರಸಾದಿಯೆಂಬುದಾಗಿ ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಆದಿಪ್ರಸಾದಿ ಸ್ಥಲವನ್ನೇ ನಿರೂಪಿಸುತ್ತ ಪುನಃ –

ಶಿವಪ್ರಸಾದ ಸಂಪತ್ತ್ಯಾ ಶಿವಭಾವಮುಪೇಯುಷಿ ।
ಶಿವಾದನ್ಯಜ್ಜಗಜ್ಜಾಲಂ ದೃಶ್ಯತೇ ನ ಚ ದೃಶ್ಯತೇ ॥

ಶಂಭೋಃ ಶಿವಪ್ರಸಾದೇನ ಸಂಸಾರಚ್ಛೇದಕಾರಿಣಾ ।
ಮೋಹಗ್ರಂಥಿಂ ವಿನಿರ್ಭಿದ್ಯ ಮುಕ್ತಿಂ ಯಾಂತಿ ವಿವೇಕಿನಃ ॥

ವಿನಾಪ್ರಸಾದಮೀಶಸ್ಯ ಸಂಸಾರೋ ನ ನಿವರ್ತತೇ ।
ವಿನಾ ಸೂರ್ಯೋದಯಂ ಲೋಕೇ ಕುತಃ ಸ್ಯಾತ್ತಮಸೋಲಯಃ ॥

ಸರ್ವಾನುಗ್ರಾಹಕಃ ಶಂಭುಃ ಕೇವಲಂ ಕೃಪಯಾ ಪ್ರಭುಃ ।
ಮೋಚಯೇತ್ಸಕಲಾನ್ ಜಂತೂನ್ನಕಿಂಚಿದಿಹ ಕಾರಣಮ್ ॥

(ಸಿ. ಶಿ. ೧೮; ೫೯-೬೨)

ಈ ತೆರನಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವಪ್ರಸಾದದ ಪ್ರಾಪ್ತಿ ಯಾಗೋಣದರಿಂದ ಶಿವಭಾವವನ್ನು ಹೊಂದಿದ ಶಿವಯೋಗಿಗೆ ಈ ಜಗತ್ತೆಲ್ಲವೂ ಶಿವನಿಗಿಂತಲೂ ಭಿನ್ನವಾದುದಾಗಿ ತೋರುವುದಿಲ್ಲ. ಅರ್ಥಾತ್ ಅವನ ಭೇದ ಬುದ್ಧಿಯು ನಷ್ಟವಾಗಿರೋಣದರಿಂದ ಸಾಗರ-ತರಂಗ ನ್ಯಾಯದಂತೆ ಸರ್ವವೆಲ್ಲವೂ ಅವನಿಗೆ

ಶಿವಮಯವಾಗಿಯೇ ತೋರುತ್ತಿರುತ್ತದೆ. ನಿತ್ಯಾನಿತ್ಯ ವಿವೇಕ ಸಂಪನ್ನರಾದ ಶಿವಯೋಗಿಗಳು ಸಂಸಾರವನ್ನು ಇಲ್ಲದಾಗಿಸುವ ಶಿವನ ಅನುಗ್ರಹದಿಂದ ತಮ್ಮ ಮೋಹ ಗ್ರಂಥಿಯನ್ನು ಬಿಡಿಸಿಕೊಂಡು ಮುಕ್ತಿಯನ್ನು ಪಡೆಯುತ್ತಾರೆ. ಶಿವನ ಅನುಗ್ರಹವಿಲ್ಲದೆ ಈ ಸಂಸಾರವು ನಿವೃತ್ತಿಯಾಗಲಾರದು. ಸೂರ್ಯೋದಯವಾಗದೆ ಕತ್ತಲೆಯು ಎಂದಾದರೂ ಇಲ್ಲದಾಗುವುದೇ ? ಅರ್ಥಾತ್ ಆಗುವುದಿಲ್ಲ. ಇದರಂತೆಯೇ–ಶಿವನ ಅನುಗ್ರಹವಿಲ್ಲದೆ ಸಂಸಾರದ ನಿವೃತ್ತಿಯು ಆಗುವುದಿಲ್ಲ ಎಂಬುದಾಗಿ ತಿಳಿದುಕೊಳ್ಳಬೇಕು. ಸರ್ವತಂತ್ರ ಸ್ವತಂತ್ರನಾದ ಶಿವನು ಸರ್ವ ಜೀವಿಗಳ ಮೇಲೆ ಅನುಗ್ರಹವನ್ನು ಮಾಡುವಂಥವನಾಗಿದ್ದಾನೆ. ಅವನು ಕೇವಲ ತನ್ನ ಕೃಪಾಕಟಾಕ್ಷದಿಂದಲೇ ಎಲ್ಲ ಜೀವಿಗಳನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಬಲ್ಲನು. ಸಂಸಾರದ ಈ ಬಿಡುಗಡೆಗೆ ಅವನ ಕೃಪೆಯ ಹೊರತು ಬೇರಾವ ಕಾರಣವಿರುವುದಿಲ್ಲ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಪ್ರಸಾದದ ಮಹಿಮೆಯನ್ನು ವರ್ಣಿಸುತ್ತ ಆ ಪ್ರಸಾದಕ್ಕೆ ಸಂಪತ್ತಿಯೆಂಬುದಾಗಿ ಕರೆದಿದ್ದಾರೆ. ಅನುಗ್ರಹ ರೂಪವಾದ ಈ ಸಂಪತ್ತು ಭೌತಿಕ ಸಂಪತ್ತಿಗಿಂತಲೂ ವಿಲಕ್ಷಣವಾದುದು. ಭೌತಿಕವಾದ ಸಂಪತ್ತು ಕ್ಷಣಿಕವಾದದ್ದು. ಆದರೆ ಶಿವಾನುಗ್ರಹ ರೂಪವಾದ ಈ ಸಂಪತ್ತು ಶಾಶ್ವತವಾದುದು. ಇದು ಒಮ್ಮೆ ಪ್ರಾಪ್ತವಾಯಿತೆಂದರೆ ಆ ಜೀವಾತ್ಮಗಳನ್ನು ಸಂಸಾರದಿಂದ ಮುಕ್ತರನ್ನಾಗಿ ಮಾಡುತ್ತದೆ.

ಜೀವಾತ್ಮನನ್ನು ಸಂಸಾರದಲ್ಲಿ ಅವನ ಮೋಹಗ್ರಂಥಿಯೇ ಕಟ್ಟಿಹಾಕಿರುತ್ತದೆ. 'ನಾನು' 'ನನ್ನ'ದೆಂಬ ಭಾವನೆಗೇನೇ ಮೋಹಗ್ರಂಥಿ, ಅಥವಾ ಹೃದಯಗ್ರಂಥಿ ಎಂಬುದಾಗಿ ಕರೆಯುತ್ತಾರೆ. ಇದೊಂದು ಅನಾದಿಕಾಲದಿಂದ ಬಂದಿರುವ ಬಿಡಿಸಿಕೊಳ್ಳಲುಬಾರದಂತಹ ಗ್ರಂಥಿಯು. ಇದು ಕೇವಲ ಶಿವನ ಅನುಗ್ರಹದಿಂದಲೇ ಬಿಚ್ಚಲ್ಪಡುವಂಥದ್ದಾಗಿರುತ್ತದೆ. ಸಾಧಕನ ಮೇಲೆ ಶಿವನ ಅನುಗ್ರಹವಾಗಲು ಅವನಲ್ಲಿ 'ಶಿವೋऽಹಂ' ರೂಪವಾದ ದೃಢ ಭಾವನೆಯು ಒಡಮೂಡಿದೊಡನೆ ಈ ಮೋಹ ಗ್ರಂಥಿಯು ಬಿಚ್ಚಿಹೋಗುವುದು. ಸೂರ್ಯಪ್ರಕಾಶ ಮತ್ತು ಅಂಧಕಾರಗಳಲ್ಲಿ ನಿವರ್ತಕ ನಿವರ್ತ್ಯಭಾವ ಸಂಬಂಧವಿರುವಂತೆ ಶಿವಪ್ರಸಾದ ಮತ್ತು ಮೋಹಗ್ರಂಥಿಗಳಲ್ಲಿಯೂ ಸಹ ನಿವರ್ತಕ–ನಿವರ್ತ್ಯಭಾವ ಸಂಬಂಧವೇ ಇರುತ್ತದೆ. ಅಂದರೆ–ಪ್ರಕಾಶದಿಂದಲೇ ಕತ್ತಲೆಯು ನಿವೃತ್ತವಾಗುವಂತೆ ಶಿವಾನುಗ್ರಹದಿಂದಲೇ ಜೀವಿಗಳ ಮೋಹ ಗ್ರಂಥಿಯು ಇಲ್ಲದಾಗಿ ಅವರಿಗೆ ಮುಕ್ತಿಯು ಲಭಿಸುವುದು.

ಶಿವನ ಅನುಗ್ರಹವನ್ನು ಪಡೆಯದೆ ಕೇವಲ ಸ್ವಸಾಮರ್ಥ್ಯದಿಂದ ಮುಕ್ತಿಯನ್ನು ಪಡೆಯುವುದೆಂದರೆ ಅದೊಂದು ವ್ಯರ್ಥವಾದ ಪ್ರಯತ್ನವೇ ಸರಿ. ಅಂತೆಯೇ ಶ್ವೇತಾಶ್ವತರೋಪನಿಷತ್ತಿನಲ್ಲಿ–

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥

ಎಂಬುದಾಗಿ ಹೇಳಲಾಗಿದೆ. ತಾತ್ಪರ್ಯವೇನೆಂದರೆ, ಆಕಾಶವನ್ನೂ ಚರ್ಮದಂತೆ ಸುತ್ತುವುದು ಹೇಗೆ ಅಸಂಭವವೋ, ಅದೇ ಪ್ರಕಾರವಾಗಿ ಶಿವನ ಅನುಗ್ರಹವಿಲ್ಲದೆ ಸಂಸಾರದಿಂದ ಮುಕ್ತನಾಗುವುದೂ ಸಹ ಅಸಂಭವವಾಗಿರುತ್ತದೆ.

ಶಿವನು ಅತ್ಯಂತ ಕರುಣಾಶಾಲಿಯಾಗಿರೋಣದರಿಂದ ಎಲ್ಲರನ್ನೂ ಅನುಗ್ರಹಿಸು ವಂಥವನಾಗಿರುತ್ತಾನೆ, ಅವನು ಸರ್ವತಂತ್ರ ಸ್ವತಂತ್ರನು, ಕರ್ತುಂ–ಅಕರ್ತುಂ ಅನ್ಯಥಾಕರ್ತುಂ ಸಮರ್ಥನಾಗಿರುತ್ತಾನೆ. ನಿಷ್ಕಾಮ ಕರ್ಮಗಳನ್ನಾಚರಿಸಿ ನಿರ್ಮಲಾಂತಃ ಕರಣವುಳ್ಳ ಯೋಗಿಗಳ ಮೇಲೆ ಅವನು ಅನುಗ್ರಹವನ್ನು ಮಾಡುತ್ತಾನಷ್ಟೇ ಅಲ್ಲ ಅತ್ಯಂತ ದುಷ್ಕರ್ಮಿಗಳೂ, ಮಹಾಪಾಪಿಗಳೂ ಆದ ಜೀವಿಗಳ ಮೇಲೆಯೂ ಸಹ ಅವನು ತನ್ನ ಕೃಪಾದೃಷ್ಟಿಯನ್ನು ಬೀರಿ ಅವರನ್ನು ಅವರ ದುಷ್ಕರ್ಮಗಳಿಂದ ಮುಕ್ತ ನನ್ನಾಗಿಯೂ ಸಹ ಮಾಡಬಲ್ಲನು.

ಲೋಕದಲ್ಲಿ ಯಾವುದೊಂದು ವಿಧಿವಿಧಾನವನ್ನು ಮಾಡುವಾಗ ಸಾಮಾನ್ಯ ನಿಯಮ ಹಾಗೂ ವಿಶೇಷ ನಿಯಮವೆಂಬುದಾಗಿ ಎರಡು ಪ್ರಕಾರದ ನಿಯಮಗಳನ್ನು ಮಾಡಿರುತ್ತಾನೆ. ಜೀವಿಗಳಿಗೆ ತಮ್ಮ ತಮ್ಮ ಕರ್ಮಗಳ ಫಲವನ್ನು ಅನುಭವಿಸಲು ಮಾಡಿದ ವ್ಯವಸ್ಥೆಯು ಸಾಮಾನ್ಯ ನಿಯಮವೆನಿಸಿಕೊಳ್ಳುತ್ತದೆ. ಓರ್ವ ವ್ಯಕ್ತಿಯು ಅನೇಕ ಅಪರಾಧಗಳನ್ನು ಮಾಡಿ ದಂಡಾಧಿಕಾರಿಗಳ ಕೈಗೆ ಸಿಕ್ಕುಬಿದ್ದಾಗ ಅದರ ಬಗ್ಗೆ ನ್ಯಾಯಾಲಯದಲ್ಲಿ ತನಿಖೆಯಾಗಿ ಕ್ರಮವಾಗಿ ಎಲ್ಲಾ ಕೋರ್ಟುಗಳಲ್ಲಿ ವಿಚಾರಣೆ ಯಾಗುತ್ತ ಕೊನೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಅಪರಾಧಿಗೆ ಮರಣದಂಡನೆಯನ್ನು ವಿಧಿಸಲಾದಾಗ ಆ ನ್ಯಾಯಾಲಯದ ವಿಧಾನದಂತೆ ಅಪರಾಧಿಗೆ ಮರಣದಂಡನೆ ಯಾದರೆ ಅದನ್ನು ಸಾಮಾನ್ಯ ನಿಯಮವೆಂದು ತಿಳಿದುಕೊಳ್ಳಬೇಕು. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ತಮಗೆ ದೊರೆತ ಪ್ರಮಾಣಗಳ ಆಧಾರದ ಮೇಲೆ ಅಪರಾಧಿಗೆ ಮರಣದಂಡನೆಯನ್ನು ವಿಧಿಸಿದ ನಂತರ ಆ ಅಪರಾಧಿಯೂ ರಾಷ್ಟ್ರಾಧ್ಯಕ್ಷನ ಕಡೆಗೆ ಪ್ರಾಣಭಿಕ್ಷೆಯನ್ನು ಬೇಡಲು ಒಂದು ಅವಕಾಶವಿರುತ್ತದೆ. ಇಂಥ ಸಂದರ್ಭದಲ್ಲಿ ಘೋರ ಕೃತ್ಯವನ್ನೆಸಗಿದ ದುಷ್ಟ ವ್ಯಕ್ತಿಯು ರಾಷ್ಟ್ರಾಧ್ಯಕ್ಷರಿಗೆ ಮೊರೆಹೊಕ್ಕು ಕ್ಷಮೆ ಯಾಚಿಸಿ ಪ್ರಾಣದಾನ ಬೇಡಿದರೆ ಇವನು ಅಪರಾಧಿಯೆಂದು ಸಿದ್ಧವಾಗಿದ್ದರೂ ಇವನ ಅಪರಾಧಗಳನ್ನೆಲ್ಲ ಮನ್ನಿಸಿ ಇವನಿಗೆ ಪ್ರಾಣದಾನವನ್ನು ಕೊಡುವ ಸರ್ವತಂತ್ರ ಸ್ವಾತಂತ್ರ್ಯವು ಕೇವಲ ರಾಷ್ಟ್ರಾಧ್ಯಕ್ಷನಿಗಿರುತ್ತದೆ. ರಾಷ್ಟ್ರಾಧ್ಯಕ್ಷನು ಈ ವ್ಯಕ್ತಿಯ ಮೇಲೆ ಕೃಪೆ ಮಾಡಿ ಪ್ರಾಣದಾನವಿತ್ತರೆ ಅಲ್ಲಿ ಉಳಿದವರಾರೂ ಏನೂ ಮಾತನಾಡುವಂತೆಯೇ ಇಲ್ಲ.

ಐದು ವರ್ಷಗಳ ಅವಧಿಗಾಗಿ ಜನಪ್ರತಿನಿಧಿಗಳಿಂದ ಆಯ್ಕೆಯಾದ ಓರ್ವ ರಾಷ್ಟ್ರಾಧ್ಯಕ್ಷನಿಗೆ ಕರ್ತುಂ ಅಕರ್ತುಂ–ಅನ್ಯಥಾಕರ್ತುಂ ಸಾಮರ್ಥ್ಯವಿರುವಾಗ, ಆದಿ ದೇವನಾದ ಆ ಮಹಾದೇವನಲ್ಲಿ ಎಷ್ಟೊಂದು ಸ್ವಾತಂತ್ರ್ಯವಿರಬಹುದೆಂಬುದನ್ನು ಊಹಿಸಬಹುದಾಗಿದೆ. ಅಂತೆಯೇ ಅವನಿಗೆ ಪತಿತಪಾವನನೆಂತಲೂ 'ಅನಾಥನಾಥ' ನೆಂತಲೂ ದೀನಬಂಧುವೆಂತಲೂ ಕರೆಯಲಾಗಿದೆ. ಅವನು ಅಪೇಕ್ಷಿಸಿದರೆ ಎಂತಹ ಕಡುಪಾಪಿಗೂ ಸಹ ಕೇವಲ ತನ್ನ ಕೃಪೆಯಿಂದ ಕೈವಲ್ಯ ಪದವಿಯನ್ನೀಯಬಲ್ಲನು.

ರಾಷ್ಟ್ರಾಧ್ಯಕ್ಷನಿಂದ ಹಾಗೂ ಶಿವನಿಂದ ಆಗುವ ಈ ಪ್ರಾಣದಾನ ಹಾಗೂ ಕೈವಲ್ಯ ಪ್ರದಾನಗಳು ವಿಶೇಷನಿಯಮ ಎಂಬುದಾಗಿ ತಿಳಿದುಕೊಳ್ಳಬೇಕು. ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಆದಿಪ್ರಸಾದಿಸ್ಥಲದಲ್ಲಿ ಜೀವಿಗಳ ಮುಕ್ತಿಗೆ ಶಿವನ ಅನುಗ್ರಹವೇ ಮೂಲಕಾರಣವೆಂದು ತಿಳಿಸಿದ್ದಾರೆ. ಕಾರಣ ಸಮಸ್ತರು ಈ ಶಿವಾನುಗ್ರಹ ವನ್ನು ಪಡೆದು ತಮ್ಮ ಜೀವನವನ್ನು ಪಾವನಮಾಡಿಕೊಳ್ಳಿರೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೩ ನವ್ಹಂಬರ, ೧೯೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



# ಅಂತ್ಯಪ್ರಸಾದಿಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಧರ್ಮಾಸಕ್ತ ಸಾಧಕರೇ ! ಸಿದ್ಧಾಂತಪ್ರಿಯ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಪಾಲುಗೊಂಡಿರುವ ವಿವಿಧ ರಾಜ್ಯಗಳ ಸದ್ಭಕ್ತರೇ ! ಮತ್ತು ತಾಯಂದಿರೇ ! ಶ್ರೀ ಕಾಶೀ ಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕಮಾಸದ ನಿಮಿತ್ತವಾಗಿ, ಶ್ರೀಮಹಾಸನ್ನಿಧಿಯ ಶಿವಪೂಜಾನುಷ್ಠಾನ ಹಾಗೂ ಶ್ರೀ ಸಿದ್ಧಾಂತ ಶಿಖಾಮಣಿಯ ಆಧ್ಯಾತ್ಮಿಕ ಆಶೀರ್ವಚನಗಳು ಸಾಂಗ ಮಂಗಲವಾಗಿ ಸಾಗುತ್ತಲಿವೆ. ನೀವೆಲ್ಲರೂ ತ್ರಿಪಥಗಾಮಿನಿಯಾದ ಗಂಗೆಯಲ್ಲಿ ಮಿಂದು ಪರಿಶುದ್ಧರಾಗಿದ್ದೀರಿ. ಸದ್ಯಃ ನೀವೆಲ್ಲ ಶ್ರೀಸಿದ್ಧಾಂತ ಶಿಖಾಮಣಿಯೆಂಬ ಜ್ಞಾನಗಂಗೆಯಲ್ಲಿ ಮಿಂದು ಪಾವನರಾಗಲಿದ್ದೀರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಮಾಡಿದ ಉತ್ಕೃಷ್ಟ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಆದಿಪ್ರಸಾದಿಸ್ಥಲದ ಬಗ್ಗೆ ಕೂಲಂಕುಷವಾಗಿ ತಿಳಿದುಕೊಂಡವರಾಗಿರುವಿರಿ. ಇಂದು ಅದರ ಮುಂದಿನ ಸ್ಥಲವಾದ ಅಂತ್ಯಪ್ರಸಾದಿಸ್ಥಲದ ಬಗ್ಗೆ ವಿವರಿಸಲಾಗುತ್ತದೆ.

ಅಂತ್ಯಪ್ರಸಾದಿ ಎಂಬ ಶಬ್ದವೂ ಸಹ ಅತಿ ರಹಸ್ಯಾರ್ಥಗರ್ಭಿತವಾಗಿರುತ್ತದೆ. ಇಲ್ಲಿ ಸರ್ವಪದಾರ್ಥಗಳ ಅಂತ್ಯವು ಅರ್ಥಾತ್ ವಿಲಯವು ಯಾವುದರಲ್ಲಿ ಉಂಟಾಗುವುದೋ ಅದಕ್ಕೆ ಅಂತ್ಯವೆಂಬುದಾಗಿ ಕರೆಯಲಾಗುತ್ತದೆ. ಅದರ ಅನುಭವವೇ ಅದಕ್ಕೆ ಅರ್ಥಾತ್ ಸಾಕ್ಷಾತ್ಕಾರವೇ ಪ್ರಸಾದ ಎಂಬುದಾಗಿಯೂ ಕರೆಯಿಸಿಕೊಳ್ಳುವುದು. ಹೀಗೆ ಆ ಅಂತ್ಯದ ಅನುಭವವುಳ್ಳ ಶಿವಯೋಗಿಯೇ ಅಂತ್ಯಪ್ರಸಾದಿಯು. ಅವನ ಬಗ್ಗೆ ನಿರೂಪಿಸುವ ಸ್ಥಲಕ್ಕೆ ಅಂತ್ಯಪ್ರಸಾದಿಸ್ಥಲವೆಂದು ಕರೆಯುತ್ತಾರೆ.

ಇದೇ ವಿಷಯವನ್ನೇ ಪೂಜ್ಯಪಾದರು–

ಲಯಃ ಸರ್ವಪದಾರ್ಥಾನಾಮಂತ್ಯ ಇತ್ಯುಚ್ಯತೇ ಬುಧೈಃ ।
ಪ್ರಸಾದೋಽನುಭವಸ್ತಸ್ಯ ತದ್ವಾನಂತ್ಯ ಪ್ರಸಾದವಾನ್ ॥

ದೇವತಿರ್ಯಙ್ಮನುಷ್ಯಾದಿ ವ್ಯವಹಾರವಿಕಲ್ಪನಾ ।
ಮಾಯಾಕೃತಾ ಪರೇ ತತ್ತ್ವೇ ತಲ್ಲಯೇ ತತ್ಕ್ಷಯೋಭವೇತ್ ॥

ಸಾಕ್ಷಾತ್ಕೃತೇ ಪರೇ ತತ್ತ್ವೇ ಸಚ್ಚಿದಾನಂದಲಕ್ಷಣೇ ।
ಕ್ವ ಪದಾರ್ಥಪರಿಜ್ಞಾನಂ ಕುತೋ ಜ್ಞಾತೃತ್ವಸಂಭವಃ ॥

ಸುಷುಪ್ತಸ್ಯ ಯಥಾ ವಸ್ತು ನ ಕಿಂಚಿದಪಿ ಭಾಸತೇ ।
ತಥಾ ಮುಕ್ತಸ್ಯ ಜೀವಸ್ಯ ನ ಕಿಂಚಿದ್ವಸ್ತು ದೃಶ್ಯತೇ ॥

(ಸಿ. ಶಿ. ೧೮ ; ೬೩–೬೬)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಭೂಮ್ಯಾದಿ ಶಿವತತ್ತ್ವ ಪರ್ಯಂತವಾದ ಸರ್ವಪದಾರ್ಥಗಳ ಅರ್ಥಾತ್ ಮೂವತ್ತಾರು ತತ್ತ್ವಗಳ ಲಯಕ್ಕೆ ಆಶ್ರಯಭೂತವಾದ ಪರಶಿವನಿಗೆ ವೀರಶೈವ ಶಾಸ್ತ್ರಜ್ಞರು ಅಂತ್ಯ ಎಂಬುದಾಗಿ ಕರೆಯುತ್ತಾರೆ. ಹೀಗೆ ಸರ್ವವೆಲ್ಲವನ್ನು ತನ್ನಲ್ಲಿರಿಸಿಕೊಂಡು, ಎಲ್ಲಕ್ಕೂ ಅಂತ್ಯದಲ್ಲಿ ಉಳಿದಿರುವ ಆ ಶಿವನ ಸಾಕ್ಷಾತ್ಕಾರಕ್ಕೆ ಪ್ರಸಾದವೆನ್ನುವರು. ಅಂತಹ ಪ್ರಸಾದವನ್ನು ಪಡೆದ ಶಿವಯೋಗಿಯೇ ಅಂತ್ಯಪ್ರಸಾದಿಯು. ಅಂದರೆ ಪ್ರಪಂಚದ ಲಯ ಚಿಂತನೆ ಯನ್ನು ಮಾಡಿ ಆ ಲಯಕ್ಕೆ ಆಶ್ರಯಭೂತನಾದ ಶಿವನ ಸಾಕ್ಷಾತ್ಕಾರರೂಪವಾದ ಪ್ರಸಾದದ ಅನುಭವವನ್ನು ಪಡೆದವನೇ ಅಂತ್ಯಪ್ರಸಾದಿಯೆಂಬುದಾಗಿ ತಿಳಿದುಕೊಳ್ಳ ಬೇಕು.

ದೇವ, ತಿರ್ಯಕ್ ಮತ್ತು ಮನುಷ್ಯಾದಿ ಯಾವ ಭೇದ ವ್ಯವಹಾರವಿದೆಯೋ ಅದೆಲ್ಲವೂ ಮಾಯಾಕೃತವಾದುದು. ಈ ಮಾಯೆಯು ಪರಶಿವನಲ್ಲಿ ವಿಲಯವಾಗಲು ಆ ಮಾಯೆಯಿಂದ ಉತ್ಪನ್ನವಾದ ಸರ್ವವ್ಯವಹಾರವು ಇಲ್ಲದಾಗಿ ಹೋಗುವುದು. ಆ ಮಾಯೆಯ ವಿಲಯವು ಹೇಗಾಗುವುದು ಎಂಬ ಜಿಜ್ಞಾಸೆಯುಂಟಾಗಲು ಪೂಜ್ಯರು ಅಪ್ಪಣೆಕೊಡಿಸಿದ್ದೇನೆಂದರೆ–ಸಚ್ಚಿದಾನಂದ ಸ್ವರೂಪವಾದ ಪರಶಿವಬ್ರಹ್ಮರ ಸಾಕ್ಷಾತ್ಕಾರ ವಾಗಲು ಮಾಯೆಯು ವಿಲಯವಾಗಿ ಹೋಗುವುದು. ಈ ಮಾಯೆಯು ನಿವೃತ್ತಿಯಾ ಗಲು ಪದಾರ್ಥಗಳ ಜ್ಞಾನವಾಗಲೀ ಅಥವಾ ಜ್ಞಾತೃತ್ವವಾಗಲಿ ಅದು ಹೇಗೆ ತಾನೆ ಸಂಭ ವಿಸಬಲ್ಲುದು ? ಅರ್ಥಾತ್ ಸಂಭವಿಸುವುದಿಲ್ಲವೆಂದು ಭಾವಿಸಬೇಕು. ಗಾಢವಾದ ನಿದ್ರೆ ಯಲ್ಲಿರುವ ವ್ಯಕ್ತಿಗೆ ಪ್ರಪಂಚದ ಯಾವ ವಸ್ತುವೂ ಭಾಸವಾಗದಿರುವಂತೆ ಮುಕ್ತನಾದ ಜೀವಿಗೆ ಪ್ರಪಂಚದ ಯಾವ ವಸ್ತುವೂ ಸಹ ಪ್ರತೀತವಾಗುವುದಿಲ್ಲ.

ಜೀವಾತ್ಮನ ಉದ್ಧಾರಕ್ಕೆ ಅನುಗ್ರಹವು ಅರ್ಥಾತ್ ಪ್ರಸಾದವು ಪರಮ ಅವಶ್ಯಕ ವಾದುದು. ಸ್ವಸಾಮರ್ಥ್ಯದಿಂದ ಕೈವಲ್ಯವನ್ನು ಪಡೆಯಲು ಅರ್ಹನಾದ ಶಿವಯೋಗಿಯೇ ಆಗಿರಲಿ ಅಥವಾ ದುರಿತಕರ್ಮವನ್ನೆಸಗಿದ ಪಾಪಿಯೇ ಆಗಿರಲಿ ಇವರೀರ್ವರೂ ಶಿವನಪ್ರಸಾದದಿಂದಲೇ ಶಿವನೊಂದಿಗೆ ಸಾಮರಸ್ಯವನ್ನು ಪಡೆಯುವ ರೆಂಬುದು ಪೂಜ್ಯಪಾದರು ಆಶಯವಾಗಿದೆ. ಅಂತೆಯೇ ಇಲ್ಲಿ ಪ್ರಸಾದದ ಮಹಿಮೆ ಯನ್ನೇ ಅತ್ಯಧಿಕವಾಗಿ ಕೊಂಡಾಡಿದ್ದಾರೆ. ಪರಮಾತ್ಮನು ಪ್ರಪಂಚಕ್ಕೆ ಆದಿಕಾರಣನೂ ಅಹುದು ಮತ್ತು ಪ್ರಪಂಚವೆಲ್ಲವೂ ಲಯವಾಗಿ ಹೋಗಲು ಅಂತ್ಯದಲ್ಲಿ ಅವನೇ ಉಳಿದುಕೊಳ್ಳುವನು. ಆದ್ದರಿಂದ ಅವನಿಗೆ ಆದಿಯೆಂಬುದಾಗಿಯೂ ಅಂತ್ಯನೆಂಬು

ದಾಗಿಯೂ ಕರೆಯಲಾಗಿದೆ. ಅಂತ್ಯರೂಪನಾದ ಶಿವನ ಅನುಗ್ರಹವನ್ನು ಪಡೆದವನೇ ಅಂತ್ಯಪ್ರಸಾದಿಯು.

ಈ ಜಗತ್ತಿನಲ್ಲಿ ದೇವ, ದಾನವ ಮತ್ತು ಮಾನವಾದಿ ರೂಪದಲ್ಲಿ ಅನೇಕ ವಿಧವಾದ ಭೇದ ವ್ಯವಹಾರವು ಕಂಡುಬರುತ್ತದೆ. ಇದೆಲ್ಲಕ್ಕೂ ಶಿವನಲ್ಲಿರುವ ಆ ಮಾಯಾ ಶಕ್ತಿಯೇ ಕಾರಣವಾದುದು. ಆ ಮಾಯೆಯು ಶಿವನಲ್ಲಿ ಲಯವಾಗಿ ಹೋಗಲು ಈ ಪ್ರಪಂಚವೆಲ್ಲವೂ ತತ್‌ಕ್ಷಣದಲ್ಲಿಯೇ ವಿಲಯವಾಗಿ ಹೋಗುವುದು. ಆಗ ಈ ಅಂತ್ಯಪ್ರಸಾದಿಯಾದ ಶಿವಯೋಗಿಗೆ ಪದಾರ್ಥಪರಿಜ್ಞಾನವಡಗಿ ಕೇವಲ ಸಚ್ಚಿದಾನಂದ ಸ್ವರೂಪವಾದ ಆ ಪರಶಿವ ತತ್ತ್ವವೇ ಅನುಭವ ಗೋಚರವಾಗುವುದು. ಗಾಢವಾದ ನಿದ್ರೆಯಲ್ಲಿರುವ ವ್ಯಕ್ತಿಗೆ ಬಾಹ್ಯ ಪ್ರಪಂಚವು ಭಾಸವಾಗದಿರುವಂತೆ ಶಿವಾದ್ವೈತ ಜ್ಞಾನದಿಂದ ಮುಕ್ತನಾದ ಶಿವಯೋಗಿಗೆ ಶಿವನನ್ನು ಹೊರತುಪಡಿಸಿ ಬೇರಾವುದೂ ಪ್ರತೀತಿಯಾಗುವುದಿಲ್ಲ ಎಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದಾರೆ.

ಜೀವನ್ಮುಕ್ತನಾದ ಶಿವಯೋಗಿಯು ಸರ್ವಪದಾರ್ಥವನ್ನು ಶಿವರೂಪವನ್ನಾಗಿಯೇ ನೋಡುವನೆಂಬ ವಿಷಯವನ್ನು ಪೂಜ್ಯಪಾದರು ಪುನಃ–

ಯಥಾಕಾಶಮವಿಚ್ಛಿನ್ನಂ ನಿರ್ವಿಕಾರಂ ಸ್ವರೂಪತಃ ।
ತಥಾ ಮುಕ್ತಸ್ಯ ಜೀವಸ್ಯ ಸ್ವರೂಪಮವಶಿಷ್ಯತೇ ॥

ನ ಕಿಂಚಿದಪಿ ಮುಕ್ತಸ್ಯ ದೃಶ್ಯಂ ಕರ್ತವ್ಯಮೇವ ವಾ ।
ಸುಖಸ್ಫೂರ್ತಿಸ್ವರೂಪೇಣ ನಿಶ್ಚಲಾ ಸ್ಥಿತಿರುಚ್ಯತೇ ॥

ಶಿವಾದ್ವೈತಪರಿಜ್ಞಾನ ಶಿಥಿಲಾಶೇಷವಸ್ತುನಃ ।
ಕೇವಲಂ ಸಂವಿದುಲ್ಲಾಸದರ್ಶಿನಃ ಕೇನ ಕೋ ಭವೇತ್ ॥

(ಸಿ. ಶಿ. ೧೮; ೬೭–೬೯)

ಈ ಪ್ರಕಾರವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಕಾಶವು ಹೇಗೆ ಸ್ವಾಭಾವಿಕವಾಗಿ ಅಪರಿಚ್ಛಿನ್ನವೂ, ನಿರ್ವಿಕಾರವೂ ಆಗಿರುತ್ತದೆಯೋ ಅದೇ ಪ್ರಕಾರ ವಾಗಿ ಜೀವನ್ಮುಕ್ತನಾದ ಶಿವಯೋಗಿಯ ಸ್ವರೂಪವೂ ಸಹ ಅಖಂಡರೂಪವಾಗಿ ಪ್ರಕಾಶಿ ಸುತ್ತಿರುತ್ತದೆ. ಜೀವನ್ಮುಕ್ತನಾದ ಶಿವಯೋಗಿಗೆ ನೋಡಬೇಕಾದ್ದಾಗಲೀ ಅಥವಾ ಮಾಡ ಬೇಕಾದ್ದಾಗಲೀ ಯಾವುದೂ ಇರುವುದಿಲ್ಲ, ಅವನು ಕೃತಕೃತ್ಯನಾಗಿರುತ್ತಾನೆ. ಅಂತೆಯೇ ಪರಿಪೂರ್ಣವೂ, ಆನಂದಮಯವೂ, ನಿಶ್ಚಲವೂ ಆದ ಆತನ ಸ್ಥಿತಿಯಿರುತ್ತದೆ. ಶಿವಾದ್ವೈತ ಜ್ಞಾನದಿಂದ ಸಂಪೂರ್ಣವಾದ ಪ್ರಾಪಂಚಿಕ ಭೇದಭ್ರಾಂತಿಯು ಅಳಿದು ಹೋಗಿರುವುದರಿಂದ ಆ ಶಿವಾದ್ವೈತ ಜ್ಞಾನದಲ್ಲಿ ಲೀನನಾಗಿರುವ ಶಿವಯೋಗಿಗೆ ಜ್ಞಾನೇಂದ್ರಿಯ ಇಲ್ಲವೇ ಕರ್ಮೇಂದ್ರಿಯಗಳ ವ್ಯವಹಾರದಿಂದ ಏನು ಪ್ರಯೋಜನ ಅರ್ಥಾತ್ ಯಾವ ಪ್ರಯೋಜನವೂ ಇಲ್ಲ. ಈ ಪೂರ್ವದಲ್ಲಿ ಹೇಳಿದ ಆದಿಪ್ರಸಾದಿ ಮತ್ತು ಈಗ ಹೇಳಿರುವ ಅಂತ್ಯಪ್ರಸಾದಿ ಇವೆರಡೂ ಸ್ಥಲಗಳ ನಡುವೆ ಉಪಕ್ರಮ ಹಾಗೂ ಉಪಸಂಹಾರ ರೂಪವಾದ ಐಕ್ಯತೆಯು ಇದ್ದುದು ಕಂಡುಬರುತ್ತದೆ.

ಪಂಚಮಹಾಭೂತಗಳಲ್ಲಿ ಅತಿಸೂಕ್ಷ್ಮವಾಗಿರುವ ಭೂತವೇ ಆಕಾಶವು. ಇದು ಸ್ವರೂಪತಃ ಅಖಂಡವೂ ಆಗಿರುತ್ತದೆ. ಆತ್ಮದಿಂದ ಉತ್ಪನ್ನವಾದ ಆಕಾಶವೇ ಅಖಂಡವಾಗಿರುವಾಗ ಆತ್ಮವು ಅದು ಹೇಗೆ ತಾನೆ ಖಂಡಿತವಾದೀತು ? ಅಂತೆಯೇ ಆತ್ಮಜ್ಞಾನವನ್ನು ಪಡೆದು ಜೀವನ್ಮುಕ್ತನಾದ ಶಿವಯೋಗಿಯು ತನ್ನ ಅಖಂಡವಾದ ಸ್ವರೂಪದಿಂದಲೇ ಪ್ರಕಾಶಿಸುತ್ತಿರುವಂಥವನಾಗಿರುತ್ತಾನೆ. ಅಂತೆಯೇ ಅವನಿಗೆ ಕರ್ತವ್ಯ ವೆನ್ನುವುದು ಏನೂ ಇರುವುದಿಲ್ಲ ; ಕೃತಕೃತ್ಯದ ಈತನು ತನ್ನದೇ ಆದ ಸಚ್ಚಿದಾನಂದ ಸ್ವರೂಪದಲ್ಲಿ ಸ್ಥಿತನಾಗಿರುತ್ತಾನೆ. ಹೀಗೆ ಈ ಅಂತ್ಯಪ್ರಸಾದಿ ಸ್ಥಲದ ಶಿವಯೋಗಿಯು ಅಂತ್ಯರೂಪನಾದ ಶಿವನ ಸಾಕ್ಷಾತ್ಕಾರವನ್ನು ಪಡೆದು ಆ ಸ್ಥಿತಿಯಲ್ಲಿಯೇ ನಿಶ್ಚಲನಾಗಿರು ತ್ತಾನೆಂಬುದನ್ನು ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೪ ನವ್ಹಂಬರ, ೧೯೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಸೇವ್ಯಪ್ರಸಾದಿಸ್ಥಲ

ಕಾಶೀ ವೀರಶೈವ ವಿದ್ವತ್‌ಸಂಘದ ಜಿಜ್ಞಾಸುಗಳಾದ ಸಾಧಕರೇ ! ಶಿವಯೋಗೀ ಸ್ವರೂಪರಾದ ಶಿವಾಚಾರ್ಯರೇ ! ಹಾಗೂ ಕಾರ್ಯಕ್ರಮದಲ್ಲಿ ಸಹಭಾಗಿಗಳಾಗಿರುವ ವಿವಿಧ ಪ್ರಾಂತಗಳಿಂದ ಬಂದ ಶ್ರದ್ಧಾಳುಗಳಾದ ಸದ್ಭಕ್ತರೇ ! ಮತ್ತು ಮಾತೆಯರೇ ! ಶ್ರೀ ಕಾಶೀಮಹಾಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಕಾರ್ತಿಕಮಾಸದ ನಿಮಿತ್ತ ವಾಗಿ, ಶ್ರೀ ಮಹಾಸನ್ನಿಧಿಯ ಶಿವಪೂಜಾನುಷ್ಠಾನ ಮತ್ತು ಶ್ರೀ ಸಿದ್ಧಾಂತ ಶಿಖಾಮಣಿಯ ಪಾರಮಾರ್ಥಿಕ ಆಶೀರ್ವಚನಗಳು ಹೃದಯಂಗಮವಾಗಿ ಸಾಗುತ್ತಲಿವೆ. ನೀವೆಲ್ಲರೂ ಪಾಪಪ್ರಕ್ಷಾಲಿನಿಯಾದ ಗಂಗೆಯಲ್ಲಿ ಮಿಂದು ಪಾವನರಾಗಿದ್ದೀರಿ. ಸದ್ಯಃ ನೀವೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ಜ್ಞಾನಗಂಗೆಯಲ್ಲಿ ಅವಗಾಹನೆ ಗೈಯ್ಯುತ್ತಿರುವಿರಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾತಪಸ್ವಿ ಹಾಗೂ ಚಮತ್ಕಾರಿ ಪುರುಷನೆನಿಸಿದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ವಿಶ್ವದ ಸಕಲ ಮನುಕುಲವನ್ನು ಕುರಿತು ಉಪದೇಶಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥರತ್ನದ ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅವಾಂತರಸ್ಥಲಗಳ ಬಗ್ಗೆ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯದಿನ ಅಂತ್ಯ ಪ್ರಸಾದಿಸ್ಥಲದ ಬಗ್ಗೆ ಸವಿಸ್ತಾರವಾಗಿ ತಿಳಿದುಕೊಂಡವರಾಗಿರುವಿರಿ. ಇಂದು ಅದರ ಮುಂದಿನ ಹಾಗೂ ಕೊನೆಯ ಸ್ಥಲವಾದ ಸೇವ್ಯಪ್ರಸಾದಿಸ್ಥಲದ ಬಗ್ಗೆ ವಿವೇಚಿಸೋಣ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬರುವ ಪ್ರತಿಯೊಂದು ಅವಾಂತರ ಸ್ಥಲಗಳು ಒಂದು ವಿಶಿಷ್ಟವಾದ ಅರ್ಥವನ್ನು ಹೊಂದಿದವುಗಳಾಗಿರುತ್ತವೆ. ಪ್ರಸ್ತುತವಾದ ಈ ಸೇವ್ಯಪ್ರಸಾದಿಸ್ಥಲದ ಅರ್ಥವೂ ಸಹ ಬಹುಗಂಭೀರವೇ ಆಗಿದೆ. ಈ ಶಬ್ದವನ್ನು ವಿಶ್ಲೇಷಿಸಿದಾಗ ಅದರ ಗಾಂಭೀರ್ಯವು ಸರ್ವರಿಗೆ ವೇದ್ಯವಾಗುವುದು. ''ಸೇವಿತುಂ ಯೋಗ್ಯಃ ಸೇವ್ಯಃ ಗುರುಃ, ತಸ್ಯ ಪ್ರಸಾದಃ=ಸೇವ್ಯಪ್ರಸಾದಃ, ತದ್ವಾನ್=ಸೇವ್ಯ ಪ್ರಸಾದೀ ಇದು ಈ ಶಬ್ದದ ವ್ಯುತ್ಪತ್ತಿ ಲಭ್ಯವಾದ ಅರ್ಥವು. ಇನ್ನು ಇದರ ತಾತ್ಪರ್ಯ ವೇನೆಂದರೆ, ಸೇವೆಮಾಡಿಸಿಕೊಳ್ಳಲು ಯೋಗ್ಯನಾದವನು ಸೇವ್ಯನೆಂದು ಕರೆಯಲ್ಪಡು ತ್ತಾನೆ. ಅವನೇ ಸದ್ಗುರುವು. ಅವನ ಅನುಗ್ರಹವೇ ಪ್ರಸಾದವು. ಅದನ್ನು ಪಡೆದು ಕೊಂಡವನೇ ಅಂತ್ಯಪ್ರಸಾದಿಯು. ಇದನ್ನೇ ಪೂಜ್ಯಪಾದರು.

ಸೇವ್ಯೋ ಗುರುಃ ಸಮಸ್ತಾನಾಂ ಶಿವ ಏವ ನ ಸಂಶಯಃ ।
ಪ್ರಸಾದೋಽಸ್ಯ ಪರಾನಂದ ಪ್ರಕಾಶಃ ಪರಿಕೀರ್ತ್ಯತೇ ॥

ಸೇವ್ಯೋ ಗುರುಃ ಸ್ಮೃತೋಽಹ್ಯಸ್ಯ ಪ್ರಸಾದೋಽನುಭವೋ ಮತಃ ।
ತದೇಕಾವೇಶರೂಪೇಣ ತದ್ವಾನ್ ಸೇವ್ಯಪ್ರಸಾದವಾನ್ ॥

ಗುರುದೇವಃ ಪರಂ ತತ್ತ್ವಂ ಪರತತ್ತ್ವಂ ಗುರುಃ ಸ್ಮೃತಃ ।
ತದೇಕತ್ವಾನುಭಾವೇನ ನ ಕಿಂಚಿದವಶಿಷ್ಯತೇ ॥

(ಸಿ. ಶಿ. ೧೮ ; ೨೦–೨೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸರ್ವರಿಂದಲೂ ಸೇವೆ ಮಾಡಿಸಿಕೊಳ್ಳಲು ಯೋಗ್ಯನಾದ ಅರ್ಥಾತ್ ಪೂಜ್ಯನಾದ ಗುರುವೇ ಸಾಕ್ಷಾತ್ ಶಿವಸ್ವರೂಪನೇ ಆಗಿರುತ್ತಾನೆ. ಇಂತಹ ಗುರುವಿನ ಪ್ರಸಾದವೇ ಪರಮಾನಂದ ಪ್ರಕಾಶ ವೆಂಬುದಾಗಿ ಕರೆಯಲ್ಪಡುತ್ತದೆ. ಶಿವಸ್ವರೂಪನಾದ ಗುರುವೇ ಸರ್ವರಿಂದಲೂ ಸೇವ್ಯನಾಗಿರುತ್ತಾನೆ. ಇಂತಹ ಗುರುವಿನ ಉಪದೇಶವೇ ಪ್ರಸಾದ ಎಂಬುದಾಗಿ ಕರೆಯ ಲ್ಪಡುತ್ತದೆ. ಸದ್ಗುರು ಹಾಗೂ ಅವನು ಮಾಡಿದ ಉಪದೇಶ ಇವೆರಡರಲ್ಲಿ ಅಭೇದ ಬುದ್ಧಿಯನ್ನು ತಾಳಿ ಅದನ್ನು ಪಡೆದುಕೊಂಡವನೇ ಸೇವ್ಯಪ್ರಸಾದಿ ಎಂಬುದಾಗಿ ಹೇಳಲ್ಪಡುತ್ತಾನೆ.

ಗುರುವೇ ಪರಶಿವನು, ಪರಶಿವನೇ ಗುರುವು ಎಂಬುದಾಗಿ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಹೀಗೆ ಗುರು ಹಾಗೂ ಪರಶಿವರು ಅಭೇದ ಬುದ್ಧಿಯನ್ನು ತಾಳಿದವರಿಗೆ ತಿಳಿದುಕೊಳ್ಳುವಂಥಾದ್ದು ಬೇರಾವುದೂ ಉಳಿಯುವುದೇ ಇಲ್ಲ. ಶಿವ ಹಾಗೂ ಗುರುಗಳ ಅಭೇದ ಜ್ಞಾನವಾಯಿತೆಂದರೆ ಸಂಪೂರ್ಣವಾದ ವಿಶ್ವದ ಜ್ಞಾನ ವಾದಂತೆಯೇ. ಆದ್ದರಿಂದಲೇ ತಿಳಿದುಕೊಳ್ಳುವಂಥಾದ್ದು ಬೇರಾವುದೂ ಉಳಿಯುವದಿಲ್ಲ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಈ ಜಗತ್ತಿನಲ್ಲಿ ಸೇವೆಮಾಡಲು ಯೋಗ್ಯನಾದವನು ಸದ್ಗುರುವೋರ್ವನೇ ಆಗಿರುತ್ತಾನೆ. ಅಂತೆಯೇ ಅವನಿಗೆ ಸೇವ್ಯನೆಂದು ಕರೆಯಲಾಗುತ್ತದೆ. ಆತ್ಮಕಲ್ಯಾಣಕ್ಕಾಗಿ ಗುರುವಿನ ಸಾನ್ನಿಧ್ಯಕ್ಕೆ ಹೋದ ಶಿಷ್ಯನು ಮೊದಲು ಆತನ ಸೇವೆಯನ್ನು ಮಾಡಿ ಅವನನ್ನು ಪ್ರಸನ್ನಗೊಳಿಸಿಕೊಳ್ಳಬೇಕು. ಅಂತೆಯೇ ಪೂಜ್ಯಪಾದರು ''ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಭಯಾನ್ವಿತಃ'' ಎಂಬುದಾಗಿ ಹೇಳಿದ್ದಾರೆ. ಭಯಭಕ್ತಿಯಿಂದ ಕೂಡಿದ ಶಿಷ್ಯನು ಆರು ತಿಂಗಳ, ಒಂದು ವರ್ಷ ಇಲ್ಲವೆ ಗುರುವು ಪ್ರಸನ್ನನಾಗುವವರೆಗೆ ಸೇವೆಯನ್ನು ಮಾಡಬೇಕು. ಶಾಸ್ತ್ರಗಳಲ್ಲಿ ಗುರುವಿನಿಂದ ವಿದ್ಯೆಯನ್ನು ಸಂಪಾದಿಸಲು ಮುಖ್ಯವಾಗಿ ಮೂರು ಉಪಾಯಗಳು ಪ್ರತಿಪಾದಿಸಲ್ಪಟ್ಟಿವೆ. ಗುರುಸೇವೆ, ಭೂರಿದಕ್ಷಿಣಾ ಮತ್ತು ವಿದ್ಯೆಯ–ವಿನಿಮಯ ಇವೇ ಆ ಮೂರು ಉಪಾಯಗಳು. ಅಂದರೆ ಗುರುಸೇವೆಯನ್ನು ಮಾಡಿ ಅಥವಾ ಗುರುವಿಗೆ ಹೇರಳವಾಗಿ ದಕ್ಷಿಣೆಯನ್ನು ಕೊಟ್ಟು, ಇಲ್ಲವೆ ತನಗೆ ಬರುತ್ತಿದ್ದ ವಿದ್ಯೆಯನ್ನು ಗುರುವಿಗೆ ಹೇಳಿ ಗುರುವಿನಿಂದ ಜ್ಞಾನವನ್ನು ಸಂಪಾದಿಸಬಹುದು. ಇವುಗಳಲ್ಲಿ ಗುರುಶುಶ್ರೂಷೆಯೇ ಅರ್ಥಾತ್ ಗುರುಸೇವೆಯೇ ಶ್ರೇಷ್ಠವಾದ ಉಪಾಯವು.

ಸೇವೆಯಿಂದ ಸಂತುಷ್ಟನಾಗುವಂತೆ ಗುರುವು ಮತ್ತಾವುದರಿಂದಲೂ ಸಂತುಷ್ಟ ನಾಗುವುದಿಲ್ಲ. ಅಂತೆಯೇ ಸೇವೆಗೇನೇ ಸರ್ವರು ಪ್ರಾಧಾನ್ಯತೆಯನ್ನು ಕೊಟ್ಟಿರುತ್ತಾರೆ. 'ರಘುವಂಶ' ಮಹಾಕಾವ್ಯದಲ್ಲಿ ಕವಿಕುಲಗುರುವಾದ ಕಾಳಿದಾಸನು ಗುರು–ಶಿಷ್ಯರ

ಒಂದು ಸುಂದರವಾದ ಪ್ರಸಂಗವನ್ನು ಚಿತ್ರಿಸಿದ್ದನಿಲ್ಲಿ ಸ್ಮರಿಸಿಕೊಳ್ಳಬಹುದು. 'ವರತಂತು' ಎಂಬ ಹೆಸರಿನ ಗುರುವಿನಲ್ಲಿ 'ಕೌತ್ಸ'ನೆಂಬ ಹೆಸರಿನ ಶಿಷ್ಯನು ವಿದ್ಯಾಧ್ಯಯನವನ್ನು ಮಾಡುತ್ತಿದ್ದನು. ಸುಮಾರು ಹದಿನಾಲ್ಕು ವರ್ಷಗಳವರೆಗೆ ನಿಷ್ಠೆಯಿಂದ ಗುರುಸೇವೆಯನ್ನು ಮಾಡಿ ಆತನು ಗುರುವಿನಿಂದ ಹದಿನಾಲ್ಕು ವಿದ್ಯೆಗಳನ್ನು ಕಲಿತುಕೊಂಡಿದ್ದನು. ಒಂದು ದಿನ ಶಿಷ್ಯನಾದ ಕೌತ್ಸನು ಗುರುವಿನಲ್ಲಿಗೆ ಹೋಗಿ ಹೇ ಗುರುವೇ ! ನಾನು ತಮ್ಮ ಸಾನ್ನಿಧ್ಯದಲ್ಲಿದ್ದು ಅಮೂಲ್ಯವಾದ ಜ್ಞಾನಾರ್ಜನೆಯನ್ನು ಮಾಡಿಕೊಂಡಿದ್ದೇನೆ. ಅದಕ್ಕಾಗಿ ಗುರುದಕ್ಷಿಣೆಯನ್ನು ಕೊಡುವ ಉತ್ಕಟವಾದ ಬಯಕೆಯಾಗಿದೆ. ಕಾರಣ ತಮಗೆ ಎಷ್ಟು ಗುರುದಕ್ಷಿಣೆಯನ್ನು ಸಲ್ಲಿಸಬೇಕು ಎಂಬುದರ ಬಗ್ಗೆ ಅಪ್ಪಣೆಕೊಡಿಸಬೇಕು. ಆಗ ವರತಂತು ಮಹರ್ಷಿಗಳು ''ಹೇ ಕೌತ್ಸನೇ ! ನೀನು ನಿಷ್ಠೆಯಿಂದ ನಮ್ಮ ಸೇವೆಯನ್ನು ಮಾಡಿರುವಿ ; ಆ ನಿನ್ನ ಸೇವೆಯೇ ಮಹಾಗುರುದಕ್ಷಿಣೆಯೆಂದು ಭಾವಿಸಿದ್ದೇವೆ. ಮತ್ತೆ ಬೇರೆ ಗುರುದಕ್ಷಿಣೆಯನ್ನು ಕೊಡುವ ಅವಶ್ಯಕತೆ ಇಲ್ಲ. ಗುರುಗಳ ಈ ಮಾತನ್ನು ಕೇಳಿದ ಕೌತ್ಸನು ಅದು ಹೇಗೆ ಗುರುಗಳೇ ! ನಾನು ತಮಗೆ ಕೊಡಲೇಬೇಕಾಗಿದೆ. ಆದ್ದರಿಂದ ತಮಗೆ ಎಷ್ಟುಬೇಕು ? ಏನು ಬೇಕು ಎಂಬುದನ್ನು ಅಪ್ಪಣೆಕೊಡಿಸಲೇಬೇಕು. ಎಂಬುದಾಗಿ ಪುನಃ ಕೇಳಿಕೊಂಡನು. ಗುರುಗಳು ಅದೆಷ್ಟೋ ಸಾರೆ ನಿರಾಕರಣೆ ಮಾಡಿದರೂ ತನ್ನ ಹಟವನ್ನು ಈತನು ಬಿಡಲೇ ಇಲ್ಲ. ಕೊನೆಗೆ ಗುರುಗಳು ಕ್ರುದ್ಧರಾಗಿ–''ನಿನಗೆ ಗುರುದಕ್ಷಿಣೆಯನ್ನು ಕೊಡುವ ಇಷ್ಟೊಂದು ಅಭಿಮಾನವಿದ್ದರೆ ನೀನು ನನ್ನ ಆಶ್ರಮದಲ್ಲಿ ಹದಿನಾಲ್ಕು ವರ್ಷಗಳವರೆಗೆ ಇದ್ದು ಹದಿನಾಲ್ಕು ವಿದ್ಯೆಗಳನ್ನು ಕಲಿತುಕೊಂಡಿರುವೆ. ಆದ್ದರಿಂದ ಹದಿನಾಲ್ಕು ಕೋಟಿ ಸುವರ್ಣ ವರಹಗಳನ್ನು ತಂದುಕೊಡು,'' ಎಂಬುದಾಗಿ ಸಿಟ್ಟಿನಲ್ಲಿಯೇ ಅಪ್ಪಣೆಕೊಡಿಸಿದರು. ಶಿಷ್ಯನು ಕೊಟ್ಟಿದ್ದನ್ನು ಗುರುವು ಸಂತೋಷವಾಗಿ ಸ್ವೀಕರಿಸುತ್ತಾನೆ, ಆದ್ದರಿಂದ ಗುರುಗಳಿಗೆ ಎಷ್ಟು ಬೇಕು ? ಏನು ಬೇಕು ಎಂಬುದಾಗಿ ಕೇಳುವುದು ಶಿಷ್ಯನ ಗುಣಧರ್ಮವಲ್ಲ. ಹಾಗೇನಾದರೂ ಕೇಳಿದರೆ ಶಿಷ್ಯನು ತೊಂದರೆಗೀಡಾಗುವ ಸಂಭವ ಇರುತ್ತದೆ. ಗುರುದಕ್ಷಿಣೆಯೆಂದರೆ ತನ್ನ ಶ್ರದ್ಧಾಸಮರ್ಪಣೆಯ ಒಂದು ಸಂಕೇತವು. ಅದರಲ್ಲಿ ವಸ್ತುವಿಗಿಂತಲೂ ಕೊಡುವ ವ್ಯಕ್ತಿಯ ಭಾವನೆಯೇ ಮುಖ್ಯವಾಗಿರುತ್ತದೆ. ಆದ್ದರಿಂದ ಕೊಡಬೇಕಾದ ವ್ಯಕ್ತಿಯು ತನ್ನ ಶಕ್ತ್ಯಾನುಸಾರವಾಗಿ ಏನು ಬೇಕಾದ್ದನ್ನು ಎಷ್ಟು ಬೇಕಾದಷ್ಟು ತಾನೇ ನಿಶ್ಚಯಿಸಿಕೊಂಡು ಕೊಡಬೇಕೇ ವಿನಃ ದಾನ ತೆಗೆದುಕೊಳ್ಳುವಂಥಾ ಗುರುಗಳಿಗೆ ಏನು ಬೇಕು ? ಮತ್ತು ಎಷ್ಟು ಬೇಕು ? ಎಂಬುದಾಗಿ ಕೇಳುವುದು ಶಿಷ್ಟಾಚಾರಕ್ಕೆ ವಿರೋಧವಾಗಿರುತ್ತದೆ. ಶಿಷ್ಯನಾದ ಕೌತ್ಸನು ಈ ಶಿಷ್ಟಾಚಾರವನ್ನು ಮೀರಿದ್ದರಿಂದಲೇ ಇವನಿಗೆ ಅಸಾಧ್ಯವಾದದ್ದನ್ನೇ ಕೇಳಬೇಕೆಂದು ಯೋಚಿಸಿ ಗುರುಗಳಾದ ವರತಂತು ಮಹರ್ಷಿಗಳು ಹದಿನಾಲ್ಕು ಕೋಟಿ ಸುವರ್ಣಮುದ್ರೆಗಳನ್ನು ಕೇಳಿದರು.

ಇತ್ತ ಕೌತ್ಸನು ಗುರುವಿಗೆ ನಮಸ್ಕರಿಸಿ ಇಷ್ಟೊಂದು ಗುರುತರವಾದ ಗುರು ದಕ್ಷಿಣೆಯ ವ್ಯವಸ್ಥೆಯು ಯಾರಿಂದ ಆಗಬಹುದು ? ಎಂಬುದಾಗಿ ವಿಚಾರಿಸುತ್ತ ಹೊರಟಾಗ ಆ ಸಮಯದಲ್ಲಿ ಸುಪ್ರಸಿದ್ಧನಾದ ಮತ್ತು ಮಹಾದಾನಿಯೆಂದು

ಪ್ರಖ್ಯಾತನಾದ ರಘುಮಹಾರಾಜನ ನೆನಪು ಅವನಿಗಾಯಿತು. ಆಗ ಅವನು ನೇರವಾಗಿ ರಘುಮಹಾರಾಜನ ರಾಜಧಾನಿಗೆ ಬಂದನು. ಅತಿಥಿಯ ಆಗಮನದ ವಾರ್ತೆಯನ್ನು ಕೇಳಿದ ರಾಜನು ಅವನನ್ನು ಸತ್ಕರಿಸಲೋಸುಗ ಒಂದು ಮಣ್ಣಿನ ಪಾತ್ರೆಯಲ್ಲಿ ಪೂಜಾ ಸಾಮಗ್ರಿಗಳನ್ನಿಟ್ಟುಕೊಂಡು ಬಂದನು. ರಾಜನ ಕೈಯಲ್ಲಿಯ ಈ ಮೃಣ್ಮಯ ಪಾತ್ರೆಗಳನ್ನು ಕಂಡ ಕೌತ್ಸನು ಅತ್ಯಂತ ನಿರಾಶೆಯನ್ನು ತಾಳಿ ರಾಜನಿಗೆ ಗುರುದಕ್ಷಿಣೆ ವಿಷಯವನ್ನು ಹೇಳಬೇಕೋ ಹೇಳಬಾರದೋ ಎಂಬ ಆಲೋಚನೆಯಲ್ಲಿ ಮುಳುಗಿ ಹೋದನು. ರಘುಮಹಾರಾಜನು ಅದೇ ಆಗ ತಾನೇ 'ಸರ್ವಸ್ವದಕ್ಷಿಣಾ' ಎಂಬ ಬೃಹತ್ ಪ್ರಮಾಣದ ಯಾಗವನ್ನು ಮಾಡಿ ತನ್ನ ಸರ್ವಸ್ವವೆಲ್ಲವನ್ನು ದಾನರೂಪದಲ್ಲಿ ಅರ್ಪಿಸಿ ಮಣ್ಣಿನ ಪಾತ್ರೆಗಳಿಂದಲೇ ತನ್ನ ನಿತ್ಯಜೀವನವನ್ನು ಸಾಗಿಸುವ ಸಂದರ್ಭದಲ್ಲಿ ಈ ಕೌತ್ಸನು ಗುರುವಿಗೆ ಕೊಡಬೇಕಾದ ಭೂರಿದಕ್ಷಿಣೆಯ ವ್ಯವಸ್ಥೆಗಾಗಿ ಮಹಾರಾಜನ ಬಳಿಗೆ ಬಂದಿದ್ದನು. ಇವರೀರ್ವರ ಸ್ಥಿತಿಯು ಒಬ್ಬರು ಮತ್ತೊಬ್ಬರಿಗೆ ಏನನ್ನೂ ಹೇಳುವ ಹಾಗಿರಲಿಲ್ಲ.

ರಘುಮಹಾರಾಜನು ಪಾದ್ಯಾದಿ ಪೂಜಾ ಸಾಮಗ್ರಿಗಳಿಂದ ವಟುವಾದ ಕೌತ್ಸನ ಪೂಜೆಯನ್ನು ಮಾಡಿ ಅರಮನೆಯೊಳಗೆ ಬರಮಾಡಿಕೊಂಡು ಉನ್ನತಾಸನದಮೇಲೆ ಕುಳ್ಳಿರಿಸಿ ಬಂದ ಪ್ರಯೋಜನವೇನೆಂದು ಕೇಳಿಕೊಂಡನು. ಆಗ ಕೌತ್ಸನು–''ಮಹಾ ರಾಜರೇ ! ನಾನು ಯಾವುದೋ ಒಂದು ಮಹಾನ್ ಕಾರ್ಯನಿಮಿತ್ತವಾಗಿ ನಿಮ್ಮಲ್ಲಿಗೆ ಬಂದಿದ್ದೆನು. ಆದರೆ ನಿಮ್ಮ ಸ್ಥಿತಿಗತಿಗಳನ್ನು ನೋಡಿದಾಗ ನಿಮ್ಮಿಂದ ಅದು ಸಾಧ್ಯವಿಲ್ಲವೆಂದು ನನಗೆ ತಿಳಿದುಬಂದಿದೆ. ಕಾರಣ ನಾನು ನನ್ನ ಕಾರ್ಯಸಿದ್ಧಿಗಾಗಿ ಬೇರೆಡೆಗೆ ಹೋಗುವೆನು ಅನುಮತಿಯನ್ನು ಕೊಟ್ಟುಬಿಡಿರಿ'' ಕೌತ್ಸನ ಈ ಮಾತನ್ನು ಕೇಳಿದ ಮಹಾರಾಜನು–''ಎಲೈ ಬ್ರಾಹ್ಮಣೋತ್ತಮನೇ ! ನಿನ್ನ ಇಚ್ಛೆಯನ್ನು ವ್ಯಕ್ತ ಮಾಡದೆ ಬರಿಗೈಯಿಂದ ಹೋಗುವುದು ನಮ್ಮ ಕೀರ್ತಿಗೆ ಕಲಂಕವಾದುದು. ಕಾರಣ ತಮ್ಮ ಇಚ್ಛೆಯನ್ನು ವ್ಯಕ್ತಮಾಡಬೇಕೆಂ''ದು ಕೇಳಿಕೊಂಡನು. ಆಗ ಕೌತ್ಸನು–''ತಾನು ಗುರುವಿಗೆ ಕೊಡಬೇಕಾದ ಗುರುದಕ್ಷಿಣೆಯ ವಿಷಯವನ್ನು ಸವಿಸ್ತಾರವಾಗಿ ಹೇಳಿದನು.'' ಗುರುದಕ್ಷಿಣೆಯ ಈ ವಿಚಾರವನ್ನು ತಿಳಿದ ರಘುಮಹಾರಾಜನು ಕೌತ್ಸನನ್ನು ಕುರಿತು–''ತಾವುಗಳು ಮೂರುದಿನಗಳವರೆಗೆ ನನ್ನಲಿದ್ದು ಆತಿಥ್ಯವನ್ನು ಸ್ವೀಕರಿಸಿರಿ. ಅಷ್ಟರೊಳಗಾಗಿ ನಿಮಗೆ ಬೇಕಾದ ಹೊನ್ನಿನ ವ್ಯವಸ್ಥೆಯನ್ನು ಮಾಡುತ್ತೇನೆ''. ಮಹಾರಾಜನ ಈ ಮಾತನ್ನು ಕೇಳಿದ ಕೌತ್ಸನು ರಾಜನ ಅತಿಥಿಗೃಹದಲ್ಲಿ ತನ್ನ ನಿತ್ಯ ಕರ್ಮಗಳನ್ನು ಮಾಡುತ್ತ ಉಳಿದುಕೊಂಡನು. ಇತ್ತ ರಘುಮಹಾರಾಜನು ಇಷ್ಟೊಂದು ಹಣವನ್ನು ಸದ್ಯಃ ಎಲ್ಲಿಂದ ತರಬೇಕು ? ಯಜ್ಞದ ಪೂರ್ವದಲ್ಲಿಯೇ ಪ್ರಜರಿಂದ ಕರ ವಸೂಲಿಯನ್ನು ಮಾಡಲಾಗಿದ್ದು ಇಷ್ಟು ಬೇಗನೇ ಪುನಃ ಪ್ರಜೆಗಳ ಬಳಿಗೆ ಹೋಗುವಂತಿಲ್ಲ. ಈಗ ಅಧಿಕ ಧನಾಢ್ಯನಾದ ವ್ಯಕ್ತಿಯೆಂದರೆ ಕುಬೇರನೊಬ್ಬನೇ. ಕುಬೇರನಿಂದ ಹಣವನ್ನು ಪಡೆಯಬೇಕಾದರೆ ಅವನ ಜೊತೆಗೆ ಯುದ್ಧವನ್ನೇ ಮಾಡಬೇಕಾಗುವುದು. ಆದರೂ ಚಿಂತೆಯಿಲ್ಲ, ಯುದ್ಧವನ್ನು ಮಾಡಿಯೇ ಆ ಹಣದ ವ್ಯವಸ್ಥೆಯನ್ನು ಮಾಡಬೇಕು ಎಂದು ಯೋಚಿಸಿ ಮರುದಿನ ಕುಬೇರನ ಮೇಲೆ ದಂಡೆತ್ತಿ

ಹೋಗುವ ವಿಚಾರವನ್ನು ಮುಂಚಿತವಾಗಿಯೇ ಕುಬೇರನಿಗೆ ಸಂದೇಶವನ್ನು ಕಳಿಸಿ ಕೊಟ್ಟನು. ರಘುಮಹಾರಾಜನ ಈ ಯುದ್ಧದ ಸಂದೇಶವನ್ನು ಕೇಳಿದ ಕುಬೇರನು ಗಾಬರಿಯಾಗಿ ಯುದ್ಧದಲ್ಲಿ ಪರಾಜಯವನ್ನು ಹೊಂದಿ ಅಪಮಾನಿತನಾಗಿ ರಾಜನಿಗೆ ಇಡೀ ಬೊಕ್ಕಸವನ್ನೇ ಒಪ್ಪಿಸುವುದರ ಬದಲಾಗಿ ಸದ್ಯಃ ಅವನಿಗೆ ಬೇಕಾಗಿರುವಷ್ಟು ಸುವರ್ಣವನ್ನು ಕೊಟ್ಟರಾಯಿತೆಂದು ಯೋಚಿಸಿ ಅಂದಿನ ರಾತ್ರಿಯಲ್ಲಿಯೇ ರಘುಮಹಾರಾಜನ ಖಜಾನೆಯಲ್ಲಿ ಸುವರ್ಣವೃಷ್ಟಿಗೈದನು. ಮರುದಿನ ಪ್ರಾತಃಕಾಲ ಖಜಾನೆಯ ಕೋಶಾಧಿಕಾರಿಗಳಿಂದ ಸುವರ್ಣ ವೃಷ್ಟಿಯ ವಾರ್ತೆಯನ್ನು ಕೇಳಿ ಸಂತುಷ್ಟ ನಾದ ರಾಜನು ಯುದ್ಧದ ವಿಚಾರವನ್ನು ಬಿಟ್ಟು, ಕೌತ್ಸನನ್ನು ಬರಮಾಡಿಕೊಂಡು ಮತ್ತೊಮ್ಮೆ ಅವನಿಗೆ ಪೂಜಾದಿಗಳನ್ನು ಸಲ್ಲಿಸಿ ಎಲ್ಲ ಧನವನ್ನು ತೆಗೆದುಕೊಂಡು ಹೋಗಿ ಗುರುವಿಗೆ ಅರ್ಪಿಸಬೇಕೆಂಬುದಾಗಿ ಕೇಳಿಕೊಂಡನು.

ಆಗ ಕೌತ್ಸನು–''ಎಲೈ ಮಹಾರಾಜನೆ ! ನನಗೆ ಬೇಕಾದದ್ದು ಕೇವಲ ಹದಿನಾಲ್ಕು ಕೋಟಿ ವರಹಗಳು ಮಾತ್ರ ಹೆಚ್ಚಿನದಾದ ಧನವು ನನಗೆ ಬೇಡಾ''. ಕೌತ್ಸನ ಈ ಮಾತನ್ನು ಕೇಳಿದ ಮಹಾರಾಜನು–''ಎಲೈ ವಿದ್ಯಾಸಂಪನ್ನನಾದ ಬ್ರಾಹ್ಮಣೋತ್ತಮನೇ ! ಇದೆಲ್ಲವೂ ನಿನಗೆ ಅರ್ಪಿಸುವುದಕ್ಕಾಗಿಯೇ ಪ್ರಾಪ್ತವಾಗಿದೆ. ಕಾರಣ ಇದರಲ್ಲಿಯ ಒಂದು ನಾಣ್ಯವನ್ನೂ ಸಹ ನಾನಿಟ್ಟುಕೊಳ್ಳಲಾರೆ, ಕಾರಣ ಎಲ್ಲವನ್ನು ತಾವು ತೆಗೆದುಕೊಂಡು ಹೋಗಬೇಕು''. ತನಗೆಷ್ಟು ಬೇಕೋ ಅಷ್ಟನ್ನೇ ತೆಗೆದುಕೊಳ್ಳಬೇಕೆನ್ನುವ ಈ ಕೌತ್ಸ ಮತ್ತು ಬೇಡಿದವನಿಗೆ ಅವನು ಬೇಡಿದ್ದಕ್ಕಿಂತಲೂ ಹೆಚ್ಚಿಗೆ ಕೊಡಬೇಕೆನ್ನುವ ಈ ರಾಜ ಇವರೀರ್ವರೂ ಅರ್ಥಾರ್ಥಿ ಮತ್ತು ದಾನಿಗಳಿಗೆ ಉತ್ಕೃಷ್ಟವಾದ ಉದಾಹರಣೆಯಾಗಿ ದ್ದಾರೆ. ಕೊನೆಗೆ ರಾಜನ ಆಗ್ರಹದ ಮೇರೆಗೆ ಕೌತ್ಸನು ಆ ಎಲ್ಲ ಧನವನ್ನು ಆನೆ ಹಾಗೂ ಒಂಟೆಗಳ ಮೇಲೆ ಹೇರಿಕೊಂಡು ತನ್ನ ಗುರುವಾದ ವರತಂತುವಿನ ಆಶ್ರಮಕ್ಕೆ ಬರಲು ಗುರುವಿಗೆ ಪರಮಾಶ್ಚರ್ಯ, ನಾನೇನೋ ಸಿಟ್ಟಿನಲ್ಲಿ ಇವನಿಗೆ ಅಸಾಧ್ಯವಾದದ್ದನ್ನು ಬೇಡಬೇಕೆಂದು ಬೇಡಿದರೆ ಇವನು ಅದನ್ನು ಸಾಧ್ಯಮಾಡಿದನಲ್ಲ ! ಎಂದು ಸಂತುಷ್ಟ ರಾದ ಗುರುಗಳು ಅವನನ್ನು ಮೈದಡವಿ ಆಶೀರ್ವದಿಸಿ ಅದರಲ್ಲಿಯ ಕೆಲಪಾಲು ಸಂಪ ತ್ತನ್ನು ಶಿಷ್ಯನಿಗೆ ಅನುಗ್ರಹಿಸಿ ಗುರುಕುಲಾದಿಗಳನ್ನು ಸ್ಥಾಪಿಸಿ ವಟುಗಳಿಗೆ ವಿದ್ಯೆಯ ವ್ಯವಸ್ಥೆ ಮಾಡಲು ಆಶೀರ್ವದಿಸಿ ಬೀಳ್ಕೊಟ್ಟರು.

ಶ್ರೀ ಕಾಳಿದಾಸ ಮಹಾಕವಿಯು 'ರಘುವಂಶ' ಮಹಾಕಾವ್ಯದಲ್ಲಿ ವರ್ಣಿಸಿದ ವರತಂತು ಮತ್ತು ಕೌತ್ಸರ ಈ ಪ್ರಸಂಗವು ಭೂರಿದಕ್ಷಿಣೆಯ ಒಂದು ಅಲೌಕಿಕ ಉದಾ ಹರಣೆಯಾಗಿದೆ. ಈ ರೀತಿಯಾದ ಗುರುದಕ್ಷಿಣೆಯನ್ನು ಸಮರ್ಪಿಸುವುದು ಸರ್ವ ರಿಂದಲೂ ಸಾಧ್ಯವಾಗುವುದಿಲ್ಲ. ಆದರೆ ಗುರುವಿನ ಅನುಗ್ರಹವನ್ನು ಪಡೆಯಲು ಸರ್ವರಿಗೂ ಸುಲಭವಾದ ಸಾಧನವೆಂದರೆ ಗುರುಸೇವೆಯೇ ಆಗಿರುತ್ತದೆ. ಅಂತೆಯೇ ಪೂಜ್ಯಪಾದರು ಗುರುವಿಗೆ ಸೇವ್ಯನೆಂಬುದಾಗಿ ಸಂಬೋಧಿಸಿರುತ್ತಾರೆ.

ಶಾಸ್ತ್ರಗಳಲ್ಲಿ ಗುರುಸೇವೆಯು ಆಪ್ತ, ಅಂಗ, ಸ್ಥಾನ ಮತ್ತು ಸದ್ಭಾವವೆಂಬುದಾಗಿ ನಾಲ್ಕು ಪ್ರಕಾರವಾಗಿ ವರ್ಣಿಸಲ್ಪಟ್ಟಿರುತ್ತದೆ. ತನಗೆ ಇಷ್ಟರಾಗಿರುವ ವ್ಯಕ್ತಿಗಳನ್ನು

ಪ್ರೀತಿಸುವಂತೆ ಗುರುವನ್ನು ಪ್ರೀತಿಸಿ ಅವರ ಸೇವೆಗೈಯ್ಯುವದು ಆಪ್ತಸೇವೆಯು. ಇನ್ನು ತನ್ನ ದೇಹದ ಅವಯವಗಳನ್ನು ತಾನು ಪ್ರೀತಿಸುವಷ್ಟು ಗುರುವಿನ ದೇಹದ ಬಗ್ಗೆ ಕಾಳಜಿಯನ್ನು ವಹಿಸಿ ಸೇವೆ ಗೈಯ್ಯುವದು ಅಂಗ ಸೇವೆಯು. ಇನ್ನು ತನ್ನ ಮನೆ, ಹೊಲ ಮುಂತಾದವುಗಳಲ್ಲಿ ಆಸಕ್ತಿಯಿಟ್ಟು ಅವುಗಳನ್ನು ಸ್ವಚ್ಛ ಹಾಗೂ ಸುಂದರವಾಗಿಡುವಂತೆ ಗುರುವಿನ ಮಠಮಂದಿರಗಳಲ್ಲಿ ಸೇವೆ ಗೈದು ಅವುಗಳ ವ್ಯವಸ್ಥೆ ಮಾಡುವದಕ್ಕೆ 'ಸ್ಥಾನಸೇವೆ' ಎನ್ನುತ್ತಾರೆ. ಇದೇ ತೆರನಾಗಿ ಈ ಪ್ರತಿಯೊಂದು ಸೇವೆಯನ್ನು ಮಾಡುವಾಗ ಲೋಭಾದಿಗಳಿಗೆ ಸ್ಥಾನವನ್ನು ಕೊಡದೆ ನಿಸ್ಪೃಹವಾಗಿ ಶ್ರೇಷ್ಠಭಾವನೆಯಿಂದ ವರ್ತಿಸುವುದೇ 'ಸದ್ಭಾವ ಸೇವೆ' ಎಂಬುದಾಗಿ ಕರೆಯಲ್ಪಡುತ್ತದೆ. ಹೀಗೆ ಈ ಚತುರ್ವಿಧ ಸೇವಾಸಕ್ತನಾದ ಶಿಷ್ಯನು ತನ್ನ ಗುರುವನ್ನು ಸಾಕ್ಷಾತ್ ಶಿವಸ್ವರೂಪನೆಂದು ಭಾವಿಸಿದಾಗ ಗುರುವಿನ ಅಮೋಘವಾದ ಅನುಗ್ರಹವು ಅರ್ಥಾತ್ ಪ್ರಸಾದವು ಅವನಿಗೆ ಪ್ರಾಪ್ತವಾಗುತ್ತದೆ. ಗುರುವಿನ ಈ ಅನುಗ್ರಹದಿಂದ ಶಿಷ್ಯನು ಆತ್ಮಜ್ಞಾನಿಯಾಗಿ ತನ್ನ ಆತ್ಮಾನಂದದ ಅರಿವನ್ನು ಪಡೆದುಕೊಂಡು ಆನಂದಿತನಾಗುತ್ತಾನೆ. ಹೀಗೆ ಗುರುವಿನ ಪ್ರಸಾದವನ್ನು ಪಡೆದ ಶಿಷ್ಯನಿಗೆ 'ಸೇವ್ಯಪ್ರಸಾದಿ'ಯೆಂಬುದಾಗಿ ಕರೆಯಲಾಗಿದೆ.

ಈ ಪ್ರಪಂಚದಲ್ಲಿ ಶಿಷ್ಯನಾದವನಿಗೆ ಗುರುವೇ ಪರಮತತ್ತ್ವವು. ಅವನ ದೃಷ್ಟಿಯಲ್ಲಿ ಗುರು ಹಾಗೂ ಪರಬ್ರಹ್ಮಗಳಲ್ಲಿ ಅಂತರವಿರುವುದಿಲ್ಲ, ಅವೆರಡರ ಐಕ್ಯ ಜ್ಞಾನವಾಗಲು ಶಿಷ್ಯನಿಗೆ ಜ್ಞಾತವ್ಯವೆಲ್ಲವೂ ತಿಳಿದುಹೋಗಿರುವುದರಿಂದ ಪುನಃ ತಿಳಿಯಬೇಕಾದದ್ದಾವುದೂ ಅವನಿಗೆ ಇರುವುದಿಲ್ಲ, ಅಂದರೆ ಸೇವ್ಯಪ್ರಸಾದಿಯಾದ ಶಿಷ್ಯನು ಕೃತಕೃತ್ಯನಾಗಿರುತ್ತಾನೆಂಬುದಾಗಿ ತಿಳಿದುಕೊಳ್ಳಬೇಕು.

ಹೀಗೆ ಕೃತಕೃತ್ಯನಾದ ಈ ಸೇವ್ಯಪ್ರಸಾದಿಯ ಮುಂದಿನ ಸ್ಥಿತಿಯನ್ನು ಪೂಜ್ಯಪಾದರು–

ಅಪರಿಚ್ಛೇದ್ಯಮಾತ್ಮಸ್ಥವಾಙ್ಮಾನಸಗೋಚರಮ್ ।
ಆನಂದಂ ಪಶ್ಯತಾಂ ಪುಂಸಾಂ ರತಿರನ್ಯತ್ರ ಕಾ ಭವೇತ್ ॥

ಜ್ಞಾನಾಮೃತೇನ ತೃಪ್ತಸ್ಯ ಕಿಮನ್ಯೈರ್ಭೋಜ್ಯವಸ್ತುಭಿಃ ।
ಜ್ಞಾನಾದೇವ ಪರಾನಂದಂ ಪ್ರಕಾಶಯತಿ ಸಚ್ಚಿವಃ ॥

ಮುಕ್ತಿರೇವ ಪರಾ ತೃಪ್ತಿಃ ಸಚ್ಚಿದಾನಂದಲಕ್ಷಣಾ ।
ನಿತ್ಯತೃಪ್ತಸ್ಯ ಮುಕ್ತಸ್ಯ ಕಿಮನ್ಯೈರ್ಭೋಗಸಾಧನೈಃ ॥

ನ ಬಾಹ್ಯಕರ್ಮ ತಸ್ಯಾಸ್ತಿನ ಚಾಂತರ್ನೈವ ಕುತ್ರಚಿತ್ ।
ಶಿವೈಕ್ಯಜ್ಞಾನ ರೂಢಸ್ಯ ದೇಹಭ್ರಾಂತಿಂ ವಿಮುಂಚತಃ ॥

ನ ಕರ್ಮಬಂಧೇ ನ ತಪೋವಿಶೇಷೇ ।
ನ ಮಂತ್ರಯೋಗಾಭ್ಯಸನೇ ತಥೈವ ॥
ಧ್ಯಾನೇನ ಬೋಧೇ ಚ ತಥಾತ್ಮತತ್ತ್ವೇ
ಮನಃ ಪ್ರವೃತ್ತಿಃ ಪರಯೋಗಭಾಜಾಮ್ ॥

(ಸಿ. ಶಿ. ೧೮ ; ೭೩–೭೭)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ವಾಣಿ ಮತ್ತು ಮನಸ್ಸುಗಳಿಗೆ ಅಗೋಚರವಾಗಿರುವ, ಅಖಂಡವಾಗಿರುವ, ಸ್ವಸ್ವರೂಪವಾದ ಪರಮಾನಂದವನ್ನು ಸಾಕ್ಷಾತ್ ಅನುಭವಿಸುತ್ತಿರುವ ಶಿವಯೋಗಿಗೆ ಅನ್ಯವಿಷಯಗಳ ಅಭಿಲಾಷೆಯು ಅದು ಹೇಗೆ ತಾನೆ ಇದ್ದೀತು ? ಜ್ಞಾನಾಮೃತದಿಂದ ತೃಪ್ತನಾಗಿರುವ ಶಿವಯೋಗಿಗೆ ಅನ್ಯ ಸಾಂಸಾರಿಕ ಭೋಗ್ಯವಸ್ತುಗಳಿಂದ ಅದಾವ ಪ್ರಯೋಜನವು ? ಸಚ್ಚಿದಾನಂದ ಸ್ವರೂಪವಾದ ಶಿವನ ಜ್ಞಾನದಿಂದಲೇ ಪರಮಾನಂದವು ಪ್ರಕಾಶಿತವಾಗುತ್ತದೆ. ಅಂದರೆ ಶಿವಜ್ಞಾನದಿಂದಲೇ ಪರಮಾನಂದದ ಪ್ರಾಪ್ತಿಯಾಗುವುದು. ಶಿವಾದ್ವೈತಜ್ಞಾನಾಮೃತದ ಸೇವನೆಯಿಂದ ಪರಮಾನಂದವನ್ನು ಪ್ರಾಪ್ತಮಾಡಿಕೊಂಡಿರುವ ಶಿವಯೋಗಿಯು ನಿತ್ಯತೃಪ್ತನಾಗಿರುತ್ತಾನೆ. ಅವನ ಆ ನಿತ್ಯತೃಪ್ತ ಸ್ಥಿತಿಯೇ ಪರಾಮುಕ್ತಿಯು. ಹೀಗೆ ಸಚ್ಚಿದಾನಂದ ಲಕ್ಷಣಾತ್ಮಕವಾದ ನಿತ್ಯ ತೃಪ್ತಿರೂಪವಾದ ಮುಕ್ತಿಯನ್ನು ಪಡೆದ ಶಿವಯೋಗಿಗೆ ಅನ್ಯಭೋಗಸಾಧನಗಳಿಂದ ಅದಾವ ಪ್ರಯೋಜನವಿದೆ ? ಹೀಗೆ ಶಿವಾದ್ವೈತ ಜ್ಞಾನವನ್ನು ಹೊಂದಿದ, ದೇಹಭ್ರಾಂತಿಯಿಂದ ಮುಕ್ತನಾಗಿರುವ ಶಿವಯೋಗಿಗೆ ಅಂತರಂಗದಲ್ಲಿ ಮಾಡಬೇಕಾದ ಧ್ಯಾನಾದಿಕರ್ಮಗಳೂ ಇರುವುದಿಲ್ಲ. ಮತ್ತು ಬಿಂದು, ತಿರೋಭಾವ, ಮಲ, ಮಾಯಾದಿರೂಪವಾದ ಬಾಹ್ಯಕರ್ಮಪಾಶಗಳೂ ಇರುವುದಿಲ್ಲ.

ಸರ್ವೋತ್ಕೃಷ್ಟವಾದ ಮಹಾಲಿಂಗದೊಂದಿಗೆ ಸಾಮರಸ್ಯವನ್ನು ಪಡೆದುಕೊಂಡ ಸೇವ್ಯಪ್ರಸಾದಿಯ ಮನಸ್ಸು ಅಜಪಗಾಯತ್ರೀರೂಪವಾದ ''ಸೋऽಹಂ'' ಮಂತ್ರದ ಮಂತ್ರಯೋಗಾಭ್ಯಾಸದಲ್ಲಾಗಲಿ, ಷಟ್‌ಕರ್ಮ ಮತ್ತು ಬಂಧತ್ರಯರೂಪವಾದ ಹಠಯೋಗದಲ್ಲಾಗಲಿ ಅಥವಾ ಯೋಗಗಳಲ್ಲಿಯೇ ಶ್ರೇಷ್ಠವೆನಿಸಿಕೊಂಡ ರಾಜಯೋಗದಲ್ಲಾಗಲಿ ಇಲ್ಲವೆ ಅನಾಹತ ಬ್ರಹ್ಮಜ್ಞಾನರೂಪವಾದ ಲಯಯೋಗದಲ್ಲಾಗಲಿ ಆಸಕ್ತವಾಗುವುದಿಲ್ಲ. ಆದ್ದರಿಂದ ಸೇವ್ಯ ಪ್ರಸಾದಿಯು ತನ್ನ ಸ್ವಸ್ವರೂಪಜ್ಞಾನದಲ್ಲಿಯೇ ತಲ್ಲೀನನಾಗಿರುತ್ತಾನೆ.

ಲಿಂಗಷಟ್‌ಸ್ಥಲಾಂತರ್ಗತವಾದ ಪ್ರಾಣಲಿಂಗಿಸ್ಥಲದ ಅಂತಿಮ ಅವಾಂತರ ಸ್ಥಲವಾದ ಸೇವ್ಯಪ್ರಸಾದಿಸ್ಥಲದಲ್ಲಿ ಈ ಸೇವ್ಯನು ಗುರುವಿನ ಸಂಪೂರ್ಣವಾದ ಕೃಪಾಶೀರ್ವಾದದಿಂದ ಪರಿಪೂರ್ಣ ಸ್ಥಿತಿಯನ್ನು ಪಡೆದುಕೊಂಡ ವಿಷಯವನ್ನು ಪೂಜ್ಯಪಾದರು ಬಹು ಸೂಕ್ಷ್ಮವಾಗಿ ಪ್ರತಿಪಾದಿಸಿದ್ದಾರೆ. ಇವನಿಗೆ ಆತ್ಮತೃಪ್ತಿಯು ಪ್ರಾಪ್ತವಾಗಿರೋಣದರಿಂದ ಕರ್ತವ್ಯಾದಿಗಳೇನೂ ಉಳಿದಿರುವುದಿಲ್ಲ. ಇದೊಂದು ಮುಕ್ತಾವಸ್ಥೆಯೇ ಅರ್ಥಾತ್ ಮುಕ್ತಿಯ ವಿಲಕ್ಷಣವಾದ ಆನಂದವನ್ನು ಅನುಭವಿಸುವ ಯೋಗ್ಯತೆಯು ಇವನಿಗೆ ಪ್ರಾಪ್ತವಾಗಿರುತ್ತದೆ. ಇಂತಹ ಸ್ಥಿತಿಯನ್ನು ಪಡೆದುಕೊಳ್ಳುವುದೇ ಮನುಷ್ಯ ಜೀವನದ ಮುಖ್ಯಗುರಿಯಾಗಿರುತ್ತದೆ. ಈ ಗುರಿಯನ್ನು ತಲುಪಿದವನಿಗೆ ವಿಷಯೋಪಭೋಗಗಳ ಅಭಿಲಾಷೆಯು ಅದೆಂದೂ ಉಂಟಾಗುವುದಿಲ್ಲ. ಅನರ್ಘ್ಯವಾದ ರತ್ನವನ್ನು ಪಡೆದುಕೊಂಡ ವ್ಯಕ್ತಿಗೆ ಕಾಜಿನ ಮಣಿಗಳು ಆಕರ್ಷಿಸದಿರುವಂತೆ ಆತ್ಮಾನಂದದಿಂದ ತೃಪ್ತನಾದವನಿಗೆ ಶಬ್ದ–ಸ್ಪರ್ಶಾದಿ ವಿಷಯಗಳು ಆಕರ್ಷಿಸಲಾರವು. ಅಂತೆಯೇ ಪೂಜ್ಯಪಾದರು ಈ ಶಿವಯೋಗಿಗೆ ಮಲ–ಮಾಯಾದಿ ಬಾಹ್ಯ–ಬಂಧನಗಳಾಗಲಿ ಮತ್ತು

ತಪ–ಯೋಗಾಭ್ಯಾಸಾದಿ ಆಂತರಿಕ ಬಂಧನಗಳಾಗಲಿ ಇರುವುದಿಲ್ಲವೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಕಾರಣ ಈ ಪವಿತ್ರವಾದ ಕಾರ್ತಿಕ ಮಾಸದ ನಿಮಿತ್ತವಾಗಿ ನಡೆದಿರುವ ಈ ಜ್ಞಾನಯಜ್ಞದಲ್ಲಿ ಪಾಲುಗೊಂಡಿರುವ ನಿಮ್ಮೆಲ್ಲರಿಗೂ ಈ ಸ್ಥಿತಿಯು ಪ್ರಾಪ್ತವಾಗಲೆಂಬುದಾಗಿ ಆಶೀರ್ವದಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ''
ಗ್ರಂಥದ ಅಷ್ಟಾದಶ ಪರಿಚ್ಛೇದವು ಪೂರ್ಣವಾದುದು.

ದಿನಾಂಕ ೧೫ ನವ್ಹಂಬರ, ೧೯೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

# ಏಕೋನವಿಂಶತಿತಮ ಪರಿಚ್ಛೇದಃ

## ಶರಣಸ್ಥಲ

**ಆಶೀರ್ವಚನ-೧**

## ದೀಕ್ಷಾಪಾದೋದಕಸ್ಥಲ

**ಜಿಜ್ಞಾಸುಗಳಾದ ಸದ್ಭಕ್ತರೆ !**

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಶರಣಸ್ಥಲದ ಬಗ್ಗೆ ಇಲ್ಲಿ ತಿಳಿಯಪಡಿಸಲಾಗುವುದು. ಈ ಸ್ಥಲದಲ್ಲಿ ಜೀವನ್ಮುಕ್ತನ ವಿಲಕ್ಷಣವಾದ ಸ್ವರೂಪ ಸ್ಥಿತಿಯ ಬಗ್ಗೆ ವಿಸ್ತೃತವಾದ ವಿವೇಚನೆಯನ್ನು ಮಾಡಲಾಗಿದೆ. ಇಲ್ಲಿಯ ಶರಣಸ್ಥಲ ಹಾಗೂ ಅದರಲ್ಲಿ ಬರುವ ಪ್ರತಿಯೊಂದು ಅವಾಂತರ ಸ್ಥಲಗಳು ಅತ್ಯಂತ ಮಹತ್ವದವು ಗಳಾಗಿವೆ. ಇದಕ್ಕೂ ಪೂರ್ವದ ಸ್ಥಲವಾದ ಪ್ರಾಣಲಿಂಗಿ ಸ್ಥಲದ ಬಗ್ಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಉಪದೇಶಿಸಿದ ತಾತ್ವಿಕ ವಿಷಯಗಳನ್ನು ಅತ್ಯಂತ ಶ್ರದ್ಧೆಯಿಂದ ಆಲಿಸಿದ ಅಗಸ್ತ್ಯ ಮಹರ್ಷಿಯು ಪುನಃ ವಿನಯ ಪೂರ್ವಕವಾಗಿ–

> ಸ್ಥಲಭೇದಾಃ ಸಮಾಖ್ಯಾತಾಃ ಪ್ರಾಣಲಿಂಗಿಸ್ಥಲಾಶ್ರಯಾಃ ।
> ಕಥಯ ಸ್ಥಲಭೇದಂ ಮೇ ಶರಣಸ್ಥಲ ಸಂಶ್ರಿತಮ್ ॥

(ಸಿ. ಶಿ. ೧೯–೧)

ಈ ರೀತಿಯಾಗಿ ಪ್ರಾರ್ಥಿಸಿಕೊಳ್ಳುತ್ತಾನೆ. ''ಹೇ ಗುರುವರನೆ ! ಪ್ರಾಣಲಿಂಗಿ ಸ್ಥಲಾಂತರ್ಗತಗಳಾದ ಸರ್ವ ಅವಾಂತರ ಸ್ಥಲಗಳ ಬಗ್ಗೆ ತಾವು ನಿರೂಪಿಸಿದ ವಿಷಯ ವನ್ನು ಸರಿಯಾಗಿ ಅವಧಾರಣೆ ಮಾಡಿದ್ದೇನೆ. ಸದ್ಯಃ ಮುಂದಿನ ಈ ಶರಣಸ್ಥಲದಲ್ಲಿ ಬರುವ ಅವಾಂತರ ಸ್ಥಲಗಳ ಬಗ್ಗೆ ವಿಶೇಷವಾಗಿ ತಿಳಿಸುವ ಕೃಪೆಯಾಗಬೇಕು'' ಶ್ರೀ ಅಗಸ್ತ್ಯಮಹರ್ಷಿಯ ಈ ವಿನಂತಿಯನ್ನು ಆಲಿಸಿದ ಪೂಜ್ಯಪಾದರು ಶರಣಸ್ಥಲದ ಅವಾಂತರ ಸ್ಥಲಗಳ ಬಗ್ಗೆ–

> ಶರಣಸ್ಥಲಮಾಶ್ರಿತ್ಯ ಸ್ಥಲದ್ವಾದಶಕಂ ಮಯಾ ।
> ಉಚ್ಯತೇ ನಾಮ ಸರ್ವೇಷಾಂ ಸ್ಥಲಾನಾಂ ಶೃಣು ತಾಪಸ ॥

(ಸಿ. ಶಿ. ೧೯–೨)

ಈ ವಿಧವಾಗಿ ಉಪದೇಶವನ್ನು ಪ್ರಾರಂಭಿಸುತ್ತಾರೆ. ''ಹೇ ತಪಸ್ವಿಯಾದ ಅಗಸ್ತ್ಯನೆ ! ಈ ಶರಣಸ್ಥಲದಲ್ಲಿ ಹನ್ನೆರಡು ಅವಾಂತರ ಸ್ಥಳಗಳು ಇರುತ್ತವೆ. ಅವುಗಳ ನಾಮ ನಿರ್ದೇಶನ ವನ್ನು ಮೊದಲು ಮಾಡಲಾಗುವುದು. ನಂತರ ಪ್ರತಿಯೊಂದು ಅವಾಂತರ ಸ್ಥಲದ ಬಗ್ಗೆ ವಿಸ್ತೃತವಾಗಿ ವಿವೇಚಿಸಲಾಗುವುದು. ಆದ ಕಾರಣ ಮೊದಲು ಪ್ರತಿಯೊಂದು ಅವಾಂತರ ಸ್ಥಲದ ಸಾಂಕೇತಿಕ ನಾಮಗಳನ್ನು ಆಲಿಸು'' ಅವುಗಳು–

ದೀಕ್ಷಾಪಾದೋದಕಂ ಪೂರ್ವಂ ಶಿಕ್ಷಾಪಾದೋದಕಂ ತತಃ ।
ಜ್ಞಾನಪಾದೋದಕಂ ಚಾಥ ಕ್ರಿಯಾನಿಷ್ಪತ್ತಿಕಂ ತತಃ ॥
ಭಾವನಿಷ್ಪತ್ತಿಕಂ ಚಾಥ ಜ್ಞಾನನಿಷ್ಪತ್ತಿಕಂ ತತಃ ।
ಪಿಂಡಾಕಾಶಸ್ಥಲಂ ಚಾಥ ಬಿಂದ್ವಾಕಾಶ ಸ್ಥಲಂ ತತಃ ॥
ಮಹಾಕಾಶಸ್ಥಲಂ ಚಾತ ಕ್ರಿಯಾಯಾಶ್ಚ ಪ್ರಕಾಶನಮ್ ।
ಭಾವಪ್ರಕಾಶನಂ ಪಶ್ಚಾತ್ ತತೋ ಜ್ಞಾನಪ್ರಕಾಶನಮ್ ॥
ಸ್ವರೂಪಂ ಪೃಥಗೇತೇಷಾಂ ಕಥಯಾಮಿ ಯಥಾಕ್ರಮಮ್ ॥

(ಸಿ. ಶಿ. ೧೯, ૩–೫)

೧) ದೀಕ್ಷಾಪಾದೋದಕಸ್ಥಲ ೨) ಶಿಕ್ಷಾಪಾದೋದಕಸ್ಥಲ ೩) ಜ್ಞಾನಪಾದೋದಕಸ್ಥಲ ೪) ಕ್ರಿಯಾನಿಷ್ಪತ್ತಿಸ್ಥಲ ೫) ಭಾವನಿಷ್ಪತ್ತಿಸ್ಥಲ ೬) ಜ್ಞಾನನಿಷ್ಪತ್ತಿಸ್ಥಲ ೭) ಪಿಂಡಾಕಾಶಸ್ಥಲ ೮) ಬಿಂದ್ವಾಕಾಶಸ್ಥಲ ೯) ಮಹಾಕಾಶಸ್ಥಲ ೧೦) ಕ್ರಿಯಾಪ್ರಕಾಶನಸ್ಥಲ ೧೧) ಭಾವಪ್ರಕಾಶನಸ್ಥಲ ೧೨) ಜ್ಞಾನಪ್ರಕಾಶಸ್ಥಲ ಈ ರೀತಿಯಾಗಿ ಇರುತ್ತವೆ. ಇವುಗಳಲ್ಲಿ ಮೊದಲನೆಯದಾದ ಸ್ಥಲವೇ ದೀಕ್ಷಾಪಾದೋದಕಸ್ಥಲವು.

ದೀಕ್ಷೆ ಹಾಗೂ ಪಾದೋದಕ ಶಬ್ದಗಳ ಬಗ್ಗೆ ಬಹಳಷ್ಟು ಜನರಿಗೆ ತಿಳುವಳಿಕೆ ಇರುವುದರಲ್ಲಿ ಸಂಶಯವಿಲ್ಲ. ಆದರೆ ಅಲ್ಲಿ ಬಂದಿರುವ ದೀಕ್ಷಾಪಾದೋದಕವೆಂಬ ಸಂಯುಕ್ತ ಶಬ್ದದ ಅರ್ಥವು ಪಾರಿಭಾಷಿಕವಾದುದು. ಅದನ್ನೇ ಸರ್ವರಿಗೂ ಬೋಧಿಸುವುದಕ್ಕಾಗಿಯೇ ಪೂಜ್ಯಪಾದರಾದ ರೇಣುಕಾಚಾರ್ಯರು ಅಗಸ್ತ್ಯನನ್ನು ನಿಮಿತ್ತ ಮಾಡಿಕೊಂಡು–

ದೀಕ್ಷಯಾಽಪಗತದ್ವೈತಂ ಯದ್‌ಜ್ಞಾನಂ ಗುರುಶಿಷ್ಯಯೋಃ ।
ಆನಂದಸ್ಯೈಕ್ಯಮೇತೇನ ದೀಕ್ಷಾಪಾದೋದಕಂ ಸ್ಮೃತಮ್ ॥

(ಸಿ. ಶಿ. ೧೯–೬)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೆಂದರೆ, ಸದ್ಗುರುವಿನಿಂದ ಪ್ರಾಪ್ತವಾದ ಚಿನ್ಮಯ ದೀಕ್ಷೆಯಿಂದ ಗುರುಶಿಷ್ಯರಲ್ಲಿಯ ದ್ವೈತಭಾವನೆಯು ದೂರವಾಗಿ ಅವರಲ್ಲಿ ಉಂಟಾದ ಅದ್ವೈತಜ್ಞಾನ ಮೂಲಕವಾಗಿ ಗುರುಶಿಷ್ಯರ ನಿಜಾನಂದದ ಐಕ್ಯಸ್ಥಿತಿಯು ಪ್ರಾಪ್ತವಾಗಲು ಅದಕ್ಕೆ ದೀಕ್ಷಾಪಾದೋದಕಸ್ಥಲವೆಂದು ಕರೆಯುತ್ತಾರೆ. ಗುರುಶಿಷ್ಯರ ಭೇದಭಾವವಳಿದು ಸಮಾನ ಸಾಮರಸ್ಯ ಸ್ಥಿತಿಯನ್ನು ಅನುಭವಿಸುವ ಸ್ಥಲವೇ ದೀಕ್ಷಾಪಾದೋದಕಸ್ಥಲವು ''ಆಚಾರ್ಯಃ ಪೂರ್ವರೂಪಂ ಅಂತೇವಾಸ್ಯುತ್ತರರೂಪಂ ವಿದ್ಯಾ ಸಂಧಿಃ'' ಎಂಬ ಶ್ರುತಿಪ್ರಮಾಣದಂತೆ ಹಾಗೂ–

ಅಸ್ಮಾತ್ ಪ್ರವಿತತಾದ್ ಬಂಧಾತ್ ಪರಸಂಸ್ಥಾನಿರೋಧಕಾತ್ ।
ದೀಕ್ಷೈನಂ ಮೋಚಯೇತ್ ಪೂರ್ವಂ ಶೈವಂ ಧಾಮ ನಯತ್ಯಪಿ ॥

ಎಂಬ ಸ್ವಾಯಂಭುವಾಗಮದ ಉಕ್ತಿಯಂತೆ ಗುರುಶಿಷ್ಯರ ಅಭೇದ ಸ್ಥಿತಿಯನ್ನು ಇಲ್ಲಿ ನಿರೂಪಿಸಲಾಗಿದೆ. ಒಂದು ನದಿಯ ಎರಡು ದಂಡೆಗಳು ಪರಸ್ಪರವಾಗಿ ದೂರದಲ್ಲಿರುವಾಗ ಅವರೆಡರ ನಡುವೆ ಸೇತುವೆಯನ್ನು ನಿರ್ಮಾಣಗೊಳಿಸಲು ಆ ಸೇತುವೆಯು

ಅವೆರಡರ ನಡುವೆ ಸಂಬಂಧವನ್ನುಂಟುಮಾಡುವಂತೆ, ಪರಸ್ಪರ ಭಿನ್ನರಾಗಿರುವ ಗುರು ಶಿಷ್ಯರ ನಡುವೆ ವಿದ್ಯೆಯು ಸೇತುವೆಯಂತೆ ಕಾರ್ಯ ಮಾಡಿ ಅವರೀರ್ವರನ್ನು ಒಂದು ಗೂಡಿಸುತ್ತದೆ. ತನಗೆ ಶರಣಾಗತನಾದ ಶಿಷ್ಯನಿಗೆ ತನ್ನ ಸರ್ವ ವಿದ್ಯೆಯನ್ನು ಅನುಗ್ರಹಿಸಿ ಆತನನ್ನು ತನ್ನಂತೆಯೇ ಮಾಡಿಕೊಳ್ಳುತ್ತಾನೆ. ಹೀಗೆ ಆತ್ಮಜ್ಞಾನ ಮೂಲಕವಾಗಿ ಗುರು ಶಿಷ್ಯರ ಪರಸ್ಪರ ಸಾಮರಸ್ಯ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ದೀಕ್ಷಾಪಾದೋದಕ ಸ್ಥಲವೆಂಬುದಾಗಿ ತಿಳಿದುಕೊಳ್ಳಬೇಕು. ಇದೇ ವಿಷಯವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಬೇರೊಂದು ವಿಧವಾಗಿ–

ಅಥವಾ ಪಾದಶಬ್ದೇನ ಗುರುರೇವ ನಿಗದ್ಯತೇ ||
ಶಿಷ್ಯಶ್ಚೋದಕ ಶಬ್ದೇನ ತಯೋರೈಕ್ಯಂ ತು ದೀಕ್ಷಯಾ ||

(ಸಿ. ಶಿ ೧೯–೭)

ಹೀಗೆ ಉಪದೇಶಿಸಿದ್ದಾರೆ. ಈ ಶ್ಲೋಕದಲ್ಲಿ 'ದೀಕ್ಷಾ ಪಾದೋದಕ' ಶಬ್ದದ ಅನ್ವರ್ಥಕ ವಾದ ಅರ್ಥವಿಶ್ಲೇಷಣೆ ಮಾಡಿದ್ದನ್ನು ಕಾಣುತ್ತೇವೆ. ''ದೀಕ್ಷಾ ಪಾದೋದಕ'' ಶಬ್ದದಲ್ಲಿ ದೀಕ್ಷೆ, ಪಾದ ಮತ್ತು ಉದಕವೆಂಬುದಾಗಿ ಮೂರು ಪದಗಳಿರುತ್ತವೆ. ಇಲ್ಲಿ ಪೂಜ್ಯರ ಆದೇಶದಂತೆ ಪಾದವೆಂದರೆ ಗುರುವೆಂತಲೂ, ಉದಕವೆಂದರೆ ಶಿಷ್ಯನೆಂತಲೂ ಇವರೀರ್ವರ ಐಕ್ಯತೆಯನ್ನು ಸಾಧಿಸುವುದೇ ದೀಕ್ಷೆಯೆಂತಲೂ ತಿಳಿದುಕೊಳ್ಳಬೇಕು.

ಕ್ರಿಯಾಪಾದೋದಕವನ್ನು ಸಿದ್ಧಗೊಳಿಸುವಾಗ ಪಾದಕ್ಕೆ ಉದಕವನ್ನು ಸಮರ್ಪಿಸ ಲಾಗುತ್ತದೆ. ಪಾದಕ್ಕೆ ಉದಕವು ಸಮರ್ಪಿತವಾಗುವಂತೆ ಶಿಷ್ಯನೂ ಸಹ ಗುರುವಿಗೆ ಸಮರ್ಪಿತನಾಗಬೇಕಾಗುತ್ತದೆ. ಪಾದಕ್ಕೆ ಸಮರ್ಪಿತವಾದ ಉದಕವು ಪಾದದ ಮಹತ್ವ ವನ್ನು ಪಡೆಯುವಂತೆ ಸರ್ವತೋ ಭಾವೇನ ಗುರುವಿಗೆ ಸಮರ್ಪಿತನಾದ ಶಿಷ್ಯನು ಗುರು ವಿನ ಸಮಾನ ಸ್ಥಿತಿಯನ್ನು ಹೊಂದುತ್ತಾನೆ. ಅಂತೆಯೇ ಇಲ್ಲಿ ಪಾದಕ್ಕೆ ಗುರುವಿನ ಹಾಗೂ ಉದಕಕ್ಕೆ ಶಿಷ್ಯನ ಹೋಲಿಕೆಯನ್ನು ಕೊಡಲಾಗಿದೆ. ತನಗೆ ಶರಣಾಗತನಾದ ಶಿಷ್ಯನಿಗೆ ಸದ್ಗುರುವು ದೀಕ್ಷೆಯನ್ನು ಅನುಗ್ರಹಿಸಿ ಅವನಲ್ಲಿಯ ಮಲ, ಮಾಯಾ ಮತ್ತು ಆವರಣ ಗಳನ್ನು ದೂರ ಮಾಡಿ ಅವನನ್ನು ತನ್ನಂತೆಯೇ ಮಾಡಿಕೊಳ್ಳುತ್ತಾನೆ. ಹೀಗೆ ಚಿನ್ಮಯ ದೀಕ್ಷೆಯ ಮುಖಾಂತರ ಗುರು ಶಿಷ್ಯರ ಅಭೇದ ಸ್ಥಿತಿಯನ್ನು ಬೋಧಿಸುವ ಸ್ಥಲವೇ ದೀಕ್ಷಾ ಪಾದೋದಕಸ್ಥಲವೆಂಬುದಾಗಿ ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ದೀಕ್ಷಾಪಾದೋದಕಸ್ಥಲದಲ್ಲಿ ಪಾದವೆಂಬ ಶಬ್ದಕ್ಕೆ ಗುರುವೆಂಬುದಾಗಿ ಅರ್ಥೈಸಿದುದು, ಬಹಳಷ್ಟು ವಿಲಕ್ಷಣವಾದುದು. ಅವರ ಈ ಉಪದೇಶದಲ್ಲಿ ಅತಿ ಸೂಕ್ಷ್ಮವಾದ ರಹಸ್ಯಾರ್ಥವು ಅಡಕವಾಗಿದೆ. ಅದೇನೆಂದರೆ ಸಾಮಾನ್ಯವಾಗಿ 'ಪಾದ' ಈ ಶಬ್ದಕ್ಕೆ ಕಾಲು ಎಂದು ಅರ್ಥವಾಗುವು ದುಂಟು. ಮನುಷ್ಯನ ಶರೀರದಲ್ಲಿರುವ ಅಯವಯಗಳಲ್ಲಿ ಪಾದವು ಒಂದು ಕರ್ಮೇಂದ್ರಿಯವಾಗಿದೆ. ಶರೀರವನ್ನು ಹೊತ್ತುಕೊಂಡು ಹೋಗುವ ಕಾರ್ಯವನ್ನು ಇದು ಮಾಡುತ್ತದೆ. ಅಂತೆಯೇ ''ಪದ್ಯತೇ =ಗಮ್ಯತೇ ಇತಿ ಪಾದಃ'' ಎಂಬುದಾಗಿ ಇದರ ವ್ಯುತ್ಪತ್ತಿಯನ್ನು ಮಾಡಲಾಗುತ್ತದೆ. ನೋಡಲಿಕ್ಕೆ ಇದು ಕೆಳಮಟ್ಟದ ಅವಯವ ವಾಗಿದ್ದರೂ ಆಚಾರಶೀಲರ ಪಾದಗಳು ಶುಷ್ಕ ಜ್ಞಾನಿಗಳ ಮಸ್ತಕಕ್ಕಿಂತಲೂ ಶ್ರೇಷ್ಠ

ವಾದವುಗಳಾಗಿರುತ್ತವೆ. ಅಂತೆಯೇ ಗುರು ಹಿರಿಯರಿಗೆ ನಮಸ್ಕಾರವನ್ನು ಮಾಡುವಾಗ ಮಸ್ತಕವನ್ನು ಪಾದದ ಮೇಲೆ ಇಡುವುದನ್ನು ಅಥವಾ ದೊಡ್ಡವರ ಪಾದವನ್ನು ಮಸ್ತಕದ ಮೇಲೆ ಇರಿಸಿಕೊಳ್ಳುವುದನ್ನು ನೋಡುತ್ತೇವೆ. ಇದರಿಂದ ತಿಳಿದುಬರುವುದೇನೆಂದರೆ ನಾವು ತಿಳಿದುಕೊಂಡ ಜ್ಞಾನಕ್ಕಿಂತಲೂ ನಾವು ಆಚರಿಸುವ ಕ್ರಿಯೆಯೇ ನಮ್ಮನ್ನು ಅಳೆಯುವ ಅಳತೆಗೋಲಾಗಿರುತ್ತದೆ. ನಾವು ಏನನ್ನು ತಿಳಿದುಕೊಂಡಿದ್ದೇವೆ ಎನ್ನುವುದಕ್ಕಿಂತ ನಾವು ಏನನ್ನು ಮಾಡುತ್ತಿದ್ದೇವೆ ಎನ್ನುವುದು ಬಹಳಷ್ಟು ಮುಖ್ಯವಾದುದು. ಅಂತೆಯೇ ''ನುಡಿದಂತೆ ನಡೆ, ಇದೇ ಜನ್ಮ ಕಡೆ'' ಎಂಬ ಗಾದೆಯ ಮಾತು ಪ್ರಸಿದ್ಧವಾಗಿದೆ. ಈ ದೇಶದ ಆಚಾರ್ಯರು, ಸಂತರು, ಶರಣರೂ ಸಹ ಉತ್ತಮ ತಿಳುವಳಿಕೆಗಿಂತ ಉತ್ತಮ ಆಚರಣೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆ. ಅರಿವು–ಆಚರಣೆಗಳು ಒಂದಾಗಿದ್ದರೆ ಸುವರ್ಣಕ್ಕೆ ಸುಗಂಧವನ್ನು ಬೆರಸಿದಂತಾಗುವುದು. ಆದರೆ ಆಚರಣೆಯಲ್ಲಿ ಹೀನತೆ ಬಂದೊದಗಿದಾಗ ಆತನು ಸರ್ವರಿಂದಲೂ ತಿರಸ್ಕೃತನಾಗುತ್ತಾನೆ. ಅಂತೆಯೇ ಬಸವಣ್ಣನವರು–''ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದಡೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆ'' ಎಂಬ ತಮ್ಮ ಈ ವಚನಾಂಶದಲ್ಲಿ ಆಚಾರದ ಹಿರಿಮೆಯನ್ನು ಎತ್ತಿ ಹಿಡಿದದ್ದು ಕಂಡುಬರುತ್ತದೆ.

ಜಗತ್ತಿನ ಜನರಿಗೆಲ್ಲ ಮಾರ್ಗದರ್ಶಕನಾದ ಸದ್ಗುರುವು ಆಚಾರ ಸಂಪನ್ನನಾಗಿರುತ್ತಾನೆಂಬ ಉದ್ದೇಶದಿಂದಲೇ ಪೂಜ್ಯಪಾದರು ಪಾದ ಶಬ್ದಕ್ಕೆ ಗುರುವೆಂಬುದಾಗಿ ಅರ್ಥೈಸಿದ್ದಾರೆ. ನಮ್ಮ ಮಸ್ತಕದಲ್ಲಿಯ ಜ್ಞಾನವು ಯಾರಿಗೂ ದೃಷ್ಟಿಗೋಚರವಾಗುವುದಿಲ್ಲ, ಆದರೆ ನಾವು ನಡೆಯುವ ನಡತೆಯು ಸಕಲರಿಗೂ ಎದ್ದು ಕಾಣುತ್ತದೆ. ಜಗತ್ತಿನ ಜನರು ಜ್ಞಾನಿಗಳು ಆಚರಿಸುವ ಆಚರಣೆಯ ಅನುಕರಣೆಯನ್ನು ಮಾಡುತ್ತಿರುತ್ತಾರೆ. ಬಾಲಕರು ಹೇಳಿದ್ದನ್ನು ತಿಳಿದು ಆಚರಿಸುವುದಕ್ಕಿಂತಲೂ, ಆಚರಿಸುವುದನ್ನು ಅನುಕರಿಸಿ ಆಚರಿಸುವುದೇ ಹೆಚ್ಚು. ಒಂದು ಚಿಕ್ಕ ಮಗುವನ್ನು ದೇವಸ್ಥಾನಕ್ಕೆ ಇಲ್ಲವೇ ಗುರುಗಳ ಸನ್ನಿಧಿಗೆ ಕರೆದುಕೊಂಡು ಹೋದ ತಂದೆ–ತಾಯಿಗಳು ತಾವು ಸುಮ್ಮನೆ ನಿಂತು ಮಗುವಿಗೆ ನಮಸ್ಕಾರ ಮಾಡು, ಮಾಡು ಎಂದು ಎಷ್ಟು ಹೇಳಿದರೂ ಆ ಮಗುವಿಗೆ ತಿಳಿಯುವುದಿಲ್ಲ. ಆದರೆ ಮಗುವಿಗೆ ಏನನ್ನೂ ಹೇಳದೆ ತಾವೇ ಪುನಃ ಪುನಃ ನಮಸ್ಕಾರ ಮಾಡಿದಾಗ ಅದನ್ನು ನೋಡಿ ಮಗುವೂ ಸಹ ಅನುಕರಣೆಯನ್ನು ಮಾಡುವುದು ಲೋಕದಲ್ಲಿ ಕಂಡುಬರುತ್ತದೆ. ಅದರಂತೆ ಜನಸಾಮಾನ್ಯರಿಗೆ ಆಚಾರದ ಬಗ್ಗೆ ಬಹಳಷ್ಟು ಉಪದೇಶ ಮಾಡುವುದಕ್ಕಿಂತ ಸದ್ಗುರುವಾದವನು ತನ್ನ ಆಚರಣ ರೂಪವಾದ ಉಪದೇಶದಿಂದಲೇ ಅವರೆಲ್ಲರನ್ನೂ ಸನ್ಮಾರ್ಗದಲ್ಲಿ ಒಯ್ಯಬಲ್ಲನು. ಕೇವಲ ಆತ್ಮಜ್ಞಾನದಿಂದ ತನ್ನ ಆತ್ಮೋದ್ಧಾರವಾಗಬಲ್ಲುದೇ ವಿನಃ ಲೋಕೋದ್ಧಾರವು ಸಾಧ್ಯವಾಗುವುದಿಲ್ಲ. ಆದ್ದರಿಂದ ಸದ್ಗುರುವಾದವನು ತನ್ನ ಪರಮ ಕರ್ತವ್ಯವಾದ ಲೋಕೋದ್ಧಾರವನ್ನು ಮಾಡಬೇಕಾದರೆ ತಾನು ಸದಾಚಾರ ಸಂಪನ್ನನಾಗಿರಲೇಬೇಕು.

ಕೇವಲ ಆತ್ಮಕಲ್ಯಾಣಕ್ಕಾಗಿ ಜ್ಞಾನ ಸಂಪಾದನೆಯನ್ನು ಮಾಡಿಕೊಂಡವನು ಆಚಾರ್ಯನೆಂದು ಕರೆಯಿಸಿಕೊಳ್ಳಲಾರನು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಚೋಚ್ಯತೇ ॥

(ಸಿ. ಶಿ. ೧೫-೯)

ದೀಕ್ಷಾಗುರುಸ್ಥಲದ ಈ ಶ್ಲೋಕದಲ್ಲಿ ಶಾಸ್ತ್ರಗಳನ್ನು ಅಭ್ಯಾಸ ಮಾಡಿ ತಾನು ಸ್ವತಃ ಉತ್ತಮ ಆಚರಣೆಯನ್ನು ಮಾಡುತ್ತ ಅನ್ಯರಿಗೆ ಅವುಗಳ ಬಗ್ಗೆ ಬೋಧಿಸುವವನೇ ಆಚಾರ್ಯನು ಎಂಬುದಾಗಿ ಉಪದೇಶಿಸಿದ್ದಾರೆ. ಈ ಆಚಾರ್ಯನೇ ಗುರುಪದ ವಾಚ್ಯನೂ ಆಗಿದ್ದಾನೆ. ಹೀಗೆ ಗುರುವು ಪರಿಶುದ್ಧವಾದ ಆಚಾರ ಸಂಪನ್ನನಾಗಿರುತ್ತಾನೆಂಬುದನ್ನು ಬೋಧಿಸುವುದಕ್ಕಾಗಿಯೇ ಪೂಜ್ಯಪಾದರು ಪಾದ ಶಬ್ದಕ್ಕೆ ಗುರುವೆಂಬು ದಾಗಿ ಸಂಕೇತಿಸಿದ್ದಾರೆ.

ಸದಾಚಾರ ಸಂಪನ್ನನಾದ ಸದ್ಗುರುವಿನ ಪಾದಕ್ಕೆ ಅಂಟಿಕೊಂಡಿರುವ ಧೂಳಿಯೂ ಸಹ ವಿಶೇಷವಾದ ಮಹತ್ವವನ್ನು ಪಡೆದುಕೊಳ್ಳುತ್ತದೆ. ಅಂತೆಯೇ, ಪೂಜ್ಯಪಾದರು–

ಪಾದಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।
ತದೇವ ಸದನಂ ಪುಣ್ಯಂ ಪಾವನಂ ಗೃಹಮೇಧಿನಾಮ್ ॥

(ಸಿ. ಶಿ. ೧೧-೪೨)

ಎಂಬ ಈ ಜಂಗಮಮಹಾತ್ಮ್ಯಸ್ಥಲದ ಶ್ಲೋಕದಲ್ಲಿ ಗುರುವಿನ ಪಾದಧೂಳಿಯ ಸ್ಪರ್ಶವಾದ ಗೃಹಸ್ಥರ ಮನೆಯು ಪಾವನವಾಗುವುದೆಂಬುದಾಗಿ ಉಪದೇಶಿಸಿದ್ದನ್ನು ನೋಡಿದರೆ ಪಾದಕ್ಕೆ ಇರುವ ಮಹತ್ವವು ಪಾದವನ್ನಾಶ್ರಯಿಸಿದ ಧೂಳಿಗೂ ಸಹ ಸಿಗುವುದೆಂಬುದು ತಿಳಿದುಬರುತ್ತದೆ. ಗೋಮಾತೆಯ ಪಾದಕ್ಕೆ ಸೋಂಕಿದ ಧೂಳಿಯು ನಮ್ಮ ಮೈಯನ್ನು ಸೋಂಕಲು ಅದೊಂದು ಪವಿತ್ರ ಸ್ನಾನವೆಂಬುದಾಗಿ ಶಾಸ್ತ್ರದಲ್ಲಿ ಪ್ರತಿಪಾದಿಸಲಾಗಿದೆ. ಧೂಳಿಯು ಮೂಲತಃ ಅಪವಿತ್ರವಾಗಿದ್ದರೂ ಪವಿತ್ರವಾದ ಪಾದವನ್ನು ಆಶ್ರಯಿಸಿದಾಗ ತಾನು ಪವಿತ್ರವಾಗುವುದಷ್ಟೇ ಅಲ್ಲದೆ ಅನ್ಯರನ್ನೂ ಪಾವನಗೊಳಿಸುವ ಸಾಮರ್ಥ್ಯವನ್ನು ಪಡೆಯುತ್ತದೆಯೆಂದಾಗ ಪಾದದ ಮಹತಿ ಎಷ್ಟೆಂಬುದನ್ನು ಊಹಿಸಬಹುದಾಗಿದೆ. ಹೀಗೆ ಗುರುವಿನ ಪಾದವೂ ಸಹ ಆತನ ಉತ್ತಮ ಆಚರಣೆಯ ಮೂಲಕ ಅತ್ಯಂತ ಪವಿತ್ರವಾಗಿರುತ್ತದೆ. ಈ ವಿಧವಾಗಿ ಪಾದವೆಂದರೆ ಉತ್ತಮ ಆಚರಣೆಯ ಸಂಕೇತವೆಂಬುದಾಗಿ ಗ್ರಹಿಸಿ ಪೂಜ್ಯಪಾದರು ಪಾದ ಶಬ್ದಕ್ಕೆ ಸದಾಚಾರ ಸಂಪನ್ನನಾದ ಸದ್ಗುರುವೆಂಬುದಾಗಿ ಉಪದೇಶಿಸಿದ್ದಾರೆ. ಅಂತೆಯೇ ಇವರಿಗೆ 'ಪೂಜ್ಯಪಾದರು' 'ಪೂಜ್ಯಪಾದರು' ಎಂಬುದಾಗಿ ಸಂಬೋಧಿಸುವುದುಂಟು.

ಗುರುವಿಗೆ ಪಾದವೆಂಬುದಾಗಿ ಸಂಭೋಧಿಸಿದಂತೆ ಇಲ್ಲಿ ಶಿಷ್ಯನಿಗೆ ಉದಕವೆಂಬುದಾಗಿ ಸಂಬೋಧಿಸಿದ್ದನ್ನು ಕಾಣುತ್ತೇವೆ. ಶಿಷ್ಯನಿಗೆ ಉದಕವೆನ್ನಲು ಕಾರಣವೇನು ? ಉದಕವೆಂದರೆ ನೀರು ಎಂದರ್ಥ. ನೀರಿನಲ್ಲಿರುವ ಗುಣಗಳು ಯಾವ ವ್ಯಕ್ತಿಯಲ್ಲಿರುತ್ತವೆಯೋ ಅವನು ಮಾತ್ರ ಉದಕಶಬ್ದವಾಚ್ಯನಾಗುತ್ತಾನೆ. ಶಿಷ್ಯರೆನಿಸಿಕೊಳ್ಳುವವರೆಲ್ಲರೂ ಉದಕಗುಣ ಸಮನ್ವಿತರೆಂಬುದಾಗಿ ಹೇಳಲಾಗುವುದಿಲ್ಲ, ಯಾರು ಉದಕಗುಣ ಯುಕ್ತರೋ ಅವರೇ ನಿಜವಾದ ಶಿಷ್ಯರೆಂಬುದಾಗಿ ತಿಳಿದುಕೊಳ್ಳಬೇಕು. ಹಾಗಾದರೆ ಉದಕದ ಗುಣಗಳಾವುವು ? ಎಂಬುದನ್ನಿಲ್ಲಿ ಆಲೋಚಿಸೋಣ. ನ್ಯಾಯಶಾಸ್ತ್ರದಲ್ಲಿ

''ಶೀತಲಸ್ಪರ್ಶವತ್ ಆಪಃ'' ಎಂಬುದಾಗಿ ನೀರಿನ ಲಕ್ಷಣವನ್ನು ಹೇಳುವಾಗ ಶೀತಲವಾದ ಸ್ಪರ್ಶಗುಣವುಳ್ಳದ್ದೇ·ನೀರು ಎಂಬುದಾಗಿ ಹೇಳಿದ್ದಾರೆ. ಗುರುವಿನ ಸೇವಾಸಕ್ತನಾದ ಶಿಷ್ಯನು ಶಾಂತನೂ, ಶೀತಲಸ್ವಭಾವದವನೂ ಆಗಿರಬೇಕೆಂಬುದು ಇದರಿಂದ ಸಂಕೇತಿತವಾಗುತ್ತದೆ. ಇದೂ ಅಲ್ಲದೆ ನೀರು ತರಲವಾದ ಪದಾರ್ಥ. ಅದಕ್ಕೆ ತನ್ನದೇಯಾದ ಸ್ಥಿರವಾದ ಆಕಾರವಿರುವುದಿಲ್ಲ, ನೀವು ಯಾವ ಪಾತ್ರೆಯಲ್ಲಿ ಹಾಕುವಿರೋ ತತ್‌ಕ್ಷಣ ತದಾಕಾರವನ್ನು ಅದು ತಾಳುತ್ತದೆ. ಇದೂ ಅಲ್ಲದೇ ಪಿಂಡೀಕರಣಕ್ಕೆ ಕಾರಣೀಭೂತವಾದ ಸ್ನೇಹ ಗುಣವು ಸಹ ನೀರಿನಲ್ಲಿರುವುದನ್ನು ಕಾಣುತ್ತೇವೆ. ಒಂದು ಹನಿ ನೀರು ಮಣ್ಣಿನ ಹುಡಿಯ ಮೇಲೆ ಬಿದ್ದಾಗ ಭಿನ್ನಭಿನ್ನವಾಗಿರುವ ಮಣ್ಣಿನ ಕಣಗಳು ಒಂದುಗೂಡಿ ಒಂದು ಸಣ್ಣ ಮಣ್ಣಿನ ಮುದ್ದೆಯಾಗುತ್ತದೆ. ಇದುವೇ ಜಲದಲ್ಲಿಯ ಸ್ನೇಹ ಗುಣ. ಹೀಗೆ ಜಲದಲ್ಲಿರುವ ಶೈತ್ಯ, ಸ್ನೇಹ ಹಾಗೂ ನಿರಾಕಾರ ಸ್ವಭಾವಗಳು ಒಬ್ಬ ವ್ಯಕ್ತಿಯಲ್ಲಿ ಬಂದಾಗ ಅವನು ಶಿಷ್ಯನೆನಿಸಿಕೊಳ್ಳಲು ಅರ್ಹನಾಗುತ್ತಾನೆ. ಗುರುವಿನ ಸಾನ್ನಿಧ್ಯದಲ್ಲಿರುವಂತಹ ಶಿಷ್ಯನು, ಎಂದೂ ಕ್ರೋಧಾಕಾರ ವೃತ್ತಿಯುಳ್ಳವನಾಗಿರಬಾರದು. ಇದು ಅಲ್ಲದೇ ನೀರನ್ನು ಭಿನ್ನ ಭಿನ್ನ ಆಕಾರದ ಪಾತ್ರೆಯಲ್ಲಿ ಹಾಕಿದಾಗ ತತ್‌ಕ್ಷಣ ತದಾಕಾರವನ್ನು ತಾಳುವಂತೆ ಶಿಷ್ಯನಾದವನು ಗುರುವಿನ ಉಪದೇಶವನ್ನು ಆಲಿಸುತ್ತ ಅವರ ಉಪದೇಶಾನುರೂಪವಾದ ಸ್ಥಿತಿಯಲ್ಲಿ ತನ್ನ ಮನೋವೃತ್ತಿಯನ್ನು ಸ್ಥಿರಗೊಳಿಸಿಕೊಳ್ಳಬೇಕು. ನೀರು ತಾನಾಗಿಯೇ ಬೇರೆ ಆಕಾರವನ್ನು ತಾಳದಿರುವಂತೆ ಶಿಷ್ಯನಾದವನು ಗುರುವಿನ ಉಪದೇಶಕ್ಕೆ ವ್ಯತಿರಿಕ್ತವಾದ ಮನಸ್ಸಿನ ಆಕಾರವನ್ನು ಎಂದೂ ತಾಳದಿರಬೇಕು. ಆದರಂತೆಯೇ ಬಿಡಿಬಿಡಿಯಾಗಿರುವ ಮಣ್ಣಿನ ಕಣಗಳನ್ನು ಒಂದು ಹನಿ ನೀರಿನಲ್ಲಿರುವ ಸ್ನೇಹ ಗುಣವು ಒಂದುಗೂಡಿಸುವಂತೆ ಶಿಷ್ಯನಾದವನು ತನ್ನಲ್ಲಿಯ ಉತ್ಕೃಷ್ಟವಾದ ಸ್ನೇಹ ಗುಣದಿಂದ ಸರ್ವರೊಂದಿಗೆ ಭಾವೈಕ್ಯತೆಯನ್ನು ಸಾಧಿಸಿಕೊಂಡಿರಬೇಕು. ಅಂದಾಗಲೇ ಅವನು ನಿಜವಾದ ಶಿಷ್ಯನಾಗುವನು. ಹೀಗೆ ನೀರಿನಲ್ಲಿರುವ ಶೈತ್ಯ, ನಿರಾಕಾರತೆ, ಸ್ನೇಹತೆ ಮುಂತಾದ ಗುಣಗಳು ಯೋಗ್ಯ ಶಿಷ್ಯನಲ್ಲಿ ಕಂಡುಬರುವುದರಿಂದ ಪೂಜ್ಯಪಾದರಾದ ಶ್ರೀ ರೇಣುಕಾಚಾರ್ಯರು ಶಿಷ್ಯನನ್ನು ಉದಕವೆಂಬುದಾಗಿ ಸಂಬೋಧಿಸಿದ್ದಾರೆ.

ನೀರು ಮೂಲತಃ ಪವಿತ್ರ ಹಾಗೂ ಸ್ವಚ್ಛವಾದುದಾಗಿರುತ್ತದೆ. ಆದರೆ ಅದಕ್ಕೆ ಆಧಾರವಾದ ಪಾತ್ರವು ಅಪವಿತ್ರ ಹಾಗೂ ಅಶುದ್ಧವಾದಾಗ ಜಲವೂ ಸಹ ಅಪವಿತ್ರ ಹಾಗೂ ಅಶುದ್ಧವಾಗುತ್ತದೆ. ಗಂಗಾಪ್ರವಾಹದಲ್ಲಿಯ ಜಲವು ಪವಿತ್ರವಾಗಿದ್ದರೆ ಅದುವೇ ಗಟಾರದಲ್ಲಿ ಬಂದಾಗ ಅಪವಿತ್ರವಾಗುತ್ತದೆ. ಅದರಂತೆ ಶಿಷ್ಯನಾದವನು ಸದಾ ಶುದ್ಧ ಹಾಗೂ ಪವಿತ್ರನಾಗಿರಬೇಕಾದರೆ ಪರಮ ಪಾವನಗಳಾದ ಗುರುವಿನ ಚರಣಗಳನ್ನೇ ಆಶ್ರಯಿಸಿಕೊಂಡಿರಬೇಕು. ಪಾದವನ್ನು ಸೋಂಕಿದ ಉದಕವು ಪಾದೋದಕವೆಂದು ಕರೆಯಿಸಿಕೊಳ್ಳುವುದು. ಪಾದದ ಸರ್ವ ಸಾಮರ್ಥ್ಯವನ್ನು ಇದು ಪಡೆದುಕೊಂಡಿರುವುದರಿಂದ ಪಾದೋದಕವೂ ಸಹ ಪೂಜ್ಯವೆನಿಸಿಕೊಳ್ಳುವುದು. ಪಾದಪೂಜಾ ಸಂದರ್ಭದಲ್ಲಿ ತಯಾರಾದ ಪಾದೋದಕವು ಗುರು–ಶಿಷ್ಯರ ಸಾಮರಸ್ಯದ ಪ್ರತೀಕವಾಗಿರುವಂತೆ ಆಧ್ಯಾತ್ಮಿಕ ದೃಷ್ಟಿಯಿಂದ ಗುರು–ಶಿಷ್ಯರ ಅಭೇದ ಅವಸ್ಥೆಯೇ ಇಲ್ಲಿ ಪಾದೋದಕವೆಂದು ಕರೆಯಿಸಿಕೊಂಡಿದೆ. ಪಾದವೆಂದರೆ ಗುರು, ಉದಕವೆಂದರೆ ಶಿಷ್ಯ.

ಇವರೀರ್ವರ ಸಮಾನ ಸಾಮರಸ್ಯ ಸ್ಥಿತಿಯೇ ಪಾದೋದಕವು. ಇದು ಗುರುವಿನಿಂದ ಅನುಗ್ರಹಿಸಲ್ಪಟ್ಟ ಚಿನ್ಮಯ ದೀಕ್ಷೆಯ ಮುಖಾಂತರ ಪ್ರಾಪ್ತವಾಗುವುದರಿಂದ ಇದಕ್ಕೆ ದೀಕ್ಷಾಪಾದೋದಕವೆಂಬುದಾಗಿ ಕರೆಯುತ್ತಾರೆ.

ಸದ್ಗುರುವಿನಿಂದ ಚಿನ್ಮಯ ದೀಕ್ಷೆಯನ್ನು ಪಡೆದು ದ್ವೈತಭಾವನೆಯನ್ನು ನಷ್ಟ ಮಾಡಿಕೊಂಡ ಶಿಷ್ಯನಿಗೆ ಉಂಟಾದ ಜ್ಞಾನ ಹಾಗೂ ಗುರುವಿನಲ್ಲಿರುವ ಜ್ಞಾನಗಳು ಒಂದೇಯಾಗಿರುತ್ತವೆ. ಅಂತೆಯೇ ಅವರೀರ್ವರ ದ್ವೈತಭಾವವಳಿದು ಇಬ್ಬರಲ್ಲಿ ಸಮಾನ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗಿ, ಈರ್ವರೂ ಒಂದೇ ವಿಧವಾದ ಆನಂದವನ್ನು ಅನುಭವಿಸುತ್ತಿರುತ್ತಾರೆ. ಅಡಿಗೆಯನ್ನು ಮಾಡಿದವನು ಹಾಗೂ ಆ ಅನ್ನವನ್ನು ಉಪಭೋಗಿಸಲು ಬಂದ ವ್ಯಕ್ತಿ ಇವರೀರ್ವರೂ ಒಂದೇ ಸಮಯದಲ್ಲಿ ಆ ಅನ್ನವನ್ನು ಸ್ವೀಕರಿಸುವಾಗ ಇಬ್ಬರಿಗೂ ಆಗುವ ಸಹಾನುಭೂತಿಯು ಸಮಾನವೇ ಆಗಿರುವಂತೆ ಗುರುಶಿಷ್ಯರ ದ್ವೈತಭಾವನೆಯು ನಷ್ಟವಾಗಿ ದೀಕ್ಷಾಪಾದೋದಕ ಸ್ಥಿತಿಯು ಅವರೀರ್ವರ ಲ್ಲಿಯೂ ಪ್ರಾಪ್ತವಾದಾಗ ಆಗುವ ಆನಂದಾನುಭೂತಿಯು ಸಮಾನವೇ ಆಗಿರುತ್ತದೆ.

ವ್ಯಾಕರಣ ಶಾಸ್ತ್ರದ ಪ್ರಕಾರ ಸ್ವರದ ಮುಂದೆ ಸ್ವರ ಬಂದರೆ ಅವಶ್ಯವಾಗಿ ಸಂಧಿ ಯಾಗಿಯೇ ಆಗುತ್ತದೆ. ಉದಾಹರಣೆಗಾಗಿ ಅ + ಆ = ಆ (ಇಲ್ಲಿ ಅ ಮತ್ತು ಆ ಎಂಬ ಎರಡು ಸ್ವರಗಳು ಭಿನ್ನಭಿನ್ನಗಳಾಗಿದ್ದರೂ ಅವು ಒಂದರ ಮುಂದೆ ಒಂದು ಬಂದಾಗ ಅವೆರಡೂ ಕೂಡಿ 'ಆ' ಎಂಬ ಒಂದೇ ರೂಪವನ್ನು ತಾಳುತ್ತವೆ.) ಅದರಂತೆ ಶಿಷ್ಯ ಹಾಗೂ ಗುರುಗಳು ಒಂದೇ ರೂಪವಾದ ಜ್ಞಾನಸ್ಥಿತಿಯನ್ನು ಪಡೆದುಕೊಂಡಾಗ ಅವರೀರ್ವರ ಅಂತ್ಯಸ್ಥಿತಿಯು ಒಂದೇ ರೂಪವನ್ನು ತಾಳುತ್ತದೆ. ಹೀಗೆ ಭಿನ್ನರಾದ ಈರ್ವರನ್ನು ವಿದ್ಯೆಯು ಸಂಧಿ ಮುಖಾಂತರ ಒಂದುಗೂಡಿಸುತ್ತದೆ. ಈ ವಿದ್ಯಾಸಂಧಿ ಮುಖಾಂತರ ಗುರು–ಶಿಷ್ಯರ ಅಭೇದ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ದೀಕ್ಷಾ ಪಾದೋದಕ ಸ್ಥಲವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿಯವರೆಗೆ ಪಾದೋದಕ ಶಬ್ದ ದಲ್ಲಿಯ ಪಾದ ಮತ್ತು ಉದಕಗಳೆಂಬ ಎರಡು ಭಿನ್ನ ಭಿನ್ನ ಶಬ್ದಗಳಿಗೆ ಗುರು ಮತ್ತು ಶಿಷ್ಯ ವೆಂಬ ಅರ್ಥವನ್ನು ಹೇಳಿ ಅವರೀರ್ವರ ಐಕ್ಯವೇ ಪಾದೋದಕವೆಂಬುದಾಗಿ ತಿಳಿಯ ಪಡಿಸಿದ್ದಾರೆ. ಇನ್ನು ಮುಂದೆ ಆ ಶಬ್ದದ ಅರ್ಥವನ್ನು ಬೇರೆ ವಿಧವಾಗಿ ಹೇಳಲುದ್ಯುಕ್ತ ರಾಗಿ–

ಪರಮಾನಂದ ಏವೋಕ್ತಃ ಪಾದಶಬ್ದೇನ ನಿರ್ಮಲಃ ।
ಜ್ಞಾನಂ ಚೋದಕಶಬ್ದೇನ ತಯೋರೈಕ್ಯಂ ತು ದೀಕ್ಷಯಾ ॥

(ಸಿ. ಶಿ. ೧೯–೮)

ಈ ವಿಧವಾಗಿ ಉಪದೇಶಿಸಿದ್ದಾರೆ. ಪೂಜ್ಯರ ಅಭಿಪ್ರಾಯದ ಪ್ರಕಾರವಾಗಿ ಪಾದೋದಕ ಶಬ್ದದಲ್ಲಿಯ ಪಾದ ಶಬ್ದಕ್ಕೆ ಪರಮಾನಂದವೆಂತಲೂ ಉದಕ ಶಬ್ದಕ್ಕೆ ಜ್ಞಾನವೆಂತಲೂ ತಿಳಿದುಕೊಳ್ಳಬೇಕು. ದೀಕ್ಷೆಯ ಮೂಲಕವಾಗಿ ಅವೆರಡರ ಅಭೇದವು ಸಹ ಸಿದ್ಧಿಸುತ್ತದೆ. ತಾತ್ಪರ್ಯವೇನೆಂದರೆ, ಗುರುವಿನಿಂದ ಅನುಗ್ರಹಿಸಲ್ಪಟ್ಟ ಚಿನ್ಮಯದೀಕ್ಷೆಯ

ಮುಖಾಂತರವಾಗಿ ಸ್ವಸ್ವರೂಪದ ಪರಮಾನಂದ ಸ್ಥಿತಿಯ ಜ್ಞಾನವನ್ನು ಮಾಡಿಕೊಳ್ಳು ವುದೇ ದೀಕ್ಷಾಪಾದೋದಕವು. ಪ್ರತಿಯೊಬ್ಬರ ಆತ್ಮವು ಪರಮಾತ್ಮ ಸ್ವರೂಪವೇ ಆಗಿರುತ್ತದೆ. ಅಂತೆಯೇ ಅದು ಪರಮಾನಂದ ಸ್ವರೂಪವೂ ಸಹ ಹೌದು. ಆದರೆ ಪ್ರತಿ ಯೊಬ್ಬರ ಆತ್ಮವು ಅಜ್ಞಾನದಿಂದ ಆವೃತವಾಗಿರೋಣದರಿಂದ ನಾವು ಪರಮಾನಂದ ಸ್ವರೂಪರಾಗಿದ್ದೇವೆ ಎಂಬ ತಿಳುವಳಿಕೆ ಇಲ್ಲದ ಮೂಲಕ ಪ್ರತಿಯೊಬ್ಬ ಜೀವಾತ್ಮನು ಶಬ್ದಸ್ಪರ್ಶಾದಿ ವೈಷಯಿಕ ಸುಖಕ್ಕಾಗಿ ಅಹರ್ನಿಶವೂ ಪ್ರಯತ್ನಿಸುತ್ತಿರುತ್ತಾನೆ. ಆದರೆ ಸದ್ಗುರುವಿನ ಅನುಗ್ರಹದಿಂದ ಅಜ್ಞಾನದ ಆವರಣವು ನಿವೃತ್ತಿಗೊಂಡಾಗ, ನಾನು ಪರಮಾನಂದಸ್ವರೂಪನಾಗಿದ್ದೇನೆ ಎಂಬ ಜ್ಞಾನವುಂಟಾದಾಗ ಅವನಿಗೆ ಪ್ರಾಪ್ತವಾದ ಆ ಸ್ಥಿತಿಯೇ ದೀಕ್ಷಾಪಾದೋದಕಸ್ಥಿತಿ ಎಂಬುದಾಗಿ ಕರೆಯಲ್ಪಡುತ್ತದೆ.

ಭೂಮಿಯಲ್ಲಿ ಹುಗಿದಿಟ್ಟ ತವನಿಧಿ (ಸಂಪತ್ತು)ಯ ಮೇಲೆ ಕುಳಿತು ಭಿಕ್ಷುಕ ನೋರ್ವನು ಒಂದೊಂದು ದುಡ್ಡಿಗಾಗಿ ಜನರತ್ತ ಕೈ ಚಾಚಿ ಬೇಡುತ್ತಿರುವಂತೆ ಸಂಸಾರದ ಜೀವಿಗಳ ಸ್ಥಿತಿಯಾಗಿರುತ್ತದೆ. ಅತ್ಯಮೂಲ್ಯವಾದ ವಸ್ತು ನಮಗೆ ಅತಿ ಸಮೀಪದಲ್ಲಿದ್ದರೆ ಸಾಲದು. ಆದರೆ ಅದು ಇದೆ ಎಂಬ ಅರಿವಾದಾಗ ಮಾತ್ರ ಆನಂದವು ಉಂಟಾಗುತ್ತದೆ. ಪ್ರತಿಯೊಬ್ಬರ ಆತ್ಮವು ಪರಮಾನಂದ ಸ್ವರೂಪವಾಗಿದ್ದರೂ ಅದರ ಪರಿಜ್ಞಾನವು ಇಲ್ಲ ದಿರುವುದರಿಂದಲೇ ಸಂಸಾರದ ಜೀವಿಗಳೆಲ್ಲ ಸದಾ ದುಃಖವನ್ನೇ ಅನುಭವಿಸುತ್ತಿರುತ್ತಾರೆ. ಕರುಣಾಸಾಗರನಾದ ಸದ್ಗುರುವು ಜೀವಿಗಳ ಮೇಲೆ ಅನುಗ್ರಹಿಸಿ, ತನ್ನ ಉಪದೇಶದ ಮೂಲಕ ಅವರ ಅಜ್ಞಾನವನ್ನು ದೂರು ಮಾಡಿ ಸ್ವಸ್ವರೂಪ ಜ್ಞಾನವನ್ನು ಮಾಡಿ ಕೊಟ್ಟಾಗ ಪ್ರತಿಯೊಬ್ಬರು ಆನಂದತುಂದಿಲರಾಗುತ್ತಾರೆ. ಇಂತಹ ಅವಸ್ಥೆಗೇನೆ ದೀಕ್ಷಾ ಪಾದೋದಕಾವಸ್ಥೆ ಎನ್ನುವರು. ಹೀಗೆ ಇಲ್ಲಿ ಪಾದವೆಂದರೆ ಪರಮಾನಂದವೆಂತಲೂ, ಉದಕವೆಂದರೆ ಅದರ ಪರಿಜ್ಞಾನವೆಂತಲೂ ತಿಳಿದುಕೊಳ್ಳಬೇಕು. ಈ ಸ್ವಸ್ವರೂಪದ ಪರಮಾನಂದ ಜ್ಞಾನವು ಗುರುವಿನಿಂದ ಅನುಗ್ರಹಿಸಲ್ಪಟ್ಟ ಚಿನ್ಮಯ ದೀಕ್ಷೆಯಿಂದ ಪ್ರಾಪ್ತ ವಾಗುವುದೆಂಬುದು ಪೂಜ್ಯಪಾದರ ಆಶಯವಾಗಿದೆ.

ಈ ವರೆಗೆ ತಿಳಿಸಿದ ಪ್ರಕಾರವಾಗಿ ದೀಕ್ಷಾಪಾದೋದಕ ಸ್ಥಿತಿಯನ್ನು ಪ್ರಾಪ್ತಿಮಾಡಿ ಕೊಂಡ ಶಿಷ್ಯನು ಸರ್ವತ್ರ ಅಭೇದ ದೃಷ್ಟಿಯುಳ್ಳವನಾಗುತ್ತಾನೆಂಬ ವಿಷಯವನ್ನು ಪೂಜ್ಯಪಾದರು ಪುನಃ–

ಪರಸಂವಿತ್ ಪ್ರಕಾಶಾತ್ಮಾ ಪರಮಾನಂದಭಾವನಾಮ್ ।
ಅಧಿಗಮ್ಯ ಮಹಾಯೋಗೀ ನ ಭೇದಂ ಕ್ವಾಪಿ ಪಶ್ಯತಿ ॥

(ಸಿ. ಶಿ. ೧೯–೯)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಪಾದೋದಕ–ದೀಕ್ಷಾ ಸಂಪನ್ನನಾದ ಶಿವಯೋಗಿಯು ಅತಿಶ್ರೇಷ್ಠವೂ ಜ್ಞಾನಪ್ರಕಾಶಸ್ವರೂಪವೂ ಆದ ಪರಮಾನಂದ ಸ್ಥಿತಿಯನ್ನು ಹೊಂದಿದವನಾಗಿ ಭೇದ ಬುದ್ಧಿಯನ್ನು ಕಳೆದುಕೊಳ್ಳುತ್ತಾನೆ. ''ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ'' ಎಂಬ ಬ್ರಹ್ಮೋಪನಿಷತ್ತಿನ ವಚನಾನುಸಾರವಾಗಿ ಸ್ವಸ್ವರೂಪಜ್ಞಾನ ಸಂಪನ್ನನಾದ ಶಿವಯೋಗಿಗೆ ಸರ್ವವೂ ತನ್ಮಾತ್ಮ

ರೂಪವಾಗಿಯೇ ತೋರುತ್ತಿರುತ್ತದೆ. ಅಂತೆಯೇ ರಾಗದ್ವೇಷಾತ್ಮಕವಾದ ಭೇದ ದೃಷ್ಟಿಯೇ ಅವನಿಗೆ ಇಲ್ಲದಾಗುತ್ತದೆ. ಆದ್ದರಿಂದಲೇ ಯಾರನ್ನಾದರೂ ಅಂಜಿಸುವ, ಅನ್ಯ ರಿಂದ ಅಂಜುವ ಪರಿಸ್ಥಿತಿಯೇ ಇರುವುದಿಲ್ಲ.

ದ್ವೈತಾವಸ್ಥೆಯಲ್ಲಿ ಪ್ರತಿಯೊಬ್ಬ ಮನುಷ್ಯನ ಮನಸಿನಲ್ಲಿ ಬೇಕು ಬೇಡ ಎಂಬ ಭಾವನೆಗಳು ಸಹಜವಾಗಿ ಉದಿಸುತ್ತವೆ. ಆದರೆ ಪಾದೋದಕ ಪ್ರಾಪ್ತಿಯಿಂದ ದ್ವೈತ ಭಾವನೆಯನ್ನು ದೂರುಮಾಡಿಕೊಂಡ ಶಿವಯೋಗಿಗೆ ಯಾವ ಆಶೆ ಆಕಾಂಕ್ಷೆಗಳೂ ಇರುವುದಿಲ್ಲವೆಂಬ ವಿಷಯವನ್ನು ಈ ಮುಂದೆ ಪೂಜ್ಯಪಾದರು–

ದೇಶಕಾಲಾದ್ಯವಚ್ಛೇದವಿಹೀನಂ ನಿತ್ಯನಿರ್ಮಲಮ್ ।
ಆನಂದಂ ಪ್ರಾಪ್ಯ ಬೋಧೇನ ನಾನ್ಯತ್ ಕಾಂಕ್ಷ್ಯತಿ ಸಂಯಮೀ ॥
(ಸಿ. ಶಿ. ೧೯–೧೦)

ಹೀಗೆ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ ದೇಶ–ಕಾಲ, ವಸ್ತು ಪರಿಚ್ಛೇದ ರಹಿತವೂ, ಅಂತೆಯೇ ನಿತ್ಯವೂ, ನಿರ್ಮಲವೂ ಆದ ಪರಮಾನಂದ ಸ್ವರೂಪವನ್ನು ಆತ್ಮಜ್ಞಾನ ಮೂಲಕವಾಗಿ ತಿಳಿದುಕೊಂಡ ಸಂಯಮಶೀಲನಾದ ಶಿವಯೋಗಿಯು ಬೇರೊಂದನೇನನ್ನು ಅಪೇಕ್ಷಿಸಲಾರನು. ಸಂಸಾರದಲ್ಲಿಯ ಸುಖ ಅಥವಾ ಆನಂದಗಳು ದೇಶ, ಕಾಲ ಮತ್ತು ವಸ್ತು ಮೂಲಕವಾಗಿ ಪರಿಚ್ಛಿನ್ನಗಳಾಗಿರುತ್ತವೆ. ಅಂದರೆ ಒಬ್ಬನಿಗೆ ಒಂದು ದೇಶದಲ್ಲಿ ಅಥವಾ ಒಂದು ಕಾಲದಲ್ಲಿ ಇಲ್ಲವೇ ಒಂದು ವಸ್ತುವಿನಿಂದ ಸುಖ ಪ್ರಾಪ್ತವಾಗುತ್ತಿದ್ದರೆ, ಅದೇ ದೇಶದಲ್ಲಿ, ಅದೇ ಕಾಲದಲ್ಲಿ, ಅದೇ ವಸ್ತುವಿನಿಂದ ಇನ್ನೋರ್ವನಿಗೆ ದುಃಖಾನುಭೂತಿಯುಂಟಾಗುವುದುಂಟು. ಸಂಸಾರದ ಸುಖದುಃಖ ಗಳು ಅನುಕೂಲ ಹಾಗೂ ಪ್ರತಿಕೂಲ ಭಾವನೆಗಳ ಮುಖಾಂತರವಾಗಿ ಉಂಟಾಗುತ್ತವೆ. ಒಂದು ವಸ್ತು ಒಂದು ಕಾಲದಲ್ಲಿ ಓರ್ವನಿಗೆ ಅನುಕೂಲವಾಗಿ ತೋರುತ್ತಿದ್ದರೂ, ಅದೇ ವಸ್ತು, ಅದೇ ಕಾಲದಲ್ಲಿ, ಇನ್ನೋರ್ವನಿಗೆ ಪ್ರತಿಕೂಲವಾಗಿ ಪ್ರತೀತಿಯಾಗುವುದುಂಟು. ಸಂಸಾರದ ಯಾವ ವಸ್ತುವೂ ಒಂದು ದೇಶ, ಒಂದು ಕಾಲದಲ್ಲಿ ಸರ್ವರಿಗೂ ಅನುಕೂಲ ವಾಗಿ ತೋರುವುದಿಲ್ಲ. ಅಂತೆಯೇ ದೇಶ, ಕಾಲ ಮತ್ತು ವಸ್ತುಗಳ ಪರಿಚ್ಛೇದಗಳಿಂದ ಕೂಡಿದ ಸಂಸಾರದಲ್ಲಿ ಸುಖದುಃಖಾದಿ ದ್ವಂದ್ವಗಳು ಜೀವಿಗಳನ್ನು ಎಂದೂ ಬಿಡುವುದಿಲ್ಲ.

ಆತ್ಮಾನಂದವು ಎಲ್ಲ ಪರಿಚ್ಛೇದಗಳಿಂದ ಮುಕ್ತವಾಗಿರುವುದರಿಂದ ಸರ್ವದೇಶ, ಸರ್ವಕಾಲಗಳಲ್ಲಿ, ಸರ್ವರಿಗೂ ಆತ್ಮವು ಆನಂದರೂಪವಾಗಿಯೇ ತೋರುತ್ತದೆ. ಅಂತೆಯೇ ಈ ಆತ್ಮಾನಂದಕ್ಕೆ ದೇಶಕಾಲಾದಿಪರಿಚ್ಛೇದರಹಿತವೆಂಬುದಾಗಿ ಪೂಜ್ಯರು ಉಪದೇಶಿಸಿದ್ದಾರೆ. ಆದ್ದರಿಂದ ಅದು ನಿತ್ಯವೂ ಆಗಿದೆ. ನಿತ್ಯವಾಗಿರುವಂತೆ ಅದು ನಿರ್ಮಲವೂ ಅಹುದು. ಇಂತಹ ಆ ಆತ್ಮಾನಂದ ಸ್ವರೂಪವನ್ನು ಸದ್ಗುರುವಿನ ಜ್ಞಾನೋಪದೇಶ ಮೂಲಕವಾಗಿ ಪಡೆದುಕೊಂಡ ಸಂಯಮಶೀಲನಾದ ಶಿವ ಯೋಗಿಯು ಬೇರಾವುದರ ಅಪೇಕ್ಷೆಯನ್ನು ಎಂದೆಂದಿಗೂ ಮಾಡಲಾರನು. ಪ್ರಾಪ್ತಿ ಮಾಡಿಕೊಳ್ಳಬೇಕಾದುದು ಪ್ರಾಪ್ತವಾಗಿರುವುದರಿಂದ ಆತ್ಮರತಿ, ಆತ್ಮತೃಪ್ತಿಯನ್ನು ಪಡೆದ

ಆ ಶಿವಯೋಗಿಗೆ ಬೇರಾವುದರ ಅಭಿಲಾಷೆಯು ಅದೆಂದಿಗೂ ಉಂಟಾಗಲಾರದು. ಸರ್ವತ್ರ ತನ್ನನ್ನೇ ತಾನು ಕಾಣುತ್ತಿರುವ ಅವನಿಗೆ ಅನ್ಯವೇ ಇಲ್ಲದಿರುವಾಗ ಅದರ ಆಕಾಂಕ್ಷೆಯಾದರೂ ಹೇಗೆ ತಾನೆ ಉಂಟಾದೀತು !

ಆತ್ಮಜ್ಞಾನವನ್ನು ಅನುಭವಿಸುವ ಶಿವಯೋಗಿಗೆ ದುಃಖಮಿಶ್ರಿತವಾದ ಸಾಂಸಾರಿಕ ಸುಖದ ರತಿಯು ಅದೆಂದಿಗೂ ಆಗುವುದಿಲ್ಲವೆಂಬ ವಿಷಯವನ್ನು ಪೂಜ್ಯಪಾದರು ಈ ಮುಂದೆ–

ಜ್ಞಾನಾಮೃತಮಪಿ ಸ್ವಚ್ಛಂ ಗುರುಕಾರುಣ್ಯ ಸಂಭವಮ್ ।
ಆಸ್ವಾದ್ಯ ರಮತೇ ಯೋಗೀ ಸಂಸಾರಾಮಯವರ್ಜಿತಃ ।

(ಸಿ. ಶಿ. ೧೯–೧೧)

ಎಂಬುದಾಗಿ ಅರುಹಿದ್ದಾರೆ. ತಾತ್ಪರ್ಯವೇನೆಂದರೆ, ಅತ್ಯಂತ ನಿರ್ಮಲವಾದ ಜ್ಞಾನಾಮೃತವು ಗುರುವಿನ ಕರುಣೆಯಿಂದ ಪ್ರಾಪ್ತವಾಗುತ್ತದೆ. ಹೀಗೆ ಗುರುಕಾರುಣ್ಯ ದಿಂದ ಪ್ರಾಪ್ತವಾದ ಆತ್ಮಜ್ಞಾನಾಮೃತವನ್ನು ಆಸ್ವಾದಿಸುವ ಶಿವಯೋಗಿಯು ಭವರೋಗ ದಿಂದ ಮುಕ್ತನಾಗಿ ತನ್ನಲ್ಲೇ ತಾನು ಆನಂದಿಸುತ್ತಿರುತ್ತಾನೆ. ಆತ್ಮಜ್ಞಾನವು ನಿಜವಾಗಿಯೂ ಅಮೃತವೇ ಅಹುದು. ಸ್ವರ್ಗಾದಿಗಳಲ್ಲಿ ಇರುವ ಅಮೃತವು ಪುಣ್ಯದಿಂದ ಪ್ರಾಪ್ತ ವಾದರೂ, ಆ ಪುಣ್ಯ ತೀರಿದ ಬಳಿಕ ಅದು ಮತ್ತೆ ಅವನ ಪಾಲಿಗೆ ಇಲ್ಲದಂತಾಗುತ್ತದೆ. ಆದರೆ ಗುರುವಿನ ಕೃಪಾಕಟಾಕ್ಷದಿಂದ ಪ್ರಾಪ್ತವಾದ ಆತ್ಮಜ್ಞಾನರೂಪಿ ಅಮೃತವು ಅದೆಂದಿಗೂ ನಮ್ಮಿಂದ ದೂರಾಗದು. ಅಂತಹ ಅಕ್ಷಯವಾದ, ನಿರ್ಮಲವಾದ ಅಮೃತ ವನ್ನು ಯಾರು ಆಸ್ವಾದಿಸುವರೋ ಅವರು ಜನನ ಮರಣರೂಪವಾದ ಈ ಭವರೋಗ ದಿಂದ ಮುಕ್ತರಾಗುವರು. ಅಂತೆಯೇ ಸದ್ಗುರುವಿನಿಂದ ಚಿನ್ಮಯ ದೀಕ್ಷಾ ಸಂಪನ್ನನಾದ ಶಿವಯೋಗಿಯು ಈ ಜ್ಞಾನಾಮೃತವನ್ನು ಆಸ್ವಾದಿಸುವವನಾಗಿ ಜನನ ಮರಣ ವಿದೂರ ನಾಗಿ ತನ್ನಲ್ಲೇ ತಾನು ರಮಮಾಣನಾಗಿರುತ್ತಾನೆ. ಹೀಗೆ ಆತ್ಮಾನಂದದಲ್ಲಿ ರಮಿಸುವ ಸ್ಥಿತಿ ಯನ್ನು ಪ್ರಾಪ್ತಿಮಾಡಿಕೊಳ್ಳುವುದೇ ದೀಕ್ಷಾಪಾದೋದಕಸ್ಥಲದ ತಾತ್ಪರ್ಯವಾಗಿದೆ.

ಈ ದೀಕ್ಷಾಪಾದೋದಕಸ್ಥಲದಲ್ಲಿ ಪಾದ, ಉದಕ ಮತ್ತು ದೀಕ್ಷೆಗಳ ವಿಭಿನ್ನಾರ್ಥ ಗಳನ್ನು ಅರಿತುಕೊಂಡು ಗುರುವಿನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದು ಕೊಳ್ಳುವುದೇ ಈ ದೀಕ್ಷಾಪಾದೋದಕಸ್ಥಲದ ಮುಖ್ಯ ತಾತ್ಪರ್ಯವಾಗಿದೆ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧೯ ನವ್ಹೆಂಬರ್, ೧೯೯೪
(ಸ್ಥಾನ ಜ್ಞಾನ ಮಂದಿರ ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಶಿಕ್ಷಾಪಾದೋದಕಸ್ಥಲ

ಧರ್ಮಾಭಿಮಾನಿ ಸದ್ಭಕ್ತರೆ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿರುವ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥ ರತ್ನ ಲಿಂಗಷಟ್‌ಸ್ಥಲದಲ್ಲಿ ಬರುವ ಶರಣಸ್ಥಲದ ಮೊದಲನೆಯದಾದ ದೀಕ್ಷಾ ಪಾದೋದಕಸ್ಥಲದ ಬಗ್ಗೆ ಇಲ್ಲಿಯವರೆಗೆ ಆಶೀರ್ವಚನವನ್ನು ಆಲಿಸಿದ್ದೀರಿ. ಇನ್ನು ಮುಂದೆ ಅದರ ಎರಡನೆಯ ಅವಾಂತರ ಸ್ಥಲವಾದ ಶಿಕ್ಷಾಪಾದೋದಕಸ್ಥಲದ ಬಗ್ಗೆ ವಿಚಾರಿಸೋಣ.

ಇಲ್ಲಿಯೂ ಸಹ ಪಾದವೆಂದರೆ ಗುರುವೆಂತಲೇ ಉದಕವೆಂದರೆ ಶಿಷ್ಯನೆಂತಲೇ ತಿಳಿಯಬೇಕು. ಈ ಗುರು–ಶಿಷ್ಯರ ಅಭೇದ ಸ್ಥಿತಿಯು ಈ ಹಿಂದೆ ಚಿನ್ಮಯ ದೀಕ್ಷೆಯ ಮುಖಾಂತರ ದೊರೆಯುವುದೆಂಬುದಾಗಿ ತಿಳಿಸಿದ ಸ್ಥಲಕ್ಕೆ ದೀಕ್ಷಾಪಾದೋದಕಸ್ಥಲ ವೆಂಬುದಾಗಿ ಕರೆದರೆ, ಇಲ್ಲಿ ಆ ಸ್ಥಿತಿಯು ಗುರುವಿನಿಂದ ಉಪದೇಶಿಸಲ್ಪಡುವ ಶಿಕ್ಷಾ ಅರ್ಥಾತ್ ಉಪದೇಶ ಮೂಲಕವಾಗಿ ಪ್ರಾಪ್ತವಾಗುವುದಾದ ಕಾರಣ ಈ ಸ್ಥಲಕ್ಕೆ ಶಿಕ್ಷಾ ಪಾದೋದಕ ಸ್ಥಲವೆಂಬುದಾಗಿ ಕರೆದಿದ್ದಾರೆ. ಅದನ್ನೇ ಪೂಜ್ಯಪಾದರು–

ಗುರುಶಿಷ್ಯಮಯಂ ಜ್ಞಾನಂ ಶಿಕ್ಷಾ ಯೋಗಿನಮೀರ್ಯತೇ ॥
ತಯೋಃ ಸಮರಸತ್ವಂ ಹಿ ಶಿಕ್ಷಾಪಾದೋದಕಂ ಸ್ಮೃತಮ್ ॥

(ಸಿ. ಶಿ. ೧೯–೧೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಮಾಯಾಮಯಮಿದಂ ದ್ವೈತ ಮದ್ವೈತಂ ಪರಮಾರ್ಥತಃ ಎಂಬ ಮುಂಡಕಶ್ರುತಿಯ ಪ್ರಮಾಣದಂತೆ ದ್ವೈತ ಭಾವನೆಯು ಮಾಯಾಮಯವಾದುದು ಅರ್ಥಾತ್ ಮಾಯಾ ಮೂಲಕವಾದುದು. ಅದ್ವೈತವು ಮಾತ್ರ ಪಾರಮಾರ್ಥಕವಾದುದು. ಮಾಯಾಮೂಲಕವಾಗಿ ಪ್ರಾಪ್ತವಾದ ದ್ವೈತ ಭಾವನೆಯನ್ನು ದೂರ ಮಾಡಿಕೊಳ್ಳಬೇಕಾದರೆ ಸದ್ಗುರುವಿನ ಉಪದೇಶವೇ ಬೇಕಾಗುವುದು. ಸದ್ಗುರುವಿನ ಉಪದೇಶವು ಪ್ರಾಪ್ತವಾಗಲು ಶಿವ–ಜೀವರ, ಗುರು–ಶಿಷ್ಯರ ಮಧ್ಯದಲ್ಲಿರುವ ದ್ವೈತಭಾವನೆಯು ಇಲ್ಲದಾಗಿ ಹೋಗುತ್ತದೆ. ಹೀಗೆ ಗುರುವಿನಿಂದ ಪ್ರಾಪ್ತವಾದ ಉಪದೇಶಾತ್ಮಕವಾದ ಶಿಕ್ಷೆಯಿಂದ ಗುರುಶಿಷ್ಯರಲ್ಲಿ ಜ್ಞಾನ ಸಾಮರಸ್ಯ ಸ್ಥಿತಿಯು ಪ್ರಾಪ್ತವಾಗಲು ಅದಕ್ಕೆ ಶಿಕ್ಷಾ ಪಾದೋದಕವೆಂದು ಕರೆಯುತ್ತಾರೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಮ್ಮ ಈ ಉಪದೇಶದಲ್ಲಿ ಜ್ಞಾನಕ್ಕೆ ಗುರು–

ಶಿಷ್ಯಮಯಂ ಎಂಬ ವಿಶೇಷಣವನ್ನು ಜೋಡಿಸಿದ್ದಾರೆ. ಇಲ್ಲಿರುವ ಮಯಟ್ ಪ್ರತ್ಯಯವು ಈರ್ವರ ಸ್ವರೂಪ ಸಾಮರಸ್ಯ ಸ್ಥಿತಿಯನ್ನು ತಿಳಿಯಪಡಿಸುತ್ತದೆ.

ಮಯಟ್ ಪ್ರತ್ಯಯವು ವಿಕಾರಾರ್ಥದಲ್ಲಿ ಹಾಗೂ ಸ್ವರೂಪಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಮೃಣ್ಮಯಃ ಘಟಃ, ಎಂಬಲ್ಲಿ, ಘಟವು ಮಣ್ಣಿನ ವಿಕಾರವು ಎಂಬ ವಿಕಾರಾರ್ಥವನ್ನು ಪ್ರತಿಪಾದಿಸುವ ಮಯಟ್ ಪ್ರತ್ಯಯವು ಇಲ್ಲಿ ಪ್ರಯೋಗಿಸಲ್ಪಟ್ಟಿದೆ. ಆದರೆ ಗುರುಶಿಷ್ಯಮಯಂ ಜ್ಞಾನಂ ಎಂಬಲ್ಲಿ ಪ್ರಯೋಗಿಸಲ್ಪಟ್ಟ ಮಯಟ್ ಪ್ರತ್ಯಯವು ಉಭಯರ ಸ್ವಸ್ವರೂಪಾರ್ಥವನ್ನು ಬೋಧಿಸುವಂಥಾದ್ದಾಗಿದೆ. ಗುರುಶಿಷ್ಯರ ತಿಳುವಳಿಕೆಯು ಸಮಾನವಾಗಿರುವುದರಿಂದ ಅವರೀರ್ವರ ಸ್ವಸ್ವರೂಪ ಸ್ಥಿತಿಯಲ್ಲಿ ಯಾವುದೇ ಪ್ರಕಾರದ ಭೇದವು ಸಂಭವಿಸುವುದಿಲ್ಲ. ಹೀಗೆ ಶಿಕ್ಷಣದ ಮೂಲಕವಾಗಿ ಗುರು–ಶಿಷ್ಯರ ಸಮಾನ ಸಾಮರಸ್ಯ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ಶಿಕ್ಷಾಪಾದೋದಕಸ್ಥಲವು. ಈ ಶಿಕ್ಷಣವು ಸದ್ಗುರುವಿನಿಂದ ಶಿಷ್ಯನಿಗೆ ಯಾವ ವಿಧವಾಗಿ ಪ್ರಾಪ್ತವಾಗುವುದು ಎಂಬ ಪ್ರಶ್ನೆಯು ಉದ್ಭವಿಸಿದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಯನ್ನು ಕುರಿತು–

ಮಥಿತಾಚ್ಛಾಸ್ತ್ರ ಜಲಧೇರ್ಯುಕ್ತಿಮಂಥಾನ ವೈಭವಾತ್ ।
ಗುರುಣಾ ಲಭ್ಯತೇ ಬೋಧಸುಧಾ ಸುಮನಸಾಂ ಗಣೈಃ ॥

(ಸಿ. ಶಿ. ೧೯–೧೪)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ದೇವತೆಗಳ ಗುರುವಾದ ಬೃಹಸ್ಪತಿಯಿಂದ ಪ್ರೇರಣೆಯನ್ನು ಪಡೆದ ದೇವತೆಗಳು ಸಮುದ್ರ ಮಂಥನವನ್ನು ಮಾಡಿ ಅಮೃತವನ್ನು ಪಡೆದುಕೊಂಡಂತೆ ಶಿಷ್ಯನಾದವನು ಸದ್ಗುರುವಿನ ಮಾರ್ಗದರ್ಶನದಲ್ಲಿ ಅನೇಕ ಶಾಸ್ತ್ರಗಳನ್ನಭ್ಯಸಿಸಿ ಯುಕ್ತಿಪ್ರಯುಕ್ತಿಗಳೆಂಬ ಕಡಗೋಲಿನಿಂದ ಶಾಸ್ತ್ರವೆಂಬ ಸಮುದ್ರವನ್ನು ಮಥಿಸಲು ಶಿಷ್ಯನಿಗೆ ಬೋಧಾಮೃತವು ಪ್ರಾಪ್ತವಾಗುತ್ತದೆ. ಮಂಥನವನ್ನು ಗೈಯ್ಯದೆ ಅಂತಸ್ಸತ್ವವನ್ನು ಪಡೆಯಲಾಗುವುದಿಲ್ಲ. ಕೆನೆಮೊಸರನ್ನು ಕಡೆದಾಗ, ಅದರ ಸಾರ ಸರ್ವಸ್ವವಾದ ಬೆಣ್ಣೆಯು ಹೊರಬರುವಂತೆ, ಗುರುವಿನ ಸಾನ್ನಿಧ್ಯದಲ್ಲಿ ಶಾಸ್ತ್ರಾಧ್ಯಯನವನ್ನು ಮಾಡಲಾಗಿ ಶಾಸ್ತ್ರಗಳ ತಾತ್ಪರ್ಯಾರ್ಥವು ಶಿಷ್ಯನಲ್ಲಿ ಗೋಚರವಾಗುವುದು. ಉಪಕ್ರಮ ಉಪಸಂಹಾರಗಳೆಂಬ ಶ್ರುತಿ ಷಡ್‌ಲಿಂಗಗಳ ಮೂಲಕ ಸಕಲ ಶಾಸ್ತ್ರಗಳನ್ನು ಆದ್ಯೋಪಾಂತವಾಗಿ ಅಭ್ಯಾಸ ಮಾಡಲಾಗಿ ಆ ಗ್ರಂಥದ ರಹಸ್ಯಾರ್ಥವು ತಿಳಿದುಬರುತ್ತದೆ. ಆದ್ದರಿಂದ ಸಾಧಕನು ಸದ್ಗುರುವನ್ನಾಶ್ರಯಿಸಿ ಸಕಲ ಶಾಸ್ತ್ರಗಳ ಅಭ್ಯಾಸವನ್ನು ಮಾಡಬೇಕು.

ಸಾಗರವು ಅಪಾರವಾಗಿರುವಂತೆ ಶಾಸ್ತ್ರಗಳು ಸಹ ಅನಂತಗಳಾಗಿವೆ. ಎಲ್ಲವನ್ನು ಎಲ್ಲರಿಗೆ ಅಭ್ಯಾಸ ಮಾಡಲಿಕ್ಕೆ ಆಗುವುದಿಲ್ಲ. ಆದರೆ ತಮ್ಮ ತಮ್ಮ ಧರ್ಮ ದರ್ಶನಗಳ ಅಧ್ಯಯನವನ್ನು ಪ್ರತಿಯೊಬ್ಬರು ಅವಶ್ಯವಾಗಿ ಮಾಡಬೇಕು. ವೀರಶೈವ ಸಿದ್ಧಾಂತಕ್ಕೆ ಕಾಮಿಕಾದಿ ವಾತುಲಾಂತಗಳಾದ ೨೮ ಶಿವಾಗಮಗಳು ಮೂಲ ಆಧಾರಗಳಾಗಿವೆ. ಇದೂ ಅಲ್ಲದೆ ಇವುಗಳನ್ನೇ ಆಧಾರವಾಗಿಟ್ಟುಕೊಂಡು ನಿರ್ಮಾಣವಾದ ವೀರಶೈವ

ಧರ್ಮ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿ. ಇದೂ ಅಲ್ಲದೇ ಇನ್ನೂ ನೂರಾರು ಸಂಸ್ಕೃತದ ಗ್ರಂಥಗಳು ಇರುವುದನ್ನು ಕಾಣುತ್ತೇವೆ. ಈ ಎಲ್ಲ ಗ್ರಂಥಗಳನ್ನು ಅಭ್ಯಾಸ ಮಾಡಿ ಯುಕ್ತಿಯೆಂಬ ಮಂಥನದಿಂದ ಅವುಗಳನ್ನು ಕಡೆದು, ಅವುಗಳ ರಹಸ್ಯಾರ್ಥವನ್ನು ತಿಳಿದುಕೊಳ್ಳಬೇಕು. ಮೊಸರನ್ನು ಕಡೆಯಬೇಕಾದಾಗ ಕಡಗೋಲು ಹಾಗೂ ಕಡೆಯುವ ಹಗ್ಗ ಬೇಕಾಗುವಂತೆ ಅಭ್ಯಾಸದಲ್ಲಿಯೂ ಯುಕ್ತಿ ಪ್ರಯುಕ್ತಿಗಳ ಮೂಲಕ ಅದರ ರಹಸ್ಯಾರ್ಥವನ್ನು ಹೊರತೆಗೆಯಲು ಇಬ್ಬರು ವ್ಯಕ್ತಿಗಳು ಅವಶ್ಯವಾಗಿ ಬೇಕೇಬೇಕು. ಅಂತೆಯೇ ಸುಭಾಷಿತಕಾರನು 'ದ್ವೌ ಸ್ವಾಧ್ಯಾಯ ಪರೌ ಹಿತೌ' ಎಂದಿದ್ದಾನೆ. ಅಭ್ಯಾಸ ಮಾಡಲು ಸಮಾನ ಕಕ್ಷೆಯ ಇಬ್ಬರು ವಿದ್ಯಾರ್ಥಿಗಳಿದ್ದರೆ ಹೆಚ್ಚು ಅನುಕೂಲ ವಾಗುವುದು. ಈ ಆಧ್ಯಾತ್ಮಿಕ ವಿದ್ಯೆಯ ಅಧ್ಯಯನದಲ್ಲಿ ಸದ್ಗುರುವೇ ಶಿಷ್ಯನಿಗೆ ಹೆಜ್ಜೆ ಹೆಜ್ಜೆಗೆ ಮಾರ್ಗದರ್ಶಕನಾಗಿರೋಣದರಿಂದ ಶಾಸ್ತ್ರಮಂಥನವು ಇನ್ನೂ ಹೆಚ್ಚು ಸೂಕ್ತ ವಾಗಿ ಸಾಗುವುದು. ಗುರುವಿನಿಂದ ಗ್ರಂಥ ಬೋಧವನ್ನು ಪಡೆಯುತ್ತಿರುವ ಶಿಷ್ಯನು ತನಗೆ ಬಂದ ಸಂಶಯಗಳನ್ನು ಪುನಃ ಪುನಃ ಗುರುವಿಗೆ ನಿವೇದಿಸಿಕೊಂಡು ಗುರುವಿನಿಂದ ಉಪದೇಶಿಸಲ್ಪಟ್ಟ ಯುಕ್ತಿ ಪ್ರಯುಕ್ತಿಗಳ ಮೂಲಕ ಜ್ಞಾನಾಮೃತವನ್ನು ಪಡೆದು ಕೊಳ್ಳುತ್ತಾನೆ. ಹೀಗೆ ಗುರುವಿನಿಂದ ಶಾಸ್ತ್ರಾಧ್ಯಯನವನ್ನು ಮಾಡಿ ಅನೇಕ ಯುಕ್ತಿ ಪ್ರಯುಕ್ತಿಗಳ ಮೂಲಕ ಶಾಸ್ತ್ರರೂಪಿ ಸಮುದ್ರವನ್ನು ಗುರುಶಿಷ್ಯರೀರ್ವರೂ ಮಥಿಸಿ ಅದರಿಂದ ಹೊರ ಹೊರಟ ಜ್ಞಾನಾಮೃತವನ್ನು ಪಡೆಯುವುದೇ ಶಿಕ್ಷಾಪಾದೋದಕ ವೆಂಬುದಾಗಿ ತಿಳಿದುಕೊಳ್ಳಬೇಕು.

ಹೀಗೆ ಸದ್ಗುರುವಿನ ಉಪದೇಶ ಮೂಲಕವಾಗಿ ಬೋಧಸುಧೆಯನ್ನು ಪಡೆದು ಕೊಂಡ ಶಿವಯೋಗಿಯು ಸ್ವಸ್ವರೂಪ ಸ್ಥಿತಿಯಲ್ಲಿ ಹೇಗೆ ಸ್ಥಿರನಾಗುತ್ತಾನೆಂಬ ವಿಷಯ ವನ್ನು ಪೂಜ್ಯಪಾದರು–

ಜ್ಞಾನಚಂದ್ರಸಮುದ್ಭೂತಾಂ ಪರಮಾನಂದಚಂದ್ರಿಕಾಮ್ ।
ಪಶ್ಯಂತಿ ಪರಮಾಕಾಶೇ ಮುಕ್ತಿರಾತ್ರೌ ಮಹಾಧಿಯಃ ॥

(ಸಿ. ಶಿ. ೧೯–೧೪)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ನಿರಭ್ರವಾದ ಆಕಾಶ ದಲ್ಲಿ ಪೌರ್ಣಿಮೆಯಂದು ಪೂರ್ಣಚಂದ್ರನ ಪ್ರಕಾಶವು ನೋಡಿದವರಿಗೆಲ್ಲ ಆನಂದ ವನ್ನುಂಟು ಮಾಡುವಂತೆ ಈ ಶಿವಯೋಗಿಯು ಜೀವನ್ಮುಕ್ತಿಯೆಂಬ ರಾತ್ರಿಯಲ್ಲಿ ತನ್ನಾತ್ಮ ವೆಂಬ ಮಹಾಕಾಶದಲ್ಲಿ ಜ್ಞಾನರೂಪಿ ಚಂದ್ರನುದಯವಾಗಲು ಅದರಿಂದ ಹೊರ ಹೊಮ್ಮಿದ ಪರಮಾನಂದವೆಂಬ ಬೆಳದಿಂಗಳನ್ನು ಅನುಭವಿಸುತ್ತ ಆತ್ಮಸ್ಥಿತಿಯಲ್ಲಿ ಈ ಸೂಕ್ಷ್ಮದರ್ಶಿಗಳು ಸುಸ್ಥಿರರಾಗುತ್ತಾರೆ. ಅಂದರೆ ತನ್ನದೇಯಾದ ಆತ್ಮಾನಂದವನ್ನನು ಭವಿಸುತ್ತ ಬಾಹ್ಯ ಪರಿಕಲ್ಪನೆಗಳಿಲ್ಲದೆ ಅಂತರ್ಮುಖರಾಗುತ್ತಾರೆ.

ಈ ಶ್ಲೋಕದಲ್ಲಿ ಪೂಜ್ಯಪಾದರು ಎಲ್ಲರಿಗೂ ಅನುಭವ ಗೋಚರವಾಗುವ ಬೆಳದಿಂಗಳಿನ ಉದಾಹರಣೆಯನ್ನು ಕೊಟ್ಟು ಪರಮಾನಂದ ಸ್ವರೂಪವನ್ನು ಸ್ಪಷ್ಟ ಪಡಿಸಿದ್ದಾರೆ. ಪ್ರಕೃತಿ ಪ್ರದತ್ತವಾದ ಬೆಳದಿಂಗಳಿನ ತಂಪನ್ನು ಅನುಭವಿಸುವ ಜನರು

ಇತ್ತೀಚೆಗೆ ಕಡಿಮೆಯಾಗುತ್ತಿದ್ದಾರೆ. ಪ್ರತಿಯೊಂದು ಗ್ರಾಮ ನಗರಗಳಲ್ಲಿ ವಿದ್ಯುದ್ದೀಪಗಳ ಹಾವಳಿ. ಹಗಲಿನಲ್ಲಿಯೂ ಈ ವಿದ್ಯುದ್ದೀಪಗಳನ್ನು ಬಳಸುವ ಅಭ್ಯಾಸ ಇತ್ತೀಚೆಗೆ ಹೆಚ್ಚಾಗಿರುವುದರಿಂದ ಕೃತ್ರಿಮತೆಗೆ ಒಳಗಾಗಿರುವ ಸಮಾಜವು ನೈಸರ್ಗಿಕವಾದ ಆನಂದ ವನ್ನು ಅನುಭವಿಸಲು ಅಸಮರ್ಥವಾಗಿದೆ. ಚಂದ್ರನ ಬೆಳದಿಂಗಳ ಅನುಭವವನ್ನು ಹಳ್ಳಿಗರು ಅನುಭವಿಸುವಂತೆ ಪಟ್ಟಣವಾಸಿಗಳು ಅನುಭವಿಸಲಾರರು. ಅವರು ಆಕಾಶದ ಚಂದ್ರನನ್ನು ನೋಡಿ ಹುಣ್ಣಿಮೆಯನ್ನು ಗುರುತಿಸದೇ ಕ್ಯಾಲೆಂಡರಿನಲ್ಲಿ ಸಂಕೇತಿಸಿದ ಚಂದ್ರಾಕೃತಿಯ ವರ್ತುಳವನ್ನು ನೋಡಿ ಪೌರ್ಣಿಮೆಯನ್ನು ಗುರುತಿಸುತ್ತಾರೆ. ಕೃತ್ರಿಮ ಉಪಕರಣಗಳ ಹೆಚ್ಚಳಿಕೆಯಲ್ಲಿ ಪ್ರಾಕೃತಿಕವಾದ ಬೆಳದಿಂಗಳಿನ ಆನಂದವನ್ನು ಅನು ಭವಿಸದಿರುವಂತೆ, ಜಗತ್ತಿನ ಸಾಮಾನ್ಯ ಜನರೂ ಸಹ ಬಹಿರಂಗದ ಆಕರ್ಷಣೆ ಗೊಳಗಾಗಿ ತಮ್ಮೊಳಗಿನ ಆತ್ಮ ಚಂದ್ರನ ಆಹ್ಲಾದದಿಂದ ದೂರವಾಗಿದ್ದಾರೆ. ಯಾವಾತನು ಸದ್ಗುರುವಿಗೆ ಶರಣಾಗಿ ಅವರ ಉಪದೇಶಾಮೃತವನ್ನು ಆಲಿಸಿ ಆತ್ಮ ಜ್ಞಾನೋದಯವನ್ನು ಮಾಡಿಕೊಳ್ಳುತ್ತಾನೆಯೋ, ಅವನು ಮಾತ್ರ ಶಿವಾದ್ವೈತ ಜ್ಞಾನ ರೂಪನಾದ ಚಂದ್ರನಿಂದ ಹೊರಹೊರಟ ಪರಮಾನಂದರೂಪವಾದ ಬೆಳದಿಂಗಳನ್ನು ಅನುಭವಿಸಿ ನಿತ್ಯಸುಖಿಯಾಗುತ್ತಾನೆ. ಇದು ಸರ್ವರಿಗೂ ಸುಲಭ ಸಾಧ್ಯವಾಗದಿದ್ದರೂ ಅಧಿಕಾರಿಗಳಾದ ಶಿವಯೋಗಿಗಳಿಗೆ ಸುಲಭ ಸಾಧ್ಯವೇ ಸರಿ. ಹೊರಗಿನ ಬೆಳದಿಂಗಳನ್ನು ಅನುಭವಿಸಲು ಸಮಯವಿಲ್ಲದವರಿಗೆ ಅಂತರಂಗದ ಆತ್ಮಾನಂದರೂಪಿಯಾದ ಬೆಳದಿಂಗಳಿನ ಅನುಭವವು ಅದೆಂತು ಸಾಧ್ಯ ? ಆದ್ದರಿಂದ ಇದನ್ನು ಪಡೆಯುವ ಅಭಿಲಾಷೆಯುಳ್ಳ ಪ್ರತಿಯೊಬ್ಬರಿಗೂ ಅಂತರ್ಮುಖರಾಗಿ ಸದ್ಗುರುವಿನ ಬೋಧೆಯನ್ನು ಪಡೆಯಬೇಕಾಗುವುದು. ಹೀಗೆ ಪರಮಾನಂದ ಚಂದ್ರಿಕೆಯನ್ನು ನೋಡುತ್ತಿರುವ ಶಿವಯೋಗಿಗೆ ಜಗತ್ತಿನಲ್ಲಿ ನೋಡಲು ಮತ್ತೊಂದು ವಸ್ತುಯಾವುದೂ ಉಳಿಯುವುದಿಲ್ಲ. ಅರ್ಥಾತ್ ಆತ್ಮ ದರ್ಶನವನ್ನು ಪಡೆದ ಯೋಗಿಗೆ ಬೇರಾವುದರ ದರ್ಶನದ ಅಭಿಲಾಷೆಯು ಇರುವುದಿಲ್ಲವೆಂಬ ವಿಷಯವನ್ನೇ ಪೂಜ್ಯಪಾದರು ಈ ಪುನಃ ಈ ಮುಂದೆ–

> ದೃಷ್ಟೇತಸ್ಮಿನ್ ಪರಾನಂದೇ ದೇಶ ಕಾಲಾದಿ ವರ್ಜಿತೇ ।
> ದ್ರಷ್ಟವ್ಯಂ ವಿದ್ಯತೇ ನಾನ್ಯಚ್ಛ್ರೋತವ್ಯಂ ಜ್ಞೇಯಮೇವ ವಾ ॥

(ಸಿ. ಶಿ. ೧೯–೧೫)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ದೇಶ ಕಾಲಾದಿ ಪರಿಚ್ಛೇದರಹಿತವಾದ ಪರಮಾನಂದ ರೂಪಿ ಬೆಳದಿಂಗಳಿನ ಸಾಕ್ಷಾತ್ಕಾರವನ್ನು ಮಾಡಿಕೊಂಡ ಶಿವಯೋಗಿಗೆ ಈ ಜಗತ್ತಿನಲ್ಲಿ ನೋಡುವ, ಕೇಳುವ ಮತ್ತು ತಿಳಿದುಕೊಳ್ಳಲು ಯೋಗ್ಯವಾದ ಬೇರೊಂದು ವಸ್ತುವೇ ಉಳಿಯಲಾರದು. ಅಂದರೆ ಆತ್ಮಾನಂದವನ್ನು ಅನುಭವಿಸಿದ ಯೋಗಿಗೆ ಬೇರಾವುದರ ಅಪೇಕ್ಷೆಯೇ ಉಳಿಯುವುದಿಲ್ಲವೆಂಬ ತಾತ್ಪರ್ಯವು.

ಎಲ್ಲಿಯವರೆಗೆ ಆತ್ಮಜ್ಞಾನವಾಗುವುದಿಲ್ಲವೋ ಅಲ್ಲಿಯವರೆಗೆ ಬೇರೆ ಬೇರೆ ವಸ್ತುಗಳ ದರ್ಶನಾದಿ ಅಭಿಲಾಷೆಗಳು ಮನದಲ್ಲಿ ಒಡಮೂಡುವುದುಂಟು. 'ಆತ್ಮಾ ವಾ

ಅರೇ ದ್ರಷ್ಟವ್ಯಃ', ಎಂಬ ಶ್ರುತಿ ವಚನದಲ್ಲಿ ಈ ಜಗತ್ತಿನಲ್ಲಿ ದರ್ಶನೀಯ ತತ್ತ್ವವೆಂದರೆ ಆತ್ಮವೊಂದೇ ಎಂಬುದಾಗಿ ಉಪದೇಶಿಸಲಾಗಿದೆ. ಆ ಆತ್ಮದ ಅರಿವಿಲ್ಲದ ಸಾಮಾನ್ಯ ಜನರ ಮನದಲ್ಲಿ ಅಲ್ಲಿಗೆ ಹೋಗಬೇಕು, ಇಲ್ಲಿಗೆ ಹೋಗಬೇಕು, ಅವರನ್ನು ನೋಡ ಬೇಕು, ಇವರನ್ನು ನೋಡಬೇಕು ಅದನ್ನು ಕೇಳಬೇಕು ಮತ್ತು ಇದನ್ನು ಕೇಳಬೇಕು ಮುಂತಾದ ಅನೇಕ ಅಭಿಲಾಷೆಗಳು ಇರುತ್ತವೆ. 'ಏಕವಿಜ್ಞಾನೇನ ಸರ್ವವಿಜ್ಞಾನಂ' ಎಂಬ ಶ್ರುತಿ ವಚನದಂತೆ ಆತ್ಮದರ್ಶನದ ನಂತರ ಆ ವ್ಯಕ್ತಿಯು ಪೂರ್ಣತಃ ತೃಪ್ತನಾಗುತ್ತಾನೆ. ಬೇರಾವ ಆಶೆ ಆಕಾಂಕ್ಷೆಗಳು ಅವನ ಮನಸ್ಸಿನಲ್ಲಿ ಉಳಿಯುವುದಿಲ್ಲ.

ಜಗತ್ತಿನಲ್ಲಿಯ ವಸ್ತುಗಳು ನಮಗೆ ಸಂಬಂಧವಾದಾಗ ತಾತ್ಕಾಲಿಕವಾದ ಸುಖವನ್ನು ಉಂಟುಮಾಡುತ್ತವೆ. ಅವುಗಳೇ ನಮ್ಮಿಂದ ದೂರವಾದಾಗ ಅವೇ ನಮ್ಮ ದುಃಖಕ್ಕೆ ಕಾರಣೀಭೂತಗಳಾಗುತ್ತವೆ. ಆತ್ಮವೊಂದೇ ನಮ್ಮಿಂದ ಅದೆಂದೂ ದೂರವಾಗಲಾರದು. ಅಂತೆಯೇ ಒಮ್ಮೆ ಅದರ ಅರಿವಾದಾಗ ಉಂಟಾದ ಆನಂದವು ಅದೆಂದೂ ನಮ್ಮನ್ನು ಕೈಬಿಡದು. ಆದ್ದರಿಂದ ಆತ್ಮದರ್ಶನದ ತರುವಾಯ ಬೇರೊಂದು ದರ್ಶನೀಯ ವಸ್ತುವೇ ಉಳಿಯುವುದಿಲ್ಲ. ಆತ್ಮದರ್ಶನವೇ ಪರಾಕಾಷ್ಠ ದರ್ಶನವೆಂದು ತಿಳಿದುಕೊಳ್ಳಬೇಕು. ಇದೂ ಅಲ್ಲದೆ ಆತ್ಮತತ್ತ್ವದ ಬಗ್ಗೆ ಕೇಳಿದ ಬಳಿಕ ಮತ್ತೊಂದರ ಬಗ್ಗೆ ಕೇಳುವ ಇಚ್ಛೆಯೂ ಸಹ ಉಳಿಯುವುದಿಲ್ಲ. ಹೀಗೆ ಆತ್ಮದರ್ಶನ, ಆತ್ಮಶ್ರವಣ ಮತ್ತು ಆತ್ಮಜ್ಞಾನಗಳೇ ಕೊನೆಯವುಗಳೆಂದು ತಿಳಿದುಕೊಳ್ಳಬೇಕು. ಆತ್ಮತೃಪ್ತನಾದ ಶಿವಯೋಗಿಯು ಆತ್ಮ ದರ್ಶನ, ಆತ್ಮಶ್ರವಣ ಮತ್ತು ಆತ್ಮಜ್ಞಾನದಲ್ಲಿ ತಲ್ಲೀನನಾಗಿ ಬೇರಾವುದರ ಗೊಡವೆಗೆ ಹೋಗದೆ ತನ್ನಲ್ಲಿಯೇ ತಾನು ಸಂತೃಪ್ತನಾಗುತ್ತಾನೆ. ಇದುವೆ ಶಿಕ್ಷಾ ಪಾದೋದಕ ಸ್ಥಿತಿಯು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯರನ್ನುದ್ದೇಶಿಸಿ, ಪೂರ್ವೋಕ್ತ ನಾದ ಶಿವಯೋಗಿಗೆ ಬೇರೆ ಇಚ್ಛೆಗಳು ಉಂಟಾಗದಿರುವ ಸ್ಥಿತಿಯ ಬಗ್ಗೆ ಮತ್ತೊಂದು ಉದಾಹರಣೆಯ ಮೂಲಕ–

ಆತ್ಮಾನಂದೇನ ತೃಪ್ತಸ್ಯ ಕಾ ಸ್ಪೃಹಾ ವಿಷಯೇ ಸುಖೇ ।
ಗಂಗಾ ಜಲೇನ ತೃಪ್ತಸ್ಯ ಕೂಪತೋಯೇ ಕುತೋ ರತಿಃ ॥

(ಸಿ. ಶಿ. ౧೯–౧೬)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಗಂಗಾಜಲದಿಂದ ಸಂತೃಪ್ತನಾದವನು ಭಾವಿಯ ನೀರಿನ ಬಗ್ಗೆ ಹಾತೊರೆಯದಿರುವಂತೆ ಆತ್ಮಾನಂದದಿಂದ ತೃಪ್ತನಾದ ಶಿವಯೋಗಿಯು ಶಬ್ದ ಸ್ಪರ್ಶಾದಿ ವಿಷಯಗಳತ್ತ ಅಭಿಮುಖನಾಗಲಾರನು. 'ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ' ಎಂಬ ಶ್ರುತಿ ವಚನದಂತೆ ಬ್ರಹ್ಮದೇವನು ಈ ಜಗತ್ತನ್ನು ಸೃಷ್ಟಿಸುವಾಗ ಪ್ರತಿಯೊಂದು ಜೀವಿಗಳ ಇಂದ್ರಿಯಗಳನ್ನು ಬಹಿರ್ಮುಖವಾಗಿ ಮಾಡಿದ್ದಾನೆ. ಅಂತೆಯೇ ಪ್ರತಿಯೊಬ್ಬರೂ ಸದಾ ಬಹಿರ್ಮುಖ ಪ್ರವೃತ್ತರಾಗಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ವಿಷಯಗಳತ್ತ ಧಾವಿಸುತ್ತಾರೆ. ವಿಷಯಗಳಿಂದ ಸುಖಪ್ರಾಪ್ತಿ ಯಾಗುವುದೆಂಬ ಭ್ರಮೆಯು ಅವರ ಮನಸ್ಸಿನಲ್ಲಿ ಮೂಡಿರುತ್ತದೆ. ವಿಷಯ

ವನ್ನನುಭವಿಸಿ ಕ್ಷಣಿಕ ಸುಖಿಗಳಾಗಬಹುದೆ ವಿನಃ ಪರಮಸುಖಿಗಳಾಗಲು ಸಾಧ್ಯವಿಲ್ಲ. ವಿಷಯಗಳ ವಾಸನೆಯು ವಿಷಯೋಪಭೋಗದಿಂದ ಶಾಂತವಾಗದೆ ಮತ್ತೆ ಮತ್ತೆ ಉದ್ದೀಪನಗೊಳ್ಳುತ್ತಲಿರುತ್ತದೆ. ಆದ್ದರಿಂದಲೇ ಯಯಾತಿ ಮಹಾರಾಜನು–

ನ ಜಾತುಃ ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥

ಎಂಬುದಾಗಿ ತನ್ನ ಅನುಭವವನ್ನು ಈ ಶ್ಲೋಕದಲ್ಲಿ ಚಿತ್ರಿಸಿದ್ದಾನೆ. ಹೋಮ ಕುಂಡದಲ್ಲಿ ಧಗಧಗಿಸುತ್ತಿರುವ ಅಗ್ನಿಯ ಜ್ವಾಲೆಯನ್ನು ತುಪ್ಪ ಹಾಗೂ ಸಮಿತ್ತುಗಳನ್ನು ಹಾಕಿ ಆರಿಸಲು ಸಾಧ್ಯವಾಗುವುದೇ ? ಅವುಗಳನ್ನು ಹಾಕುತ್ತ ಹೋದಂತೆ ಅದು ಇನ್ನೂ ಹೆಚ್ಚು ಉದ್ದೀಪನಗೊಳ್ಳುವಂತೆ ಶಬ್ದ ಸ್ಪರ್ಶಾದಿ ವಿಷಯಗಳಿಂದ ಭೋಗವಾಸನೆಗಳು ಹೆಚ್ಚು ಹೆಚ್ಚು ಉದ್ದೀಪನಗೊಳ್ಳುತ್ತಿರುವೆ. ಆದರೆ ಬಹಿರ್ಮುಖವಾದ ವಿಷಯಾಭಿಮುಖ ಪ್ರವೃತ್ತಿಯನ್ನು ತಡೆದು, ಅದನ್ನೇ ಅಂತರ್ಮುಖವಾಗಿಸಿಕೊಂಡಾಗ ದೊರೆತ ಆತ್ಮಾನಂದದ ಮುಂದೆ ವಿಷಯ ಸುಖವು ಅತ್ಯಂತ ತುಚ್ಛವಾಗಿ ತೋರುತ್ತದೆ. ಅಂತೆಯೇ ಶಿವಯೋಗಿಗೆ ಆ ವಿಷಯಗಳಲ್ಲಿ ಉಪಭೋಗದ ಇಚ್ಛೆ ಉಂಟಾಗುವುದಿಲ್ಲ. ಪರಿ ಶುದ್ಧವೂ, ಪಾವನವೂ, ಮಧುರವೂ ಆದ ಗಂಗಾಜಲದಿಂದ ತೃಪ್ತನಾದ ಅದಾರು ತಾನೆ ಭಾವಿಯ ನೀರನ್ನು ಅಪೇಕ್ಷಿಸಿಯಾರು ?

ಈ ಜಗತ್ತಿನಲ್ಲಿ ಇರುವ ಜನರನ್ನು ದಾರ್ಶನಿಕರು ಪಾಮರ, ವಿಷಯಿ, ಜಿಜ್ಞಾಸು ಮತ್ತು ಜ್ಞಾನಿ ಅಥವಾ ಮುಕ್ತನೆಂಬುದಾಗಿ ನಾಲ್ಕು ಪ್ರಕಾರವಾಗಿ ವಿಂಗಡಿಸಿದ್ದಾರೆ. ಕೇವಲ ವಿಷಯದಲ್ಲಿಯೇ ಸುಖವಿದೆ ಎಂದು ತಿಳಿದು ಸದಾ ಅದರಲ್ಲಿಯೇ ಅನುರಕ್ತನಾದ ಜೀವಿಗೆ ಪಾಮರನೆಂದು ಕರೆಯುತ್ತಾರೆ. ಇನ್ನು ತನ್ನಾತ್ಮವು ಆನಂದ ಸ್ವರೂಪವಾಗಿದೆ ಎಂಬುದಾಗಿ ತಿಳಿದುಕೊಂಡಿದ್ದರೂ ಆ ಆತ್ಮಾನಂದವನ್ನು ಅಲಕ್ಷಿಸಿ ಸದಾ ಶಬ್ದ ಸ್ಪರ್ಶಾದಿ ವಿಷಯ ಗಳಲ್ಲಿಯೇ ಆಸಕ್ತನಾದವನು ವಿಷಯೀ ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ. ವಿಷಯ ಗಳು ದುಃಖರೂಪವಾದವುಗಳೆಂದು ತಿಳಿದುಕೊಂಡು ಆನಂದ ರೂಪವಾದ ತನ್ನಾತ್ಮ ಸ್ವರೂಪವನ್ನು ತಿಳಿದುಕೊಳ್ಳುವ ಅತ್ಯುತ್ಕಟವಾದ ಬಯಕೆಯುಳ್ಳವನು ಜಿಜ್ಞಾಸು ಎಂದು ಕರೆಯಿಸಿಕೊಳ್ಳುವನು. ಅದರಂತೆ ಸದ್ಗುರುವಿನ ಉಪದೇಶವನ್ನು ಶ್ರವಣ ಮಾಡಿ ದೃಢ ವಾದ ಆತ್ಮಜ್ಞಾನವನ್ನು ಮಾಡಿಕೊಂಡವನು ಜ್ಞಾನಿಯೆಂತಲೂ, ಅವನಿಗೆ ಮುಕ್ತನೆಂತಲೂ ಸಹ ಕರೆಯುವರು. ಮೇಲೆ ವರ್ಣಿಸಿದ ಈ ನಾಲ್ಕು ಜನರಲ್ಲಿ ಪಾಮರನಿಗಿಂತಲೂ ವಿಷಯೀ, ವಿಷಯಿಗಿಂತಲೂ ಜಿಜ್ಞಾಸು ಮತ್ತು ಜಿಜ್ಞಾಸುವಿಗಿಂತಲೂ ಜ್ಞಾನಿ ಅಥವಾ ಮುಕ್ತನಾದವನು ಉತ್ತರೋತ್ತರವಾಗಿ ಶ್ರೇಷ್ಠರೆಂದು ಕರೆಯಿಸಿಕೊಳ್ಳುತ್ತಾರೆ. ಇವರಲ್ಲಿ ಜೀವನ್ಮುಕ್ತಿಯ ವಿಲಕ್ಷಣ ಆನಂದವನ್ನು ಅನುಭವಿಸುತ್ತಿರುವ ಮುಕ್ತನಾದ ಜ್ಞಾನಿಯೇ ಸರ್ವಶ್ರೇಷ್ಠನು. ಶಿಕ್ಷಾಪಾದೋದಕಸ್ಥಲವನ್ನು ಪ್ರವೇಶಿಸಿದವನು ಇಂತಹ ಸರ್ವಶ್ರೇಷ್ಠ ಸ್ಥಿತಿಯನ್ನು ಪ್ರಾಪ್ತ ಮಾಡಿಕೊಂಡಿರೋಣದರಿಂದ ಅವನಿಗೆ ವಿಷಯ ಸುಖದ ಅಭಿಲಾಷೆಯೇ ಉಂಟಾಗುವುದಿಲ್ಲ. ಅಂತೆಯೇ ಪೂಜ್ಯಪಾದರು ಗಂಗಾಜಲದಿಂದ ಪರಿತೃಪ್ತನಾದವನ ಉದಾಹರಣೆಯನ್ನು ಕೊಟ್ಟು, ಈ ವಿಷಯವನ್ನು ಇನ್ನೂ ಹೆಚ್ಚಾಗಿ ಸಮರ್ಥಿಸಿದ್ದಾರೆ.

ಪೂರ್ವೋಕ್ತವಾದ ಉತ್ಕೃಷ್ಟ ಮಾನಸಿಕ ಸ್ಥಿತಿಯನ್ನು ಪಡೆದುಕೊಂಡ ಶಿವ ಯೋಗಿಯು ತೃಪ್ತಿಯು ಅಸೀಮವಾದುದು ಎಂಬ ವಿಷಯವನ್ನು ಪುನಃ–

ಯಸ್ಮಿನ್ನ ಪ್ರಾಪ್ತ ಕಲ್ಲೋಲೇ । ಸುಖಸಿಂಧೌ ನಿಮಜ್ಜತಿ ।
ಪಾಮರಸ್ಯಾನ್ಮಹಾಯೋಗೀ ತಸ್ಯ ಸೀಮಾ ಕುತೋ ಭವೇತ್ ॥

(ಸಿ. ಶಿ. ೧೯–೧೭)

ಹೀಗೆ ಸಮರ್ಥಿಸಿದ್ದಾರೆ. ಶಿವಾನಂದ ರೂಪವಾದ ಸಾಗರದಲ್ಲಿ ರಾಗದ್ವೇಷಾದಿ ವಿಕಾರ ಗಳೆಂಬ ತರಂಗಗಳು ಉದ್ಭವಿಸುವುದಿಲ್ಲ. ಇಂತಹ ನಿಸ್ತರಂಗ ರೂಪವಾದ ಸುಖ ಸಮುದ್ರದಲ್ಲಿ ಸಾಮರಸ್ಯವನ್ನು ಪಡೆದ ಮಹಾಯೋಗಿಗೆ ಉಂಟಾಗುವ ಆನಂದಕ್ಕೆ ಸೀಮೆಯೇ ಇರುವುದಿಲ್ಲ. ಪರಿಚ್ಛಿನ್ನಗಳಾದ ಹೊಲ–ಮನೆಗಳಿಗೆ ಸೀಮೆಯಿರುವುದನ್ನು ಕಾಣುತ್ತೇವೆ. ಅಂತೆಯೇ ಪ್ರತಿಯೊಬ್ಬರೂ ತಮ್ಮ ಮನೆ–ಮಠ–ಮಂದಿರಗಳಿಗೆ ಸೀಮೆ ಯನ್ನು ಕಟ್ಟಿ ಇದು ನಿನ್ನ ಮನೆ, ಇದು ನನ್ನ ಮನೆ ಮುಂತಾಗಿ ವ್ಯವಹರಿಸುತ್ತಿರುತ್ತಾರೆ. ಜಗತ್ತಿನಲ್ಲಿರುವ ಪಂಚ ಮಹಾಭೂತಗಳಿಗೆ ಹಾಗೂ ಭೌತಿಕ ಪದಾರ್ಥಗಳಿಗೆ ಸೀಮೆ ಯುಂಟೇ ವಿನಃ ಈ ಜಗತ್ತಿನ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣೀಭೂತವಾದ ಪರಬ್ರಹ್ಮ ಪರಮಾತ್ಮನಿಗೆ ಹಾಗೂ ಆತನ ಆನಂದಕ್ಕೆ ಸೀಮೆಯೇ ಇರುವುದಿಲ್ಲ. ಅದು ಸದಾ ಸದಾ ನಿಸ್ಸೀಮವಾದುದು. ಶಿಕ್ಷಾಪಾದೋದಕ ಸ್ಥಿತಿಯನ್ನು ಪಡೆದ ಶಿವಯೋಗಿಯು ಇಂತಹ ನಿಸ್ಸೀಮವಾದ ಸುಖಸಿಂಧುವಿನೊಂದಿಗೆ ಸಾಮರಸ್ಯ ಸ್ಥಿತಿಯನ್ನು ಅನುಭವಿಸು ತ್ತಿರುತ್ತಾನೆಂಬುದು ಪೂಜ್ಯರ ಆಶಯವಾಗಿದೆ.

ಈ ಮೇಲೆ ಹೇಳಿದ ಸ್ಥಿತಿಯನ್ನು ಪಡೆದ ಶಿವಯೋಗಿಗೆ ಎಂದಾದರೂ ಭೇದ ಭ್ರಾಂತಿಯು ಸಂಭವಿಸಬಹುದೇ ಎಂಬ ಪ್ರಶ್ನೆಯು ಉದ್ಭವಿಸಿದಾಗ ಅದೆಂದಿಗೂ ಸಾಧ್ಯವಿಲ್ಲವೆಂಬ ವಿಚಾರವನ್ನು ಪೂಜ್ಯಪಾದರು ಪುನಃ–

ಗುರುಪ್ರಸಾದಚಂದ್ರೇಣ ನಿಷ್ಕಲಂಕೇನ ಚಾರುಣಾ ।
ಯನ್ಮನಃ ಕುಮುದಂ ನಿತ್ಯಬೋಧಿತಂ ತಸ್ಯ ಕೋ ಭ್ರಮಃ ॥

(ಸಿ. ಶಿ. ೧೯–೧೮)

ಹೀಗೆ ಸಮರ್ಥಿಸಿದ್ದಾರೆ. ತಾತ್ಪರ್ಯವೇನೆಂದರೆ, ಕಲಂಕರಹಿತವೂ, ಅತ್ಯಂತ ಸುಂದರವೂ ಆದ ಗುರು ಪ್ರಸಾದವೆಂಬ ಚಂದ್ರನಿಂದ ಯಾರ ಮನಸ್ಸೆಂಬ ಕುಮುದವು ಸದಾ ಅರಳಿಕೊಂಡಿರುವುದೋ ಅಂಥವರ ಮನಸ್ಸಿನಲ್ಲಿ ಯಾವುದೇ ವಿಧವಾದ ಭ್ರಾಂತಿಯು ಆದೆಂದಿಗೂ ಉಂಟಾಗಲಾರದು. ಅಂದರೆ ಪೂರ್ವೋಕ್ತನಾದ ಶಿವಯೋಗಿಯ ಮನಸ್ಸಿನಲ್ಲಿ ಯಾವುದೇ ವಿಧವಾದ ಭ್ರಾಂತಿಯು ಉತ್ಪನ್ನವಾಗುವುದಿಲ್ಲ ವೆಂಬುದಾಗಿ ಪೂಜ್ಯರು ಉಪದೇಶಿಸಿದ್ದಾರೆ.

ಎದುರಿನ ವಸ್ತು ಸರಿಯಾಗಿ ಪ್ರತೀತಿಯಾಗದೇ ಇದ್ದಾಗ ಅಥವಾ ವ್ಯಕ್ತಿಯ ಮನಸ್ಸಿ ನಲ್ಲಿ ಸಾದೃಶ್ಯಾದಿ ಸಂಸ್ಕಾರಗಳಿದ್ದಾಗ ಭ್ರಾಂತಿಯುಂಟಾಗುತ್ತದೆ. ಕಪ್ಪೆ ಚಿಪ್ಪಿನಲ್ಲಿ ಬೆಳ್ಳಿ, ಹಗ್ಗದಲ್ಲಿ ಹಾವು ಮತ್ತು ಮೋಟು ಮರದಲ್ಲಿ ಕಳ್ಳ ಇವುಗಳ ಪ್ರತೀತಿಗೆ ಶಾಸ್ತ್ರಕಾರರು ಭ್ರಾಂತಿಯೆಂದು ಕರೆದಿದ್ದಾರೆ. ಅಲ್ಲದ್ದರಲ್ಲಿ ಅಹುದೆಂಬ ತಿಳುವಳಿಕೆಯೇ ಭ್ರಾಂತಿ.

ಭ್ರಾಂತಿ ಮೂಲಕವಾಗಿಯೇ ಜೀವಿಗಳು ಸಂಸಾರದಲ್ಲಿ ಸಿಲುಕಿಕೊಳ್ಳುತ್ತಾರೆ. ಭ್ರಾಂತಿ ನಿವೃತ್ತಿಯಾದಾಗಲೇ ಜೀವಾತ್ಮನು ಮುಕ್ತನಾಗುವನು. ಆತ್ಮನೇ ಬೇರೆ, ಪರಮಾತ್ಮನೇ ಬೇರೆ ಎಂಬ ತಿಳುವಳಿಕೆಯು ಸಹ ತಪ್ಪು ತಿಳುವಳಿಕೆಯಾಗಿರುತ್ತದೆ. ಇದುವೇ ಭೇದ ಭ್ರಾಂತಿ. ಗುರುವಿನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿಕ್ಷಾಪಾದೋದಕ ಸ್ಥಲದ ಶಿವಯೋಗಿಗೆ ಪರಿಪೂರ್ಣ ಜ್ಞಾನವು ಪ್ರಾಪ್ತವಾಗಿರೋಣದರಿಂದ ಅವನ ಮನಸ್ಸಿನಲ್ಲಿ ಯಾವ ಭ್ರಾಂತಿಯೂ ಉಂಟಾಗುವುದಿಲ್ಲ, ಚಂದ್ರನ ಕಿರಣದಿಂದ ವಿಕಸಿತ ವಾದ ಕುಮುದದಂತೆ ಸದ್ಗುರುವಿನ ಕೃಪೆಯಿಂದ ಜ್ಞಾನವನ್ನು ಪಡೆದ ಸದಾ ವಿಕಸಿತವಾದ ಅರ್ಥಾತ್ ಪ್ರಫುಲ್ಲಿತವಾದ ಅಂತೆಯೇ ನಿತ್ಯಜ್ಞಾನದಿಂದ ಕೂಡಿಕೊಂಡಿರುವ ಅವನ ಮನಸ್ಸಿನಲ್ಲಿ ಆದಾವ ಭ್ರಾಂತಿಯೂ ಉಂಟಾಗುವುದಿಲ್ಲ, ಇದ್ದ ವಸ್ತುವನ್ನು ಇದ್ದಂತೆ ತಿಳಿದುಕೊಳ್ಳುವ ಪರಿಪೂರ್ಣ ಜ್ಞಾನವು ಅವನಿಗಾಗಿರೋಣದರಿಂದ ಭ್ರಮೆಗೆ ಅವಕಾಶವೇ ಇರುವುದಿಲ್ಲ, ಅಂದರೆ ಪ್ರತಿನಿತ್ಯ ದೊರೆಯುವ ಸದ್ಗುರುವಿನ ಶಿಕ್ಷೆ ಅರ್ಥಾತ್ ಉಪದೇಶ ಮೂಲಕ ಸರ್ವವಿಧ ಭ್ರಾಂತಿಗಳನ್ನು ದೂರ ಮಾಡಿಕೊಂಡು ಈತನು ನಿರ್ಭ್ರಾಂತನಾಗಿರುತ್ತಾನೆ. ಈತನು ಸದ್ಗುರುವಿನ ಸಾನ್ನಿಧ್ಯದಲ್ಲಿ ತರ್ಕ ವಿತರ್ಕಗಳ ಮೂಲಕ ಶಾಸ್ತ್ರ ಮಂಥನವನ್ನು ಮಾಡಿ ಸಕಲ ಶಾಸ್ತ್ರಗಳ ತಾತ್ಪರ್ಯವನ್ನರಿತು ಆತ್ಮ ಸಾಕ್ಷಾತ್ಕಾರವನ್ನು ಪಡೆದು ಆ ಆತ್ಮಾನಂದದಲ್ಲಿಯೇ ತಲ್ಲೀನನಾಗಿ ಬೇರಾವುದೇ ವಿಷಯ ಸುಖವನ್ನು ಬಯಸದೆ ಭ್ರಾಂತಿ ಶೂನ್ಯವಾಗಿ ತಾನೇ ತಾನಾದ ಸ್ಥಿತಿಯಲ್ಲಿ ವಿಹರಿಸುತ್ತಿರು ತ್ತಾನೆ. ಇಂತಹ ಈ ಸ್ಥಿತಿಗೇನೆ ಶಿಕ್ಷಾಪಾದೋದಕ ಸ್ಥಿತಿಯೆಂಬುದಾಗಿ ಕರೆದಿದ್ದಾರೆ. ಈ ಶಿಕ್ಷಾ ಪಾದೋದಕ ಸ್ಥಿತಿಯನ್ನು ಪಡೆದ ಶಿವಯೋಗಿಯೇ ಮುಂಬರುವ ಜ್ಞಾನ ಪಾದೋದಕ ಸ್ಥಿತಿಯನ್ನು ಸಹ ಪಡೆದುಕೊಳ್ಳುತ್ತಾನೆಂದು ತಿಳಿಯಪಡಿಸಿ, ಈ ಶಿಕ್ಷಾಪಾದೋದಕಸ್ಥಲದ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೦ ನವ್ಹೆಂಬರ್, ೧೯೯೪

(ಸ್ನಾನ ಜ್ಞಾನ ಮಂದಿರ ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಜ್ಞಾನಪಾದೋದಕಸ್ಥಲ

ಧರ್ಮಾಸಕ್ತ ಸದ್ಭಕ್ತರೇ !

ಇಲ್ಲಿಯವರೆಗೆ ಶಿಕ್ಷಾಪಾದೋದಕಸ್ಥಲದ ವಿಷಯವಾಗಿ ಸವಿಸ್ತಾರವಾಗಿ ತಿಳಿದು ಕೊಂಡಿದ್ದೀರಿ. ಇನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿ ಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಸಮಸ್ತ ಮಾನವರನ್ನು ತು ಜ್ಞಾನಪಾದೋದಕಸ್ಥಲದ ಬಗ್ಗೆ ಆಶೀರ್ವಚನವನ್ನು ದಯಪಾಲಿಸಿದ್ದಾರೆ. ಈ ಲ್ಲಿ ಬರುವ ಪಾದ ಹಾಗೂ ಉದಕ ಶಬ್ದಗಳಿಗೆ ಈ ಪೂರ್ವದಲ್ಲಿ ಅರ್ಥೈಸಿದಂತೆ ಾಗೂ ಶಿಷ್ಯರೆಂಬುದಾಗಿಯೇ ಅರ್ಥಮಾಡಿಕೊಳ್ಳಬೇಕು. ಇವರಿಬ್ಬರ ಜ್ಞಾನದ ು ಮೂಲಕ ಈರ್ವರ ಅಭೇದವನ್ನು ಪ್ರತಿಪಾದಿಸುವ ಸ್ಥಲವೇ ಜ್ಞಾನ ಕಸ್ಥಲವು. ''ನಾಧ್ಯಕ್ಷಂ ನಾಪಿ ತಲ್ಲಿಂಗಂ ನ ಶಾಬ್ದಮಪಿ ಶಾಂಕರಂ'' ಎಂಬ ಗಮದ ವಚನಾನುಸಾರವಾಗಿ (ಪರಶಿವ) ಪರಮಾತ್ಮನ ಜ್ಞಾನವನ್ನು ಬೇಕಾದರೆ ಪ್ರತ್ಯಕ್ಷ ಅನುಮಾನ ಹಾಗೂ ಶಬ್ದ ಪ್ರಮಾಣಗಳು ಅಸಮರ್ಥ ಿ. ಅಂತೆಯೇ ಈ ಪರಾತ್ಪರ ತತ್ತ್ವವು ಪ್ರಮಾಣಾತೀತವಾದುದು. ಆದರೂ ರ ವಸ್ತುವು ಪ್ರತಿಯೊಂದು ವಸ್ತುವಿನಲ್ಲಿ ಜ್ಞಾನರೂಪವಾಗಿ ಅನುಸ್ಯೂತ ಿ. ಸರ್ವೇ ಸಾಮಾನ್ಯ ಜನರಿಗೆ ಅದರ ಜ್ಞಾನವು ಅಷ್ಟು ಸುಲಭವಲ್ಲದಿದ್ದರೂ ಶಿಕ್ಷಾಪಾದೋದಕ ಸಂಪನ್ನನಾದ ಶಿವಯೋಗಿಗೆ ಅದು ಸುಲಭ ಸಾಧ್ಯವಾದುದು ಎಂಬ ವಿಷಯವನ್ನು ತಿಳಿಯಪಡಿಸಲೋಸುಗ ಪೂಜ್ಯಪಾದರು ಪುನಃ–

ತದೈಕ್ಯ ಸಂಪದಾನಂದಜ್ಞಾನಂ ಜ್ಞಾನಗುರುರ್ಮತ ॥
ತತ್‌ಸಾಮರಸ್ಯಂ ಶಿಷ್ಯಸ್ಯ ಜ್ಞಾನಪಾದೋದಕಂ ವಿದು ॥

(ಸಿ. ಶಿ. ೧೯–೧೯)

ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೆಂದರೆ ''ವಿಜ್ಞಾನಮಾನಂದಂ ಬ್ರಹ್ಮ'' ಎಂಬ ಶ್ರುತಿ ವಚನದಂತೆ ಪರಾತ್ಪರ ವಸ್ತುವಿನ ಆನಂದ ಸ್ವರೂಪದ ಅಪರೋಕ್ಷ ಜ್ಞಾನವನ್ನು ಪಡೆದುಕೊಂಡವನೇ ಜ್ಞಾನಗುರುವೆಂಬುದಾಗಿ ಕರೆಯಲ್ಪಡು ತ್ತಾನೆ. ಇಂತಹ ಜ್ಞಾನ ಗುರುವಿಗೆ ಸಮಾನವಾದ ಜ್ಞಾನವನ್ನು ಪಡೆದ ಶಿಷ್ಯನ ಹಾಗೂ ಗುರುಗಳ ಸಾಮರಸ್ಯ ಸ್ಥಿತಿಯನ್ನು ಪಡೆದವನೇ ಜ್ಞಾನಪಾದೋದಕಸ್ಥಲದ ಸಾಧಕನೆಂಬು ದಾಗಿ ಬಲ್ಲವರು ನಿರೂಪಿಸುತ್ತಾರೆ.

ವಸ್ತುತಃ ಗುರುವೊಬ್ಬನೇಯಾಗಿದ್ದರೂ, ಅವನ ವಿಭಿನ್ನ ವ್ಯವಹಾರಗಳ ಮೂಲಕ ವಾಗಿ ಅವನಿಗೆ ಬೇರೆ ಬೇರೆ ಸಂಜ್ಞೆಗಳು ಪ್ರಾಪ್ತವಾಗಿರುತ್ತವೆ. ದೀಕ್ಷೆ ಕೊಡುವುದರಿಂದ ದೀಕ್ಷಾಗುರುವೆಂತಲೂ, ಶಿಕ್ಷಾ ಅರ್ಥಾತ್ ಉಪದೇಶವನ್ನು ಮಾಡೋಣದರಿಂದ ಶಿಕ್ಷಾ

ಗುರುವೆಂತಲೂ ಹಾಗೂ ತಾನು ಅನುಭವಿಸುತ್ತಿರುವ ಜ್ಞಾನದ ಅನುಭವವನ್ನು ಮಾಡಿ ಕೊಡುವುದರಿಂದ ಅವನಿಗೆ ಜ್ಞಾನ ಗುರುವೆಂತಲೂ ಕರೆಯುತ್ತಾರೆ. ಗುರುವಿನಲ್ಲಿರುವ ಜ್ಞಾನವೇ ಗುರುಪದ ವಾಚ್ಯವಾದುದು. ಅಂತೆಯೇ ಅರಿವೇ ಗುರುವೆಂಬುದಾಗಿ ಕರೆದಿದ್ದಾರೆ. ಗುರುವಿನ ಶರೀರವು ಗುರುಪದ ಸಂಜ್ಞಕವಾಗಿದೆ. ಅವನ ಜ್ಞಾನವೇ ಗುರುಪದ ಬೋಧಕವಾಗಿದೆ. ಆಕಾರ ಪ್ರಕಾರಗಳ ಮೂಲಕ ಗುರುವಿನಂತೆ ವ್ಯವಹರಿಸಿದ ಮಾತ್ರಕ್ಕೆ ಆತನು ಗುರುವಾಗಲಾರನು. ಯಾರ ಹೃದಯದಲ್ಲಿ ಜ್ಞಾನವು ಪ್ರಜ್ವಲಿಸುತ್ತಿರುವುದೋ ಅವರೆ, ಗುರುಪದಕ್ಕೆ ಯೋಗ್ಯರಾಗಿರುತ್ತಾರೆ. ತನ್ನ ಉಪದೇಶ ರೂಪವಾದ ಜ್ಞಾನಕಿರಣಗಳ ಮುಖಾಂತರ ಶಿಷ್ಯನ ಹೃದ್ಗತವಾದ ಅಜ್ಞಾನವೆಂಬ ಅಂಧಕಾರವನ್ನು ದೂರ ಮಾಡಬಲ್ಲಾತನೇ ಸದ್ಗುರುವು ಅಂತೆಯೇ ಓರ್ವ ಕವಿಯು–

> ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
> ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೆ ನಮಃ ॥

ಎಂಬ ಈ ಶ್ಲೋಕದಲ್ಲಿ ಕಾಡಿಗೆ ಹಚ್ಚುವ ನೆಪದಲ್ಲಿ ತಾಯಿಯು ಮಗನ ಕಣ್ಣು ತೆರೆಯುವಂತೆ, ಸದ್ಗುರು ಅಜ್ಞಾನವೆಂಬ ಕತ್ತಲೆಯಿಂದ ಅಂಧನಾಗಿರುವ ಶಿಷ್ಯನಿಗೆ ಜ್ಞಾನವೆಂಬ ಅಂಜನವನ್ನು ಹಚ್ಚುವ ಮೂಲಕ ಆತನ ಕಣ್ಣುಗಳನ್ನು ತೆರೆಯಿಸುತ್ತಾನೆ. ಶಿಷ್ಯನ ಅಜ್ಞಾನವನ್ನು ದೂರಮಾಡಿ ಜ್ಞಾನವನ್ನು ಅನುಗ್ರಹಿಸುವ ಸಾಮರ್ಥ್ಯವುಳ್ಳವನೇ ಸದ್ಗುರುವು. ಅದಿಲ್ಲದವನು ಕೇವಲ ಆಕಾರದ ಗುರು ಮಾತ್ರ. ಮನುಷ್ಯ ದೇಹವಿದ್ದು ಮನುಷ್ಯತ್ವವಿಲ್ಲದವನು ಕೇವಲ ಆಕಾರದಲ್ಲಿ ಮನುಷ್ಯನಾಗಿರುವಂತೆ, ಗುರುವಿನ ವೇಷಭೂಷಣಗಳನ್ನು ಧರಿಸಿ ಜ್ಞಾನರಹಿತನಾದವನು ಕೇವಲ ಹೆಸರಿಗೆ ಮಾತ್ರ ಗುರುವೆನಿಸುತ್ತಾನೆ. ಆತ್ಮಜ್ಞಾನ ಸಂಪನ್ನತೆಯೇ ಗುರುವಿನ ಅಸಾಧಾರಣ ಲಕ್ಷಣವಾಗಿದೆ. ವೇಷ ಭೂಷಣಗಳು ಗುರುವನ್ನು ಗುರುತಿಸುವ ಬಾಹ್ಯ ಸಂಕೇತಗಳು ಮಾತ್ರ. ಗುರುವಿನಂತೆ ಬಾಹ್ಯ ವೇಷಭೂಷಣಗಳ ಅನುಕರಣೆಯನ್ನು ಮಾಡಿದ ಮಾತ್ರಕ್ಕೆ ಶಿಷ್ಯನಾದವನು ಗುರುತ್ವವನ್ನು ಪಡೆಯಲಾರನು. ಬಾಹ್ಯ ಚಿಹ್ನಗಳ ಜೊತೆಗೆ ಗುರುವಿನ ಆಂತರಿಕ ಲಕ್ಷಣವಾದ ಜ್ಞಾನವನ್ನು ಪಡೆದುಕೊಂಡಾಗಲೇ ಆತನು ಗುರುಪದಕ್ಕೆ ಯೋಗ್ಯನಾಗಿರುತ್ತಾನೆ.

ಆಹಾರ, ನಿದ್ರೆ, ಭಯ ಮತ್ತು ಮೈಥುನಗಳೆಂಬ ವ್ಯವಹಾರಗಳು ಪ್ರಾಣಿ ಹಾಗೂ ಮನುಷ್ಯರಲ್ಲಿ ಸಮಾನವಾಗಿಯೇ ಕಂಡುಬಂದರೂ, ಜ್ಞಾನ ಮೂಲಕವಾಗಿ ಮನುಷ್ಯನು ಪ್ರಾಣಿಗಳಿಗಿಂತಲೂ ವಿಲಕ್ಷಣವಾಗಿ ತೋರುವಂತೆ, ಸಾಮಾನ್ಯವಾದ ಜ್ಞಾನಸಂಪನ್ನರಾದ ಎಲ್ಲ ಮನುಷ್ಯರಿಗಿಂತಲೂ ಆತ್ಮಜ್ಞಾನ ಸಂಪನ್ನನಾದ ಸದ್ಗುರುವು ಅವರೆಲ್ಲರಿಗಿಂತಲೂ ವಿಲಕ್ಷಣನೂ, ಶ್ರೇಷ್ಠನೂ ಆಗಿ ತೋರುತ್ತಾನೆ. ಹೀಗೆ ಜ್ಞಾನ ಸಂಪನ್ನನಾದ ಸದ್ಗುರುವಿನಿಂದ, ಆತ್ಮಜ್ಞಾನವನ್ನು ಪಡೆದ ಶಿಷ್ಯನು ತನಗೆ ಪ್ರಾಪ್ತವಾದ ಜ್ಞಾನದ ಮೂಲಕ ಗುರುವಿನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ. ಗುರುಶಿಷ್ಯರ ಈ ಸಮಾನ ಸಾಮರಸ್ಯ ಸ್ಥಿತಿಯು ಜ್ಞಾನ ಮೂಲಕ ಪ್ರಾಪ್ತವಾಗಿರುವುದರಿಂದ ಇದಕ್ಕೆ ಜ್ಞಾನಪಾದೋದಕವೆಂದು ಕರೆದಿದ್ದಾರೆ.

ಪೂರ್ವೋಕ್ತರಾದ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯು ಅನುಭವಿಸುವ ವಿಲಕ್ಷಣವಾದ ಆನಂದದ ಅವಸ್ಥೆಯನ್ನು ಈ ಮುಂದೆ ಅನೇಕ ಉದಾಹರಣೆ ಗಳ ಮೂಲಕ ಸ್ಪಷ್ಟಪಡಿಸುತ್ತ–

ಅವಿದ್ಯಾರಾಹುನಿರ್ಮುಕ್ತೋಜ್ಞಾನಚಂದ್ರ ಸುನಿರ್ಮಲಃ ।
ಪ್ರಕಾಶತೇ ಪರಾಕಾಶೇ ಪರಾನಂದ ಮಹಾದ್ಯುತಿಃ ॥

ಅಜ್ಞಾನ ಮೇಘನಿರ್ಮುಕ್ತಃ ಪೂರ್ಣಜ್ಞಾನ ಸುಧಾಕರಃ ।
ಆನಂದಜಲಧೇರ್ವೃದ್ಧಿಮನುಪಶ್ಯನ್ ವಿಭಾಸತೇ ॥

ಜ್ಞಾನಚಂದ್ರೋದಯೇ ಜಾತೇ ಧ್ವಸ್ತಮೋಹತಮೋಭರಾಃ ।
ಪಶ್ಯಂತಿ ಪರಮಾಂ ಕಾಷ್ಠಾಂ ಯೋಗಿನಃ ಸುಖರೂಪಿಣೀಮ್ ॥

(ಸಿ. ಶಿ. ೧೯;೨೦–೨೨)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಗ್ರಹಣದ ನಂತರ ರಾಹುವಿನಿಂದ ಮುಕ್ತನಾದ ಚಂದ್ರನು ಅತ್ಯಂತ ನಿರ್ಮಲನೂ, ಪ್ರಕಾಶಮಾನನೂ ಆಗಿ ಆಕಾಶ ದಲ್ಲಿ ಬೆಳಗುತ್ತ ಸರ್ವರಿಗೂ ಆನಂದವನ್ನುಂಟು ಮಾಡುವಂತೆ, ಈ ಜ್ಞಾನಪಾದೋದಕ ಸ್ಥಿತಿಯನ್ನು ಪಡೆದ ಶಿವಯೋಗಿಯ ಜ್ಞಾನವೆಂಬ ಚಂದ್ರವು ಅವಿದ್ಯೆಯೆಂಬ ರಾಹುವಿನಿಂದ ಬಿಡಲ್ಪಟ್ಟದ್ದಾಗಿ ನಿರ್ಮಲ ಸ್ವರೂಪವನ್ನು ತಾಳಿ ಪರಾಕಾಶದಲ್ಲಿ ಪರಮಾನಂದ ರೂಪದಲ್ಲಿ ಪ್ರಕಾಶಿಸುತ್ತಿರುತ್ತದೆ. ಅಂದರೆ ಈ ಶಿವಯೋಗಿಯು ನಿರಾವರಣವಾದ ಜ್ಞಾನಾನಂದವನ್ನು ಅನುಭವಿಸುತ್ತಿರುತ್ತಾನೆಂಬ ತಾತ್ಪರ್ಯವು. ಪೂಜ್ಯಪಾದರು ಈ ಆನಂದದ ಪರಾಕಾಷ್ಠೆಯನ್ನೇ ಪುನಃ ಬೇರೊಂದು ರೂಪಕದ ಮೂಲಕ ತಿಳಿಯಪಡಿಸಿದ್ದನ್ನು ಇಲ್ಲಿ ಕಾಣುತ್ತೇವೆ. ಮೇಘದ ಆವರಣವನ್ನು ಕಳೆದುಕೊಂಡ ಪೌರ್ಣಿಮೆಯ ಚಂದ್ರನು ಸಮುದ್ರದ ವೃದ್ಧಿಗೆ ಹೇಗೆ ಕಾರಣನಾಗುತ್ತಾನೆಯೋ ಅದರಂತೆ ಅಜ್ಞಾನ ವೆಂಬ ಚಂದ್ರನು ಆತ್ಮಾನಂದ ರೂಪವಾದ ಸಮುದ್ರದ ವೃದ್ಧಿಗೆ ಕಾರಣನಾಗುತ್ತಾನೆ. ಅಂದರೆ ಸದ್ಗುರುವಿನಿಂದ ಆತ್ಮಜ್ಞಾನವನ್ನು ಪಡೆದ ಈ ಶಿವಯೋಗಿಗೆ ಆತ್ಮಾನಂದವು ಅಭಿವೃದ್ಧಿಯಾಗುತ್ತದೆ. ಇಂತಹ ಅಭಿವೃದ್ಧಿಗೊಂಡ ಆ ಆನಂದವನ್ನು ಈ ಶಿವಯೋಗಿಯು ಅನುಭವಿಸುತ್ತ, ತಲ್ಲೀನಾವಸ್ಥೆಯಲ್ಲಿ ಇರುತ್ತಾನೆ. ಆತ್ಮ ಸಾಕ್ಷಾತ್ಕಾರವೇ ಪೂರ್ಣತ್ವ ಪ್ರಾಪ್ತಿಯು, ಇದನ್ನು ಪಡೆದಾಗಲೇ ಪ್ರತಿಯೊಬ್ಬನು ಪರಿಪೂರ್ಣಾವಸ್ಥೆಯನ್ನು ತಲುಪಬಲ್ಲನು. ಈ ಪೂರ್ಣತ್ವ ಸ್ಥಿತಿಯನ್ನು ಪಡೆದವರಿಗೆ ಅದೆಂದೂ ಹಾನಿ ಶೋಕಾದಿಗಳು ಉಂಟಾಗುವುದಿಲ್ಲ. ಅಂತೆಯೇ ಉಪನಿಷತ್ತಿನ ಶಾಂತಿಮಂತ್ರದಲ್ಲಿ–

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಎಂಬುದಾಗಿ ಪೂರ್ಣವು ಅದೆಂದೂ ಅಪೂರ್ಣಾವಸ್ಥೆಯನ್ನು ಪಡೆಯಲಾರದೆಂಬುದಾಗಿ ತಿಳಿಸಿದ್ದಾರೆ. ಸಾಮಾನ್ಯವಾಗಿ ಗಣಿತ ಶಾಸ್ತ್ರದಲ್ಲಿ ಒಂದು ಅಂಕಿಯಲ್ಲಿ ಇನ್ನೊಂದನ್ನು ಕೂಡಿಸಿದಾಗ ಅಥವಾ ಕಳೆದಾಗ ಇಲ್ಲವೆ ಗುಣಿಸಿ ಭಾಗಿಸಿದಾಗ ಅಂಕಿಯ ಸ್ವರೂಪವು ಹೆಚ್ಚು ಕಡಿಮೆಯಾಗುವುದನ್ನು ಕಾಣುತ್ತೇವೆ. ಆದರೆ, ಪರಿಪೂರ್ಣನಾದ ಪರಮಾತ್ಮನಲ್ಲಿ

ಕೂಡಿಸಿದರೂ, ಗುಣಿಸಿ ಭಾಗಿಸಿದರೂ ಯಾವುದೇ ವ್ಯತ್ಯಾಸವಾಗುವುದಿಲ್ಲ. ಒಂದು ಸೊನ್ನೆಯಲ್ಲಿ ಇನ್ನೊಂದು ಸೊನ್ನೆಯನ್ನು ಕೂಡಿಸಿದರೂ, ಕಳೆದರೂ, ಗುಣಿಸಿ ಭಾಗಿಸಿದರೂ ಅದರ ಸ್ವರೂಪದಲ್ಲಿ ಯಾವುದೇ ವ್ಯತ್ಯಾಸವುಂಟಾಗದೆ ಸೊನ್ನೆಯೇ ಉಳಿಯುವುದನ್ನು ನೋಡುತ್ತೇವೆ. ಸೊನ್ನೆಯಲ್ಲಿಯೇ ವ್ಯತ್ಯಾಸವಾಗದಿರುವಾಗ, ಇನ್ನು ಪೂರ್ಣಸ್ವರೂಪನಾದ ಪರಮಾತ್ಮನಲ್ಲಿ ಅದು ಹೇಗೆ ತಾನೆ ವ್ಯತ್ಯಾಸವಾದೀತು ! ಹೀಗೆ ಪರಮಾತ್ಮನು ಪರಿಪೂರ್ಣನಾಗಿರೋಣದರಿಂದ ಅವನನ್ನು ಪೂಜ್ಯಪಾದರು ಪೂರ್ಣಜ್ಞಾನ ಸುಧಾಕರನೆಂಬುದಾಗಿ ಉಲ್ಲೇಖಿಸಿದ್ದಾರೆ. ಆಕಾಶದಲ್ಲಿಯ ಚಂದ್ರನು ಪೌರ್ಣಿಮೆಯಂದು ಮಾತ್ರ ಪೂರ್ಣವಾಗಿ ತೋರಿದರೂ ಉಳಿದ ದಿನಗಳಲ್ಲಿ ಕ್ಷಯವೃದ್ಧಿಗಳಿಂದ ಕೂಡಿದವನಾಗಿರುತ್ತಾನೆ. ಆದರೆ ಜ್ಞಾನಚಂದ್ರನು ಮಾತ್ರ ಸದಾ ಪರಿಪೂರ್ಣವೇ ಆಗಿರುತ್ತಾನೆ. ಇಂತಹ ಪರಿಪೂರ್ಣನಾದ ಜ್ಞಾನಚಂದ್ರನು ಸದಾ ಸನ್ನಿಹಿತವಾಗಿರುವುದರಿಂದ ಇದನ್ನು ಪಡೆದ ಶಿವಯೋಗಿಯ ಆನಂದ ಸಾಗರವು ಸದಾ ಉಕ್ಕೇರುತ್ತಲೇ ಇರುತ್ತದೆ. ಅಂದರೆ ಆತ್ಮಜ್ಞಾನ ಮೂಲಕವಾಗಿ ಗುರುವಿನೊಂದಿಗೆ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯು ಸದಾ ಆನಂದ ಸಾಗರದಲ್ಲಿ ನಿಮಗ್ನನಾಗಿರುತ್ತಾನೆಂಬುದಾಗಿ ತಿಳಿದುಕೊಳ್ಳಬೇಕು.

ಆಕಾಶದಲ್ಲಿಯ ಚಂದ್ರನುದಯವಾಗಲು ಅಂಧಕಾರವು ಇಲ್ಲದಾಗುವಂತೆ, ಶಿವಯೋಗಿಯ ಹೃದಯದಲ್ಲಿ ಜ್ಞಾನಚಂದ್ರನ ಉದಯವಾಗಿರುವುದರಿಂದ ಆತನ ಮೋಹರೂಪಿಯ ಅಂಧಕಾರವು ಇಲ್ಲದಾಗಿ ಹೋಗುತ್ತದೆ. ಆತ್ಮಜ್ಞಾನಿಯ ಮನಸ್ಸಿನಲ್ಲಿ ಅದಾವ ಮೋಹದ ವಿಷಯವು ಉಂಟಾಗಲಾರದು. ವಿಷಯ ಮೋಹದಿಂದ ಮುಕ್ತನಾದ ಇವನು ಆತ್ಮಾನಂದವನ್ನನುಭವಿಸುತ್ತ ಆನಂದದ ಪರಾಕಾಷ್ಠೆಯನ್ನು ಪಡೆದವನಾಗುತ್ತಾನೆ. ಹೀಗೆ ಪೂಜ್ಯಪಾದರು ಶಿವಯೋಗಿಯ ಜ್ಞಾನಕ್ಕೆ ಚಂದ್ರನ ಉಪಮೆಯನ್ನು ಕೊಟ್ಟು ತಿಳಿಯಪಡಿಸಿ ಈ ಮುಂದೆ ಆತನ ಜ್ಞಾನವನ್ನು ಸೂರ್ಯನಿಗೆ ಹೋಲಿಸಿ–

ಮಾಯಾರಜನ್ಯಾ ವಿರಮೇ ಬೋಧ ಸೂರ್ಯೇ ಪ್ರಕಾಶಿತೇ ।
ನಿರಸ್ತಸರ್ವವ್ಯಾಪಾರಶ್ಚಿತ್ರಂ ಸ್ವಪಿತಿ ಸಂಯಮೀ ॥

(ಸಿ. ಶಿ. ೧೯–೨೩)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಲೋಕದಲ್ಲಿ ರಾತ್ರಿಯು ಕಳೆದು ಸೂರ್ಯೋದಯವಾಗಲು ಎಲ್ಲ ಜನರು ನಿದ್ರೆಯಿಂದ ಎದ್ದವರಾಗಿ ತಮ್ಮ ತಮ್ಮ ಉದ್ಯೋಗಾದಿಗಳಲ್ಲಿ ಆಸಕ್ತರಾಗುವುದನ್ನು ಕಾಣುತ್ತೇವೆ. ಆದರೆ ಮಾಯೆಯೆಂಬ ರಾತ್ರಿಯ ಅವಸಾನವಾಗಿ ಜ್ಞಾನಸೂರ್ಯನು ಉದಯವಾಗಲು ಸಂಯಮಿಯಾದ ಯೋಗಿಯು ಎಲ್ಲ ವ್ಯವಹಾರಗಳನ್ನು ಬಿಟ್ಟು ನಿಶ್ಚಿಂತವಾಗಿ ನಿದ್ರಿಸುತ್ತಾನೆ. ಇದು ಆಶ್ಚರ್ಯವಲ್ಲವೆ ! ಸಾಮಾನ್ಯವಾಗಿ ಈ ಶ್ಲೋಕದ ಅರ್ಥದ ಬಗ್ಗೆ ವಿಚಾರಿಸಲು ಆಶ್ಚರ್ಯವಾಗಿ ತೋರಿದರೂ ಲಕ್ಷ್ಯಾರ್ಥ ಮೂಲಕವಾಗಿ ವಿಚಾರಿಸಲಾಗಿ ಅದು ಸೂಕ್ತವೇ ಎನಿಸುತ್ತದೆ. ಎಲ್ಲಿಯವರೆಗೆ ಮನಸ್ಸಿನಲ್ಲಿ ಮೋಹ ಮಾಯಾದಿಗಳು ಇರುತ್ತವೆಯೋ ಅಲ್ಲಿಯವರೆಗೆ ಅಜ್ಞರಾದ ಜೀವಿಗಳು ಇದೆಲ್ಲವೂ ವಾಸ್ತವೆಂಬುದಾಗಿ ತಿಳಿದು

ಆದರಲ್ಲಿ ಅತಿ ಜಾಗರೂಕತೆಯಿಂದ ವ್ಯವಹರಿಸುತ್ತಾರೆ. ಯಾವಾಗ ಜ್ಞಾನ ಸೂರ್ಯನ ಉದಯವಾಗುವುದೋ ಆಗ ಅಜ್ಞಾನ ಮೋಹಾದಿಗಳು ನಷ್ಟವಾಗಿ ಬಹಿರಂಗ ವ್ಯವಹಾರದ ಆಸಕ್ತಿಯು ಕಡಿಮೆಯಾಗಿ ಶಿವಯೋಗಿಯು ನಿದ್ರಿತನಂತೆ ನಿಶ್ಚಲನಾಗುತ್ತಾನೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿಯೂ ಸಹ-

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥

(ಭ. ಗಿ. ೨/೬೯)

ಈ ವಿಧವಾಗಿ ಉಪದೇಶಿಸಲಾಗಿದೆ. ಸಂಯಮಿಯಾದ ಯೋಗಿಯು ಸಾಮಾನ್ಯ ಜನರು ನಿದ್ರಿಸುವಾಗ ಎಚ್ಚರನಾಗಿರುತ್ತಾನೆ. ಆದರಂತೆ ಎಲ್ಲರೂ ಎಚ್ಚರರಾಗಿದ್ದಾಗ ಈತನು ನಿದ್ರಿಸುತ್ತಾನೆ ಎಂಬುದು ಈ ಶ್ಲೋಕದ ಸಾಮಾನ್ಯವಾದ ಅರ್ಥವು. ಆದರೆ ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರಿಸಲಾಗಿ ಅಜ್ಞರಾದ ಜೀವಿಗಳು ಲೋಕವ್ಯವಹಾರದಲ್ಲಿ ಎಚ್ಚರ ರಾಗಿದ್ದು, ಆಧ್ಯಾತ್ಮಿಕ ವ್ಯವಹಾರದಲ್ಲಿ ನಿದ್ರಿತರಾಗಿರುತ್ತಾರೆ. ಆದರೆ ಯೋಗಿಗಳಾದವರು ಆಧ್ಯಾತ್ಮಿಕ ವ್ಯವಹಾರದಲ್ಲಿ ಸದಾ ಎಚ್ಚರರಾಗಿದ್ದು, ಲೋಕವ್ಯವಹಾರದಲ್ಲಿ ಉದಾಸೀನ ರಾಗಿ ನಿದ್ರಿತರಂತೆ ವ್ಯವಹರಿಸುತ್ತಾರೆ. ಅಜ್ಞಜೀವಿಗಳು ಪರಮಾತ್ಮನನ್ನು ಮರೆತು ಪ್ರಪಂಚದಲ್ಲಿ ವ್ಯವಹರಿಸುತ್ತಿದ್ದರೆ, ಯೋಗಿಗಳು ಪ್ರಪಂಚವನ್ನು ಮರೆತು ಪರಮ ತತ್ತ್ವ ದಲ್ಲಿ ತಲ್ಲೀನರಾಗಿರುತ್ತಾರೆ. ಪರಮ ತತ್ತ್ವವು ಪರಮಾನಂದ ರೂಪವಾದುದು. ಆದರೆ ಪ್ರಪಂಚವು ದುಃಖರೂಪವಾದುದಾಗಿರುತ್ತದೆ. ಅಂತೆಯೇ ಅಜ್ಞಜೀವಿಗಳು ಸದಾ ದುಃಖಿ ಗಳಾಗಿದ್ದರೆ, ಯೋಗಿಗಳು ಸದಾ ಸುಖಿಗಳಾಗಿರುತ್ತಾರೆ.

ಒಂದಾನೊಂದು ಸಮಯ ಒಬ್ಬ ರಾಜನ ಕಡೆಗೆ ಒಬ್ಬಯೋಗಿಯು ಭಿಕ್ಷೆಗಾಗಿ ಹೋಗಿದ್ದನು. ರಾಜನು ಆ ಯೋಗಿಯನ್ನು ಉನ್ನತಾಸನದ ಮೇಲೆ ಕೂಡ್ರಿಸಿ ಪೂಜೆ ಮಾಡಿ, ಯೋಗ್ಯ ಸನ್ಮಾನವನ್ನು ಮಾಡಿ, ''ಹೇ ಯೋಗಿರಾಜನೆ ! ನೀವು ಬಹಳ ದೊಡ್ಡ ತ್ಯಾಗಿಗಳು, ಸಂಸಾರದ ಆಶೆ ಆಮಿಷಗಳನ್ನು ತೊರೆದವರು, ನಿಮ್ಮಂತಹ ದೊಡ್ಡ ತ್ಯಾಗಿ ಗಳನ್ನು ನಾವು ಎಲ್ಲಿಯೂ ನೋಡಲು ಸಾಧ್ಯವಿಲ್ಲ, ನಿಮ್ಮ ದರ್ಶನ ಪಡೆದು ನಾವು ಧನ್ಯ ರಾದೆವು'' ರಾಜನ ಈ ಆದರಪೂರ್ವಕವಾದ ನುಡಿಗಳನ್ನು ಕೇಳಿದ ಯೋಗಿರಾಜನು ''ಎಲೈ ಮಹಾರಾಜನೆ ! ನಿತ್ಯ ಪ್ರತಿನಿತ್ಯದ ರಾಜ್ಯ ಕಾರಭಾರದ ವ್ಯವಹಾರಗಳಲ್ಲಿ ದೇವರ ಧ್ಯಾನಾದಿಗಳನ್ನು ಸ್ವಲ್ಪು ಮಟ್ಟಿಗಾದರೂ ಮಾಡುವೆಯಲ್ಲವೇ'' ಎಂಬುದಾಗಿ ಪ್ರಶ್ನಿಸಿ ದನು. ಆಗ ರಾಜನು ''ಹೇ ಯೋಗಿಯೇ ! ಈ ಸಾಂಸಾರಿಕ ವ್ಯವಹಾರದಲ್ಲಿ ಹಗಲಿರುಳೂ ಪರಿತಪಿಸುತ್ತಿರುವ ನಮಗೆ, ಈಶ್ವರನ ಧ್ಯಾನಾದಿಗಳನ್ನು ಮಾಡಲು ಒಂದು ಕ್ಷಣವೂ ಸಹ ದೊರೆಯುವುದಿಲ್ಲ, ನಾವು ನಮ್ಮ ದೈನಂದಿನ ವ್ಯವಹಾರದಲ್ಲಿ ಈಶ್ವರನನ್ನು ಸಂಪೂರ್ಣವಾಗಿ ಮರೆತುಬಿಟ್ಟಿದ್ದೇವೆ'' ಎಂಬುದಾಗಿ ಉತ್ತರಿಸಿದ್ದನ್ನು ಕೇಳಿ ಯೋಗಿಯು ''ಹೇ ರಾಜನ್ ! ಪ್ರಪಂಚವನ್ನು ಮರೆತಿರುವ ನಮಗೆ ದೊಡ್ಡ ತ್ಯಾಗಿ ಗಳೆಂಬುದಾಗಿ ನೀನು ನಮ್ಮನ್ನು ವರ್ಣಿಸಿದೆ. ಆದರೆ ನೀನು ನುಡಿದ ನುಡಿಗಳನ್ನು ಕೇಳಿದಾಗ ನನಗಿಂತಲೂ ನೀನೇ ಬಹುದೊಡ್ಡ ತ್ಯಾಗಿಯೆಂಬುದು ತಿಳಿದು ಬರುತ್ತದೆ.''

ಯೋಗಿಯ ಈ ನುಡಿಗಳನ್ನು ಕೇಳಿದ ರಾಜನು ಗಾಬರಿಗೊಂಡವನಾಗಿ ''ಇದೇನು ವ್ಯಂಗ್ಯವಾಗಿ ನುಡಿಯುತ್ತಿದ್ದೀರಿ ? ಅದು ಹೇಗೆ ತಾನೆ ನಿಮಗಿಂತ ನಾವು ದೊಡ್ಡ ತ್ಯಾಗಿಗಳು ?'' ಎಂಬುದಾಗಿ ಪ್ರಶ್ನಿಸಲು, ಯೋಗಿವರ್ಯನು '' ಹೇ ರಾಜನ್ ! ಸರಿಯಾಗಿ ಆಲಿಸು, ಯಾರು ದೊಡ್ಡದನ್ನು ತ್ಯಜಿಸುವರೋ ಅವರು ದೊಡ್ಡ ತ್ಯಾಗಿಗಳು, ಸಣ್ಣದನ್ನು ತ್ಯಜಿಸಿದವರು ಸಣ್ಣತ್ಯಾಗಿಗಳು, ಪ್ರಪಂಚ ಹಾಗೂ ಪರಮಾತ್ಮರಲ್ಲಿ ಪ್ರಪಂಚಕ್ಕಿಂತಲೂ ಪರಮಾತ್ಮನು ಬಹುದೊಡ್ಡವನಾಗಿದ್ದಾನೆ. ನಾವು ಪ್ರಪಂಚವನ್ನು ತ್ಯಾಗ ಮಾಡಿದರೆ ನೀನು ಪರಮಾತ್ಮನನ್ನೇ ತ್ಯಾಗ ಮಾಡಿರುವಿ. ಅಂದಾಗ ನೀನು ದೊಡ್ಡತ್ಯಾಗಿಯೋ, ನಾನು ದೊಡ್ಡ ತ್ಯಾಗಿಯೋ ?'' ಇಲ್ಲಿ ಯೋಗಿಯು ವ್ಯಂಗ್ಯಾರ್ಥ ಮೂಲಕವಾಗಿ ಸಂಸಾರಿಗಳಿಗೆ ಪಾರಮಾರ್ಥಿಕ ವಿಷಯದಲ್ಲಿ ನಿದ್ರೆ ಹತ್ತಿರುವುದಾಗಿಯೂ ಹಾಗೂ ಯೋಗಿಗಳು ಆ ವಿಷಯದಲ್ಲಿ ಎಚ್ಚರಿರುವವರೆಂಬುದಾಗಿಯೂ ತಿಳಿಯಪಡಿಸಿದ್ದಾನೆ. ಅಂತೆಯೇ ಪೂಜ್ಯ ಪಾದರಾದ ರೇಣುಕ ಭಗವತ್ಪಾದರು ಜ್ಞಾನ ಪಾದೋದಕ ಸ್ಥಿತಿಯನ್ನು ಪಡೆದ ಶಿವಯೋಗಿಯ ಹೃದಯದಲ್ಲಿ ಜ್ಞಾನಸೂರ್ಯನುದಯವಾಗಲು, ಮಾಯೆಯೆಂಬ ಕತ್ತಲೆಯು ಹರಿದು ಹೋಗಿ ಸರ್ವ ಲೌಕಿಕ ವ್ಯವಹಾರ ಶೂನ್ಯವಾಗಿ, ನಿಶ್ಚಿಂತನಾಗಿ ನಿದ್ರಿಸುತ್ತಾನೆ ಎಂಬುದಾಗಿ ಬೋಧಿಸಿ ಆಧ್ಯಾತ್ಮ ವ್ಯವಹಾರದಲ್ಲಿ ಎಚ್ಚರಾಗಿದ್ದರೂ ಲೋಕವ್ಯವಹಾರದಲ್ಲಿ ಈತನು ಉದಾಸೀನನಾಗಿರುತ್ತಾನೆಂಬುದನ್ನು ತಿಳಿಯಪಡಿಸಿದ್ದಾರೆ.

ಈ ಪೂರ್ವೋಕ್ತವಾದ ಶಿವಯೋಗಿಯ ಮುಂದಿನ ಸ್ಥಿತಿಯು ಹೇಗಿರುತ್ತದೆ ಎಂಬ ಪ್ರಶ್ನೆ ಉದ್ಭವಿಸಿದಾಗ ಪೂಜ್ಯಪಾದರು ಪುನಃ–

ಅನಾದ್ಯವಿದ್ಯಾವಿಚ್ಛಿತ್ತಿವೇಲಾಯಾಂ ಪರಯೋಗಿನಃ ।
ಪ್ರಕಾಶತೇ ಪರಾನಂದಃ ಪ್ರಪಂಚೇನ ವಿನಾ ಕೃತಃ ॥

ನಿತ್ಯಾನಂದೇ ನಿಜಾಕಾರೇ ವಿಮಲೇ ಪರತೇಜಸಿ ।
ವಿಲೀನ ಚೇತಸಾಂ ಪುಂಸಾಂ ಕುತೋ ವಿಶ್ವವಿಕಲ್ಪನಾ ॥

(ಸಿ. ಶಿ. ೧೯;೨೪–೨೫)

ಹೀಗೆ ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಅನಾದಿಯಾದ ಅವಿದ್ಯೆಯು ಯಾವಾಗ ನಿವೃತ್ತವಾಗುವುದೋ ಆಗ ಈ ಶಿವಯೋಗಿಗೆ ಉಪಾಧಿರೂಪವಾದ ಪ್ರಪಂಚವಳಿದು ನಿರುಪಾಧಿಕವಾದ ಆನಂದದ ಅನುಭವವಾಗುತ್ತದೆ. ಸಾಮಾನ್ಯ ಜನರಿಗೆ ವಿಷಯ ಮೂಲಕವಾಗಿ ದೊರೆಯುವ ಆನಂದವು ಮಿಶ್ರಿತ ಆನಂದವಿರುತ್ತದೆ. ಆದರೆ ಶಿವಯೋಗಿಗೆ ದೊರೆಯುವ ಆನಂದವು ನಿರ್ವಿಷಯಕವಾದ ಪರಿಶುದ್ಧ ಆನಂದವಿರುತ್ತದೆ. ನಿತ್ಯವೂ ಆನಂದರೂಪವಾದ ತನ್ನ ಸ್ವರೂಪದಲ್ಲಿ ವಿಲೀನನಾದ ಶಿವಯೋಗಿಗೆ ಸಂಸಾರದ ಕಲ್ಪನೆಯಾದರೂ ಹೇಗೆ ತಾನೆ ಬಂದೀತು ! ಇಂತಹ ಸ್ವಸ್ವರೂಪಾನಂದವನ್ನು ಅನುಭವಿಸುವ ಶಿವಯೋಗಿಗೆ ಬ್ರಹ್ಮ ವಿಷ್ಣು ಮುಂತಾದ ದೇವತೆಗಳ ಆನಂದವಾದರೂ ಸರಿಸಾಟಿಯಾಗಲಾರದೆಂಬ ವಿಷಯವನ್ನು ಪೂಜ್ಯರು ಪುನಃ–

ಕುತೋ ಬ್ರಹ್ಮಾ ಕುತೋ ವಿಷ್ಣುಃ ಕುತೋ ರುದ್ರಃ ಕುತೋಃ ರವಿಃ ।
ಸಾಕ್ಷಾತ್ ಕೃತಪರಾನಂದಜ್ಯೋತಿಷಃ ಸಾಮ್ಯಕಲ್ಪನಾ ॥

(ಸಿ. ಶಿ. ೧೯–೨೬)

ಹೀಗೆ ತಿಳಿಯಪಡಿಸಿದ್ದಾರೆ. ತಾತ್ಪರ್ಯವೇನೆಂದರೆ ಜ್ಞಾನ ಪಾದೋದಕ ಸಂಪನ್ನನಾದ ಶಿವಯೋಗಿಗೆ ಬ್ರಹ್ಮ, ವಿಷ್ಣು, ರುದ್ರ, ರವಿ ಮೊದಲಾದ ದೇವತೆಗಳಾರೂ ಸರಿಸಮಾನ ರಾಗಲಾರರು. ಏಕೆಂದರೆ ಈ ಎಲ್ಲ ಪದವಿಗಳು ''ಆಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾ ಉಪಜೀವಂತಿ'' ಎಂಬ ವಚನದಂತೆ ಅಲ್ಪಗಳಾಗಿರುತ್ತವೆ. ಅಂದರೆ ಬ್ರಹ್ಮ ವಿಷ್ಣು ಆದಿ ಪದವಿಗಳಿಗಿಂತಲೂ ಸ್ವಸ್ವರೂಪ ಸ್ಥಿತಿಯು ಅತ್ಯಧಿಕವಾದುದು. ಅಂತೆಯೇ ಈ ಪದವಿಗಳ ಆನಂದದ ಜೊತೆಗೆ ಸಾಮ್ಯತೆಯನ್ನು ಕಲ್ಪಿಸಲು ಸಹಯೋಗ್ಯವಾಗು ವುದಿಲ್ಲ.

ಆತ್ಮಜ್ಞಾನದಿಂದ ದೊರೆಯುವ ಆನಂದವು ಸರ್ವೋತ್ಕೃಷ್ಟವಾದುದೆಂಬುದನ್ನು ತಿಳಿಸಲೋಸುಗ ಪೂಜ್ಯಪಾದರಾದ ರೇಣುಕ ಭಗವತ್ಪಾದರು ಪುನಃ–

ಅಪರೋಕ್ಷಪರಾನಂದ ವಿಲಾಸಸ್ಯ ಮಹಾತ್ಮನಃ ।
ಬ್ರಹ್ಮವಿಷ್ಣ್ವಾದಯೋ ದೇವಾ ವಿಶೇಷಾಃ ಸುಖಬಿಂದವಃ ॥
ಯನ್ಮಾತ್ರಾಸಹಿತಂ ಲೋಕೇ ವಾಂಛಂತಿ ವಿಷಯಂ ನರಾಃ ।
ತದಪ್ರಮೇಯಮಾನಂದಂ ಪರಮಂ ಕೋ ನ ವಾಂಛತಿ ॥

(ಸಿ. ಶಿ. ೧೯;೨೬–೨೮)

ಎಂಬುದಾಗಿ ತಿಳಿಯಪಡಿಸಿದ್ದಾರೆ. ಆತ್ಮಸ್ವರೂಪದ ಅಪರೋಕ್ಷಾನಂದವನ್ನು ಅನುಭವಿ ಸಿದ ಈ ಶಿವಯೋಗಿಗೆ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಅನುಭವಿಸುವ ಸುಖವು ಒಂದು ಬಿಂದುವಿಗೆ ಸಮಾನವಾಗಿರುವಂಥದ್ದು ; ಅರ್ಥಾತ್ ಅತ್ಯಂತ ಕನಿಷ್ಠವಾಗಿ ತೋರುತ್ತದೆ. ಜಗತ್ತಿನಲ್ಲಿ ತೋರುವ ವಿಷಯಗಳಲ್ಲಿಯ ಆನಂದವು ಈ ಆತ್ಮಾನಂದದ ಕಿಂಚಿದಂಶವನ್ನು ಪಡೆದೇ ಆನಂದರೂಪವಾಗಿ ತೋರುತ್ತಿರುತ್ತದೆ. ಇಂತಹ ವೈಷಯಿಕ ಆನಂದವನ್ನೇ ಜಗತ್ತಿನ ಜನರೆಲ್ಲ ಬಯಸುತ್ತಲಿರುತ್ತಾರೆ. ಯಾವುದರ ಕಿಂಚಿದಾನಂದ ದಿಂದ ವಿಷಯಗಳು ಆನಂದರೂಪವಾಗಿ ತೋರುತ್ತವೆಯೋ ಅಂತಹ ಪರಿಪೂರ್ಣವೂ, ಅಪರಿಮಿತವೂ, ಸರ್ವಶ್ರೇಷ್ಠವೂ ಆದ ಆ ಆತ್ಮಾನಂದವನ್ನು ಯಾರು ತಾನೆ ಅಪೇಕ್ಷಿಸ ಲಾರರು ?

ಜಗತ್ತಿನಲ್ಲಿಯ ಪ್ರತಿಯೊಬ್ಬ ಜೀವಿಯು ಸುಖವನ್ನು ಅಪೇಕ್ಷಿಸುತ್ತಲೇ ಇರುತ್ತಾನೆ. ತನಗೆ ದೊರೆತ ಸುಖವು ತನ್ನನ್ನು ಎಂದೂ ಕೈಬಿಡಬಾರದೆಂಬ ಅಭಿಲಾಷೆಯೂ ಅವನಿಗಿರುತ್ತದೆ. ಶಬ್ದಸ್ಪರ್ಶಾದಿ ವಿಷಯಗಳು ಪ್ರಾಪ್ತವಾದಾಗ ಸುಖವನ್ನು ಅನುಭವಿಸು ತ್ತಾನೆ. ಅವುಗಳು ತನ್ನನ್ನು ಬಿಟ್ಟು ದೂರವಾದಾಗ ಮತ್ತೆ ದುಃಖಿಯಾಗುತ್ತಾನೆ. ಇದೂ ಅಲ್ಲದೆ ಯಾವ ವಿಷಯದಿಂದ ಇವನು ತನ್ನನ್ನು ಸುಖಿಯನ್ನಾಗಿ ಭಾವಿಸುತ್ತಿದ್ದನೋ ಅದೇ ವಿಷಯದಿಂದಲೇ ಇಂದು ನಾನು ದುಃಖಿಯಾಗಿದ್ದೇನೆ ಎಂಬ ಅನುಭವವೂ ಸಹ ಜೀವಿ ಗಳಿಗೆ ಆಗುತ್ತಿರುತ್ತದೆ. ಇದೆಲ್ಲವನ್ನು ಪರ್ಯಾಲೋಚಿಸಿದಾಗ ಸುಖವು ವಿಷಯದಲ್ಲಿರದೆ

ಇಂದ್ರಿಯ ಹಾಗೂ ವಿಷಯಗಳ ಸಂಬಂಧವಾದಾಗ ಮನಸ್ಸು ಸುಸ್ಥಿರವಾಗುತ್ತದೆ. ಆ ಸುಸ್ಥಿರವಾದ ಮನದಲ್ಲಿ ಸುಖರೂಪವಾದ ಆತ್ಮದ ಪ್ರತಿಬಿಂಬ ಬಿದ್ದಾಗ ಜೀವಿಗೆ ಸುಖಾನುಭೂತಿಯಾಗುತ್ತದೆ. ಸುಖವನ್ನು ಅನುಭವಿಸುವ ಆತುರದಲ್ಲಿರುವ ಜೀವಿಗೆ ಇದು ಆತ್ಮ ಸುಖವೆಂಬುದರ ಅರಿವಾಗದೇ ವಿಷಯಜನ್ಯ ಸುಖವೆಂಬುದಾಗಿ ತಿಳಿದು ಕೊಂಡು ಅದರಲ್ಲಿಯೇ ಭ್ರಾಂತನಾಗುತ್ತಾನೆ. ವಿವೇಕ ಸಂಪನ್ನರಾದ ಜ್ಞಾನಿಗಳು ಇದರ ರಹಸ್ಯವನ್ನು ತಿಳಿದು ವಿಷಯಗಳತ್ತ ಅಭಿಮುಖರಾಗದೆ ಆತ್ಮಾಭಿಮುಖಿಗಳಾಗಿ ಸದಾ ಅಚ್ಚ ಸುಖಿಗಳಾಗಿರುತ್ತಾರೆ. ಅಂತೆಯೇ ಸಿದ್ಧಾಂತ ಶಿಖಾಮಣಿಯ ಶಿವಸ್ತುತಿಯಲ್ಲಿ ಪರಮಾತ್ಮನ ಸ್ವರೂಪವನ್ನು ವರ್ಣಿಸುವಾಗ ''ಯತ್ಸುಖೇನಾನುಮೋದತೇ'' ಎಂಬು ದಾಗಿ ಉಪದೇಶಿಸಿದ ಪೂಜ್ಯಪಾದರು ಪರಮಾತ್ಮನ ಸುಖದ ಅಂಶವನ್ನು ಪಡೆದೇ ಜಗತ್ತು ಸುಖರೂಪವಾಗಿ ತೋರುತ್ತಿದೆ ಎಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ. ಬೆಲ್ಲ ಹಾಗೂ ಸಕ್ಕರೆಗಳು ಪೂರ್ಣತಃ ಮಧುರ ಪದಾರ್ಥಗಳು. ಮಾಧುರ್ಯ ರಹಿತಗಳಾದ ಗೋದಿಯ ರವೆ, ಕಡಲೆ ಹಿಟ್ಟು ಮುಂತಾದವುಗಳಲ್ಲಿ ಬೆಲ್ಲ ಇಲ್ಲವೆ ಸಕ್ಕರೆಯನ್ನು ಬೆರಸಿ ಉಂಡೆ ಮೊದಲಾದ ಸಿಹಿ ತಿನಿಸುಗಳನ್ನು ತಯಾರಿಸಿದಾಗ ಅವುಗಳನ್ನು ತಿಂದ ವ್ಯಕ್ತಿ ರವೆ ಹಾಗೂ ಬೇಸನ್ನಿನ ಉಂಡೆಗಳು ಬಹು ಮಧುರಗಳಾಗಿವೆ ಎಂಬುದಾಗಿ ಹೇಳುತ್ತಾನೆ. ಸ್ವತಃ ಬೇಸನ್ನಿನಲ್ಲಿ ಅಥವಾ ರವೆಯಲ್ಲಿ ಮಾಧುರ್ಯವಿರದಿದ್ದರೂ ಬೆಲ್ಲ ಇಲ್ಲವೆ ಸಕ್ಕರೆಯ ಮಾಧುರ್ಯವನ್ನು ಪಡೆದು ತಾವೇ ಮಧುರಗಳಾಗಿ ತೋರುತ್ತವೆ. ಅವು ಗಳಲ್ಲಿ ಅಡಕವಾಗಿರುವ ಬೆಲ್ಲ ಇಲ್ಲವೆ ಸಕ್ಕರೆ ಎದ್ದು ತೋರುವುದಿಲ್ಲ, ಸಾಮಾನ್ಯನಾದವ ನಿಗೆ ಉಂಡೆಯೇ ಮಧುರವಾಗಿ ತೋರುವಂತೆ ವಿಷಯಾಸಕ್ತರಾದ ಜೀವಿಗಳಿಗೆ ವಿಷಯ ಗಳೇ ಸುಖಗಳಾಗಿ ತೋರುತ್ತವೆ. ವಸ್ತುತಃ ವಿಚಾರಿಸಲಾಗಿ ಉಂಡಿಯಲ್ಲಿರುವ ಮಾಧುರ್ಯವು ಬೆಲ್ಲ ಇಲ್ಲವೆ ಸಕ್ಕರೆಯದಾಗಿರುವಂತೆ ಶಬ್ದ ಸ್ಪರ್ಶಾದಿ ವಿಷಯಗಳಲ್ಲಿ ತೋರುವ ಆನಂದವಾದರೂ ಆತ್ಮಾನಂದವೇ ಆಗಿರುತ್ತದೆ. ಇಂತಹ ಆತ್ಮಾನಂದದ ಒಂದು ಅಂಶ ಆನಂದವನ್ನು ಪಡೆದ ವಿಷಯಗಳೇ ಇಷ್ಟು ಸುಖಗಳಾಗಿರುವಾಗ ಪರಿಪೂರ್ಣವಾದ ಆತ್ಮದ ಅಖಂಡ ಸುಖವು ಹೇಗಿರಬೇಕು ? ಎಂಬ ಜಿಜ್ಞಾಸೆಯಿಂದಲೆ ಶಿವಯೋಗಿಯು ಆತ್ಮಜ್ಞಾನಕ್ಕಾಗಿ ಪ್ರಯತ್ನಿಸುತ್ತಾನೆ.

ಸದ್ಗುರುವಿಗೆ ಶರಣಾಗತರಾಗಿ ಅವರಿಂದ ಆತ್ಮಬೋಧೆಯನ್ನು ಪಡೆದ ಬಳಿಕ ಆ ಆತ್ಮಾನಂದದಲ್ಲಿಯೇ ತಲ್ಲೀನರಾಗುತ್ತಾರೆ. ಹೀಗೆ ಉಪದೇಶ ಮಾಡುವ ಗುರು, ಅದನ್ನು ಆಲಿಸುವ ಶಿಷ್ಯ ಇವರೀರ್ವರ ಜ್ಞಾನದ ಸ್ಥಿತಿ ಸಮಾನ ಅವಸ್ಥೆಯನ್ನು ಪಡೆದಾಗ ಆ ಜ್ಞಾನ ಮೂಲಕವಾಗಿ ಅನುಭವಿಸುವ ಆನಂದದ ಸಮಾನ ಸಾಮರಸ್ಯ ಸ್ಥಿತಿಯೇ ಇಲ್ಲಿ ಜ್ಞಾನ ಪಾದೋದಕವೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ. ಹೀಗೆ ಗುರುಶಿಷ್ಯರ ಆನಂದವು, ಸಮಾನ ಸಾಮರಸ್ಯ ಸ್ಥಿತಿಯು ದೀಕ್ಷೆಯಿಂದ ಪ್ರಾಪ್ತವಾದಾಗ ದೀಕ್ಷಾ ಪಾದೋದಕವೆಂತಲೂ, ಶಿಕ್ಷೆ ಅರ್ಥಾತ್ ತರ್ಕ ವಿತರ್ಕಗಳ ಮೂಲಕ ಮಾಡುವ ಉಪದೇಶದಿಂದ ಈ ಸ್ಥಿತಿಯು ಪ್ರಾಪ್ತವಾದಾಗ ಅದಕ್ಕೆ ಶಿಕ್ಷಾ ಪಾದೋದಕವೆಂತಲೂ, ಅದರಂತೆ ಗುರುವಿನ ಜ್ಞಾನೋಪದೇಶದ ಮೂಲಕವಾಗಿ ಈ ಸಾಮರಸ್ಯಾನುಭೂತಿಯು ಪ್ರಾಪ್ತವಾಗಲು ಅದಕ್ಕೆ ಜ್ಞಾನಪಾದೋದಕವೆಂತಲೂ ಕರೆಯುತ್ತಾರೆ. ಜಿಜ್ಞಾಸು ಸದ್ಭಕ್ತರು

ಇಲ್ಲಿ ವಿವರಿಸಿದ ಪಾದೋದಕ ಶಬ್ದದ ಅರ್ಥವನ್ನು ಸರಿಯಾಗಿ ಅರ್ಥೈಸಿಕೊಂಡು ಅಂತಹ ಸ್ಥಿತಿಯನ್ನು ಪಡೆದುಕೊಳ್ಳಲು ಪ್ರತಿಯೊಬ್ಬರು ಪ್ರಯತ್ನಿಸಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೧ ನವ್ಹೆಂಬರ್, ೧೯೯೪
(ಸ್ಥಾನ ಜ್ಞಾನ ಮಂದಿರ ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಕ್ರಿಯಾನಿಷ್ಪತ್ತಿಸ್ಥಲ

ಧರ್ಮಾಭಿಮಾನಿಗಳೇ !

ಲಿಂಗ ಷಟ್ ಸ್ಥಲಾಂತರ್ಗತವಾದ ಶರಣಸ್ಥಲದಲ್ಲಿಯ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ಶರಣಸ್ಥಲದಲ್ಲಿಯ ನಾಲ್ಕನೆಯದಾದ ಅವಾಂತರ ಸ್ಥಲವೇ ಕ್ರಿಯಾ ನಿಷ್ಪತ್ತಿಸ್ಥಲವು. ಕ್ರಿಯಾನಿಷ್ಪತ್ತಿ ಶಬ್ದದಲ್ಲಿಯ ಕ್ರಿಯಾ ಎಂದರೆ ಕರ್ಮ, ನಿಷ್ಪತ್ತಿಯೆಂದರೆ ಪರಿಪಕ್ವತೆ, ಪರಿಪೂರ್ಣತೆ ಅಥವಾ ಪರಿಸಮಾಪ್ತಿ ಎಂದರ್ಥ. ಯಾವ ಸ್ಥಿತಿಯನ್ನು ತಲುಪಿದಾಗ ಸಕಲ ಕರ್ಮಗಳು ಪರಿಪಕ್ವಾವಸ್ಥೆಯನ್ನು ಪಡೆಯುತ್ತವೆಯೋ ಅಥವಾ ಕರ್ಮವು ಫಲಶೂನ್ಯ ಸ್ಥಿತಿಯನ್ನು ಪಡೆಯುತ್ತದೆಯೋ ಅದುವೇ ಕ್ರಿಯಾನಿಷ್ಪತ್ತಿಯು. ಈ ಸ್ಥಿತಿಯನ್ನು ತಿಳಿಸುವ ಸ್ಥಲವೇ ಕ್ರಿಯಾ ನಿಷ್ಪತ್ತಿಸ್ಥಲವು. ಅದನ್ನೇ ಪೂಜ್ಯಪಾದರು–

ಪರಕಾಯೇ ಕ್ರಿಯಾಪತ್ತಿಃ ಕಲ್ಪಿತೈವ ಪ್ರಕಾಶತೇ ।
ರಜ್ಜೌಭುಜಂಗವದ್ ಯಸ್ಮಾತ್ ಕ್ರಿಯಾನಿಷ್ಪತ್ತಿಮಾನಯಮ್ ॥

(ಸಿ. ಶಿ. ೧೯–೨೯)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಜ್ಞಾನಪಾದೋದಕ ಸ್ಥಿತಿಯನ್ನು ಪಡೆದ ಶಿವಯೋಗಿಯು ಶಾಸ್ತ್ರವಿಹಿತವಾದ ಕರ್ಮವನ್ನು ಮಾಡಿದರೂ, ಅದರಿಂದ ಫಲೋತ್ಪತ್ತಿಯಾಗಿ ಬಂಧನಕಾರಿಯಾಗಲಾರದು. ನೋಡಲಿಕ್ಕೆ ಕರ್ಮದಂತೆ ಕಂಡರೂ ಫಲಕೊಡುವ ಸಾಮರ್ಥ್ಯವು ಅದರಲ್ಲಿರುವುದಿಲ್ಲ, ಹಗ್ಗದಲ್ಲಿ ತೋರುವ ಕಲ್ಪಿತವಾದ ಸರ್ಪವು ನೋಡಲಿಕ್ಕೆ ಕೆಲವರಿಗೆ ಸರ್ಪದಂತೆ ತೋರಿದರೂ, ಅದರಿಂದ ಸರ್ಪದ ಯಾವ ವ್ಯವಹಾರವೂ ಆಗದಿರುವಂತೆ, ಈತನಿಂದ ಉಂಟಾದ ಕರ್ಮವೂ ಸಹ ಕಲ್ಪಿತ ಕರ್ಮದಂತೆ ಫಲಶೂನ್ಯವಾಗಿರುತ್ತದೆ. ''ಅಸ್ತೇದಗ್ಧಪಟನ್ಯಾಯಾತ್ ಕ್ರಿಯಾಮಾತ್ರಂ ಹಿ ನ ಕ್ರಿಯಾ'' ಎಂಬ ವೀರಾಗಮದ ವಚನದಂತೆ ದಗ್ಧಪಟವು ನೋಡಲಿಕ್ಕೆ ಮಡಿಚಿ ಇಟ್ಟ ವಸ್ತ್ರದಂತೆ ತೋರುತ್ತಿದ್ದರೂ, ಅದು ಸುಟ್ಟಿರೋಣದರಿಂದ ಉಡುವ ವ್ಯವಹಾರಕ್ಕೆ ಉಪಯೋಗವಾಗದಿರುವಂತೆ, ಈ ಶಿವಯೋಗಿಯು ಮಾಡಿದ ಕರ್ಮಗಳು ಫಲವನ್ನು ಕೊಡುವ ಸಾಮರ್ಥ್ಯವನ್ನು ಕಳೆದುಕೊಂಡಿರುತ್ತವೆ. ಹೀಗೆ ಶಿವಯೋಗಿಯ ಕರ್ಮಗಳು ಕೇವಲ ಕರ್ಮಗಳೇ ವಿನಃ ಅವುಗಳು ಫಲವನ್ನು ಕೊಡುವುದಿಲ್ಲವೆಂಬ ವಿಷಯವನ್ನು ಪ್ರತಿಪಾದಿಸುವ ಸ್ಥಲವೇ ಕ್ರಿಯಾ ನಿಷ್ಪತ್ತಿಸ್ಥಲವೆಂಬುದಾಗಿ ತಿಳಿದುಕೊಳ್ಳಬೇಕು. ಇದೇ ವಿಷಯವನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಜ್ಞಾನಿನಾಂ ಯಾನಿ ಕರ್ಮಾಣಿ ತಾನಿ ನೋ ಜನ್ಮಹೇತವಃ ।
ಅಗ್ನಿದಗ್ಧಾನಿ ಬೀಜಾನಿ ಯಥಾ ನಾಂಕುರಕಾರಣಮ್ ॥

(ಸಿ. ಶಿ. ೧೯–೩೦)

ಹೀಗೆ ಸ್ಪಷ್ಟಪಡಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವಯೋಗಿಯು ಮಾಡಿದ ಕರ್ಮದಿಂದ ಅವನಿಗೆ ಪುನರ್ಜನ್ಮವು ಒದಗಲಾರದು. ಹುರಿದ ಬೀಜಗಳು ಭೂಮಿಯಲ್ಲಿ ಬಿತ್ತಲ್ಪಟ್ಟರೂ, ಅವುಗಳಿಂದ ಹೇಗೆ ಅಂಕುರವು ಉತ್ಪನ್ನವಾಗುವುದಿಲ್ಲವೋ ಹಾಗೆಯೇ ಜ್ಞಾನಿಯ ಕರ್ಮಗಳು ಜ್ಞಾನಾಗ್ನಿಯಿಂದ ದಗ್ಧವಾಗಿರೋಣದರಿಂದ ಅವುಗಳು ಅವನ ಪುನರ್ಜನ್ಮಕ್ಕೆ ಕಾರಣಗಳಾಗಲಾರವು.

ಈ ಕರ್ಮಭೂಮಿಯಲ್ಲಿ ಜೀವಾತ್ಮನು ತಾನೇ ಮಾಡಿದ ಶುಭಾಶುಭ ಕರ್ಮಗಳಿಂದಾಗಿ ಪುನಃ ಪುನಃ ಜನ್ಮಗಳನ್ನು ಪಡೆದುಕೊಳ್ಳುತ್ತಿರುತ್ತಾನೆ. ಪ್ರಾರಬ್ಧ ಕರ್ಮವು ಭೋಗಿಸಿ ಪರಿಸಮಾಪ್ತಿಗೊಂಡಾಗ ಆ ಶರೀರವನ್ನು ತ್ಯಾಗ ಮಾಡಿ ಪುನಃ ಸಂಚಿತ ಕರ್ಮದಲ್ಲಿಯ ಪರಿಪಕ್ವಗೊಂಡ ಕರ್ಮಗಳನ್ನು ಭೋಗಿಸುವುದಕ್ಕಾಗಿ ಮತ್ತೊಂದು ಶರೀರವನ್ನು ಪಡೆಯುತ್ತಾನೆ. ಹೀಗೆ ಪ್ರಾರಬ್ಧ ಕರ್ಮವನ್ನು ಅನುಭವಿಸುತ್ತ ಮತ್ತೆ ಶುಭಾಶುಭ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಈ ವಿಧವಾಗಿ ಪ್ರಾರಬ್ಧ–ಸಂಚಿತ–ಆಗಾಮಿಗಳೆಂಬ ಕರ್ಮಜಾಲದಲ್ಲಿ ಸಿಲುಕಿಕೊಂಡ ಪ್ರತಿಯೊಬ್ಬ ಜೀವಾತ್ಮನು ಅದರಿಂದ ಹೊರಬರಲು ಸಾಧ್ಯವಾಗದೇ ''ಪುನರಪಿ ಜನನಂ ಪುನರಪಿ ಮರಣಂ'' ಎಂಬ ಜನ್ಮ ಮರಣ ಚಕ್ರದಲ್ಲಿ ಸುತ್ತುತ್ತಿರುತ್ತಾನೆ. ಆದರೆ ''ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ'' ಎಂಬ ಶರಣರ ನುಡಿಯಂತೆ ಕೋಟಿ ಕೋಟಿ ಸಂಖ್ಯೆಯಲ್ಲಿರುವ ಕರ್ಮಜಾಲದಲ್ಲಿ ಸಿಲುಕಿಕೊಂಡಿರುವ ಸಾಮಾನ್ಯ ಜೀವಿಗಳಲ್ಲಿ ಶರಣಸ್ಥಲವನ್ನು ತಲುಪಿದ ಶಿವಯೋಗಿಯು ತನಗುಂಟಾದ ಜ್ಞಾನ ಮೂಲಕ ತನ್ನ ಕರ್ಮಗಳನ್ನೆಲ್ಲ ದಗ್ಧ ಮಾಡಿಕೊಂಡ ಕಾರಣದಿಂದಾಗಿ ಅವು ಅವನ ಪುನರ್ಜನ್ಮಕ್ಕೆ ಕಾರಣವಾಗುವುದಿಲ್ಲ ಎಂಬುದಾಗಿ ಪೂಜ್ಯಪಾದರು ಇಲ್ಲಿ ತಿಳಿಯಪಡಿಸಿದ್ದಾರೆ. ಇದೇ ವಿಷಯವನ್ನೇ ಪುನಃ ಸ್ಪಷ್ಟಪಡಿಸಲೋಸುಗ–

> ಕರ್ಮಣಾ ಕಿಂ ಕೃತೇನಾಪಿ ಜ್ಞಾನಿನೋ ನಿರಹಂಕೃತೇಃ ।
> ವಿಕ್ರಿಯಾ ಪ್ರತಿಬಿಂಬಸ್ಥಾ ಕಿಂ ಕರೋತಿ ಹಿಮದ್ಯುತೇಃ ॥
>
> (ಸಿ. ಶಿ. ೧೯/೩೧)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಚಂದ್ರನ ಪ್ರತಿಬಿಂಬದಲ್ಲುಂಟಾದ ವಿಕಾರಗಳು ಬಿಂಬರೂಪನಾದ ಚಂದ್ರನಲ್ಲಿ ತೋರದಿರುವಂತೆ ಅಥವಾ ಅವನಿಗೆ ಸಂಬಂಧವಿಲ್ಲದಂತೆ ಮೂಲಾಹಂಕಾರರಹಿತನಾದ ಜ್ಞಾನಿಯಿಂದ ಆಚರಿಸಲ್ಪಟ್ಟ ಕರ್ಮಗಳು ಅವನಿಗೆ ಯಾವ ಫಲವನ್ನೂ ಕೊಡುವುದಿಲ್ಲ.

ದರ್ಪಣ, ಜಲ ಮುಂತಾದ ಉಪಾಧಿಗಳಲ್ಲಿ ಚಂದ್ರನ ಪ್ರತಿಬಿಂಬವು ಸ್ಪಷ್ಟವಾಗಿ ತೋರುತ್ತಿರುತ್ತದೆ. ಪ್ರತಿಬಿಂಬಕ್ಕೆ ಕಾರಣೀಭೂತವಾದ ಉಪಾಧಿಯಾದ ಜಲ ಅಥವಾ ದರ್ಪಣದಲ್ಲಿ ವಿಕಾರವುಂಟಾದಾಗ ಆ ವಿಕಾರದ ಪರಿಣಾಮವು ಪ್ರತಿಬಿಂಬದ ಮೇಲಾಗುವುದೇ ವಿನಃ ಬಿಂಬರೂಪನಾದ ಚಂದ್ರನಲ್ಲಿ ಅದಾವ ವಿಕೃತಿಯೂ ತೋರದಿರುವುದು ಸರ್ವಾನುಭವಸಿದ್ಧವಾದ ವಿಷಯವು. ಅದರಂತೆ ಮೂಲಾಹಂಕಾರ ಶೂನ್ಯನಾದ ಶಿವಯೋಗಿಗೆ ಯಾವ ಕರ್ಮವೂ ಬಂಧನವನ್ನುಂಟು ಮಾಡಲಾರದು. 'ಅಹಂ

ಕರೋಮಿ' ಎಂಬ ಕರ್ತೃತ್ವಾಭಿಮಾನವಿದ್ದಾಗಲೇ ಕರ್ಮವು ಬಂಧನಕಾರಿಯಾಗುವುದು. ಆ ಅಭಿಮಾನವಿಲ್ಲದೆ ಮಾಡಿದ ಕರ್ಮಗಳು ನಿರ್ಲಿಪ್ತಗಳಾಗುತ್ತವೆ.

''ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ'' (೩/೨೭) ಎಂಬ ಗೀತೋಕ್ತಿಯಂತೆ ಅಹಂಕಾರದಿಂದ ಮೋಹಿತವಾದ ಅಂತಃಕರಣವುಳ್ಳವನು ನಾನು ಕರ್ತಾ ಎಂಬುದಾಗಿ ಅಭಿಮಾನಿಸುತ್ತಾನೆ. ನಾನು ಕರ್ಮ ಮಾಡುತ್ತೇನೆಂಬ ಭಾವನೆ ಅಹಂಕಾರದಿಂದಲೇ ಉತ್ಪನ್ನವಾಗುತ್ತದೆ. ಕರ್ಮಗಳು ಪ್ರಕೃತಿಯ ಧರ್ಮಾನುಸಾರವಾಗಿ ನಡೆಯುತ್ತಿರುತ್ತವೆ. ಅಹಂಕಾರಿಯಾದವನಿಗೆ ಇದರ ಪರಿಜ್ಞಾನವಿರುವುದಿಲ್ಲ, ಅಂತೆಯೇ ಅಂತಃಕರಣದ ಧರ್ಮವಾಗಿರುವಂಥ ಕರ್ತೃತ್ವ ಭೋಕ್ತೃತ್ವ ಭಾವನೆಗಳನ್ನು ಅಜ್ಞಾನಾದವನು ಆತ್ಮದ ಮೇಲೆ ಆರೋಪಿಸಿಕೊಂಡು ವ್ಯವಹರಿಸುತ್ತಿರುತ್ತಾನೆ ಅಂತೆಯೇ ''ಅಹಂ ಕರ್ತಾ, ಅಹಂ ಭೋಕ್ತಾ'' ಎಂಬುದಾಗಿ ಹೇಳುತ್ತ ಕರ್ಮ ಬಂಧನದಲ್ಲಿ ಸಿಲುಕಿಕೊಂಡು ಬಳಲುತ್ತಿರುತ್ತಾನೆ. ಆತ್ಮಜ್ಞಾನ ಸಂಪನ್ನನಾದ ಶಿವಯೋಗಿಯು ಅಹಂಕಾರದಿಂದ ದೂರನಾಗಿದ್ದು, ಪ್ರಕೃತಿಯಿಂದಾಗುವ ಎಲ್ಲ ವ್ಯವಹಾರಗಳಿಗೆ ತನ್ನನ್ನು ಸಾಕ್ಷಿಯನ್ನಾಗಿ ತಿಳಿದುಕೊಂಡಿರುತ್ತಾನೆ. ಅಂತೆಯೇ ಇವನ ಮೇಲೆ ಕರ್ಮದ ಫಲದ ಪ್ರಭಾವವು ಉಂಟಾಗುವುದಿಲ್ಲ, ಅದನ್ನೇ ಪೂಜ್ಯಪಾದರು ಚಂದ್ರ ಹಾಗೂ ಚಂದ್ರ ಬಿಂಬದ ಉದಾಹರಣೆಯ ಮೂಲಕ ತಿಳಿಸಿದ್ದಾರೆ. ಪೌರ್ಣಿಮೆಯ ರಾತ್ರಿಯಲ್ಲಿ ಸರೋವರದ ಸ್ವಚ್ಛವಾದ ಹಾಗೂ ನಿಸ್ತರಂಗವಾದ ಜಲದಲ್ಲಿ ಚಂದ್ರನ ಪ್ರತಿಬಿಂಬವು ಸುಸ್ಪಷ್ಟವಾಗಿ ತೋರುತ್ತಿರುತ್ತದೆ. ಆಗ ಒಬ್ಬ ವ್ಯಕ್ತಿಯು ಒಂದು ಕಲ್ಲನ್ನು ಆ ಸರೋವರದಲ್ಲಿ ಎಸೆದಾಗ ನೀರಿನ ತರಂಗಗಳೆದ್ದು, ಚಂದ್ರ ಪ್ರತಿಬಿಂಬವು ಅನೇಕ ಭಾಗಗಳಲ್ಲಿ ಖಂಡಿತವಾದುದಾಗಿ ತೋರುತ್ತದೆ. ಉಪಾಧಿಯ ವಿಕಾರಗಳು ಪ್ರತಿಬಿಂಬದಲ್ಲಿ ತೋರಿರುವಂತೆ ಬಿಂಬರೂಪನಾದ ಚಂದ್ರನಲ್ಲಿ ತೋರುವುದಿಲ್ಲ, ಹಾಗೆಯೇ ಕರ್ತೃತ್ವ-ಭೋಕ್ತೃತ್ವಗಳು ಅಂತಃಕರಣದ ಧರ್ಮಗಳಾಗಿರುವುದರಿಂದ, ಈ ಅಂತಃಕರಣದ ಅಭಿಮಾನರಹಿತನಾದ ಶಿವಯೋಗಿಯಿಂದ ಅದಾವ ಕರ್ಮಗಳು ಮಾಡಲ್ಪಟ್ಟರೂ, ಬಿಂಬರೂಪನಾದ ಚಂದ್ರನಂತೆ ನಿರ್ವಿಕಾರನಾಗಿರುತ್ತಾನೆ ಎಂಬುದಾಗಿ ತಿಳಿದುಕೊಳ್ಳಬೇಕು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇದೇ ವಿಷಯವನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ-

> ಚಂದ್ರಸ್ಯ ಮೇಘಸಂಬಂಧಾತ್ ಯಥಾ ಗಮನಕಲ್ಪನಾ ।
> ತಥಾ ದೇಹಸ್ಯ ಸಂಬಂಧಾದಾರೋಪ್ಯಾ ಸ್ಯಾತ್ ಕ್ರಿಯಾತ್ಮನಃ ॥
>
> (ಸಿ. ಶಿ. ೧೯/೩೨)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಆಕಾಶದಲ್ಲಿರುವ ಚಂದ್ರನ ಮೇಲೆ ಮೇಘ ಮಂಡಲವು ಸಂಚರಿಸುತ್ತಿರುವಾಗ ನೋಡುವವರಿಗೆ ಚಂದ್ರನೇ ಸಂಚರಿಸುವಂತೆ ತೋರುತ್ತದೆ. ಅದರಂತೆ ಶರೀರದ ಸಂಬಂಧದಿಂದಾಗಿ ಜ್ಞಾನಿಯು ಕರ್ತಾ ಎಂಬುದಾಗಿ ತೋರುತ್ತಾನೆ. ನಿಶ್ಚಲವಾದ ವಸ್ತುವಿನ ಸಾನ್ನಿಧ್ಯದಲ್ಲಿ ಚಲಾಯಮಾನ ವಸ್ತುವು ಬಂದಾಗ ನಿಶ್ಚಲವಾದುದೇ ಚಲಾಯಮಾನವಾದುದಾಗಿ ತೋರುತ್ತದೆ. ರೈಲು ನಿಲ್ದಾಣದಲ್ಲಿ ತಾನು

ಕುಳಿತ ರೈಲಿನ ಪಕ್ಕದಲ್ಲಿ ಇನ್ನೊಂದು ರೈಲು ಗಾಡಿಯು ಚಲಿಸುತ್ತಿರಲಾಗಿ ತಾನು ಕುಳಿತ ಗಾಡಿಯೇ ಚಲಿಸುವಂತೆ ಭಾಸವಾಗುತ್ತದೆ. ಇದೂ ಅಲ್ಲದೆ ರೈಲು ಗಾಡಿಯು ವೇಗವಾಗಿ ಓಡುತ್ತಿರುವಾಗ ಹಳಿಯ ಪಕ್ಕದಲ್ಲಿರುವ ಗಿಡ ಮರಗಳು ನಾವು ಹೊರಟ ದಿಕ್ಕಿನ ವಿರುದ್ಧ ದಿಕ್ಕಿನಲ್ಲಿ ವೇಗವಾಗಿ ಓಡುವಂತೆಯೂ ತೋರುವುದು ಸರ್ವಾನುಭವಸಿದ್ಧವೇ ಸರಿ. ಈ ಎಲ್ಲ ಘಟನೆಗಳ ಬಗ್ಗೆ ಪರಾಮರ್ಶಿಸಲಾಗಿ ಸ್ಥಿರವಾದದ್ದು ಚಲಾಯಮಾನವಾಗಿ ತೋರುವುದು ಕಂಡುಬರುತ್ತದೆ. ಅಂತೆಯೇ ಪೂಜ್ಯಪಾದರು ಚಂದ್ರ ಹಾಗೂ ಮೇಘಗಳ ಉದಾಹರಣೆಯ ಮೂಲಕ ಅಕರ್ತನಾದ ಆತ್ಮನಲ್ಲಿ ಕರ್ತೃತ್ವವು ಹೇಗೆ ತೋರುತ್ತದೆಯೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಹೀಗೆ ಅಕರ್ತನಾದ ಜ್ಞಾನಿಯು ಅಂತಃಕರಣ ಹಾಗೂ ಶರೀರಾದಿ ಮೂಲಕವಾಗಿ ಕರ್ತೃವಿನಂತೆ ತೋರುತ್ತಾನೆ. ವಾಸ್ತವಿಕವಾಗಿ ಆತ್ಮಜ್ಞಾನ ಸಂಪನ್ನನಾದ ಶಿವಯೋಗಿಯು ಆತ್ಮದೃಷ್ಟಿಯಿಂದ ಸುಸ್ಥಿರನಾಗಿದ್ದರೂ, ಆತನ ಶರೀರಾದಿಗಳು ಮಾತ್ರ ಪ್ರಕೃತಿಧರ್ಮದ ಅನುಸಾರವಾಗಿ ಕ್ರಿಯೆಗಳನ್ನು ಮಾಡುತ್ತಿರುತ್ತವೆ. ಈತನು ತನ್ನನ್ನು ಶರೀರಾದಿಗಳಿಗೆಲ್ಲ ಸಾಕ್ಷಿಯನ್ನಾಗಿ ಭಾವಿಸಿಕೊಂಡಿರುತ್ತಾನೆ.

ಈ ಶಿವಯೋಗಿಯ ಸಾಕ್ಷಿ ಭಾವದ ಅಲಿಪ್ತತೆಯನ್ನು ಇನ್ನಷ್ಟು ದೃಢಗೊಳಿಸುವುದಕ್ಕೋಸುಗ ಪೂಜ್ಯಪಾದರು–

ಜ್ಞಾನೀ ಕರ್ಮನಿರೂಢೋಽಪಿ ಲಿಪ್ಯತೇ ನ ಕ್ರಿಯಾಫಲೈಃ ।
ಘೃತಾದಿನಾ ಯಥಾ ಜಿಹ್ವಾ ಭೋಕ್ತ್ರೀ ಚಾಪಿ ನ ಲಿಪ್ಯತೇ ॥

(ಸಿ. ಶಿ. ೧೯–೩೩)

ಹೀಗೆ ಬೇರೊಂದು ಉದಾಹರಣೆಯಿಂದ ತಿಳಿಸಿದ್ದಾರೆ. ಬಾಯಲ್ಲಿರುವ ನಾಲಿಗೆಯು ಪ್ರತಿದಿನ ಎಣ್ಣೆ ತುಪ್ಪ ಮುಂತಾದ ಜಿಗುಟು ಪದಾರ್ಥಗಳನ್ನು ಆಸ್ವಾದಿಸುತ್ತಿದ್ದರೂ, ಆ ಜಿಗುಟನ್ನು ನಾಲಿಗೆಯು ತನಗೆ ಅಂಟಿಸಿಕೊಳ್ಳದಿರುವಂತೆ, ಜ್ಞಾನಿಯಾದವನು ಕರ್ಮಾದಿಗಳನ್ನು ಮಾಡುವುದರಲ್ಲಿ ತತ್ಪರನಾಗಿದ್ದರೂ, ಅದರ ಫಲಗಳಿಂದ ತಾನು ನಿರ್ಲಿಪ್ತನೇ ಆಗಿರುತ್ತಾನೆ. ಆ ಕರ್ತೃತ್ವ ಭಾವನೆಯಿಂದ ಕರ್ಮವನ್ನು ಮಾಡುತ್ತಿರೋಣದರಿಂದ ಅವನಿಗೆ ಕರ್ಮಫಲದ ಲೇಪವು ಆಗುವುದಿಲ್ಲವೆಂಬುದಾಗಿ ತಿಳಿದುಕೊಳ್ಳಬೇಕು. ಶ್ರೀ ತುಲಸೀದಾಸರೂ ಸಹ–

ತುಲಸಿ ಜಗ ಮೇ ಯೂ ರಹೋ । ಜೈಸಿ ರಸನಾ ಮುಖಮಾಹೀ ।
ಖಾತಿ ಘೀ ಔರ ತೇಲ ನಿತ । ಫಿರ ಭೀ ಚಿಕನೀ ನಾಹಿ ॥

ತಮ್ಮ ಈ ದೋಹಾದಲ್ಲಿ ನಾಲಿಗೆಯ ಉದಾಹರಣೆಯನ್ನು ಕೊಟ್ಟೇ ಪ್ರತಿಯೊಬ್ಬರಿಗೂ ಅದರಂತೆ ನಿರ್ಲಿಪ್ತವಾಗಿರಬೇಕೆಂಬುದಾಗಿ ಬೋಧಿಸಿದ್ದಾರೆ. ಯಾರು ನಾಲಿಗೆಯಂತೆ ನಿರ್ಲಿಪ್ತವಾಗಿ ಕರ್ಮಗಳನ್ನು ಮಾಡುತ್ತಿರುತ್ತಾರೆಯೋ ಅವರ ಮೇಲೆ ಕರ್ಮಫಲದ ಪಾಶವು ಬೀಳುವುದಿಲ್ಲ.

ಜ್ಞಾನಿಗಳಾದವರು ಬದುಕುವ ಕಲೆಯನ್ನು ಕಲಿತು, ತಾವು ನಿರ್ಲಿಪ್ತರಾಗಿ ಬದುಕುವುದರ ಜೊತೆಗೆ ಅನ್ಯರೂ ಸಹ ಆ ಬದುಕನ್ನು ಬದುಕಲೆಂಬುದಾಗಿ ಅನೇಕ ಯುಕ್ತಿ–ಪ್ರಯುಕ್ತಿಗಳ ಮೂಲಕ ಬೋಧಿಸುತ್ತಿರುವುದನ್ನು ಇಲ್ಲಿ ಕಾಣುತ್ತೇವೆ. 'ಉಂಡು

ಉಪವಾಸಿ, ಬಳಸಿ ಬ್ರಹ್ಮಚಾರಿ' ಎಂಬ ನಾಡು ನುಡಿಗಳು ಇಂತಹ ಜ್ಞಾನಿಗಳನ್ನು ಕುರಿತೇ ಹೇಳಿದಂಥವುಗಳಾಗಿವೆ.

ಒಂದಾನೊಂದು ಸಮಯದಲ್ಲಿ ಒಬ್ಬ ಹೆಣ್ಣುಮಗಳು ನದಿಯ ಆಚೆಯ ದಡದಲ್ಲಿ ತಪೋಮಗ್ನನಾಗಿರುವ ದೂರ್ವಾಸ ಮಹರ್ಷಿಗೆ ಉಣಬಡಿಸುವುದಕ್ಕಾಗಿ ಪಕ್ವಾನ್ನವನ್ನು ತಯಾರಿಸಿಕೊಂಡು ನದಿಯ ದಡಕ್ಕೆ ಬಂದಾಗ ನದಿಯು ತುಂಬಿ ಹರಿಯುತ್ತಿತ್ತು, ನದಿಯನ್ನು ದಾಟುವ ಯಾವ ಸಾಧನೆಯೂ ಇಲ್ಲದಿರುವುದರಿಂದ ಆ ಹೆಣ್ಣುಮಗಳು ಅತ್ಯಂತ ಚಿಂತಾತುರಳಾದಾಗ ಶ್ರೀ ಕೃಷ್ಣಭಗವಂತನು ಅಲ್ಲಿಗೆ ಆಗಮಿಸುತ್ತಾನೆ. ಆಗ ಅವಳು ಶ್ರೀಕೃಷ್ಣನಿಗೆ ತನ್ನ ನಿವೇದನೆಯನ್ನು ಮಾಡಿಕೊಂಡಾಗ ಕೃಷ್ಣಪರಮಾತ್ಮನು–ಹೇ ಸಾಧ್ವಿ ! ನಿನಗೆ ನಾನೊಂದು ಮಂತ್ರವನ್ನು ಹೇಳುತ್ತೇನೆ. ಅದನ್ನು ನಾನು ಹೇಳಿದಂತೆ ನೀನು ನುಡಿದಾಗ ನದಿಯು ನಿನಗೆ ದಾರಿಕೊಡುತ್ತದೆ. ಶ್ರೀಕೃಷ್ಣನ ಈ ನುಡಿಗಳನ್ನು ಕೇಳಿದ ಆ ಸಾಧ್ವಿಯು ಅದಾವ ಮಂತ್ರ ? ಕೃಪೆಮಾಡಿ ಬೇಗ ಹೇಳಿ ಎಂದು ಬೇಡಿಕೊಂಡಾಗ ಶ್ರೀ ಕೃಷ್ಣನು ಹೇ ಸಾಧ್ವಿಯೇ !–''ಕೃಷ್ಣನು ಹದಿನಾರು ಸಾವಿರ ಹೆಂಡಂದಿರು ಹಾಗೂ ಅರವತ್ತು ಸಾವಿರ ಮಕ್ಕಳಿಂದ ಕೂಡಿಕೊಂಡವನಾಗಿ ಸಂಸಾರ ಮಾಡುತ್ತಿದ್ದರೂ ಅವನು ಬ್ರಹ್ಮಚಾರಿಯಾಗಿದ್ದಾನೆ'' ಎಂಬುದಾಗಿ ನೀನು ಹೇಳಿ ನದಿಯನ್ನು ದಾರಿ ಬಿಡುವುದಾಗಿ ಕೇಳಿಕೋ. ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿದಾಗ ಆ ಹೆಣ್ಣುಮಗಳು ಗೊಂದಲದಲ್ಲಿ ಸಿಲುಕಿಕೊಂಡಳು. ಇಷ್ಟು ಜನ ಹೆಂಡಂದಿರು ಹಾಗೂ ಮಕ್ಕಳಿರುವಾಗ ಈತನು ಅದು ಹೇಗೆ ತಾನೇ ಬ್ರಹ್ಮಚಾರಿಯಾಗಿರಬಲ್ಲನು ಎಂಬ ವಿಚಾರಗಳ ತುಮುಲ ಯುದ್ಧವು ಮನದಲ್ಲಿ ನಡೆಯತೊಡಗಿತು. ಅಂತೆಯೇ ಕೆಲಕಾಲ ಮುಂದೆ ಹೆಜ್ಜೆಯಿಡದೆ ಸ್ತಬ್ಧವಾಗಿ ನಿಂತುಕೊಂಡಳು. ಆ ಹೆಣ್ಣುಮಗಳ ಈ ಪರಿಸ್ಥಿತಿಯನ್ನು ಕಂಡ ಕೃಷ್ಣ ಪರಮಾತ್ಮನು ಅವಳನ್ನುದ್ದೇಶಿಸಿ ಪುನಃ ಹೇಳುತ್ತಾನೆ–ನೀನು ನಿನ್ನ ಮನದ ಯಾವ ವಿಚಾರದ ಕಡೆಯೂ ಲಕ್ಷ್ಯ ಕೊಡಬೇಡ. ನಾನು ಹೇಳಿದಂತೆ ಹೇಳು, ನದಿಯು ದಾರಿ ಬಿಟ್ಟರೆ ಹೋಗು, ಇಲ್ಲವಾದರೆ ಮರಳಿ ಬಾ. ಬೇರೊಂದು ಮಂತ್ರವನ್ನು ಹೇಳುವೆನು. ಶ್ರೀಕೃಷ್ಣನ ಈ ನುಡಿಗಳನ್ನು ಕೇಳಿದ ಆ ಸಾಧ್ವಿಯು ನದಿಯ ದಡಕ್ಕೆ ಹೋಗಿ ಹೇ ಮಾತಾ ಶ್ರೀಕೃಷ್ಣನು ಬಳಸಿಯೂ ಬ್ರಹ್ಮಚಾರಿಯಾಗಿದ್ದೇ ನಿಜವಿದ್ದರೆ ನನಗೆ ಆ ದಡವನ್ನು ಸೇರಲು ದಾರಿ ಬಿಡು ಎಂಬುದಾಗಿ ಕೇಳಿಕೊಂಡಳು. ಆಗ ಇದಕ್ಕಿದ್ದಂತೆ ನದಿಯ ಪ್ರವಾಹವು ಇಬ್ಭಾಗವಾಗಿ ಮಧ್ಯದಲ್ಲಿ ರಸ್ತೆಯುಂಟಾಯಿತು. ಆಗ ಇವಳು ಕಾಲು ನಡಿಗೆಯಿಂದ ನದಿಯನ್ನು ದಾಟಿ ಆ ದಡವನ್ನು ಸೇರಿ ಅಲ್ಲಿ ಕುಳಿತಿರುವ ದೂರ್ವಾಸ ಮಹರ್ಷಿಗೆ ಪಂಚಪಕ್ವಾನ್ನಗಳ ಭೋಜನವನ್ನು ಮಾಡಿಸಿದಳು. ಮಹರ್ಷಿಯ ಭೋಜನವು ಪೂರೈಸಿದ ಬಳಿಕ ಮರಳಿ ತನ್ನೂರಿಗೆ ಹೋಗಬೇಕೆನ್ನುವಷ್ಟರಲ್ಲಿ ಅವಳು ಬಂದ ದಾರಿಯು ಮುಚ್ಚಿಹೋಗಿ ಪ್ರವಾಹವು ಬಹುಜೋರಾಗಿ ಹರಿಯುತ್ತಿತ್ತು. ಆಗ ಆ ಹೆಣ್ಣುಮಗಳು ಮಹರ್ಷಿಯನ್ನುದ್ದೇಶಿಸಿ, ಹೇ ಗುರುವರ್ಯ ಈ ದಂಡೆಯಿಂದ ಆ ದಂಡೆ ಸೇರಲು ನದಿಯ ಮಧ್ಯದಲ್ಲಿ ದಾರಿ ಬಿಡುವಂತೆ ಏನಾದರೂ ಮಂತ್ರವನ್ನು ಉಪದೇಶಿಸಿ ಎಂದು ಕೇಳಿಕೊಂಡಳು. ಆಗ ಆ ದೂರ್ವಾಸನು ಹೇ ತಾಯೆ, ಈ ದೂರ್ವಾಸನು ಇಷ್ಟೆಲ್ಲ ಪಕ್ವಾನ್ನವನ್ನು ಭುಂಜಿಸಿದ್ದರೂ ಉಪವಾಸವಿದ್ದುದೇ ನಿಜವಾಗಿದ್ದರೆ ದಾರಿಯನ್ನು ಕೊಡು ಎಂದು

ಕೇಳಿಕೋ. ಋಷಿಯ ಈ ಮಾತನ್ನು ಕೇಳಿದಾಗ ಅವಳು ಅತ್ಯಂತ ವಿಸ್ಮಯಗೊಳ್ಳುತ್ತಾಳೆ. ಏನಿದು ಉಂಡು ಸಹ ಉಪವಾಸಿಯಾಗಿರಲು ಬರುತ್ತದೆಯೇ ? ಆದರೂ ಪರೀಕ್ಷಿಸೋಣ ಎಂಬುದಾಗಿ ವಿಚಾರಿಸಿ ನದಿಯ ದಡಕ್ಕೆ ಬಂದು ಹೇ ಮಾತೆಯೇ ! ದೂರ್ವಾಸ ಮಹರ್ಷಿಯು ಉಂಡು ಸಹ ಉಪವಾಸಿಯಾಗಿದ್ದುದು ನಿಜವಾಗಿದ್ದರೆ, ನನಗೆ ಹೋಗಲು ದಾರಿ ಬಿಡು ಎಂಬುದಾಗಿ ಪ್ರಾರ್ಥಿಸಿದೊಡನೆ ಮೊದಲಿನಂತೆ ದಾರಿ ಬಿಟ್ಟಿತು. ಆಗ ಆ ಹೆಣ್ಣು ಮಗಳು ಆಚೆಯ ದಡವನ್ನು ಸೇರಿದಾಗ ಕೃಷ್ಣ ಪರಮಾತ್ಮನು ಇನ್ನೂ ಅಲ್ಲಿಯೇ ಇದ್ದ. ಈ ಹೆಣ್ಣುಮಗಳು ತನಗುಂಟಾದ ಸಂದೇಹವನ್ನು ಪರಿಹರಿಸಿಕೊಳ್ಳಲು ಕೃಷ್ಣನ ಬಳಿಗೆ ಹೋಗಿ, ''ಹೇ ದೇವಾ ! ಬಳಸಿಯೂ ಬ್ರಹ್ಮಚಾರಿಯಾಗಿರುವುದು ಮತ್ತು ಉಂಡು ಉಪವಾಸಿಯಾಗಿರುವುದು ಹೇಗೆ ಸಾಧ್ಯ ? ಒಂದೇ ವ್ಯಕ್ತಿಯಲ್ಲಿ ಈ ಪರಸ್ಪರ ್ರಿರುದ್ಧ ಗುಣಗಳು ಅದು ಹೇಗೆ ತಾನೆ ಇರಬಲ್ಲವು ? ಬಳಸಿದ ಮೇಲೆ ಬ್ರಹ್ಮಚಾರಿ ? ಉಂಡ ಬಳಿಕ ಉಪವಾಸಿ ಹೇಗೆ ? ಇದರ ರಹಸ್ಯಾರ್ಥವನ್ನು ತಿಳಿಸುವ ಕೃಪೆ ' ಎಂಬುದಾಗಿ ಬೇಡಿಕೊಂಡಳು. ಆಗ ಕೃಷ್ಣ ಪರಮಾತ್ಮನು ''ಎಲೈ ಸಾಧ್ವಿಯೇ ಸಂಪನ್ನನಾದ ಯೋಗಿಯು ತನ್ನಾತ್ಮವನ್ನು, ಶರೀರ, ಇಂದ್ರಿಯ, ಮನ ಮತ್ತು ಬ ಉಪಾಧಿಗಳಿಗಿಂತ ವಿಲಕ್ಷಣವೂ, ಇವೆಲ್ಲಕ್ಕೂ ಸಾಕ್ಷಿ ಸ್ವರೂಪವೂ ಎಂಬು ರುಕೊಂಡಿರುತ್ತಾನೆ. ಕೃರ್ತೃತ್ವ-ಭೋಕ್ತೃತ್ವಾದಿ ಧರ್ಮಗಳು ಅಂತಃಕರಣ ರೋಣದರಿಂದ ಅದುವೆ ಕರ್ತಾ, ಅದುವೆ ಭೋಕ್ತಾ ನಾನು ಮಾತ್ರ ಅಭೋಕ್ತಾ ಎಂಬುದಾಗಿ ಅವನಿಗೆ ದೃಢಜ್ಞಾನವಾಗಿರುತ್ತದೆ. ಅಂತೆಯೇ ಸಿಯೂ ಬ್ರಹ್ಮಚಾರಿಯಾಗಿ, ಉಂಡೂ ಉಪವಾಸಿಯಾಗಿ ಇರಲು ಸಾಧ್ಯ ಆದ ಕಾರಣ ಇದರಲ್ಲಿ ನೀನು ಅಚ್ಚರಿಪಡುವ ಕಾರಣವಿಲ್ಲ'' ವೆಂಬುದಾಗಿ ಗ ಆ ಹೆಣ್ಣು ಮಗಳಿಗೆ ಮನದ ಸಂದೇಹಗಳೆಲ್ಲ ದೂರಾಗಿ ರಹಸ್ಯಾರ್ಥದ ಅರಿವಾಯಿತಂತೆ. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜ್ಞಾನಿಯನ್ನು ನಾಲಿಗೆಗೆ ಹೋಲಿಸಿ ಅವನನ್ನು ನಿರ್ಲಿಪ್ತನೆಂದು ಬೋಧಿಸಿದ್ದಾರೆ.

ಜ್ಞಾನಿಯ ಈ ಅಸಂಗ ಸ್ಥಿತಿಯನ್ನೇ ದೃಢಪಡಿಸಲೋಸುಗ ಪೂಜ್ಯಪಾದರು ಪುನಃ-

ನಿರಸ್ತೋಪಾಧಿಸಂಬಂಧೇ ಜೀವೇ ಯಾ ಯಾ ಕ್ರಿಯಾಸ್ಥಿತಿಃ ।
ಸಾ ಸಾ ಪ್ರತೀತಿಮಾತ್ರೇಣ ನಿಷ್ಫಲಾ ಚಾತ್ರ ಲೀಯತೇ ॥

(ಸಿ. ಶಿ. ೧೯-೩೪)

ಎಂಬುದಾಗಿ ಅಗಸ್ತ್ಯರನ್ನುದ್ದೇಶಿಸಿ ಉಪದೇಶಿಸಿದ್ದಾರೆ. ಇಲ್ಲಿ ಉದ್ಭವಿಸುವ ಪ್ರಶ್ನೆ ಯೇನೆಂದರೆ ನಾಲಿಗೆಯಲ್ಲಿ ಜಲತತ್ವವು ವಿಶೇಷವಾಗಿರುವುದರಿಂದ ತುಪ್ಪ, ಎಣ್ಣೆ ಮುಂತಾದವುಗಳ ಜಿಗುಟುತನ ಕೈ ಬೆರಳಿಗೆ ಹತ್ತುವಂತೆ ನಾಲಿಗೆಗೆ ಅಂಟಿಕೊಳ್ಳುವು ದಿಲ್ಲೇನೋ ನಿಜ. ಆದರೆ ಜ್ಞಾನಿಯಾದವನಿಗೆ ಅದಾವ ಕಾರಣದಿಂದ ಕರ್ಮಫಲಗಳು ಅಂಟಿಕೊಳ್ಳುವುದಿಲ್ಲ ? ಇದಕ್ಕೆ ಉತ್ತರ ರೂಪವಾಗಿ ಪೂಜ್ಯಪಾದರು ತಿಳಿಸಿದ್ದೇನೆಂದರೆ ಜ್ಞಾನಿಯಾದವನು ಶರೀರ, ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಅಹಂಕಾರಗಳೆಂಬ ಉಪಾಧಿಗಳ ಸಂಬಂಧವನ್ನು ಅರ್ಥಾತ್ ಅವುಗಳ ಬಗ್ಗೆ ಇರುವ ಮಮತ್ವಾಭಿಮಾನ

ವನ್ನು ಸಂಪೂರ್ಣವಾಗಿ ಬಿಟ್ಟಿರೋಣದರಿಂದ ಅವನು ಯಾವುದೇ ಕ್ರಿಯೆಯನ್ನು ಮಾಡಿದರೂ ಅದು ತೋರಿಕೆಗೆ ಮಾತ್ರವೇ ವಿನಃ ಫಲಕಾರಿಯಾಗುವುದಿಲ್ಲ, ಕರ್ಮ ಫಲವನ್ನು ಅನುಭವಿಸಬೇಕಾದರೆ ಅಹಂಕಾರವೇ ಮೂಲ ಕಾರಣವಾಗಿರುತ್ತದೆ. ಆದರೆ ಶಿವಜ್ಞಾನ ಸಂಪನ್ನನಾದ ಈ ಶಿವಯೋಗಿಯಲ್ಲಿ ಆ ಅಹಂಕಾರವೇ ಇಲ್ಲದಿರೋಣದರಿಂದ ಅವನಿಗೆ ಕರ್ಮಫಲದ ಲೇಪವಾಗುವುದಿಲ್ಲ.

ಜ್ಞಾನಿಗೆ ಕರ್ಮಫಲವು ಇಲ್ಲವೆಂದು ಹೇಳುವಂತೆ ಕರ್ಮವೇ ಇಲ್ಲವೆಂದು ಯಾಕೆ ಹೇಳಬಾರದು ಎಂಬ ಶಂಕೆಯುಂಟಾದಾಗ ಅದಕ್ಕೆ ಸಮಾಧಾನರೂಪವಾಗಿ ಪೂಜ್ಯಪಾದರು–

ಗಚ್ಛನ್ ತಿಷ್ಠನ್ ಸ್ವಪನ್ ವಾಪಿ ನ ನಿಷ್ಕರ್ಮಾಸ್ತಿ ಕಶ್ಚನ ।
ಸ್ವಭಾವೋ ದೇಹಿನಾಂ ಕರ್ಮ ಜ್ಞಾನಿನಾಂ ತತ್ತು ನಿಷ್ಫಲಮ್ ॥
(ಸಿ. ಶಿ. ೧೯–೩೫)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ನಾವು ವಾಸಿಸುವ ಈ ಭೂಮಿಗೆ ಕರ್ಮಭೂಮಿಯೆಂದು ಕರೆಯುತ್ತಾರೆ. ಇಲ್ಲಿ ವಾಸಿಸುವ ಪ್ರತಿಯೊಬ್ಬನು ಕರ್ಮವನ್ನು ಮಾಡಿಕೊಂಡಿರಲೇಬೇಕು. ಹೋಗುವ, ಬರುವ, ನಿಲ್ಲುವ, ನಿದ್ರಿಸುವ ಮುಂತಾದ ವ್ಯವಹಾರಗಳೆಲ್ಲ ಒಂದಿಲ್ಲೊಂದು ಪ್ರಕಾರದ ಕರ್ಮಗಳೇ ಆಗಿರುತ್ತವೆ. ಅಂತೆಯೇ ''ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್‌ಶತಂ ಸಮಾಃ'' (ಈಶಾವಾಸ್ಯೋಪ ನಿಷತ್ ೧/೩) ''ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'' (ಗೀತಾ ೩/೫) ಎಂಬ ಶ್ರುತಿ ಹಾಗೂ ಸ್ಮೃತಿ ವಚನಗಳಲ್ಲಿ ಕರ್ಮದ ಅಪರಿಹಾರ್ಯತೆಯ ಬಗ್ಗೆ ಒತ್ತಿ ಹೇಳಲಾಗಿದೆ. ಈ ಜಗತ್ತಿನಲ್ಲಿ ನೂರು ವರ್ಷ ಬದುಕಿರಬೇಕಾದರೆ ಕರ್ಮಗಳನ್ನು ಮಾಡಿ ಕೊಂಡೇ ಇರಬೇಕಾಗುತ್ತದೆ. ಕರ್ಮವನ್ನು ಮಾಡದವನಿಗೆ ಈ ಭೂಮಿಯಲ್ಲಿ ವಾಸಿಸಲು ಅವಕಾಶವೇ ಇಲ್ಲ. ಕೆಲಸ ಮಾಡಿಕೊಂಡಿರುವುದು ಸರಳ. ಆದರೆ ಏನನ್ನೂ ಮಾಡದೆ ಇರುವುದು ಬಹು ಕಠಿಣವಾದುದು. ಅಂತೆಯೇ ಜಗತ್ತಿನ ಪ್ರತಿಯೊಬ್ಬ ಜೀವಿಯು ಒಂದಿಲ್ಲೊಂದು ಕರ್ಮದಲ್ಲಿ ತನ್ನನ್ನು ತೊಡಗಿಸಿಕೊಂಡಿರುತ್ತಾನೆ. ಕರ್ಮವನ್ನು ಮಾಡು ವುದು ಶರೀರದ ಸ್ವಭಾವವೇ ಆಗಿರುತ್ತದೆ. ಅಂತೆಯೇ ಹೋಗುವ, ಬರುವ, ನಿಲ್ಲುವ, ನಿದ್ರಿಸುವ ಮುಂತಾದ ಕ್ರಿಯೆಗಳು ಶರೀರದ ಸ್ವಾಭಾವಿಕ ಕರ್ಮಗಳಾಗಿವೆ. ಏನನ್ನೂ ಮಾಡದೇ ಸುಮ್ಮನೇ ಕುಳಿತುಕೊಳ್ಳುವುದೂ ಸಹ ಒಂದು ಕರ್ಮವೇ, ಅಂದಾಗ ಜ್ಞಾನಿಗೂ ಸಹ ಈ ಶರೀರಾದಿ ಉಪಾಧಿಗಳಿರುವಾಗ ಅವನಿಂದಲೂ ಕರ್ಮಗಳು ಸದಾ ಸಂಭವಿಸುತ್ತಲೇ ಇರುತ್ತವೆ. ಕರ್ಮದಿಂದ ಅವನಿಗೂ ಮುಕ್ತಿಯಿರುವುದಿಲ್ಲ, ಆದರೆ ಜ್ಞಾನಿ ಗಳು ಮಾಡುವ ಕರ್ಮಕ್ಕೂ, ಅಜ್ಞರು ಮಾಡುವ ಕರ್ಮಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಅಜ್ಞ ಜೀವಿಗಳು ಅಹಂಕಾರಿಗಳಾಗಿರೋಣದರಿಂದ ಅವರು ಕರ್ಮಫಲದಿಂದ ಲಿಪ್ತ ರಾಗುವರು. ಆದರೆ ಜ್ಞಾನಿಯಾದವನು ಆ ಅಹಂಕಾರದಿಂದ ಮುಕ್ತನಾಗಿರೋಣದರಿಂದ ಅವನಿಗೆ ಕರ್ಮದ ಫಲವು ಲೇಪವಾಗುವುದಿಲ್ಲ, ಕರ್ಮ ಮಾಡುವುದರಲ್ಲಿ ಜ್ಞಾನಿ ಅಜ್ಞಾನಿಗಳು ಸಮಾನವಾಗಿ ಕಂಡು ಬಂದರೂ, ಅಜ್ಞ ಜೀವಿಯು ಕರ್ಮಫಲದಿಂದ ಲಿಪ್ತ

ನಾಗುತ್ತಾನೆ. ಜ್ಞಾನಿಯು ಮಾತ್ರ ಅಲಿಪ್ತನಾಗಿ ಉಳಿಯುತ್ತಾನೆ. ಇದುವೇ ಅವರೀರ್ವರಲ್ಲಿರುವ ಮಹದಂತರವು.

ಇದೇ ವಿಷಯವನ್ನೇ ಇನ್ನಷ್ಟು ದೃಢಗೊಳಿಸುತ್ತ ಪೂಜ್ಯಪಾದರು–

ಪರಿಪೂರ್ಣಮಹಾನಂದಭಾವಿನಃ ಶುದ್ಧಚೇತಸಃ ॥
ನ ಭವೇತ್ ಕರ್ಮಕಾರ್ಪಣ್ಯಂ ನಾನಾಭೋಗಫಲಪ್ರದಮ್ ॥

(ಸಿ. ಶಿ. ೧೯–೩೬)

ಹೀಗೆ ಆದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ನಿರ್ಮಲಾಂತಃಕರಣವುಳ್ಳ, ನಿತ್ಯವೂ, ಪರಿಪೂರ್ಣವೂ ಆದ ಆನಂದವನ್ನು ಸದಾ ಅನುಭವಿಸುತ್ತಿರುವ ಶಿವಯೋಗಿಗೆ ನಾನಾ ವಿಧ ಸುಖ–ದುಃಖಗಳನ್ನುಂಟು ಮಾಡುವ ಪುಣ್ಯಪಾಪಗಳೆಂಬ ಕರ್ಮಗಳ ಪೀಡೆಯು ಉಂಟಾಗುವುದಿಲ್ಲ. ಶಿವಯೋಗಿಯಿಂದ ವಿಹಿತ ಕರ್ಮವೇ ಘಟಿಸಲಿ ಅಥವಾ ನಿಷಿದ್ಧ ಕರ್ಮವೇ ಸಂಭವಿಸಲಿ ಅವುಗಳಿಂದ ಪುಣ್ಯ ಪಾಪಗಳು ಉತ್ಪನ್ನಗಳಾಗುವುದಿಲ್ಲ. ಏಕೆಂದರೆ ಪುಣ್ಯ ಪಾಪಗಳ ಉತ್ಪತ್ತಿಗೆ ಮೂಲ ಕಾರಣವಾದ ಅಹಂಕಾರವೇ ಆತನಲ್ಲಿ ಅಳಿದುಹೋಗಿರುತ್ತದೆ. ಇದುವೇ ಶಿವಯೋಗಿಯ ಕರ್ಮಯೋಗವು. ಇದಕ್ಕೇನೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕ್ರಿಯಾನಿಷ್ಪತ್ತಿಯೆಂಬುದಾಗಿ ಕರೆದಿದ್ದಾರೆ. ಕರ್ಮವನ್ನು ಮಾಡುವ ಇದೊಂದು ಶ್ರೇಷ್ಠವಾದ ಕಲೆಯು ''ಯೋಗಃ ಕರ್ಮಸು ಕೌಶಲಂ'' ಎಂಬ ಗೀತೆಯ ಉಕ್ತಿಯಲ್ಲಿಯೂ ಸಹ ಅಲಿಪ್ತವಾಗಿ ಕರ್ಮ ಮಾಡುವುದನ್ನು ಕರ್ಮಯೋಗವೆಂದು ಹೇಳಲಾಗಿದೆ. ಈ ಕಲೆಯನ್ನು ಯಾರು ಕರತಲಾಮಲಕ ಮಾಡಿ ಕೊಳ್ಳುವರೋ ಅವರು ಕರ್ಮಭೂಮಿಯಲ್ಲಿದ್ದೂ ಕರ್ಮಫಲದಿಂದ ಅಲಿಪ್ತರಾಗುವರು. ಕರ್ಮವನ್ನು ಬಿಟ್ಟು, ನಿಷ್ಕರ್ಮಿಗಳಾಗುವುದಕ್ಕಿಂತ, ಕರ್ಮಫಲವನ್ನು ತ್ಯಜಿಸಿ ಕರ್ಮ ಯೋಗಿಯಾಗುವುದು ಶ್ರೇಷ್ಠವಾದುದು. ನಿಷ್ಕರ್ಮಿಯಾದವನು ಎಲ್ಲರಿಗೂ ಬೇಸರ ನಾಗುತ್ತಾನೆ. ಅವನು ಲೋಕದ ನಿಂದೆಗೆ ಪಾತ್ರನಾಗುತ್ತಾನೆ. ಆದರೆ ಕರ್ಮ ಯೋಗಿಯು ಎಲ್ಲರಿಂದಲೂ ಗೌರವಾದರಗಳನ್ನು ಪಡೆದು ಆದರ್ಶ ವ್ಯಕ್ತಿಯಾಗುತ್ತಾನೆ. ಇದೆಲ್ಲವನ್ನು ಪರ್ಯಾಲೋಚಿಸಿದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕ್ರಿಯಾನಿಷ್ಪತ್ತಿ ಸ್ಥಲದಲ್ಲಿ ಕ್ರಿಯೆಯ ಮಹತ್ವ, ಅದನ್ನು ಆಚರಿಸುವ ರೀತಿ–ನೀತಿಗಳನ್ನು ಬಹು ಮಾರ್ಮಿಕವಾಗಿ ಅನೇಕ ಉದಾಹರಣೆಗಳ ಮೂಲಕ ತಿಳಿಯಪಡಿಸಿದ್ದಾರೆ. ಜಿಜ್ಞಾಸು ಗಳಾದ ಸದ್ಭಕ್ತರು ಈ ಸ್ಥಲದ ರಹಸ್ಯಾರ್ಥವನ್ನು ತಿಳಿದುಕೊಂಡು ನಿಷ್ಕರ್ಮಿಗಳಾಗದೇ ಕರ್ಮಯೋಗಿಗಳಾಗಿ, ಕ್ರಿಯಾನಿಷ್ಪತ್ತಿಸಂಪನ್ನರಾಗಿ ಬಾಳಿರೆಂಬುದಾಗಿ ಹಾರೈಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೨ ನವ್ಹೆಂಬರ್, ೧೯೫೪
(ಸ್ಥಾನ ಜ್ಞಾನ ಮಂದಿರ ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಭಾವನಿಷ್ಪತ್ತಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ನೀವು ಇಲ್ಲಿಯವರೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲದಲ್ಲಿ ಬರುವ ಶರಣಸ್ಥಲದ ಅವಾಂತರ ಸ್ಥಲವಾದ ಕ್ರಿಯಾನಿಷ್ಪತ್ತಿಸ್ಥಲದ ಬಗ್ಗೆ ಆಶೀರ್ವಚನವನ್ನು ಆಲಿಸಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾಗಿ ಬಂದ ಅವಾಂತರಸ್ಥಲವೇ ಭಾವನಿಷ್ಪತ್ತಿಸ್ಥಲವು. ತನ್ನ ಮನದಲ್ಲಿ ಉಂಟಾಗಿರುವ ಭಾವನೆಗಳು ಕಲ್ಪಿತವಾದವುಗಳೆಂಬುದಾಗಿ ತಿಳಿದು ಕೊಂಡು, ಅವುಗಳಿಗೆ ತನ್ನನ್ನು ಸಾಕ್ಷಿಯನ್ನಾಗಿ ಭಾವಿಸಿಕೊಂಡಿರುವುದೇ ಭಾವನಿಷ್ಪತ್ತಿಯು. ''ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಃ ಶಿವಾತ್ಮಕಃ'' ಎಂಬ ಆಚಾರ್ಯರ ಉಕ್ತಿಗನುಸಾರವಾಗಿ ಸಂಪೂರ್ಣವಾಗಿ ಶಿವಮಯವಾಗಿರುವ ಮನಸ್ಸಿನ ವೃತ್ತಿಯೇ ಭಾವನೆಯು. ಹೀಗೆ ತನ್ನಲ್ಲಿ ಉಂಟಾಗಿರುವ ಭಾವನೆಯೂ ಸಹ ಕಲ್ಪಿತವಾದುದೆಂಬು ದಾಗಿ ತಿಳಿದು ಅದಕ್ಕೂ ಸಹ ತಾನು ಸಾಕ್ಷಿಯಾಗಿ ವರ್ತಿಸುವುದೇ ಭಾವನಿಷ್ಪತ್ತಿ. ಅದನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭಾವಃ ಪ್ರತೀಯಮಾನೋಽಪಿ ಪರಕಾಯೇ ತು ಕಲ್ಪಿತಃ ।
ಶುಕ್ತೌ ರಜತವದ್ಯಸ್ಮಾದ್ಭಾವನಿಷ್ಪತ್ತಿಮಾನಯಮ್ ॥

(ಸಿ. ಶಿ. ೧೯–೩೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯ ಪ್ರತೀತಿ ಯಾಗುತ್ತಿದ್ದರೂ, ಅದು ಹೇಗೆ ಕಲ್ಪಿತವಾಗಿರುತ್ತದೆಯೋ ಅದರಂತೆ ಕ್ರಿಯಾನಿಷ್ಪತ್ತಿಯನ್ನು ಪಡೆದ ಶಿವಯೋಗಿಯಲ್ಲಿ ಭಾವನಾತ್ಮಕವಾದ ಮನಸ್ಸಿನ ವೃತ್ತಿಯು ಉದಯವಾದರೂ, ಅದೂ ಸಹ ಕಲ್ಪಿತವಾದುದೆಂದು ತಿಳಿದುಕೊಳ್ಳುವ ಸ್ಥಿತಿಯೇ ಭಾವನಿಷ್ಪತ್ತಿಯು.

ಜ್ಞಾನಿಯಾದವನಿಗೆ ಭಾವದ ಸಂಬಂಧವೇ ಇರುವುದಿಲ್ಲವೆಂದ ಬಳಿಕ ಸಚ್ಚಿದಾನಂದ ಸ್ವರೂಪನಾದ ಶಿವನ ವಿಷಯಕವಾಗಿ ಭಾವನೆಯನ್ನು ಇಟ್ಟುಕೊಳ್ಳ ಬೇಕೋ ಅಥವಾ ಬೇಡವೋ ? ಎಂಬ ಪ್ರಶ್ನೆಯುದ್ಭವಿಸಿದಾಗ ಅದಕ್ಕೆ ಉತ್ತರ ರೂಪ ವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಭಾವೇನ ನಾಸ್ತಿ ಸಂಬಂಧಃ ಕೇವಲ ಜ್ಞಾನಯೋಗಿನಃ ।
ತಥಾಪಿ ಭಾವಂ ಕುರ್ವೀತ ಶಿವೇ ಸಂಸಾರಮೋಚಕೇ ॥

(ಸಿ. ಶಿ. ೧೯–೩೮)

ಈ ವಿಧವಾಗಿ ಉಪದೇಶಿಸಿದ್ದಾರೆ. ಜ್ಞಾನಿಯಾದ ಶಿವಯೋಗಿಗೆ ಭಾವದೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ. ಆದರೂ ಸಹ ಸಂಸಾರದಿಂದ ಬಿಡುಗಡೆಯನ್ನುಂಟು

ಮಾಡುವ ಶಿವನ ವಿಷಯಕವಾದ ಭಾವನೆಯನ್ನು ಮಾಡಬೇಕು ಎಂಬುದು ಪೂಜ್ಯಪಾದರ ಆಶಯವಾಗಿದೆ.

''ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ'' ಎಂಬ ಉಕ್ತಿಗನುಸಾರವಾಗಿ ಜೀವಾತ್ಮನ ಬಂಧ–ಮೋಕ್ಷಗಳಿಗೆ ಆತನ ಮನೋವೃತ್ತಿಯೇ ಕಾರಣವಾಗಿರುತ್ತದೆ. ಮನೋವೃತ್ತಿಯಲ್ಲಿ ಶಬ್ದಸ್ಪರ್ಶಾದಿ ವಿಷಯಗಳ ಬಯಕೆಯಾದಾಗ ಆ ಮನೋವೃತ್ತಿಯೇ ಅವನ ಬಂಧನಕ್ಕೆ ಕಾರಣವಾಗುತ್ತದೆ. ಅದು ನಿರ್ವಿಷಯವಾಗಿ ಪರಶಿವ ಸ್ವರೂಪವನ್ನು ತಾಳಿದಾಗ ಮುಕ್ತಿಗೆ ಸಾಧನವಾಗುತ್ತದೆ. ವೃತ್ತಿಯು ಒಂದೇ ಆಗಿದ್ದರೂ ಅದರ ಆಲಂಬನೆಯ ವಿಷಯಗಳು ಭಿನ್ನ ಭಿನ್ನಗಳಾಗಿರುತ್ತವೆ. ಮನಸ್ಸಿನ ವೃತ್ತಿಯೆಂದರೆ ಒಂದು ಲತೆಯಿದ್ದ ಹಾಗೆ. ಲತೆಗೆ ಆಧಾರಸ್ತಂಭದ ಅವಶ್ಯಕತೆಯಿರುವಂತೆ ಮನೋವೃತ್ತಿಗೂ ಸಹ ಒಂದಿಲ್ಲೊಂದು ಆಧಾರವು ಬೇಕೇಬೇಕಾಗುತ್ತದೆ. ಜ್ಞಾನಿಯಾದ ವ್ಯಕ್ತಿಗೆ ಪ್ರಾರಬ್ಧ ಕರ್ಮದ ಕ್ಷಯವಾಗುವವರೆಗೆ ಶರೀರ ಹಾಗೂ ಮನಸ್ಸುಗಳ ಸಂಬಂಧವು ಇದ್ದೇ ಇರುತ್ತದೆ. ಜ್ಞಾನೋದಯದ ನಂತರ ಉಂಟಾಗುವ ಮನಸ್ಸಿನ ವೃತ್ತಿಗೆ ಶಿವಸ್ವರೂಪದ ಆಲಂಬನೆಯನ್ನು ಕೊಡದೆ ಹೋದರೆ, ಅದು ಅನಿವಾರ್ಯವಾಗಿ ವಿಷಯಾಲಂಬನವನ್ನು ಮಾಡಬೇಕಾಗುತ್ತದೆ. ಹೀಗೆ ಜ್ಞಾನಿಯ ಮನೋವೃತ್ತಿಯು ವಿಷಯಾಲಂಬನೆಯನ್ನು ಮಾಡಿದಾಗ ಆತನು ಲೋಕಪೂಜ್ಯತೆಯನ್ನು ಕಳೆದು ಕೊಳ್ಳುತ್ತಾನೆ. ಹೀಗಾದಾಗ ಅವನಿಂದ ಲೋಕಕಲ್ಯಾಣ ಕಾರ್ಯವು ಸಂಭವಿಸಲಾರದು. ಅಂತೆಯೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಜ್ಞಾನಿಯಾದವನಿಗೆ ಭಾವನೆಯ ಸಂಬಂಧವಿರದಿದ್ದರೂ ಅವನು ಸಂಸಾರ ಮೋಚಕವಾದ ಶಿವಭಾವನೆಯನ್ನು ಸದಾ ಹೊಂದಿದವನಾಗಿರಬೇಕೆಂಬುದಾಗಿ ಆದೇಶವಿತ್ತಿದ್ದಾರೆ.

ಪೂಜ್ಯಪಾದರು ಇದೇ ವಿಷಯವನ್ನೇ ಸ್ಪಷ್ಟಪಡಿಸುತ್ತ–

ಪರಿಪೂರ್ಣಪ್ರಬೋಧೇಽಪಿ ಭಾವಂ ಶಂಭೌ ನ ವರ್ಜಯೇತ್ ।
ಭಾವೋ ಹಿ ನಿಹಿತಸ್ತಸ್ಮಿನ್ ಭವಸಾಗರತಾರಕಃ ॥

(ಸಿ. ಶಿ. ೧೯–೬೯)

ಪುನಃ ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಪರಿಪೂರ್ಣವಾದ ಅಪರೋಕ್ಷ ಜ್ಞಾನವನ್ನು ಪಡೆದುಕೊಂಡ ನಂತರವೂ ಸಹ ಶಿವಯೋಗಿಯು ಶಿವನಲ್ಲಿಯ ತನ್ನ ಭಾವನೆಯನ್ನು ಅರ್ಥಾತ್ 'ಶಿವೋಽಹಂ' ಎಂಬ ಭಾವನೆಯನ್ನು ಎಂದೆಂದಿಗೂ ಬಿಡಕೂಡದು. ಶಿವಾದ್ವೈತರೂಪವಾದ ಈ 'ಶಿವೋಽಹಂ' ಭಾವನೆಯಿಂದಲೇ ಶಿವಯೋಗಿಗೆ ಶಿವಾದ್ವೈತ ಜ್ಞಾನವು ಪ್ರಾಪ್ತವಾಗಿರುತ್ತದೆ. ಅಂತೆಯೇ ಆ ಭಾವನೆಗೆ ಭವಸಾಗರವನ್ನು ದಾಟಿಸುವ ಸಾಮರ್ಥ್ಯವೂ ಸಹ ಪ್ರಾಪ್ತವಾಗಿರುತ್ತದೆ. ಶಿವಯೋಗಿಯ ಶರೀರ, ಮನಸ್ಸು ಮುಂತಾದ ಉಪಾಧಿಗಳು ಪ್ರಾರಬ್ಧ ಕರ್ಮದ ಅಧೀನಗಳಾಗಿರುತ್ತವೆ. ಜ್ಞಾನದಿಂದ ಸಂಚಿತ ಹಾಗೂ ಆಗಾಮಿಕರ್ಮಗಳು ದಗ್ಧವಾದರೂ, ಪ್ರಾರಬ್ಧ ಕರ್ಮ ವನ್ನು ಮಾತ್ರ ಅನುಭವಿಸಿಯೇ ತೀರಿಸಬೇಕಾಗುತ್ತದೆ. ಅಂದಾಗ ಜ್ಞಾನಿಗೂ ಸಹ ಪ್ರಾರಬ್ಧ ಕರ್ಮದ ಭೋಗವು ತಪ್ಪಿದ್ದಲ್ಲ. ಹೀಗೆ ಪ್ರಾರಬ್ಧ ಭೋಗಕ್ಕಾಗಿ ತನಗಿರುವ ಮನಸ್ಸಿನಲ್ಲಿ

ಅನ್ಯಾನ್ಯ ವಿಷಯಗಳಿಗೆ ಆಸ್ಪದವನ್ನು ಕೊಡದೇ, ಶಿವಯೋಗಿಯು ಶಿವಭಾವದಿಂದ ಕೂಡಿದವನಾಗಿರಬೇಕು. ಈ ಶಿವಭಾವನೆಯಿಂದ ಶಿವಯೋಗಿಯು ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಪಡೆಯುವುದರ ಜೊತೆಗೆ ಶರೀರಾದಿ ಉಪಾಧಿಗಳನ್ನು ತ್ಯಜಿಸಿದ ನಂತರ ವಿದೇಹ ಕೈವಲ್ಯವನ್ನು ಪಡೆಯುತ್ತಾನೆ.

ಸಂಸಾರ ಸಾಗರದಿಂದ ತಾರಕವಾದ ಈ ಶಿವಭಾವನೆಯು ನಿತ್ಯವಾದುದೋ ಅಥವಾ ಅನಿತ್ಯವಾದುದೋ ಎಂಬ ಪ್ರಶ್ನೆ ಉದ್ಭವಿಸಿದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ನಿವರ್ತ್ಯ ಜನ್ಮಜಂ ದುಃಖಂ ಭಾವಃ ಶೈವೋ ನಿವರ್ತತೇ ।
ಯಥಾ ಕಾಷ್ಠಾದಿಕಂ ದಗ್ಧ್ವಾ ಸ್ವಯಂ ಶಾಮ್ಯತಿ ಪಾವಕಃ ॥

(ಸಿ. ಶಿ. ೧೯–೪೦)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಶಿವಯೋಗಿಯ ಮನಸ್ಸಿನಲ್ಲಿ ಉಂಟಾದ ಶಿವಭಾವನೆಯು ನಿತ್ಯವಾದುದೇನಲ್ಲ. ಆದರೆ ಕಟ್ಟಿಗೆಗೆ ಹತ್ತಿದ ಬೆಂಕಿಯು ಆ ಕಟ್ಟಿಗೆಯನ್ನು ಸುಟ್ಟು ಅದನ್ನು ಇಲ್ಲದಂತೆ ಮಾಡಿ ಕೊನೆಗೆ ತಾನೂ ಹೇಗೆ ಇಲ್ಲದಾಗು ತ್ತದೆಯೋ, ಅದರಂತೆ ಈ ಶಿವಭಾವನೆಯೂ ಸಹ ಶಿವಯೋಗಿಯ ಜನ್ಮ ಸಂಬಂಧಿ ಯಾದ ದುಃಖವನ್ನು ದೂರಮಾಡಿ ಕೊನೆಗೆ ತಾನೂ ಅಡಗಿಹೋಗುತ್ತದೆ.

ಈ ಸಂಸಾರದಲ್ಲಿ ಜನ್ಮತಾಳಿ ಬಂದ ಬಳಿಕ ಜೀವಾತ್ಮನು ಅನೇಕ ವಿಧಗಳಾದ ದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಎಲ್ಲ ದುಃಖಗಳಲ್ಲಿ ಮೊದಲನೆಯ ದುಃಖವೇ ಜನ್ಮದುಃಖ. ಅಂತೆಯೇ ಜ್ಞಾನಿಗಳು ದುಃಖಗಳನ್ನು ಎಣಿಸುವಾಗ–

ಜನ್ಮದುಃಖಂ ಜರಾದುಃಖಂ ಜಾಯಾದುಃಖಂ ಪುನಃ ಪುನಃ ।
ಸಂಸಾರಸಾಗರಂ ದುಃಖಂ ತಸ್ಮಾಜಾಗ್ರತ ಜಾಗ್ರತ ॥

ಹೀಗೆ ಜನ್ಮದುಃಖದಿಂದಲೇ ಎಣಿಕೆಯನ್ನು ಪ್ರಾರಂಭಿಸಿದ್ದಾರೆ. ಇದೊಂದು ದುಃಖವು ಮುಂಬರುವ ಅನಂತದುಃಖಗಳಿಗೆ ಕಾರಣವಾಗಿರುತ್ತದೆ. ಲೌಕಿಕ ಪ್ರಪಂಚದಲ್ಲಿ ಈ ದುಃಖಗಳ ನಿವೃತ್ತಿಗಾಗಿ ಅನೇಕ ಉಪಾಯಗಳನ್ನು ಕಂಡು ಹಿಡಿದಿದ್ದಾರೆ. ಆದರೆ ಆ ಯಾವ ಉಪಾಯಗಳೂ ಈ ದುಃಖಗಳನ್ನು ಶಾಶ್ವತವಾಗಿ ಪರಿಸಮಾಪ್ತಿಮಾಡಲಾರವು. ''ಸೌ ಸೋನಾರ ಕಾ ಏಕ ಲೋಹಾರ ಕಾ'' ಎಂಬ ಹಿಂದಿಯ ಉಕ್ತಿಯಂತೆ ತಾತ್ಕಾಲಿಕ ವಾದ ದುಃಖ ನಿವೃತ್ತಿಯ ನೂರಾರು ಉಪಾಯಗಳಿಗಿಂತ ಶಾಶ್ವತವಾದ ದುಃಖನಿವೃತ್ತಿಯ ಒಂದೇ ಒಂದು ಉಪಾಯವೆಂದರೆ ಶಿವಯೋಗಿಯ ಮನಸ್ಸಿನಲ್ಲಿ ಉದಯವಾದ ಈ ಶಿವಭಾವನೆಯು ಜನ್ಮದುಃಖವನ್ನೇ ಮೊದಲು ಮಾಡಿಕೊಂಡು ಉಳಿದೆಲ್ಲ ದುಃಖಗಳನ್ನು ದೂರು ಮಾಡಿ, ಕೊನೆಗೆ ತಾನೂ ಇಲ್ಲದಂತಾಗುತ್ತದೆ.

ಜನನ ಮರಣಾತ್ಮಕವಾದ ಭವರೋಗವನ್ನು ಅಥವಾ ಭವದುಃಖವನ್ನು ದೂರ ಮಾಡಿದ ಮೇಲೆ ಆ ಶಿವಭಾವನೆಯಿಂದ ಬೇರೊಂದು ಪ್ರಯೋಜನವಿಲ್ಲವೇ ? ಎಂಬ ಸಂದೇಹ ಉದ್ಭವಿಸಿದಾಗ ಅದಕ್ಕೆ ಸಮಾಧಾನರೂಪವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಪ್ರಕಾಶಿತೇ ಶಿವಾನಂದೇ ತದ್ಭಾವೈಃ ಕಿಂ ಪ್ರಯೋಜನಮ್ ।
ಸಿದ್ಧೇ ಸಾಧ್ಯೇ ಚಿರೇಣಾಽಪಿ ಸಾಧನೈಃ ಕಿಂ ಪ್ರಯೋಜನಮ್ ॥

(ಸಿ. ಶಿ. ೧೯–೪೨)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಭವದುಃಖವನ್ನು ದೂರ ಮಾಡುವುದಕ್ಕಾಗಿ ಉತ್ಪನ್ನವಾದ ಶಿವಭಾವನೆಯು ಆ ದುಃಖವನ್ನು ದೂರಗೊಳಿಸಿ ಶಿವಾನಂದವನ್ನು ಪ್ರಕಾಶಪಡಿಸುತ್ತದೆ. ಇಷ್ಟಾದ ಮೇಲೆ ಆ ಭಾವನೆಯ ಕಾರ್ಯವು ಮುಗಿದಂತಾಯಿತು. ಆದ್ದರಿಂದ ಶಿವಾನಂದವನ್ನು ಪಡೆದ ಶಿವಯೋಗಿಗೆ ಶಿವಭಾವನೆಯು ನಿಷ್ಪ್ರಯೋಜನವಾಗುತ್ತದೆ. ಯಾವುದೇ ಒಂದು ಕಾರ್ಯವನ್ನು ಸಾಧಿಸುವುದಕ್ಕಾಗಿ ಓರ್ವ ವ್ಯಕ್ತಿಯು ಅನೇಕ ಸಾಧನಗಳನ್ನು ಸಂಗ್ರಹಿಸಿಕೊಳ್ಳುತ್ತಾನೆ. ಆ ಸಾಧನೆಗಳ ಬಲದಿಂದ ಸಾಧ್ಯವನ್ನು ಪಡೆದ ನಂತರ ಆ ವ್ಯಕ್ತಿಗೆ ತಾನು ಸಂಗ್ರಹಿಸಿದ ಆ ಸಾಧನೆಗಳೆಲ್ಲ ನಿಷ್ಪ್ರಯೋಜನವಾಗುವುದನ್ನು ಲೋಕದಲ್ಲಿ ಕಾಣುತ್ತೇವೆ. ಪ್ರಯಾಣಿಕನೋರ್ವನು ಪ್ರಯಾಣದ ಟಿಕೇಟನ್ನು ಪಡೆದು ಗಾಡಿಯಲ್ಲಿ ಕುಳಿತುಕೊಳ್ಳುತ್ತಾನೆ. ತಾನು ತಲುಪುವ ಸ್ಥಾನವನ್ನು ಸೇರುವವರೆಗೆ ಆ ಟಿಕೆಟ್‌ನ್ನು ಬಹುಕಾಳಜಿಯಿಂದ ರಕ್ಷಿಸುತ್ತಾನೆ. ಆ ಸ್ಥಾನವನ್ನು ತಲುಪಿ ರೇಲ್ವೆ ನಿಲ್ದಾಣದಿಂದ ಹೊರಬಂದ ಮೇಲೆ ಆ ಟಿಕೀಟಿನ ಬಗ್ಗೆ ಸಂಪೂರ್ಣವಾಗಿ ನಿಷ್ಕಾಳಜಿಯಾಗುತ್ತದೆ ಮತ್ತು ಆ ಟಿಕೇಟು ಸಹ ನಿಷ್ಪ್ರಯೋಜಕವಾಗುತ್ತದೆ. ಅದರಂತೆ ಸರ್ವದುಃಖಗಳ ನಿವೃತ್ತಿಗಾಗಿ ಉಂಟಾದ ಶಿವಭಾವನೆಯು, ಆ ದುಃಖಗಳನ್ನು ನಿವೃತ್ತಿಗೊಳಿಸಿದ ಬಳಿಕ ತನ್ನ ಪ್ರಯೋಜನವು ಪೂರ್ಣವಾದ್ದರಿಂದ ಕೊನೆಗೆ ತಾನು ನಿಷ್ಪ್ರಯೋಜಕವಾಗುತ್ತದೆ ಎಂಬುದು ಪೂಜ್ಯಪಾದರ ಆಶಯವಾಗಿದೆ.

ಈ ವಿಧವಾಗಿ ಶಿವಭಾವನೆಯು ಲಯಗೊಂಡ ಆ ಶಿವಯೋಗಿಯು ಹೇಗೆ ತೋರುತ್ತಾನೆ ಎಂಬ ಪ್ರಶ್ನೆಗೆ ಸಮಾಧಾನರೂಪವಾಗಿ ಪೂಜ್ಯಪಾದರು–

ಏಕೀಕೃತೇ ಶಿವೇ ಭಾವೇ ಜ್ಞಾನೇನ ಸಹ ಸಂಯಮೀ ।
ವಿಸ್ಮಿತಾತ್ಮಸಮಾವೇಶಃ ಶಿವಭಾವೇ ವಿಭಾಸತೇ ॥

(ಸಿ. ಶಿ. ೧೯–೪೨)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಸಂಯಮಿಯಾದ ಶಿವಯೋಗಿಯು ಶಿವಾದ್ವೈತ ಜ್ಞಾನ ಹಾಗೂ 'ಶಿವೋಽಹಂ' ಭಾವನೆ ಇವೆರಡನ್ನೂ ಒಂದುಗೂಡಿಸಿ ಶಿವನಲ್ಲಿ ಸಮರಸಗೊಳಿಸಿದಾಗ ಇವನಿಗೆ ಭಾವನಿಷ್ಪತ್ತಿ ಸ್ಥಿತಿಯು ಪ್ರಾಪ್ತವಾಗುತ್ತದೆ. ಹೀಗೆ ಭಾವನಿಷ್ಪತ್ತಿಯನ್ನು ಪಡೆದ ಶಿವಯೋಗಿಯು ತನ್ನಲ್ಲೇ ತಾನು ಸಮರಸಗೊಂಡದ್ದನ್ನು ಕಂಡು ವಿಸ್ಮಯಗೊಂಡು ಆಶ್ಚರ್ಯಚಕಿತನಾಗಿ ಶಿವೋಽಹಂ ಭಾವನೆಯಲ್ಲಿಯೇ ಪ್ರಕಾಶಿಸುವಂಥವನಾಗುತ್ತಾನೆ.

ಶಿವಾದ್ವೈತ ಸ್ಥಿತಿಯನ್ನು ಪಡೆಯಬೇಕಾದರೆ ಜ್ಞಾನ ಹಾಗೂ ಭಾವನೆಗಳೆರಡೂ ಬೇಕಾಗುತ್ತವೆ ಎಂಬ ವಿಷಯವನ್ನು ತಿಳಿಸಲೋಸುಗ ಪೂಜ್ಯಪಾದರು ಕೊನೆಯದಾಗಿ–

ನ ಭಾವೇನ ವಿನಾ ಜ್ಞಾನಂ ನ ಭಾವೋ ಜ್ಞಾನಮಂತರಾ ।
ಮೋಕ್ಷಾಯ ಕಾರಣಂ ಪ್ರೋಕ್ತಂ ತಸ್ಮಾದುಭಯಮಾಶ್ರಯೇತ್ ॥

(ಸಿ. ಶಿ. ೧೯–೪೩)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸದ್ಗುರುಗಳು ಯಾವಾಗ ನೀನೇ ಶಿವಸ್ವರೂಪನಿರುವಿ ಎಂಬುದಾಗಿ ಉಪದೇಶಿಸುವರೋ, ಆಗ ಶಿಷ್ಯನ ಮನಸ್ಸಿನಲ್ಲಿ ನಾನು ಶಿವಸ್ವರೂಪನಿದ್ದೇನೆ ಎಂಬ ಭಾವನೆಯು ಉತ್ಪನ್ನವಾಗುತ್ತದೆ. ಈ ಭಾವನೆಯಿಂದಲೇ 'ಶಿವೋऽಹಂ' ಎಂಬ ವೃತ್ತಿಜ್ಞಾನವು ಉದಿಸುವುದು. ಈ ಜ್ಞಾನವಿಲ್ಲದೆ ಪೂರ್ವೋಕ್ತ ಭಾವನೆಯು ಸಹ ಸಂಭವಿಸಲಾರದು. ಆದ್ದರಿಂದ ಶಿವಜ್ಞಾನ ಹಾಗೂ ಶಿವೋऽಹಂ ಭಾವನೆಗಳು ಎರಡೂ ಪರಸ್ಪರ ಸಹಕಾರಿಗಳೂ ಹಾಗೂ ಪೂರಕಗಳೂ ಆಗಿರುತ್ತವೆ. ಈ ಭಾವಜ್ಞಾನಗಳೆರಡೂ ಮೋಕ್ಷಕ್ಕೆ ಕಾರಣೀಭೂತಗಳಾಗಿರುತ್ತವೆ. ಆದ್ದರಿಂದ ಮುಕ್ತಿಯ ಅಭಿಲಾಷೆಯುಳ್ಳ ಪ್ರತಿಯೊಬ್ಬರೂ ಈ ಶಿವಜ್ಞಾನ ಹಾಗೂ ಶಿವಭಾವನೆಗಳೆರಡನ್ನು ಆಶ್ರಯಿಸಬೇಕಾಗುತ್ತದೆ. ಪ್ರಥಮದಲ್ಲಿ ಉತ್ಪನ್ನವಾದ ಶಿವ ಭಾವನೆಯು ಶಿವಜ್ಞಾನವನ್ನು ಉಂಟು ಮಾಡುತ್ತದೆ. ಶಿವಜ್ಞಾನದ ನಂತರ ಉತ್ಪನ್ನವಾದ ಶಿವಭಾವನೆಯು ಆ ಜ್ಞಾನವನ್ನು ದೃಢಗೊಳಿಸುತ್ತದೆ. ಹೀಗೆ ಜ್ಞಾನ–ಭಾವನೆಗಳೆರಡೂ ಅನ್ಯೋನ್ಯ ಸಹಕಾರಿಗಳಾಗಿರುತ್ತವೆ. ಆದಕಾರಣ ಸಾಧಕರೆಲ್ಲರೂ ಇವೆರಡನ್ನೂ ಪಡೆದುಕೊಂಡು ಶರಣಸ್ಥಲದ ಭಾವನಿಷ್ಪತ್ತಿ ಸ್ಥಿತಿಯನ್ನು ಅನುಭವಿಸುವಂತಾಗಲೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೩ ನವ್ಹೆಂಬರ್, ೧೯೯೪

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

## ಜ್ಞಾನನಿಷ್ಪತ್ತಿಸ್ಥಲ

ಸದ್ಧರ್ಮ ಪ್ರೇಮಿಗಳೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಶರಣಸ್ಥಲದಲ್ಲಿ ಬರುವ ಭಾವನಿಷ್ಪತ್ತಿಸ್ಥಲದ ಬಗ್ಗೆ ಆಶೀರ್ವಚನವನ್ನು ಆಲಿಸಿದ್ದೀರಿ. ಇದರ ನಂತರ ಬರುವ ಸ್ಥಲವೇ ಜ್ಞಾನನಿಷ್ಪತ್ತಿ ಸ್ಥಲವು. ಶಿವಭಾವನೆಯಿಂದ ದೊರೆಯಬೇಕಾದ ಫಲವು ಪ್ರಾಪ್ತವಾದ ಮೇಲೆ ಆ ಭಾವನೆಯು ನಿಷ್ಪ್ರಯೋಜಕವಾಗಿ ಭಾವನಿಷ್ಪತ್ತಿಯೆಂದೆನಿಸಿ ಕೊಂಡಂತೆ, ಶಿವಾದ್ವೈತ ಜ್ಞಾನದಿಂದ ಆದರ ಪ್ರಯೋಜನವು ಪ್ರಾಪ್ತವಾಗಲು ಸರ್ವವೆಲ್ಲವೂ ತನ್ಮಾತ್ಮರೂಪವಾಗಿಯೇ ತೋರುವಾಗ ತನಗಿಂತಲೂ ಭಿನ್ನವಾದ ಬೇರೊಂದು ಜ್ಞೇಯ ವಸ್ತುವು ಇಲ್ಲದಂತಾಗಿ ಆ ವೃತ್ತಿಜ್ಞಾನವೂ ಸಹ ಅಡಗಿ ಹೋಗುತ್ತದೆ. ಹೀಗೆ ಜ್ಞಾನವಡಗಿದ ಆ ಸ್ಥಿತಿಗೇನೆ ಜ್ಞಾನನಿಷ್ಪತ್ತಿಯೆಂಬುದಾಗಿ ಕರೆಯು ತ್ತಾರೆ ಮತ್ತು ಈ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲಕ್ಕೆ ಜ್ಞಾನನಿಷ್ಪತ್ತಿಸ್ಥಲವೆನ್ನುವರು. ಈ ಅವಸ್ಥೆಯಲ್ಲಿ ಆತ್ಮಸ್ವರೂಪದ ಜ್ಞಾನವು ಪರಿಪೂರ್ಣಾವಸ್ಥೆಯನ್ನು ಹೊಂದಿ ವೃತ್ಯಾತ್ಮಕ ಜ್ಞಾನವು ನಿಷ್ಪತ್ತಿಯೋಜನವಾಗುತ್ತದೆ, ಇಲ್ಲವೆ ಪರಿಸಮಾಪ್ತವಾಗುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಯನ್ನುದ್ದೇಶಿಸಿ ಜ್ಞಾನ ನಿಷ್ಪತ್ತಿಸ್ಥಲದ ಬಗ್ಗೆ–

ಜ್ಞಾನಸ್ಯ ವ್ಯವಹಾರೇಽಪಿ ಜ್ಞೇಯಾಭಾವಾತ್ ಸ್ವಭಾವತಃ ।
ಸ್ವಪ್ನವತ್ ಜ್ಞಾನನಿಷ್ಪತ್ತ್ಯಾ ಜ್ಞಾನನಿಷ್ಪನ್ನ ಇತ್ಯಸೌ ॥

(ಸಿ. ಶಿ. ೧೯–೪೪)

ಈ ವಿಧವಾಗಿ ಉಪದೇಶವನ್ನು ಪ್ರಾರಂಭಿಸಿದ್ದಾರೆ. ಜ್ಞಾನಕ್ಕೂ ಸಹ ವಿಷಯದ ಆಲಂಬನೆ ಬೇಕೇಬೇಕು. ಆಲಂಬನೆಯಿಲ್ಲದೇ ವೃತ್ತಿಜ್ಞಾನವು ಸ್ವತಂತ್ರವಾಗಿ ಇರಲಾರದು. ಆದ್ದರಿಂದ ಜ್ಞೇಯವೇ ಜ್ಞಾನದ ಆಧಾರವು. ಜ್ಞೇಯವೆಂದರೆ ತಿಳಿದುಕೊಳ್ಳ ಬೇಕಾಗಿರುವ ವಸ್ತುವು. ಜಾಗ್ರದಾವಸ್ಥೆಯಲ್ಲಿ ತನ್ನ ಎದುರಿಗಿರುವ ವಸ್ತುಗಳ ಜ್ಞಾನವನ್ನು ಮನುಷ್ಯನು ಮಾಡಿಕೊಳ್ಳುತ್ತಿರುತ್ತಾನೆ ಸ್ವಪ್ನಾವಸ್ಥೆಯಲ್ಲಿ ಸ್ವಾಪ್ನಿಕ ಪದಾರ್ಥಗಳ ಜ್ಞಾನ ವನ್ನು ಮಾಡಿಕೊಳ್ಳುತ್ತಿರುತ್ತಾನೆ. ಸ್ವಪ್ನದಿಂದ ಎಚ್ಚರಗೊಂಡಾಗ ಅಲ್ಲಿಯ ಪದಾರ್ಥಗಳು ಇಲ್ಲದಂತಾಗೋಣದರಿಂದ ತದ್ವಿಷಯಕ ಜ್ಞಾನವೂ ಸಹ ಇಲ್ಲದಾಗಿ ಹೋಗುತ್ತದೆ.

ಓರ್ವ ತಿರುಕನು ದಿನಾಲು ಮನೆಗಳಲ್ಲಿ ತಿರಿದು ತಂದು ತನ್ನ ಹೊಟ್ಟೆಯನ್ನು ಹೊರೆಯುತ್ತಿದ್ದನು. ತಾನು ತಿರುಕನಾಗಿದ್ದರೂ ರಾಜನಾಗಬೇಕೆನ್ನುವ ಪ್ರಬಲವಾದ ಇಚ್ಛೆ ಯುಳ್ಳವನಾಗಿದ್ದನು. ಹಗಲಿನಲ್ಲಿ ಕುಳಿತಾಗ, ನಿಂತಾಗ, ಅಲೆದಾಡುವಾಗ ಯಾವಾಗಲೂ

ರಾಜದರ್ಬಾರ, ಸಿಂಹಾಸನ, ಆನೆ, ಒಂಟೆ ಮುಂತಾದ ಐಶ್ವರ್ಯಗಳ ವಿಚಾರವನ್ನೇ ಮಾಡುತ್ತಿದ್ದನು. ಅವನ ವಿಚಾರಗಳು ಪ್ರಬಲವಾಗುತ್ತಹೋದವು. ಒಂದು ದಿನ ಒಂದು ಹಳೆಯ ಧರ್ಮಶಾಲೆಯಲ್ಲಿ ವಿಶ್ರಾಂತಿಗಾಗಿ ರಾತ್ರಿಯಲ್ಲಿ ಮಲಗಿಕೊಂಡನು. ಆಗ ಅವನಿಗೆ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಅವನು ಕಂಡದ್ದೇನೆಂದರೆ, ಆ ದೇಶದ ರಾಜನು ಅಕಸ್ಮಾತ್ ಮಡಿದನು. ರಾಜನ ಉತ್ತರಾಧಿಕಾರಿಯಾಗಿ ಅವನ ವಂಶಜರಲ್ಲಿ ಯಾರೂ ಇರಲಿಲ್ಲ. ಅಂತೆಯೇ ಊರಿನ ಜನರೆಲ್ಲ ಸೇರಿ ತೀರ್ಮಾನಿಸಿದ್ದೇನೆಂದರೆ ರಾಜರ ಪಟ್ಟದ ಆನೆಯ ಸೊಂಡಿಲಲ್ಲಿ ಒಂದು ಪುಷ್ಪ ಮಾಲೆಯನ್ನು ಕೊಟ್ಟು, ಊರಲ್ಲಿ ಬಿಟ್ಟು ಬಿಡೋಣ. ಆನೆಯು ಯಾರ ಕೊರಳಿಗೆ ಆ ಮಾಲೆಯನ್ನು ಧರಿಸುವುದೋ ಅವರನ್ನೇ ನಮ್ಮ ದೇಶದ ರಾಜನನ್ನಾಗಿ ಮಾಡಿಕೊಳ್ಳೋಣ. ಹೀಗೆ ನಿರ್ಣಯಿಸಿ ಆನೆಯ ಸೊಂಡೆಯಲ್ಲಿ ಹೂವಿನ ಹಾರವನ್ನು ಕೊಟ್ಟು, ಅದನ್ನು ರಾಜಬೀದಿಯಲ್ಲಿ ಬಿಟ್ಟುಬಿಡುತ್ತಾರೆ. ಈ ಭಿಕ್ಷುಕನು ಅದೇ ರಸ್ತೆಯಲ್ಲಿಯೇ ಆನೆಗೆ ಎದುರಾಗಿ ಬರುತ್ತಿದ್ದನು. ಯೋಗಾಯೋಗವೆನ್ನುವಂತೆ ಆನೆಯು ತನ್ನ ಸೊಂಡಿಲಲ್ಲಿಯ ಹೂವಿನಹಾರವನ್ನು ಆ ಭಿಕ್ಷುಕನ ಕೊರಳಿಗೆ ಹಾಕಿತು. ಆಗ ಊರಿನ ಜನರೆಲ್ಲ ಇವನೆಂತಹ ಭಾಗ್ಯಶಾಲಿ ಎಂಬುದಾಗಿ ಕೊಂಡಾಡುತ್ತ ಅದೇ ಆನೆಯ ಮೇಲೆ ಅಂಬಾರಿಯನ್ನಿಟ್ಟು ಅವನಿಗೆ ರಾಜನ ಉಡುಪುಗಳನ್ನು ತೊಡಿಸಿ, ಆನೆಯ ಮೇಲೆ ಕೂಡಿಸಿ, ಉತ್ಸವದೊಂದಿಗೆ ಕರೆದೊಯ್ದು ರಾಜಸಿಂಹಾಸನವನ್ನಾರೋಹಣ ಮಾಡಿಸಿ, ರಾಜಪಟ್ಟವನ್ನು ಕಟ್ಟಿ, ಬಹುಪರಾಕು ಮುಂತಾದ ಜಯಘೋಷಗಳನ್ನು ಮಾಡತೊಡಗಿದರು. ಇದೂ ಅಲ್ಲದೆ ಕಹಳೆ ನಗಾರೆಗಳ ಧ್ವನಿಗಳೂ ಸಹ ಗಗನಭೇದಿಯಾಗಿ ಮೊಳಗತೊಡಗಿದವು. ಇಂತಹ ಜಯಘೋಷಗಳ ಮಧ್ಯದಲ್ಲಿ ಸಿಂಹಾಸನಾರೂಢನಾದ ಆ ಭಿಕ್ಷುಕನು ತನ್ನ ಮನೋ ಬಯಕೆಯು ಪೂರ್ಣವಾಯಿತೆಂದು ಸಂತೋಷಪಡುತ್ತಿದ್ದಾಗಲೇ ಅಲ್ಲಿ ನಡೆದಿರುವ ವಾದ್ಯಗಳ ವಿಪರೀತ ಧ್ವನಿಗೆ ಅವನು ಎಚ್ಚರಾದನು. ಸ್ವಪ್ನಲೋಕದಿಂದ ಜಾಗ್ರದಾವಸ್ಥೆಗೆ ಬಂದಾಗ ಅಲ್ಲಿಯ ರಾಜಧಾನಿ, ಸಿಂಹಾಸನ, ಆನೆ–ಅಂಬಾರೆ, ಪ್ರಜೆಗಳ ಜಯಘೋಷ ಒಂದೇ ಕ್ಷಣದಲ್ಲಿ ಇಲ್ಲದಂತಾಗಿ, ಆ ಧರ್ಮಶಾಲೆಯಲ್ಲಿ ಹರಕುಬಟ್ಟೆಯನ್ನುಟ್ಟು, ಮಲಗಿರುವ ತನ್ನನ್ನು ತಾನು ಕಂಡು, ಒಳಒಳಗೆ ನಾಚಿಗೆ ಪಟ್ಟು ನಿರಾಶನಾದನು.

ಇಲ್ಲಿ ಸ್ವಪ್ನದ ಜ್ಞಾನಕ್ಕೆ ಆಲಂಬನಗಳಾಗಿದ್ದ ಸ್ವಾಪ್ನಿಕ ಪದಾರ್ಥಗಳು, ಸ್ವಪ್ನ ಭಗ್ನದಿಂದ ಇಲ್ಲವಾಗಲು, ಆ ಸ್ವಾಪ್ನಿಕ ಪದಾರ್ಥಗಳ ಜ್ಞಾನವೂ ಸಹ ಇಲ್ಲದಂತಾಗುತ್ತದೆ. ಇದರಂತೆಯೇ ಶಿವಯೋಗಿಯ ಮನಸ್ಸು ವಿಲೀನವಾಗಲು ವ್ಯಾವಹಾರಿಕ ತ್ರಿಪುಟಿ ಜ್ಞಾನವೂ ಸಹ ಇಲ್ಲದಂತಾಗಿ ಹೋಗುತ್ತದೆ. ಹೀಗೆ ಅಂತರ್ಮುಖತೆಯಿಂದ ಬಾಹ್ಯ ವ್ಯವಹಾರ ಜ್ಞಾನವು ಇಲ್ಲದಂತಾಗುವ ಅಥವಾ ನಿಷ್ಪ್ರಯೋಜಕವಾಗುವ ಸ್ಥಿತಿಯೇ ಜ್ಞಾನ ನಿಷ್ಪತ್ತಿಯೆಂಬುದಾಗಿ ತಿಳಿದುಕೊಳ್ಳಬೇಕು. ಅಂತೆಯೇ ಪೂಜ್ಯಪಾದರು ಈ ವಿಷಯವನ್ನೆ ದೃಢ ಪಡಿಸುವುದಕ್ಕೋಸುಗ ಪುನಃ–

ಸ್ವಪ್ನಜಾತಂ ಯಥಾ ಜ್ಞಾನಂ ಸಹ ಸ್ವಾರ್ಥೈರ್ನಿವರ್ತತೇ ।<br>
ತಥಾತ್ಮನಿ ಪ್ರಕಾಶೇ ತು ಜ್ಞಾನಂ ಜ್ಞೇಯಂ ನಿವರ್ತತೇ ॥

(ಸಿ.ಶಿ. ೧೯–೪೫)

ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ಸ್ವಪ್ನಾವಸ್ಥೆಯಿಂದ ಎಚ್ಚರ ಗೊಂಡಾಗ ಸ್ವಾಪ್ನಿಕ ಪದಾರ್ಥ ಹಾಗೂ ಅದರ ವಿಷಯಕವಾದ ಜ್ಞಾನ ಇವೆರಡೂ ಕೂಡಿಯೇ ಇಲ್ಲವಾಗುವಂತೆ, ಆತ್ಮಸ್ವರೂಪದ ಅರಿವು ಉಂಟಾಗಲು ಜಾಗ್ರದಾವಸ್ಥೆಯ ಪದಾರ್ಥಗಳು ಹಾಗೂ ಅವುಗಳ ಜ್ಞಾನ ಇವೆರಡೂ ಏಕಕಾಲದಲ್ಲಿಯೇ ನಿವೃತ್ತ ವಾಗುತ್ತವೆ. ಅಂದರೆ ಆತ್ಮನಿಷ್ಠನಾದ ಈ ಶಿವಯೋಗಿಗೆ ಪದಾರ್ಥಗಳು ಪದಾರ್ಥಗಳಾಗಿ ತೋರದೇ ಪರಮಾತ್ಮಸ್ವರೂಪವಾಗಿ ತೋರುತ್ತವೆಯೆಂಬುದಾಗಿ ತಿಳಿದುಕೊಳ್ಳಬೇಕು. ಸರ್ವವೆಲ್ಲವೂ ಪರಮಾತ್ಮ ರೂಪವಾಗಿಯೇ ಅನುಭವಗೋಚರವಾಗುತ್ತಿರಲು ಬೇರೊಂದು ಪದಾರ್ಥವಾಗಲಿ ಅದರ ಜ್ಞಾನವಾಗಲಿ ಸಂಭವಿಸುವ ಪ್ರಶ್ನೆಯೇ ಬರುವುದಿಲ್ಲ. ಹೀಗೆ ಆತ್ಮವ್ಯತಿರಿಕ್ತವಾದ ಜ್ಞೇಯ–ಜ್ಞಾನಗಳೆರಡನ್ನೂ ಈ ಸ್ಥಲದಲ್ಲಿ ಪೂಜ್ಯಪಾದರು ಪ್ರತಿಪಾದಿಸುತ್ತಿದ್ದಾರೆ.

ಸ್ವಸ್ವರೂಪದ ಜ್ಞಾನವುಂಟಾಗಲು ವ್ಯಾವಹಾರಿಕವಾದ ಜ್ಞೇಯ ಪದಾರ್ಥಗಳು ಆದೇಕೆ ತಾನೆ ಇಲ್ಲದಂತಾಗುತ್ತವೆ ? ಎಂಬ ಪ್ರಶ್ನೆಯು ಉದ್ಭವಿಸಿದಾಗ ಅದಕ್ಕೆ ಸಮಾಧಾನ ರೂಪವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಪರಿಪೂರ್ಣೇ ಮಹಾನಂದೇ ಪರಮಾಕಾಶಲಕ್ಷಣೇ ।
ಶಿವೇ ವಿಲೀನಚಿತ್ತಸ್ಯ ಕುತೋ ಜ್ಞೇಯಾಂತರೇ ಕಥಾ ॥

(ಸಿ. ಶಿ. ೧೯–೪೬)

ಹೀಗೆ ಉಪದೇಶಿಸಿದ್ದಾರೆ. ಪರಿಪೂರ್ಣವೂ, ಮಹಾನಂದ ಸ್ವರೂಪವೂ, ಪರಮಾಕಾಶ ಲಕ್ಷಣವೂ ಆದ ಪರಶಿವನಲ್ಲಿ ಚಿತ್ತವೃತ್ತಿಯು ವಿಲೀನವಾದವರಿಗೆ ಮತ್ತೊಂದು ಪದಾರ್ಥವು ಅದು ಹೇಗೆ ತಾನೆ ದೃಷ್ಟಿಗೋಚರವಾದೀತು ! ಶಿವಾದ್ವೈತಜ್ಞಾನ ಸಂಪನ್ನ ನಾದ ಶಿವಯೋಗಿಯೂ ಸಹ ಪ್ರಾರಬ್ಧ ಕರ್ಮವು ಕ್ಷಯವಾಗುವವರೆಗೆ ಶರೀರಧಾರಿ ಯಾಗಿ, ಈ ಪ್ರಪಂಚದಲ್ಲಿ ಎಲ್ಲರಂತೆ ತಾನೂ ಇರುತ್ತಾನೆ. ಅಂದಾಗ ಎಲ್ಲರಿಗೂ ಕಾಣುವ ಈ ಪ್ರಪಂಚ ಅವನಿಗೆ ಹೇಗೆ ತಾನೇ ಕಾಣುವುದಿಲ್ಲ ? ಪದಾರ್ಥಗಳು ಇದ್ದ ಮಾತ್ರಕ್ಕೆ ಅವು ಪ್ರತಿಯೊಬ್ಬರಿಗೂ ತೋರಲೇಬೇಕು ಎಂಬ ನಿಯಮವೇನಿರುವುದಿಲ್ಲ. ವಸ್ತುವಿನ ಅಸ್ತಿತ್ವವು ತೋರುವಿಕೆಗೆ ಕಾರಣವಾಗಿರದೇ ಅದರತ್ತ ಲಕ್ಷ್ಯಗೊಟ್ಟಾಗ ಮಾತ್ರ ಅದು ತೋರುತ್ತದೆ. ಯಾರು ಜಗತ್ತನ್ನು ನೋಡುವರೋ ಅವರಿಗೆ ಜಗತ್ತು ಕಾಣುವುದೇ ವಿನಃ ಕಣ್ಣು ಮುಚ್ಚಿಕೊಂಡು ಕುಳಿತವರಿಗೆ ಅದು ಇದ್ದರೂ ತೋರುವುದಿಲ್ಲ.

ಸಾಂಖ್ಯಕಾರಿಕಾಕಾರರಾದ ಈಶ್ವರ ಕೃಷ್ಣರು

ಅತಿದೂರಾತ್ ಸಾಮಿಪ್ಯಾದಿಂದ್ರಿಯಘಾತಾನ್ಮನೋಽನವಸ್ಥಾನಾತ್ ।
ಸಾಕ್ಷ್ಯಾತ್ ವ್ಯವಧಾನಾದಭಿಭವಾತ್ ಸಮಾನಾಭಿಹಾರಾಚ್ಚ ॥

(ಸಾಂಖ್ಯಕಾರಿಕಾ ೭)

ಹೀಗೆ ವಸ್ತುವು ಕಾಣದಿರುವುದಕ್ಕೆ ಅನೇಕ ಕಾರಣಗಳನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಅವುಗಳಲ್ಲಿ ವಸ್ತುವು ಅತ್ಯಂತ ದೂರವಾಗಿದ್ದರೂ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಉದಾಹರಣೆಗಾಗಿ, ಆಕಾಶದಲ್ಲಿ ಅತಿ ದೂರದಲ್ಲಿ ಹಾರಿಹೋಗುತ್ತಿರುವ ವಿಮಾನ. ವಸ್ತು

ಅತ್ಯಂತ ಸಮೀಪದಲ್ಲಿರುವಿಕೆಯೂ ಅದರ ಅಗೋಚರತ್ವಕ್ಕೆ ಕಣ್ಣಿಗೆ ಹಚ್ಚಿದ ಕಾಡಿಗೆ ಯಂತೆ ಕಾರಣವಾಗಿರುತ್ತದೆ. ಕಿವುಡನಿಗೆ ಶಬ್ದಗಳು ಕೇಳದಿರುವಂತೆ ಇಂದ್ರಿಯಗಳಲ್ಲಿ ದೋಷವುಂಟಾದಾಗಲೂ ಪದಾರ್ಥದ ಪರಿಜ್ಞಾನವಾಗುವುದಿಲ್ಲ, ಮನಸ್ಸು ಜ್ಞೇಯ ವಸ್ತುವಿನ ಕಡೆಗೆ ಲಕ್ಷ್ಯಕೊಡದೇ ಇದ್ದಾಗ ಅಥವಾ ಅನ್ಯವಸ್ತುವಿನಲ್ಲಿ ಆಸಕ್ತನಾದಾಗಲೂ ಬಾಹ್ಯವಸ್ತುವು ತೋರುವುದಿಲ್ಲ, ದುಷ್ಯಂತನಲ್ಲಿ ದತ್ತಚಿತ್ತಳಾದ ಶಕುಂತಲೆಗೆ ಎದುರಿರುವ ದೂರ್ವಾಸನು ಕಾಣದಿರುವಂತೆ ಎಂಬುದಾಗಿ ತಿಳಿದುಕೊಳ್ಳಬೇಕು. ದೃಶ್ಯವಸ್ತುವು ಪರಮಾಣುವಿನಂತೆ ಅತಿ ಸೂಕ್ಷ್ಮವಿದ್ದಾಗಲೂ ಅದು ನಮಗೆ ತೋರುವುದಿಲ್ಲ, ದೃಶ್ಯ ವಸ್ತುವು ಬೇರೊಂದು ವಸ್ತುವಿನಿಂದ ವ್ಯವಧಾನವಾದಾಗ–ಅರ್ಥಾತ್ ಗೋಡೆಯ ಆಚೆಯಿರುವ ವ್ಯಕ್ತಿಯು ಗೋಡೆಯ ವ್ಯವಧಾನ ಮೂಲಕವಾಗಿ ತೋರದಿರುವಂತೆ– ತೋರುವುದಿಲ್ಲ, ಸೂರ್ಯನ ಪ್ರಖರ ಪ್ರಕಾಶದಲ್ಲಿ ನಕ್ಷತ್ರಗಳು ತಿರಸ್ಕೃತಗೊಂಡು ಇದ್ದೂ ಸಹ ಕಾಣದಿರುವಂತೆ ವಸ್ತು ಇದ್ದರೂ ಅದು ಬೇರೊಂದರಿಂದ ತಿರಸ್ಕೃತವಾಗಿದ್ದರೂ ಕಾಣುವುದಿಲ್ಲ, ನೀರಿನಲ್ಲಿ ನೀರನ್ನು ಹಾಕಿದಾಗ, ಅವೆರಡೂ ಸಮರಸಗೊಂಡಾಗ, ಮೊದಲಿದ್ದ ನೀರು ನಂತರ ಹಾಕಿದ ನೀರಿಗಿಂತಲೂ ಬೇರೆಯಾಗಿ ತೋರುವುದಿಲ್ಲ, ಹಾಗೆಯೇ ಸಮಾನವಾದ ಎರಡು ವಸ್ತುಗಳು ಸಮರಸಗೊಂಡಾಗಲೂ ಅವುಗಳ ಪಾರ್ಥಕ್ಯ ದರ್ಶನ ಉಂಟಾಗುವುದಿಲ್ಲ. ಹೀಗೆ ಇದ್ದ ವಸ್ತುವು ತೋರದಿರಲಿಕ್ಕೆ ಎಂಟು ಕಾರಣಗಳನ್ನು ಇಲ್ಲಿ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ. ವಸ್ತುವು ಕಾಣದಿರುವುದಕ್ಕೆ ಈ ಕಾರಣಗಳ ಹೊರತಾಗಿ ಇನ್ನೂ ಅನೇಕ ಕಾರಣಗಳೂ ಸಹ ಚಿಂತಕರ ಚಿತ್ತದಲ್ಲಿ ತೋರಬಹುದು. ಪ್ರಸ್ತುತವಾಗಿ ಮನಸ್ಸಿನ ಅನವಸ್ಥಾನ ರೂಪವಾದ ಕಾರಣದಿಂದ ಜ್ಞಾನಿಗೆ ಜ್ಞೇಯ ಪದಾರ್ಥವು ತೋರುವುದಿಲ್ಲವೆಂಬುದಾಗಿ ಇಲ್ಲಿ ಸಮರ್ಥಿಸಬಹು ದಾಗಿದೆ. ಅಂದರೆ ಪರಿಪೂರ್ಣವಾದ ಪರಶಿವನಲ್ಲಿ ಈ ಶಿವಯೋಗಿಯ ಚಿತ್ತವೃತ್ತಿಯು ವಿಲೀನವಾಗಿರೋಣದರಿಂದ ಪ್ರಪಂಚದ ವಿಷಯದಲ್ಲಿ ಆತನ ಮನಸ್ಸು ಅನವಧಾನ ವಾಗಿದೆ. ಅಂತೆಯೇ ಜ್ಞೇಯವಿದ್ದರೂ ಸಹ ಅದು ಅವನಿಗೆ ತೋರುವುದಿಲ್ಲ, ವಸ್ತುವೇ ತೋರುವುದಿಲ್ಲವೆಂದ ಬಳಿಕ ಅದರ ಜ್ಞಾನವೂ ಸಹ ಉಳಿಯುವುದಿಲ್ಲವೆಂಬುದಾಗಿ ತಿಳಿದುಕೊಳ್ಳಬೇಕು.

ಹೀಗೆ ಪ್ರಪಂಚಜ್ಞಾನವನ್ನು ಇಲ್ಲದಾಗಿ ಮಾಡಿಕೊಂಡ, ಅಂತೆಯೇ ಜ್ಞಾನ ನಿಷ್ಪತ್ತಿ ಸಂಪನ್ನನಾದ ಶಿವಯೋಗಿಯಲ್ಲಿ ಎಂತಹ ಜ್ಞಾನವು ತಾನೆ ಇರುತ್ತದೆ ಎಂಬ ಜಿಜ್ಞಾಸೆ ಯುಂಟಾದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಅಖಂಡಾನಂದಸಂವಿತ್ತಿಸ್ವರೂಪಂ ಬ್ರಹ್ಮ ಕೇವಲಮ್ ।
ಮಿಥ್ಯಾ ತದನ್ಯದಿತ್ಯೇಷಾ ಸ್ಥಿತಿರ್ಜ್ಞಾನ ಮಿಹೋಚ್ಯತೇ ॥

(ಸಿ. ಶಿ. ೧೯–೪೭)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಶಿವಬ್ರಹ್ಮವು ಕೇವಲವೂ, ಅಖಂಡವೂ, ಆನಂದಸ್ವರೂಪವೂ ಜ್ಞಾನಸ್ವರೂಪವೂ ಆದುದಾಗಿದೆ, ಅದಕ್ಕಿಂತ ವ್ಯತಿರಿಕ್ತವಾದುದೆಲ್ಲವೂ ಮಿಥ್ಯವಾದುದಾಗಿದೆ ಎಂಬುದಾಗಿ ಈ ಶಿವಯೋಗಿಯು ತಿಳಿದು

ಕೊಂಡಿರುತ್ತಾನೆ. ಅಂದರೆ ಪರಶಿವ ಬ್ರಹ್ಮದ ವ್ಯತಿರಿಕ್ತವಾಗಿ ಬೇರಾವುದರ ಜ್ಞಾನವೂ ಅವನಿಗೆ ಇರುವುದಿಲ್ಲ. ಅಂದರೆ ಕೇವಲ ಅಖಂಡವಾದ ಆತ್ಮಜ್ಞಾನವೊಂದೇ ಅವನಲ್ಲಿ ಇರುತ್ತದೆ.

ವೀರಶೈವ ಸಿದ್ಧಾಂತದಲ್ಲಿ ಪರಮಾತ್ಮನು ಸತ್ಯ ; ಪ್ರಪಂಚವು ಮಿಥ್ಯೆಯೆಂಬುದಾಗಿ ವಿಭಜಿಸಿ ಹೇಳದೇ, ಸರ್ವವೆಲ್ಲವನ್ನು ಪರಶಿವರೂಪವಾಗಿಯೇ ತಿಳಿದುಕೊಳ್ಳಬೇಕೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ. ಆದರೆ ವಾಚಕರಿಗೆ ವಿಷಯ ವಸ್ತುವಿನ ಸ್ಪಷ್ಟತೆಯುಂಟಾಗಲೆಂಬ ಉದ್ದೇಶದಿಂದ ಪರಮಾತ್ಮಜ್ಞಾನಕ್ಕಿಂತಲೂ ಭಿನ್ನವಾದ ಜ್ಞಾನವೆಲ್ಲ ಮಿಥ್ಯೆಯೆಂಬುದಾಗಿ ಬೋಧಿಸಲಾಗಿದೆ. ಪರಮಾತ್ಮನಿಗಿಂತಲೂ ಭಿನ್ನವಾದ ಬೇರೊಂದು ವಸ್ತು ಇಲ್ಲದೇಯಿರುವಾಗ ಅದರ ಬಗ್ಗೆ ಮಿಥ್ಯ ಶಬ್ದ ಪ್ರಯೋಗವನ್ನು ಮಾಡಿದ್ದರೂ ಮೂಲ ಸಿದ್ಧಾಂತಕ್ಕೆ ಯಾವ ಚ್ಯುತಿಯೂ ಬರಲಾರದು.

ಇದೇ ವಿಷಯ ವಸ್ತುವನ್ನೇ ಇನ್ನಷ್ಟು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು ಪುನಃ

ಸತ್ತಾತ್ಮನಾನುವೃತ್ತಂ ಯದ್ ಘಟಾದಿಷು ಪರಂ ಹಿ ತತ್ ।
ವ್ಯಾವರ್ತಮಾನಾ ಮಿಥ್ಯೇತಿ ಸ್ಥಿತಿರ್ಜ್ಞಾನಮಿಹೋಚ್ಯತೇ ॥

(ಸಿ. ಶಿ. ೧೯–೪೮)

ಈ ತೆರನಾಗಿ ಆದೇಶಿಸಿದ್ದಾರೆ. ಘಟ, ಪಟ, ಮಠ ಮುಂತಾದ ವಸ್ತುಗಳಲ್ಲಿ ಸತ್ ಎಂಬುದಾಗಿ ಒಂದೇ ಒಂದು ವಸ್ತುವು ಅನುಸ್ಯೂತವಾಗಿರುತ್ತದೆ. ''ಸದೇವ ಸೋಮ್ಯೇದಮಗ್ರ ಆಸೀತ್'' ಎಂಬ ಶ್ರುತಿ ವಚನದಂತೆ ಸರ್ವದರಲ್ಲಿ ಸತ್ತಾರೂಪವಾಗಿ ತೋರುವ ಸದ್ರೂಪವಾದ ವಸ್ತುವೇ ಪರವಸ್ತು ಅರ್ಥಾತ್ ಪರಬ್ರಹ್ಮವೆಂದರ್ಥ. ಏಕೆಂದರೆ ಇದು ಸರ್ವದರಲ್ಲಿ ಸಮಾನವಾಗಿ ಅನುಗತವಾಗಿರುತ್ತದೆ. ಆದರೆ ಇದಕ್ಕಿಂತಲೂ ಭಿನ್ನಗಳಾದ, ಘಟ–ಮಠ–ಪಟಾದಿಗಳು ಪರಸ್ಪರ ಭಿನ್ನವಾಗಿರುತ್ತವೆ. ಹೀಗೆ ಭಿನ್ನವಾಗಿ ತೋರುವ ಅವುಗಳ ನಾಮ ರೂಪಗಳು ಮಿಥ್ಯೆಯಾದವುಗಳಾಗಿದ್ದು ಸರ್ವರಲ್ಲಿ ಅನುಸ್ಯೂತವಾಗಿರುವ ಸದ್ರೂಪವಾದ ಪರಬ್ರಹ್ಮವೊಂದೆ ಸತ್ಯವಾಗಿದೆ. ಈ ವಿಧವಾದ ಜ್ಞಾನವೂ ಈ ಶಿವಯೋಗಿಗೆ ಉಂಟಾಗುತ್ತದೆ. ಈ ಜ್ಞಾನವು ಸ್ಥಿರವಾದುದು. ಇದಕ್ಕೆ ಅನ್ಯವಾದ ಜ್ಞಾನವೆಲ್ಲ ನಿಷ್ಪ್ರಯೋಜಕವೆಂಬುದಾಗಿ ಈತನು ತಿಳಿದುಕೊಂಡಿರುತ್ತಾನೆ.

ಪರಶಿವಬ್ರಹ್ಮವು ಸತ್ತು, ಚಿತ್ತು, ಆನಂದ ಸ್ವರೂಪವಾದುದಾಗಿದೆ. ಇದರ ಈ ಸಚ್ಚಿದಾನಂದ ಸ್ವರೂಪಗಳು ನಮಗೆ ಪ್ರಾಪ್ತವಾಗಿರುವ ಜಾಗ್ರತ್, ಸ್ವಪ್ನ, ಸುಷುಪ್ತಿಗಳಲ್ಲಿ ಪ್ರತಿಯೊಬ್ಬರಿಗೂ ಅನುಭವಗೋಚರಗಳಾಗಿರುತ್ತವೆ. ಜಾಗ್ರದಾವಸ್ಥೆಯಲ್ಲಿ ನಾನು ಇದ್ದೇನೆ, ಅವನು ಇದ್ದಾನೆ, ಅವರು ಇದ್ದಾರೆ ಮತ್ತು ಅದು ಇದೆ ಮುಂತಾಗಿ ವ್ಯವಹರಿಸುವಾಗ ಇದ್ದೇನೆ, ಇದೆ ಮುಂತಾದವುಗಳ ರೂಪದಲ್ಲಿ ಪರಮಾತ್ಮನ ಸದ್ರೂಪವೇ ಸರ್ವರಿಗೂ ಅನುಭವಕ್ಕೆ ಬರುತ್ತದೆ. ಇದರಂತೆ ನಾವು ಮಲಗಿಕೊಂಡಾಗ ತೋರುವ ಸ್ವಪ್ನವು ಯಾರ ಪ್ರಕಾಶದಲ್ಲಿ ಪ್ರಕಾಶಮಾನವಾಗಿ ತೋರುತ್ತದೆ ಎಂಬುದಾಗಿ ವಿಚಾರಿಸಲು ಆ ಅವಸ್ಥೆಯಲ್ಲಿ ಸೂರ್ಯ, ಚಂದ್ರ, ನಕ್ಷತ್ರ ಮತ್ತು ಅಗ್ನಿ ಮುಂತಾದ ಯಾವ ಜ್ಯೋತಿಯ ಬೆಳಕೂ ಅಲ್ಲಿರುವುದಿಲ್ಲ. ಈ ಎಲ್ಲ ಬಾಹ್ಯ ಜ್ಯೋತಿಗಳು ಇರದೇ

ಇದ್ದರೂ ಅಲ್ಲೊಂದು ಜ್ಯೋತಿಯ ಅನುಭವವು ಸರ್ವರಿಗೂ ಉಂಟಾಗುತ್ತದೆ. ಆ ಜ್ಯೋತಿಯು ಬೇರಾವ ಜ್ಯೋತಿಯಾಗಿರದೇ ಪರಶಿವನ ಚಿಜ್ಯೋತಿಯೇ ಆಗಿರುತ್ತದೆ. ಅಂದಾಗ ಸ್ವಪ್ನಾವಸ್ಥೆಯಲ್ಲಿ ನಾವು ನಮ್ಮ ಚಿದ್ರೂಪವಾದ ಆತ್ಮಜ್ಯೋತಿಯ ಬೆಳಕಿನಲ್ಲಿಯೇ ವ್ಯವಹರಿಸುತ್ತೇವೆಂಬುದು ಸಿದ್ಧವಾಗುತ್ತದೆ. ಇದೇ ಪ್ರಕಾರವಾಗಿ ಗಾಢ ನಿದ್ರಾವಸ್ಥೆಯಲ್ಲಿ ಪ್ರತಿಯೊಬ್ಬರಿಗೂ ಆನಂದದ ಅನುಭೂತಿಯು ಉಂಟಾಗುತ್ತಲಿರುತ್ತದೆ. ಅಲ್ಲಿ ಅನುಭವಿಸಲ್ಪಡುವ ಈ ಆನಂದವಾದರೂ ಶಬ್ದ ಸ್ಪರ್ಶಾದಿ ವಿಷಯಗಳಿಂದುಂಟಾಗುವ ವೈಷಯಿಕವಾದ ಸುಖವಲ್ಲ. ಏಕೆಂದರೆ ಅಲ್ಲಿ ಈ ಯಾವ ವಿಷಯಗಳೂ ಇರುವುದಿಲ್ಲ. ಅದು ನಿರುಪಾಧಿಕವಾದ, ನಿರತಿಶಯವಾದ ಆತ್ಮಾನಂದವೆಂದೇ ಪರಿಭಾವಿಸಬೇಕು.

ಹೀಗೆ ಪರಮಾತ್ಮನ ಸತ್ತು, ಚಿತ್ತು, ಆನಂದ ಸ್ವರೂಪಗಳ ಅನುಭವವು ದಿನಂಪ್ರತಿ ಸರ್ವರಿಗೂ ಆಗುತ್ತಿದ್ದರೂ, ಅಜ್ಞ ಜೀವಿಗಳಿಗೆ ಅದರ ವಿವೇಕವು ಇರುವುದಿಲ್ಲ. ಆದರೆ ಶಿವಾದ್ವೈತ ಜ್ಞಾನ ಸಂಪನ್ನನಾದ ಈ ಜ್ಞಾನ ನಿಷ್ಪತ್ತಿಸ್ಥಲದ ಸಾಧಕನು ಅಂತಹ ಜ್ಞಾನವನ್ನು ಪಡೆದವನಾಗಿ, ನಾಮರೂಪಾತ್ಮಕವಾದ ಬಾಹ್ಯವ್ಯಾವಹಾರಿಕ ಜ್ಞಾನವನ್ನು ನಿರ್ಲಕ್ಷಿಸುತ್ತಾನೆಂಬುದಾಗಿ ತಿಳಿದುಕೊಳ್ಳಬೇಕು.

ಜ್ಞಾನನಿಷ್ಪತ್ತಿ ಸ್ಥಲದ ಶಿವಯೋಗಿಯ ಜ್ಞಾನಸ್ವರೂಪದ ಬಗ್ಗೆ ಇನ್ನಷ್ಟು ಸ್ಪಷ್ಟಪಡಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಅಕಾರಣಮಕಾರ್ಯಂ ಯದಶೇಷೋಪಾಧಿ ವರ್ಜಿತಂ ।
ತದ್‌ಬ್ರಹ್ಮ ತದಹಂ ಚೇತಿ ನಿಷ್ಠಾ ಜ್ಞಾನಮುದೀರ್ಯತೇ ॥

(ಸಿ. ಶಿ. ೧೯–೪೯)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಪರಬ್ರಹ್ಮ ಪರಮಾತ್ಮವು ಕಾರಣವೂ ಅಲ್ಲ, ಕಾರ್ಯವೂ ಅಲ್ಲ, ಅದು ಎಲ್ಲ ಉಪಾಧಿಗಳಿಂದ ಮುಕ್ತವಾದುದಾಗಿದೆ. ಅಂತೆಯೇ ನಿರುಪಾಧಿಕ ರೂಪವಾಗಿದೆ. ಹೀಗೆ ಕಾರ್ಯ ಕಾರಣಭಾವರಹಿತವಾದ ಸರ್ವವಿಧ ಉಪಾಧಿ ವಿರಹಿತವಾದ ಯಾವ ಪರಬ್ರಹ್ಮ ವಸ್ತುವಿದೆಯೋ ಅದುವೇ ನಾನಿದ್ದೇನೆ. ಚರಾಚರ ಪ್ರಪಂಚವೂ ಸಹ ಅದುವೇಯಾಗಿರುತ್ತದೆ. ಈ ವಿಧವಾದ ದೃಢನಿಶ್ಚಯವೇ ಸರ್ವಶ್ರೇಷ್ಠವಾದ ಜ್ಞಾನವಾಗಿರುತ್ತದೆ. ಇಲ್ಲಿ ಪ್ರಯೋಗಿಸಲ್ಪಟ್ಟ ನಿಷ್ಠಾ ಶಬ್ದವು ಅತ್ಯಂತ ಮಹತ್ವಪೂರ್ಣವಾದುದು. ನಿಶ್ಚಯೇನ ತಿಷ್ಠತೇತಿ ನಿಷ್ಠಾ ಎಂಬ ವ್ಯುತ್ಪತ್ತಿಯ ಮೇರೆಗೆ ದೃಢಜ್ಞಾನವೆಂದರ್ಥವಾಗುತ್ತದೆ. ಸ್ವಾತಿಯ ಮಳೆಯ ನೀರು ಸಮುದ್ರದಲ್ಲಿ ಬಿದ್ದು ಒಮ್ಮೆ ಉಪ್ಪಿನ ಸ್ವರೂಪವನ್ನು ತಾಳುವುದು. ಅದುವೇ ಆನೆಯಕಲ್ಲಿನ ರೂಪದಲ್ಲಿ ಭೂಮಿಗೂ ಬೀಳಬಹುದು. ಈ ಆನೆಕಲ್ಲು, ಉಪ್ಪುಗಳು ಕಾಲಾಂತರದಲ್ಲಿ ಮತ್ತೆ ನೀರಿನ ರೂಪವನ್ನು ತಾಳಿ ನೀರಿನಲ್ಲಿ ನೀರಾಗಿ ಹೋಗುತ್ತವೆ. ಅದೇ ಸ್ವಾತಿಯ ಹನಿಗಳೇ ಕಪ್ಪೆ ಚಿಪ್ಪಿನಲ್ಲಿ ಬಿದ್ದಾಗ ಮುತ್ತಾಗುತ್ತವೆ. ಒಮ್ಮೆ ಮುತ್ತಾದ ಆ ಹನಿಗಳು ಮತ್ತೆಂದೂ ನೀರಿನ ಸ್ವರೂಪವನ್ನು ತಾಳುವುದಿಲ್ಲ. ಹಾಗೆಯೇ ಜ್ಞಾನನಿಷ್ಪತ್ತಿಸ್ಥಲದ ಶಿವಯೋಗಿಗೆ ಉಂಟಾದ ಶಿವಾದ್ವೈತಜ್ಞಾನವು ಅತ್ಯಂತ ದೃಢವಾದುದಾಗಿದ್ದು, ಅದೆಂದೂ ತನ್ನ ಸ್ವರೂಪವನ್ನು

ಬದಲಿಸಿಕೊಳ್ಳುವುದಿಲ್ಲ. ಅಂತೆಯೇ ಈ ಶಿವಯೋಗಿಯು ಸರ್ವವೆಲ್ಲವನ್ನು ಶಿವರೂಪವಾಗಿಯೇ ಅನುಭವಿಸುತ್ತಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನನಿಷ್ಪತ್ತಿಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಪುನಃ–

ಜ್ಞಾತಾಽಪ್ಯಹಂ ಜ್ಞೇಯಮಿದಮಿತಿ ವ್ಯವಹೃತಿಃ ಕುತಃ ।
ಅಭೇದಬ್ರಹ್ಮಸ್ವಾರಸ್ಯೇ ನಿರಸ್ತಾಖಿಲವಸ್ತುನಿ ॥

(ಸಿ. ಶಿ. ೧೯–೫೦)

ಹೀಗೆ ಆದೇಶವಿತ್ತಿದ್ದಾರೆ. ತಾತ್ಪರ್ಯವೇನೆಂದರೆ, ''ನೇಹ ನಾನಾಽಸ್ತಿ ಕಿಂಚನ'' ಎಂಬ ಶ್ರುತಿ ವಚನದಂತೆ ಸಮಸ್ತ ಪ್ರಾಪಂಚಿಕ ಭೇದ ಶೂನ್ಯವಾದ, ಅದ್ವಿತೀಯವಾದ ಪರಬ್ರಹ್ಮದೊಂದಿಗೆ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಗೆ ಅಹಂ ಜ್ಞಾತಾ ಅಂದರೆ ನಾನು ತಿಳಿದುಕೊಳ್ಳುವವನು. ಇದಂ ಜ್ಞೇಯಂ ಅಂದರೆ ಇದು ತಿಳಿದುಕೊಳ್ಳಲ್ಪಡುವಂಥಾದ್ದು ಎಂಬ ಭೇದವ್ಯವಹಾರವು ಉಳಿಯುವುದೇ ಇಲ್ಲ. ಪರಶಿವ ಸ್ವರೂಪವನ್ನು ತಾಳಿದ ಈತನ ಜ್ಞಾನ ಅಖಂಡರೂಪವಾಗಿರುವುದರಿಂದ ಇಲ್ಲಿ ತ್ರಿಪುಟಿಯ ವ್ಯವಹಾರವು ಸಂಭವಿಸುವುದಿಲ್ಲ. ಹೀಗೆ ವ್ಯಾವಹಾರಿಕ ತ್ರಿಪುಟಿ ಜ್ಞಾನದ ನಿವೃತ್ತಿ ಮತ್ತು ಅಖಂಡವಾದ ಆತ್ಮಜ್ಞಾನದ ಪ್ರಾಪ್ತಿಯನ್ನು ತಿಳಿಸುವ ಸ್ಥಲವೇ ಜ್ಞಾನನಿಷ್ಪತ್ತಿ ಸ್ಥಲವು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸ್ಥಲದಲ್ಲಿ ಉಪದೇಶಿಸಿದ ಜ್ಞಾನನಿಷ್ಪತ್ತಿಸ್ಥಲ ವಿಷಯಕವಾದ ಸರ್ವ ವಿಚಾರಗಳನ್ನು ಪ್ರತಿಯೊಬ್ಬರೂ ತಿಳಿದುಕೊಂಡು ಇಂತಹ ಅಲೌಕಿಕವಾದ ಸ್ಥಿತಿಯನ್ನು ಸರ್ವರೂ ಹೊಂದುವಂತಾಗಲೆಂಬುದಾಗಿ ತಿಳಿಯಪಡಿಸಿ, ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೪ ನವ್ಹೆಂಬರ್, ೧೯೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಪಿಂಡಾಕಾಶಸ್ಥಲ

ಆಧ್ಯಾತ್ಮ ಪಿಪಾಸುಗಳಾದ ಸದ್ಭಕ್ತರೆ !

ಇಲ್ಲಿಯವರೆಗೆ ನೀವೆಲ್ಲ ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗಷಟ್‌ಸ್ಥಲಾಂತರ್ಗತವಾದ ಶರಣಸ್ಥಲದ ಅವಾಂತರ ಸ್ಥಲಗಳ ಬಗ್ಗೆ ಆಶೀರ್ವಚನವನ್ನು ಆಲಿಸುತ್ತ ಬಂದಿದ್ದೀರಿ. ನಿನ್ನೆ ತಾನೆ ಜ್ಞಾನನಿಷ್ಪತ್ತಿಸ್ಥಲದ ಬಗ್ಗೆ ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಈಗ ಈ ಶರಣಸ್ಥಲದಲ್ಲಿ ಕ್ರಮಪ್ರಾಪ್ತವಾದ ಸ್ಥಲವೇ ಪಿಂಡಾಕಾಶಸ್ಥಲವು. ಪಿಂಡಾಕಾಶಸ್ಥಲವೆಂದರೆ, ಪಿಂಡಸ್ಥವಾದ ಆಕಾಶವು ಹಾಗೂ ಬ್ರಹ್ಮಾಂಡದಲ್ಲಿಯ ಆಕಾಶವು ವಸ್ತುತಃ ಒಂದೇಯಾಗಿರುವಂತೆ ಪಿಂಡದಲ್ಲಿಯ ಆತ್ಮವೇ ವಿಶ್ವದಲ್ಲೆಲ್ಲ ವ್ಯಾಪಿಸಿದ ಪರಮಾತ್ಮಸ್ವರೂಪವಾಗಿದೆ ಎಂಬ ವಿವೇಕವುಳ್ಳವನು ಎಂದರ್ಥ. ಅದನ್ನೇ ಪೂಜ್ಯಪಾದರು–

> ಯಥಾ ಪಿಂಡಸ್ಥ ಆಕಾಶಸ್ತಥಾತ್ಮಾ ಪೂರ್ಣ ಉಚ್ಯತೇ ।
> ಏತದರ್ಥ ವಿವೇಕೋ ಯಃ ಪಿಂಡಾಕಾಶಸ್ಥಲಂ ವಿದುಃ ॥

(ಸಿ. ಶಿ. ೧೯–೫೧)

ಹೀಗೆ ಆದೇಶಿಸಿದ್ದಾರೆ. ''ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ'' ಎಂಬ ಅಮೃತ ಬಿಂದು ಉಪನಿಷತ್ತಿನ ವಚನದಂತೆ ಒಬ್ಬನೇ ಪರಮಾತ್ಮನು ಸರ್ವತ್ರ ವ್ಯಾಪ್ತನಾಗಿದ್ದಾನೆ. ಒಂದೇ ಆಕಾಶವು ಘಟ ಮಠಗಳಲ್ಲಿ ಇದ್ದು, ಅವುಗಳ ಹೊರಗೂ ಕೂಡ ಸರ್ವತ್ರ ವ್ಯಾಪ್ತವಾಗಿರುತ್ತದೆ. ಘಟ ಮಠ ಮುಂತಾದ ಉಪಾಧಿಗಳ ಮೂಲಕವಾಗಿ ಅದು ವ್ಯವಹಾರದಲ್ಲಿ ಘಟಾಕಾಶ ಮತ್ತು ಮಠಾಕಾಶವೆಂಬುದಾಗಿ ವ್ಯವಹರಿಸಲ್ಪಡುತ್ತಿದ್ದರೂ, ಅದು ಒಂದೇಯಾದ ಮಹಾಕಾಶವೇ ಆಗಿರುತ್ತದೆ. ಆಕಾಶವನ್ನು ಯಾವುದೇ ಉಪಾಧಿಗಳ ಮೂಲಕ ಖಂಡ ಖಂಡವಾಗಿ ತುಂಡರಿಸಲು ಸಾಧ್ಯವಾಗುವುದಿಲ್ಲ, ಏಕೆಂದರೆ ಅದು ಅತಿ ಸೂಕ್ಷ್ಮವಾಗಿದ್ದು, ಸರ್ವತ್ರ ವ್ಯಾಪಕವಾಗಿರುತ್ತದೆ. ಮಹಾಭೂತವಾದ ಆಕಾಶವೇ ಖಂಡತುಂಡವಾಗಲು ಸಾಧ್ಯವಿಲ್ಲದಿದ್ದಾಗ ಆಕಾಶಕ್ಕೆ ಆಕಾಶನಾದ ಆತ್ಮನಲ್ಲಿಯೂ ಯಾವ ಖಂಡ ತುಂಡತೆಗಳು ಸಾಧ್ಯವಿಲ್ಲ, ಏಕೆಂದರೆ ಆತ್ಮವೂ ಸಹ ಅತ್ಯಂತ ಸೂಕ್ಷ್ಮವಾಗಿದ್ದು, ಸರ್ವತ್ರ ಪರಿಪೂರ್ಣವಾಗಿರುತ್ತದೆ. ಆತ್ಮವು ಪ್ರತಿಯೊಂದು ಪಿಂಡದಲ್ಲಿ ಭಿನ್ನ ಭಿನ್ನವಾಗಿ ತೋರುತ್ತಿದ್ದರೂ ಅದು ಒಂದೇಯಾಗಿದೆ ಎಂಬ ವಿವೇಕವು ಯಾರಿಗೆ ಉಂಟಾಗುವುದೋ ಅವನೇ ಪಿಂಡಾಕಾಶನು.

ಇದೇ ವಿಷಯವನ್ನೇ ಇನ್ನಷ್ಟು ಸ್ಪಷ್ಟಪಡಿಸುವುದಕ್ಕಾಗಿ ಪೂಜ್ಯಪಾದರು ಮಹರ್ಷಿ ಅಗಸ್ತ್ಯನನ್ನು ಉದ್ದೇಶಿಸಿ–

> ಘಟೋಪಾಧಿರ್ಯಥಾಕಾಶಃ ಪರಿಪೂರ್ಣಃ ಸ್ವರೂಪತಃ ।
> ತಥಾಫಿಂಡಸ್ಥಿತೋ ಹ್ಯಾತ್ಮಾ ಪರಿಪೂರ್ಣಃ ಪ್ರಕಾಶತೇ ॥

(ಸಿ. ಶಿ. ೧೯–೫೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಕಾಶವು ಅನೇಕ ಘಟಗಳಲ್ಲಿ ಭಿನ್ನ ಭಿನ್ನವಾಗಿ ತೋರುತ್ತಿದ್ದರೂ, ಅದು ಒಂದೇ ಹಾಗೂ ಪರಿಪೂರ್ಣವಾಗಿರುವಂತೆ ಪ್ರತಿಯೊಬ್ಬರ ಪಿಂಡಾಂಡದಲ್ಲಿರುವ ಆತ್ಮವೂ ಸಹ ಅಖಂಡವೂ ಪರಿಪೂರ್ಣವೂ ಆಗಿ ಪ್ರಕಾಶಿಸುತ್ತಿರುತ್ತದೆ. ಈ ಪಾಂಚಭೌತಿಕ ಪ್ರಪಂಚದಲ್ಲಿ ಆತ್ಮನಿಗೆ ಹೋಲಿಕೆಯಾಗು ವಂಥಾದ್ದು ಆಕಾಶವೊಂದೇ ! ಏಕೆಂದರೆ ಆಕಾಶವೂ ಸಹ ಆತ್ಮದಂತೆ ವ್ಯಾಪಕವೂ ಸೂಕ್ಷ್ಮವೂ ಆಗಿದೆ. ಅಂತೆಯೇ ಪೂಜ್ಯಪಾದರು ಸರ್ವರಿಗೂ ಸಹಜವಾಗಿ ಅನುಭವ ಗೋಚರವಾಗಲೆಂಬ ಉದ್ದೇಶದಿಂದ ಆಕಾಶದ ಉದಾಹರಣೆಯನ್ನು ಕೊಟ್ಟು ಆತ್ಮದ ಅಖಂಡತೆ ಹಾಗೂ ವ್ಯಾಪಕತೆಯ ಬಗ್ಗೆ ತಿಳಿ ಹೇಳಿದ್ದಾರೆ. ಇಂತಹ ಆತ್ಮದ ಅಖಂಡತೆ ಯನ್ನು ಅನುಭವ ಮಾಡಿಕೊಡುವ ಸ್ಥಲವೇ ಪಿಂಡಾಕಾಶ ಸ್ಥಲವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪೂರ್ವೋಕ್ತ ವಿಷಯವನ್ನೇ ಪುನಃ-

ಅಂತಃಸ್ಥಿತಂ ಪರಾಕಾಶಂ ಶಿವಮದ್ವೈತ ಲಕ್ಷಣಮ್ ।
ಭಾವಯೇದ್ ಯಃ ಸುಮನಸಾ ಪಿಂಡಾಕಾಶಃ ಸ ಉಚ್ಯತೇ ॥

ಶಿವಾಗಾರಮಿದಂ ಪ್ರೋಕ್ತಂ ಶರೀರಂ ಬೋಧದೀಪಿತಮ್ ।
ಷಟ್‌ತ್ರಿಂಶತ್ ತತ್ವಘಟಿತಂ ಸುಮನಃ ಪದ್ಮಪೀಠಕಂ ॥

ಪರಾಕಾಶಸ್ವರೂಪೇಣ ಪ್ರಕಾಶಃ ಪರಮೇಶ್ವರಃ ।
ಹೃದಾಕಾಶಗುಹಾಲೀನೋ ದೃಶ್ಯತೇಽಂತಃ ಶರೀರಿಣಾಮ್ ॥

(ಸಿ. ಶಿ. ೧೯-೫೩-೫೫)

ಹೀಗೆ ದೃಢಪಡಿಸಿದ್ದಾರೆ. ತನ್ನ ಹೃದಯದಲ್ಲಿರುವ ಅದ್ವಿತೀಯನಾದ ಚಿದಾಕಾಶ ಸ್ವರೂಪ ನಾದ ಶಿವನನ್ನು ಅಖಂಡವಾಗಿ ದೃಢವಾದ ಮನಸ್ಸಿನಿಂದ ಭಾವಿಸುವುದೇ ಪಿಂಡಾಕಾಶವು. ''ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ'', ''ಶಿವ ಏಕೋ ಧ್ಯೇಯಃ ಶಿವಂಕರಃ'' ಮುಂತಾದ ಶ್ರುತಿವಚನಗಳಲ್ಲಿ ಶಿವನು ಒಬ್ಬನೇಯಾಗಿದ್ದಾನೆ. ಅವನಿಗೆ ಸರಿಸಮಾನ ರಾದವರು ಬೇರಾರೂ ಇಲ್ಲ, ಅಂತಲೆ ಅವನನ್ನು ತನ್ನಾತ್ಮರೂಪನನ್ನಾಗಿ ಧ್ಯಾನಿಸ ಬೇಕೆಂಬುದಾಗಿ ಉಪದೇಶಿಸಲಾಗಿದೆ. ಹೀಗೆ ಶ್ರುತಿ ಹಾಗೂ ಆಗಮಗಳಲ್ಲಿ ಪರಮಾತ್ಮನ ಅಖಂಡತ್ವವು ಪ್ರತಿಪಾದಿಸಲ್ಪಟ್ಟಿದೆ. ವಸ್ತು ಸ್ಥಿತಿಯು ಸಹ ಹಾಗೆಯೇ ಇದೆ. ಆದರೆ ಸಾಧಕನು ಎಲ್ಲಿಯವರೆಗೆ ಹಾಗೆ ಧ್ಯಾನಾಸಕ್ತನಾಗುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಇದರ ಅನುಭವವಾಗುವುದಿಲ್ಲ, ಅಂತೆಯೇ ಪೂಜ್ಯಪಾದರು ''ಸುಮನಸಾ ಭಾವಯೇದ್'' ಎಂಬುದಾಗಿ ಉಪದೇಶಿಸಿದ್ದಾರೆ. ಮನಸ್ಸು ತನ್ನಲ್ಲಿಯ ವಿಕೃತ ಸ್ವರೂಪ ವನ್ನು ಕಳೆದುಕೊಂಡು, ಸಾತ್ವಿಕ ಸ್ವರೂಪವನ್ನು ತಾಳದೇ ಸುಮನವಾಗಲಾರದು. ಒಮ್ಮೆ ಅದು ಸುಮನವಾದರೆ, ಅದು ಸರ್ವತ್ರ ಅಂದರೆ ಪಿಂಡ-ಬ್ರಹ್ಮಾಂಡಗಳಲ್ಲೆಲ್ಲ ಒಬ್ಬನೇ ಯಾದ ಶಿವನನ್ನು ಭಾವಿಸಿ ಅದರ ವಿಲಕ್ಷಣವಾದ ಆನಂದವನ್ನು ಅನುಭವಿಸುವನು.

ಈ ಜಗತ್ತಿನಲ್ಲಿ ಇರುವ ಎಂಬತ್ನಾಲ್ಕು ಲಕ್ಷ ಪ್ರಕಾರದ ಜೀವರಾಶಿಗಳಲ್ಲಿ ಮನುಷ್ಯ ಜನ್ಮವು ಶ್ರೇಷ್ಠವೆಂಬುದಾಗಿ ಪ್ರತಿಪಾದಿಸಲಾಗಿದೆ. ಇಷ್ಟೇ ಅಲ್ಲ, ಪೂರ್ವದಲ್ಲಿ ತಿಳಿಸಿದ ಪ್ರಕಾರ ಯಾವ ಮಾನವ ದೇಹದಲ್ಲಿ ಶಿವಧ್ಯಾನಾದಿಗಳು ನಡೆಯುತ್ತವೆಯೋ ಆ ದೇಹವು

ಸಾಕ್ಷಾತ್ ಶಿವಮಂದಿರವೆಂಬುದಾಗಿ ಪೂಜ್ಯಪಾದರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ''ದೇಹಃ ಶಿವಾಲಯಃ ಸಾಕ್ಷಾತ್ ತತ್ರಾಸ್ತೇ ಪರಮಃ ಶಿವಃ'' ಎಂಬ ವಾತುಲೋತ್ತರಾಗಮದ ವಚನದಂತೆ ಮನುಷ್ಯ ದೇಹವು ಶಿವನ ಆಗಾರವಾಗಿದೆ. ಈ ಶಿವಾಗಾರವು ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ವಗಳೆಂಬ ಸ್ತಂಭಗಳಿಂದ ನಿರ್ಮಿಸಲ್ಪಟ್ಟಿರುತ್ತದೆ. ಈ ಶಿವಾಗಾರದಲ್ಲಿ ಸುಮನಸ್ಸೆಂಬುವುದೇ ಪದ್ಮ ಪೀಠವು. ಇಲ್ಲಿ ಜ್ಞಾನವೇ ದೀಪವಾಗಿರುತ್ತದೆ. ಪರಾಕಾಶ ಸ್ವರೂಪನಾದ ಪರಮೇಶ್ವರನು ಹೃದಯಾಕಾಶವೆಂಬ ಗುಹೆಯಲ್ಲಿ ಅವಿತು ಕುಳಿತಿದ್ದಾನೆ. ಗುರೂಪದೇಶದ ಮೂಲಕ ಆ ಗುಹೆಯಲ್ಲಿ ಯಾರು ಬೋಧದೀಪವನ್ನು ಪ್ರಜ್ವಲಿಸುವರೋ ಅವರಿಗೆ ಅವನು ಅನುಭವ ಗೋಚರನಾಗುತ್ತಾನೆ ಎಂಬುದಾಗಿ ಪೂಜ್ಯಪಾದರು ಅಪ್ಪಣೆ ಕೊಡಿಸಿದ್ದಾರೆ.

ಹೊರಗೆ ದೇವಾಲಯಗಳನ್ನು ನಿರ್ಮಿಸಿ ದೇವತಾ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡುವ ಕ್ರಿಯೆಯನ್ನು ನಾವು ಬಹಳ ಕಡೆಗೆ ನೋಡುತ್ತೇವೆ. ಈ ವ್ಯವಹಾರದಲ್ಲಿ ಮನುಷ್ಯರು ದೇವಾಲಯವನ್ನು ನಿರ್ಮಿಸುತ್ತಾರೆ. ಓರ್ವ ಶಿಲ್ಪಿಯು ಸುಲಕ್ಷಣವಾದ ಮೂರ್ತಿಯನ್ನು ತಯಾರಿಸಿಕೊಡುತ್ತಾನೆ. ಮಾನವ ದೇಹಧಾರಿಯಾದ ಸದ್ಗುರುಗಳು ಆ ವಿಗ್ರಹಕ್ಕೆ ಸಂಸ್ಕಾರ ನೀಡಿ ಮಂತ್ರ ಸಾಮರ್ಥ್ಯದಿಂದ ಮಾಡಲ್ಪಟ್ಟ, ಅಭಿಷೇಕಾದಿ ಕ್ರಿಯೆಗಳ ಮೂಲಕ ವಿಗ್ರಹದಲ್ಲಿಯ ಶಿಲಾತ್ವವನ್ನು ದೂರಮಾಡಿ, ಶಿವಕಲಾ ಸಂಯೋಜನೆಯನ್ನು ಮಾಡಿ, ಶಿವಲಿಂಗಾದಿಗಳಲ್ಲಿ ಪ್ರಾಣಪ್ರತಿಷ್ಠೆಯನ್ನು ಮಾಡಿ ಅದನ್ನು ಆ ಮಂದಿರದಲ್ಲಿ ಸಂಸ್ಥಾಪಿಸುತ್ತಾರೆ. ಭಕ್ತರಾದವರು ಆ ದೇವಾಲಯಗಳಿಗೆ ಹೋಗಿ, ಭಕ್ತಿಯಿಂದ ಭಜಿಸಿ, ತಮ್ಮ ಮನೋಕಾಮನೆಗಳನ್ನು ಪೂರ್ಣ ಮಾಡಿಕೊಳ್ಳುತ್ತಾರೆ. ಈ ಹೊರಗಿನ ದೇವಾಲಯಗಳು ಮಾನವ ಸಮಾಜದ ಮೂಲಕವಾಗಿ ನಿರ್ಮಿಸಲ್ಪಟ್ಟವುಗಳಾಗಿರುತ್ತವೆ. ಆದರೆ ದೇಹವೆಂಬ ದೇವಾಲಯವು ಹೊರಗಿನ ದೇವಾಲಯಕ್ಕಿಂತ ವಿಲಕ್ಷಣವಾಗಿದ್ದು, ದೇವ ನಿರ್ಮಿತವಾದುದಾಗಿದೆ. ಅಂತೆಯೇ ದೇಹರೂಪಿ ದೇವಾಲಯವನ್ನು ದಿವ್ಯ ದೇವಾಲಯವೆಂದು ಕರೆಯಬೇಕು. ಈ ದಿವ್ಯ ದೇವಾಲಯದಲ್ಲಿ ಶಿವನು ಬೇರಾರಿಂದಲೂ ಪ್ರತಿಷ್ಠಾಪನೆಗೊಂಡವನಾಗಿರದೆ ''ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್'' ಎಂಬ ಶ್ರುತಿವಚನದಂತೆ ಸ್ವತಃ ತಾನೆ ರಚಿಸಿ ಅದರಲ್ಲಿ ತನ್ನಿಂದ ತಾನೆ ಪ್ರತಿಷ್ಠೆಗೊಂಡವನಾಗಿದ್ದಾನೆ. ಆದ್ದರಿಂದ ವೀರಶೈವ ಸಿದ್ಧಾಂತದಲ್ಲಿ ಹೊರಗಿನ ದೇವಾಲಯಗಳಲ್ಲಿ ದೇವರನ್ನು ಕಾಣುವುದಕ್ಕಿಂತ ದೇಹರೂಪಿ ದಿವ್ಯ ದೇವಾಲಯದಲ್ಲಿಯೇ ಆತನನ್ನು ಅನುಭವಿಸಬೇಕೆಂಬುದಾಗಿ ಉಪದೇಶಿಸಲಾಗಿದೆ. ಅಂತೆಯೇ ಭಕ್ತಿ ಭಂಡಾರಿ ಬಸವಣ್ಣನವರು–

ಉಳ್ಳವರು ಶಿವಾಲಯವ ಮಾಡುವರು,
ನಾನೇನ ಮಾಡಲಿ ಬಡವನಯ್ಯ,
ಎನ್ನ ಕಾಲುಗಳೇ ಕಂಭ, ದೇಹವೇ ದೇಗುಲ,
ಎನ್ನ ಶಿರವೇ ಹೊನ್ನ ಕಳಸವಯ್ಯ,
ಕೂಡಲ ಸಂಗಮದೇವ ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಎಂಬ ಈ ವಚನದಲ್ಲಿ ಹೊರಗಿನ ಭವ್ಯ ದೇವಾಲಯಗಳಿಗಿಂತ ದೇಹವೆಂಬ ದಿವ್ಯ ದೇವಾಲಯವೇ ಶ್ರೇಷ್ಠವೆಂಬುದಾಗಿ ತಿಳಿಸಿದ್ದನ್ನು ಕಾಣುತ್ತೇವೆ.

ಪ್ರತಿಯೊಬ್ಬರ ಹೃದಯಾಕಾಶವೆಂಬ ಗುಹೆಯಲ್ಲಿ ಪರಮಾತ್ಮನು ನಿವಾಸಿಸು ತ್ತಿದ್ದರೂ, ನಮ್ಮ ದೇಹದಲ್ಲಿಯ ಇಂದ್ರಿಯಗಳೆಲ್ಲ ಬಹಿರ್ಮುಖಗಳಾಗಿರೋಣದರಿಂದ ನಾವು ಒಳಗೆ ನೋಡದೇ ಅದನ್ನು ಮರೆತು ಹೊರಗೆ ತಿರುಗುತ್ತಲಿರುತ್ತೇವೆ. ''ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ವ್ಯಾವೃತ್ತ ಚಕ್ಷುಃ ಅಮೃತತ್ವಮಿಚ್ಛನ್'' ಎಂಬ ಶ್ರುತಿ ಪ್ರಮಾಣ ದಂತೆ ಮನದ ವಿಕಾರಗಳಿಗೆ ಒಳಗಾಗದಿರುವ ಯಾರೋ ಒಬ್ಬ ಧೈರ್ಯಶಾಲಿಯು ತನ್ನ ಇಂದ್ರಿಯಗಳನ್ನೆಲ್ಲ ಅಂತರ್ಮುಖಗಳನ್ನಾಗಿ ಮಾಡಿಕೊಂಡು ಅಂತಸ್ಥವಾದ ಪರಮಾತ್ಮ ಸ್ವರೂಪವನ್ನು ಅನುಭವಿಸುತ್ತಾನೆ. ಮನಸ್ಸಿನ ವೃತ್ತಿಯು ಅಂತರ್ಮುಖವಾಗುವುದರ ಜೊತೆಗೆ ಆ ಹೃದಯಾಕಾಶದಲ್ಲಿ ಗುರುವಿನ ಬೋಧರೂಪವಾದ ದೀಪವು ಪ್ರಜ್ವಲಿಸಲು ಹೃದಯ ಗುಹೆಯಲ್ಲಿರುವ ಆ ಪರಾತ್ಪರ ವಸ್ತುವು ಅವನಿಗೆ ಅನುಭವ ಗೋಚರ ವಾಗುತ್ತದೆ.

ಜಗತ್ತಿನಲ್ಲಿ ಮನೆ ಅಥವಾ ಮಂದಿರಗಳನ್ನು ನಿರ್ಮಿಸುವಾಗ ಬೇಕಾಗುವ ಸಾಮಗ್ರಿ ಗಳು ಹೆಚ್ಚು ಕಡಿಮೆ ಒಂದೇ ತೆರನಾಗಿರುತ್ತವೆ. ಕಲ್ಲು, ಮಣ್ಣು, ಕಟ್ಟಿಗೆ, ಇಟ್ಟಂಗಿ, ಸಿಮೆಂಟು, ಕಬ್ಬಿಣ ಇವುಗಳೇ ಮನೆ ಅಥವಾ ಮಂದಿರಗಳನ್ನು ಕಟ್ಟುವ ಸಾಮಗ್ರಿಗಳು. ಆದರೂ ನಿರ್ಮಿತವಾದ ಭವನದಲ್ಲಿ ದೇವರ ನಿತ್ಯ ನಿವಾಸವಿರುವ ಸ್ಥಾನಕ್ಕೆ ಮಂದಿರ ವೆಂತಲೂ, ಸಂಸಾರಿ ಜೀವಿಗಳು ವಾಸಿಸುವ ಭವನಕ್ಕೆ ಮನೆಯೆಂತಲೂ ಕರೆಯುವರು. ಮಂದಿರದ ಬಗ್ಗೆ ಇರುವ ಶ್ರದ್ಧಾಭಾವನೆ ಮನೆಯ ಬಗ್ಗೆ ಇರುವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಭಕ್ತರಾದವರು ಮಂದಿರದೊಳಗಿನ ದೇವರ ವಿಗ್ರಹದ ದರ್ಶನ ಪಡೆಯು ವುದು ಅಸಾಧ್ಯವಾದಾಗ ಮಂದಿರದ ಶಿಖರದರ್ಶನವನ್ನು ಮಾತ್ರ ಮಾಡಿ ತಮ್ಮನ್ನು ಧನ್ಯರನ್ನಾಗಿ ಭಾವಿಸುತ್ತಾರೆ. ಭಕ್ತಾದಿಗಳು ಮಂದಿರದ ಪರಿಕ್ರಮೆಯನ್ನು ಮಾಡಿ ಮಂದಿರದ ಹೊರವಲಯಕ್ಕೇನೆ ನಮಸ್ಕರಿಸುವುದನ್ನು ಸಹ ನೋಡುತ್ತೇವೆ. ಧನಿಕರು ಕಟ್ಟಿಸಿದ ಮನೆಗಳು ಮಂದಿರಕ್ಕಿಂತ ಭವ್ಯಗಳೂ, ಆಕರ್ಷಣೀಯಗಳೂ, ಬಹುಮೌಲ್ಯ ವಸ್ತುಗಳಿಂದ ಕೂಡಿದವುಗಳೂ ಆಗಿರುತ್ತವೆ. ಆದರೂ ಆ ಮನೆಗೆ ನಮಸ್ಕರಿಸು ವುದನ್ನಾಗಲಿ, ಪರಿಕ್ರಮಿಸುವುದನ್ನಾಗಲಿ ಕಾಣುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಮಂದಿರಗಳಲ್ಲಿ ಭಗವಂತನ ನಿವಾಸವಿರುತ್ತದೆ. ಮನೆಯಲ್ಲಿ ಮಾತ್ರ ಸಾಂಸಾರಿಕ ವಾಸನೆ ಗಳಿಂದ ಕೂಡಿದ ಸಾಮಾನ್ಯ ಜೀವಿಗಳ ನಿವಾಸವಿರುತ್ತದೆ. ಇದರಂತೆ ಜಗತ್ತಿನಲ್ಲಿರುವ ಮನುಷ್ಯ ಶರೀರಗಳು ಸಮಾನ ತತ್ವಗಳಿಂದ ನಿರ್ಮಾಣವಾಗಿದ್ದರೂ, ಯಾರ ಶರೀರದಲ್ಲಿ ಭಗವಂತನ ಸಾಕ್ಷಾತ್ಕಾರ ಉಂಟಾಗಿದೆಯೋ ಅಂತಹ ಶಿವಯೋಗಿಗಳ ಶರೀರಗಳು ಮಾತ್ರ ದೇವಾಲಯಗಳೆಂಬುದಾಗಿ ಕರೆಸಿಕೊಳ್ಳುತ್ತವೆ ಮತ್ತು ಅವು ಲೋಕದಲ್ಲಿ ಪೂಜ್ಯವೂ ಆಗಿರುತ್ತವೆ. ಅಂತೆಯೇ ಪಿಂಡಾಕಾಶ ಸಂಪನ್ನನಾದ ಶಿವಯೋಗಿಯ ಶರೀರವನ್ನು ಮಂದಿರಕ್ಕೆ ಹೋಲಿಸಿದ್ದನ್ನು ಇಲ್ಲಿ ಕಾಣುತ್ತೇವೆ.

ಗರ್ಭಗುಡಿಯಲ್ಲಿರುವ ದೇವತಾ ವಿಗ್ರಹವು ನಮಗೆ ಕಾಣಬೇಕಾದರೆ ಅಲ್ಲೊಂದು ದೀಪದ ಆವಶ್ಯಕತೆಯಿರುತ್ತದೆ. ಅಂತೆಯೇ ಪ್ರಾಚೀನ ಕಾಲದಿಂದಲೂ, ಗರ್ಭಗುಡಿ

ಗಳಲ್ಲಿ ತುಪ್ಪ ಇಲ್ಲವೆ ಎಣ್ಣೆಯ ನಂದಾದೀಪವನ್ನು ಕಾಯುತ್ತ ಬಂದಿರುವುದನ್ನು ಕಾಣು ತ್ತೇವೆ. ಅದರಂತೆ ಮೂವತ್ತಾರು ತತ್ವಗಳಿಂದ ನಿರ್ಮಾಣಗೊಂಡ ನಮ್ಮ ಶರೀರವೆಂಬ ಮಂದಿರದಲ್ಲಿ, ಹೃದಯ ಗುಹೆಯೆಂಬ ಪದ್ಮಪೀಠದಲ್ಲಿ ಪರಮಾತ್ಮನ ನಿತ್ಯ ನಿವಾಸವಿದೆ. ಗರ್ಭಗುಡಿಯಲ್ಲಿ ದೀಪವಿಲ್ಲದಾಗ ಅಲ್ಲಿಯ ವಿಗ್ರಹವು ಕಾಣದಿರುವಂತೆ, ಹೃದಯ ಮಂದಿರದಲ್ಲಿ ಬೋಧದೀಪವಿಲ್ಲದಿರುವುದರಿಂದ ಸರ್ವರೂ ಹೃದಯಸ್ಥನಾದ ಶಿವನನ್ನು ಅನುಭವಿಸಲಾರರು. ಆದರೆ ಯೋಗ್ಯತಾ ಸಂಪನ್ನರಾದ ಶಿವಯೋಗಿಗಳು ಜ್ಞಾನಜ್ಯೋತಿಯ ಮೂಲಕ ಆ ಪರಮತತ್ವದ ಸಾಕ್ಷಾತ್ಕಾರವನ್ನು ಪಡೆದವರಾಗಿರುತ್ತಾರೆ. ಇಲ್ಲಿ ಶಿವಯೋಗಿಯ ಸ್ಥೂಲ ಶರೀರವೇ ಮಂದಿರ, ಆತನ ಪರಿಶುದ್ಧ ಮನಸ್ಸೇ ಪದ್ಮಪೀಠ, ಆತನ ಹೃದಯದಲ್ಲಿ ಉದಿಸಿದ ಜ್ಞಾನಜ್ಯೋತಿಯೇ ಅಲ್ಲಿರುವ ನಂದಾದೀಪವೆಂಬುದಾಗಿ ತಿಳಿದುಕೊಳ್ಳಬೇಕು.

ತನ್ನ ದೇಹದಲ್ಲಿ ದೇವರನ್ನು ಕಾಣುವ ಶಿವಯೋಗಿಯ ದೇಹವನ್ನು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಂದಿರಕ್ಕೆ ಹೋಲಿಸಿದ್ದರೆ, ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ಅದಕ್ಕೆ ಕ್ಷೇತ್ರವೆಂಬುದಾಗಿ ಹೆಸರಿಸಿದ್ದಾನೆ. ಯಾವ ಸ್ಥಳ ದಲ್ಲಿ ದೇವರ ನಿತ್ಯ ನಿವಾಸವಿರುತ್ತದೆಯೋ ಅದಕ್ಕೇನೆ ಕ್ಷೇತ್ರವೆನ್ನುತ್ತಾರೆ. ನಮ್ಮ ದೇಶದಲ್ಲಿ ತೀರ್ಥಾಟನೆಗೆ ಅತ್ಯಂತ ಮಹತ್ವವನ್ನು ಕೊಡಲಾಗಿದೆ. ಮನುಷ್ಯನು ತನ್ನ ಭೋಗ ಭೂಮಿ ಯಾದ ಮನೆಯನ್ನು ಬಿಟ್ಟು, ಯೋಗಭೂಮಿಗಳಾದ ಕ್ಷೇತ್ರದರ್ಶನಕ್ಕೆ ಬಂದು, ಆ ಕ್ಷೇತ್ರ ದಲ್ಲಿ ನಿವಾಸ ಮಾಡಿದಾಗ, ಕ್ಷೇತ್ರದ ಪ್ರಭಾವ ಮೂಲಕವಾಗಿ ಅವನ ಅಂತಃಕರಣವು ಪರಿಶುದ್ಧಗೊಳ್ಳುತ್ತದೆ. ಹೀಗೆ ಪರಿಶುದ್ಧಗೊಂಡ ಅಂತಃಕರಣದಲ್ಲಿಯೇ ಕೊನೆಗೊಂದು ದಿನ ಪರಮಾತ್ಮನ ಅನುಭೂತಿಯಾಗುತ್ತದೆ. ಈ ಸ್ಥಿತಿಯು ಎಂದು ಪ್ರಾಪ್ತವಾಗುವುದೋ ಅಂದೇ ಆ ದೇಹವು ಮಂದಿರ ಇಲ್ಲವೇ ಕ್ಷೇತ್ರದಂತೆ ಪೂಜ್ಯವೆನಿಸಿಕೊಳ್ಳುವುದು. ಮೇಲಿಂದ ಮೇಲೆ ಕ್ಷೇತ್ರದರ್ಶನ ಮಾಡಿದ ಪ್ರಯೋಜನವೆಂದರೆ ಕೊನೆಗೊಂದು ದಿನ ತನ್ನ ದೇಹವನ್ನೇ ಕ್ಷೇತ್ರವನ್ನಾಗಿ ಪರಿವರ್ತಿಸಿಕೊಳ್ಳುವುದೇ ಆಗಿರುತ್ತದೆ.

ವೀರಶೈವ ಸಿದ್ಧಾಂತದಲ್ಲಿ ಸ್ಥೂಲ ದೇಹದ ಮೇಲೆ ಇಷ್ಟಲಿಂಗವನ್ನು ಧರಿಸುವ ಪದ್ಧತಿಯು ಅನಾದಿಕಾಲದಿಂದಲೂ ಬಂದುದಾಗಿದೆ. ಈ ಧರ್ಮದ ಸಂಸ್ಥಾಪನಾಚಾರ್ಯ ರಾದ ಜಗದ್ಗುರು ಪಂಚಾಚಾರ್ಯರು ದೇಹದ ಮೇಲೆ ಲಿಂಗವನ್ನು ಧರಿಸುವ ಈ ತತ್ತ್ವ ವನ್ನು ಉಪದೇಶಿಸಿ ಹೊರಗಿನ ದೇವಾಲಯಕ್ಕಿಂತ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳಿರೆಂಬುದಾಗಿ ಉಪದೇಶಿಸಿದ್ದನ್ನು ಕಾಣುತ್ತೇವೆ. ಬಾಹ್ಯದಲ್ಲಿಯ ಈ ಇಷ್ಟ ಲಿಂಗದ ಮೂಲಕವಾಗಿಯೇ ಸಾಧಕನಾದವನು ಶಿವಯೋಗ ಮಾರ್ಗವನ್ನನುಸರಿಸಿ ತನ್ನ ಅಂತರಂಗದಲ್ಲಿ ಪ್ರಾಣಲಿಂಗ ಹಾಗೂ ಭಾವಲಿಂಗಗಳ ಅನುಸಂಧಾನವನ್ನು ಮಾಡತೊಡಗುತ್ತಾನೆ. ಹೀಗೆ ಈ ಶಿವಯೋಗಿಯ ಶಿವಯೋಗ ಸಾಧನೆಯು ಬಲಿಯುತ್ತ ಹೋದಂತೆ ಕೊನೆಗೆ 'ಶಿವೋऽಹಂ' ಭಾವನೆಯು ದೃಢಗೊಳ್ಳುವುದು. ಈ 'ಶಿವೋऽಹಂ' ಭಾವನೆಗೇನೇ ವೀರಶೈವ ಆಚಾರ್ಯರು ಭಾವಲಿಂಗವೆಂಬುದಾಗಿ ಕರೆದಿದ್ದಾರೆ. ಇದಕ್ಕೇನೇ ಮಹಾಲಿಂಗವೆಂತಲೂ ಕರೆಯುವುದುಂಟು. ಹೀಗೆ ಶಿವಯೋಗಿಯಾದವನು ತನ್ನ ಹೃದಯದಲ್ಲಿ ಚಿದಾಕಾಶರೂಪವಾದ ಮಹಾಲಿಂಗದ ಅನುಸಂಧಾನ ಮಾಡುತ್ತ

ತನ್ನಾತ್ಮವೇ ಪರಮಾತ್ಮ ರೂಪವೆಂಬುದಾಗಿ ತಿಳಿದುಕೊಂಡಾಗ ಅವನಿಗೆ ಪಿಂಡಾಕಾಶ ವೆಂದು ಇಲ್ಲಿ ಸಂಬೋಧಿಸಲಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಯೋಗಿಯ ದೇಹವನ್ನು ಇಲ್ಲಿಯವರೆಗೆ ಮಂದಿರಕ್ಕೆ ಹೋಲಿಸಿ ಹೇಳಿ ಈಗ ಆ ದೇಹವನ್ನು 'ಶಿವಪುರ'ವೆಂಬುದಾಗಿ ಪ್ರತಿಪಾದಿಸುವುದಕ್ಕೋಸುಗ ಪುನಃ–

ಏತಚ್ಛಿವಪುರಂ ಪ್ರೋಕ್ತಂ ಸಪ್ತಧಾತು ಸಮಾವೃತಮ್ ।
ಅತ್ರ ಹೃತ್ಪಂಕಜಂ ವೇಶ್ಮ ಸೂಕ್ಷ್ಮಾಂಬರಮನೋಹರಮ್ ॥
ತತ್ರ ಸನ್ನಿಹಿತಂ ಸಾಕ್ಷಾತ್ ಸಚ್ಚಿದಾನಂದ ಲಕ್ಷಣಮ್ ।
ನಿತ್ಯಸಿದ್ಧಃ ಪ್ರಕಾಶಾತ್ಮಾ ಜಲಸ್ಥಾಕಾಶವಚ್ಛಿವಃ ॥

(ಸಿ. ಶಿ. ೧೯–೫೬–೫೭)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ರಸ, ರಕ್ತ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ ಮತ್ತು ಶುಕ್ರಗಳೆಂಬ ಸಪ್ತಧಾತುಗಳಿಂದ ನಿರ್ಮಿಸಲ್ಪಟ್ಟ ಶಿವಯೋಗಿಯ ಶರೀರವು ಒಂದು ಶಿವಪುರವಿದ್ದಂತೆ. ಪುರವೆಂದರೆ ಪಟ್ಟಣವೆಂದರ್ಥ. ಒಂದು ಪಟ್ಟಣ ದಲ್ಲಿ ಜನರು ಬಹುಸಂಖ್ಯೆಯಲ್ಲಿ ವಾಸಿಸುತ್ತಿರುತ್ತಾರೆ. ಆದರೆ ಈ ದೇಹದಲ್ಲಿ ಒಬ್ಬನೇ ಜೀವಾತ್ಮನಿರೋಣದರಿಂದ ಇದಕ್ಕೆ ಪುರವೆಂಬುದಾಗಿ ಕರೆಯಲು ಹೇಗೆ ಸಾಧ್ಯ? ಎಂಬ ಪ್ರಶ್ನೆಯು ವಾಚಕರ ಮನಸ್ಸಿನಲ್ಲಿ ಬಾರದೇಯಿರದು. ಆದರೆ ಸೂಕ್ಷ್ಮ ದೃಷ್ಟಿಯಿಂದ ನೋಡಿದಾಗ ಶರೀರವೂ ಸಹ ಒಂದು ವಿಶಾಲವಾದ ಪಟ್ಟಣವೇ ಸರಿ. ಈ ಪಟ್ಟಣದಲ್ಲಿ ಪ್ರಧಾನ ಪುರುಷನೊಬ್ಬನಿದ್ದರೂ, ಅವನಿಗೆ ಸಹಕಾರಿಗಳಾದ ಅನಂತ ಜೀವಿಗಳು ಈ ಶರೀರದಲ್ಲಿ ಇರುತ್ತವೆ. ಶರೀರ ವಿಜ್ಞಾನಿಗಳ ಪ್ರಕಾರ ವಿಶ್ವದ ಯಾವುದೇ ಪಟ್ಟಣದಲ್ಲಿ ಶರೀರದಲ್ಲಿರುವ ಜೀವಿಗಳಿರುವಷ್ಟು ಸಂಖ್ಯೆಯಿಲ್ಲವೆಂಬುದಾಗಿ ತಿಳಿದುಬರುತ್ತದೆ. ಜೀವಿ ಗಳ ಗಾತ್ರ ಸಣ್ಣದು ದೊಡ್ಡದು ಆಗಿರಬಹುದು. ಅನಂತ ಸಂಖ್ಯೆಯ ಜೀವಿಗಳು ಈ ದೇಹದಲ್ಲಿರೋಣದರಿಂದ ಇದಕ್ಕೆ ಪುರವೆಂಬ ಸಂಜ್ಞೆ ದೊರೆತದ್ದು ಸೂಕ್ತವೆಂದೇ ಭಾವಿಸ ಬೇಕು. ಸಾಮಾನ್ಯ ಜೀವಿಗಳ ಶರೀರಕ್ಕೆ ಕೇವಲ ಪುರವೆಂಬ ಸಂಜ್ಞೆಯಿದ್ದರೆ, ಶಿವಜ್ಞಾನ ಸಂಪನ್ನರಾದ ಶಿವಯೋಗಿಗಳ ಶರೀರಕ್ಕೆ ಇಲ್ಲಿ ಶಿವಪುರವೆಂಬುದಾಗಿ ಪೂಜ್ಯರು ಸಂಕೇತಿಸಿ ದ್ದಾರೆ. ಈ ಶಿವಪುರದಲ್ಲಿ ಅತಿ ಸೂಕ್ಷ್ಮವಾದ ಅಂತರಾಕಾಶದಿಂದ ತುಂಬಿಕೊಂಡಿರುವ, ಅತಿ ಸುಂದರವಾಗಿರುವ ಹೃದಯ ಕಮಲವೆಂಬ ಅಂತಃಪುರವಿರುತ್ತದೆ. ಆ ಅಂತಃಪುರದಲ್ಲಿ ಸಚ್ಚಿದಾನಂದ ಲಕ್ಷಣನಾದ ಪರಶಿವನು ಸಾಕ್ಷಾತ್ ಸನ್ನಿಹಿತನಾಗಿದ್ದು, ಸ್ವಚ್ಛವೂ ನಿಶ್ಚಲವೂ ಆದ ಜಲದಲ್ಲಿ ತೋರುವ ಆಕಾಶದಂತೆ ನಿತ್ಯ ಸಿದ್ಧನಾಗಿ ಅವನು ಪ್ರಕಾಶ ಮಾನನಾಗಿರುತ್ತಾನೆ. ಜಲದಲ್ಲಿ ಪ್ರತಿಬಿಂಬಿತವಾಗಿರುವ ಆಕಾಶ ಹಾಗೂ ಮಹಾಕಾಶ ಇವೆರಡೂ ಒಂದೇಯಾಗಿರುವಂತೆ, ಶಿವಯೋಗಿಯ ಹೃದಯಾಕಾಶದಲ್ಲಿ ಪರಮಾತ್ಮ ಹಾಗೂ ಬಾಹ್ಯ ಬ್ರಹ್ಮಾಂಡದಲ್ಲಿರುವ ಪರಮಾತ್ಮನಿಗೂ ಸಹ ಯಾವ ಅಂತರವೂ ಇರುವುದಿಲ್ಲ. ಇಂತಹ ಸ್ಥಿತಿಯನ್ನು ತಲುಪಿದ ಶಿವಯೋಗಿಗೆ ಪಿಂಡಾಕಾಶನೆಂದು ಕರೆಯುತ್ತಾರೆ.

ಅಪರಿಚ್ಛಿನ್ನನಾದ ಪರಮಾತ್ಮನು ಪರಿಚ್ಛಿನ್ನವಾದ ಹೃತ್‌ಕಮಲದಲ್ಲಿ ಅದು ಹೇಗೆ ತಾನೇ ವಾಸಿಸುತ್ತಾನೆ ? ಎಂಬ ಪ್ರಶ್ನೆಯುದ್ಭವಿಸಿದಾಗ ಅದಕ್ಕೆ ಉತ್ತರ ರೂಪವಾಗಿ ಪೂಜ್ಯಪಾದರು–

ಅಂತರಾಕಾಶಬಿಂಬಸ್ಥಮಶೇಷೋಪಾಧಿ ವರ್ಜಿತಮ್ ।
ಘಟಾಕಾಶ ಇವ ಭಿನ್ನಂ ಭಾವಯೇಚಿನ್ಮಯಂ ಶಿವಮ್ ॥

(ಸಿ. ಶಿ. ೧೯–೫೮)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸರ್ವವಿಧ ಉಪಾಧಿರಹಿತನಾದ, ಚಿನ್ಮಯನಾದ, ಸರ್ವವ್ಯಾಪಕನಾದ ಶಿವನು ಅಪರಿಚ್ಛಿನ್ನವಾದ ಮಹಾಕಾಶವು ಪರಿಚ್ಛಿನ್ನ ವಾದ ಘಟದಲ್ಲಿ ವಾಸವಾಗಿರುವಂತೆ, ಪರಿಚ್ಛಿನ್ನವಾದ ಹೃದಯಾಕಾಶದಲ್ಲಿ ವಾಸಿಸುತ್ತಾ ನೆಂಬುದಾಗಿ ಭಾವಿಸಬೇಕು. ಆಕಾಶವು ವಿಭು ಪರಿಮಾಣವೆಂಬುದಾಗಿ ಶಾಸ್ತ್ರಕಾರರು ಸ್ವೀಕರಿಸಿದ್ದಾರೆ. ವಿಭುವೆಂದರೆ ಘಟ–ಮಠಾದಿ ಎಲ್ಲ ವಸ್ತುಗಳ ಒಳಹೊರಗೂ ತುಂಬಿ ಕೊಂಡಿರುವುದು ಎಂದರ್ಥ. ಆಕಾಶದಲ್ಲಿ ಘಟವಿದೆ; ಘಟದಲ್ಲಿಯೂ ಆಕಾಶವಿದೆ ಎಂಬುದಾಗಿ ಶಬ್ದ ಪ್ರಯೋಗ ಮಾಡಿದಾಗ ಆಕಾಶದಲ್ಲಿ ಘಟವಿರುವುದೇನೋ ಸಹಜ ವಾದರೂ, ಘಟದಲ್ಲಿ ಅದು ಹೇಗೆ ತಾನೆ ಆಕಾಶವಿರುತ್ತದೆ ಎಂಬ ಪ್ರಶ್ನೆಯು ಉದ್ಭವಿಸಲು ಅವಕಾಶವಿರುವುದಿಲ್ಲ. ಏಕೆಂದರೆ ಅದು ಪ್ರತಿಯೊಬ್ಬರಿಗೂ ಪ್ರತ್ಯಕ್ಷವಾಗಿ ತೋರುತ್ತಿರು ತ್ತದೆ. ಸೂಕ್ಷ್ಮವೂ ವ್ಯಾಪಕವೂ ಆದ ಆಕಾಶವು ವಸ್ತುವಿನ ಒಳಹೊರಗೂ ತುಂಬಿಕೊಂಡಿರು ವಂತೆ ಪರಮಾತ್ಮನೂ ಸಹ ಅತ್ಯಂತ ಸೂಕ್ಷ್ಮನೂ ಆಕಾಶಕ್ಕೂ ಸಹ ಆಕಾಶನಾಗಿರುವುದ ರಿಂದ ಪರಿಚ್ಛಿನ್ನ ವಸ್ತುಗಳ ಒಳಹೊರಗೂ ವ್ಯಾಪಿಸಿಕೊಂಡಿರುತ್ತಾನೆ. ಎಂಬಲ್ಲಿ ಯಾವ ಸಂಶಯವಿರುವುದಿಲ್ಲ. ಹೀಗೆ ಸರ್ವವ್ಯಾಪಕನಾದ ಪರಮಾತ್ಮನೇ ನನ್ನ ಹೃದಯ ಮಂದಿರ ದಲ್ಲಿ ವಾಸವಾಗಿದ್ದಾನೆ ಎಂಬುದಾಗಿ ಭಾವಿಸುವ ಶಿವಯೋಗಿಗೆ ಪಿಂಡಾಕಾಶಸ್ಥಲೀ ಎಂಬುದಾಗಿ ಕರೆದಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪಿಂಡಾಕಾಶಸ್ಥಲದಲ್ಲಿ–ಶರೀರವೇ ಮಂದಿರವು, ಹೃದಯ ಪೀಠವೇ ಪರಮಾತ್ಮನ ವಾಸಸ್ಥಾನವು, ಅಂತರಂಗದಲ್ಲಿ ಉದಿಸಿದ ಜ್ಞಾನವೇ ನಂದಾದೀಪವು ಎಂಬುದಾಗಿ ಉಪದೇಶಿಸಿದ್ದಾರೆ. ಜಗತ್ತಿನಲ್ಲಿರುವ ಎಷ್ಟೆಲ್ಲ ಮಂದಿರಗಳನ್ನು ಸುತ್ತಾಡಿ ಬಂದರೂ ಕೊನೆಗೊಂದು ದಿನ ತನ್ನ ದೇಹವನ್ನೇ ಮಂದಿರ ವನ್ನಾಗಿ ತಿಳಿದುಕೊಂಡಾಗ ಅವನಿಗೆ ಅಲ್ಲಿ ನಿಜವಾದ ಭಗವಂತನ ದರ್ಶನವಾಗುವುದು. ಹೃದಯಸ್ಥನಾದ ಭಗವಂತನ ದರ್ಶನವನ್ನು ಪಡೆಯಬೇಕಾದರೆ ಮನೋವೃತ್ತಿಯನ್ನು ಅಂತರ್ಮುಖವನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ. ದೇವರನ್ನು ಕಾಣುವುದು ಯಾರಿಗೆ ತಾನೆ ಬೇಕಾಗಿಲ್ಲ. ಪ್ರತಿಯೊಬ್ಬನಿಗೂ ದೇವದರ್ಶನದ ಅಪೇಕ್ಷೆ ಇದ್ದೇ ಇರುತ್ತದೆ. ಕಳ್ಳ ಸುಳ್ಳರಿಗೂ ಸಹ ದೇವ ದರ್ಶನದ ಅಪೇಕ್ಷೆ ಇರುತ್ತದೆ. ಆದರೆ ಅವರ ಅಂತಃಕರಣವು ಮಲಿನವಾಗಿರೋಣದರಿಂದ ಅವರಿಗೆ ತಮ್ಮದೇಯಾದ ಹೃದಯದಲ್ಲಿರುವ ಭಗವಂತನ ಸಾಕ್ಷಾತ್ಕಾರವಾಗುವುದಿಲ್ಲ. ಪ್ರತಿಯೊಬ್ಬರೂ ದೇವರ ಕಡೆಗೆ ಅಭಿಮುಖರಾಗಬೇಕೆಂಬ ಉದ್ದೇಶದಿಂದಲೇ ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಶಿವ ದೇವಾಲಯಗಳನ್ನು

ನಿರ್ಮಿಸಿದ್ದನ್ನು ಕಾಣುತ್ತೇವೆ. ಹೊರಗಿನ ಮಂದಿರದ ಪರಿಸರಕ್ಕೆ ಪುನಃ ಪುನಃ ಹೋಗಿ ಬಂದ ಈ ಜೀವಾತ್ಮನ ಅಂತಃಕರಣವು ಎಂದು ಪರಿಶುದ್ಧವಾಗುವುದೋ ಅಂದು ಅವನು ತನ್ನ ದೇಹವನ್ನೇ ದೇವಮಂದಿರವನ್ನಾಗಿ ತಿಳಿದುಕೊಂಡು ಅದರಲ್ಲಡಗಿರುವ ಪರಮಾತ್ಮ ನನ್ನು ಸಾಕ್ಷಾತ್ಕರಿಸಿಕೊಂಡು ಕೊನೆಗೆ ಒಳಹೊರಗೆಲ್ಲ ಅವನನ್ನೇ ಕಾಣುವ ದಿವ್ಯ ದೃಷ್ಟಿ ಯನ್ನು ಪಡೆದುಕೊಳ್ಳುತ್ತಾನೆ. ಹೊರಗಿನ ಮಂದಿರಗಳಲ್ಲಿ ಇರುವ ದೇವ ವಿಗ್ರಹಗಳು ವಿಭಿನ್ನ ಶಿಲ್ಪಿಗಳಿಂದ ನಿರ್ಮಿಸಲ್ಪಟ್ಟಿರೋಣದರಿಂದ ಅವು ಆಕಾರ ಪ್ರಕಾರಗಳಲ್ಲಿ ಹೆಚ್ಚು ಕಡಿಮೆಯಾಗಿ ತೋರುತ್ತಿದ್ದರೂ, ಸರ್ವರ ದೇಹಗಳೆಂಬ ದೇವಾಲಯಗಳಲ್ಲಿ ವಾಸಿಸುವ ಸಚ್ಚಿದಾನಂದ ರೂಪನಾದ ಆ ಪರಮಾತ್ಮನು ಏಕರೂಪನಾಗಿದ್ದಾನೆ. ಹೀಗೆ ಸರ್ವತ್ರ ಸಮದೃಷ್ಟಿಯನ್ನು ತಂದು ಕೊಡುವ ಕಾರ್ಯವನ್ನು ಈ ದೇಹಮಂದಿರಗಳು ಮಾಡುತ್ತವೆ ಅರ್ಥಾತ್ ಪ್ರತಿಯೊಬ್ಬರು ತಮ್ಮ ತಮ್ಮ ದೇಹಗಳನ್ನು ಮಂದಿರಗಳನ್ನಾಗಿ ತಿಳಿದು ಕೊಂಡಾಗ ಸರ್ವರಿಗೂ ಸರ್ವತ್ರ ಸಮಾನರೂಪನಾದ ಪರಮಾತ್ಮನ ಅನುಭೂತಿ ಯುಂಟಾಗುತ್ತದೆ. ಇಂತಹ ಸ್ವರೂಪ ಸ್ಥಿತಿಯನ್ನು ಉಪದೇಶಿಸುವ ಸ್ಥಲಕ್ಕೆ ಪಿಂಡಾಕಾಶ ಸ್ಥಲವೆಂಬುದಾಗಿ ಕರೆದಿದ್ದಾರೆ.

ಜಿಜ್ಞಾಸುಗಳಾದ ಸದ್ಭಕ್ತರೇ, ನಿಮಗೆ ದೊರೆತಿರುವ ಶರೀರವೆಂದರೆ ಬಹು ಮೂಲ್ಯ ವಾದ ದೇವಮಂದಿರವು. ಇದನ್ನು ನೀವು ಪರಿಶುದ್ಧವಾಗಿರಿಸಿಕೊಂಡು, ಆಚಾರ ವಿಚಾರ ಸಂಪನ್ನರಾಗಿ ನಿಮ್ಮ ಅಂತಃಕರಣವನ್ನು ಶುದ್ಧಗೊಳಿಸಿಕೊಂಡು, ಅಲ್ಲಿಯೇ ಪರಶಿವನನ್ನು ಅನುಭವಿಸುವ ಯೋಗ್ಯತೆಯು ನಿಮ್ಮೆಲ್ಲರಿಗೂ ಪ್ರಾಪ್ತವಾಗಲೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೫ ನವ್ಹೆಂಬರ್, ೧೯೯೪

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಬಿಂದ್ವಾಕಾಶಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೆ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸರ್ವ ಮಾನವರನ್ನು ಕುರಿತು ಉಪದೇಶ ಮಾಡಿದ ಶ್ರೇಷ್ಠ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಶರಣಸ್ಥಲದಲ್ಲಿ ಬರುವ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಪಿಂಡಾಕಾಶಸ್ಥಲದ ಬಗ್ಗೆ ಸವಿಸ್ತಾರವಾಗಿ ವಿವೇಚಿಸಲಾಗಿದ್ದು, ಇಂದು ಬಿಂದ್ವಾಕಾಶ ಸ್ಥಲದ ಬಗ್ಗೆ ವಿವೇಚಿಸಲಾಗು ವುದು. ಆಗಮ ಶಾಸ್ತ್ರದಲ್ಲಿನಾದ, ಬಿಂದು ಮತ್ತು ಕಲಾ ಎಂಬ ಶಬ್ದಗಳು ಬಳಕೆಯಾಗಿರು ವುದನ್ನು ನೋಡುತ್ತೇವೆ. ಇವುಗಳಲ್ಲಿ ಬಿಂದುವೆಂದರೆ ಶಿವನೆಂತಲೂ, ನಾದವೆಂದರೆ ಶಕ್ತಿ ಯೆಂತಲೂ ಮತ್ತು ಕಲೆಯೆಂದರೆ ಇವರೀರ್ವರಿಂದ ನಿರ್ಮಿತವಾದ ಜಗತ್ತು ಎಂದರ್ಥ. ಕೆಲವೊಂದು ಸಂದರ್ಭಗಳಲ್ಲಿ ನಾದವೆಂದರೆ ಶಿವನೆಂತಲೂ ಬಿಂದುವೆಂದರೆ ಶಕ್ತಿ ಯೆಂತಲೂ ಸಹ ಪ್ರತಿಪಾದಿಸಿದ್ದನ್ನು ಕಾಣಬಹುದು ಆದರೆ–

> ಸದಾಶಿವಾದಿತತ್ತ್ವಾನಾಂ ಕಾರಣಂ ವ್ಯಾಪಕಃ ಪರಃ।
> ಬಿಂದುರೂಪಃ ಶಿವೋ ಧ್ಯೇಯೋ ಬಿಂದ್ವಾಕಾಶ ಇತೀರ್ಯತೇ ॥

ಎಂಬ ಕಿರಣಾಗಮದ ವಚನದಲ್ಲಿ ಶಿವನನ್ನು ಬಿಂದು ರೂಪವಾಗಿಯೇ ವರ್ಣಿಸಲಾಗಿದೆ. ಆದ್ದರಿಂದ ಬಿಂದುವೆಂದರೆ ಪರಶಿವನೆಂದೇ ತಿಳಿದುಕೊಳ್ಳಬೇಕು. ಈ ಪರಶಿವನೇ ಪ್ರತಿಯೊಬ್ಬರ ಶರೀರದಲ್ಲಿ ಆತ್ಮರೂಪನಾಗಿ ನೆಲೆಸಿದ್ದಾನೆ. ಈ ಬಿಂದುರೂಪನಾದ ಆತ್ಮನು ಆಕಾಶದಂತೆ ಸರ್ವತ್ರ ವ್ಯಾಪಕನಾಗಿದ್ದಾನೆ–ಎಂಬ ವಿಷಯವನ್ನು ತಿಳಿಯಪಡಿಸುವ ಸ್ಥಲವೇ ಬಿಂದ್ವಾಕಾಶ ಸ್ಥಲವು ಆದನ್ನೇ ಪೂಜ್ಯಪಾದರು–

> ಯಥಾಽಕಾಶೋ ವಿಭುರ್ಜ್ಞೇಯಃ ಸರ್ವಪ್ರಾಣ್ಯುಪರಿಸ್ಥಿತಃ।
> ತಥಾತ್ಮೇತ್ಯುಪಮಾನಾರ್ಥಂ ಬಿಂದ್ವಾಕಾಶಸ್ಥಲಂ ವಿದುಃ॥

(ಸಿ.ಶಿ. ೧೯–೫೯)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ವಿಭುಸ್ವರೂಪವಾದ ಆಕಾಶವು ಸರ್ವ ಚರಾಚರಾತ್ಮಕ ಪ್ರಪಂಚದ ಒಳಹೊರಗೂ ವ್ಯಾಪಿಸಿ, ಸರ್ವತ್ರ ಇರುವಂತೆ, ಶಿವಯೋಗಿಯ ಆತ್ಮವಾದರೂ ಆಕಾಶದಂತೆ ಸರ್ವತ್ರ ವ್ಯಾಪಕವಾಗಿದೆ ಎಂಬುದನ್ನು ತಿಳಿಸುವ ಸ್ಥಲವೇ ಬಿಂದ್ವಾಕಾಶಸ್ಥಲವು. ಬಿಂದುರೂಪನಾದ ಪರಮಾತ್ಮನು ಆಕಾಶದಂತೆ ಸರ್ವತ್ರ ವ್ಯಾಪಕನಾಗಿದ್ದಾನೆ ಎಂಬುದಾಗಿ ಇಲ್ಲಿ ಹೇಳಿರುವುದರಿಂದಲೇ ಇದಕ್ಕೆ

ಬಿಂದ್ವಾಕಾಶವೆಂಬುದಾಗಿ ಕರೆದಿದ್ದಾರೆ. ಪರಮಾತ್ಮನಿಗೆ ಉಪಮಾನವನ್ನು ಕೊಡಲು ಸೂಕ್ಷ್ಮವೂ, ಸರ್ವತ್ರ ವ್ಯಾಪಕವೂ ಆದ ಒಂದೇ ಒಂದು ಮಹಾಭೂತವೆಂದರೆ ಆಕಾಶ. ಅಂತೆಯೇ ಇಲ್ಲಿ ಆಕಾಶದ ಉದಾಹರಣೆಯನ್ನು ಕೊಟ್ಟು, ಪ್ರತಿಪಾದಿಸಲಾಗಿದೆ.

ಈ ಸ್ಥಲದ ವಿಷಯವನ್ನು ಪೂಜ್ಯಪಾದರು ವಿಶ್ಲೇಷಿಸುತ್ತ, ವಾಯುವಿನ ಉಪಮೆಯನ್ನು ಕೊಟ್ಟು ಪುನಃ–

ಯಥೈಕೋ ವಾಯುರಾಖ್ಯಾತಃ ಸರ್ವಪ್ರಾಣಿಗತೋ ವಿಭುಃ ।
ತಥಾತ್ಮಾ ವ್ಯಾಪಕಃ ಸಾಕ್ಷಾತ್ ಸರ್ವಪ್ರಾಣಿಗತಃ ಸ್ವಯಮ್ ॥
(ಸಿ. ಶಿ. ೧೯–೬೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಒಂದೇ ವಾಯು ಸರ್ವಪ್ರಾಣಿಗಳಲ್ಲಿ ವ್ಯಾಪಿಸಿರುವಂತೆ, ಒಬ್ಬನೇ ಆದ ಆತ್ಮನು ಸರ್ವ ಪ್ರಾಣಿಗಳಲ್ಲಿ ವ್ಯಾಪಿಸಿಕೊಂಡಿದ್ದಾನೆ. ಆಕಾಶವು ಪ್ರಾಣಿಗಳ ಒಳಹೊರಗೂ ವ್ಯಾಪಿಸಿರುವಂತೆ, ವಾಯುವೂ ಸಹ ಸರ್ವ ಪ್ರಾಣಿಗಳ ಒಳಹೊರಗೆಲ್ಲ ವ್ಯಾಪಿಸಿಕೊಂಡುದುದಾಗಿದೆ. ನಾದ ಹಾಗೂ ಆಕಾಶಗಳು ಅತ್ಯಂತ ಸೂಕ್ಷ್ಮಗಳಾಗಿರೋಣದರಿಂದ ಬಹಳ ಜನರ ಅನುಭವಕ್ಕೆ ಗೋಚರಗಳಾಗುವುದಿಲ್ಲ. ವಾಯುವು ಅವೆರಡಕ್ಕಿಂತ ಸ್ವಲ್ಪ ಸ್ಥೂಲವಾಗಿದ್ದು ಸರ್ವರಿಗೂ ಅನುಭವ ಗೋಚರವಾದುದಾಗಿದೆ. ಆದ್ದರಿಂದ ಪ್ರತಿಪಾದ್ಯ ವಸ್ತುವನ್ನು ಸರ್ವಾನುಭವಸಿದ್ಧವಾದ ಉಪಮೆಯ ಮೂಲಕ ತಿಳಿಸುವುದಕ್ಕಾಗಿ ಇಲ್ಲಿ ವಾಯುವಿನ ಉದಾಹರಣೆಯನ್ನು ಕೊಡಲಾಗಿದೆ. ಪೃಥ್ವಿ , ಅಗ್ನಿ ಮತ್ತು ಜಲ ತತ್ವಕ್ಕಿಂತಲೂ ವಾಯು ತತ್ವವು ಸೂಕ್ಷ್ಮವೂ ವ್ಯಾಪಕವೂ ಆಗಿರುತ್ತದೆ. ಆದರೂ ಆಕಾಶಕ್ಕಿಂತಲೂ ಪರಿಚ್ಛಿನ್ನವಾದುದಾಗಿದೆ. ವಾಯು ತತ್ವವು ಎಲ್ಲ ಪ್ರಾಣಿಗಳಲ್ಲಿ ಪ್ರಾಣವಾಯುವಿನ ರೂಪದಲ್ಲಿ ವಾಸವಾಗಿದ್ದು, ಆಯಾ ಪ್ರಾಣಿಗಳ ಜೀವನಕ್ಕೆ ಕಾರಣವಾಗಿರುತ್ತದೆ. ಪ್ರಾಣವಾಯುವು ದೇಹದಿಂದ ನಿರ್ಗಮಿಸಿತೆಂದರೆ ಆ ದೇಹವನ್ನು ಮೃತದೇಹವೆಂದು ಘೋಷಿಸಲಾಗುತ್ತದೆ. ಮೂಲತಃ ವಾಯು ಒಂದೇಯಾಗಿದ್ದರೂ ಸ್ಥಾನ ಹಾಗೂ ಕ್ರಿಯೆಗಳ ಭೇದ ಮೂಲಕವಾಗಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನವೆಂಬುದಾಗಿ ಅದರಲ್ಲಿ ಮುಖ್ಯವಾಗಿ ಐದು ವಿಭಾಗಗಳಾಗುತ್ತವೆ. ಇದೂ ಅಲ್ಲದೇ ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯಗಳೆಂಬ ಉಪಪ್ರಾಣವಾಯುಗಳೂ ಸಹ ಪ್ರತಿಯೊಬ್ಬರ ದೇಹದಲ್ಲಿ ಇರುತ್ತವೆ. ಹೀಗೆ ಒಂದೇಯಾದ ವಾಯುವು ಎಲ್ಲ ಜೀವಿಗಳ ಶರೀರದಲ್ಲಿ ವಾಸವಾಗಿದ್ದು, ಅವರೆಲ್ಲರ ಜೀವನಕ್ಕೆ ಕಾರಣವಾಗಿರುವಂತೆ, ಒಂದೇಯಾದ ಆತ್ಮವೂ ಸಹ ಸರ್ವರಲ್ಲಿಯೂ ಅಹಂ ರೂಪದಿಂದ ವಾಸವಾಗಿರುತ್ತದೆ. ವಾಯುವಿನ ಅನುಭವವು ಸರ್ವರಿಗೂ ಆಗುವಂತೆ ಆತ್ಮದ ಅನುಭೂತಿಯು ಸರ್ವರಿಗೂ ಆಗುವುದಿಲ್ಲ. ಆದ್ದರಿಂದಲೇ ಸರ್ವರಿಗೂ ಅನುಭವ ಗೋಚರವಾಗಿರುವ ವಾಯುವಿನ ಉದಾಹರಣೆ ಮೂಲಕವಾಗಿ ಆತ್ಮನ ವ್ಯಾಪಕತೆಯ ಬಗ್ಗೆ ತಿಳಿಸಿಕೊಡಲಾಗಿದೆ. ಇದೇ ವಿಷಯವನ್ನೇ ಕಠೋಪನಿಷತ್ತಿನಲ್ಲಿಯೂ ಸಹ–

ವಾಯುರ್ಯಥೈಕೋ ಭುವನಂ ಪ್ರವಿಷ್ಟೋ।
ರೂಪಂ ರೂಪಂ ಪ್ರತಿರೂಪೋ ಬಭೂವ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥

ಹೀಗೆ ಪ್ರತಿಪಾದಿಸಲಾಗಿದೆ. ವಾಯು ಒಂದೇಯಾಗಿದ್ದರೂ ಮೇಲೆ ಹೇಳಿದಂತೆ ಅನೇಕ ರೂಪವನ್ನು ತಾಳುವಂತೆ ಒಬ್ಬನೇಯಾದ ಪರಮಾತ್ಮನು ಅನೇಕ ಜೀವಿಗಳಲ್ಲಿ ವಾಸವಾಗಿದ್ದಾನೆ. ಇನ್ನು ಮುಂದೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗ್ನಿ ತತ್ವವನ್ನು ಉದಾಹರಿಸುತ್ತ ಈ ಸ್ಥಲದ ವಿಷಯ ವಸ್ತುವನ್ನು–

ಯಥಾ ವಹ್ನಿರಮೇಯಾತ್ಮಾ ಸರ್ವತ್ರೈಕೋಽಪಿ ಭಾಸತೇ।
ತಥಾ ಶಂಭುಃ ಸಮಸ್ತಾತ್ಮಾ ಪರಿಚ್ಛೇದವಿವರ್ಜಿತಃ ॥

(ಸಿ. ಶಿ. ೧೯–೬೧)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಪಂಚ ಮಹಾಭೂತಗಳಲ್ಲಿ ಒಂದಾದ ಅಗ್ನಿಯೂ ಸಹ ಅಪರಿಮಿತ ರೂಪವಾದುದು. ಅದು ಎಷ್ಟು ದೊಡ್ಡದಿದೆ ಎಂಬುದನ್ನು ಅಳತೆ ಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಅದು ಒಮ್ಮೆ ಸಣ್ಣ ಕಿಡಿಯ ರೂಪದಲ್ಲಿ ತೋರಬಹುದು; ಮತ್ತೊಮ್ಮೆ ದಾವಾನಲ ರೂಪವನ್ನು ಸಹ ತಾಳಬಹುದು. ಅಗ್ನಿಯು ವಸ್ತುತಃ ಒಂದೇಯಾಗಿದ್ದರೂ ಅದರ ರೂಪಗಳು ಮಾತ್ರ ಅನೇಕಗಳಾಗಿವೆ. ಆಕಾಶದಲ್ಲಿ ಕೋಲ್ಮಿಂಚಿನ ರೂಪದಲ್ಲಿ ಒಂದು ಕ್ಷಣದಲ್ಲಿ ಎಲ್ಲವನ್ನು ಬೆಳಗಿ ಮತ್ತೆ ಮಾಯವಾಗುವ ಆ ಸ್ವರೂಪಕ್ಕೆ ದಿವ್ಯಾಗ್ನಿ ಎಂದು ಕರೆಯುತ್ತಾರೆ. ಅದು ಒಂದು ವೇಳೆ ಯಾರ ಮೇಲಾದರೂ ಬಿದ್ದರೆ ಅವರು ತತ್‌ಕ್ಷಣ ಸಂಪೂರ್ಣವಾಗಿ ದಗ್ಧರಾಗಿ ಹೋಗುತ್ತಾರೆ. ಬಹಳಷ್ಟು ಜನರಿಗೆ ಅದರ ಘರ್ಜನೆಯನ್ನು ಕೇಳಿಯೇ ಹೃದಯಾಘಾತವಾಗುವುದುಂಟು. ಅತ್ಯಂತ ದೂರದಲ್ಲಿದ್ದರೂ ಅದು ಮಿಂಚಿದ ಕ್ಷಣದಲ್ಲಿ ಸರ್ವ ವಸ್ತುಗಳು ದೃಷ್ಟಿಗೋಚರಗಳಾಗುತ್ತವೆ. ಇದರಂತೆ ಸಮುದ್ರದಲ್ಲಿ ಅಡಕವಾಗಿರುವ ಅಗ್ನಿಗೆ ವಡವಾಗ್ನಿ ಎಂದು ಕರೆಯುತ್ತಾರೆ. ಅದರಲ್ಲಿ ಇಡೀ ಸಮುದ್ರವನ್ನೇ ಒಣಗಿಸಿ ಹಾಕುವ ಸಾಮರ್ಥ್ಯವಿರುತ್ತದೆ. ಇದರಂತೆ ಸರ್ವರ ಉದರದಲ್ಲಿ ವಾಸಿಸುವ ಅಗ್ನಿಗೆ ಜಠರಾಗ್ನಿಯೆಂದು ಕರೆಯುವರು. ಇದು ಪ್ರತಿಯೊಬ್ಬ ಜೀವಿಗಳು ಭುಂಜಿಸಿದ ಅನ್ನವನ್ನು ಪಚನಗೊಳಿಸಿ ಸಪ್ತಧಾತುವಿನ ರೂಪದಲ್ಲಿ ಪರಿವರ್ತಿಸುತ್ತದೆ. ಇನ್ನು ಸತ್ತ ಮನುಷ್ಯನ ದೇಹವನ್ನು ಸುಡಲು ಉಪಯೋಗಿಸುವ ಅಗ್ನಿಗೆ ಕಾಲಾಗ್ನಿಯೆಂದು ಕರೆಯುವರು.

ಹೀಗೆ ಅಗ್ನಿಯ ರೂಪಗಳು ಅನೇಕ ಪ್ರಕಾರಗಳಾಗಿದ್ದರೂ ಅಗ್ನಿಯು ಒಂದೇಯಾಗಿರುತ್ತದೆ. ಇದೂ ಸಹ ವ್ಯಾಪಕವಾಗಿ ಸರ್ವತ್ರ, ಇರುವಂಥದ್ದಾಗಿದೆ. ನಾವು ಕುಳಿತಲ್ಲೆಲ್ಲ ಅಗ್ನಿಯೇ ಇದೆ. ಆದರೂ ಅದು ನಮ್ಮನ್ನು ಸುಡುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಅದು ಅಪ್ರಕಟವಾಗಿರುವುದೇ ಆಗಿದೆ. ಲೈಟರ್, ಕಡ್ಡಿಡಬ್ಬಿ ಮೊದಲಾದವುಗಳನ್ನು ಘರ್ಷಣೆ ಮಾಡಿದಾಗ ಅಗ್ನಿಯ ಜ್ವಾಲೆಯು ಪ್ರಕಟವಾಗುತ್ತದೆ. ತನಗೆ ಆಲಂಬನವಾದ ಕಡ್ಡಿಯು ಸಂಪೂರ್ಣವಾಗಿ ಸುಡುವವರೆಗೆ ಆ ಜ್ವಾಲೆಯು ಕಾಣುತ್ತಿದ್ದು ಕೊನೆಗೆ

ಆಲಂಬನವಿಲ್ಲದೇ ಇದ್ದಾಗ ಜ್ವಾಲೆಯೂ ಸಹ ಅಂತರ್ಧಾನವಾಗುತ್ತದೆ. ಚಿಕಿತ್ಸಕ ಬುದ್ಧಿಯುಳ್ಳ ವ್ಯಕ್ತಿಯು ಮೇಲಿಂದ ಮೇಲೆ ಕಡ್ಡಿಯನ್ನು ಕೊರೆದು ಜ್ವಾಲೆಯು ಉದ್ಭವಿಸುವ ಹಾಗೂ ಅಡಗುವ ಸನ್ನಿವೇಶವನ್ನು ಕಂಡಾಗ ಈ ಜ್ವಾಲೆಯು ಎಲ್ಲಿಂದ ಬರುತ್ತದೆ ಮತ್ತು ಕೊನೆಗೆ ಎಲ್ಲಿ ಲಯವಾಗುತ್ತದೆ ಎಂಬದರ ಬಗ್ಗೆ ಸೂಕ್ಷ್ಮವಾಗಿ ವಿಚಾರಿಸ ಲಾಗಿ ವಾಯುಮಂಡಲದಿಂದಲೇ ಅದು ಪ್ರಕಟವಾಗಿ ಕೊನೆಗೆ ಅಲ್ಲಿಯೇ ಲಯವಾಗು ತ್ತದೆ ಎಂಬುದು ತಿಳಿದುಬರುತ್ತದೆ. ಹೀಗೆ ವಾಯುಮಂಡಲದಲ್ಲೆಲ್ಲ ಅಗ್ನಿಯು ವ್ಯಾಪಿಸಿ ಕೊಂಡಿದ್ದರೂ, ಅದು ಪ್ರಕಟವಾಗದೇ ಯಾರನ್ನೇ ಆಗಲಿ ಯಾವ ವಸ್ತುವನ್ನಾಗಲಿ ದಹಿಸು ವುದಿಲ್ಲ. ಹೀಗೆ ಪಂಚಮಹಾಭೂತಗಳಲ್ಲಿ ವಾಯುವಿಗಿಂತಲೂ ಸ್ಥೂಲವಾದ ಮಹಾ ಭೂತವೇ ಅಗ್ನಿ. ಇದು ಸರ್ವರಿಗೂ ನೇತ್ರೇಂದ್ರಿಯಕ್ಕೆ ಪ್ರತ್ಯಕ್ಷವಾಗಿ ತೋರುವ ಮಹಾಭೂತವು. ಅಂತೆಯೇ ಪೂಜ್ಯಪಾದರು ಈ ಅಗ್ನಿಯನ್ನು ಉದಾಹರಿಸುತ್ತ ಆತ್ಮನ ವ್ಯಾಪಕತೆಯನ್ನು ತಿಳಿಸಿಕೊಡುತ್ತಿದ್ದಾರೆ. ಅಗ್ನಿಯು ವೈದ್ಯುತ, ಪಾರ್ಥಿವ, ವಡವಾನಲ ಮತ್ತು ಕಾಲಾಗ್ನಿ ರೂಪದಿಂದ ಬೇರೆ ಬೇರೆ ಸ್ವರೂಪದಲ್ಲಿ ಪ್ರಕಟವಾಗಿ ತೋರುತ್ತಿದ್ದರೂ ಅದು ಅಪರಿಮಿತವು. ಒಂದೇ ಆಗಿರುವಂತೆ ಚಿದ್ವಹ್ನಿ ರೂಪನಾದ ಒಬ್ಬನೇ ಪರಮಾತ್ಮನು ದೇವ, ದಾನವ, ಮಾನವ, ತಿರ್ಯಕ್ ಮತ್ತು ಸ್ಥಾವರ ರೂಪಗಳಾದ ಚರಾಚರ ವಸ್ತುಗಳಲ್ಲಿ ವ್ಯಕ್ತಾವ್ಯಕ್ತ ರೂಪವಾಗಿ ವಿರಾಜಿಸುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿಯವರೆಗೆ ಆಕಾಶ, ವಾಯು ಹಾಗೂ ಅಗ್ನಿಗಳೆಂಬ ಮಹಾಭೂತಗಳ ಉದಾಹರಣೆ ಮೂಲಕ ಆತ್ಮ–ಪರಮಾತ್ಮರ ವ್ಯಾಪಕತೆಯನ್ನು ಬೋಧಿಸಿ ಸದ್ಯಃ ಬಿಂಬ ಪ್ರತಿಬಿಂಬ ದೃಷ್ಟಾಂತದ ಮೂಲಕ ಆತ್ಮ ಸ್ವರೂಪವನ್ನು ತಿಳಿಸಲೋಸುಗ ಪುನಃ–

ಸರ್ವೇಷಾಂ ದೇಹಿನಾಮಂತಶ್ಚಿತ್ತತೋಯಂ ಪ್ರಕಾಶತೇ ।
ತಸ್ಮಿನ್ ಪ್ರತಿಫಲತ್ಯಾತ್ಮಾ ಶಿವೋ ದರ್ಪಣವದ್ ವಿಭುಃ ॥

(ಸಿ. ಶಿ. ೧೯–೬೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪ್ರತಿಯೊಬ್ಬ ಜೀವಾತ್ಮನ ಅಂತರಂಗ ದಲ್ಲಿ ಚಿತ್ತವೆಂಬ ನಿರ್ಮಲವಾದ ಜಲವಿರುತ್ತದೆ. ಆ ಜಲದಲ್ಲಿ ವಿಭುವಾದ ಪರಮಾತ್ಮನು ದರ್ಪಣದಲ್ಲಿ ವಸ್ತುಗಳು ಪ್ರತಿಬಿಂಬಿಸುವಂತೆ ಪ್ರತಿಫಲಿತನಾಗುತ್ತಾನೆ ಅರ್ಥಾತ್ ಪ್ರತಿಬಿಂಬಿತನಾಗುತ್ತಾನೆ. ಒಂದೇ ಬಿಂಬವು ಅನೇಕ ಉಪಾಧಿಗಳಲ್ಲಿ ಪ್ರತಿಬಿಂಬಿತವಾಗಿ ಅನೇಕವಾಗಿ ತೋರಿದರೂ, ಅದು ಒಂದೇಯಾಗಿರುವಂತೆ ಸರ್ವ ಜೀವಿಗಳ ಅಂತಃಕರಣ ದಲ್ಲಿ ಪ್ರತಿಬಿಂಬಿತನಾದ ಪರಮಾತ್ಮನೂ ಸಹ ಒಬ್ಬನೇಯಾಗಿದ್ದಾನೆ. ಶುದ್ಧವೂ, ಸ್ವಚ್ಛವೂ ಸ್ಥಿರವೂ ಆದ ಜಲದಲ್ಲಿ ನಾವು ನಮ್ಮ ಪ್ರತಿಬಿಂಬವನ್ನು ಸ್ಪಷ್ಟವಾಗಿ ನೋಡಬಹುದು. ದರ್ಪಣದ ಆವಿಷ್ಕಾರವಾಗುವ ಪೂರ್ವದಲ್ಲಿ ಪ್ರಾಯಃ ಪ್ರತಿಯೊಬ್ಬರೂ ತಮ್ಮ ಪ್ರತಿಬಿಂಬವನ್ನು ಜಲದಲ್ಲಿಯೇ ನೋಡಿಕೊಳ್ಳುತ್ತಿದ್ದರು. ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರಜಾಪತಿ ಹಾಗೂ ಇಂದ್ರರ ಸಂವಾದ ಪ್ರಸಂಗದಲ್ಲಿ ಪ್ರತಿಬಿಂಬವನ್ನು ತೋರಿಸಲು ನೀರು ತುಂಬಿದ ರಂಜಣಿಗೆಯನ್ನು ಪ್ರತಿಬಿಂಬಕ್ಕಾಗಿ ಬಳಸಿಕೊಂಡದ್ದು ಕಂಡುಬರುತ್ತದೆ.

ಈ ನೀರಿನಲ್ಲಿ ತೋರುವ ಪ್ರತಿಬಿಂಬವನ್ನು ಕಂಡೇ ದರ್ಪಣದ ಆವಿಷ್ಕಾರವನ್ನು ಮಾಡಿರ ಬಹುದು. ಪ್ರಸ್ತುತವಾಗಿ ಒಬ್ಬನೇಯಾದ ಪರಮಾತ್ಮನು ಪ್ರತಿಯೊಬ್ಬರ ಚಿತ್ತವೆಂಬ ಜಲ ದಲ್ಲಿ ಪ್ರತಿಬಿಂಬಿತನಾಗುತ್ತಾನೆ. ಬಿಂಬರೂಪವಾಗಿ ಆತನು ಒಬ್ಬನೇಯಾಗಿದ್ದರೂ ಪ್ರತಿಬಿಂಬರೂಪದಲ್ಲಿ ಆತನು ಅನಂತ ರೂಪವನ್ನು ತಾಳಿದ್ದಾನೆ. ಹೀಗೆ ಅನೇಕನಾಗಿದ್ದರೂ ಆತನು ಒಬ್ಬನೇಯೆಂಬುದಾಗಿ ತಿಳಿದುಕೊಳ್ಳಬೇಕೆಂಬುದೇ ಪೂಜ್ಯಪಾದರ ಆಶಯ ವಾಗಿದೆ.

ಪ್ರತಿಯೊಬ್ಬರ ಹೃದಯ ಕಮಲದಲ್ಲಿ ಪರಮಾತ್ಮನು ಬಂಧಿಸಲ್ಪಟ್ಟಿದ್ದರೂ ಆತನು ಅಪರಿಮಿತನೂ ಹಾಗೂ ವ್ಯಾಪಕನೂ ಆಗಿದ್ದಾನೆ ಎಂಬ ವಿಷಯವನ್ನು ಪ್ರತಿಪಾದಿ ಸುವುದಕ್ಕಾಗಿ ಪೂಜ್ಯಪಾದರು ಪುನಃ–

ಏಕೋ ವಶೀಕೃತಃ ಸಂವಿತ್ಪ್ರಕಾಶಾತ್ಮಾ ಪರಾತ್ಪರಃ ।
ಸರ್ವಪ್ರಾಣಿಗತೋ ಭಾತಿ ತಥಾಪಿ ವಿಭುರುಚ್ಯತೇ ॥

(ಸಿ. ಶಿ. ೧೯–೬೩)

ಈ ವಿಧವಾಗಿ ಆದೇಶಿಸಿದ್ದಾರೆ. ವಿಶ್ವವನ್ನು ಮೀರಿ ನಿಂತಿರುವ ಪರಾಶಕ್ತಿಗಿಂತಲೂ ಮಿಗಿಲಾಗಿರುವ ಚಿತ್ಪ್ರಕಾಶರೂಪನಾದ, ಪರಾತ್ಪರನಾದ ಹಾಗೂ ಒಬ್ಬನೇಯಾದ ಶಿವನು ಎಲ್ಲ ಪ್ರಾಣಿಗಳ ಹೃದಯದಲ್ಲಿ ಒಳಹೊಕ್ಕು ವಾಸಿಸುತ್ತಿದ್ದರೂ, ಆತನು ಪರಿಚ್ಛಿನ್ನವಾಗದೇ ವ್ಯಾಪಕನಾಗಿಯೇ ಇದ್ದಾನೆ. ಹಾರದ ಮಣಿಗಳಲ್ಲಿ ಅನುಸ್ಯೂತವಾದ ಸೂತ್ರದಂತೆ ಪರಮಾತ್ಮನು ಸರ್ವರಲ್ಲಿ ಅನುಸ್ಯೂತನಾಗಿದ್ದಾನೆ. ಅಂತೆಯೇ ಅವನ ವಿಭುತ್ವಕ್ಕೆ ಯಾವುದೇ ಧಕ್ಕೆ ಬರುವುದಿಲ್ಲ. ವ್ಯಾಪಕನಾದ ವಸ್ತುವೇ ಸರ್ವದರಲ್ಲಿ ಅನುಸ್ಯೂತ ವಾಗಿರಲು ಸಾಧ್ಯವಾಗುತ್ತದೆ. ಹೀಗೆ ಒಬ್ಬನೇ ಆತ್ಮನು ಸರ್ವತ್ರ ವ್ಯಾಪಕನಾಗಿದ್ದಾನೆಂಬು ದಾಗಿ ತಿಳಿಸುವ ಸ್ಥಲವೇ ಬಿಂದ್ವಾಕಾಶ ಸ್ಥಲವು.

ಪೂಜ್ಯಪಾದರು ಈ ಬಿಂದ್ವಾಕಾಶಸ್ಥಲವನ್ನು, ಪರಿಸಮಾಪ್ತಿಗೊಳಿಸುತ್ತ
ಪುನಃ ಏಕ ಏವ ಯಥಾ ಸೂರ್ಯಸ್ತೇಜಸಾ ಭಾತಿ ಸರ್ವಗಃ ।
ತಥಾऽತ್ಮಾ ಶಕ್ತಿಭೇದೇನ ಶಿವಃ ಸರ್ವಗತೋ ಭವೇತ್ ॥

(ಸಿ. ಶಿ. ೧೯–೬೪)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಒಬ್ಬನೆಯಾದ ಸೂರ್ಯನು ಮಳೆಗಾಲ ಚಳಿಗಾಲ ಹಾಗೂ ಬೇಸಿಗೆಯ ಕಾಲಗಳೆಂಬ ಋತುಮಾನಗಳಿಗೆ ಕಾರಣೀ ಭೂತನಾಗಿ ತನ್ನದೇ ಪ್ರಖರವಾದ ತೇಜಸ್ಸಿನಿಂದ ಸರ್ವತ್ರ ಪ್ರಕಾಶನಾಗಿ ತೋರುವಂತೆ, ಒಬ್ಬನೇ ಪರಮಾತ್ಮನು ತನ್ನ ಇಚ್ಛಾ–ಜ್ಞಾನ–ಕ್ರಿಯಾದಿ ಶಕ್ತಿಗಳ ಮೂಲಕ ವಿಶ್ವವನ್ನೆಲ್ಲ ವ್ಯಾಪಿಸಿಕೊಂಡಿದ್ದಾನೆ. ಹೀಗೆ ಈ ಬಿಂದ್ವಾಕಾಶ ಸ್ಥಲದಲ್ಲಿ ಬಿಂದುರೂಪನಾದ ಪರಶಿವನು ಆಕಾಶದಂತೆ ಸರ್ವತ್ರ ವ್ಯಾಪಿಸಿಕೊಂಡಿದ್ದಾನೆಂಬುದಾಗಿ ತಿಳಿಸಿಕೊಡಲಾಗಿದೆ. ಈ ವಿಷಯ ವಸ್ತುವನ್ನು ಪ್ರತಿಯೊಬ್ಬರ ಅನುಭವಕ್ಕೆ ಗೋಚರವಾಗುವಂತೆ ತಿಳಿಸಲೋಸುಗ ಪೂಜ್ಯಪಾದರು ಆಕಾಶ, ವಾಯು, ಅಗ್ನಿ ಮತ್ತು ಜಲಗಳೆಂಬ ಮಹಾಭೂತಗಳ ಹಾಗೂ ಪ್ರತಿಯೊಬ್ಬರಿಗೂ, ಪ್ರತಿದಿನವೂ ಪ್ರತ್ಯಕ್ಷನಾಗಿ ತೋರುವ ಸೂರ್ಯನ ಉದಾಹರಣೆಯ

ಮೂಲಕ ತಿಳಿಯಪಡಿಸಿದ್ದಾರೆ. ಇಲ್ಲಿಯ ಉಪದೇಶದಲ್ಲಿ ಉಪಮಾನಗಳು ಭಿನ್ನ ಭಿನ್ನ ಗಳಾಗಿದ್ದರೂ ಪ್ರತಿಪಾದ್ಯ ವಿಷಯವು ಒಂದೇಯಾಗಿರುತ್ತದೆ. ದಯಾಘನರಾದ ಪೂಜ್ಯಪಾದರು ಯಾರಿಗೆ ಯಾವ ಉದಾಹರಣೆ ಮೂಲಕ ವಿಷಯ ವಸ್ತು ಅನುಭವ ಗೋಚರವಾಗುವುದೋ ಅವರು ಅದರಿಂದ ಪ್ರಸ್ತುತ ವಿಷಯವನ್ನು ತಿಳಿದುಕೊಳ್ಳಲೆಂಬ ಉದ್ದೇಶದಿಂದ ಅನೇಕ ಉದಾಹರಣೆಗಳನ್ನು ಕೊಟ್ಟು, ತಿಳಿಯಪಡಿಸಿದ್ದಾರೆ.

ಬಿಂದ್ವಾಕಾಶಸ್ಥಲದ ವಿಷಯವು ಅತ್ಯಂತ ಸೂಕ್ಷ್ಮವಾಗಿರೋಣದರಿಂದ ಜಡ ಬುದ್ಧಿಯ ಜೀವಿಗಳಿಗೆ ಉದಾಹರಣೆಯಿಲ್ಲದೆ ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಆಂತೆಯೇ ಪ್ರಸಂಗಾನುಸಾರವಾಗಿ ಜ್ಞಾನಿಗಳು ಪ್ರತಿಯೊಬ್ಬರಿಗೂ ವಿಷಯವು ತಿಳಿಯ ಲೆಂಬ ಉದ್ದೇಶದಿಂದ ಹೇಳಿದ್ದನ್ನೇ ಪುನಃ ಪುನಃ ಬೇರೆ ಬೇರೆ ಯುಕ್ತಿ ದೃಷ್ಟಾಂತಗಳ ಮೂಲಕ ತಿಳಿಯಪಡಿಸುತ್ತಾರೆ. ಇಲ್ಲಿ ಉಪದೇಶಿಸಿದ ಈ ಸೂಕ್ಷ್ಮ ವಿಷಯವನ್ನು ನೀವೆಲ್ಲ ಶ್ರೋತೃಗಳು ಸರಿಯಾಗಿ ಆಲಿಸಿ, ಅದರ ಮನನ ನಿಧಿಧ್ಯಾಸಗಳನ್ನು ಮಾಡಿ ನಿಮ್ಮಾತ್ಮವೇ ಸರ್ವತ್ರ ವ್ಯಾಪಕವಾಗಿದೆ ಎಂಬುದಾಗಿ ತಿಳಿದುಕೊಂಡು, ಸಂಕುಚಿತ ಭಾವನೆಯೆಂಬ ಸಂಕೋಲೆಯನ್ನು ಕಿತ್ತೊಗೆದು, ಸದಾ ಸರ್ವತ್ರ ನಿಮ್ಮನ್ನೇ ನೀವು ಕಂಡು ಸುಖಿಸುವಂತಾಗಿರಿ ಎಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೬ ನವ್ಹೆಂಬರ್, ೧೯೯೪

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಮಹಾಕಾಶಸ್ಥಲ

ಧರ್ಮಾಸಕ್ತರೇ !

ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಶರಣಸ್ಥಲದಲ್ಲಿ ಬರುವ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಬಿಂದ್ವಾಕಾಶಸ್ಥಲದ ಬಗ್ಗೆ ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಬಿಂದ್ವಾಕಾಶ ಸ್ಥಲದಲ್ಲಿ ಪರಮ ತತ್ವಕ್ಕೆ ಬಿಂದು ಎಂದು ಕರೆಯಲಾಗಿದೆ. ಸಾಮಾನ್ಯವಾಗಿ ಬಿಂದು ವೆಂದರೆ ಅತಿ ಸಣ್ಣದಾದ ವಸ್ತುವೆಂದು ಅರ್ಥವಾಗುತ್ತದೆ. ಸಿಂಧುವೆಂದರೆ ಸಾಗರ ಅಥವಾ ಮಹಾನ್ ಎಂದು ಅರ್ಥವಾಗುವುದು. ಪರಮಾತ್ಮನು ಎಲ್ಲಕ್ಕಿಂತಲೂ ಮಹತ್ತಾಗಿರುವಾಗ ಅವನಿಗೆ ಬಿಂದುವೆಂಬುದಾಗಿ ಏಕೆ ಸಂಬೋಧಿಸಿದ್ದಾರೆ ಎಂಬ ಪ್ರಶ್ನೆಯು ಉದ್ಭವಿಸಿದಾಗ ಪರಮಾತ್ಮನು ''ಅಣೋರಣೀಯಾನ್ ಮಹತೋ ಮಹೀಯಾನ್'' ಎಂಬ ಶ್ರುತಿವಚನ ದಂತೆ ಅವನು ಅಣುವಿಗಿಂತಲೂ ಅಣುವಾಗಿಯೂ, ಮಹತ್ತಿಗಿಂತಲೂ ಮಹತ್ತಾಗಿಯೂ ಇದ್ದಾನೆ. ಅಂದಾಗ ಅವನನ್ನು ಯಾವ ಶಬ್ದದಿಂದ ವರ್ಣಿಸಿದರೂ ಯಾವ ದೋಷ ವಿರುವುದಿಲ್ಲ. ಬಿಂದು ಶಬ್ದದ ಅರ್ಥವು ಸಾಮಾನ್ಯವಾಗಿ ಸಣ್ಣದೆಂದಾದರೂ, ಆಗಮ ಶಾಸ್ತ್ರದಲ್ಲಿ ಇದೊಂದು ಪಾರಿಭಾಷಿಕ ಶಬ್ದವಾಗಿದೆ. ಅದರ ಪ್ರಕಾರ ಬಿಂದುವೆಂದರೆ ಪರಬ್ರಹ್ಮ ಅರ್ಥಾತ್ ಪರಮಾತ್ಮನೆಂದೇ ಅರ್ಥ. ಸೃಷ್ಟಿಯ ನಂತರ ಶಿವ ಹಾಗೂ ಶಕ್ತಿಯರೆಂದು ಪ್ರಸಿದ್ಧವಾದ ಆ ತತ್ವಗಳೇ ಸೃಷ್ಟಿಯ ಪೂರ್ವಾವಸ್ಥೆಯಲ್ಲಿ ಅತಿ ಸೂಕ್ಷ್ಮ ಗಳಾಗಿದ್ದು ಬಿಂದು ಹಾಗೂ ನಾದಗಳೆಂಬ ಶಬ್ದಗಳಿಂದ ಕರೆಯಲ್ಪಡುತ್ತವೆ. ಆದ್ದರಿಂದ ಇಲ್ಲಿ ಬಂದಿರುವ ಬಿಂದು ಶಬ್ದದಿಂದ ಸಣ್ಣ ಪದಾರ್ಥವೆಂದು ಅರ್ಥೈಸದೇ ಅತಿ ಸೂಕ್ಷ್ಮವೂ ವ್ಯಾಪಕವೂ ಆದ ಪರಶಿವ ತತ್ವವೆಂದೇ ಭಾವಿಸಬೇಕು.

ಈ ಪೂರ್ವದಲ್ಲಿ ಯಾವುದಕ್ಕೆ ಬಿಂದ್ವಾಕಾಶವೆಂಬುದಾಗಿ ಕರೆದಿರುವರೋ ಅದುವೇ ಮಹಾಕಾಶವೂ ಸಹ ಅಹುದು ಎಂಬ ವಿಷಯವನ್ನು ಪ್ರತಿಪಾದಿಸುವದ ಕ್ಕೋಸ್ಕರ ಈ ಮುಂದೆ ಮಹಾಕಾಶಸ್ಥಲದ ಬಗ್ಗೆ ಪೂಜ್ಯಪಾದರು ಉಪದೇಶಿಸಲಿದ್ದಾರೆ. ಪಿಂಡಾಂಡದಲ್ಲಿಯ ಆಕಾಶವು ಬ್ರಹ್ಮಾಂಡದೊಳಗಿನ ಮಹಾಕಾಶಕ್ಕಿಂತಲೂ ಹೇಗೆ ಭಿನ್ನವಾಗಿರುವುದಿಲ್ಲವೋ, ಅದರಂತೆ ಪಿಂಡಾಂಡದೊಳಗಿನ ಆತ್ಮ ಹಾಗೂ ಬ್ರಹ್ಮಾಂಡ ದೊಳಗಿನ ಪರಮಾತ್ಮರಲ್ಲಿ ಯಾವ ಭೇದವೂ ಇರುವುದಿಲ್ಲ. ಅವರೆಡೂ ತತ್ವಗಳು ಅಭಿನ್ನ ಗಳಾಗಿವೆ ಎಂಬುದಾಗಿ ಪ್ರತಿಪಾದಿಸುವ ಸ್ಥಲವೇ ಮಹಾಕಾಶಸ್ಥಲವು ಅಂತೆಯೇ ಪೂಜ್ಯ ಪಾದರು–

ಪಿಂಡಾಂಡಸ್ಥಂ ಯಥಾऽಕಾಶಂ ನ ಭಿನ್ನಂ ತದ್ವದಾತ್ಮನಃ ।
ಅಭಿನ್ನಃ ಪರಮಾತ್ಮೇತಿ ಮಹಾಕಾಶಸ್ಥಲಂ ವಿದುಃ ॥

ಯಥಾ ನ ಭಿನ್ನಮಾಕಾಶಂ ಘಟೇಷು ಚ ಮಠೇಷುಚ
ತಥಾಂಡೇಷು ಚ ಪಿಂಡೇಷು ಸ್ಥಿತೋ ಹ್ಯಾತ್ಮಾ ನ ಭಿದ್ಯತೆ ॥

(ಸಿ. ಶಿ. ೧೯; ೭೫-೭೬)

ಹೀಗೆ ಉಪದೇಶಿಸಿದ್ದಾರೆ. ಪಿಂಡಾಂಡವೆಂದರೆ ಶರೀರ, ಬ್ರಹ್ಮಾಂಡವೆಂದರೆ ವಿಶ್ವವು. ಪಿಂಡಾಂಡದೊಳಗೆ ಆಕಾಶವಿರುವಂತೆ ಬ್ರಹ್ಮಾಂಡದೊಳಗೂ ಆಕಾಶವಿದೆ. ಪಿಂಡಾಂಡ ದಲ್ಲಿಯ ಆಕಾಶಕ್ಕೆ ಪಿಂಡಾಕಾಶವೆಂದು ಕರೆದರೆ, ಬ್ರಹ್ಮಾಂಡದಲ್ಲಿಯ ಆಕಾಶಕ್ಕೆ ಮಹಾಕಾಶವೆಂದು ಕರೆಯುತ್ತಾರೆ. ಇಲ್ಲಿ ಪಿಂಡ ಹಾಗೂ ಬ್ರಹ್ಮಾಂಡಗಳೆಂಬ ಎರಡು ಉಪಾಧಿಗಳು ಪರಸ್ಪರ ಭಿನ್ನವಾಗಿರೋಣದರಿಂದ ಇವುಗಳಲ್ಲಿಯ ಆಕಾಶವೂ ಸಹ ಭಿನ್ನ ವೆಂಬ ಭಾವನೆಯು ಸಾಮಾನ್ಯ ಜನರಿಗೆ ಉಂಟಾಗುವುದು. ಆದರೆ ವಾಸ್ತವಿಕವಾಗಿ ಉಪಾಧಿಗಳು ಭಿನ್ನಗಳಾಗಿದ್ದರೂ, ಉಪಹಿತವಾದ ಆಕಾಶವು ಮಾತ್ರ ಒಂದೇಯಾಗಿರು ತ್ತದೆ. ಇದೇ ಪ್ರಕಾರ ಘಟ ಮಠಾದಿಗಳಲ್ಲಿ ತೋರುವ ಆಕಾಶವೂ ಸಹ ಭಿನ್ನವಾಗಿರುವು ದಿಲ್ಲ. ಸರ್ವತ್ರ ವ್ಯಾಪಕವಾದ ಆಕಾಶವು ಬೇರೆ ಬೇರೆ ಉಪಾಧಿಗಳಲ್ಲಿ ಇದ್ದರೂ ಅದು ಅಖಂಡವಾಗಿರುವಂತೆ, ಪಿಂಡ ಬ್ರಹ್ಮಾಂಡಗಳಲ್ಲಿರುವ ಪರಮಾತ್ಮನೂ ಸಹ ಅಖಂಡನೂ, ವ್ಯಾಪಕನೂ, ಅದ್ವಿತೀಯನೂ ಆಗಿರುತ್ತಾನೆ. ಹೀಗೆ ಮಹಾಕಾಶದ ಉಪಮೆಯ ಮೂಲಕ ಆತ್ಮದ ಅಖಂಡತೆಯನ್ನು ಪ್ರತಿಪಾದಿಸಿರುವುದರಿಂದಲೇ ಇದಕ್ಕೆ ಮಹಾಕಾಶಸ್ಥಲವೆಂದು ಸಂಬೋಧಿಸಲಾಗಿದೆ.

ಪರಮಾತ್ಮನನ್ನು ಯಾರು ವ್ಯಾಪಕನನ್ನಾಗಿ ಭಾವಿಸುವುದಿಲ್ಲವೋ ಅಂಥವರಿಗೆ ದುರ್ಗತಿಯೇ ಪ್ರಾಪ್ತವಾಗುತ್ತದೆ. ಅಂತೆಯೇ ದೇವಿಕಾಲೋತ್ತರ ಗ್ರಂಥದಲ್ಲಿ–

ವ್ಯೋಮಾಕಾರಂ ಮಹಾಸೂಕ್ಷ್ಮಂ ವ್ಯಾಪಕಂ ಯೋ ನ ಭಾವಯೇತ್ ।
ಸಂಸಾರೀ ಸ ಭವೇಲ್ಲೋಕೇ ಬೀಜಕೋಶಕ್ರಿಮಿರ್ಯಥಾ ॥

ಎಂಬುದಾಗಿ ಪ್ರತಿಪಾದಿಸಲಾಗಿದೆ. ಪರಶಿವಬ್ರಹ್ಮವು ಅತಿ ಸೂಕ್ಷ್ಮವೂ, ಆಕಾಶದಂತೆ ವ್ಯಾಪಕವೂ ಎಂಬುದಾಗಿ ಭಾವಿಸದವನು ಈ ಲೋಕದಲ್ಲಿ ಬೀಜದಲ್ಲಿ ಉತ್ಪನ್ನವಾಗುವ ಕ್ರಿಮಿಗಳಂತೆ ಜನನ ಮರಣ ರೂಪಿ ಸಂಸಾರದಲ್ಲಿ ಸಿಲುಕಿಕೊಳ್ಳುತ್ತಾನೆ. ಮನೆಯಲ್ಲಿ ರೈತರು ತಮ್ಮ ದಿನಬಳಕೆಗಾಗಿ ಅಥವಾ ಮುಂದಿನ ಬೀಜಕ್ಕಾಗಿ ಧಾನ್ಯಗಳನ್ನು ಸಂಗ್ರಹಿಸಿಡುತ್ತಾರೆ. ಆ ಬೀಜಗಳಿಗೆ ಸರಿಯಾದ ಸುರಕ್ಷತೆಯನ್ನು ಒದಗಿಸದಿದ್ದರೆ ಆ ಬೀಜಗಳಲ್ಲಿಯೇ ಅನೇಕ ಕ್ರಿಮಿಗಳು ಉತ್ಪನ್ನವಾಗುತ್ತವೆ. ಕೆಲವು ದಿನದ ನಂತರ ಮತ್ತೆ ಸತ್ತುಹೋಗುತ್ತವೆ. ಹೀಗೆ ಸಂಸ್ಕಾರ ಹೀನವಾದ ಯೋನಿಗಳಲ್ಲಿ ಪುನಃ ಪುನಃ ಜನ್ಮವನ್ನು ಪಡೆಯುವ ದುರ್ಗತಿಯೇ ಅವುಗಳಿಗೆ ಪ್ರಾಪ್ತವಾಗುವಂತೆ ಆತ್ಮಜ್ಞಾನ ವಿಹೀನನಾದ ಜೀವಿಯೂ ಸಹ ಇದೇ ಪ್ರಕಾರ ವಾಗಿ ಹೀನ ಹೀನ ಯೋನಿಗಳಲ್ಲಿ ಜನ್ಮತಾಳಿ ಕೊನೆಗೆ ದುರ್ಗತಿಯನ್ನೇ ಪಡೆಯುತ್ತಾನೆ. ಆದಕಾರಣ ಪ್ರತಿಯೊಬ್ಬರೂ ಈ ದುರ್ಗತಿಯಿಂದ ಪಾರಾಗುವುದಕ್ಕಾಗಿಯೇ ಆತ್ಮಜ್ಞಾನ ವನ್ನು ಪಡೆಯಬೇಕೆಂಬುದಾಗಿ ಸರ್ವ ತತ್ವಜ್ಞಾನಿಗಳು ಉಪದೇಶಿಸುತ್ತ ಬಂದಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ತಾವು ಉಪದೇಶಿಸುತ್ತಿರುವ ಮಹಾಕಾಶವೆಂದರೆ ಅದು ಭೂತಾಕಾಶವಾಗಿರದೆ ಮಹಾಲಿಂಗ ಸ್ವರೂಪವಾಗಿದೆ ಎಂಬುದನ್ನು ತಿಳಿಸಲೋಸುಗ ಪುನಃ–

> ಅನಿರ್ದೇಶ್ಯ ಮನೌಪಮ್ಯ ಮವಾಙ್ಮಾನ ಸಗೋಚರಮ್ ।
> ಸರ್ವತೋ ಮುಖಸಂಪನ್ನಂ ಸತ್ತಾನಂದಂ ಚಿದಾತ್ಮಕಮ್ ॥
>
> ಕಾಲಾತೀತಂ ಕಲಾತೀತಂ ಕ್ರಮಯೋಗಾದಿವರ್ಜಿತಮ್ ।
> ಸ್ವಾನುಭೂತಿಪ್ರಮಾಣಸ್ಥಂ ಜ್ಯೋತಿಷಾಮುದಯ ಸ್ಥಲಮ್ ॥
>
> ಶಿವಾಖ್ಯಂ ಪರಮಂ ಬ್ರಹ್ಮ ಪರಮಾಕಾಶಲಕ್ಷಣಮ್ ।
> ಲಿಂಗಮಿತ್ಯುಚ್ಯತೇ ಸದ್ಭಿರ್ಯದ್ವಿನಾ ನ ಜಗತ್ ಸ್ಥಿತಿಃ ॥
>
> (ಸಿ. ಶಿ. ೧೬; ೬೭–೬೯)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ಪರಶಿವಬ್ರಹ್ಮಕ್ಕೆ ಮಹಾಕಾಶವೆಂದು ಕರೆದಂತೆ ಅದಕ್ಕೆ ಮಹಾಲಿಂಗವೆಂಬುದಾಗಿಯೂ ಕರೆದಿದ್ದಾರೆ. ಅದಕ್ಕೇನೇ ಘನಲಿಂಗವೆಂಬುದು ಇನ್ನೊಂದು ಪರ್ಯಾಯ ನಾಮ. ಆ ಮಹಾಲಿಂಗದ ಸ್ವರೂಪವನ್ನೇ ಅನೇಕ ವಿಶೇಷಣಗಳ ಮೂಲಕವಾಗಿ ಇಲ್ಲಿ ವರ್ಣಿಸಲಾಗಿದೆ ಅವುಗಳನ್ನು ಕ್ರಮವಾಗಿ ವಿಶ್ಲೇಷಿಸೋಣ. ಮೊದಲನೆಯ ವಿಶೇಷಣವೇ ಅನಿರ್ದೇಶ್ಯಂ. ಯಾವುದನ್ನು ಬೆರಳು ಮಾಡಿ ತೋರಿಸಲಾಗುವುದಿಲ್ಲವೋ ಅದು ಅನಿರ್ದೇಶ್ಯವಾಗಿರುತ್ತದೆ. ಜಗತ್ತಿನಲ್ಲಿಯ ಪ್ರತಿಯೊಂದು ಪದಾರ್ಥಗಳ ಬಗ್ಗೆ ನಿರ್ದೇಶನವು ಸಂಭವಿಸುತ್ತದೆ. ಜಗತ್ತಿನ ಯಾವುದೊಂದು ವಸ್ತುವನ್ನು ಸ್ವತಃ ಕೈಯಿಂದ ಮುಟ್ಟಿ ಅಥವಾ ವಸ್ತುವಿನ ಕಡೆ ಕೈ ಮಾಡಿ ದೂರದಿಂದಲಾದರೂ ತೋರಿಸುವುದು ಸಂಭವಿಸುತ್ತದೆ. ಆದರೆ ಅತಿ ಸೂಕ್ಷ್ಮವೂ ಅಂತಃಸ್ಥಿತವೂ, ಆದ ಮಹಾಲಿಂಗವನ್ನು ನಿರ್ದೇಶಿಸುವುದು ಸಾಧ್ಯವಿಲ್ಲವೆಂತಲೇ ಆದಕ್ಕೆ ಅನಿರ್ದೇಶ್ಯವೆಂದು ಕರೆದಿದ್ದಾರೆ. ''ಲಕ್ಷಣ ಪ್ರಮಾಣಾಭ್ಯಾಂ ವಸ್ತುಸಿದ್ಧಿಃ'' ಎಂಬ ಶಾಸ್ತ್ರೋಕ್ತಿಗನುಸಾರವಾಗಿ ಒಂದು ವಸ್ತುವನ್ನು ತಿಳಿದುಕೊಳ್ಳಬೇಕಾದರೆ ಮೊದಲು ಅದರ ಲಕ್ಷಣದ ಬಗ್ಗೆ ವಿಚಾರ ಮಾಡಬೇಕಾಗುವುದು. ಅನಂತರ ಅದನ್ನು ತಿಳಿಸುವ ಪ್ರಮಾಣಗಳ ಬಗ್ಗೆ ಆಲೋಚಿಸಬೇಕಾಗುವುದು. ಶಾಸ್ತ್ರಗಳಲ್ಲಿ ಸ್ವರೂಪಲಕ್ಷಣ ಮತ್ತು ತಟಸ್ಥ ಲಕ್ಷಣವೆಂದು ಲಕ್ಷಣಗಳನ್ನು ಎರಡು ವಿಧವಾಗಿ ಹೇಳಿದ್ದಾರೆ. ಇದೂ ಅಲ್ಲದೆ ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧಿಗಳೆಂಬ ಆರು ವಿಧ ಪ್ರಮಾಣಗಳೂ ಸಹ ಪ್ರತಿಪಾದಿಸಲ್ಪಟ್ಟಿರುತ್ತವೆ. ಈ ಆರುವಿಧ ಪ್ರಮಾಣಗಳ ಆಧಾರದಿಂದಲೇ ನಾವು ಏನನ್ನಾದರೂ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಪ್ರಮಾಣಗಳಲ್ಲಿ ಮೊದಲಿನದಾದ ಪ್ರತ್ಯಕ್ಷ ಪ್ರಮಾಣವು ಎಲ್ಲ ಪ್ರಮಾಣಗಳಲ್ಲಿ ಪ್ರಬಲವಾದುದಾಗಿದೆ. ಯಾರಾದರೂ ಯಾವುದೊಂದು ವಸ್ತು ಇಲ್ಲವೆ ವ್ಯಕ್ತಿಯ ಬಗ್ಗೆ ವರ್ಣಿಸುತ್ತಿರುವಾಗ ನೀವು ಅದನ್ನು ಕಂಡಿದ್ದೀರಾ ? ಎಂಬ ಪ್ರಶ್ನೆಯನ್ನು ಪ್ರಪ್ರಥಮವಾಗಿ ಕೇಳುವ ರೂಢಿಯು ಲೋಕದಲ್ಲಿದೆ. ಪ್ರತ್ಯಕ್ಷ ಪ್ರಮಾಣದ ಉಪಯೋಗವನ್ನು ಸರ್ವೇ ಸಾಮಾನ್ಯವಾಗಿ ಎಲ್ಲರೂ ಮಾಡುತ್ತಾರೆ. ''ಚಕ್ಷುರ್ವೈ ಸತ್ಯಂ'' ಅಂದರೆ ಕಣ್ಣಿನಿಂದ

ನೋಡಿದ್ದೆಲ್ಲವೂ ಸತ್ಯವಾಗಿರುತ್ತದೆ. ಪಂಚಜ್ಞಾನೇಂದ್ರಿಯಗಳ ಮೂಲಕ ನಾವು ಈ ಜಗತ್ತನ್ನು ನೋಡುತ್ತ, ಅನುಭವಿಸುತ್ತ ಇರುತ್ತೇವೆ. ಈ ಜ್ಞಾನೇಂದ್ರಿಯಗಳು ಪ್ರತ್ಯಕ್ಷ ಪ್ರಮಾಣದ ಸಾಧನಗಳಾಗಿರುತ್ತವೆ. ಇವುಗಳಿಂದ ನಾವು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಪಂಚ ವಿಷಯಗಳನ್ನು ಅನುಭವಿಸಲು ಸಾಧ್ಯವಾಗುತ್ತದೆ. ಪರಮಾತ್ಮನು– ''ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ'' ಎಂಬ ಶ್ರುತಿ ಪ್ರಮಾಣದಂತೆ ಶಬ್ದಸ್ಪರ್ಶಾದಿ ಗುಣರಹಿತನಾಗಿರೋಣದರಿಂದ ಪೂರ್ವದಲ್ಲಿ ಹೇಳಿದ ಪಂಚಜ್ಞಾನೇಂದ್ರಿಯಗಳ ಮುಖಾಂತರ ಅವನನ್ನು ಪ್ರತ್ಯಕ್ಷಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅಂತೆಯೆ ಅವನು ಪ್ರತ್ಯಕ್ಷ ಪ್ರಮಾಣದಿಂದ ಅನಿರ್ದೇಶ್ಯನಾಗಿದ್ದಾನೆ.

ಪ್ರಮಾಣಗಳಲ್ಲಿ ಎರಡನೆಯದಾದ ಪ್ರಮಾಣವೇ ಅನುಮಾನವು. ಇದಾದರೂ ಪ್ರತ್ಯಕ್ಷವನ್ನು ಅನುಸರಿಸಿಯೇ ಹೋಗುವಂಥಾದ್ದು. ಯತ್ರ ಯತ್ರ ಧೂಮಃ ತತ್ರ ತತ್ರ ವಹ್ನಿಃ ಎಂಬಲ್ಲಿ ದೂರದಲ್ಲಿ ಕಾಣುವ ಹೊಗೆಯನ್ನು ಪ್ರತ್ಯಕ್ಷವಾಗಿ ಕಂಡು ಆ ಹೊಗೆಯ ಜನಕವಾದ ಅಗ್ನಿಯ ಅನುಮಾನವನ್ನು ಮಾಡಲಾಗುತ್ತದೆ. ಅದರಂತೆ ತೋರುವ ಜಗತ್ತನ್ನು ಕಂಡು ಇದಕ್ಕೆ ಕರ್ತನಾದವನು ಪರಮಾತ್ಮನೆಂಬುದಾಗಿ ಅನುಮಾನ ಮಾಡಲಿಕ್ಕೆ ಬರುವುದಿಲ್ಲ! ಅಂದಾಗ ಅನುಮಾನದಿಂದ ಆತನು ಅನಿರ್ದೇಶ್ಯ ಹೇಗೆ ಎಂಬ ಪ್ರಶ್ನೆಯು ಉದ್ಭವಿಸಬಹುದು. ಆದರೆ ಎಲ್ಲಿ ಎಲ್ಲಿ ಹೊಗೆಯಿದೆಯೋ ಅಲ್ಲಿ ಅಗ್ನಿಯಿದೆಯೆಂಬದು ಸಾಹಚರ್ಯ. ಇಂತಹ ಸಾಹಚರ್ಯವನ್ನು ನಾವು ಅಡಿಗೆ ಮನೆ ಮುಂತಾದವುಗಳಲ್ಲಿ ದಿನಾಲು ಕಾಣುತ್ತಿರುತ್ತೇವೆ. ಇಂತಹ ಸಾಹಚರ್ಯ ನಿಯಮದ ಜ್ಞಾನವುಳ್ಳವನು ಮಾತ್ರ ಹೊಗೆಯನ್ನು ನೋಡಿ ಅಗ್ನಿಯ ಅನುಮಾನವನ್ನು ಮಾಡಲಿಕ್ಕೆ ಸಾಧ್ಯವಾಗುವುದು. ಈ ಜಗತ್ತು ಒಂದು ಕಾರ್ಯವಾಗಿದೆ. ಪರಮಾತ್ಮನು ಇದರ ಕರ್ತನಾಗಿದ್ದಾನೆ. ಅಂತೆಯೇ ಕರ್ತನು ಕಾಣದಿದ್ದರೂ ಕಾರ್ಯವನ್ನು ನೋಡಿ ಕರ್ತೃವನ್ನು ಅನುಮಾನಿಸಬಹುದು ಎಂಬುದಾಗಿ ಸಮಾಧಾನವನ್ನು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಈ ಜಗತ್ತು ಈಶ್ವರನು ಮಾಡಿದ್ದನ್ನು ಅದಾರೂ ನೋಡಿಲ್ಲ. ನೋಡದೆ ಇದ್ದಾಗ ಅಲ್ಲಿ ಸಾಹಚರ್ಯ ನಿಯಮವೇ ಸಂಭವಿಸುವುದಿಲ್ಲವೆಂದ ಬಳಿಕ ಅನುಮಾನ ಪ್ರಮಾಣವು ಅಲ್ಲಿ ಹೇಗೆ ತಾನೆ ನಿರ್ದೇಶ್ಯಕವಾದೀತು ? ಹೀಗೆ ಅನುಮಾನ ಪ್ರಮಾಣದಿಂದಲೂ ಆ ಮಹಾಲಿಂಗವು ಅನಿರ್ದೇಶ್ಯವಾಗಿರುತ್ತದೆ.

ಇನ್ನು ಉಪಮಾನ ಪ್ರಮಾಣದಿಂದಲೂ ಮಹಾಲಿಂಗವನ್ನು ತಿಳಿಸಲಾಗುವುದಿಲ್ಲ. ಈ ಪ್ರಮಾಣದಲ್ಲಿ ಉಪಮೇಯಕ್ಕೆ ಸಮಾನವಾದ ಹೋಲಿಕೆಯುಳ್ಳ ಉಪಮಾನ ವೊಂದಿದ್ದಾಗಲೇ ಈ ಪ್ರಮಾಣಕ್ಕೆ ಅವಕಾಶವಿರುವುದು. ಆದರೆ ಮಹಾಲಿಂಗಕ್ಕೆ ಸಮಾನ ವಾದ ಮತ್ತೊಂದು ಮಹಾಲಿಂಗವಿಲ್ಲದಿರುವುದರಿಂದ ಉಪಮಾನ ಪ್ರಮಾಣವು ಮಹಾಲಿಂಗವನ್ನು ತಿಳಿಸಲು ಸಮರ್ಥವಾಗಿರುವುದಿಲ್ಲ. ಅಂತೆಯೇ ಪೂಜ್ಯಪಾದರು ''ಅನೌಪಮ್ಯಂ'' ಎಂಬುದಾಗಿ ಉಪದೇಶಿಸಿದ್ದಾರೆ. ಇದೇ ಪ್ರಕಾರವಾಗಿ ಶಬ್ದ ಪ್ರಮಾಣವೂ ಸಹ ಅಲ್ಲಿ ತನ್ನ ವ್ಯವಹಾರವನ್ನು ಮಾಡಲಾರದು. ಏಕೆಂದರೆ ಇದಕ್ಕೂ ಸಹ ಪರಮಾತ್ಮನನ್ನು ಸಾಕ್ಷಾತ್ ವರ್ಣಿಸುವ ಸಾಮರ್ಥ್ಯವಿರುವುದಿಲ್ಲ. ಇದು ಮಾಡುವ ಪ್ರಯತ್ನವು ಪರಮಾತ್ಮವಲ್ಲದ್ದನ್ನು ಪರಮಾತ್ಮವಲ್ಲ ಎನ್ನುವುದರಲ್ಲಿಯೇ ಕ್ಷೀಣವಾಗಿ

ಹೋಗುತ್ತದೆ. ಅಂತೆಯೇ ವೇದಗಳೆಲ್ಲ ನೇತಿ ನೇತಿಯೆಂದು ಮೌನವನ್ನು ತಾಳಿರುತ್ತವೆ. ಇದೇ ಪ್ರಕಾರವಾಗಿ ಈ ಮಹಾಲಿಂಗವು ಮನಸ್ಸಿಗೂ ಸಹ ಅಗೋಚರವಾದುದಾಗಿದೆ. ಶ್ರೀ ದೇವರ ದಾಸಿಮಾರ್ಯರು ಈ ಮಹಾಲಿಂಗದ ಅನಿರ್ದೇಶ್ಯವನ್ನು–

ಆಡಬಾರದ ಬಯಲು, ನೋಡಬಾರದ ಬಯಲು,
ನುಡಿಯಬಾರದ ಬಯಲು, ಹಿಡಿಯಬಾರದ ಬಯಲು,
ಈ ಒಡಲಿಲ್ಲದ ಬಯಲೊಳಗೆ ಅಡಗಿಪ್ಪ ಭೇದವ
ಈ ಲೋಕದ ಜಡರೆತ್ತಬಲ್ಲರೈ ರಾಮನಾಥ.

ಹೀಗೆ ವರ್ಣಿಸಿದ್ದಾರೆ. ಇಲ್ಲಿ ಬಯಲು ಎಂದರೆ ಆಕಾಶವೆಂದರ್ಥ. ಅದು ಪರಮಾತ್ಮ ರೂಪಿ ಮಹಾಕಾಶವು. ಅದುವೇ ಮಹಾಲಿಂಗವು. ಇದನ್ನು ಯಾವ ಪ್ರಮಾಣ ಗಳಿಂದಲೂ ನಿರ್ದೇಶಿಸಲು ಸಾಧ್ಯವಿಲ್ಲವೆಂಬುದನ್ನು ಶ್ರೀದಾಸಿಮಾರ್ಯರು ಸ್ಪಷ್ಟಪಡಿ ಸಿದ್ದಾರೆ. ಈ ಮಹಾಲಿಂಗವನ್ನು ತಿಳಿದುಕೊಳ್ಳುವುದು ಯಾರಿಂದಲೂ ಸಾಧ್ಯವಿಲ್ಲವೆ ? ಅಥವಾ ಕೆಲವು ವ್ಯಕ್ತಿಗಳಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲವೆ ? ಎಂಬ ಪ್ರಶ್ನೆಯುದ್ಭವಿಸಿ ದಾಗ ಪೂಜ್ಯಪಾದರು ''ಸರ್ವತೋಮುಖ ಸಂಪನ್ನಂ'' ಎಂಬುದಾಗಿ ಆದೇಶವಿತ್ತಿದ್ದಾರೆ. ಜಡಬುದ್ಧಿಯ ಜನರಿಗೆ ಇದು ಅಗಮ್ಯ–ಅಗೋಚರವಾಗಿದ್ದರೂ ಸೂಕ್ಷ್ಮ ಮತಿಗಳಿಗೆ ಸರ್ವತೋಮುಖವಾಗಿದೆ. ಅಂದರೆ ಎಲ್ಲಿ ನೋಡಿದಡಲ್ಲಿ ಅದುವೇ ಅನುಭವ ಗೋಚರವಾಗುತ್ತಿರುತ್ತದೆ. ಅಂತೆಯೇ ಬಸವಣ್ಣನವರು–

ಎತ್ತ ನೋಡಿದಡತ್ತ ನೀನೇ ದೇವ,
ಸಕಲ ವಿಸ್ತಾರದ ರೂಹು ನೀನೇ ದೇವ ।
ವಿಶ್ವತೋಶ್ಚಕ್ಷು ನೀನೇ ದೇವ, ವಿಶ್ವತೋ ಬಾಹು ನೀನೇ ದೇವ ।
ವಿಶ್ವತೋ ಪಾದ ನೀನೇ ದೇವ । ವಿಶ್ವತೋಮುಖ ನೀನೇ ದೇವ ।
ಕೂಡಲಸಂಗಮದೇವ.

ತಮ್ಮ ಈ ವಚನದಲ್ಲಿ ತಮಗೆ ಅನುಭವಗೋಚರವಾದ ಮಹಾಲಿಂಗದ ಸರ್ವತೋ ಮುಖತ್ವದ ಬಗ್ಗೆ ವರ್ಣಿಸಿದ್ದನ್ನು ಕಾಣುತ್ತೇವೆ. ಆದ್ದರಿಂದ ಜಡ ಬುದ್ಧಿಯವರಿಗೆ ಅಗೋಚರವಾಗಿದ್ದರೂ, ಸೂಕ್ಷ್ಮಮತಿಗಳಿಗೆ ಸರ್ವತೋಮುಖನಾಗಿರುತ್ತಾನೆಂಬುದಾಗಿ ತಿಳಿದುಕೊಳ್ಳಬೇಕು. ಎಂತಹ ಜಡಬುದ್ಧಿಯವನೇ ಇದ್ದರೂ ಪ್ರಾಮಾಣಿಕ ಪ್ರಯತ್ನ ಮಾಡುತ್ತ ಹೋದರೆ ಅವನು ತನ್ನ ಲಕ್ಷ್ಯವನ್ನು ತಲುಪುವುದರಲ್ಲಿ ಸಂದೇಹವಿಲ್ಲ. ಅಕ್ಷರದ ಪರಿಜ್ಞಾನವಿಲ್ಲದ ಅಬೋಧ ಬಾಲಕನು ಕ್ರಮವಾಗಿ ಅಕ್ಷರಾಭ್ಯಾಸವನ್ನು ಮಾಡುತ್ತ ಮುಂದೆ ಶಬ್ದ ಜ್ಞಾನ, ವಾಕ್ಯ ಜ್ಞಾನಗಳನ್ನು ಮಾಡಿಕೊಂಡು ಕಾಲಾಂತರದಲ್ಲಿ ಬಹುದೊಡ್ಡ ಸಾಹಿತಿಯಾಗುವುದನ್ನು ಲೋಕದಲ್ಲಿ ಕಾಣುತ್ತೇವೆ. ಅಭ್ಯಾಸದಲ್ಲಿ ಅಪಾರವಾದ ಸಾಮರ್ಥ್ಯವಡಗಿರುತ್ತದೆ. ಆ ಅಭ್ಯಾಸದ ಬಲದಿಂದ ಜಡಬುದ್ಧಿಯುಳ್ಳವನು ಸಹ ಸೂಕ್ಷ್ಮ ಮತಿಯಾಗಿ ಪರಮಾತ್ಮನನ್ನರಿಯುವ ಯೋಗ್ಯತೆಯನ್ನು ಪಡೆದುಕೊಳ್ಳುತ್ತಾನೆ.

ದೇವರ ಮುಂದೆ ಹಚ್ಚಿದ ಜ್ಯೋತಿಯು ಸರ್ವತೋಮುಖವಾಗಿ ಬೆಳಗುವುದನ್ನು ಕಾಣುತ್ತೇವೆ. ಅಲ್ಲಿ ಜ್ಯೋತಿಯು ಯಾವುದೊಂದು ದಿಕ್ಕಿನ ಕಡೆಗೆ ಸಮ್ಮುಖವಾಗಿದೆ

ಯೆಂದು ಹೇಳಲಾಗುವುದಿಲ್ಲ. ತನ್ನ ಪ್ರಕಾಶವೆಂಬ ಮುಖದಿಂದ ಅದು ಎಲ್ಲ ದಿಕ್ಕುಗಳನ್ನು ಸ್ಪರ್ಶಿಸುತ್ತಿರುತ್ತದೆ. ಅದರಂತೆ ಪರಮಾತ್ಮನೂ ಸಹ ಯಾವುದೇ ಒಂದು ದಿಕ್ಕಿಗೆ ಮುಖನಾಗಿ ಕುಳಿತಿರದೆ ಸರ್ವತೋಮುಖನಾಗಿದ್ದಾನೆ. ಪುನಃ ಆತನ ಸ್ವರೂಪದ ಬಗ್ಗೆ ವರ್ಣಿಸುತ್ತ ಪೂಜ್ಯಪಾದರು 'ಸತ್ಯಾನಂದಂ ಚಿದಾತ್ಮಕಂ' ಎಂಬುದಾಗಿ ಉಪದೇಶಿಸಿದ್ದಾರೆ ಅಂದರೆ ಆ ಮಹಾಲಿಂಗರೂಪಿ ಪರಾತ್ಪರ ವಸ್ತುವು ಸತ್ತು ಚಿತ್ತು ಹಾಗೂ ಆನಂದ ರೂಪವಾಗಿದೆ ಎಂದರ್ಥ. ಇದುವೇ ಅದರ ಲಕ್ಷಣವು. ಅದು ಕಾಲಾತೀತವೂ ಸಹ ಆಗಿರುವಂಥಾದ್ದು. ಅಂದರೆ ಅದಕ್ಕೆ ಕಾಲಪರಿಚ್ಛೇದವಿರುವುದಿಲ್ಲ. ಭೂತ, ಭವಿಷ್ಯ, ವರ್ತಮಾನಗಳೆಂಬವು ಮೂರು ಕಾಲಗಳು. ಈ ಮೂರೂ ಕಾಲಗಳಲ್ಲಿ ಆ ಪರಾತ್ಪರ ವಸ್ತುವು ಸಮಾನವಾಗಿರುತ್ತದೆ. ಎಲ್ಲರ ಮೇಲೆ ತನ್ನ ನಿಯಂತ್ರಣವನ್ನಿಟ್ಟಿರುವ ಈ ಕಾಲವು ಪರಮಾತ್ಮನ ಮೇಲೆ ತನ್ನ ನಿಯಂತ್ರಣವನ್ನು ಸಾಧಿಸಲಾರದು. ಅಂತೆಯೇ ಆತನು ಕಾಲಾತೀತನೆನಿಸಿಕೊಂಡಿದ್ದಾನೆ.

ಕಾಲವೆಂದರೆ ಸಮಯ, ವೇಳೆ ಎಂದರ್ಥ. ಇನ್ನೊಂದರ್ಥದಲ್ಲಿ ಕಾಲವೆಂದರೆ ಮೃತ್ಯು. ಯಕ್ಷ ಪ್ರಶ್ನೆಯ ಸಂದರ್ಭದಲ್ಲಿಯುಧಿಷ್ಠಿರನು ಯಕ್ಷವು ಕೇಳಿದ ಕಾ ವಾರ್ತಾ ? ಈ ಲೋಕದ ಸುದ್ದಿಯೇನು ಎಂಬ ಪ್ರಶ್ನೆಗೆ ಉತ್ತರವಾಗಿ. ''ಭೂತಾನಿ ಕಾಲಃಪಚತೀತಿ ವಾರ್ತಾ'' ಎಂಬುದಾಗಿ ಉತ್ತರಿಸಿದ್ದಾನೆ. ಮಹಾ ಮೋಹವೆಂಬ ಕಡಾಯಿಯೊಳಗೆ ಜಗತ್ತಿನ ಜೀವಿಗಳನ್ನು ಹಾಕಿ, ಸೂರ್ಯನೆಂಬ ಅಗ್ನಿಯನ್ನು ಹೊತ್ತಿಸಿ, ಹಗಲುರಾತ್ರಿಗಳೆಂಬ ಕಟ್ಟಿಗೆಗಳನ್ನಿಡುತ್ತ, ಮಾಸ ಹಾಗೂ ಷಡ್‌ಋತುಗಳೆಂಬ ಹುಟ್ಟನ್ನು ತಿರುಗಿಸುತ್ತ, ಕಾಲನೆಂಬ ಬಾಣಸಿಗನು (ಅಡಿಗೆಯವನು) ಪ್ರಾಣಿಗಳೆಂಬ ಪದಾರ್ಥಗಳನ್ನು ಬೇಯಿಸುತ್ತಿರುತ್ತಾನೆ. ಯುಧಿಷ್ಠಿರನ ಈ ಉತ್ತರವನ್ನು ಕೇಳಿದಾಗ ಜಗತ್ತಿನಲ್ಲಿಯ ಪ್ರತಿಯೊಂದು ವಸ್ತು ಹಾಗೂ ವ್ಯಕ್ತಿಗಳು ಕಾಲಾಧೀನಗಳಾಗಿವೆ ಎಂಬುದು ತಿಳಿದುಬರುತ್ತದೆ. ಆದರೆ ಆ ಮಹಾಲಿಂಗವು ಕಾಲಕ್ಕೂ ಕಾಲವಾದ ಮಹಾಕಾಲವಿರುತ್ತದೆ ಆದ್ದರಿಂದ ಇದು ಕಾಲಾಧೀನವಾಗಿರದೇ ಕಾಲವನ್ನೇ ತನ್ನಧೀನವಾಗಿಟ್ಟುಕೊಂಡಿರುತ್ತದೆ. ಕಾಲವು ಸರ್ವರನ್ನು ದಂಡಿಸಿದರೆ, ಈ ಪರಮಾತ್ಮನು ಆ ಕಾಲವನ್ನೇ ದಂಡಿಸಬಲ್ಲನು. ಮಾರ್ಕಂಡೇಯನ ಪ್ರಾಣಹರಣ ಮಾಡಲು ಬಂದ ಕಾಲನಿಗೆ ಪರಮಾತ್ಮನು ತ್ರಿಶೂಲದಿಂದ ತಿವಿದು ಆತನನ್ನು ದಂಡಿಸಿದ ವಿಷಯವು ಸುಪ್ರಸಿದ್ಧವಾದುದಾಗಿದೆ. 'ಕಾಲೋ ಜಗದ್ಭಕ್ಷಕಃ' ಎಂಬ ಉಕ್ತಿಯಲ್ಲಿ ಜಗತ್ತಿನ ಜೀವಿಗಳೆಲ್ಲ ಕಾಲನ ಭಕ್ಷ್ಯಪದಾರ್ಥಗಳೆಂಬುದಾಗಿ ಹೇಳಲಾಗಿದೆ. ಊಟಕ್ಕಾಗಿ ಎಡೆಮಾಡಿಕೊಂಡಿರುವ ತಾಟಿನಲ್ಲಿಯ ಪದಾರ್ಥಗಳನ್ನು ಊಟ ಮಾಡುವ ಮನುಷ್ಯನು ತನಗೆ ಬೇಕಾದುದನ್ನು ತನ್ನ ಕೈಯಿಂದ ಎತ್ತಿಕೊಂಡು ತಿನ್ನುವಂತೆ ಜಗತ್ತಿನ ಜೀವಿಗಳನ್ನೆಲ್ಲ ತನ್ನ ಭಕ್ಷ್ಯತಾಟಿನಲ್ಲಿರಿಸಿಕೊಂಡ ಕಾಲನು ಯಾವಾಗ ಯಾರನ್ನು ಭಕ್ಷಿಸುವನೋ ತಿಳಿದಿಲ್ಲ. ಸರ್ವಪ್ರಾಣಿಗಳನ್ನು ತನ್ನ ಭಕ್ಷ್ಯತಾಟಿನಲ್ಲಿ ಇರಿಸಿಕೊಂಡ ಆ ಕಾಲನು ಶಿವನ ತಾಟಿನಲ್ಲಿ ''ಮೃತ್ಯುರ್ಯಸ್ಯೋಪಸೇಚನಂ'' ಎಂಬ ಉಕ್ತಿಗನುಸಾರವಾಗಿ ತಾನೂ ಸಹ ಒಂದು ಉಪ್ಪಿನಕಾಯಿಯಾಗಿದ್ದಾನೆ. ಅಂದರೆ ಜಗತ್ತನ್ನು ಭಕ್ಷಿಸುವ ಕಾಲನನ್ನು ಸಹ ಈ ಪರಮಾತ್ಮನು ತಿನ್ನುವುದಿಲ್ಲ, ಕೇವಲ ನೆಕ್ಕಿಯೇ ಇಲ್ಲದಂತಾಗಿ ಮಾಡುತ್ತಾನೆ.

ಕಾಲಾಧೀನಗಳಾದ ವಸ್ತುಗಳು ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ ಹಾಗೂ ಅತ್ಯಂತಾಭಾವಗಳೆಂಬ ಚತುರ್ವಿಧ ಅಭಾವಗಳಿಗೆ ಪ್ರತಿಯೋಗಿಗಳಾಗಿರುತ್ತವೆ. ಆದರೆ ಪರಮಾತ್ಮನು ಕಾಲಾತೀತನಾಗಿರೋಣದರಿಂದ ಯಾವ ಅಭಾವಕ್ಕೂ ಪ್ರತಿಯೋಗಿ ಯಾಗಲಾರನು. ಹೀಗೆ ಅಭಾವಕ್ಕೆ ಪ್ರತಿಯೋಗಿಯಾಗದಿರುವುದರಿಂದ ಅವನನ್ನು ಕಾಲಾತೀತನೆಂಬುದಾಗಿ ಕರೆಯಲಾಗಿದೆ. ಆ ಪರಶಿವ ತತ್ವವು ಕಾಲಾತೀತವಾಗಿರುವಂತೆ ಕಲಾತೀತವೂ ಸಹ ಆಗಿರುತ್ತದೆ. ಆಗಮ ಶಾಸ್ತ್ರದಲ್ಲಿ ಕಲೆಯ ಸಂಖ್ಯೆಯ ಬಗ್ಗೆ ವಿವಿಧತೆ ಯನ್ನು ಕಾಣುತ್ತೇವೆ. ಇವುಗಳ ಸಂಖ್ಯೆಯು ಐದು, ಹತ್ತು, ಹನ್ನೆರಡು, ಹದಿನಾರು, ಇಪ್ಪತ್ನಾಲ್ಕು, ಮೂವತ್ತೆಂಟು ಮತ್ತು ಅರವತ್ನಾಲ್ಕು ಎಂಬುದಾಗಿ ಪ್ರತಿಪಾದಿಸಲಾಗಿದೆ. ಇವುಗಳ ನಾಮ ಹಾಗೂ ಸ್ವರೂಪಗಳ ವಿಶ್ಲೇಷಣೆಯನ್ನು ಆಯಾ ಪ್ರಸಂಗದಲ್ಲಿ ವಿಭಿನ್ನ ಗ್ರಂಥಗಳಲ್ಲಿ ಮಾಡಿರುವುದುಂಟು. ಶಿವನು ಸದ್ಯೋಜಾತಾದಿ ಪಂಚಮುಖ (ಶಕ್ತಿ) ಸಮನ್ವಿತನೆಂಬುದು ಶಾಸ್ತ್ರಪ್ರಸಿದ್ಧವಾದುದೇ ಸರಿ. ಶಿವನ ಈ ಒಂದೊಂದು ಮುಖಗಳು ವಿಭಿನ್ನ ಕಲೆಗಳಿಂದ ಕೂಡಿಕೊಂಡವುಗಳಾಗಿವೆ. ಶಿವನ ಸದ್ಯೋಜಾತ ಮುಖವು ಎಂಟು ಕಲೆಗಳಿಂದ, ವಾಮದೇವ ಮುಖವು ಹದಿಮೂರು ಕಲೆಗಳಿಂದ, ಅಘೋರಮುಖವು ಎಂಟು ಕಲೆಗಳಿಂದ, ತತ್ಪುರುಷ ಮುಖವು ನಾಲ್ಕು ಕಲೆಗಳಿಂದ ಹಾಗೂ ಈಶಾನ ಮುಖವು ಐದು ಕಲೆಗಳಿಂದ ಕೂಡಿಕೊಂಡಿವೆಯೆಂಬುದಾಗಿ ''ವಾತುಲ ಶುದ್ಧಾಖ್ಯ ತಂತ್ರ'' (ಪಟಲ ೭/೧೮–೧೯) ದಲ್ಲಿ ಪ್ರತಿಪಾದಿಸಲಾಗಿದೆ. ಹೀಗೆ ಪಂಚಮುಖಗಳಲ್ಲಿ ಒಟ್ಟಾರೆ ಮೂವತ್ತೆಂಟು ಕಲೆಗಳಾಗುತ್ತವೆ. ಪಂಚಮುಖನಾದ ಪರಮಾತ್ಮನಿಗೆ ಶಾಸ್ತ್ರದಲ್ಲಿ ಸದಾಶಿವನೆಂಬುದಾಗಿ ಕರೆದಿದ್ದಾರೆ. ಪ್ರಕೃತದಲ್ಲಿ ಪ್ರತಿಪಾದಿಸಲ್ಪಡುತ್ತಿರುವ ಪರಶಿವ ಸ್ವರೂಪವಾದ ಮಹಾಲಿಂಗವು ಈ ಸದಾಶಿವತತ್ವಕ್ಕಿಂತಲೂ ಅತ್ಯಂತ ಸೂಕ್ಷ್ಮವಾಗಿರುವುದ ರಿಂದ ಆ ಸ್ಥಿತಿಯಲ್ಲಿ ಅಲ್ಲಿ ಯಾವ ಕಲೆಗಳೂ ಇರುವುದಿಲ್ಲ. ಅಂತೆಯೇ ಆ ಮಹಾತತ್ವವನ್ನು ಪೂಜ್ಯಪಾದರು ಕಲಾತೀತವೆಂಬುದಾಗಿ ಪ್ರತಿಪಾದಿಸಿದ್ದಾರೆ. ಅಂದರೆ ಇದು ಮೂವತ್ತೆಂಟು ಕಲೆಗಳಿಂದ ಅತೀತಾವಸ್ಥೆಯಲ್ಲಿರುವಂಥಾದ್ದು ಎಂಬುದಾಗಿ ತಿಳಿದುಕೊಳ್ಳ ಬೇಕು.

ಈ ಪರವಸ್ತು ಕಲಾತೀತವಾಗಿರುವಂತೆ ಕ್ರಮಯೋಗಾದಿ ವರ್ಜಿತವೂ ಆಗಿದೆ. ಅಂದರೆ ಉತ್ಪತ್ತಿ, ಸ್ಥಿತಿ ಮತ್ತು ಲಯಗಳೆಂಬ ಮೂರು ಅವಸ್ಥೆಗಳನ್ನು ಮೀರಿರುವಂಥಾ ದ್ದಾಗಿದೆ. ಇದು ಅನಾದಿಯೂ, ಸನಾತನವೂ ಆಗಿರೋಣದರಿಂದ ಇದಕ್ಕೆ ಉತ್ಪತ್ಯಾದಿ ಗಳು ಸಂಭವಿಸಲಾರವು. ಇದರಂತೆ ಈ ಮಹಾಲಿಂಗವು ಜಗತ್ತಿನ ಎಲ್ಲ ಜ್ಯೋತಿಗಳಿಗೆ ಉದಯಸ್ಥಾನವೂ ಆಗಿದೆ. ಅಂತೆಯೇ ಪೂಜ್ಯರು ''ಜ್ಯೋತಿಷಾಮುದಯಸ್ಥಲಂ'' ಎಂಬುದಾಗಿ ಉಪದೇಶಿಸಿದ್ದಾರೆ. ಈ ಜಗತ್ತಿನಲ್ಲಿ ಪ್ರಕಾಶವನ್ನು ಕೊಡುವ ಜ್ಯೋತಿ ಗಳೆಂದರೆ ಸೂರ್ಯ, ಚಂದ್ರ, ನಕ್ಷತ್ರ ಮತ್ತು ಅಗ್ನಿ ಮುಂತಾದವುಗಳು. ಇವುಗಳು ತಮ್ಮದೇಯಾದ ಪ್ರಕಾಶದಿಂದ ಜಗತ್ತನ್ನು ಪ್ರಕಾಶಿಸುತ್ತಿರುತ್ತವೆ. ನೋಡುವವರ ಕಣ್ಣಿಗೆ ಇವೆಲ್ಲವುಗಳು ಸ್ವಯಂ ಪ್ರಕಾಶಗಳೆಂದು ತೋರುತ್ತಿದ್ದರೂ, ವಸ್ತುತಃ ಇವು ಯಾವೂ ಸ್ವಯಂ ಪ್ರಕಾಶಗಳಲ್ಲ, ಸ್ವಯಂ ಪ್ರಕಾಶ ರೂಪನಾದ ಮಹಾಲಿಂಗದಿಂದ ಜನಿಸಿದ ಈ ಜ್ಯೋತಿಗಳು ಅವನ ಪ್ರಕಾಶವನ್ನು ಪಡೆದುಕೊಂಡು ತಾವು ಬೆಳಗುವುದರ ಜೊತೆಗೆ ಅನ್ಯ

ಪದಾರ್ಥಗಳನ್ನು ಸಹ ಬೆಳಗಿಸುತ್ತವೆ. ವಿಜ್ಞಾನಿಗಳ ದೃಷ್ಟಿಯಲ್ಲಿ ಸೂರ್ಯ ಹಾಗೂ ನಕ್ಷತ್ರಗಳು ಸ್ವಯಂ ಪ್ರಕಾಶಗಳೆಂದು ಪ್ರತಿಪಾದಿಸಲ್ಪಟ್ಟಿವೆ. ಆದರೆ ತತ್ವಜ್ಞಾನಿಗಳ ದೃಷ್ಟಿಯಲ್ಲಿ ಪರಶಿವನೊಬ್ಬನೇ ಸ್ವಯಂ ಪ್ರಕಾಶನು. ಉಳಿದ ಜ್ಯೋತಿಗಳೆಲ್ಲ ಅವನಿಂದಲೇ ಹುಟ್ಟಿ ಅವನ ಪ್ರಕಾಶವನ್ನೇ ಪಡೆದು ಜಗತ್ತಿಗೆಲ್ಲ ಪ್ರಕಾಶವನ್ನು ಕೊಡುತ್ತವೆ.

ಇಲ್ಲಿ ಉಕ್ತವಾಗಿರುವ ಈ ಮಹಾಲಿಂಗವು ಇಂದ್ರಿಯ, ಮನಸ್ಸು ಹಾಗೂ ವಾಣಿಗಳಿಗೆ ಅಗೋಚರವೆಂಬುದಾಗಿ ಪ್ರತಿಪಾದಿಸಲ್ಪಟ್ಟಿರೋಣದರಿಂದ ಇದರ ಜ್ಞಾನವು ಹೇಗೆ ತಾನೆ ಸಂಭವಿಸುವುದು ಎಂಬ ಪ್ರಶ್ನೆ ಉದ್ಭವಿಸಿದಾಗ ಅದಕ್ಕೆ ಉತ್ತರ ರೂಪವಾಗಿ ಶ್ರಿ ಜಗದ್ಗುರು ರೇಣುಕ ಭಗವತ್ಪಾದರು ''ಸ್ವಾನುಭೂತಿಪ್ರಮಾಣಸ್ಥಂ'' ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪ್ರಮಾಣಗಳಿಂದ ಅಗೋಚರನಾಗಿದ್ದರೂ ಸ್ವಾನುಭೂತಿಗೆ ಮಾತ್ರ ಅವನು ಗಮ್ಯನಾಗಿದ್ದಾನೆ. ಎಲ್ಲಿ ನೇತಿ ನೇತಿಯೆಂಬುದಾಗಿ ಪ್ರಮಾಣಗಳು ನಿಂತು ಹೋಗುತ್ತವೆಯೋ ಅಲ್ಲಿ ಸಾಧಕನ ಸ್ವಾನುಭೂತಿಯೇ ಸಹಾಯಕವಾಗುತ್ತದೆ. ಆದ್ದರಿಂದ ಅವನು ಅನುಭವಗಮ್ಯನಾಗಿದ್ದಾನೆ. ಹೀಗೆ ಅನುಭವ ಗೋಚರವಾಗುವ ಪರಬ್ರಹ್ಮಸ್ವರೂಪವಾದ ಆ ಪರಮ ತತ್ವಕ್ಕೆ ಶಿವ, ಪರಬ್ರಹ್ಮ ಪರಾಕಾಶ, ಲಿಂಗ ಮುಂತಾದ ಪರ್ಯಾಯ ನಾಮಗಳಿರುತ್ತವೆ. ಸಚರಾಚರವಾದ ಜಗತ್ತೆಲ್ಲವೂ ಯಾವುದರಿಂದ ಉತ್ಪನ್ನವಾಗುವುದೋ, ಯಾವುದರಲ್ಲಿ ವಾಸವಾಗಿರುವುದೋ, ಕೊನೆಗೆ ಎಲ್ಲಿ ಲಯ ಹೊಂದುವುದೋ ಅಂತಹ ಸರ್ವಶ್ರೇಷ್ಠವಾದ ಮಹಾತತ್ವಕ್ಕೆ ಇಲ್ಲಿ ಮಹಾಲಿಂಗವೆಂದು ಕರೆಯುತ್ತಾರೆ. ಅದಿಲ್ಲದಿದ್ದರೆ ಜಗತ್ತಿಗೆ ಆಧಾರವೇ ಇಲ್ಲದಂತಾಗುವುದು. ದೃಶ್ಯವಾದ ಈ ಜಗತ್ತು ಅದೃಶ್ಯವಾದ ಆ ಮಹಾಲಿಂಗದ ಮೇಲೆಯೇ ಅಧಿಷ್ಠಿತವಾಗಿರುತ್ತದೆ. ಕಾಣದಿರುವ ಬೇರುಗಳ ಮೇಲೆ ಕಾಣುವ ಗಿಡವು ಅಸ್ತಿತ್ವದಲ್ಲಿರುವಂತೆ ಇದರ ಸ್ಥಿತಿಯಾಗಿದೆ. ಬೇರು ಕಾಣುವುದಿಲ್ಲವೆಂದು ಅದರ ಅಸ್ತಿತ್ವವನ್ನು ಅಲ್ಲಗಳೆದರೆ ಗಿಡದ ಅಸ್ತಿತ್ವವೇ ಇಲ್ಲವಾಗುವಂತೆ, ಆ ಮಹಾಲಿಂಗದ ಅಸ್ತಿತ್ವವನ್ನು ಅಲ್ಲಗಳೆದರೆ ಈ ವಿಶ್ವವು ನಿರಾಧಾರವಾಗುತ್ತದೆ. ಹೀಗೆ ಸರ್ವಪ್ರಪಂಚಕ್ಕೆಲ್ಲ ಆಧಾರಭೂತವಾದ ಪರಮ ತತ್ವದ ಅಸ್ತಿತ್ವವನ್ನು ನಿಷೇಧಿಸದೇ ಪ್ರತಿಯೊಬ್ಬರೂ ಒಪ್ಪಿಕೊಳ್ಳಲೇಬೇಕಾಗುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಪೂರ್ವದಲ್ಲಿ ವಿವರಿಸಿದ ಲಿಂಗ ತತ್ವದ ಬಗ್ಗೆ ಪುನಃ-

> ಪರಮಾಕಾಶಮವ್ಯಕ್ತಂ ಪ್ರಬೋಧಾನಂದಲಕ್ಷಣಮ್ ।
> ಲಿಂಗಂ ಜ್ಯೋತಿರ್ಮಯಂ ಪ್ರಾಹುರ್ಲೀಯಂತೇ ಯತ್ರ ಯೋಗಿನಃ ॥
> ಸಂವಿದೇವ ಪರಾಕಾಷ್ಠಾ ಪರಮಾನಂದರೂಪಿಣೀ ।
> ತಾಮಾಹುಃ ಪರಮಾಕಾಶಂ ಮುನಯೋ ಮುಕ್ತಸಂಶಯಾಃ ॥
>
> (ಸಿ.ಶಿ. ೧೯; ೨೦-೨೧)

ಹೀಗೆ ಆದೇಶವಿತ್ತಿದ್ದಾರೆ. ತಾತ್ಪರ್ಯವೇನೆಂದರೆ, ಈ ಪೂರ್ವದಲ್ಲಿ ಹೇಳಲ್ಪಟ್ಟ ಆ ಮಹಾಲಿಂಗವು ಮಹಾಕಾಶಸ್ವರೂಪವಾಗಿದ್ದು ಸಚ್ಚಿದಾನಂದಗಳೆಂಬ ಸ್ವರೂಪ ಲಕ್ಷಣ

ತರಂಗವೇ ಬೇರೆ ಎಂದೆನಿಸುವುದು. ಆದರೆ ವಾಸ್ತವಿಕವಾಗಿ ವಿಚಾರಿಸಲು ತರಂಗವು ಸಮುದ್ರಕ್ಕಿಂತಲೂ ಭಿನ್ನವಾದ ವಸ್ತುವಲ್ಲ, ವಾಯುವಿನ ಹೊಡೆತಕ್ಕೆ ಸಮುದ್ರದ ಜಲವೇ ತರಂಗಾಕಾರವನ್ನು ತಾಳುತ್ತದೆ. ವಾಯುವಿನ ರಭಸವಿಲ್ಲದಿದ್ದಾಗ ಅದು ನಿಸ್ತರಂಗವಾಗಿ ಕಂಗೊಳಿಸುವುದು. ಅಂದಾಗ ತರಂಗಗಳು ಸಮುದ್ರರೂಪಗಳೇ ವಿನಃ ಅದಕ್ಕಿಂತಲೂ ಭಿನ್ನವಾದವುಗಳಲ್ಲ ಎಂಬುದು ತಿಳಿದುಬರುತ್ತದೆ. ಇದೇ ಪ್ರಕಾರವಾಗಿ ಈ ತೋರುವ ಜಗತ್ತಾದರೂ ಪರಮಾತ್ಮನಿಂದಲೇ ಜನಿಸಿರೋಣದರಿಂದ ಅಥವಾ ಪರಮಾತ್ಮನೇ ವಿಶ್ವರೂಪವನ್ನು ತಾಳಿರೋಣದರಿಂದ ಇದು ಶಿವನಿಗಿಂತಲೂ ಭಿನ್ನವಾದುದಲ್ಲ. ಅಂದರೆ ಜಗದ್ರೂಪದಲ್ಲಿ ಶಿವನೇ ತೋರುತ್ತಿದ್ದಾನೆಂಬ ಭಾವವು.

ಇದೇ ವಿಷಯವನ್ನೇ ಪೂಜ್ಯಪಾದರು ಬೇರೊಂದು ದೃಷ್ಟಾಂತದ ಮೂಲಕ ತಿಳಿಯಪಡಿಸಲೋಸುಗ ಪುನಃ–

ಯಥಾ ಪುಷ್ಪ ಪಲಾಶಾದಿ ವೃಕ್ಷರೂಪಾನ್ನ ಭಿದ್ಯತೇ ।
ತಥಾ ಶಿವಾತ್ ಪರಾಕಾಶಾಜ್ಜಗತೋ ನಾಸ್ತಿ ಭಿನ್ನತಾ ॥

(ಸಿ.ಶಿ. ೧೯–೭೩)

ಹೀಗೆ ಆದೇಶವಿತ್ತಿದ್ದಾರೆ. ಈ ಪೂರ್ವದಲ್ಲಿ ಸಮುದ್ರ ತರಂಗದ ದೃಷ್ಟಾಂತವನ್ನು ಹೇಳಿ ಇಲ್ಲಿ ವೃಕ್ಷ ಶಾಖಾ ದೃಷ್ಟಾಂತದ ಮೂಲಕ ಪ್ರಸ್ತುತ ವಿಷಯವನ್ನು ತಿಳಿಯಪಡಿಸಿದ್ದಾರೆ. ಒಂದು ವೃಕ್ಷದಲ್ಲಿ ಬೊಡ್ಡೆ, ಬೇರು, ಟೊಂಗೆ, ಎಲೆ, ಹೂವು, ಕಾಯಿ ಮುಂತಾದ ಅವಯವಗಳಿರುತ್ತವೆ. ಇವೆಲ್ಲವುಗಳಿಂದ ಕೂಡಿದ್ದಕ್ಕೇನೇ ವೃಕ್ಷವೆಂದು ಕರೆಯುತ್ತಾರೆ. ಇದರ ಅವಯವಗಳನ್ನೆಲ್ಲ ಕತ್ತರಿಸಿ ಬೇರೆ ಬೇರೆ ಮಾಡಿಟ್ಟಾಗ ವೃಕ್ಷವೆನ್ನುವ ವಸ್ತುವೇ ಇಲ್ಲದಾಗಿ ಹೋಗುತ್ತದೆ. ಇದರಿಂದ ಆ ಅವಯವಗಳಿಗಿಂತಲೂ ವೃಕ್ಷವು ಭಿನ್ನವಾದು ದಲ್ಲವೆಂಬುದು ಸಿದ್ಧವಾಗುವಂತೆ ಇಲ್ಲಿ ತೋರುವ ಪೃಥಿವ್ಯಾದಿ ಪಂಚ ಮಹಾಭೂತಗಳು, ಅವುಗಳಿಂದ ಉತ್ಪನ್ನವಾಗುವ ಭೌತಿಕ ಪ್ರಪಂಚವು ಪರಮಾತ್ಮನಿಗಿಂತ ಭಿನ್ನವಾದು ದಾಗಿರುವುದಿಲ್ಲ. ಪರಮಾತ್ಮನೇ ಭೂಮ್ಯಾದಿರೂಪವನ್ನು ತಾಳಿರೋಣದರಿಂದ ಮಹಾಕಾಶರೂಪನಾದ ಪರಮಾತ್ಮನಿಗಿಂತ ಈ ಜಗತ್ತು ಬೇರಲ್ಲವೆಂಬುದಾಗಿ ತಿಳಿದು ಕೊಳ್ಳಬೇಕು. ಈ ಮಹಾಕಾಶಸ್ಥಲ ಸಂಪನ್ನನಾದ ಶಿವಯೋಗಿಯು ತನ್ನ ದೃಷ್ಟಿಯನ್ನು ಶಿವಮಯವನ್ನಾಗಿ ಮಾಡಿಕೊಂಡಿರೋಣದರಿಂದ ಅವನಿಗೆ ಸರ್ವತ್ರ ಶಿವನೇ ಭಾಸವಾಗುತ್ತಾನೆ. 'ಯಥಾ ದೃಷ್ಟಿಃ ತಥಾ ಸೃಷ್ಟಿಃ' ಅಂದರೆ ನಮ್ಮ ದೃಷ್ಟಿ ಹೇಗಿರುವುದೋ ಸೃಷ್ಟಿಯೂ ಸಹ ಹಾಗೆಯೇ ತೋರುವುದು. ಅಂತೆಯೇ ಶಿವಮಯದೃಷ್ಟಿಸಂಪನ್ನನಾದ ಶಿವಯೋಗಿಯು ಎಲ್ಲವನ್ನು ಶಿವರೂಪವಾಗಿಯೇ ಅನುಭವಿಸುತ್ತಾನೆ.

ಚಿದಾಕಾಶರೂಪನಾದ ಪರಮಾತ್ಮನು ನಿರವಯನಾಗಿರೋಣದರಿಂದ ಅವನಲ್ಲಿ ಈ ಭುವನ ಬ್ರಹ್ಮಾಂಡಗಳು ಅದು ಹೇಗೆ ತಾನೆ ತೋರುತ್ತವೆ ಎಂಬ ಜಿಜ್ಞಾಸೆಯುಂಟಾದಾಗ ಪೂಜ್ಯಪಾದರು ಭೂತಾಕಾಶದ ಉದಾಹರಣೆಯನ್ನು ಕೊಟ್ಟು ಪುನಃ–

ಯಥಾ ಜ್ಯೋತೀಂಷಿ ಭಾಸಂತೇ ಭೂತಾಕಾಶೇ ಪೃಥಕ್ ಪೃಥಕ್ ।
ತಥಾ ಭಾಂತಿ ಪರಾಕಾಶೇ ಬ್ರಹ್ಮಾಂಡಾನಿ ವಿಶೇಷತಃ ॥

(ಸಿ.ಶಿ. ೧೯–೭೪)

ಹೀಗೆ ಉಪದೇಶಿಸಿದ್ದಾರೆ. ಆಕಾಶದಲ್ಲಿ ಅಸಂಖ್ಯಾತಗಳಾದ ನಕ್ಷತ್ರಗಳು ಬೇರೆ ಬೇರೆಯಾಗಿ ತೋರುವುದು ಸರ್ವಾನುಭವಸಿದ್ಧವಾದ ವಿಷಯವು. ಭೂತಾಕಾಶವು ಸ್ವತಃ ನಿರವಯ ವಾಗಿದ್ದರೂ ಅದರಲ್ಲಿ ನಕ್ಷತ್ರಾದಿಗಳು ಇರುವುದಕ್ಕೆ ಯಾವ ತೊಂದರೆಯೂ ಇಲ್ಲದಿರು ವಂತೆ, ನಿರವಯವನಾದ ಪರಾಕಾಶ ಸ್ವರೂಪನಾದ ಪರಮಾತ್ಮನಲ್ಲಿಯೂ ಸಹ ಚತುರ್ದಶಭುವನ ಬ್ರಹ್ಮಾಂಡಗಳು ಇರುವುದಕ್ಕೆ ಯಾವ ತೊಂದರೆಯೂ ಇರುವುದಿಲ್ಲ.

ಈ ಮಹಾಕಾಶ ಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಪೂಜ್ಯಪಾದರು ಕೊನೆಯ ದಾಗಿ–

ನಿರಸ್ತೋಪಾಧಿಸಂಬಂಧಂ ನಿರ್ಮಲಂ ಸಂವಿದಾತ್ಮಕಂ ।
ಪರಾಕಾಶಂ ಜಗಚ್ಚಿತ್ರವಿಲಾಸಾಲಂಬಭಿತ್ತಿಕಮ್ ॥

(ಸಿ.ಶಿ. ೧೯–೭೫)

ಹೀಗೆ ಆದೇಶವಿತ್ತಿದ್ದಾರೆ. ತಾತ್ಪರ್ಯವೇನೆಂದರೆ, ಇಲ್ಲಿಯವರೆಗೆ ವರ್ಣಿಸಲಾದ ಮಹಾಕಾಶರೂಪವಾದ ಚಿದಾಕಾಶವು ಅನೇಕ ಉಪಾಧಿಗಳಲ್ಲಿದ್ದರೂ ಆ ಉಪಾಧಿ ಯೊಂದಿಗೆ ಅದರ ಯಾವ ಸಂಬಂಧವೂ ಇರುವುದಿಲ್ಲ. ಸಂಬಂಧವನ್ನು ಹೇಳಬೇಕಾದರೆ ಸಂಬಂಧಗಳು ದ್ರವ್ಯ, ಗುಣ, ಜಾತಿಗಳಲ್ಲಿ ಸಂಭವಿಸುತ್ತವೆ. ದ್ರವ್ಯ ದ್ರವ್ಯಗಳಲ್ಲಿ ಸಂಯೋಗ ಸಂಬಂಧ, ದ್ರವ್ಯ–ಗುಣಗಳಲ್ಲಿ, ಜಾತಿ–ಜಾತಿಮಾನ್‌ರಲ್ಲಿ, ಕ್ರಿಯಾ–ಕ್ರಿಯಾವಾನ್ ರಲ್ಲಿ, ಗುಣ–ಗುಣಿಗಳಲ್ಲಿ ಸಮವಾಯ ಸಂಬಂಧವಿರುತ್ತದೆ. ಆದರೆ ವೀರಶೈವ ದರ್ಶನದ ಪ್ರಕಾರ ಪರಮ ತತ್ವವು ದ್ರವ್ಯ–ಗುಣ–ಜಾತಿರೂಪವಾದುದಲ್ಲವಾದ್ದರಿಂದ ಇದಕ್ಕೆ ಸಂಬಂಧಗಳು ಸಂಭವಿಸಲಾರವು. ಹೀಗೆ ಸಂಬಂಧವಿಲ್ಲದಿರುವುದರಿಂದಲೇ ಇದು ನಿರ್ಮಲ ಹಾಗೂ ಜ್ಞಾನ ಸ್ವರೂಪವಾಗಿದೆ. ಇಂತಹ ಈ ಪರಾಕಾಶರೂಪವಾದ ಪರಶಿವ ಬ್ರಹ್ಮವು ಜಗತ್ತೆಂಬ ಚಿತ್ರದ ವಿಲಾಸಕ್ಕೆ ಆಲಂಬವಾದ ಭಿತ್ತಿಯಾಗಿರುತ್ತದೆ. ಚಿತ್ರಕಾರನು ಚಿತ್ರವನ್ನು ಬರೆಯಬೇಕಾದರೆ ಅದಕ್ಕೆ ಆಧಾರರೂಪವಾಗಿ ಒಂದು ಗೋಡೆಯನ್ನು ಆಶ್ರಯಿಸುವಂತೆ, ಈ ಪರಮಾತ್ಮನು ಜಗತ್ತೆಂಬ ಚಿತ್ರಕ್ಕೆ ಆಧಾರರೂಪವಾದ ಗೋಡೆ ಯಾಗಿದ್ದಾನೆ. ಇಲ್ಲಿ ಹೊರಗಿನ ಚಿತ್ರದಲ್ಲಿ ಚಿತ್ರಕಾರ, ಚಿತ್ರದ ಸಾಮಗ್ರಿಯಾದ ಬಣ್ಣ ಕುಂಚಾದಿಗಳು, ಗೋಡೆ ಇವೆಲ್ಲ ಬೇರೆಬೇರೆಯಾಗಿರುತ್ತವೆ. ಆದರೆ ಜಗತ್ತೆಂಬ ಈ ಚಿತ್ರವನ್ನು ರಚಿಸುವಲ್ಲಿ ಪರಮಾತ್ಮನ ಹೊರತು ಬೇರಾವ ಸಾಮಗ್ರಿಗಳೇ ಇರುವುದಿಲ್ಲ. ಆದ್ದರಿಂದ, ಭಿತ್ತಿ, ಬಣ್ಣ, ಕುಂಚ ಮತ್ತು ಚಿತ್ರಕಾರ ಇವೆಲ್ಲವೂ ಒಬ್ಬನೇಯಾದ ಪರಮಾತ್ಮನೇಯಾಗಿರೋಣದರಿಂದ ಇಲ್ಲಿ ಪರಸ್ಪರ ಸಂಬಂಧಗಳ ವಿಚಾರವೇ ಬರುವುದಿಲ್ಲ.

ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಮಹಾಕಾಶ ಸ್ಥಲದಲ್ಲಿ ಸರ್ವರ ಹೃದಯದಲ್ಲಿರುವ ಆ ಮಹಾಲಿಂಗವು ಬಾಹ್ಯಪ್ರಮಾಣಾದಿಗಳಿಂದ ಅಗೋಚರವಾಗಿ

ದ್ದರೂ, ಸ್ವಾನುಭೂತಿವೇದ್ಯವೆಂಬುದಾಗಿ ತಿಳಿಯಪಡಿಸಿ ಆ ಮಹಾಲಿಂಗವೇ ಮಹಾಕಾಶವು, ಅದುವೇ ಜ್ಯೋತಿರ್ಲಿಂಗವು. ಅಲ್ಲದೇ ಜಗತ್ತಿನ ಎಲ್ಲ ಜ್ಯೋತಿಗಳ ಉದಯಕ್ಕೆ ಮೂಲಸ್ಥಾನವು ಹಾಗೂ ಸಕಲ ಭುವನ ಬ್ರಹ್ಮಾಂಡಗಳಿಗೆ ಆಧಾರಭೂತವಾದುದೆಂಬುದಾಗಿ ತಿಳಿಯಪಡಿಸಿದ್ದಾರೆ. ಪರಶಿವಬ್ರಹ್ಮವನ್ನು ಆಕಾಶ ರೂಪವಾಗಿ ಪ್ರತಿಪಾದಿಸಿರುವುದರಿಂದ ಇದಕ್ಕೆ ಮಹಾಕಾಶಸ್ಥಲವೆಂದು ಕರೆಯಲಾಗುತ್ತದೆ. ಕಾರಣ ಸಮಸ್ತ ಜಿಜ್ಞಾಸುಗಳು ಇದರ ರಹಸ್ಯಾರ್ಥವನ್ನು ತಿಳಿದು ತಮ್ಮ ಜೀವನವನ್ನು ಪಾವನ ಮಾಡಿಕೊಳ್ಳಲೆಂಬುದಾಗಿ ಅನುಗ್ರಹಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೭ ನವ್ಹೆಂಬರ್, ೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

# ಕ್ರಿಯಾಪ್ರಕಾಶಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತಶಿಖಾಮಣಿ. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಶರಣಸ್ಥಲದ ಅವಾಂತರ ಸ್ಥಲಗಳ ಬಗ್ಗೆ ವಿಚಾರಿಸುತ್ತ ಬಂದಿದ್ದೇವೆ. ನಿನ್ನೆಯ ದಿನ ಮಹಾಕಾಶ ಸ್ಥಲದ ಬಗ್ಗೆ ಸವಿಸ್ತಾರವಾಗಿ ಆಶೀರ್ವಚನವನ್ನು ಆಲಿಸಿದ್ದೀರಿ. ಇಂದು ಕ್ರಮ ಪ್ರಾಪ್ತವಾದ ಕ್ರಿಯಾಪ್ರಕಾಶ ಸ್ಥಲದ ಬಗ್ಗೆ ತಿಳಿಸಲಾಗುವುದು. ಸರ್ವರೂ ಏಕಾಗ್ರವಾದ ಮನಸ್ಸಿನಿಂದ ಇದನ್ನು ಆಲಿಸಿರಿ. ಕ್ರಿಯಾಪ್ರಕಾಶವೆಂದರೆ ಶಿವಯೋಗಿಯಾದವನು ಉಳಿದೆಲ್ಲ ಕ್ರಿಯೆಗಳಿಂದ ಮುಕ್ತನಾಗಿ ಕೇವಲ ಆತ್ಮಾನು ಸಂಧಾನರೂಪವಾದ ಕ್ರಿಯೆಯನ್ನು ಮಾಡುತ್ತ ಅದೊಂದನ್ನೇ ಪ್ರಕಾಶ ಪಡಿಸುತ್ತಿರು ವುದು. ಶಿವಯೋಗಿಯ ಈ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ಕ್ರಿಯಾಪ್ರಕಾಶಸ್ಥಲ ವೆಂದು ಕರೆಯಲ್ಪಡುತ್ತದೆ. ಈ ಪೂರ್ವದ ಮಹಾಕಾಶಸ್ಥಲದ ಸಾಧಕನು–ಪರಶಿವಬ್ರಹ್ಮ ವನ್ನು ಆಕಾಶದಂತೆ, ವ್ಯಾಪಕವನ್ನಾಗಿ ಹಾಗೂ ಆ ವ್ಯಾಪಕವಾದ ಪರಶಿವ ಬ್ರಹ್ಮವೇ ತನ್ನಾತ್ಮರೂಪವೆಂಬುದಾಗಿ ತಿಳಿದುಕೊಂಡಿರುತ್ತಾನೆ. ಹೀಗೆ ತಿಳಿದುಕೊಳ್ಳುವುದಷ್ಟೇ ಮಹತ್ವಪೂರ್ಣವಾದುದಲ್ಲ, ಆದರೆ ಆ ಸ್ಥಿತಿಯಲ್ಲಿ ಉಳಿದು ಆನಂದವನ್ನು ಅನುಭವಿಸ ಬೇಕಾಗುವುದು. ಆ ಆನಂದವು ದೊರೆಯಬೇಕಾದರೆ ಆತ್ಮಾನುಸಂಧಾನರೂಪವಾದ ಕ್ರಿಯೆಯು ಅವಶ್ಯವಾಗಿ ಬೇಕು. ಶಿವಯೋಗಿಯು ಎಷ್ಟು ಕಾಲದವರೆಗೆ ಆತ್ಮಾನು ಸಂಧಾನದಲ್ಲಿ ನಿಮಗ್ನನಾಗಿರುತ್ತಾನೆಯೋ, ಅಲ್ಲಿಯವರೆಗೆ ಪರಮಾನಂದವನ್ನೇ ಅನುಭವಿಸುತ್ತಿರುತ್ತಾನೆ. ಈ ಆನಂದವನ್ನನುಭವಿಸುವುದೇ ಜೀವನ್ಮುಕ್ತಿ.

ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಬ್ಬ ಮನುಷ್ಯನಿಗೆ ಆನಂದವು ಬೇಕೇಬೇಕು. ನೀರಿಲ್ಲದೆ ಮೀನಗಳು ಬದುಕಿಕೊಂಡಿರದಂತೆ, ಆನಂದವಿರದಿದ್ದರೆ ಪ್ರಪಂಚದಲ್ಲಿ ಜೀವಿಗಳು ಬದುಕಿಕೊಂಡಿರಲು ಸಾಧ್ಯವಾಗುವುದಿಲ್ಲ, ಆನಂದವೇ ಜೀವನದ ಪರಮ ಪುರುಷಾರ್ಥವು. ಈ ಆನಂದವನ್ನು ಪಡೆಯುವ ಅಭಿಲಾಷೆಯಿದ್ದರೂ ಸಂಸ್ಕಾರ ಹೀನವಾದ ಜೀವಿಗಳು ಅದನ್ನು ಆತ್ಮಾನುಸಂಧಾನದಿಂದ ಪಡೆಯಲು ಅಸಮರ್ಥರಾಗಿ ಶಬ್ದ ಸ್ಪರ್ಶಾದಿ ವಿಷಯಗಳಲ್ಲಿ ಅದನ್ನು ಹುಡುಕುತ್ತಿರುತ್ತಾರೆ. ಶಬ್ದ ಸ್ಪರ್ಶಾದಿ ವಿಷಯ ಗಳಿಂದ ಜೀವಿಗಳಿಗೆ ಒಂದು ಕ್ಷಣಕಾಲ ಸುಖದ ಆಭಾಸವಾಗುವುದೇ ವಿನಃ ವಾಸ್ತವಿಕ ವಾದ ಸುಖದ ಪ್ರಾಪ್ತಿಯೂ ಸಹ ಅಲ್ಲಿ ಆಗುವುದಿಲ್ಲ. ಲೋಕದಲ್ಲಿ ತೋರುವ ಈ ಸುಖಾಭಾಸಕ್ಕಾದರೂ ನಮಗಿಂತಲೂ ಭಿನ್ನವಾದ ವಸ್ತು ಇಲ್ಲವೇ ವ್ಯಕ್ತಿಯು

ಬೇಕಾಗುವುದು. ಹೀಗೆ ಹೊರಗಿನಿಂದ ದೊರೆತ ಆ ವಸ್ತು ಇಲ್ಲವೆ ವ್ಯಕ್ತಿಗಳು ನಮ್ಮೊಂದಿಗೆ ಕೂಡಿರುವುದಿಲ್ಲ ''ಸಂಯೋಗಃ ವಿಪ್ರಯೋಗಾಂತಃ'' ಎಂಬ ಉಕ್ತಿಯ ಪ್ರಕಾರವಾಗಿ ಒಂದು ಕಾಲದಲ್ಲಿ ಯಾರ್‍ಯಾರ ಸಂಬಂಧವಾಗುತ್ತದೆಯೋ, ಮತ್ತೊಂದು ಕಾಲದಲ್ಲಿ ಅವರ ಸಂಬಂಧದ ವಿಚ್ಛೇದವಾಗುತ್ತದೆ. ಸಂಬಂಧವಿದ್ದಾಗ ತೋರುವ ಆ ಸುಖಾಭಾಸವು ಸಂಬಂಧ ವಿಚ್ಛೇದವಾದ ಮೇಲೆ ಇಲ್ಲದಂತಾಗುವುದು. ಆದ್ದರಿಂದ ಯಾವುದೇ ವಸ್ತು ಇಲ್ಲವೆ ವ್ಯಕ್ತಿಯು ಸುದೀರ್ಘಕಾಲದವರೆಗೆ ನಮ್ಮ ಜೊತೆಗೆ ಇರಲಾರನು. ಗಂಡ–ಹೆಂಡತಿ, ತಂದೆ–ಮಗ ಮತ್ತು ಅಣ್ಣ–ತಂಗಿ ಹೀಗೆ ಲೋಕದಲ್ಲಿ ತೋರುವ ಎರಡು ವ್ಯಕ್ತಿಗಳ ಪರಸ್ಪರ ಸಂಬಂಧವು ಋಣಾನುಬಂಧರೂಪವಾದುದು. ಈ ಋಣಾನುಬಂಧವು ಮುಗಿದೊಡನೆ ಎಲ್ಲರೂ ದೂರ ದೂರವಾಗಿಬಿಡುತ್ತಾರೆ.

ಈ ತೋರುವ ಪ್ರಪಂಚವು ಕಾಯಿಪಲ್ಲೆ ಮಾರುವ ಮಾರುಕಟ್ಟೆಯಿದ್ದಂತೆ. ಈ ಮಾರುಕಟ್ಟೆಗೆ ಕೊಡುವ ಹಾಗೂ ಕೊಳ್ಳುವ ಜನರು ಬರುತ್ತಿರುತ್ತಾರೆ. ಕೆಲವರು ಮಾರಲು ಬಂದರೆ ಮತ್ತೆ ಕೆಲವರು ಕೊಳ್ಳಲು ಬರುತ್ತಾರೆ. ಈ ಕೊಡುವ ಕೊಳ್ಳುವ ವ್ಯವಹಾರವು ಮುಗಿದೊಡನೆ ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿಬಿಡುತ್ತಾರೆ. ಅದರಂತೆಯೇ ಈ ಜಗತ್ತಿನಲ್ಲಿ ಜನ್ಮ ಪಡೆದ ಜೀವಿಗಳು ಪೂರ್ವ ಜನ್ಮದ ಋಣಾನುಬಂಧದಿಂದ ಒಬ್ಬರು ಇನ್ನೊಬ್ಬರ ಸಮೀಪಕ್ಕೆ ಬಂದು ತಮ್ಮ ಕೊಡುವ ಕೊಳ್ಳುವ ವ್ಯವಹಾರವನ್ನು ಮುಗಿಸಿ ಕೊಂಡು ದೂರಾಗಿ ಬಿಡುತ್ತಾರೆ. ಇದು ಸೃಷ್ಟಿಯ ಸಹಜವಾದ ನಿಯಮವು. ಗಂಗೋತ್ರಿ ಯಿಂದ ಗಂಗೆ, ಯಮುನೋತ್ರಿಯಿಂದ ಯಮುನಾ ಇವೆರಡೂ ನದಿಗಳು ಅನೇಕ ಪರ್ವತ ಶ್ರೇಣಿಗಳನ್ನು ದಾಟಿ ಬರುತ್ತಿರುವಾಗ ಆ ಎರಡೂ ನದಿಗಳಲ್ಲಿ ಎರಡು ಕಟ್ಟಿಗೆಯ ತುಂಡುಗಳು ತೇಲಿ ಬರುತ್ತಿದ್ದವು. ಪ್ರಯಾಗ ಕ್ಷೇತ್ರಕ್ಕೆ ಬಂದೊಡನೆ ಗಂಗೆ ಯಮುನೆಯರು ಪರಸ್ಪರ ಸಮರಸರಾಗಿ ಒಂದೇ ರೂಪವನ್ನು ತಾಳಿದಾಗ ಆ ಕಟ್ಟಿಗೆಯ ತುಂಡುಗಳೂ ಸಹ ಯೋಗಾಯೋಗದಿಂದ ಪರಸ್ಪರ ಕೂಡಿಕೊಂಡವು. ಆಗ ಒಂದಕ್ಕೊಂದರ ಪರಿಚಯ ವಾಗಿ ಎರಡರಲ್ಲಿ ಅಗಾಧ ಸ್ನೇಹವು ಬೆಳೆಯಿತು. ಪ್ರಯಾಗದಿಂದ ಗಂಗಾಸಾಗರದವರೆಗೆ ಇರುವ ಸುದೀರ್ಘವಾದ ದಾರಿಯಲ್ಲಿ ಎರಡೂ ಒಂದನ್ನೊಂದಗಲದೇ ಕೂಡಿಕೊಂಡೇ ಹೋಗುತ್ತಿದ್ದವು ಮಧ್ಯಮಾರ್ಗದಲ್ಲಿ ಹೋಗುವಾಗ ಅವೆರಡೂ ನಿಶ್ಚಯಿಸಿದ್ದೇನೆಂದರೆ, ಏನೋ ಯೋಗಾಯೋಗದಿಂದ ನಾವೀರ್ವರೂ ಪರಸ್ಪರ ಸಮೀಪರಾಗಿದ್ದೇವೆ. ಇನ್ನು ಮುಂದೆ ಕೂಡಿಯೇ ಇರೋಣ ಎಂಬ ನಿಶ್ಚಯ ಮಾಡಿಕೊಂಡು ಬರುವಾಗ ನದಿಯು ಸಾಗರವನ್ನು ಸೇರಿತು. ಆಗ ಇವೆರಡೂ ಕಟ್ಟಿಗೆಗಳು ಸಹ ಜೊತೆಯಾಗಿ ಸಮುದ್ರವನ್ನು ಸೇರಿ ಆ ಅಗಾಧವಾದ ಜಲನಿಧಿಯ ತರಂಗಗಳ ಮೇಲೆ ಕೂಡಿಯೇ ಕುಣಿದಾಡುತ್ತಿದ್ದವು. ಒಂದು ದಿನ ಸಮುದ್ರದಲ್ಲಿ ಭಯಾನಕ ಬಿರುಗಾಳಿಯು ಬೀಸತೊಡಗಿದಾಗ ಸಮುದ್ರ ದಲ್ಲಿ ಬಹು ದೊಡ್ಡ ದೊಡ್ಡ ಭೀಕರ ತರಂಗಗಳೆದ್ದು ದಂಡೆಗೆ ಬಂದು ತಮ್ಮನ್ನು ತಾವು ಅಪ್ಪಳಿಸುತ್ತಿದ್ದವು. ಸಮುದ್ರದಲ್ಲಿ ಎದ್ದಿರುವ ಬಿರುಗಾಳಿಯ ತರಂಗಕ್ಕೆ ಇವರೆಡೂ ಕಟ್ಟಿಗೆಯ ತುಂಡುಗಳು ಸಿಲುಕಿಕೊಂಡವು. ಆ ತರಂಗವು ಬಹು ಎತ್ತರದಲ್ಲಿ ಎದ್ದು ದಂಡೆಗೆ ಬಂದು ಅಪ್ಪಳಿಸಿದಾಗ ಕೂಡಿಕೊಂಡಿದ್ದ ಕಟ್ಟಿಗೆಯ ಆ ತುಂಡುಗಳು ಒಂದನ್ನೊಂದಗಲಿ ಬಹು ದೂರದಲ್ಲಿ ಬಿದ್ದು ಹೋದವಂತೆ. ಅದರಂತೆ ಪ್ರಪಂಚದಲ್ಲಿಯ ಜೀವಿಗಳು

ಒಂದಕ್ಕೊಂದು ಸಮೀಪಕ್ಕೆ ಬಂದು ವಿಹರಿಸುತ್ತಿರುವಾಗ ಮೃತ್ಯುವೆಂಬ ಬಹುದೊಡ್ಡದಾದ ತರಂಗವು ಬಂದು ಅವರೀರ್ವರನ್ನು ದೂರು ದೂರು ಮಾಡಿಬಿಡುತ್ತದೆ. ಈ ತೆರನಾಗಿ ಸೂತ್ರದ ಗೊಂಬೆಗಳಂತಿರುವ ಈ ಜೀವಿಗಳು ಏನನ್ನೂ ಮಾಡಲು ಸಾಮರ್ಥ್ಯವಿಲ್ಲದವ ರಾಗಿ ಪುನಃ ಪುನಃ ದುಃಖಿಸುತ್ತ ಕಾಲ ಕಳೆಯುತ್ತಾರೆ.

ಜಗತ್ತಿನಲ್ಲಿಯ ಎರಡು ಜೀವಿಗಳು ಪರಸ್ಪರ ಸಮೀಪದಲ್ಲಿದ್ದಾಗಲೆಲ್ಲ ಆನಂದವನ್ನೇ ಅನುಭವಿಸುತ್ತಾರೆಂದೂ ಸಹ ಹೇಳಲಾಗುವುದಿಲ್ಲ. ಕೂಡಿ ಸಂತಸಪಟ್ಟಂತೆ ದುಃಖವನ್ನೂ ಸಹ ಅನುಭವಿಸುತ್ತಾರೆ. ಆದರೆ ಈ ಕ್ರಿಯಾಪ್ರಕಾಶ ಸಂಪನ್ನನಾದ ಶಿವಯೋಗಿಯು ಏಕಾಂಗಿಯಾಗಿ ಕುಳಿತಿದ್ದರೂ ಅವನು ಆನಂದವನ್ನೇ ಆಸ್ವಾದಿಸುತ್ತಿರುತ್ತಾನೆ. ಆತ್ಮಾನಂದ ವನ್ನು ಅನುಭವಿಸಲು ಮತ್ತೊಬ್ಬರ ಅವಶ್ಯಕತೆಯಿರುವುದಿಲ್ಲ. ಆತ್ಮವೇ ಪರಮಾನಂದ ರೂಪವಾಗಿರೋಣದರಿಂದ ಇಲ್ಲಿ ಆನಂದವೇ ಪ್ರಾಪ್ತವಾಗುವುದಲ್ಲದೇ ದುಃಖವು ಎಂದಿಗೂ ಪ್ರಾಪ್ತವಾಗುವುದಿಲ್ಲ. ಶಿವಯೋಗಿಯಾದವನಿಗೆ ಆ ಆತ್ಮಾನಂದವು ದೊರೆಯ ಬೇಕಾದರೆ ಅವನು ಆತ್ಮ ಚಿಂತನೆಯೊಂದನ್ನು ಮಾಡಬೇಕಾಗುತ್ತದೆ. ಅಂತೆಯೇ ಅವನು ಆತ್ಮ ಚಿಂತನರೂಪವಾದ ಕ್ರಿಯೆಯೊಂದನ್ನೇ ಮಾಡುತ್ತಿರುತ್ತಾನೆ. ಹೀಗೆ ಮಾಡುವುದಕ್ಕೇನೆ ಕ್ರಿಯಾಪ್ರಕಾಶವೆಂದು ಕರೆದಿದ್ದಾರೆ. ಶರೀರದಿಂದ ಭಗವಂತನ ಪೂಜೆಯನ್ನು ಮಾಡುತ್ತ ಹಾಗೂ ವಾಣಿಯಿಂದ ಅವನ ಸ್ತುತಿಯನ್ನು ಮಾಡುತ್ತಿದ್ದರೂ ಅವೆರಡೂ ಕ್ರಿಯೆಗಳಲ್ಲಿ ಮನಸ್ಸೊಂದಿರದಿದ್ದರೆ, ಆ ಪೂಜೆ ಮತ್ತು ಸ್ತುತಿಗಳು ನಿರರ್ಥಕಗಳಾಗುತ್ತವೆ. ಅಂತೆಯೇ ಪ್ರತಿಯೊಂದು ವ್ಯವಹಾರದಲ್ಲಿ ಮನಸ್ಸಿನ ಅವಶ್ಯಕತೆಯಿದ್ದೇ ಇದೆ. ಪೂಜೆಯು ಶಾರೀರಿಕ ಕ್ರಿಯೆಯಾದರೆ ಸ್ತುತಿಯು ವಾಣಿಯ ಕ್ರಿಯೆಯು. ಇವೆರಡಕ್ಕಿಂತಲೂ ಮಿಗಿಲಾದದ್ದು ಮನಸ್ಸಿನಿಂದಾಗುವ ಭಗವಚ್ಚಿಂತನೆಯು. ಹೀಗೆ ಸರ್ವ ಶ್ರೇಷ್ಠವಾದ ಆತ್ಮ ಚಿಂತನೆಯಲ್ಲಿ ಮನಸ್ಸು ತಲ್ಲೀನವಾಗಿರುವಿಕೆಯನ್ನು ತಿಳಿಸುವ ಸ್ಥಲವೇ ಕ್ರಿಯಾಪ್ರಕಾಶಸ್ಥಲವು. ಈ ಸ್ಥಲದ ಸ್ವರೂಪವನ್ನೇ ಸ್ಪಷ್ಟಪಡಿಸುತ್ತ ಪೂಜ್ಯಪಾದರು–

> ಶಿವಸ್ಯ ಪರಿಪೂರ್ಣಸ್ಯ ಚಿದಾಕಾಶ ಸ್ವರೂಪಿಣಃ ।
> ಆತ್ಮತ್ವೇ ನಾನುಸಂಧಾನಾತ್ ಕ್ರಿಯಾದ್ಯೋತನವಾನ್ ಯಮೀ ॥
>
> (ಸಿ. ಶಿ. ೧೯–೭೬)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಶಿವನು ಸರ್ವತ್ರ ಪರಿಪೂರ್ಣನಾಗಿದ್ದಾನೆ ಹಾಗೂ ಜ್ಞಾನಾಕಾಶರೂಪನಾಗಿದ್ದಾನೆ. ಭೂತಾಕಾಶವು ಒಮ್ಮೆ ಬೆಳಕಿನಿಂದ ಕೂಡಿದ್ದರೆ ಮತ್ತೊಮ್ಮೆ ಕತ್ತಲೆಯಿಂದ ಆವೃತವಾಗಿರುತ್ತದೆ. ಆದರೆ ಈ ಚಿದಾಕಾಶವು ಮಾತ್ರ ಸದಾ ಸ್ವಯಂ ಪ್ರಕಾಶ ಸ್ವರೂಪವಾಗಿರುತ್ತದೆ. ಹೀಗೆ ಪರಿಪೂರ್ಣನೂ, ಮಂಗಲಕರನೂ, ಚಿದಾಕಾಶ ರೂಪನೂ ಆದ ಪರಶಿವನೇ ನನ್ನ ಆತ್ಮರೂಪನಾಗಿದ್ದಾನೆ. ಈ ವಿಧವಾಗಿ ನಿರಂತರ ಧ್ಯಾನಾಸಕ್ತನಾದ ಶಿವಯೋಗಿಗೆ ಕ್ರಿಯಾಪ್ರಕಾಶವಾನ್ ಎನ್ನುತ್ತಾರೆ. ಈ ಶಿವಯೋಗಿಯು ಯಮೀಯಾಗಿರುತ್ತಾನೆ. ಎಂದರೆ ಯಮ–ನಿಯಮಾದಿ ಅಷ್ಟಾಂಗ ಯೋಗ ಸಂಪನ್ನ ನಾಗಿರುತ್ತಾನೆ. ಪತಂಜಲಿ ಮಹರ್ಷಿಯು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗೂ ಸಮಾಧಿಯೆಂಬ ಅಷ್ಟಾಂಗ ಯೋಗವನ್ನು ಪ್ರತಿಪಾದಿಸಿದ್ದಾನೆ. ಅದರಲ್ಲಿ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು

ಅಪರಿಗ್ರಹವೆಂಬುದಾಗಿ ಐದು ಪ್ರಕಾರದ ಯಮಗಳಿರುತ್ತವೆ. ಅದರಂತೆ ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನಗಳು ನಿಯಮಗಳೆಂದು ಕರೆಯಲ್ಪಡುತ್ತವೆ. ಯಾವುದರ ಅಭ್ಯಾಸದಿಂದ ಮನುಷ್ಯನು ಸ್ಥಿರವಾಗಿಯೂ, ಸುಖ ವಾಗಿಯೂ ಕೂಡ್ರಬಲ್ಲನೋ ಅದಕ್ಕೇನೆ ಆಸನವೆನ್ನುತ್ತಾರೆ. ಇವು ಪದ್ಮಾಸನ, ಸುಖಾಸನ, ವೀರಾಸನ ಮುಂತಾಗಿ ಎಂಬತ್ನಾಲ್ಕು ಪ್ರಕಾರವಾಗಿರುತ್ತವೆ. ಸಹಜವಾದ ಶ್ವಾಸ ಪ್ರಶ್ವಾಸ ಗಳನ್ನು ಶಾಸ್ತ್ರೋಕ್ತವಾಗಿ ನಿಯಂತ್ರಿಸುವ ಕ್ರಿಯೆಯೇ ಪ್ರಾಣಾಯಾಮ.ಇದು ಪೂರಕ, ಕುಂಭಕ ಹಾಗೂ ರೇಚಕವೆಂಬುದಾಗಿ ಮುಖ್ಯತಃ ಮೂರು ಪ್ರಕಾರವಾಗಿರುತ್ತದೆ. ತನ್ನ ಸರ್ವ ಇಂದ್ರಿಯಗಳನ್ನು ಆಯಾ ವಿಷಯದಿಂದ ವಿಮುಖಗೊಳಿಸುವುದೇ ಪ್ರತ್ಯಾಹಾರವು. ಅಂತರಂಗದ ನಾಭಿಚಕ್ರ. ಹೃದಯ ಅಥವಾ ನಾಸಿಕಾಗ್ರಗಳಲ್ಲಿ, ಬಹಿಸ್ಥಿ ಗಳಾದ ಚಂದ್ರ, ಸೂರ್ಯ, ಅಗ್ನಿ ಮುಂತಾದವುಗಳಲ್ಲಿ ಚಿತ್ತವನ್ನು ತಡೆಯುವುದೇ ಧಾರಣೆಯು. ಈ ಚಿತ್ತಸ್ಥೈರ್ಯವು ಐದು ಘಳಿಗೆಯವರೆಗೆ ಅರ್ಥಾತ್ ಎರಡು ತಾಸಿನ ವರೆಗೆ ಸಂಭವಿಸಿದಾಗ ಮಾತ್ರ ಅದಕ್ಕೆ ಧಾರಣೆಯೆನ್ನುವರು. ಚಿತ್ತವು ಸ್ಥಿರಗೊಂಡ ಸ್ಥಾನ ದಲ್ಲಿಯೇ ತನ್ನ ಧ್ಯೇಯದ ಚಿಂತನೆಯನ್ನು ಮಾಡುವುದೇ ಧ್ಯಾನವು. ಅರವತ್ತುಘಳಿಗೆಯ ವರೆಗೆ ಅಂದರೆ ಇಪ್ಪತ್ನಾಲ್ಕು ತಾಸಿನವರೆಗೆ ಚಿತ್ತವು ಧ್ಯೇಯದ ಅನುಸಂಧಾನವನ್ನು ಮಾಡುತ್ತಿದ್ದರೆ ಅದಕ್ಕೇನೆ ಧ್ಯಾನವೆಂದು ಕರೆಯುವರು. ಧ್ಯಾತೃ, ಧ್ಯಾನ, ಧ್ಯೇಯಗಳೆಂಬ ತ್ರಿಪುಟಿ ವ್ಯವಹಾರವಳಿದು ಕೇವಲ ಧ್ಯೇಯಾಕಾರದಲ್ಲಿ ಇರುವುದೇ ಸಮಾಧಿ. ಹನ್ನೆರಡು ದಿನಗಳ ಪರ್ಯಂತರ ವಿಜಾತೀಯ ವೃತ್ತಿಗಳೇಳದೇ ಸಜಾತೀಯ ವೃತ್ತಿ ಪ್ರವಾಹವು ಅಖಂಡವಾಗಿದ್ದಾಗ ಅದಕ್ಕೆ ಸಮಾಧಿಯೆನ್ನುತ್ತಾರೆ. ಇವುಗಳೇ ಅಷ್ಟಾಂಗಯೋಗಗಳು. ಶರಣಸ್ಥಲದ ಶಿವಯೋಗಿಯು ಈ ಅಷ್ಟಾಂಗ ಯೋಗವನ್ನು ಪಡೆದವನಾಗಿರೋಣದ ರಿಂದ ಅವನು ಚಿದಾಕಾಶ ರೂಪವಾದ ಪರಶಿವಬ್ರಹ್ಮವನ್ನು ತನ್ನಾತ್ಮರೂಪವಾಗಿ ಅನುಸಂಧಾನಿಸುತ್ತಿರುತ್ತಾನೆ. ಇವನಿಗೆ ಇದೊಂದು ಕ್ರಿಯೆಯನ್ನು ಬಿಟ್ಟರೆ ಬೇರಾವ ಕ್ರಿಯೆಯು ಇರುವುದಿಲ್ಲ, ಇದುವೇ ಕ್ರಿಯಾಪ್ರಕಾಶ ಸ್ಥಿತಿ.

''ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ'' ಎಂಬ ಮುಂಡಕೋಪನಿಷತ್ತಿನ ಪ್ರಮಾಣದಂತೆ ಬ್ರಹ್ಮನಿಷ್ಠರಾದ, ಶ್ರೋತ್ರಿಯರಾದ ಯೋಗಿಗಳು ಶಿವಧ್ಯಾನರೂಪ ವಾದ ಕ್ರಿಯೆಯಲ್ಲಿ ಆಸಕ್ತರಾಗಿರುತ್ತಾರೆ. ಅದುವೇ ಈ ಕ್ರಿಯಾಪ್ರಕಾಶಸ್ಥಲದಲ್ಲಿ ಪ್ರತಿಪಾದಿಸಲಾಗಿದೆ. ಇಲ್ಲಿ ಉಪದೇಶಿಸಿದಂತೆ ಅನುಸಂಧಾನ ಮಾಡೋಣದರಿಂದ ಆತನ ಚಿತ್ತವೃತ್ತಿಯು ಸಹ ಚೈತನ್ಯ ರೂಪವಾಗುತ್ತದೆ ಎಂಬ ವಿಷಯವನ್ನು ಪ್ರತಿಪಾದಿಸಲೋಸುಗ ಪೂಜ್ಯಪಾದರು ಪುನಃ–

ನಿಷ್ಕಲಂಕಚಿದಾನಂದ ಗಗನೋಪಮರೂಪಿಣಃ ।
ಶಿವಸ್ಯ ಪರಿಪೂರ್ಣಸ್ಯ ವೃತ್ತಿಶ್ಚೈತನ್ಯರೂಪಿಣೀ ॥

(ಸಿ. ಶಿ. ೧೯–೭೭)

ಹೀಗೆ ಆದೇಶವಿತ್ತಿದ್ದಾರೆ. ನಿಷ್ಕಲಂಕನೂ, ಚಿದಾನಂದರೂಪನೂ, ಪರಿಪೂರ್ಣನೂ ಆದ ಪರಶಿವನೇ ನಾನಿದ್ದೇನೆ. ಹೀಗೆ ಚಿತ್ತದಲ್ಲಿ ಸದಾ ಚಿಂತನಶೀಲರಾದ ಆ ಶಿವಯೋಗಿಗಳ

ಚಿತ್ತವೂ ಸಹ ಶಿವನಂತೆ ಜ್ಞಾನರೂಪವೇ ಆಗಿರುತ್ತದೆ. ಚಿದ್ರೂಪದ ಚಿಂತನೆಯನ್ನು ಮಾಡುತ್ತ ಮಾಡುತ್ತ ಅದು ಸಹ ಚಿದ್ರೂಪವೇ ಆಗುತ್ತದೆ. ಯೋಗ ಶಾಸ್ತ್ರದಲ್ಲಿ ಚಿತ್ತವೃತ್ತಿ ನಿರೋಧಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ಆದರೆ ವೀರಶೈವರ ಈ ಶಿವಾದ್ವೈತ ಸಿದ್ಧಾಂತದಲ್ಲಿ ವೃತ್ತಿಯನ್ನು ತಡೆಯುವ ಗೋಜಿಗೆ ಹೋಗದೆ ಆ ವೃತ್ತಿಯನ್ನೇ ಧ್ಯಾನ ಮೂಲಕ ಚಿದ್ರೂಪವನ್ನಾಗಿ ಮಾಡಿಕೊಳ್ಳುವ ಪ್ರಕ್ರಿಯೆಯನ್ನು ಉಪದೇಶಿಸಿದ್ದಾರೆ. ಶಿವಯೋಗವು ಒಂದು ಸಹಜವಾದ ಮಾರ್ಗವು. ''ದೃಷ್ಟಿಂ ಬ್ರಹ್ಮಮಯೀಂ ಕೃತ್ವಾಪಶ್ಯೇದ್ ಬ್ರಹ್ಮಮಯಂ ಜಗತ್'' ಎಂಬ ಉಕ್ತಿಗನುಸಾರವಾಗಿ ದೃಷ್ಟಿಯನ್ನು ಅರ್ಥಾತ್ ಮನದ ವೃತ್ತಿಯನ್ನು ಬ್ರಹ್ಮಮಯವನ್ನಾಗಿ ಮಾಡಿಕೊಂಡಾಗ ಜಗತ್ತೆಲ್ಲವೂ ಬ್ರಹ್ಮಮಯವಾಗಿಯೇ ತೋರಲಾರಂಭಿಸುವುದು. ನಮ್ಮ ಮನದಲ್ಲಿ ಏನಿರುತ್ತದೆಯೋ ಅದನ್ನೇ ನಾವು ಹೊರಗೆ ಕಾಣುತ್ತೇವೆ. ಮನದಲ್ಲಿ ಪ್ರಪಂಚವು ತುಂಬಿಕೊಂಡಿದ್ದರೆ ಹೊರಗೂ ಪ್ರಪಂಚವೇ ತೋರುವುದು. ಇನ್ನು ಮನಸ್ಸಿನಲ್ಲಿ ಪರಮಾತ್ಮನೇ ತುಂಬಿ ಕೊಂಡಿದ್ದರೆ ಹೊರಗೂ ಸಹ ಅವನೇ ಅನುಭವ ಗೋಚರನಾಗುವನು. ಹೀಗೆ ಈ ಶಿವಯೋಗಿಯ ಚಿತ್ತವೇ ಚೈತನ್ಯರೂಪವಾಗಿರೋಣದರಿಂದ ಬಾಹ್ಯದಲ್ಲಿಯೂ ಸಹ ಅವನಿಗೆ ಚಿದ್ರೂಪವೇ ಗೋಚರವಾಗುವುದು. ಚಿತ್ತಕ್ಕೆ ಚಿದ್ರೂಪದ ಆಕಾರವನ್ನು ಕೊಟ್ಟ ಮೇಲೆ ಅದನ್ನು ನಿರೋಧಿಸುವ ಅವಶ್ಯಕತೆಯಿರುವುದಿಲ್ಲ. ಪಾತಂಜಲ ಪರಂಪರೆಯ ಯೋಗಿಯು ಚಿತ್ತವೃತ್ತಿಯ ನಿರೋಧಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದರೆ, ವೀರಶೈವ ಶಿವಯೋಗಿಯು ಚಿತ್ತವನ್ನೇ ಚಿದ್ರೂಪವನ್ನಾಗಿ ಮಾಡಿಕೊಳ್ಳುವುದಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾನೆ. ವೃತ್ತಿಯನ್ನು ನಿರೋಧಿಸಿ ವಿಶಿಷ್ಟ ಸ್ಥಾನದಲ್ಲಿ ಪರಮಾತ್ಮನನ್ನು ಲಕ್ಷಿಸುವುದ ಕ್ಕಿಂತಲೂ ಸಹಜವಾದ ಸ್ಥಿತಿಯಲ್ಲಿದ್ದು ಸರ್ವತ್ರ ಅವನನ್ನು ಅನುಭವಿಸುವುದೇ ಶ್ರೇಷ್ಠ ವಾದುದು. ಆದ್ದರಿಂದ ಇಲ್ಲಿ ಆಚಾರ್ಯರು ಉಪದೇಶಿಸಿದಂತೆ ಚಿತ್ತದಿಂದ ಶಿವಚಿಂತನೆ ಯನ್ನು ಮಾಡುತ್ತ ಚಿತ್ತವನ್ನೇ ಚೈತ್ಯನ್ಯರೂಪವನ್ನಾಗಿ ಮಾಡಿಕೊಳ್ಳಬೇಕು.

ಚಿತ್ತವೃತ್ತಿಯು ಯಾವುದರ ಚಿಂತನೆಯಲ್ಲಿ ವಿಲೀನವಾಗುವುದೋ ಅದು ಅದೇ ಆಕಾರ ಹಾಗೂ ಅದೇ ಸಾಮರ್ಥ್ಯವನ್ನು ಪಡೆದುಕೊಳ್ಳುವುದೆಂಬ ವಿಷಯವನ್ನು ನಿರೂಪಿಸಲೋಸುಗ ಪೂಜ್ಯಪಾದರು ಪುನಃ–

ನಿಷ್ಕಲಂಕೇ ನಿರಾಕಾರೇ ನಿತ್ಯೇ ಪರಮ ತೇಜಸಿ ।
ವಿಲೀನಚಿತ್ತವೃತ್ತಸ್ಯ ತಥಾ ಶಕ್ತಿಃ ಕ್ರಿಯೋಚ್ಯತೇ ॥

(ಸಿ. ಶಿ. ೧೯–೭೮)

ಹೀಗೆ ಆದೇಶಿಸಿದ್ದಾರೆ. ಪರಶಿವನು ನಿಷ್ಕಲಂಕನೂ, ನಿರಾಕಾರನೂ ಮತ್ತು ನಿತ್ಯನೂ ಆಗಿದ್ದಾನೆ. ಇಂತಹ ಆ ಪರಶಿವನಲ್ಲಿ ಶಿವಯೋಗಿಯ ಚಿತ್ತವೃತ್ತಿಯು ಅನುಸಂಧಾನ ರೂಪ ವಾದ ಕ್ರಿಯೆಯಲ್ಲಿ ತೊಡಗಿರಲು ಆ ಚಿತ್ತವೃತ್ತಿಯೂ ಸಹ ಪರಶಿವನ ತೇಜೋರೂಪವನ್ನು ಪಡೆದುಕೊಳ್ಳುವುದು. ಒಂದು ಕಬ್ಬಿಣದ ತುಂಡನ್ನು ಉರಿಯುವ ಅಗ್ನಿಯಲ್ಲಿ ಹಾಕಿದಾಗ ಅಗ್ನಿಯ ಸಂಪರ್ಕದಿಂದ ಕಾಲಾಂತರದಲ್ಲಿ ಅದು ಅಗ್ನಿ ರೂಪವನ್ನೆ ತಾಳುತ್ತದೆ. ಅದನ್ನು ಯಾರು ಮುಟ್ಟಿದರೂ ಸುಟ್ಟೇ ಸುಡುತ್ತದೆ. ಕಬ್ಬಿಣದಲ್ಲಿ ಸ್ವತಃ ಸುಡುವ ಸಾಮರ್ಥ್ಯ

ವಿರದಿದ್ದರೂ, ಅಗ್ನಿಯ ಸಂಪರ್ಕದಿಂದ ಸುಡುವತನವನ್ನು ಪಡೆದುಕೊಳ್ಳುವಂತೆ, ಶಿವಯೋಗಿಯ ಚಿತ್ತವೃತ್ತಿಯೂ ಸಹ ಸ್ವತಃ ಚಿದ್ರೂಪವಾಗಿರದಿದ್ದರೂ, ಚಿದ್ರೂಪವಾದ ಶಿವನ ಚಿಂತನೆಯಿಂದ ಅದು ಸಹ ಚಿದ್ರೂಪವೇ ಆಗಿರುತ್ತದೆ. ಚಿತ್ತದಲ್ಲಿಯ ಈ ಅನುಸಂಧಾನ ಕ್ರಿಯೆಗೆ ಇಲ್ಲಿ ಕ್ರಿಯಾಶಕ್ತಿಯೆಂದು ಕರೆದಿದ್ದಾರೆ. ಅದು ಪರಶಿವನಂತೆ ತೇಜೋರೂಪವಾಗಿರುತ್ತದೆ.

ಪರಶಿವನನ್ನು ತನ್ಮಾತ್ಮರೂಪವಾಗಿ ಅನುಸಂಧಾನ ಮಾಡುವುದರಿಂದ ಇನ್ನೂ ಹೆಚ್ಚಿನ ಪ್ರಯೋಜನಗಳಾವುವು ಎಂಬ ಜಿಜ್ಞಾಸೆಯುಂಟಾದಾಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅದಕ್ಕೆ ಸಮಾಧಾನರೂಪವಾಗಿ–

ಸರ್ವಜ್ಞಃ ಸರ್ವಕರ್ತಾ ಚ ಸರ್ವಗಃ ಪರಮೇಶ್ವರಃ ।
ತದೈಕ್ಯಚಿಂತಯಾ ಯೋಗೀ ತಾದೃಶಾತ್ಮಾ ಪ್ರಕಾಶತೇ ॥

(ಸಿ. ಶಿ. ೧೯–೭೯)

ಹೀಗೆ ಪ್ರತಿಪಾದಿಸಿದ್ದಾರೆ. ''ಸರ್ವಜ್ಞಃ ಪಂಚಕೃತ್ಯಸಂಪನ್ನಃ ಸರ್ವೇಶ್ವರಃ ಈಶ್ವರಃ'' ಎಂಬ ಬೃಹಜ್ಜಾಬಾಲ ಶ್ರುತಿಯಲ್ಲಿ ಹೇಳಿದಂತೆ ಪರಶಿವನು ಸರ್ವಜ್ಞನೂ, ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಗಳ ಕರ್ತನೂ, ಸರ್ವತ್ರ ವ್ಯಾಪಕನೂ ಆಗಿರುತ್ತಾನೆ. ಪರಮಾತ್ಮನ ಈ ಸ್ವರೂಪವನ್ನು ತಿಳಿದುಕೊಂಡೇ ಶಿವಯೋಗಿಯು ಆ ಶಿವನೊಂದಿಗೆ ಸಮಾನ ಸಮರಸೈಕ್ಯಧ್ಯಾನದಲ್ಲಿ ತೊಡಗುತ್ತಾನೆ. ಇದರಿಂದಾಗಿ ಆ ಶಿವಯೋಗಿಯೂ ಸಹ ಆ ಶಿವನಂತೆ ಸರ್ವಜ್ಞತ್ವಾದಿ ಗುಣಗಣಸಮನ್ವಿತನಾಗುತ್ತಾನೆ. ನಾವು ಯಾರೊಂದಿಗೆ ಸಾಮರಸ್ಯ ಭಾವನೆಯನ್ನು ಹೊಂದುತ್ತೇವೆಯೋ ಅವರ ಗುಣ ದೋಷಗಳು ನಮ್ಮನ್ನು ಆಕ್ರಮಿಸುತ್ತವೆ. ಅಂತೆಯೇ ಓರ್ವ ಸುಭಾಷಿತಕಾರನು– ''ಸಂಸರ್ಗಜಾ ದೋಷಗುಣಾ ಭವಂತಿ'' ಎಂಬುದಾಗಿ ಹೇಳಿದ್ದಾನೆ. ದೋಷಿಗಳ ಸಂಗ ಮಾಡಿದಾಗ ದೋಷಗಳು, ಗುಣಿಗಳ ಸಹವಾಸ ಮಾಡಿದಾಗ ಸದ್ಗುಣಗಳೂ ಬರುವುದು ಸ್ವಾಭಾವಿಕವಾದುದು. ಸ್ವತಃ ವಾಯು ಗಂಧರಹಿತವಾಗಿದ್ದರೂ ಅದು ಉದ್ಯಾನದಲ್ಲಿ ವಿಕಸಿತಗಳಾದ ಪುಷ್ಪಗಳ ಸಂಬಂಧವನ್ನು ಪಡೆದು ಬಂದಾಗ ಸುಗಂಧವಾಗಿ ತೋರುತ್ತದೆ. ಅದುವೇ ಕೊಳಚೆ ಪ್ರದೇಶದಿಂದ ಹರಿದು ಬಂದಾಗ ದುರ್ಗಂಧವಾಗಿರುತ್ತದೆ. ಇದರಿಂದ ತಿಳಿದುಬರುವುದೇನೆಂದರೆ, ಸಂಗ ಇಲ್ಲವೆ ಸಹವಾಸಗಳ ಮೂಲಕ ನಾವು ನಮ್ಮಲ್ಲಿ ಇಲ್ಲದೇ ಇರುವ ಗುಣದೋಷಗಳನ್ನು ಪಡೆಯುತ್ತೇವೆ. ಅದರಂತೆ ಅಲ್ಪಜ್ಞನೂ, ಅಲ್ಪಕರ್ತನೂ, ಪರಿಚ್ಛಿನ್ನನೂ ಅಂತೆಯೇ ಜೀವಾತ್ಮನೆಂದು ಕರೆಯಲ್ಪಡುವ ಸಾಧಕನು ಕ್ರಮವಾಗಿ ಸಾಧನೆಯನ್ನು ಮಾಡುತ್ತ ಈ ಶಿವಯೋಗಿಯ ಸ್ಥಿತಿಯನ್ನು ತಲುಪಿ ಮತ್ತೆ ಸರ್ವಜ್ಞತ್ವಾದಿ ಗುಣಗಣಸಮನ್ವಿತನಾದ ಪರಮಾತ್ಮನೊಂದಿಗೆ ತಾದಾತ್ಮ್ಯವನ್ನು ಸ್ಥಾಪಿಸಿ ಕೊಂಡಾಗ ಇವನಲ್ಲಿಯ ಮೊದಲಿನ ಅಲ್ಪಜ್ಞತ್ವಾದಿ ಗುಣಗಳು ತೊಲಗಿ ಸರ್ವಜ್ಞತ್ವಾದಿ ದಿವ್ಯಗುಣಗಳು ಪ್ರಾಪ್ತವಾಗುತ್ತದೆ.

ಲೋಕದಲ್ಲಿ ಈ ಶಿವಯೋಗಿಗೆ ಹಾಗೂ ಉಳಿದ ಸಾಮಾನ್ಯ ಮನುಷ್ಯರಿಗೆ ಹೋಲಿಸಿ ನೋಡಿದಾಗ ಅವರೀರ್ವರಲ್ಲಿ ಮಹದಂತರವು ಕಂಡು ಬರುತ್ತದೆ. ಶಿವನಲ್ಲಿ

ಅಣಿಮಾದಿ ಅಷ್ಟೈಶ್ವರ್ಯಗಳು ಸಹಜವಾಗಿರೋಣದರಿಂದ ಪರಮಾತ್ಮನೊಂದಿಗೆ ನಿರಂತರ ಸಂಬಂಧವನ್ನು ಸ್ಥಾಪಿಸಿಕೊಂಡ ಶಿವಯೋಗಿಯಲ್ಲಿ ಅವು ಇಳಿದು ಬರುತ್ತವೆ. ಆಕಾಶ ಗಮನ, ಪರಕಾಯ ಪ್ರವೇಶ, ಬಹುರೂಪದರ್ಶನ, ದೂರದರ್ಶನ, ದೂರ ಶ್ರವಣ ಮುಂತಾದ ಅಲೌಕಿಕ ಸಾಮರ್ಥ್ಯವನ್ನು ಒಬ್ಬ ಶಿವಯೋಗಿಯಲ್ಲಿ ಕಾಣುತ್ತೇವೆ. ಆದರೆ ಈ ಗುಣಗಳು ಸರ್ವೇಸಾಮಾನ್ಯ ವ್ಯಕ್ತಿಯಲ್ಲಿ ಇರುವುದಿಲ್ಲ. ಇದಕ್ಕೆ ಕಾರಣ ಪರಮಾತ್ಮನೊಂದಿಗೆ ಸ್ಥಾಪಿಸಿಕೊಂಡ ಸಂಬಂಧವೆಂದೇ ಹೇಳಬೇಕಾಗುತ್ತದೆ. ಲೌಕಿಕ ವ್ಯವಹಾರದಲ್ಲಿ ದೊಡ್ಡ ಅಧಿಕಾರಿಯ ಮುಖ್ಯ ಸಚಿವನಾದವನು ಅಧಿಕಾರಿಯಷ್ಟೆ ಸ್ವಲ್ಪು ಹೆಚ್ಚು ಕಡಿಮೆ ಮಾನ ಮರ್ಯಾದೆಗಳನ್ನು ಪಡೆಯುವುದನ್ನು ಕಾಣುತ್ತೇವೆ. ಆ ಮರ್ಯಾದೆಯನ್ನು ಪಡೆಯುವ ಅವನದೇಯಾದ ಸ್ವಂತದ ಸಾಮರ್ಥ್ಯವಿರದಿದ್ದರೂ ಅಧಿಕಾರಿಯ ನಿಕಟವರ್ತಿಯಾಗಿರೋಣದರಿಂದ ಅದು ಅವನಿಗೆ ಲಭ್ಯವಾಗುತ್ತದೆ. ವಿದ್ಯುಚ್ಛಕ್ತಿ ಕೇಂದ್ರದಲ್ಲಿ ಅಪಾರವಾದ ವಿದ್ಯುತ್ತು ಸಂಗ್ರಹಿಸಿಡಲ್ಪಟ್ಟಿರುತ್ತದೆ. ಅದರಿಂದ ಊರಿನ ಪ್ರತಿಯೊಂದು ಮನೆಗೂ ವಾಯರ್‌ನ ಮೂಲಕ ವಿತರಣೆಯಾಗುತ್ತಿರುತ್ತದೆ. ಮನೆಯಲ್ಲಿ ನಾವು ಆ ವಾಯರಿಗೆ ವಿಭಿನ್ನ ವೋಲ್ಟಗಳ ಬಲ್ಬುಗಳನ್ನು ಸಂಬಂಧಗೊಳಿಸಿ ಪ್ರಕಾಶವನ್ನು ಪಡೆಯುತ್ತಿರುತ್ತೇವೆ. ಒಂದೇ ವಾಯರಿಗೆ ಸಂಬಂಧವಿರುವ ವಿಭಿನ್ನ ಬಲ್ಬು ಗಳಿಂದ ದೊರೆಯುವ ಪ್ರಕಾಶವು ಹೆಚ್ಚು ಕಡಿಮೆಯಾಗಿರುತ್ತದೆ. ಜೀರೋ ಬಲ್ಬಿನ ಮೂಲಕ ಅತಿ ಮಂದ ಪ್ರಕಾಶವು ದೊರೆತರೆ, ಸಾವಿರ ವೋಲ್ಟೇಜ ಬಲ್ಬಿನಿಂದ ಅತಿ ಪ್ರಖರವಾದ ಪ್ರಕಾಶವು ದೊರೆಯುವುದನ್ನು ನೋಡುತ್ತೇವೆ. ವಾಯರ್ ಒಂದೇ ಯಾಗಿದ್ದರೂ ವಿದ್ಯುತ್‌ನ್ನು ಗ್ರಹಿಸುವ ಬಲ್ಬುಗಳ ಶಕ್ತಿಯು ಹೆಚ್ಚು ಕಡಿಮೆಯಾಗಿರುವುದೇ ಪ್ರಕಾಶದ ಹೆಚ್ಚುಕಡಿಮೆಯಾಗಿರುವಿಕೆಗೆ ಕಾರಣವಾಗಿರುತ್ತದೆ. ಇದೇ ಪ್ರಕಾರ ಸರ್ವಜ್ಞ ತ್ವಾದಿ ಗುಣಗಣಸಮನ್ವಿತನಾದ ಶಿವನ ಸಂಬಂಧವು ಸರ್ವರೊಂದಿಗೆ ಇದ್ದರೂ, ಯಾರು ಪರಮಾತ್ಮನತ್ತ ತಮ್ಮ ಚಿತ್ತವನ್ನು ಅತಿ ಹೆಚ್ಚು ಕಾಲದವರೆಗೆ ಧ್ಯಾನಾದಿಗಳಲ್ಲಿ ತೊಡಗಿಸಿ ಕೊಂಡು ಆ ಮೂಲಕ ತಮ್ಮ ಚಿತ್ತವನ್ನು ವಿಕಸನಗೊಳಿಸಿಕೊಂಡಿರುವರೋ, ಅವರಲ್ಲಿ ಶಿವನ ವಿಶೇಷ ಸಂಬಂಧವೇರ್ಪಟ್ಟು, ಆತನ ಸರ್ವಜ್ಞತ್ವಾದಿ ವಿಶಿಷ್ಟ ಶಕ್ತಿಗಳು ಇವನಲ್ಲಿ ಬರುವವು.

ನಮ್ಮ ದೇಶದ ಪ್ರಾಚೀನ ಋಷಿ ಮಹರ್ಷಿಗಳು ಕೆಲವೊಂದು ಶಾಸ್ತ್ರಗಳ ಆವಿಷ್ಕಾರವನ್ನು ಮಾಡಿದ್ದಾರೆ. ಇದನ್ನು ಮಾಡಬೇಕಾದರೆ ಅವರು ಶಿವಧ್ಯಾನದಲ್ಲಿ ಆಸಕ್ತರಾಗಿ ಶಿವನಿಂದ ಹರಿದು ಬಂದ ಆ ಜ್ಞಾನವನ್ನೇ ಗ್ರಂಥರೂಪದಲ್ಲಿ ಬರೆದಿಟ್ಟಿದ್ದಾರೆ ಇಂದು ಯಾರಾದರೊಬ್ಬರು ಯಾವುದೊಂದು ಗ್ರಂಥವನ್ನು ಬರೆಯಬೇಕಾದರೆ ಅನೇಕ ಗ್ರಂಥಗಳ ಸಹಯೋಗವನ್ನು ಪಡೆಯಬೇಕಾಗುತ್ತದೆ. ಒಬ್ಬ ಸಂಶೋಧಕನು ತನ್ನ ಶೋಧ ಪ್ರಬಂಧದ ಕೊನೆಗೆ ತಾನು ಸಹಕಾರ ಪಡೆದ ಗ್ರಂಥಗಳ ಯಾದಿಯನ್ನು ಕೊಟ್ಟಿರುತ್ತಾನೆ. ನೂರಾರು ಗ್ರಂಥಗಳ ಸಹಕಾರ ಪಡೆದಾಗ ಒಂದು ಗ್ರಂಥವು ನಿರ್ಮಾಣವಾಗುವುದು. ಹಿಂದೊಂದು ಕಾಲದಲ್ಲಿ ಗ್ರಂಥಗಳ ಆವಿಷ್ಕಾರವೇ ಇಲ್ಲದಿದ್ದಾಗಮಂತ್ರದ್ರಷ್ಟಾರರಾದ ನಮ್ಮ ಋಷಿಗಳು ಕೇವಲ ಪರಮಾತ್ಮನ ಧ್ಯಾನವನ್ನು ಮಾತ್ರ ಮಾಡಿ ಅವನಿಂದಲೇ ಆ ವಿಷಯವನ್ನು ಪಡೆದು ನಿರ್ಮಿಸಿದ್ದನ್ನು ನೋಡುತ್ತೇವೆ. ಇದರಿಂದ ಸರ್ವಜ್ಞನಾದ

ಪರಮಾತ್ಮನೊಂದಿಗೆ ಧ್ಯಾನಮೂಲಕ ಸಂಬಂಧವನ್ನು ಬೆಳೆಸಿದಾಗ ಅವನಲ್ಲಿರುವ ದಿವ್ಯಗುಣಗಳನ್ನು ಪಡೆಯಲಿಕ್ಕೆ ಸಾಧ್ಯವಾಗುವುದೆಂಬುದು ತಿಳಿದುಬರುತ್ತದೆ. ಅಂತೆಯೇ ಪೂಜ್ಯಪಾದರು ಈ ಧ್ಯಾನದ ಫಲಶ್ರುತಿಯನ್ನು ಹೇಳುವಾಗ ''ತಾದೃಶಾತ್ಮಾ ಪ್ರಕಾಶತೇ'' ಎಂಬುದಾಗಿ ಹೇಳಿದ್ದಾರೆ. ತಾತ್ಪರ್ಯವೇನೆಂದರೆ ಪರಮಾತ್ಮನ ಧ್ಯಾನ ಮಾಡಿದವನು ಪರಮಾತ್ಮನೇ ಆಗುತ್ತಾನೆ. ಪರಮಾತ್ಮನಾದ ಮೇಲೆ ಆ ದಿವ್ಯ ಗುಣಗಳು ಇವನಲ್ಲಿಯೂ ವ್ಯಕ್ತವಾಗುವುದರಲ್ಲಿ ಆಶ್ಚರ್ಯವೇನು ? ''ಕೀಟೋ ಭ್ರಮರಧ್ಯಾನೇನ ಭ್ರಮರೋ ಭವತಿ ಧ್ರುವಮ್'' ಎಂಬ ಲಿಂಗ ಪುರಾಣದ ವಚನದಂತೆ ಕೀಟವು ಭ್ರಮರದ ಧ್ಯಾನ ಮಾಡುತ್ತ ಭ್ರಮರವೇ ಆಗುವಂತೆ ಮಾನವನು ಶಿವಯೋಗವನ್ನು ಸಾಧಿಸುತ್ತ ಸಾಧಿಸುತ್ತ ಕೊನೆಗೆ ಶಿವನೇ ಆಗುತ್ತಾನೆಂಬಲ್ಲಿ ಯಾವ ಸಂಶಯವೂ ಇಲ್ಲ. ಶಿವನೇ ಆದ ಮೇಲೆ ಸರ್ವಜ್ಞತ್ವ, ಸರ್ವಕರ್ತೃತ್ವಾದಿ ದಿವ್ಯಗುಣಗಳು ಸಹ ಅವನಲ್ಲಿ ಆಳವಡತ್ತದೆಂಬುದು ಪೂಜ್ಯರ ಅಭಿಪ್ರಾಯ.

ಈ ಲೋಕದಲ್ಲಿ ಶಿವಯೋಗಿಯಾದವನು ಸಹ ಇಂದ್ರಿಯ ವ್ಯವಹಾರಗಳಲ್ಲಿ ತೊಡಗಿದ್ದನ್ನು ಕಾಣುತ್ತೇವೆ. ಹೀಗಿರುವಾಗ ಅವನು ಶಿವನನ್ನು ಅದು ಹೇಗೆ ತಾನೆ ಕಾಣಬಲ್ಲನು ಎಂಬುದಾಗಿ ಪ್ರಶ್ನೆಯುದ್ಭವಿಸಿದರೆ ಅದಕ್ಕೆ ಸಮಾಧಾನರೂಪವಾಗಿ ಪೂಜ್ಯರು–

ಸರ್ವೇಂದ್ರಿಯಾಣಾಂ ವ್ಯಾಪಾರೇ ವಿದ್ಯಮಾನೇಽಪಿ ಸಂಯಮೀ ।
ಪ್ರತ್ಯುನ್ಮುಖೇನ ಮನಸಾ ಶಿವಂ ಪಶ್ಯನ್ ಪ್ರಮೋದತೇ ॥

(ಸಿ. ಶಿ. ೧೯–೮೦)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ಶರೀರಧಾರಿಯಾದ ಶಿವಯೋಗಿಗೆ ಎಲ್ಲರಿಗಿರುವಂತೆ ಇಂದ್ರಿಯಗಳ ವ್ಯವಹಾರವು ಇದ್ದೇ ಇರುತ್ತದೆ. ಕೊಡುವ, ಕೊಳ್ಳುವ, ಹೋಗುವ, ಬರುವ, ಮಾತನಾಡುವ ಮುಂತಾದ ಎಲ್ಲ ಇಂದ್ರಿಯಗಳ ವ್ಯವಹಾರವು ಶಿವಯೋಗಿಗೆ ಇದ್ದರೂ, ಅವನ ಚಿತ್ತವು ಮಾತ್ರ, ಆ ಇಂದ್ರಿಯಾರ್ಥ ವ್ಯವಹಾರಗಳಲ್ಲಿ ಆಸಕ್ತವಾಗಿರುವುದಿಲ್ಲ. ಹೊರಗೆ ಇಂದ್ರಿಯಗಳ ವ್ಯವಹಾರವು ನಡೆದಿದ್ದರೂ ಅವನ ಮನಸ್ಸು ಅಂತರ್ಮುಖಿ ಯಾಗಿ, ಆ ಪರಮಾತ್ಮನನ್ನೇ ನೋಡುತ್ತ ಅತಿ ಆನಂದದಲ್ಲಿರುತ್ತದೆ. ಮನಸ್ಸಿಲ್ಲದೆ ಇಂದ್ರಿಯಗಳ ವ್ಯವಹಾರವು ಅದು ಹೇಗೆ ಸಾಗಬಲ್ಲುದು ? ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುವುದು ಸಹಜವಾದುದು. ಆದರೆ ಇಲ್ಲಿರುವ ರಹಸ್ಯವೇನೆಂದರೆ ಇಂದ್ರಿಯಗಳು ತಮ್ಮ ವಿಷಯಗಳೊಂದಿಗೆ ಸಂಬಂಧವನ್ನು ಮೊಟ್ಟ ಮೊದಲು ಮಾಡುವಾಗ ಮನದ ಸಹಯೋಗವನ್ನು ಅಪೇಕ್ಷಿಸುತ್ತವೆ. ಒಮ್ಮೆ ತಮ್ಮ ವಿಷಯದೊಂದಿಗೆ ವ್ಯವಹರಿಸುವುದು ಅಭ್ಯಸ್ತವಾಯಿತೆಂದರೆ ಅಲ್ಲಿ ಮನವಿಲ್ಲದಿದ್ದರೂ ಆ ವ್ಯವಹಾರವು ನಡೆದು ಹೋಗುತ್ತದೆ.

ವ್ಯಾಸನ ಅಪ್ಪಣೆಯ ಮೇರೆಗೆ ಅವನ ಪುತ್ರನಾದ ಶುಕದೇವನು ತತ್ತ್ವಬೋಧೆ ಯನ್ನು ಪಡೆಯುವುದಕ್ಕಾಗಿ ಜನಕ ಮಹಾರಾಜನ ಆಸ್ಥಾನಕ್ಕೆ ಬರುತ್ತಾನೆ. ಜನಕ ಮಹಾರಾಜನು ರಜತಸಿಂಹಾಸನದ ಮೇಲೆ ಕುಳಿತು, ರತ್ನಖಚಿತ ಮುಕುಟವನ್ನು ಧರಿಸಿ, ಅನೇಕ ದಾಸದಾಸಿಯರಿಂದ ಸೇವಿಸಲ್ಪಡುತ್ತಿದ್ದನು. ವೀರವೈರಾಗ್ಯಮಣಿಯಾದ

ಶುಕದೇವನು ಇದೆಲ್ಲವನ್ನು ನೋಡಿ ಭೋಗಾಸಕ್ತನಾದ ಇವನು ನನಗೆ ಹೇಗೆ ತಾನೆ ತತ್ತ್ವಜ್ಞಾನವನ್ನು ಉಪದೇಶಿಸಬಲ್ಲನು ಎಂಬ ಸಂಶಯವುಳ್ಳವನಾದನು. ಶುಕದೇವನ ಮನಸ್ಸಿನಲ್ಲಿ ಉಂಟಾದ ಈ ಸಂಶಯ ಭಾವವನ್ನು ಅರ್ಥಮಾಡಿಕೊಂಡ ಜನಕನು ತಾನು ಸಿಂಹಾಸನದಿಂದ ಎದ್ದುನಿಂತು ಶುಕದೇವನನ್ನು ಸ್ವಾಗತಿಸಿ, ಆತನ ಯೋಗ್ಯ ಉಪಚಾರ ಕ್ಕಾಗಿ ತನ್ನ ಅಧಿಕಾರಿಗಳಿಗೆ ಆಜ್ಞಾಪಿಸುತ್ತಾನೆ. ಶುಕದೇವನ ಮನದಲ್ಲಿಯ ಸಂದೇಹವು ಸಹಜವಾಗಿ ದೂರಾಗುವಂತಹ ಒಂದು ಸನ್ನಿವೇಶವನ್ನು ತನ್ನ ಅಧಿಕಾರಿಗಳಿಂದ ರಾಜನು ಮಾಡಿಸುತ್ತಾನೆ. ಶುಕದೇವನು ತನ್ನ ಸ್ನಾನಾದಿಗಳನ್ನು ತೀರಿಸಿಕೊಂಡು ಭೋಜನ ಕಕ್ಷೆಗೆ ಬಂದಾಗ ತಾನು ಕುಳಿತುಕೊಳ್ಳಲು ಹಾಕಿರುವ ಆಸನದ ಮೇಲೆ ಛತ್ತಿಗೆ ಒಂದು ಹದನ ವಾದ ಖಡ್ಗವನ್ನು ತಿಳುವಾದ ದಾರದಿಂದ ಕಟ್ಟಿ ನೇತುಹಾಕಿದ್ದರು. ತನ್ನ ಆಸನದ ಮೇಲೆ ಕೂಡ್ರುವ ಮೊದಲು ಶುಕನ ಲಕ್ಷ್ಯವು ಆ ಖಡ್ಗದತ್ತ ಹೋಯಿತು. ಇದೇನು ಯಾವಾಗ ಕಳಚಿಬೀಳುವುದೋ ಎಂಬ ಭಯವು ಮನಸ್ಸಿನಲ್ಲಿ ಹೊಕ್ಕಿತು. ಆದರೂ ಅದನ್ನು ತೋರ ಗೊಡದೇ ಊಟಕ್ಕೆ ಕುಳಿತನು. ರಾಜೋಚಿತಗಳಾದ ಪಂಚಪಕ್ವಾನ್ನಗಳನ್ನು ಹೊಟ್ಟೆ ತುಂಬ ಭುಂಜಿಸಿದ ಮೇಲೆ ರಾಜನ ಭೆಟ್ಟಿಗೆ ಈತನನ್ನು ಕರೆದುಕೊಂಡು ಹೋದರು. ಆಗ ಜನಕನು–''ಹೇ ಮುನಿವರ್ಯನೇ ! ಹೊಟ್ಟೆತುಂಬ ಊಟ ಮಾಡಿದಿರಿ ತಾನೆ ? ಶುಕದೇವನು ಮೌನವಾಗಿದ್ದೇ ತಲೆಯನ್ನಲ್ಲಾಡಿಸುವುದರ ಮೂಲಕ ತನ್ನ ಹೊಟ್ಟೆ ತುಂಬಿದ ವಿಷಯವನ್ನು ವ್ಯಕ್ತಮಾಡಿದನು. ಆಗ ಜನಕನು ಮತ್ತೆ ''ಹೇ ಋಷಿಕುವರ ! ನೀನು ಭುಂಜಿಸಿದ ಪದಾರ್ಥಗಳು ಯಾವುವು ? ಅವುಗಳಲ್ಲಿ ಎಲ್ಲವೂ ನಿನಗೆ ಇಷ್ಟ ವಾಗಿದ್ದವೇ ?'' ಎಂಬುದಾಗಿ ಪ್ರಶ್ನಿಸಿದನು, ಆಗ ಶುಕದೇವನು ''ಎಲೈ ರಾಜನ್ ! ನಾನು ಉಂಡಿದ್ದೇನೋ ನಿಜ. ಆದರೆ ಯಾವ ಯಾವ ಪದಾರ್ಥಗಳನ್ನು ಭುಂಜಿಸಿದೆನೆಂಬುದರ ಅರಿವು ನನಗಿರುವುದಿಲ್ಲ, ಏಕೆಂದರೆ ನಾನು ಕುಳಿತ ಸ್ಥಾನದಲ್ಲಿಯೇ ಮೇಲುಗಡೆ ಒಂದು ಹದನವಾದ ಖಡ್ಗವು ನೇತಾಡುತ್ತಿತ್ತು, ಅದನ್ನು ನೋಡಿದೊಡನೆ ಮನಸ್ಸು ಭೀತಿಗೊಂಡು ಅದರತ್ತಲೇ ಲಕ್ಷ್ಯವಹಿಸಿತು. ಹೀಗಾಗಿ ಉಣ್ಣುವ ಪದಾರ್ಥಗಳ ಕಡೆಗೆ ಗಮನ ಕೊಡಲೇ ಇಲ್ಲ, ಅಂತಲೇ ನಾನುಂಡ ಪದಾರ್ಥಗಳ ಅರಿವು ನನಗಿಲ್ಲವಾಗಿದೆ.'' ಆಗ ಜನಕನು ''ಹೇ ಮುನಿಯೇ ಖಡ್ಗದ ಕಡೆಗೆ ಚಿತ್ತವಿಟ್ಟ ನಿನಗೆ ಭಕ್ಷ್ಯ ಪದಾರ್ಥಗಳ ಪರಿಜ್ಞಾನವಾಗದಿರು ವಂತೆ, ನನ್ನ ಲಕ್ಷ್ಯವೂ ಸಹ ಸದಾ ಆ ಪರಮಾತ್ಮನ ಧ್ಯಾನದಲ್ಲಿ ತಲ್ಲೀನವಾಗಿರುತ್ತದೆ. ಅಂತೆಯೇ ಶರೀರಾದಿಗಳಿಂದ ಅನೇಕ ವ್ಯವಹಾರಗಳು ನಡೆಯುತ್ತಿದ್ದರೂ ಅದರ ಕಡೆಗೆ ನನ್ನ ಗಮನವಿರುವುದಿಲ್ಲ'' ರಾಜನ ಈ ನುಡಿಯನ್ನು ಕೇಳಿ ಹರ್ಷಿತನಾದ ಶುಕದೇವನು ಕೊನೆಗೆ ಆತನಿಂದಲೇ ತತ್ತ್ವೋಪದೇಶವನ್ನು ಪಡೆದುಕೊಂಡನು. ಇಲ್ಲಿ ಇಂದ್ರಿಯಗಳು ತಮ್ಮ ತಮ್ಮ ವ್ಯಾಪಾರದಲ್ಲಿ ತೊಡಗಿದ್ದರೂ ಮನಸ್ಸು ಅಲ್ಲಿರದೇ ಅನ್ಯಾಸಕ್ತವಾದದ್ದು ತಿಳಿದು ಬರುತ್ತದೆ.

ಇದರಂತೆ ಈ ಸಂಯಮಿಯಾದ ಶಿವಯೋಗಿಯ ಇಂದ್ರಿಯಗಳು ತಮ್ಮ ತಮ್ಮ ವ್ಯವಹಾರ ಮಾಡುತ್ತಿದ್ದರೂ ಈತನು ಮಾತ್ರ ತನ್ನ ಮನಸ್ಸನ್ನು ಬಹಿರ್ಮುಖಗೊಳಿಸದೇ ಅಂತರ್ಮುಖವಾಗಿರಿಸಿಕೊಂಡು ಅಲ್ಲಿಯೇ ಶಿವಾನಂದವನ್ನು ಅನುಭವಿಸುತ್ತ ಪ್ರಮೋದಾವಸ್ಥೆಯನ್ನು ಪಡೆಯುತ್ತಾನೆ. ಪ್ರಿಯಬೋಧ ಹಾಗೂ ಪ್ರಮೋದಗಳು

ಮನಸ್ಸಿನ ವೃತ್ತಿಗಳಾಗಿರುತ್ತವೆ. ತನಗೆ ಬೇಕಾದ ವಸ್ತು ದೂರದಲ್ಲಿ ಕಂಡಾಗ ಮನದಲ್ಲಿ ಪ್ರಿಯ ವೃತ್ತಿಯೂ, ಆ ವಸ್ತುವು ತನ್ನ ಸ್ವಾಧೀನವಾದಾಗ ಮೋದವೃತ್ತಿಯೂ, ಅದರಂತೆ ಆ ವಸ್ತುವನ್ನು ಅನುಭವಿಸುವಾಗ ಪ್ರಮೋದ ವೃತ್ತಿಯೂ ಉಂಟಾಗುತ್ತದೆ. ಅದರಂತೆ ಈ ಶಿವಯೋಗಿಗೆ ಯಾವಾಗ ಪರಮಾತ್ಮನ ಅಸ್ತಿತ್ವದ ಜ್ಞಾನವಾಯಿತೋ ಆಗ ಆತನ ಮನಸ್ಸಿನಲ್ಲಿ ಪ್ರಿಯ ವೃತ್ತಿಯು ಉತ್ಪನ್ನವಾಗುತ್ತದೆ. ಹಾಗಾದರೆ ಆ ಪರಮಾತ್ಮನು ಎಲ್ಲಿದ್ದಾನೆ ಎಂಬ ಪ್ರಶ್ನೆಗೆ ಉತ್ತರವಾಗಿ ಆತನು ತನ್ನ ಹೃದಯದಲ್ಲೇ ಇದ್ದಾನೆ ಎಂಬ ತಿಳುವಳಿಕೆ ಯಾದಾಗ ಮನದಲ್ಲಿ ಮೋದವೃತ್ತಿಯುಂಟಾಗುತ್ತದೆ. ಇನ್ನು ಆ ಪರಮಾತ್ಮನು ಆತ್ಮ ರೂಪವೇ ಆಗಿದ್ದಾನೆಂಬ ಸಾಮರಸ್ಯಜ್ಞಾನವಾದಾಗ ಮನದಲ್ಲಿ ಪ್ರಮೋದವೃತ್ತಿಯು ಉದ್ಭವಿಸುತ್ತದೆ. ಹೀಗೆ ಈ ಶಿವಯೋಗಿಯ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಸಂಬದ್ಧವಾಗಿದ್ದರೂ ಮನಸ್ಸು ಮಾತ್ರ ವಿಷಯಾಸಕ್ತವಾಗದಿರೋಣದರಿಂದ ಆ ಅಂತರ್ಮುಖವಾದ ಮನಸ್ಸಿನಿಂದಲೇ ಅವನು ಪರಶಿವನನ್ನು ಕಾಣುತ್ತ ಪರಮಾನಂದ ವನ್ನು ಪಡೆಯುತ್ತಿರುತ್ತಾನೆ.

ಶಿವಯೋಗಿಯು ಅನುಭವಿಸುತ್ತಿರುವ ಆ ಪರಮಾತ್ಮನ ಸ್ವರೂಪವು ಹೇಗಿರುತ್ತದೆ ಎಂಬ ಪ್ರಶ್ನೆಯು ಉದ್ಭವಿಸಲು ಅದಕ್ಕೆ ಸಮಾಧಾನರೂಪವಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಕೂಟಸ್ಥಮಚಲಂ ಪ್ರಾಜ್ಞಂ ಗುಣಾತೀತಂ ಗುಣೋತ್ತರಮ್ ।
ಶಿವತತ್ತ್ವಂ ಸ್ವರೂಪೇಣ ಪಶ್ಯನ್ ಯೋಗಿ ಪ್ರಮೋದತೇ ॥

(ಸಿ. ಶಿ. ೧೯–೮೧)

ಈ ತೆರನಾಗಿ ಉಪದೇಶಿಸಿದ್ದಾರೆ. ಶಿವಯೋಗಿಯು ಅನುಭವಿಸುವ ಆ ಶಿವನು ಕೂಟಸ್ಥ ನಾಗಿದ್ದಾನೆ. ಕೂಟಸ್ಥನೆಂದರೆ ಯಾವ ವಿಕಾರಗಳೂ ಇಲ್ಲದಿರುವ ಸಾಕ್ಷಿಸ್ವರೂಪವೆಂದರ್ಥ. ಅಂತೆಯೇ ಅದು ಅಚಲವಾಗಿದೆ, ಸ್ಥಿರವಾಗಿದೆಯೆಂದರ್ಥ. ಅಚಲವಾದ ಆ ಪರಮಾತ್ಮನ ಮೇಲೆಯೇ ಚಲಿಸುತ್ತಿರುವ ಈ ಜಗತ್ತು ನಿಂತುಕೊಂಡಿದೆ. ಜಗತ್ತು ಚಲಿಸಿದಂತೆ ಪರಮಾತ್ಮನೂ ಚಲಿಸತೊಡಗಿದರೆ ಈ ಜಗತ್ತಿಗೆ ಅವಕಾಶವೇ ಇಲ್ಲದಂತಾಗುವುದು. ಆದ್ದರಿಂದ ಆತನು ಅಚಲನಾಗಿದ್ದಾನೆ. ಇದೂ ಅಲ್ಲದೇ ಆತನು ಪ್ರಾಜ್ಞನೂ ಆಗಿದ್ದಾನೆ. ಅಂದರೆ ಅತ್ಯಂತ ಕುಶಲನಾಗಿದ್ದಾನೆಂದರ್ಥ. ಚಿತ್ರವಿಚಿತ್ರವಾದ ಈ ಜಗತ್ತನ್ನು ನೋಡಿದಾಗ ಆತನೆಷ್ಟು ಕುಶಲನೆಂಬುದು ತಿಳಿದುಬರುತ್ತದೆ. ಆತನು ಕುಶಲಿಯಾಗಿರು ವಂತೆ ಗುಣಾತೀತನೂ ಆಗಿದ್ದಾನೆ. ಪ್ರಕೃತಿಯಲ್ಲಿ ಸತ್ವ ರಜಸ್ ಮತ್ತು ತಮಸ್ಸುಗಳೆಂಬ ಮೂರು ಗುಣಗಳಿರುತ್ತವೆ ಈ ಗುಣಗಳೇ ಸೃಷ್ಟಿಯ ವ್ಯವಹಾರಕ್ಕೆ ಕಾರಣಗಳಾಗಿರುತ್ತವೆ. ಆದರೆ ಪರಶಿವತತ್ವವು ಪ್ರಕೃತಿಯನ್ನು ಮೀರಿದಾವಸ್ಥೆಯಲ್ಲಿರೋಣದರಿಂದ ಅಲ್ಲಿ ಈ ಯಾವ ಗುಣಗಳು ಸಂಭವಿಸಲಾರವು. ಇದು ಅಲ್ಲದೆ ಜ್ಞಾನ ವೈರಾಗ್ಯಾದಿ ಉತ್ಕೃಷ್ಟ ದಿವ್ಯಗುಣಗಳಿಂದ ಇದು ಕೂಡಿಕೊಂಡಿರುವಂತಹುದಾಗಿದೆ. ಇಂತಹ ಶಿವತತ್ತ್ವವನ್ನು ಸ್ವಸ್ವರೂಪದಲ್ಲಿ ಕಂಡು ಈ ಶಿವಯೋಗಿಯು ಪ್ರಮೋದಾವಸ್ಥೆಯನ್ನು ಹೊಂದುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಕ್ರಿಯಾಪ್ರಕಾಶಸ್ಥಲವನ್ನು ಸಮಾಪನ ಗೊಳಿಸುತ್ತ ಈ ಸ್ಥಲದ ಶಿವಯೋಗಿಯಿಂದ ಎಲ್ಲ ಕ್ರಿಯೆಗಳು ಆಕಾಶದಲ್ಲಿ ತೋರುವ ಗಂಧರ್ವ ನಗರದಂತೆ ಇರುತ್ತವೆ ಎಂಬುದಾಗಿ ತಿಳಿಸಲೋಸುಗ–

ಪರಾತ್ಮನಿ ಕ್ರಿಯಾ ಸರ್ವಾ ಗಂಧರ್ವನಗರೀ ಮುಖಾ ।
ಪ್ರಕಾಶತ ಇತಿ ಪ್ರೋಕ್ತಂ ಕ್ರಿಯಾಯಾಸ್ತುಪ್ರಕಾಶನಮ್ ॥

(ಸಿ. ಶಿ. ೧೯–೮೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಪರಶಿವಾನುಸಂಧಾನದಲ್ಲಿ ಆಸಕ್ತನಾದ ಶಿವಯೋಗಿಯಿಂದ ಧ್ಯಾನವನ್ನುಳಿದು ಸಂಭವಿಸಿದ ಎಲ್ಲ ಕ್ರಿಯೆಗಳು ಆಕಾಶದಲ್ಲಿ ತೋರುವ ಗಂಧರ್ವ ನಗರದಂತೆ ಅಸ್ಥಿರಗಳಲ್ಲಿ ನಿಷ್ಫಲಗಳೂ ಆಗಿರುತ್ತವೆ. ವರ್ಷಾ ಋತುವಿನಲ್ಲಿ ಆಕಾಶದಲ್ಲಿ ತೋರುವ ಮೋಡಗಳು ವಾಯುವಿನ ಪ್ರತಾಡನೆಯಿಂದ ಕ್ಷಣಕ್ಷಣಕ್ಕೆ ಒಂದೊಂದು ರೂಪವನ್ನು ತಾಳುತ್ತಿರುತ್ತದೆ. ಅದು ನೋಡುತ್ತಿದ್ದಂತೆ ಉತ್ಪನ್ನ ವಾಗಿ ಮರುಕ್ಷಣದಲ್ಲಿ ಇಲ್ಲವಾಗಿ ಹೋಗುತ್ತದೆ. ಅದರಂತೆ ಶಿವಯೋಗಿಯ ಇಂದ್ರಿಯ ಸಂಬಂಧವಾದ ವ್ಯವಹಾರವು ಸಹ ಗಂಧರ್ವನಗರದಂತೆ ಅಸ್ಥಿರವೂ, ಅಪ್ರಯೋಜನವೂ ಆಗಿರುತ್ತವೆಂಬುದಾಗಿ ತಿಳಿದುಕೊಳ್ಳಬೇಕು. ಅವನ ಐಂದ್ರಿಯಿಕ ಕ್ರಿಯೆಗಳು ಮಿಥ್ಯಾ ರೂಪವಾಗಿದ್ದರೂ, ಆತ್ಮಾನುಸಂಧಾನರೂಪವಾದ ಕ್ರಿಯೆಯೊಂದೇ ಅವನ ನಿಜವಾದ ಕ್ರಿಯೆಯಾಗಿರುತ್ತದೆ. ಆ ಕ್ರಿಯೆಯೊಂದನ್ನೇ ಮುಖ್ಯವನ್ನಾಗಿ ಪ್ರತಿಪಾದಿಸುವ ಸ್ಥಲವೇ ಕ್ರಿಯಾಪ್ರಕಾಶಸ್ಥಲವು.

ಜಿಜ್ಞಾಸುಗಳಾದ ಶ್ರೋತೃಗಳೇ, ಈ ಕ್ರಿಯಾಪ್ರಕಾಶಸ್ಥಲದಲ್ಲಿ ತಿಳಿಸಿರುವ ಸರ್ವ ವಿಷಯಗಳನ್ನು ಸರಿಯಾಗಿ ತಿಳಿದು ಈ ಶಿವಯೋಗಿಯಂತೆ ನೀವೂ ಸಹ ಇಂದ್ರಿಯ ಹಾಗೂ ವಿಷಯಗಳ ವ್ಯವಹಾರದಿಂದ ಮೇಲೆದ್ದು ಮನಸ್ಸನ್ನು ಆತ್ಮ–ಪರಮಾತ್ಮರ ಅಭೇದ ಚಿಂತನೆಯಲ್ಲಿ ತೊಡಗಿಸಿ, ಅಲ್ಲಿ ದೊರೆಯುವ ಪರಮಾನಂದವನ್ನು ಅನುಭವಿಸುವವರಾಗಿರಿ ಎಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೮ ನವ್ಹೆಂಬರ್, ೯೪
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

## ಭಾವಪ್ರಕಾಶಸ್ಥಲ

ಧರ್ಮ-ದರ್ಶನಾಸಕ್ತ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮನಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ದಿವ್ಯಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಶರಣಸ್ಥಲದ ಬಗ್ಗೆ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಇದರ ಅವಾಂತರ ಸ್ಥಲವಾದ ಕ್ರಿಯಾಪ್ರಕಾಶ ಸ್ಥಲದ ಸೂಕ್ಷ್ಮ ವಿಚಾರಗಳ ಬಗ್ಗೆ ನೀವೆಲ್ಲ ತಿಳಿದುಕೊಂಡಿದ್ದೀರಿ. ಸದ್ಯಃ ಕ್ರಮಪ್ರಾಪ್ತವಾದ ಸ್ಥಲವೇ ಭಾವಪ್ರಕಾಶ ಸ್ಥಲವು. ಕ್ರಿಯಾಪ್ರಕಾಶ ಸಂಪನ್ನನಾದ ಶಿವಯೋಗಿಯ ಭಾವನೆಯಲ್ಲಿ ಶಿವನೊಬ್ಬನೇ ಪ್ರಕಾಶಮಾನನಾಗಿದ್ದು ಉಳಿದ ಕಾಮಕ್ರೋಧಾದಿ ಭಾವನೆಗಳೆಲ್ಲ ಅಡಗಿಹೋದ ಸ್ಥಿತಿಯೇ ಭಾವಪ್ರಕಾಶವು. ಅದನ್ನು ಪ್ರತಿಪಾದಿಸುವ ಸ್ಥಲವೇ ಭಾವಪ್ರಕಾಶಸ್ಥಲವು. ಮನುಷ್ಯನು ಯಾವುದೇ ಕ್ರಿಯೆಯನ್ನು ಮಾಡುವಾಗ ಅಲ್ಲಿ ಭಾವನೆಯು ನಿತಾಂತವಾಗಿ ಅವಶ್ಯಕವಾಗಿರುತ್ತದೆ. ಭಾವನೆಯಿಲ್ಲದೆ ಮಾಡಿದ ಕ್ರಿಯೆಯು ಫಲಪ್ರದವಾಗದು. ಕೆನೆ ಯಿಲ್ಲದ ಮೊಸರನ್ನು ಕಡೆದರೆ ಅದರ ಮುಂದಿನ ಪ್ರಯೋಜನಗಳಾದ ಬೆಣ್ಣೆ, ತುಪ್ಪ ಮೊದಲಾದವುಗಳು ದೊರೆಯದಿರುವಂತೆ ಭಾವಹೀನವಾದ ಕ್ರಿಯೆಗೂ ಸಹ ಫಲಶ್ರುತಿ ಯಿರುವುದಿಲ್ಲ. ಕ್ರಿಯೆಯನ್ನೇ ಮಾಡಲಿ ಅಥವಾ ಜ್ಞಾನವನ್ನೇ ಸಂಪಾದಿಸಲಿ, ಇವೆರಡಕ್ಕೂ ಭಾವನೆಯು ಬೇಕೇ ಬೇಕಾಗುವುದು. ಇವೆರಡನ್ನೂ ಸಫಲಗೊಳಿಸುವಂಥಾದ್ದೆ ಭಾವನೆಯು. ಮನುಷ್ಯನ ನೋಟ, ಕೃತಿ ಹಾಗೂ ಆಕೃತಿಗಳಿಂದ ಅವನ ಭಾವನೆಯು ವ್ಯಕ್ತವಾಗುತ್ತಿರುತ್ತದೆ. ಒಂದು ಹಣ್ಣು ಪಕ್ವವಾಯಿತೆಂದರೆ ಅದರ ಸುಗಂಧವು ಅಭಿವ್ಯಕ್ತ ವಾಗುವಂತೆ, ಕ್ರಿಯಾಪ್ರಕಾಶ ಸಂಪನ್ನನಾದ ಸಾಧಕನು ಕೇವಲ ಶಿವಭಾವನೆಯಿಂದ ಕೂಡಿಕೊಂಡಾಗ ಅವನ ಆ ಭಾವನೆಯ ಚಿಹ್ನಗಳು ಅವನ ಅಂಗ ಪ್ರತ್ಯಂಗಗಳ ಮೂಲಕ ಹೊರಸೂಸುತ್ತಲಿರುತ್ತವೆ. ಹೀಗೆ ಆ ಶಿವಯೋಗಿಯ ಶಿವಭಾವನೆಯನ್ನು ಪ್ರಕಾಶಪಡಿಸುವ ಸ್ಥಲವೇ ಭಾವಪ್ರಕಾಶಸ್ಥಲವು. ಭಾವನಿಷ್ಪತ್ತಿ ಸ್ಥಲದಲ್ಲಿ ಉಳಿದೆಲ್ಲ ಭಾವನೆಗಳು ಅಡಗಿ, ಶಿವಭಾವನೆಯೊಂದೇ ಉಳಿದು, ಅದು ಪರಿಪಕ್ವತೆಯನ್ನು ಹೊಂದುತ್ತದೆ ಎಂದು ಪ್ರತಿ ಪಾದಿಸಲಾಗಿದೆ. ಆ ಪರಿಪಕ್ವಭಾವನೆಯ ಅಭಿವ್ಯಕ್ತಿಯೇ ಭಾವಪ್ರಕಾಶವು. ಅಂತೆಯೇ ಉತ್ಕೃಷ್ಟ ಜ್ಞಾನಿಗಳ ಮುಖ ಮಂಡಲದಿಂದಲೂ ಅವರ ಬ್ರಹ್ಮನಿಷ್ಠತೆಯು ಅಭಿವ್ಯಕ್ತ ವಾಗುವುದು. ಇಂತಹ ಭಾವಪ್ರಕಾಶಸ್ಥಲದ ಬಗ್ಗೆ ಅಪ್ಪಣೆ ಕೊಡಿಸುವುದಕ್ಕಾಗಿ ಪೂಜ್ಯಪಾದರು–

ತರಂಗಾದ್ಯಾ ಯಥಾ ಸಿಂಧೌ ನ ಭಿದ್ಯಂತೇ ತಥಾಽತ್ಮನಿ ।
ಭಾವ ಬುದ್ಧ್ಯಾದಯಃ ಸರ್ವೇ ಯತ್ ತದ್ ಭಾವಪ್ರಕಾಶನಮ್ ॥

(ಸಿ. ಶಿ. ೧೯–೮೩)

ಹೀಗೆ ಪ್ರಾರಂಭಿಸಿದ್ದಾರೆ. ಸಮುದ್ರದಲ್ಲಿ ತರಂಗಗಳು ಮತ್ತು ನೀರಿನ ಗುರುಳೆಗಳು ಮುಂತಾದವುಗಳು ಉತ್ಪನ್ನವಾಗಿ ತೋರುತ್ತಿರುತ್ತವೆ. ಆದರೂ ಅವುಗಳು ಸಮುದ್ರ ಕ್ಕಿಂತಲೂ ಭಿನ್ನವಾದವುಗಳಲ್ಲ. ಅದರಂತೆ ಶಿವಯೋಗಿಯ ಮನಸ್ಸಿನಲ್ಲಿ ಉತ್ಪನ್ನ ವಾಗಿರುವ ಶಿವಭಾವನೆಯೂ ಸಹ ಶಿವನಿಗಿಂತಲೂ ಭಿನ್ನವಾದವುಗಳಾಗಿರುವುದಿಲ್ಲ. ಸಂಪೂರ್ಣವಾಗಿ ಶಿವಮಯವಾದ ಮನೋವೃತ್ತಿಗೇನೆ ಭಾವನೆಯೆಂದು ಕರೆದಿದ್ದಾರೆ. ಸಮುದ್ರದ ತರಂಗದಲ್ಲಿ ಸಮುದ್ರ ಜಲವೇ ಇರುವಂತೆ ಶಿವಯೋಗಿಯ ಆ ಭಾವನೆಯಲ್ಲಿ ಶಿವನೇ ಇರುತ್ತಾನೆ. ಅದರ ಹೊರತಾಗಿ ಬೇರಾವುದೂ ಇರುವುದೇ ಇಲ್ಲ. ಅವನ ಆ ಭಾವನೆಗೆ ಶಿವನೇ ಆಧಾರವಾಗಿರುತ್ತಾನೆ ಮತ್ತು ಆ ಭಾವನೆಯಿಂದ ಶಿವನೇ ಪ್ರಕಾಶಕ ನಾಗುತ್ತಾನೆ. ಅರ್ಥಾತ್ ಅಭಿವ್ಯಕ್ತನಾಗುತ್ತಿರುತ್ತಾನೆ ಇದುವೆ ಭಾವಪ್ರಕಾಶವು.

ಪೂಜ್ಯಪಾದರು ಈ ಶಿವಭಾವನೆಯ ಸ್ವರೂಪವನ್ನೇ ತಿಳಿಯಪಡಿಸುತ್ತ ಪುನಃ–

ಶಿವ ಏವ ಜಗತ್‌ಸರ್ವಂ ಶಿವ ಏವಾಽಹಮಿತ್ಯಪಿ ।
ಭಾವಯನ್ ಪರಮೋಯೋಗೀ ಭವದೋಷೈರ್ನ ಬಾಧ್ಯತೇ ॥

ಶಿವಭಾವೇ ಸ್ಥಿರೇ ಜಾತೇ ನಿರ್ಲೇಪಸ್ಯ ಮಹಾತ್ಮನಃ
ಯೇ ಯೇ ಭಾವಾಃ ಸಮುತ್ಪನ್ನಾಸ್ತೇತೇ ಶಿವಮಯಾಃ ಸ್ಮೃತಾಃ ॥

(ಸಿ. ಶಿ. ೧೯; ೮೪–೮೫)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಈ ಜಗತ್ತೆಲ್ಲವೂ ಶಿವರೂಪವಾಗಿದೆ. ನಾನೂ ಸಹ ಶಿವ ಸ್ವರೂಪನೇ ಆಗಿದ್ದೇನೆ ಎಂಬುದಾಗಿ ಭಾವಿಸುವ ಶಿವಯೋಗಿಯು ಭವದೋಷಗಳಿಂದ ಬದ್ಧಿತನಾಗುವುದಿಲ್ಲ. ಶಿವಭಾವನೆಯು ಸ್ಥಿರಗೊಂಡ ಮೇಲೆ ವಿಷಯಗಳಿಂದ ನಿರ್ಲಿಪ್ತ ನಾದ ಶಿವಯೋಗಿಯ ಮನಸ್ಸಿನಲ್ಲಿ ಯಾವ ಯಾವ ಭಾವನೆಗಳು ಉತ್ಪನ್ನವಾಗುತ್ತವೆಯೋ ಅವೆಲ್ಲವುಗಳು ಶಿವಮಯಗಳೇ ಆಗಿರುತ್ತವೆ.

ಭಾವಪ್ರಕಾಶಸ್ಥಲದ ಶಿವಯೋಗಿಯು ಈ ಜಗತ್ತನ್ನು ಹಾಗೂ ತನ್ನನ್ನು ಶಿವರೂಪ ವಾಗಿಯೇ ಭಾವಿಸುತ್ತಿರುತ್ತಾನೆ. ಅಂತೆಯೇ ಅವನ ಭಾವನೆಯು ಪರಿಶುದ್ಧವಾಗಿರುತ್ತದೆ. ಅವನ ಮನಸ್ಸಿನಲ್ಲಿ ಸಾಂಸಾರಿಕ ವಿಷಯಗಳೇ ಬಾರದಿರೋಣದರಿಂದ ವಿಷಯ ದೋಷ ಗಳಿಂದ ಅದೆಂದೂ ದುಷ್ಟವಾಗದು. ಭಾವನೆಯು ಒಳ್ಳೆಯದಾಗಿರಲು ಅಥವಾ ಅದು ಕೆಟ್ಟದಾಗಿರಲು, ಅದಕ್ಕೆ ಆಲಂಬನವಾದ ವಿಷಯವೇ ಕಾರಣವಾಗಿರುತ್ತದೆ. ಸಾಂಸಾರಿಕ ಜೀವಿಗಳ ಭಾವನೆಯಲ್ಲಿ ಕಾಮಕ್ರೋಧಾದಿ ಅರಿಷಡ್ ವರ್ಗಗಳೇ ತುಂಬಿಕೊಂಡಿ ರೋಣದರಿಂದ ಅವರ ಭಾವನೆಗಳೆಲ್ಲ ಪ್ರದೂಷಿತಗಳೆಂದು ಕರೆಯಲ್ಪಡುತ್ತವೆ. ಕಾಮ ಕ್ರೋಧಾದಿಗಳು ಸ್ವತಃ ದೂಷಿತಗಳಾಗಿರೋಣದರಿಂದ ಅವು ಯಾವುದನ್ನು ಸ್ಪರ್ಶಿಸು ತ್ತವೆಯೋ ಅವು ಸಹ ದೂಷಿತಗಳಾಗುತ್ತವೆ. ಇವುಗಳಿಗೆ ತಮ್ಮ ಭಾವನೆಯಲ್ಲಿ ಆಶ್ರಯ

ಕೊಟ್ಟಿರುವ ಅದೆಷ್ಟೋ ಜೀವಿಗಳು ಈ ಸಂಸಾರದ ಹುಟ್ಟು ಸಾವುಗಳೆಂಬ ಚಕ್ರದಲ್ಲಿ ಸಿಲುಕಿ ಬಳಲುತ್ತಲಿದ್ದಾರೆ. ಇವುಗಳೊಮ್ಮೆ ಭಾವನೆಯಲ್ಲಿ ಸೇರಿಕೊಂಡವೆಂದರೆ ಬೇಗನೆ ಹೊರಬರಲಾರವು. ಒಳಗೆ ವಾಸಿಸಿಕೊಂಡಿರುವ ಇವುಗಳು ಆ ವ್ಯಕ್ತಿಯ ಅಂತಃಕರಣದಲ್ಲಿ ಜ್ಞಾನೋತ್ಪತ್ತಿಗೆ ಅವಕಾಶವನ್ನೇ ಮಾಡಿಕೊಡುವುದಿಲ್ಲ. ಇವುಗಳನ್ನು ಮನದಿಂದ ಹೊರಹಾಕಿದಾಗಲೇ ನಿರ್ಮಲ ಶಿವಜ್ಞಾನವನ್ನು ಪಡೆಯಬಹುದು. ಅಂತೆಯೇ ಅಕ್ಕಮಹಾದೇವಿಯು ಶಿವಪಥದಲ್ಲಿ ಹೊರಟಾಗ ತನ್ನ ಮಾರ್ಗದಲ್ಲಿ ಅಡ್ಡ ಬಂದ ಅರಿಷಡ್ವರ್ಗಗಳನ್ನು ''ಕಾಮವೇ ನೀನು ನಿಲ್ಲು, ನಿಲ್ಲು, ಕ್ರೋಧವೇ ನೀನು ನಿಲ್ಲು ನಿಲ್ಲು, ಲೋಭವೇ, ನೀನು ನಿಲ್ಲು ನಿಲ್ಲು ಮೋಹವೇ, ನೀನು ನಿಲ್ಲು, ನಿಲ್ಲು ಮದವೇ ನೀನು ನಿಲ್ಲು ನಿಲ್ಲು, ಮತ್ಸರವೇ ನೀನು ನಿಲ್ಲು ನಿಲ್ಲು ಆನು ಚೆನ್ನಮಲ್ಲಿ ಕಾರ್ಜುನನ ಅವಸರದ ಓಲೆ ಬಯಸುತ್ತಿರುವೆ. ಸಚರಾಚರವೇ ನೀನು ನಿಲ್ಲು ನಿಲ್ಲು'' ಹೀಗೆ ದೂರು ಮಾಡಿ ಭಾವನೆಯನ್ನು ದೂಷಿಸಿಕೊಳ್ಳದೆ ಅದನ್ನು ಪರಿಶುದ್ಧವಾಗಿಟ್ಟುಕೊಂಡು ಶಿವಭಾವನೆಯ ಮೂಲಕ ಶಿವಸಾಯುಜ್ಯವನ್ನು ಪಡೆದುಕೊಂಡಳು.

ಇದೇ ಪ್ರಕಾರವಾಗಿ ಶ್ರೀಮನ್ನಿಜಗುಣ ಶಿವಯೋಗಿಗಳು ಸಹ–

''ಅನಿಮಿತ್ತವರಿಗಳೆನಿಪ ಕಾಮಾದಿಗಳಿಗೆ
ತನುವನೇಕವನಿತ್ತೆ ಭವಭವಂಗಳಲ್ಲಿ
ನಿನಗೊಂದು ದೇಹವಿದನು ತೊಟ್ಟು ತಪವಾಂತು
ಘನಶಂಭುಲಿಂಗವಾಗಿರಲೊಲ್ಲೆ ಮನುಜ''

ಎಂಬ ಈ ಪದ್ಯದಲ್ಲಿ ಕಾಮಕ್ರೋಧಾದಿಗಳು ನಿಮಿತ್ತವಲ್ಲದ ವೈರಿಗಳು, ಅವುಗಳಿಗಾಗಿ ಜೀವಾತ್ಮನು ಅನೇಕ ಶರೀರಗಳನ್ನು ಹಾಳುಮಾಡಿಕೊಂಡಿದ್ದಾನೆ. ಈ ಮನುಷ್ಯ ದೇಹದಲ್ಲಿ ಬಂದ ಬಳಿಕ ಆ ಶತ್ರುಗಳಿಂದ ದೂರವಿದ್ದು ಶಿವಧ್ಯಾನಾದಿಗಳಲ್ಲಿ ಆಸಕ್ತನಾಗಿ ಶಿವ ಸ್ವರೂಪವನ್ನು ಪಡೆಯಬೇಕೆಂಬುದಾಗಿ ಉಪದೇಶಿಸಿದ್ದಾರೆ.

ಅನೇಕ ದಿನಗಳಿಂದ ಮದಿರಾಪಾನವನ್ನು ಮಾಡುತ್ತ ಅದರ ವ್ಯಸನಾಧೀನನಾದ ವ್ಯಕ್ತಿಯು ಅದು ತನಗೆ ಹಾನಿಕಾರಕವೆಂದು ತಿಳಿದಿದ್ದರೂ, ಆ ಮದ್ಯಪಾನವನ್ನು ಬಿಡಲು ಅವನು ಅಸಮರ್ಥನಾಗಿರುವಂತೆ, ಈ ಕಾಮ ಕ್ರೋಧಾದಿಗಳ ದುರಭ್ಯಾಸದಿಂದ ಪುನಃ ಪುನಃ ಅದನ್ನೇ ಅಪೇಕ್ಷಿಸುತ್ತಿರುವ ಮನಸ್ಸು ಅವುಗಳನ್ನು ಬಿಡಲು ಬೇಗನೆ ಸಿದ್ಧವಾಗುವು ದಿಲ್ಲ. ಮಲಿನ ವಸ್ತ್ರವನ್ನು ಧರಿಸಿದ ಮನುಷ್ಯನು ಮಲಿನವಾದ ಸ್ಥಾನದಲ್ಲಿ ಕೂಡ್ರಲು ಹಿಂದು ಮುಂದು ನೋಡುವುದಿಲ್ಲ. ಆದರೆ ಸ್ವಚ್ಛ ವಸ್ತ್ರವನ್ನು ಧರಿಸಿದ ವ್ಯಕ್ತಿಯು ಸಹಸಾ ಆ ಮಲಿನ ಸ್ಥಾನದಲ್ಲಿ ಕೂಡ್ರಲು ಅಪೇಕ್ಷೆ ಪಡುವುದಿಲ್ಲ. ಅದರಂತೆ ಮನಸ್ಸು ಮಲಿನ ವಾಗಿದ್ದರೆ ಅದಕ್ಕೆ ಕಾಮಕ್ರೋಧಾದಿಗಳು ವರ್ಜ್ಯವೆನಿಸುವುದಿಲ್ಲ. ಅದೇ ಮನಸ್ಸು ಪರಿಶುದ್ಧವಾದ ಶಿವಭಾವನೆಯಿಂದ ಕೂಡಿಕೊಂಡಿದ್ದರೆ ಅದಕ್ಕೆ ಈ ಕಾಮಕ್ರೋಧಾದಿ ಗಳು ಬೇಕೆನಿಸಲಾರವು. ಈ ಭಾವಪ್ರಕಾಶ ಸಂಪನ್ನನಾದ ಶಿವಯೋಗಿಯು ಸದಾ ಶಿವ ಭಾವನೆಯಿಂದ ಕೂಡಿದವನಾಗಿರೋಣದರಿಂದ ಅವನ ಭಾವನೆಯು ಭಾವದೋಷ ಗಳಿಂದ ಎಂದೂ ಬಧ್ಧಿತವಾಗಲಾರದು. ಹೀಗೆ ಶಿವಭಾವನೆಯು ಸ್ಥಿರಗೊಂಡಾಗ ಆ

ಶಿವಯೋಗಿಯು ನಿರ್ಲೇಪಾವಸ್ಥೆಯನ್ನು ಪಡೆಯುತ್ತಾನೆ. ಅಂದರೆ ಪದ್ಮ ಪತ್ರವು ನೀರಿನಲ್ಲಿದ್ದರೂ ನೀರನ್ನು ತನಗೆ ಅಂಟಿಸಿಕೊಳ್ಳದಂತೆ, ಅವನು ಜಗತ್ತಿನಲ್ಲಿದ್ದರೂ ಜಗತ್ತಿನ ಎಲ್ಲ ವ್ಯವಹಾರದಿಂದ ನಿರ್ಲಿಪ್ತನಾಗಿರುತ್ತಾನೆ. ಹೀಗೆ ನಿರ್ಲಿಪ್ತವಾದ ಅಂತಃಕರಣವುಳ್ಳ ಇವನ ಮನಸ್ಸಿನಲ್ಲಿ ಉತ್ಪನ್ನವಾಗುವ ಎಲ್ಲ ಭಾವನೆಗಳು ಶಿವಮಯಗಳೇ ಆಗಿರುತ್ತವೆ. ಅಂದರೆ ಈತನು ತನ್ನ ಒಳಹೊರಗೆಲ್ಲ ಶಿವನನ್ನೇ ಕಾಣುತ್ತಿರುತ್ತಾನೆಂಬ ತಾತ್ಪರ್ಯವು.

ಈ ಭಾವಪ್ರಕಾಶ ಸಂಪನ್ನನಾದ ಶಿವಯೋಗಿಯ ಮನಸ್ಸಿನಲ್ಲಿ ಪುನಃ ಎಂಥೆಂಥ ಭಾವನೆಗಳು ಉದಿಸುವುವು ? ಎಂಬ ಜಿಜ್ಞಾಸೆಯುಂಟಾದಾಗ ಪೂಜ್ಯಪಾದರು ಅದಕ್ಕೆ ಸಮಾಧಾನರೂಪವಾಗಿ–

ಅದ್ವಿತೀಯಶಿವಾಕಾರಭಾವನಾಧ್ವಸ್ತಕರ್ಮಣಾ।
ನ ಕಿಂಚಿದ್ ಭಾವ್ಯತೇ ಸಾಕ್ಷಾತ್ ಶಿವಾದನ್ಯನ್ಮಹಾತ್ಮನಾ॥

ಗಲಿತಾಜ್ಞಾನಬಂಧಸ್ಯ ಕೇವಲಾತ್ಮಾನುಭಾವಿನಃ।
ಯತ್ರ ಯತ್ರೇಂದ್ರಿಯಾಸಕ್ತಿಸ್ತತ್ರ ತತ್ರ ಶಿವಾತ್ಮತಾ॥

(ಸಿ. ಶಿ. ೧೯; ೮೬–೮೭)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆ ಪರಶಿವಬ್ರಹ್ಮವು ಅದ್ವಿತೀಯವಾಗಿದೆ. ಅಂದರೆ ಇದಕ್ಕೆ ಸಮಾನವೂ ಮತ್ತು ಇದಕ್ಕಿಂತಲೂ ಶ್ರೇಷ್ಠವೂ ಆದುದು ಬೇರೊಂದು ಇರುವುದಿಲ್ಲ. ಇಂತಹ ಅದ್ವಿತೀಯ ಶಿವಸ್ವರೂಪವನ್ನು ತನ್ನ ಮನಸ್ಸಿನಲ್ಲಿ ಭಾವಿಸುತ್ತಿರುವ ಶಿವಯೋಗಿಯ ಎಲ್ಲ ಕರ್ಮಬಂಧನಗಳು ಕಳೆದು ಹೋಗುತ್ತವೆ. ಅಂತೆಯೇ ಹೀಗೆ ಶಿವಭಾವನೆಯಿಂದ ಕರ್ಮಗಳನ್ನು ಕಳೆದುಕೊಂಡ ಆ ಶಿವಯೋಗಿಯು ತನ್ನ ಮನಸ್ಸಿನಲ್ಲಿ ಶಿವನ ಹೊರತಾಗಿ ಬೇರಾವ ಭಾವನೆಯನ್ನೂ ಮಾಡಿಕೊಳ್ಳುವುದಿಲ್ಲ. ಅಜ್ಞಾನರೂಪಿ ಬಂಧನದಿಂದ ಮುಕ್ತನಾದ ಮತ್ತು ಕೇವಲ ಆತ್ಮಾನುಭಾವಿಯಾದ ಇವನ ಇಂದ್ರಿಯಗಳು ಎಲ್ಲೆಲ್ಲಿ ಆಸಕ್ತವಾಗುತ್ತವೆಯೋ ಅಲ್ಲಲ್ಲೆಲ್ಲ ಶಿವರೂಪವೇ ಅವನಿಗೆ ಗೋಚರವಾಗುತ್ತದೆ. ಸ್ವಸ್ವರೂಪವನ್ನು ತಿಳಿಯದಿರುವುದೇ ಅಜ್ಞಾನವು. ಅದು ಸ್ವರೂಪಜ್ಞಾನವಾದೊಡನೆ ಇಲ್ಲವಾಗುವುದು. ಹೀಗೆ ಸ್ವರೂಪಜ್ಞಾನ ಸಂಪನ್ನನಾದ ಶಿವಯೋಗಿಯ ದೃಷ್ಟಿಯೇ ಶಿವಮಯವಾದಾಗ ಜಗತ್ತೆಲ್ಲವೂ ಶಿವಮಯ ವಾಗಿಯೇ ತೋರುವುದು. ''ಯಥಾ ದೃಷ್ಟಿಃ ತಥಾ ಸೃಷ್ಟಿಃ''. ಎಂಬ ಉಕ್ತಿಯಂತೆ ನಮ್ಮ ದೃಷ್ಟಿಯಿದ್ದಂತೆಯೇ ಸೃಷ್ಟಿಯು ತೋರುವುದು. ಶಿವಯೋಗಿಯ ದೃಷ್ಟಿಯೇ ಶಿವಮಯ ವಾಗಿರೋಣದರಿಂದ ಅವನಿಗೆ ಸೃಷ್ಟಿಯು ಶಿವಮಯವಾಗಿ ತೋರುತ್ತದೆ.

ಒಂದು ದೇಶದ ರಾಜನು ಬೇಟೆಯಾಡುವುದಕ್ಕೋಸುಗ ಒಮ್ಮೆ ಅಡವಿಗೆ ಹೋಗಿದ್ದನು. ಅಲ್ಲಿ ಕುದುರೆಯಿಂದಿಳಿದು ಬರಿಗಾಲಿನಿಂದ ತಿರುಗಾಡುವಾಗ ಅರಣ್ಯದ ಮುಳ್ಳೊಂದು ರಾಜನ ಕಾಲಿಗೆ ನಟ್ಟು ರಕ್ತಸ್ರಾವವಾಯಿತು ಹಾಗೂ ರಾಜನಿಗೆ ಬಹು ವೇದನೆಯು ಆಗತೊಡಗಿತು. ಅಲ್ಲಿಂದ ಅರಮನೆಗೆ ಮರಳಿ ಬಂದ ರಾಜನು ತನ್ನ ರಾಜ್ಯದ ಮಂತ್ರಿವರ್ಯನನ್ನು ಬರಮಾಡಿಕೊಂಡು ತನಗಾದ ಪ್ರಸಂಗವನ್ನು ತಿಳಿಸಿ, ನಾನು ಎಲ್ಲಿ ತಿರುಗಾಡಿದರೂ ನನ್ನ ಕಾಲಿಗೆ ಮುಳ್ಳು ನಡದ ಹಾಗೆ ಏನಾದರೊಂದು ಶಾಶ್ವತವಾದ

ಉಪಾಯವನ್ನು ಆಲೋಚಿಸಬೇಕಾಗಿ ತಿಳಿಸಿದನು. ಆಗ ದರ್ಬಾರದ ಪಂಡಿತರೆಲ್ಲ ಪರಸ್ಪರ ಚರ್ಚಿಸಿ ನಿರ್ಣಯಿಸಿದ್ದೇನೆಂದರೆ ರಾಜನು ತಿರುಗಾಡುವ ಭೂಮಿಗೆಲ್ಲ ಚರ್ಮದ ಹೊದಿಕೆಯನ್ನು ಹಾಸಬೇಕು. ಪಂಡಿತರ ಈ ನಿರ್ಣಯದ ಪ್ರಕಾರ ರಾಜನು ಅದನ್ನು ಕಾರ್ಯಗತಗೊಳಿಸಲಿಕ್ಕೆ ಮಂತ್ರಿಗೆ ಆಜ್ಞಾಪಿಸಿದನು. ಮಂತ್ರಿಯೂ ಸಹ ಅನೇಕ ಜನ ಬೇಟೆಗಾರರನ್ನು ಕರೆದು ಅಡವಿಯ ಪ್ರಾಣಿಗಳನ್ನು ಕೊಂದು ಅವುಗಳ ಚರ್ಮವನ್ನು ಸುಲಿದು ಭೂಮಿಗೆಲ್ಲ ಹೊದಿಕೆ ಮಾಡುವಂತೆ ಆಜ್ಞಾಪಿಸಿದನು. ಮಂತ್ರಿಯ ಆದೇಶದಂತೆ ಬೇಟೆಗಾರರು ಪ್ರಾಣಿಗಳನ್ನು ಕೊಂದು ಅವುಗಳ ಚರ್ಮವನ್ನು ಸುಲಿದು ಭೂಮಿಗೆ ಹಾಸುವ ಕಾರ್ಯದಲ್ಲಿ ತೊಡಗಿದರು. ಅದೆಷ್ಟು ಪ್ರಾಣಿಗಳನ್ನು ಕೊಂದರೂ ಸಹ ಕಾರ್ಯದಲ್ಲಿ ಸಫಲತೆಯಾಗುವುದೆಂಬ ಭರವಸೆ ಅವರಿಗಾಗಲಿಲ್ಲ. ಅವರೆಲ್ಲ ಚಿಂತಾಕ್ರಾಂತರಾಗಿ ಕುಳಿತಾಗ ಎಲ್ಲಿಂದಲೋ ಒಬ್ಬ ಸಂತನು ದಾರಿ ಹಿಡಿದು ಹೋಗುವಾಗ ಇವರು ಮಾಡುವ ಕಾರ್ಯವನ್ನು ನೋಡಿ ಮತ್ತು ಇವರಿಗೆ ಆವರಿಸಿದ ಚಿಂತೆಯನ್ನು ಅನುಲಕ್ಷಿಸಿ ಅವರ ಬಳಿ ಹೋಗಿ ಪ್ರಸಂಗವನ್ನು ಕುರಿತು ವಿಚಾರಿಸಿದನು. ಆಗ ಬೇಟೆಗಾರರು ಎಲ್ಲ ವಿಷಯವನ್ನು ಆ ಸಂತನಿಗೆ ಅರಿಕೆ ಮಾಡಿಕೊಂಡರು. ಆಗ ಆ ಸಂತನು ಅವರ ಆ ಕಾರ್ಯವನ್ನು ತಡೆಹಿಡಿದು, ರಾಜರಲ್ಲಿಗೆ ಬಂದು ರಾಜನ ಪಾದದ ಅಳತೆಯನ್ನು ಒಬ್ಬ ಚರ್ಮಕಾರನಿಂದ ಮಾಡಿಸಿ ಆ ಅಳತೆಗೆ ತಕ್ಕಂತೆ ಚರ್ಮದ ಎರಡು ಪಾದರಕ್ಷೆಗಳನ್ನು ರಾಜನಿಗೆ ಕೊಟ್ಟು ಹೇಳಿದ್ದೇನೆಂದರೆ ''ಎಲೈ ರಾಜನೇ ! ನೀನು ಈ ಪಾದರಕ್ಷೆಗಳನ್ನು ಹಾಕಿಕೊಂಡು ಎಲ್ಲಿಯೇ ಹೋದರೂ ನಿನ್ನ ಕಾಲುಗಳಿಗೆ ಕಲ್ಲು ಮುಳ್ಳುಗಳು ನಡಲಾರವು. ಹೀಗಿರುವಾಗ ನಿರಪರಾಧಿಗಳಾದ ಮೂಕ ಪ್ರಾಣಿಗಳನ್ನು ಕೊಲ್ಲುವುದು ಸರಿಯೇ ?'' ಮಹಾತ್ಮರ ಈ ನುಡಿಯನ್ನು ಕೇಳಿ ತನ್ನ ಅವಿವೇಕಪೂರ್ಣವಾದ ನಡತೆಗೆ ನಾಚಿಕೆಪಟ್ಟು, ಪ್ರಾಣಹಿಂಸಾ ರೂಪವಾದ ಕುಕೃತ್ಯವನ್ನು ನಿಲ್ಲಿಸಿದನು. ಹಾಗೂ ಆ ಮಹಾತ್ಮರಿಂದ ದೊರೆತ ಪಾದರಕ್ಷೆಗಳನ್ನು ಪಾದದಲ್ಲಿ ಹಾಕಿಕೊಂಡು ಎಲ್ಲಿ ನಡೆದಾಡಿದರೂ ತನಗೆ ಯಾವ ನೋವು ಆಗದಿರುವುದನ್ನು ಅನುಭವಿಸಿ ಅತ್ಯಂತ ಸುಖಿಯಾದನು. ಕಾಲಿಗೆ ಚರ್ಮದ ಹೊದಿಕೆಯನ್ನು ಹಾಕಿದರೆ ಇಡೀ ಭೂಮಂಡಲಕ್ಕೇನೇ ಹೊದಿಕೆ ಹಾಕಿದಂತೆ ಹೇಗೆ ಆಗುವುದೋ, ಅದರಂತೆ ಜ್ಞಾನಿಯು ತನ್ನ ದೃಷ್ಟಿಯನ್ನು ಶಿವಮಯವನ್ನಾಗಿ ಮಾಡಿಕೊಂಡಾಗ ಇಡೀ ಸೃಷ್ಟಿಯೇ ಶಿವಮಯವಾಗಿ ತೋರುವುದು.

ಯಾರಲ್ಲಿ ರಾಗದ್ವೇಷಾದಿ ಭಾವನೆಗಳು ಇಲ್ಲದಾಗುವವೋ ಅವರಿಗೇನೇ ಶಿವಭಾವನೆಯು ಉಂಟಾಗುವುದು ಎಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು ಪುನಃ–

ರಾಗದ್ವೇಷಾದಯೋ ಭಾವಾಃ ಸಂಸಾರಕ್ಲೇಶಕಾರಣಮ್ ।
ತೇಷಾಮುಪರಮೋ ಯತ್ರ ತತ್ರ ಭಾವಃ ಶಿವಾತ್ಮಕಃ ॥

(ಸಿ. ಶಿ. ೧೯–೮೮)

ಹೀಗೆ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸಂಸಾರದಲ್ಲಿಯ ದುಃಖಕ್ಕೆ ರಾಗದ್ವೇಷಾದಿ ಭಾವನೆಗಳೇ ಕಾರಣಗಳಾಗಿರುತ್ತವೆ. ಯಾರ ಹೃದಯದಿಂದ ಈ

ರಾಗದ್ವೇಷಾದಿಗಳು ದೂರಾಗಿರುವುವೋ ಅಂತಹ ಶಿವಯೋಗಿಗಳಿಗೆ ಮಾತ್ರ ಶಿವಭಾವನೆಯು ಉದಿಸುವುದು.

ಜಗತ್ತಿನಲ್ಲಿ ಜನ್ಮ ತಾಳಿದ ಪ್ರತಿಯೊಬ್ಬ ವ್ಯಕ್ತಿಯು ಒಂದಿಲ್ಲೊಂದು ಪ್ರಕಾರದ ದುಃಖವನ್ನು ಅನುಭವಿಸುತ್ತಲೇ ಇರುತ್ತಾನೆ. ದುಃಖಿಯಾಗಿರಬೇಕೆನ್ನುವ ಇಚ್ಛೆಯು ಯಾರಿಗೂ ಇರುವುದಿಲ್ಲ, ಆದರೂ ದುಃಖದ ಮೂಲಕಾರಣವನ್ನರಿಯದೇ ಇರೋಣದ ರಿಂದ ಎಲ್ಲರೂ ದುಃಖಿಗಳಾಗಿರುತ್ತಾರೆ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಂಸಾರದ ದುಃಖಕ್ಕೆ ರಾಗದ್ವೇಷಗಳೇ ಮೂಲ ಕಾರಣವೆಂಬುದಾಗಿ ಇಲ್ಲಿ ತಿಳಿಯಪಡಿಸಿ ದ್ದಾರೆ. ಈ ರಾಗದ್ವೇಷಗಳು ಅವಿದ್ಯಾದಿ ಪಂಚಕ್ಲೇಶಗಳಲ್ಲಿ ಪರಿಗಣಿಸಲ್ಪಟ್ಟಿರುತ್ತವೆ. ''ಕ್ಲಿಶ್ನಾತೀತಿ ಕ್ಲೇಶ'' ಎಂಬ ವ್ಯುತ್ಪತ್ತಿಯ ಮೇರೆಗೆ ಯಾವುದರಿಂದ ಜೀವಿಗಳಿಗೆ ದುಃಖ ವುಂಟಾಗುವುದೋ ಅದುವೇ ಕ್ಲೇಶವು. ಈ ರಾಗದ್ವೇಷಾದಿಗಳು ಮನುಷ್ಯನಿಗೆ ಒಂದಿ ಲ್ಲೊಂದು ಪ್ರಕಾರದ ದುಃಖವನ್ನು ಕೊಡುತ್ತಲೇ ಇರುತ್ತವೆ. ಜೀವಿಯು ಸಂಸಾರದಲ್ಲಿ ಹುಟ್ಟಿ ಬರಲು ಇವೇ ಮೂಲ ಕಾರಣಗಳು. ಜೀವಾತ್ಮನು ಜನ್ಮ ತಾಳುವಾಗ ಅಳುತ್ತಲೇ ಬರುತ್ತಾನೆ. ಅದರಂತೆ ಮರಣ ಹೊಂದುವಾಗಲೂ ಸಹ ಅಳುತ್ತಲೇ ಹೋಗುತ್ತಾನೆ. ಇದರಿಂದ ಜನ್ಮಮರಣಗಳೆರಡೂ ದುಃಖದಾಯಿಗಳೆಂದು ತಿಳಿದುಬರುತ್ತದೆ. ಅಂತೆಯೇ ಒಬ್ಬ ಸುಭಾಷಿತಕಾರನು–

ಜನ್ಮದುಃಖಂ ಜರಾದುಃಖಂ ಜಾಯಾದುಃಖಂ ಪುನಃ ಪುನಃ ।
ಸಂಸಾರಸಾಗರಂ ದುಃಖಂ ತಸ್ಮಾಜ್ಜಾಗ್ರುತ ಜಾಗ್ರುತ ॥

ಎಂಬುದಾಗಿ ಜೀವಿಗಳನ್ನು ಎಚ್ಚರಿಸಿದ್ದಾನೆ. ರಾಗದ್ವೇಷಾದಿಗಳು ಈ ಸಂಸಾರ ಕ್ಲೇಶಕ್ಕೆ ಕಾರಣೀಭೂತಗಳಾಗಿರೋಣದರಿಂದ ಅವುಗಳಿಂದ ದೂರಿರಲು ಪ್ರಯತ್ನಿಸಬೇಕು.

ರಾಗ ಮತ್ತು ದ್ವೇಷಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಮೊದಲು ರಾಗದ ಪ್ರವೇಶವಾದರೆ ನಂತರ ದ್ವೇಷದ ಪ್ರವೇಶವು ಆಗಿಯೇ ಆಗುತ್ತದೆ. ವಸ್ತುತಃ ಒಂದೇ ಭಾವನೆಯೇ ಮೊದಲು ರಾಗವಾಗಿ ನಂತರ ಪ್ರಸಂಗಾನುಸಾರವಾಗಿ ಅದುವೇ ದ್ವೇಷರೂಪವನ್ನು ತಾಳುತ್ತದೆ. ಗೋಕುಲದಲ್ಲಿ ಇರುವ ಬಾಲಕೃಷ್ಣನನ್ನು ಕೊಲ್ಲುವುದಕ್ಕಾಗಿ ಕಂಸನು ಪೂತನಾ ಎಂಬ ರಾಕ್ಷಸಿಯನ್ನು ಗೋಕುಲಕ್ಕೆ ಕಳುಹಿಸಿಕೊಟ್ಟನು. ಆ ರಾಕ್ಷಸಿಯು ಅತಿ ಸುಂದರವಾದ ರೂಪವನ್ನು ಧರಿಸಿ ಬಾಲಕೃಷ್ಣನಿಗೆ ಮೊಲೆಯುಣಿಸಿ ಕೊಲ್ಲುವ ನೆಪ ದಿಂದ ಹಾಲು ಕುಡಿಸತೊಡಗಿದಳು. ಯಾವಾಗ ಬಾಲಕೃಷ್ಣನು ಹಾಲು ಕುಡಿಯುವ ಜೊತೆಗೆ ಅವಳ ಪ್ರಾಣವನ್ನೇ ಹೀರತೊಡಗಿದನೋ ಆಗ ಅವಳು ತನ್ನ ರಾಕ್ಷಸೀ ರೂಪವನ್ನು ತಾಳಿ ಅಸು ನೀಗಿದಳು. ಪೂತನಿಯು ಒಬ್ಬಳೆಯಾಗಿದ್ದರೂ ಅವಳು ಎರಡು ರೂಪವನ್ನು ಧರಿಸಿದಂತೆ, ಒಂದೇಯಾದ ಭಾವನೆಗೆ ರಾಗವೆಂಬ ಸುಂದರವಾದ ರೂಪ ಮತ್ತು ದ್ವೇಷವೆಂಬ ಭಯಾನಕವಾದ ರೂಪಗಳಿರುತ್ತವೆ. ರಾಗವು ಮೋಹಾತ್ಮಕವಾಗಿರು ತ್ತದೆ. ಆದರೆ ದ್ವೇಷವು ಭಯಾನಕವಾಗಿರುತ್ತದೆ. ಎರಡು ವ್ಯಕ್ತಿಗಳಲ್ಲಿ ಮೊದಲು ಅನುರಾಗ ಬೆಳೆದು ಅವರೀರ್ವರು ಕೂಡಿ ಹೋಗುವ, ಕೂಡಿ ಬರುವ ಹಾಗೂ ಉಣ್ಣುವ, ಉಡುವ ವ್ಯವಹಾರಗಳನ್ನು ಮಾಡತೊಡಗುತ್ತಾರೆ. ನೋಡುವವರಿಗೆ ದೇಹವೆರಡಾಗಿದ್ದರೂ ಜೀವ

ಒಂದೇಯೆನ್ನುವಷ್ಟು ಅನ್ಯೋನ್ಯರಾಗಿ ತೋರುತ್ತಿರುತ್ತಾರೆ. ಆದರೆ ಅವರೀರ್ವರ ಮಧ್ಯ ದಲ್ಲಿ ಯಾವುದೋ ಒಂದು ವೈಮನಸ್ಸಿನ ಬೀಜವಂಕುರಿಸಿದಾಗ ಅವರೀರ್ವರು ಪೂರ್ವ ದಲ್ಲಿ ಪರಸ್ಪರರನ್ನು ಎಷ್ಟು ಪ್ರೀತಿಸುತ್ತಿದ್ದರೋ ಅಷ್ಟೇ ದ್ವೇಷಿಸಲು ಪ್ರಾರಂಭಿಸುತ್ತಾರೆ. ಹೀಗೆ ನಿಮಿತ್ತ ಬಂದೊದಗಿದಾಗ ರಾಗವೇ ದ್ವೇಷರೂಪವನ್ನು ತಾಳುತ್ತದೆ. ಇದರಿಂದ ರಾಗದ್ವೇಷಗಳು ಅತ್ಯಂತ ಭಿನ್ನಗಳಾಗಿರದೆ ಒಂದೇ ಭಾವನೆಯ ಎರಡು ರೂಪ ಗಳೆಂಬುದು ತಿಳಿದುಬರುತ್ತದೆ. ಜನ್ಮಜನ್ಮಾಂತರಗಳ ರಾಗದ್ವೇಷಾದಿಗಳನ್ನು ತೀರಿಸಿ ಕೊಳ್ಳುವುದಕ್ಕಾಗಿಯೇ ಜೀವಿಗಳು ಸಂಸಾರದಲ್ಲಿ ಪುನಃ ಪುನಃ ಜನ್ಮತಾಳಿ ಬರುತ್ತಿರುತ್ತಾರೆ. ಈ ತೆರನಾಗಿ ಇವುಗಳು ಸಂಸಾರ ಕ್ಲೇಶಕ್ಕೆ ಕಾರಣಗಳಾಗಿರುತ್ತವೆ. ಮೊದಲು ಇವೆರಡನ್ನು ತ್ಯಾಗಮಾಡಲು ಪ್ರಯತ್ನಿಸಬೇಕು. ಅವುಗಳನ್ನು ಬಿಡುವುದು ಅಸಾಧ್ಯವೆನಿಸಿದಾಗ ಆ ರಾಗದ್ವೇಷಾದಿಗಳನ್ನು ಸಂಸಾರದ ಮೇಲೆ ಮಾಡುವುದಕ್ಕಿಂತ ಪರಮಾತ್ಮನ ಮೇಲೆ ಮಾಡುವುದು ಸೂಕ್ತವಾದುದು. ಪರಮಾತ್ಮನ ಜೊತೆಗೆ ರಾಗವನ್ನೇ ಮಾಡಲಿ ಅಥವಾ ದ್ವೇಷವನ್ನೇ ಸಾಧಿಸಲಿ ಅವೆರಡರಿಂದಲೂ ಅವನಿಗೆ ಸದ್ಗತಿಯೇ ದೊರೆಯುತ್ತದೆ. ಪ್ರಹ್ಲಾದ ಮುಂತಾದವರು ಪರಮಾತ್ಮನ ಮೇಲೆ ಅನುರಾಗವನ್ನು ಮಾಡಿ ಯಾವ ಸದ್ಗತಿ ಯನ್ನು ಪಡೆದರೋ ಅದೇ ಸದ್ಗತಿಯನ್ನೇ ಹಿರಣ್ಯಕಶ್ಯಪು ಮುಂತಾದವರು ಪರಮಾತ್ಮನ ಜೊತೆಗೆ ದ್ವೇಷವನ್ನು ಸಾಧಿಸಿ ಪಡೆದುಕೊಂಡಿದ್ದಾರೆ. ದೇವರನ್ನು ಪ್ರೀತಿಸುವುದು ಅನುರಾಗ ಭಕ್ತಿಯಾದರೆ ಅವನನ್ನು ದ್ವೇಷಿಸುವುದು ವೈರ ಭಕ್ತಿಯೆನಿಸುವುದು. ರಾಗದ್ವೇಷಾದಿಗಳು ಸಂಸಾರದ ಮೇಲಿದ್ದಾಗ ಕ್ಲೇಶವೆಂಬುದಾಗಿ ಕರೆಯಿಸಿಕೊಳ್ಳುತ್ತವೆ. ಅವುಗಳನ್ನೇ ಪರಮಾತ್ಮನಲ್ಲಿಟ್ಟಾಗ ಅವು ಭಕ್ತಿಯೆಂದು ಕರೆಯಲ್ಪಡುತ್ತವೆ. ಆದ್ದರಿಂದ ಶಿವಯೋಗಿಯಾದವನು ಸಂಸಾರದ ಮೇಲಿನ ರಾಗದ್ವೇಷಾದಿಗಳನ್ನು ಕಳೆದುಕೊಂಡು ದೃಢವಾದ ಶಿವಭಾವವುಳ್ಳವನಾಗಿ ಕಾಲ ಕಳೆಯುತ್ತಿರುತ್ತಾನೆ.

ಪೂರ್ವೋಕ್ತವಾದ ರೀತಿಯಲ್ಲಿ ಶಿವಭಾವನೆಯುಳ್ಳವನಾದ ಶಿವಯೋಗಿಗೆ ತಾಮಸೀ ಶಕ್ತಿಯು ಏನನ್ನೂ ಮಾಡಲಾರದು. ಅರ್ಥಾತ್ ಅವನ ಮೇಲೆ ಯಾವ ಪ್ರಭಾವವನ್ನೂ ಬೀರಲಾರದೆಂಬ ವಿಷಯವನ್ನು ಪೂಜ್ಯಪಾದರು ಇಲ್ಲಿ–

ಯಥಾ ಸೂರ್ಯಸಮಾಕ್ರಾಂತೌ ನ ಶಕ್ನೋತಿ ತಮಃ ಸದಾ ।
ತಥಾ ಪ್ರಕಾಶಮಾತ್ಮಾನಂ ನಾಽವಿದ್ಯಾಕ್ರಮತಿ ಸ್ವಯಮ್ ॥

(ಸಿ. ಶಿ. ೧೯–೯೭)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ಪ್ರಖರವಾದ ಪ್ರಕಾಶದಿಂದ ಜಗತ್ತನ್ನು ಬೆಳಗುತ್ತಿರುವ ಸೂರ್ಯನನ್ನು ಕತ್ತಲೆಯು ಆವರಿಸಲು ಅಸಮರ್ಥವಾಗಿರು ವಂತೆ, ಭಾವಪ್ರಕಾಶ ಸಂಪನ್ನನಾದ ಶಿವಯೋಗಿಯನ್ನು ಅವಿದ್ಯೆಯೂ ಸಹ ಆಕ್ರಮಿಸಲು ಸಾಧ್ಯವಾಗುವುದಿಲ್ಲ. ಕತ್ತಲೆ ಹಾಗೂ ಬೆಳಕು, ಜ್ಞಾನ ಮತ್ತು ಅವಿದ್ಯೆ ಇವೆರಡರಲ್ಲಿ ಪರಸ್ಪರ ನಿವರ್ತ್ಯ ನಿವರ್ತಕರೂಪವಾದ ವಿರೋಧವಿರುತ್ತದೆ. ಕತ್ತಲೆಯು ನಿವರ್ತ್ಯವಾದರೆ ಪ್ರಕಾಶವು ನಿವರ್ತಕವಾಗಿರುತ್ತದೆ. ಅದರಂತೇನೇ ಅವಿದ್ಯೆಯು ನಿವರ್ತ್ಯವಾದರೆ, ಜ್ಞಾನವು (ವಿದ್ಯೆಯು) ನಿವರ್ತಕವಾಗಿರುತ್ತದೆ. ಆದ್ದರಿಂದಲೇ ಇವೆರಡೂ ಎಂದೂ ಕೂಡಿ

ಇರುವುದಿಲ್ಲ. ಭಾವಪ್ರಕಾಶ ಸಂಪನ್ನನಾದ ಶಿವಯೋಗಿಯು ಅವಿದ್ಯೆ ಹಾಗೂ ತಜ್ಜನ್ಯ ರಾಗದ್ವೇಷಗಳಿಂದ ಮುಕ್ತನಾಗಿ ಪರಶಿವಾದ್ವೈತರೂಪವಾದ ಜ್ಞಾನವನ್ನು ಪಡೆದುಕೊಂಡಿ ರೋಣದರಿಂದ ಅವನಿಗೆ ಯಾವುದೇ ಪ್ರಕಾರದ ಸಾಂಸಾರಿಕ ಕ್ಲೇಶಗಳು ಉಂಟಾಗು ವುದಿಲ್ಲ. ಒಟ್ಟಿನಲ್ಲಿ ಶಿವಭಾವನೆಯು ದೃಢಗೊಂಡಾಗ ರಾಗದ್ವೇಷ ಸಮೇತವಾದ ಅವಿದ್ಯೆಯು ನಿವೃತ್ತಿ ಹೊಂದಿ, ಶಿವಯೋಗಿಯು ಸದಾ ಶಿವ ಭಾವನೆಯಲ್ಲಿಯೇ ಇರುತ್ತಾನೆ. ಅವನಿಗೆ ಶಿವಭಾವನೆಯ ಹೊರತಾಗಿ ಬೇರಾವ ಭಾವನೆಯೂ ಬರುವುದಿಲ್ಲ. ಸೂರ್ಯನಿಗೆ ಕತ್ತಲೆಯು ಆವರಿಸದಿರುವಂತೆ ಇವನಿಗೆ ಅವಿದ್ಯಾದಿಗಳು ಆಕ್ರಮಿಸಲಾರವು. ಈ ತೆರನಾಗಿ ಸಾಂಸಾರಿಕ ಕ್ಲೇಶ ಮುಕ್ತನಾಗಿ ಸದಾ ಈತನು ಶಿವಾದ್ವೈತ ಸ್ಥಿತಿಯಲ್ಲಿ ಇರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨೯ ನವ್ಹೆಂಬರ್, ೯೪

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)



ಆಶೀರ್ವಚನ-೧

## ಜ್ಞಾನಪ್ರಕಾಶಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಗೈದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಶರಣ ಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಭಾವಪ್ರಕಾಶಸ್ಥಲದ ಬಗ್ಗೆ ಸವಿಸ್ತಾರ ವಾಗಿ ತಿಳಿಸಲಾಗಿದೆ. ಇಂದು ಕ್ರಮಪ್ರಾಪ್ತವಾದ ಸ್ಥಲವೇ ಜ್ಞಾನಪ್ರಕಾಶಸ್ಥಲವು. ಶಿವ ಹಾಗೂ ಜೀವರ ಅದ್ವೈತವನ್ನು ಪ್ರತಿಪಾದಿಸುವಾಗ ಮುಖ್ಯಾರ್ಥದಲ್ಲಿ ಅದು ಸಂಭವಿಸು ವುದಿಲ್ಲವಾದ್ದರಿಂದ ಲಕ್ಷ್ಯಾರ್ಥ ಮೂಲಕವಾಗಿ ಅವರೀರ್ವರ ಅದ್ವೈತ ಜ್ಞಾನವನ್ನು ಬೋಧಿಸುವ ಸ್ಥಲವೇ ಜ್ಞಾನಪ್ರಕಾಶಸ್ಥಲವು. ಅದನ್ನೇ-

ಮುಖ್ಯಾರ್ಥೇಽಸಂಭವೇ ಜಾತೇ ಲಕ್ಷಣಾಯೋಗ ಸಂಶ್ರಯಾತ್ ।
ತದ್ ಜ್ಞಾನಯೋಜನಂ ಯತ್ತದುಕ್ತಂ ಜ್ಞಾನಪ್ರಕಾಶನಮ್ ॥

(ಸಿ. ಶಿ. ೧೯-೯೦)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸಾಮಾನ್ಯವಾಗಿ ಶಬ್ದವು ಒಂದಿ ಲ್ಲೊಂದು ಪ್ರಕಾರದ ಅರ್ಥದಿಂದ ಕೂಡಿಕೊಂಡಿರುತ್ತದೆ. ಅದರ ಅರ್ಥವು ನಮಗೆ ತಿಳಿಯಬೇಕಾದರೆ, ತಿಳಿದವರು ಅದನ್ನು ಬೋಧಿಸಬೇಕು. ಇಲ್ಲವೇ ಪುನಃ ಪುನಃ ಬಳಕೆ ಯಾಗುವ ಶಬ್ದ ಹಾಗೂ ಅದರಿಂದಾಗುವ ವ್ಯವಹಾರದ ವಿನಿಮಯವಾಗುತ್ತಿರಬೇಕು. ಉದಾಹರಣೆಗಾಗಿ ಘಟ ಎನ್ನುವ ಶಬ್ದಕ್ಕೆ ಕೊಡ ಎಂಬ ಅರ್ಥವಾಗುತ್ತದೆ. ಎಲ್ಲಿಯವರೆಗೆ ಈ ಶಬ್ದದ ಅರ್ಥವು ನಮಗೆ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ಆ ಶಬ್ದದ ವ್ಯವಹಾರ ದಲ್ಲಿ ನಮ್ಮ ಪ್ರವೃತ್ತಿಯಾಗುವುದಿಲ್ಲ. ಸಂಸ್ಕೃತ ಭಾಷೆಯನ್ನು ತಿಳಿಯದಿರುವ ಒಬ್ಬ ವ್ಯಕ್ತಿಗೆ 'ಘಟಂ ಆನಯ' ಎಂಬುದಾಗಿ ಎಷ್ಟು ಬಾರಿ ಹೇಳಿದರೂ ಅದರ ಅರ್ಥದ ಪರಿಜ್ಞಾನ ವಿಲ್ಲದ ಮೂಲಕ ಕೊಡವನ್ನು ತರುವ ವ್ಯವಹಾರದಲ್ಲಿ ಆತನು ಪ್ರವೃತ್ತನಾಗುವುದಿಲ್ಲ. ಆದರೆ ಅವನಿಗೆ ಘಟಂ ಎಂದರೆ ಕೊಡವನ್ನು, ಆನಯ ಎಂದರೆ ತೆಗೆದುಕೊಂಡು ಬಾ, ಹೀಗೆ ಆ ವ್ಯಕ್ತಿಗೆ ಅದರ ಅರ್ಥಜ್ಞಾನವನ್ನು ಮಾಡಿಕೊಟ್ಟ ಮೇಲೆ ಆ ಶಬ್ದ ಪ್ರಯೋಗ ವನ್ನು ಮಾಡಿದಾಗ ಅದನ್ನು ಕೇಳಿ ಕೊಡವನ್ನು ತೆಗೆದುಕೊಂಡು ಬರುವ ವ್ಯವಹಾರದಲ್ಲಿ ಪ್ರವೃತ್ತನಾಗುತ್ತಾನೆ. ಇನ್ನು ಆ ಶಬ್ದದ ಅರ್ಥವನ್ನು ಓರ್ವ ವ್ಯಕ್ತಿಗೆ ಸಾಕ್ಷಾತ್ ಉಪದೇಶ ಮಾಡದೇ ಇದ್ದರೂ ಇಬ್ಬರು ಸಂಸ್ಕೃತಜ್ಞರು ಪರಸ್ಪರವಾಗಿ ಘಟಂ ಆನಯ ಎಂಬ ಶಬ್ದ ಪ್ರಯೋಗವನ್ನು ಮೇಲಿಂದ ಮೇಲೆ ಮಾಡುತ್ತಿದ್ದುದನ್ನು ಕೇಳಿ ಹಾಗೂ ಅದರಿಂದ ಆಗುವ

ವ್ಯವಹಾರವನ್ನು ನೋಡಿ ಕಾಲಾಂತರದಲ್ಲಿ ಅವನಿಗೂ ಸಹ ಆ ಶಬ್ದ ಬೋಧವಾಗುವುದನ್ನು ನೋಡುತ್ತೇವೆ. ಹೀಗೆ ಶಬ್ದಾರ್ಥ ಬೋಧವು ವ್ಯವಹಾರಪ್ರವೃತ್ತಿಗೆ ಕಾರಣವಾಗಿರುತ್ತದೆ.

ಒಂದು ಶಬ್ದಕ್ಕೆ ಮೂರು ಪ್ರಕಾರದ ಅರ್ಥಗಳಾಗುತ್ತವೆ. ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥವೆಂಬುವೇ ಅವುಗಳ ಹೆಸರು. ಶಬ್ದದ ಮುಖ್ಯಾರ್ಥಕ್ಕೆ ವಾಚ್ಯಾರ್ಥವೆನ್ನುತ್ತಾರೆ. ಇದು ಸಹಜವಾಗಿ ಎಲ್ಲರಿಗೂ ತಿಳಿಯುತ್ತದೆ. ಎಲ್ಲಿ ವಾಚ್ಯಾರ್ಥವು ಸಂಭವಿಸುವುದಿಲ್ಲವೋ, ಅಲ್ಲಿ ಲಕ್ಷ್ಯಾರ್ಥವನ್ನು ಗ್ರಹಿಸಬೇಕಾಗುತ್ತದೆ. ಗಂಗಾಯಾಂ ಘೋಷಃ ಎಂಬ ಶಬ್ದವನ್ನು ಕೇಳಿದಾಗ 'ಗಂಗೆಯಲ್ಲಿ ಗುಡಿಸಲು' ಎಂಬುದಾಗಿ ಅದರ ವಾಚ್ಯಾರ್ಥವಾಗುತ್ತದೆ. ಆದರೆ ಪ್ರವಾಹದ ಮೇಲೆ ಗುಡಿಸಲು ಇರಲು ಸಾಧ್ಯವಾಗುವುದಿಲ್ಲ. ಹೀಗೆ ಇಲ್ಲಿ ವಾಚ್ಯಾರ್ಥಕ್ಕೆ ಬಾಧೆಯುಂಟಾದಾಗ ಗಂಗೆಯ ದಡದಲ್ಲಿ ಗುಡಿಸಲು ಎಂಬ ಅರ್ಥವನ್ನು ಸ್ವೀಕರಿಸಬೇಕಾಗುತ್ತದೆ. ಇದುವೇ ಆ ಶಬ್ದದ ಲಕ್ಷ್ಯಾರ್ಥವು. ಇದೇ ಪ್ರಕಾರವಾಗಿ ವಾಚ್ಯಾರ್ಥಕ್ಕೆ ಸಂಪೂರ್ಣವಾಗಿ ವಿರುದ್ಧವಾದ ಅರ್ಥವನ್ನು ನೀಡುತ್ತಿದ್ದರೆ ಅದು ವ್ಯಂಗ್ಯಾರ್ಥವೆಂದು ಕರೆಯಲ್ಪಡುತ್ತದೆ. ಒಬ್ಬ ಮೂರ್ಖ ಮನುಷ್ಯನನ್ನು ಉದ್ದೇಶಿಸಿ ಮಾತನಾಡುವಾಗ ನೇರವಾಗಿ ಮೂರ್ಖ ಎಂಬ ಶಬ್ದವನ್ನು ಪ್ರಯೋಗ ಮಾಡದೇ ನೀನು ಮಹಾ ಪಂಡಿತನಿರುವಿ ! ಎಂಬುದಾಗಿ ವ್ಯಂಗ್ಯ ಧ್ವನಿಯಲ್ಲಿ ಶಬ್ದ ಪ್ರಯೋಗ ಮಾಡುವುದನ್ನು ಕಾಣುತ್ತೇವೆ. ಹೀಗೆ ವ್ಯವಹಾರದಲ್ಲಿ ಪ್ರಸಂಗಾನುಸಾರವಾಗಿ ವಾಚ್ಯಾರ್ಥ, ಲಕ್ಷ್ಯಾರ್ಥ ಹಾಗೂ ವ್ಯಂಗ್ಯಾರ್ಥಗಳ ಪ್ರಯೋಗಗಳು ಆಗುತ್ತಿರುತ್ತವೆ.

ಪ್ರಕೃತವಾದ ಪ್ರಸಂಗದಲ್ಲಿ ಗುರುಗಳಾದವರು ಶಿಷ್ಯನಿಗೆ ಶಿವ–ಜೀವರ ಐಕ್ಯ ಬೋಧೆಯನ್ನು ಉಪದೇಶಿಸುವಾಗ 'ತತ್ತ್ವಮಸಿ' ಅರ್ಥಾತ್ ನೀನು ಶಿವಸ್ವರೂಪನೇ ಆಗಿರುವಿ ಎಂಬುದಾಗಿ ಬೋಧಿಸುತ್ತಾರೆ. ಇಲ್ಲಿ ವಾಚ್ಯಾರ್ಥದಲ್ಲಿ ವಿಚಾರ ಮಾಡಲು ಜೀವಾತ್ಮನು ಅಲ್ಪಜ್ಞತ್ವ, ಅಲ್ಪ–ಕರ್ತೃತ್ವ ಮತ್ತು ಪರಿಚ್ಛಿನ್ನತ್ವಾದಿ ಗುಣಗಳಿಂದ ಕೂಡಿಕೊಂಡಿರುತ್ತಾನೆ. ಅದೇ ಪ್ರಕಾರವಾಗಿ ಶಿವನು ಸರ್ವಜ್ಞತ್ವ, ಸರ್ವಕರ್ತೃತ್ವ ಮತ್ತು ವ್ಯಾಪಕತ್ವಾದಿ ಗುಣಗಳಿಂದ ಕೂಡಿದವನಾಗಿರುತ್ತಾನೆ. ಇವರೀರ್ವರಲ್ಲಿಯ ಈ ಗುಣ ಧರ್ಮಗಳು ಪರಸ್ಪರ ಭಿನ್ನಗಳಾಗಿರುತ್ತವೆ. ಅಂದಾಗ ಅಲ್ಪಜ್ಞನಾದ ಜೀವನು ಸರ್ವಜ್ಞನಾದ ಶಿವನು ಹೇಗೆ ತಾನೆ ಆಗಬಲ್ಲನು ? ಎಂಬುದಾಗಿ ವಾಚ್ಯಾರ್ಥದಲ್ಲಿ ಬಾಧೆಯುಂಟಾಗುತ್ತದೆ. ಆದ್ದರಿಂದ ಇಲ್ಲಿ ಮುಖ್ಯಾರ್ಥವನ್ನು ತ್ಯಾಗ ಮಾಡಿ ಶಿವ ಜೀವರಲ್ಲಿಯ ಅವಿದ್ಯಾ ಹಾಗೂ ಮಾಯಾ ಎಂಬ ಉಪಾಧಿಗಳನ್ನು ಬದಿಗಿರಿಸಿ ಅವೆರಡರಲ್ಲಿರುವ ಉಪಹಿತವಾದ ಚೈತನ್ಯವು ಸಮಾನ ಲಕ್ಷಣಗಳಿಂದ ಕೂಡಿಕೊಂಡಿದುದಾಗಿರುತ್ತದೆ. ಉಪಾಧಿರಹಿತನಾದ ಶಿವನು ಸಚ್ಚಿದಾನಂದ ಸ್ವರೂಪನಾಗಿರುವಂತೆ, ಉಪಾಧಿ ವಿರಹಿತನಾದ ಜೀವನು ಸಹ ಸಚ್ಚಿದಾನಂದ ಸ್ವರೂಪನೇ ಆಗಿರುವನು. ಅಂದಾಗ ಅವೆರಡೂ ಸ್ವರೂಪಗಳ ಅಭೇದ ಬೋಧನೆಯಲ್ಲಿ ಯಾವ ಬಾಧೆಯೂ ಉಂಟಾಗುವುದಿಲ್ಲ. ಇಲ್ಲಿ ಅಲ್ಪಜ್ಞತ್ವ ಸರ್ವಜ್ಞತ್ವಾದಿಗಳು ಜೀವ–ಶಿವರ ಔಪಾಧಿಕ ಸ್ವರೂಪವನ್ನು ತಿಳಿಸುವ ವಾಚ್ಯಾರ್ಥಗಳಾಗಿದ್ದರೆ, ಉಭಯರ ಸಚ್ಚಿದಾನಂದ ಸ್ವರೂಪತ್ವವು ಲಕ್ಷ್ಯಾರ್ಥವಾಗಿರುತ್ತದೆ. ಶಿವ–ಜೀವರ ಐಕ್ಯತೆಯಲ್ಲಿ ಬಾಧಕವಾದ ಮುಖ್ಯಾರ್ಥವನ್ನು ತ್ಯಾಗಮಾಡಿ, ಇಲ್ಲಿ

ಲಕ್ಷ್ಯಾರ್ಥದ ಮೂಲಕವಾಗಿ ಅವರೀರ್ವರ ಅಭೇದಜ್ಞಾನವನ್ನು ಬೋಧಿಸಲಾಗಿದೆ. ಶರೀರ ಮತ್ತು ಮನಸ್ಸುಗಳೆಂಬ ಉಪಾಧಿಗಳಿಂದ ಕೂಡಿರುವ ಜೀವಾತ್ಮನಿಗೆ ನೀನು ಶಿವನಿದ್ದೀಯಾ ಎಂಬುದಾಗಿ ಬೋಧಿಸಿದರೂ ನಾನು ಹೇಗೆ ಶಿವನಾಗಬಲ್ಲೆ ! ಎಂಬ ಭಾವವು ಅವನಲ್ಲಿ ಒಡಮೂಡುತ್ತದೆ. ಆದರೆ ಅವನಿಗೇನೆ ಶರೀರಾದಿ ಉಪಾಧಿಗಳ ಸ್ವರೂಪವನ್ನು ತಿಳಿಸಿ, ಅವುಗಳಲ್ಲಿ ಅವುಗಳಿಗಿಂತಲೂ ಭಿನ್ನವಾದ ಒಂದು ಚೈತನ್ಯ ಸ್ವರೂಪವಿರುವುದನ್ನು ತಿಳಿಸಿಕೊಟ್ಟು, ಅದುವೇ ನೀನೆಂಬುದಾಗಿ ಮೊದಲು ಹೇಳಿ, ಅದೇ ಪ್ರಕಾರ ಮಾಯೋಪಾಧಿರಹಿತವಾದ ಪರಮಾತ್ಮನ ಸ್ವರೂಪದ ಬಗ್ಗೆ ತಿಳಿಸಿಕೊಟ್ಟು, ಕೊನೆಗೆ ಅವೆರಡರ ಅಭೇದವನ್ನು ಬೋಧಿಸಿದಾಗ, ಅವನಿಗೆ ನಾನೇ ಶಿವಸ್ವರೂಪನಿದ್ದೇನೆಂಬ ಜ್ಞಾನವು ಉಂಟಾಗುತ್ತದೆ. ಇಲ್ಲಿ ಔಪಾಧಿಕವಾದ ಮುಖ್ಯಾರ್ಥವನ್ನು ತ್ಯಾಗ ಮಾಡಿ ಲಕ್ಷ್ಯಾರ್ಥವನ್ನು ಗ್ರಹಿಸಲಾಗಿದೆ.

ಮೃಣ್ಮಯ ಹಾಗೂ ಸುವರ್ಣಮಯ ಎರಡು ಕಲಶಗಳನ್ನು ಮುಂದಿಟ್ಟು ಅವೆರಡರ ಅಭೇದವನ್ನು ಬೋಧಿಸಬೇಕಾದರೆ ಔಪಾಧಿಕವಾದ ಆ ಎರಡು ಘಟಗಳು ಮಣ್ಣು ಮತ್ತು ಬಂಗಾರಗಳೆಂಬ ಎರಡು ಭಿನ್ನ ಪದಾರ್ಥಗಳಿಂದ ನಿರ್ಮಿತವಾಗಿರೋಣದರಿಂದ ಅವೆರಡರಲ್ಲಿ ಅಭೇದವು ಸಂಭವಿಸುವುದಿಲ್ಲ. ಆದರೆ ಎರಡೂ ಘಟದಲ್ಲಿರುವ ಆಕಾರವು ಮಾತ್ರ ತತ್ವತಃ ಒಂದೇಯಾಗಿರೋಣದರಿಂದ ಅವುಗಳ ಆಬೇಧ ಬೋಧೆಗೆ ಯಾವ ಬಾಧೆಯೂ ಇರುವುದಿಲ್ಲ. ಆದರಂತೆಯೇ ಶಿವ ಜೀವರ ಸಂಬಂಧದಲ್ಲಿಯೂ ಸಹ ತಿಳಿದುಕೊಳ್ಳಬೇಕು. ಇದೇ ಪ್ರಕಾರವಾಗಿ ಆಕಳುಗಳು ಅನೇಕ ಬಣ್ಣದವುಗಳಿದ್ದರೂ ಅವುಗಳ ಹಾಲು ಮಾತ್ರ ಒಂದೇ ಶುಭ್ರವರ್ಣದ್ದಾಗಿರುವಂತೆ, ಶಿವ ಜೀವರಲ್ಲಿ ಸರ್ವಜ್ಞತ್ವ, ಅಲ್ಪಜ್ಞತ್ವಾದಿ ರೂಪದಿಂದ ಔಪಾಧಿಕ ಭೇದವಿದ್ದರೂ ಹಾಲಿನಂತೆ ಅವರೀರ್ವರ ಸ್ವರೂಪವು ಮಾತ್ರ ಒಂದೇಯಾಗಿರುತ್ತದೆ. ಈ ರೀತಿಯಾಗಿ ಶಿವ–ಜೀವರಲ್ಲಿಯ ಮುಖ್ಯಾರ್ಥವು ಅವರೀರ್ವರ ಅಭೇದ ಬೋಧನೆಗೆ ಬಾಧಕವಾಗಿರೋಣದರಿಂದ ಅದನ್ನು ತ್ಯಜಿಸಿ ನಿರ್ಬಾಧಕವಾದ ಲಕ್ಷ್ಯಾರ್ಥಮುಖೇನ ಅವರೀರ್ವರ ಅಭೇದ ಜ್ಞಾನವನ್ನು ಬೋಧಿಸುವುದೇ ಜ್ಞಾನ ಪ್ರಕಾಶವೆಂಬುದಾಗಿ ಪೂಜ್ಯರು ಇಲ್ಲಿ ತಿಳಿಯಪಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನ ಪ್ರಕಾಶದ ಸ್ವರೂಪವನ್ನೇ ವಿಶ್ಲೇಷಿಸುತ್ತ ಪುನಃ–

ಮುಕ್ತಸ್ಯ ಜ್ಞಾನಸಂಬಂಧೋ ಜ್ಞೇಯಾಭಾವಃ ಸ್ವಭಾವತಃ ।
ಉಪಾಧಿಸಹಿತಂ ಜ್ಞಾನಂ ನ ಭೇದಮತಿವರ್ತತೇ ॥

ಜ್ಞಾನಮಿತ್ಯುಚ್ಯತೇ ಸದ್ಭಿಃ ಪರಿಚ್ಛೇದೋಽಪಿ ವಸ್ತುನಃ
ಪರಾತ್ಮನ್ಯಪರಿಚ್ಛೇದೇ ಕುತೋ ಜ್ಞಾನಸ್ಯ ಸಂಭವಃ ॥

ಜ್ಞಾನಸ್ಯಾವಿಷಯೇ ತತ್ವೇ ಶಿವಾಖ್ಯೇ ಚಿತ್ಸುಖಾತ್ಮನಿ ।
ಆತ್ಮೈಕತ್ವಾನುಸಂಧಾನಂ ಜ್ಞಾನಮಿತ್ಯುಚ್ಯತೇ ಬುಧೈಃ ॥

(ಸಿ. ಶಿ. ೧೯; ೯೧–೯೩)

ಹೀಗೆ ಬೋಧಿಸಿದ್ದಾರೆ. ತಾತ್ಪರ್ಯವೇನೆಂದರೆ, ಜೀವನ್ಮುಕ್ತನಾದ ಶಿವಯೋಗಿಗೆ ಸ್ವಾಭಾವಿಕವಾದ ರೀತಿಯಿಂದ ಲಕ್ಷ್ಯಾರ್ಥಜ್ಞಾನವು ಪ್ರಾಪ್ತವಾಗಿರೋಣದರಿಂದ ತಿಳಿದು ಕೊಳ್ಳಲು ಬೇರೊಂದು ಯಾವುದೂ ಇರುವುದಿಲ್ಲ. ಉಪಾಧಿಯುಕ್ತವಾದ ಜ್ಞಾನದಿಂದ ಭೇದಭಾವವು ದೂರಾಗುವುದಿಲ್ಲ. ಅಂತೆಯೇ ಈ ಜ್ಞಾನಪ್ರಕಾಶಸ್ಥಲದಲ್ಲಿ ಶಿವಜೀವರ ಉಪಾಧಿಗಳನ್ನು ಅಲ್ಲಗಳೆದು ಉಪಹಿತದ ಅಭೇದ ಬೋಧಕ ಜ್ಞಾನವನ್ನು ಲಕ್ಷ್ಯಾರ್ಥ ಮೂಲಕವಾಗಿ ತಿಳಿಸಿಕೊಡಲಾಗಿದೆ. ಲಿಂಗ ಹಾಗೂ ಅಂಗಗಳೆಂಬ ವಸ್ತುಗಳ ಪರಸ್ಪರ ಭೇದ ಜ್ಞಾನವು ಅಂದರೆ ಲಿಂಗವು ಅಂಗವಲ್ಲ, ಅಂಗವು ಲಿಂಗವಲ್ಲ ಎಂಬ ಖಂಡಿತ ಜ್ಞಾನಕ್ಕೆ ಜ್ಞಾನಿಗಳು ದ್ವೈತ ಜ್ಞಾನವೆಂದು ಕರೆಯುತ್ತಾರೆ. ಉಪಾಧಿರಹಿತವಾದ ಪರಮ ಚೈತನ್ಯದಲ್ಲಿ ಪರಿಚ್ಛೇದವು ಅರ್ಥಾತ್ ಖಂಡಿತತ್ವವು ಸಂಭವಿಸುವುದಿಲ್ಲವಾದ್ದರಿಂದ ಅಲ್ಲಿ ದ್ವೈತಜ್ಞಾನವು ಅದು ಹೇಗೆ ತಾನೆ ಉಂಟಾದೀತು ? ಜ್ಞಾನವು ಸ್ವಯಂ ಪ್ರಕಾಶರೂಪ ವಾಗಿರುವುದರಿಂದ ಅದು ಬೇರೊಂದು ಜ್ಞಾನಕ್ಕೆ ವಿಷಯವಾಗುವುದಿಲ್ಲ. ಇಂತಹ ಜ್ಞಾನರೂಪವೂ ಸುಖರೂಪವೂ ಆದ ಪರಶಿವ ತತ್ತ್ವವನ್ನು ತನ್ನಾತ್ಮದೊಂದಿಗೆ ಏಕತ್ವಾನು ಸಂಧಾನವನ್ನು ಮಾಡುವುದೇ ಜ್ಞಾನವೆಂಬುದಾಗಿ ಜ್ಞಾನಿಗಳು ಕರೆಯುತ್ತಾರೆ.

ಜನ್ಮ ಪಡೆದ ಕೂಸಿಗೆ ಯಾವುದೇ ಹೆಸರು ಇರುವುದಿಲ್ಲ. ಅದಕ್ಕೆ ನಾಮಕರಣ ಸಂಸ್ಕಾರವನ್ನು ಮಾಡಿ ಹೆಸರಿಡುತ್ತಾರೆ. ಆ ಹೆಸರಿನಿಂದ ಆ ಕೂಸನ್ನು ಮೇಲಿಂದ ಮೇಲೆ ಕರೆದಾಗ ಆ ಕೂಸು ಇದು ನನ್ನದೇಯಾದ ಹೆಸರು ಎಂಬುದಾಗಿ ತಿಳಿದುಕೊಂಡು ಅದರೊಂದಿಗೆ ತಾನು ತಾದಾತ್ಮ್ಯವಾಗುತ್ತದೆ. ಯಾವ ಶರೀರಕ್ಕೆ ಆ ಹೆಸರನ್ನು ಇಟ್ಟಿರುತ್ತಾರೆಯೋ ಆ ಶರೀರವನ್ನು ಸಹ ತಾನೆಂತಲೇ ಭಾವಿಸುತ್ತದೆ. ಶರೀರದ ನಾಮರೂಪದ ವ್ಯತಿರಿಕ್ತವಾಗಿ ತನ್ನ ಅಸ್ತಿತ್ವವಿದೆಯೆಂಬ ಪರಿಕಲ್ಪನೆಯೇ ಅದಕ್ಕಿರುವುದಿಲ್ಲ. ಆದರೆ ಗುರುವಿನ ಉಪದೇಶ ಮೂಲಕ ಈ ಶರೀರ ಹಾಗೂ ಶರೀರಕ್ಕಿಟ್ಟ ಹೆಸರುಗಳು ನಾನಲ್ಲ. ಇವುಗಳು ನನ್ನವುಗಳಲ್ಲ, ನಾನು ಮಾತ್ರ ಇವುಗಳಿಗಿಂತ ಭಿನ್ನನಾದ ಆತ್ಮರೂಪ ನಾಗಿದ್ದೇನೆ ಎಂಬ ಜ್ಞಾನವು ಯಾವಾಗ ಪ್ರಾಪ್ತವಾಗುವುದೋ ಆಗ ಆತನು ಆತ್ಮಚಿಂತನೆ ಯಲ್ಲಿ ತಲ್ಲೀನನಾಗುತ್ತಾನೆ. ಮುಂದೆ ಆ ತನ್ನ ಆತ್ಮಕ್ಕೂ ಪರಮಾತ್ಮನಿಗೂ ಯಾವುದೇ ವಿಧ ವಾದ ಭೇದವಿಲ್ಲವೆಂಬುದು ತಿಳುವಳಿಕೆಯಾದಾಗ ಅವನ ಹೃದಯದಲ್ಲಿ ಆತ್ಮ- ಪರಮಾತ್ಮರ ಅಭೇದಜ್ಞಾನವು ದೃಢವಾಗುತ್ತದೆ. ಪೂರ್ವದಲ್ಲಿ ಶರೀರವೇ ತಾನೆಂದು ತಿಳಿದುಕೊಂಡಿದ್ದ ಈತನು ಈ ಆತ್ಮ-ಪರಮಾತ್ಮಾನುಸಂಧಾನದಿಂದ ಕೊನೆಗೆ ಶಿವ ಸ್ವರೂಪನೇ ಆಗುತ್ತಾನೆ-ಇದುವೇ ಲಿಂಗಾಂಗ ಸಾಮರಸ್ಯವು. ಜ್ಞಾನಿಗಳು ಇದಕ್ಕೇನೆ ನಿಜ ವಾದ ಜ್ಞಾನವೆಂದು ಕರೆದಿದ್ದಾರೆ.

ಇಲ್ಲಿಯವರೆಗೆ ಉಪದೇಶಮಾಡಿದ ಶಿವಜ್ಞಾನವೇ ಬ್ರಹ್ಮಜ್ಞಾನವೆಂಬುದಾಗಿ ತಿಳಿಯಪಡಿಸಲೋಸುಗ ಪೂಜ್ಯಪಾದರು ಪುನಃ –

ಅಪರಿಚ್ಛಿನ್ನಮಾನಂದಂ ಸತ್ತಾಕಾರಂ ಜಗನ್ಮಯಮ್ ।
ಬ್ರಹ್ಮೇತಿ ಲಕ್ಷಣಂ ಜ್ಞಾನಂ ಬ್ರಹ್ಮಜ್ಞಾನಮಿಹೋಚ್ಯತೇ ॥

ಬ್ರಹ್ಮಜ್ಞಾನೇ ಸಮುತ್ಪನ್ನೇ ವಿಶ್ವೋಪಾಧಿ ವಿವರ್ಜಿತೇ ।
ಸರ್ವಂ ಸಂವಿನ್ಮಯಂ ಭಾತಿ ತದನ್ಯನ್ನೈವ ದೃಶ್ಯತೇ ॥

ತಸ್ಮಾದದ್ವೈತ ವಿಜ್ಞಾನಮಪವರ್ಗಸ್ಯ ಕಾರಣಂ ।
ಭಾವಯನ್ ಸತತಂ ಯೋಗೀ ಸಂಸಾರೇಣ ನ ಲಿಪ್ಯತೇ ॥

(ಸಿ. ಶಿ. ೧೯; ೯೪–೯೬)

ಹೀಗೆ ಉಪದೇಶಿಸಿದ್ದಾರೆ. ಸರ್ವಪ್ರಪಂಚವನ್ನು ಬ್ರಹ್ಮರೂಪವಾಗಿ ನೋಡುವುದೇ ಬ್ರಹ್ಮಜ್ಞಾನ. ಯಾವುದು ಅಖಂಡವೂ ಆನಂದರೂಪವೂ ಆಗಿರುವುದೋ, ಯಾವುದು ಜಗತ್ತಿನ ತುಂಬೆಲ್ಲ ಸದ್ರೂಪವಾಗಿ ಅಸ್ತಿತ್ವದಲ್ಲಿರುವುದೋ, ಯಾವುದರಲ್ಲಿ ಸಚರಾಚರಾತ್ಮಕವಾದ ಜಗತ್ತು ಲಯಹೊಂದುವುದೋ, ಅಂತಹ ಬೃಹತ್ತರವಾದ ತತ್ತ್ವಕ್ಕೆ ಬ್ರಹ್ಮವೆಂದು ಹೇಳುತ್ತಾರೆ. ಸುವರ್ಣವೇ ಆಭರಣಗಳ ರೂಪವಾಗಿ ತೋರುವಂತೆ, ಆ ಪರಬ್ರಹ್ಮವೇ ಜಗದ್ರೂಪವಾಗಿ ತೋರುತ್ತದೆ. ಅಜ್ಞಾನಿಗಳ ದೃಷ್ಟಿಯಲ್ಲಿ ಇದು ಜಗತ್ತಾಗಿ ತೋರುತ್ತಿದ್ದರೂ, ಜ್ಞಾನಿಗಳ ದೃಷ್ಟಿಯಲ್ಲಿ ಇದು ಪರಬ್ರಹ್ಮವೇ ಆಗಿದೆ. ಸ್ವರ್ಣಕಾರನು ಗ್ರಾಹಕರು ತೆಗೆದುಕೊಂಡ ಬೇರೆ ಬೇರೆ ಅಲಂಕಾರಗಳನ್ನು ತಕ್ಕಡಿಯಲ್ಲಿ ಹಾಕಿ ತೂಗಿ ಅದರ ಬೆಲೆಯನ್ನು ತಿಳಿಸುತ್ತಿರುತ್ತಾನೆ. ಗ್ರಾಹಕರ ದೃಷ್ಟಿಯಲ್ಲಿ ಅವು ಆಭೂಷಣಗಳಾಗಿ ತೋರುತ್ತಿದ್ದರೂ, ಸ್ವರ್ಣಕಾರನ ದೃಷ್ಟಿಯಲ್ಲಿ ಕೇವಲ ಬಂಗಾರವೇ ಆಗಿರುತ್ತವೆ. ಅದರಂತೆ ಅಜ್ಞಾನಿಗಳು ಈ ಜಗತ್ತನ್ನು ಬೇರೆ ಬೇರೆ ಪದಾರ್ಥಗಳ ರೂಪದಲ್ಲಿ ಕಾಣುತ್ತಿದ್ದರೂ ಜ್ಞಾನಿಯ ದೃಷ್ಟಿಯಲ್ಲಿ ಇದೆಲ್ಲವೂ ಅಖಂಡವಾದ ಪರಬ್ರಹ್ಮವಾಗಿಯೇ ತೋರುತ್ತಿರುತ್ತದೆ. ಇದುವೇ ನಿಜವಾದ ಬ್ರಹ್ಮಜ್ಞಾನವು.

ಇಂತಹ ಬ್ರಹ್ಮಜ್ಞಾನವು ಪ್ರಾಪ್ತವಾದ ಮೇಲೆ ಎಲ್ಲೆಡೆಯಲ್ಲಿ ನಿರುಪಾಧಿಕವಾದ ಪರಬ್ರಹ್ಮವೇ ತೋರತೊಡಗುತ್ತದೆ. ಅದರ ಹೊರತಾಗಿ ಬೇರಾವುದು ತೋರುವುದೇ ಇಲ್ಲ. ಇಂತಹ ಬ್ರಹ್ಮಾದ್ವೈತ ಜ್ಞಾನವು ಮೋಕ್ಷ ಪ್ರಾಪ್ತಿಗೆ ಮೂಲಕಾರಣವಾಗಿರುತ್ತದೆ. ಅಂತೆಯೇ ಶಿವಯೋಗಿಯಾದವನು ತನ್ನ ಹೃದಯದಲ್ಲಿ ಸದಾ ಇಂತಹ ಅದ್ವೈತ ಸ್ಥಿತಿಯನ್ನೇ ಭಾವಿಸುತ್ತಿರುತ್ತಾನೆ. ಈ ತೆರನಾದ ಭಾವನೆಯಿಂದಾಗಿಯೇ ಅವನು ಸಂಸಾರದಿಂದ ಅಲಿಪ್ತನಾಗಿ ಉಳಿಯುತ್ತಾನೆ. ನಾನು, ನನ್ನದೆಂಬ ಭಾವನೆಗೇನೆ ಸಂಸಾರವೆನ್ನುತ್ತಾರೆ. ಇದು ಯಾವಾಗಲೂ ಮನಸ್ಸಿನಲ್ಲಿರುವಂತಹ ಒಂದು ವೃತ್ತಿಯು. ಶಿವಯೋಗಿಯು ಯಾವಾಗ ತನ್ನ ಮನಸ್ಸಿನಲ್ಲಿ ಈ ಶಿವಭಾವನೆಯನ್ನು ತಾಳುವನೋ ಆಗ ಇವನ ಮನಸ್ಸಿನಲ್ಲಿರುವ ನಾನು ನನ್ನದೆಂಬ ಭಾವನೆಗಳೆಲ್ಲ ಇಲ್ಲವಾಗಿ ಹೋಗುತ್ತವೆ. ಹೀಗೆ ಈತನ ಮನಸ್ಸು ಸಂಸಾರದಿಂದ ನಿರ್ಲಿಪ್ತವಾಗಿದ್ದು ಆ ಪರಶಿವ ಬ್ರಹ್ಮಾನಂದವನ್ನೇ ಅನುಭವಿಸುತ್ತ ಆನಂದವಾಗಿರುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನಪ್ರಕಾಶಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ನಿತ್ಯೇ ನಿರ್ಮಲಸತ್ವಯೋಗಿಷು ಪರೇ ನಿರ್ವಾಸನೇ ನಿಷ್ಕಲೇ
ಸರ್ವಾತೀತಪದೇ ಚರಾಚರಮಯೇ ಸತ್ತಾತ್ಮನಿ ಜ್ಯೋತಿಷಿ ।

ಸಂವಿದ್ವ್ಯೋಮ್ನಿ ಶಿವೇ ವಿಲೀನಹೃದಯಸ್ತದ್ಭೇದ ವೈ ಮುಖ್ಯತಃ
ಸಾಕ್ಷಾತ್ ಸರ್ವಗತೋ ವಿಭಾತಿ ವಿಗಲದ್ವಿಶ್ವಃ ಸ್ವಯಂ ಸಂಯಮೀ ॥
(ಸಿ. ಶಿ. ೧೯−೯೭)

ಹೀಗೆ ಉಪದೇಶಿಸಿದ್ದಾರೆ. ಜ್ಞಾನಪ್ರಕಾಶ ಸಂಪನ್ನನಾದ ಶಿವಯೋಗಿಯ ಹೃದಯದಲ್ಲಿ ಶಿವಾದ್ವೈತ ಭಾವನೆಯು ಸದಾವಕಾಲದಲ್ಲಿ ಪ್ರಕಾಶವಾಗುತ್ತಿರುತ್ತದೆ. ಆ ಪ್ರಕಾಶ ಮಾನವಾದ ಪರಶಿವ ತತ್ವದ ಸ್ವರೂಪವು ಹೇಗಿರುವುದೆಂಬುದನ್ನು ಪೂಜ್ಯಪಾದರು ಈ ಶ್ಲೋಕದಲ್ಲಿ ವಿವರಿಸಿದ್ದಾರೆ. ಅವರ ವಿವರಣೆಯ ಪ್ರಕಾರ ಆ ಪರಶಿವತತ್ತ್ವವು ಭೂತ-ಭವಿಷ್ಯದ್-ವರ್ತಮಾನ ಕಾಲಗಳಲ್ಲಿ ಸದಾ ಇರುವಂಥದ್ದಾಗಿದೆ. ನಿರ್ಮಲವೂ ಸಾತ್ವಿಕವೂ ಆದ ಯೋಗಿಗಳ ಹೃದಯದಲ್ಲಿ ಅದು ಸದಾ ವಾಸವಾಗಿರುತ್ತದೆ. ಅದು ಸರ್ವವಿಧ ವಾಸನಾಶೂನ್ಯವೂ ನಿರವಯವವೂ ಆಗಿದೆ. ಅದು ಎಲ್ಲಕ್ಕಿಂತಲೂ ಉತ್ಕೃಷ್ಟ ವಾದ ಸ್ಥಾನದಲ್ಲಿ ಇರುವಂಥಾದ್ದಾಗಿದೆ ಅಥವಾ ಅದುವೇ ಸರ್ವೋತ್ಕೃಷ್ಟ ಸ್ಥಾನ ವಾದುದು. ಅದಕ್ಕಿಂತ ಮಿಗಿಲಾದ ಸ್ಥಾನವು ಬೇರೊಂದಿರುವುದಿಲ್ಲ. ಇದು ಚರಾಚರ ಪ್ರಪಂಚದಲ್ಲೆಲ್ಲ ಅನುಸ್ಯೂತವಾಗಿರುತ್ತದೆ. ಇದುವೇ ವಿಶ್ವದ ಎಲ್ಲ ಪ್ರಕಾಶಗಳಿಗೂ ಪ್ರಕಾಶ ಕೊಡುವಂಥದ್ದಾಗಿದೆ. ಅದು ಜ್ಞಾನದ ಆಕಾಶರೂಪವಾಗಿರುತ್ತದೆ. ಇಂತಹ ಪರಶಿವನಲ್ಲಿಯಾರ ಮನಸ್ಸು ಐಕ್ಯವನ್ನು ಪಡೆದಿರುತ್ತದೆಯೋ ಅಂತಹ ಶಿವಯೋಗಿಯು ಆ ಶಿವನನ್ನು ತನ್ನೊಂದಿಗೆ ಅಭಿನ್ನವಾಗಿ ಅರಿಯುತ್ತಾನೆ. ಹೀಗೆ ಅರಿಯುವ ಆ ಶಿವಯೋಗಿಯು ಸ್ವತಃ ಶಿವಸ್ವರೂಪನಾಗಿರುತ್ತಾನಲ್ಲದೆ, ಜಗತ್ತೆಲ್ಲವನ್ನೂ ಶಿವಸ್ವರೂಪ ವನ್ನಾಗಿ ನೋಡುತ್ತಾನೆ.

ಹೀಗೆ ಇಲ್ಲಿಯವರೆಗೆ ಉಪದೇಶ ಮಾಡಿದ ರೀತಿಯಲ್ಲಿ ಶಿವ-ಜೀವರ ವಾಚ್ಯಾರ್ಥ ವನ್ನು ತ್ಯಾಗಮಾಡಿ ಲಕ್ಷ್ಯಾರ್ಥ ಮೂಲಕವಾಗಿ ಆ ಶಿವಾದ್ವೈತಜ್ಞಾನವನ್ನು ಪಡೆದು ಸರ್ವತ್ರ ಶಿವನನ್ನು ನೋಡುವ ಸ್ಥಿತಿಯನ್ನು ಪಡೆದುಕೊಂಡ ಶಿವಯೋಗಿಯೇ ಜ್ಞಾನ ಪ್ರಕಾಶಸ್ಥಲಿಯು.

ಜಿಜ್ಞಾಸುಗಳಾದ ಶ್ರೋತೃಗಳೇ, ಈ ಪವಿತ್ರವಾದ ಮಹಾಕ್ಷೇತ್ರದಲ್ಲಿ ಕಾರ್ತಿಕ ಮಾಸದ ನಿಮಿತ್ತವಾಗಿ ನಡೆದುಕೊಂಡು ಬಂದಿರುವ ಈ ಆಶೀರ್ವಚನ ಕಾರ್ಯಕ್ರಮದಲ್ಲಿ ಪಾಲ್ಗೊಂಡು ನೀವೆಲ್ಲ ಪಾವನರಾಗಿದ್ದೀರಿ. ಕಾಶಿಯವಾಸ, ಗಂಗಾಸ್ನಾನ, ಅದರೊಂದಿಗೆ ಜ್ಞಾನಾಮೃತದ ಪಾನ ಇವೆಲ್ಲವುಗಳು ನಿಮ್ಮ ಜೀವನದಲ್ಲಿ ದೊರೆತ ಅನರ್ಘ್ಯ ರತ್ನಗಳು. ಕಾರಣ ನೀವುಗಳೆಲ್ಲ ಈ ಶಿವಾದ್ವೈತ ಭಾವನೆಯನ್ನು ಹೃದಯದಲ್ಲಿ ದೃಢವಾಗಿ ಇರಿಸಿ ಕೊಂಡು ಸರ್ವತ್ರ ಶಿವನನ್ನೇ ಕಾಣುವ ಶಿವದೃಷ್ಟಿಯುಳ್ಳವರಾಗಿರಿ. ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗ ಷಟ್‌ಸ್ಥಲಾಂತರ್ಗತವಾದ ಈ ಶರಣ ಸ್ಥಲವು ಅತ್ಯಂತ ಮಹತ್ವ ಪೂರ್ಣವಾದುದು. ಇಲ್ಲಿ ಬಂದಿರುವ ದೀಕ್ಷಾಪಾದೋಕಸ್ಥಲವನ್ನೇ ಮೊದಲ್ಗೊಂಡು ಜ್ಞಾನ ಪ್ರಕಾಶ ಸ್ಥಲದವರೆಗಿರುವ ಹನ್ನೆರಡು ಅವಾಂತರ ಸ್ಥಲಗಳಲ್ಲಿ ಉತ್ತರೋತ್ತರವಾಗಿ ಶರಣನ ಉತ್ಕೃಷ್ಟವಾದ ಮಾನಸಿಕ ಸ್ಥಿತಿಯು ಪ್ರತಿಪಾದಿಸಲ್ಪಟ್ಟಿದೆ. ಇದೆಲ್ಲವನ್ನು ಆಮೂಲಾಗ್ರ

ವಾಗಿ ನೀವುಗಳೆಲ್ಲ ಪುನಃ ಪುನಃ ಚಿಂತನೆಯನ್ನು ಮಾಡುವವರಾಗಿರೆಂಬುದಾಗಿ ಅನುಗ್ರಹಿಸಿ ಈ ಶರಣಸ್ಥಲದ ಕೊನೆಯ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನಪ್ರಭೆ'' ಗ್ರಂಥದ ಏಕೋನವಿಂಶತಿತಮ ಪರಿಚ್ಛೇದವು ಪೂರ್ಣವಾದುದು.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩೦ ನವ್ಹೆಂಬರ್, ೯೪

(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

# ವಿಂಶತಿತಮ ಪರಿಚ್ಛೇದ

## ಐಕ್ಯಸ್ಥಲ

ಆಶೀರ್ವಚನ-೧

## ಸ್ವೀಕೃತಪ್ರಸಾದಿಸ್ಥಲ

ಜಿಜ್ಞಾಸುಗಳಾದ ಸದ್ಭಕ್ತರೇ !

ಶ್ರೀ ಕಾಶೀ ಮಹಾಪೀಠದಲ್ಲಿ ಆಶ್ವಿನ ಮಾಸದ ನಿಮಿತ್ತವಾಗಿ ಇಂದು ಪ್ರಾರಂಭ ವಾಗಲಿರುವ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ನೀವುಗಳೆಲ್ಲರೂ ಭಾಗ್ಯಶಾಲಿಗಳು !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಬಗ್ಗೆ ಇಂದು ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದೀರಿ. ''ಏಕಸ್ಯ ಭಾವಃ ಐಕ್ಯಂ'' ಎಂಬ ವ್ಯುತ್ಪತ್ತಿಗನುಸಾರವಾಗಿ ಜೀವಾತ್ಮಹಾಗೂ ಪರಮಾತ್ಮರ ಸಾಮರಸ್ಯ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ಐಕ್ಯಸ್ಥಲವು. ಅನಾದಿ ಕಾಲದಿಂದಲೂ ಜೀವಾತ್ಮನು ತನ್ನನ್ನು ಪರಮಾತ್ಮನಿಗಿಂತಲೂ ಭಿನ್ನನನ್ನಾಗಿ ತಿಳಿದು ವರ್ತಿಸುವ ಕಾರಣದಿಂದಲೇ ಜೀವಿಯು ಅನಂತ ದುಃಖ ಭಯಾದಿಗಳನ್ನು ಅನುಭವಿ ಸುತ್ತಲಿದ್ದಾನೆ. ''ದ್ವಿತೀಯಾದ್ವೈ ಭಯಂ ಭವತಿ'' ಎಂಬ ಶ್ರುತಿಗನುಸಾರವಾಗಿ ಎಲ್ಲೆಲ್ಲಿ ದ್ವೈತ ಭಾವವಿದೆಯೋ ಅಲ್ಲೆಲ್ಲ ಭಯ ಶೋಕಾದಿಗಳು ಇದ್ದೇ ಇರುತ್ತವೆ. ''ತರತಿ ಶೋಕಮಾತ್ಮವಿತ್'' ಎಂಬ ಶ್ರುತಿವಚನಾನುಸಾರವಾಗಿ ಆತ್ಮ-ಪರಮಾತ್ಮರ ಐಕ್ಯಜ್ಞಾನವಾದಾಗಲೇ ಈ ಶೋಕ ಭಯಾದಿಗಳು ನಿವೃತ್ತಿಯಾಗುತ್ತವೆ. ಅಂತೆಯೇ ಪೂಜ್ಯಪಾದರು ಈ ಗ್ರಂಥದ ಕೊನೆಯ ಭಾಗದಲ್ಲಿ ಶಿವ ಜೀವರ ಐಕ್ಯವನ್ನು ಬೋಧಿಸುವುದಕ್ಕಾಗಿ ಐಕ್ಯಸ್ಥಲವನ್ನು ಪ್ರಾರಂಭಿಸುತ್ತಿದ್ದಾರೆ.

ಮಹರ್ಷಿ ಅಗಸ್ತ್ಯನು ಈ ಪೂರ್ವದಲ್ಲಿ ಹೇಳಿದ ಶರಣಸ್ಥಲದ ವಿವರವನ್ನು ಸಂಪೂರ್ಣವಾಗಿ ಅರಿತವನಾಗಿ ಮುಂದಿನದಾದ ಐಕ್ಯಸ್ಥಲವನ್ನು ತಿಳಿದುಕೊಳ್ಳುವ ಇಚ್ಛೆಯಿಂದ-

ಸ್ಥಲಭೇದಾಸ್ತ್ವಯಾ ಪ್ರೋಕ್ತಾಃ ಶರಣಸ್ಥಲ ಸಂಶ್ರಿತಾಃ ।
ಐಕ್ಯಸ್ಥಲಗತಾನ್ ಬ್ರೂಹಿ ಸ್ಥಲಭೇದಾನ್ ಗಣೇಂದ್ರ ಮೇ ॥

(ಸಿ. ಶಿ. ೨೦-೧)

ಹೀಗೆ ಪ್ರಶ್ನೆಯನ್ನು ಪ್ರಸ್ತಾಪಿಸಿದ್ದಾನೆ. ''ಹೇ ಗಣೇಂದ್ರ ! ಸಮಸ್ತಶಿವಗಣರಲ್ಲಿ ಶ್ರೇಷ್ಠನಾದ ಹೇ ರೇಣುಕನೆ ! ಇಲ್ಲಿಯವರೆಗೆ ತಮ್ಮಿಂದ ಉಪದೇಶಿಸಲ್ಪಟ್ಟ ಶರಣಸ್ಥಲಾಂತರ್ಗತವಾದ ಸ್ಥಲಭೇದ ಪ್ರಭೇದಗಳ ಬಗ್ಗೆ ಸವಿಸ್ತಾರವಾಗಿ ತಿಳಿದುಕೊಂಡವನಾಗಿದ್ದೇನೆ. ಸದ್ಯಃ ಕೊನೆಯದಾದ ಐಕ್ಯಸ್ಥಲದ ಪ್ರಭೇದ ಹಾಗೂ ಅವುಗಳ ಸ್ವರೂಪದ ಬಗ್ಗೆ ತಿಳಿಸುವ ಕೃಪೆಯಾಗಬೇಕು.'' ಮಹರ್ಷಿ ಅಗಸ್ತ್ಯನ ಈ ವಿಧವಾದ ವಿನಂತಿಯನ್ನು ಆಲಿಸಿ, ಪೂಜ್ಯಪಾದರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು–

ಸ್ಥಲಾನಾಂ ನವಕಂ ಚೈಕ್ಯಸ್ಥಲೇಽಸ್ಮಿನ್ ಪರಿಕೀರ್ತ್ಯತೇ ।
ತತ್ ಸ್ವೀಕೃತಪ್ರಸಾದೈಕ್ಯಸ್ಥಲಮಾದೌ ಪ್ರಕೀರ್ತಿತಮ್ ॥

ಶಿಷ್ಟೌದನಸ್ಥಲಂ ಚಾಥ ಚರಾಚರಲಯಸ್ಥಲಮ್ ।
ಭಾಂಡಸ್ಥಲಂ ತತಃ ಪ್ರೋಕ್ತಂ ಭಾಜನಸ್ಥಲಮುತ್ತಮ್ ॥

ಅಂಗಾಲೇಪಸ್ಥಲಂ ಪಶ್ಚಾತ್ ಸ್ವಪರಾಜ್ಞಸ್ಥಲಂ ತತಃ ।
ಭಾವಾಭಾವವಿನಾಶಂ ಚ ಜ್ಞಾನಶೂನ್ಯಸ್ಥಲಂ ತತಃ ।
ತದೇಷಾಂ ಕ್ರಮಶೋ ವಕ್ಷ್ಯೇಽಶ್ರುಣು ತಾಪಸ ಲಕ್ಷಣಮ್ ॥

(ಸಿ. ಶಿ. ೨೦. ೨–೫)

ಹೀಗೆ ಐಕ್ಯಸ್ಥಲದಲ್ಲಿ ಬರುವ ಒಂಭತ್ತು ಅವಾಂತರ ಸ್ಥಲಗಳ ನಾಮ ನಿರ್ದೇಶನವನ್ನು ಮಾಡಿದ್ದಾರೆ. ಅವರ ಉಪದೇಶದಂತೆ ೧) ಸ್ವೀಕೃತ ಪ್ರಸಾದಿಸ್ಥಲ, ೨) ಶಿಷ್ಟೌದನಸ್ಥಲ, ೩) ಚರಾಚರಲಯಸ್ಥಲ, ೪) ಭಾಂಡಸ್ಥಲ, ೫) ಭಾಜನಸ್ಥಲ, ೬) ಅಂಗಾಲೇಪಸ್ಥಲ, ೭) ಸ್ವಪರಾಜ್ಞಸ್ಥಲ, ೮) ಭಾವಾಭಾವ ವಿನಾಶಸ್ಥಲ ಮತ್ತು ೯) ಜ್ಞಾನಶೂನ್ಯಸ್ಥಲ. ಇವುಗಳೇ ಐಕ್ಯಸ್ಥಲದ ಅವಾಂತರ ಸ್ಥಲಗಳು. ಪ್ರಪ್ರಥಮವಾಗಿ ಈ ಐಕ್ಯಸ್ಥಲದ ಮೊದಲ ಅವಾಂತರ ಸ್ಥಲವಾದ ಸ್ವೀಕೃತ ಪ್ರಸಾದಿ ಸ್ಥಲದ ಬಗ್ಗೆ ವಿವೇಚಿಸೋಣ, ಪೂಜ್ಯಪಾದರು ಈ ಅವಾಂತರ ಸ್ಥಲದ ಪರಿಭಾಷೆಯನ್ನು–

ಮುಖ್ಯಾರ್ಥೋ ಲಕ್ಷಣಾರ್ಥಶ್ಚ ಯತ್ರ ನಾಸ್ತಿ ಚಿದಾತ್ಮನಿ ।
ವಿಶೃಂಖಲತಯಾ ತಸ್ಯ ಪ್ರಸಾದಃ ಸ್ವೀಕೃತೋ ಭವೇತ್ ॥

(ಸಿ. ಶಿ. ೨೦–೬)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಮುಖ್ಯಾರ್ಥ ಹಾಗೂ ಲಕ್ಷ್ಯಾರ್ಥಗಳನ್ನು ಆಶ್ರಯಿಸದೇ ಪರಿಪೂರ್ಣವಾದ ಜ್ಞಾನರೂಪ ಪ್ರಸಾದವನ್ನು ಪ್ರಾಪ್ತಿ ಮಾಡಿಕೊಡುವ ಸ್ಥಲವೇ ಸ್ವೀಕೃತ ಪ್ರಸಾದಿಸ್ಥಲವು. ಅರ್ಥಾತ್ ಈ ಸ್ಥಲದ ಶಿವಯೋಗಿಯು ಮಹಾವಾಕ್ಯದ ವಾಚ್ಯಾರ್ಥ ಲಕ್ಷ್ಯಾರ್ಥಗಳೆರಡನ್ನೂ ಬಿಟ್ಟು ನೇರವಾಗಿ ಜ್ಞಾನರೂಪ ಪ್ರಸಾದವನ್ನು ಸ್ವೀಕರಿಸೋಣದರಿಂದ ಅವನಿಗೆ ಸ್ವೀಕೃತ ಪ್ರಸಾದಿ ಎಂಬುದಾಗಿ ಕರೆಯಲಾಗುತ್ತದೆ.

ಈ ಲೋಕದಲ್ಲಿ ಪ್ರಸಾದವು ಎರಡು ವಿಧವಾಗಿರುತ್ತದೆ. ಒಂದು ಅನ್ನರೂಪ ಪ್ರಸಾದವಾದರೆ, ಇನ್ನೊಂದು ಜ್ಞಾನರೂಪವಾದ ಪ್ರಸಾದವು. ಅನ್ನ ಪ್ರಸಾದದಿಂದ ಉದರಭರಣವಾದರೆ ಜ್ಞಾನಪ್ರಸಾದದಿಂದ ಬುದ್ಧಿಗೆ ಶಾಂತಿ ಸಮಾಧಾನಗಳು

ಲಭಿಸುವುವು. ಇಂತಹ ಜ್ಞಾನರೂಪವಾದ ಪ್ರಸಾದವನ್ನು ಸ್ವೀಕರಿಸಿದ ಸಾಧಕನೇ ಸ್ವೀಕೃತ ಪ್ರಸಾದಿಯು. ತತ್ತ್ವಶಾಸ್ತ್ರದ ಪ್ರಕಾರವಾಗಿ ಜ್ಞಾನವನ್ನು ಸಂಪಾದಿಸಬೇಕಾದರೆ ಪ್ರತ್ಯಕ್ಷ, ಅನುಮಾನ, ಉಪಮಾನ, ಅನುಪಲಬ್ಧಿ, ಅರ್ಥಾಪತ್ತಿ ಮತ್ತು ಶಬ್ದವೆಂಬ ಆರು ಪ್ರಮಾಣಗಳು ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲಿ ಪ್ರತ್ಯಕ್ಷ ಪ್ರಥಮ ಪ್ರಮಾಣವಾಗಿದ್ದರೂ, ಶಬ್ದ ಪ್ರಮಾಣವೇ ಅಧಿಕ ಸಾಮರ್ಥ್ಯಶಾಲಿಯೆಂಬುದು ದಾರ್ಶನಿಕರ ಅಭಿಮತವು. ಅನಾತ್ಮ ಪದಾರ್ಥಗಳನ್ನು ಅರಿಯಲಿಕ್ಕೆ ಉಳಿದೆಲ್ಲ ಪ್ರಮಾಣಗಳ ಬಳಕೆಯಾಗುತ್ತಿದ್ದರೂ, ಆತ್ಮಜ್ಞಾನಕ್ಕೆ ಶಬ್ದಪ್ರಮಾಣವೇ ಸಮರ್ಥವಾದುದು. ಅಂತೆಯೇ ''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಆತ್ಮನನ್ನು ಅರಿಯುವಲ್ಲಿ ಇವೆಲ್ಲವುಗಳು ನಿಷ್ಪ್ರಯೋಜನಗಳಾಗುತ್ತವೆ. ಶಬ್ದ ಪ್ರಮಾಣವೂ ಸಹ ಆ ಆತ್ಮ ತತ್ವವನ್ನು ಸಾಕ್ಷಾತ್ ಬೋಧಿಸಲು ಸಮರ್ಥವಾಗದು. ಪ್ರಮಾಣಗಳಿಗೆ ಒಂದು ಸೀಮೆಯಿದೆ. ತಮ್ಮ ತಮ್ಮ ಸೀಮೆಯ ಪರ್ಯಂತವಾಗಿ ಮುನ್ನುಗ್ಗಿದ ಈ ಪ್ರಮಾಣಗಳು ತಮ್ಮ ಸೀಮೆ ಬಂದೊಡನೆ ಹತಪ್ರಭಗಳಾಗಿ ನಿಂತು ಬಿಡುತ್ತವೆ. ಪ್ರತ್ಯಕ್ಷಾದಿ ಪ್ರಮಾಣಗಳು ಪರಮಾತ್ಮನಿಂದ ಬಹು ದೂರದಲ್ಲಿ ನಿಂತರೆ, ಶಬ್ದ ಪ್ರಮಾಣವು ಪರಮಾತ್ಮನ ಸಮೀಪದವರೆಗೆ ತೆಗೆದುಕೊಂಡು ಹೋಗುತ್ತದೆ. ಅಂತೆಯೇ ಉಳಿದೆಲ್ಲ ಪ್ರಮಾಣಗಳಲ್ಲಿ ಇದು ಪ್ರಬಲ ಪ್ರಮಾಣವೆಂಬುದಾಗಿ ಪರಿಗಣಿಸಲ್ಪಟ್ಟಿದೆ. ಇಂದ್ರಿಯಗಳಿಗೆ ಅಗೋಚರ ವಾದ ತತ್ತ್ವವು ಶಬ್ದ ಪ್ರಮಾಣದ ಮುಖಾಂತರ ಅನುಭವಗೋಚರವಾಗುತ್ತದೆ. ಪರಸ್ಪರ ಸುದೂರ ಪ್ರದೇಶಗಳಲ್ಲಿ ವಾಸಿಸುವ ಇಬ್ಬರು ವ್ಯಕ್ತಿಗಳು ಪರಸ್ಪರರ ಕುಶಲ ವಾರ್ತೆಯನ್ನು ಪತ್ರ ಇಲ್ಲವೆ ಸಂದೇಶ ವಾಹಕನ ಮೂಲಕ ತಿಳಿದು ಸಮಾಧಾನವಾಗುವುದನ್ನು ಕಾಣುತ್ತೇವೆ. ದೂರದ ವ್ಯಕ್ತಿಯ ಕುಶಲತೆಯು ಪ್ರತ್ಯಕ್ಷದಲ್ಲಿ ಅಗೋಚರವಾಗಿದ್ದರೂ ಆಪ್ತ ವ್ಯಕ್ತಿಯ ವಾಕ್ಯದಿಂದ ಕುಶಲತೆಯನ್ನು ತಿಳಿದು ಚಿತ್ತಕ್ಕೆ ಸಮಾಧಾನವಾಗುವುದು ಸರ್ವಾನುಭವ ವೇದ್ಯ ವಿಷಯವಾದುದು. ಅಂತೆಯೇ ಉಳಿದೆಲ್ಲ ಪ್ರಮಾಣಗಳಲ್ಲಿ ಶಬ್ದ ಪ್ರಮಾಣವು ಪ್ರಮುಖವಾದುದೆಂಬುದಾಗಿ ದಾರ್ಶನಿಕರ ಅಭಿಮತವಾಗಿದೆ.

ಜಗತ್ತಿನಲ್ಲಿ ಕ್ರಿಕೆಟ್ ಒಂದು ಲೋಕಪ್ರಿಯ ಆಟ. ಇಂದು ನಾವೆಲ್ಲ ಈ ಆಟವನ್ನು ದೂರದರ್ಶನದ ಮುಖಾಂತರ ಪ್ರತ್ಯಕ್ಷವಾಗಿ ಕಾಣುತ್ತೇವೆ. ಆದರೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ರೇಡಿಯೋ ಮುಖಾಂತರ ಕ್ರಿಕೆಟ್ ಆಟದ ವೀಕ್ಷಕ ವಿವರಣೆಯನ್ನು ಕೇಳುತ್ತಿದ್ದೆವು. ಆ ವಿವರಣೆಯನ್ನು ಹೇಳುವ ವ್ಯಕ್ತಿಯು ಆಟವನ್ನು ಪ್ರತ್ಯಕ್ಷವಾಗಿ ಕಂಡು ವಿವರಿಸುತ್ತಿರುವಾಗ ಕೇಳುವವನು ಅದನ್ನು ಪ್ರತ್ಯಕ್ಷವಾಗಿ ಕಾಣದಿದ್ದರೂ, ಅದನ್ನು ಪ್ರತ್ಯಕ್ಷ ವಾಗಿ ಕಾಣುವ ವ್ಯಕ್ತಿಗೆ ಯಾವ ಅನುಭೂತಿಯುಂಟಾಗುತ್ತಿತ್ತೋ ಅದೇ ಅನುಭೂತಿಯು ಕೇಳುವವನಿಗೂ ಸಹ ಉಂಟಾಗುತ್ತಿತ್ತು. ಇದರಿಂದ ತಿಳಿದು ಬರುವುದೇನೆಂದರೆ ದೃಷ್ಟಿಗೆ ಅಗೋಚರವಾದುದನ್ನು ಸಹ ಶಬ್ದವು ಅನುಭವ ಗೋಚರವನ್ನಾಗಿ ಮಾಡುತ್ತದೆ. ಅಂತೆಯೇ ಎಲ್ಲ ಪ್ರಮಾಣಗಳಲ್ಲಿ ಶಬ್ದ ಪ್ರಮಾಣಕ್ಕೆ ಹೆಚ್ಚಿನ ವೈಶಿಷ್ಟ್ಯತೆಯು ಪ್ರಾಪ್ತವಾಗಿದೆ. ಲೌಕಿಕ ವ್ಯವಹಾರದಲ್ಲಿ ಶಬ್ದಕ್ಕೆ ಮಹತ್ವವಿದ್ದಷ್ಟು ಪಾರಮಾರ್ಥಿಕ ವ್ಯವಹಾರದಲ್ಲಿಯೂ ಸಹ ಶಬ್ದ ಪ್ರಮಾಣಕ್ಕೆ ಅತಿಯಾದ ಮಹತ್ವವಿದೆ. ಅಗೋಚರವಾದ

ಪರಮ ತತ್ತ್ವವನ್ನು ತಿಳಿದುಕೊಳ್ಳಲಿಕ್ಕೆ ಶಬ್ದ ಪ್ರಮಾಣವೇ ಒಂದು ಅಮೋಘವಾದ ಸಾಧನವು.

ಸಂಸಾರದಲ್ಲಿ ದುಃಖವನ್ನು ಅನುಭವಿಸುವ ಜೀವಾತ್ಮನಿಗೆ ಈ ದುಃಖದಿಂದ ಮುಕ್ತಿಯಾಗಬೇಕೆಂಬ ಇಚ್ಛೆಯು ಇದ್ದೇ ಇರುತ್ತದೆ. ದಿನವಿಡೀ ಪರಿಶ್ರಮ ಮಾಡಿದ ವ್ಯಕ್ತಿಗೆ ವಿಶ್ರಾಂತಿಯು ಬೇಕೇಬೇಕು. ದಣಿದ ಮನುಷ್ಯನಿಗೆ ಶಾರೀರಿಕ ಇಲ್ಲವೆ ಬೌದ್ಧಿಕವಾದ ಯಾವ ಕೆಲಸವನ್ನೂ ಮಾಡಬೇಕೆನ್ನುವ ಅಪೇಕ್ಷೆಯಿರುವುದಿಲ್ಲ, ಅವನಿಗೆ ಕೇವಲ ವಿಶ್ರಾಂತಿಯೊಂದೇ ಬೇಕಾಗಿರುತ್ತದೆ. ಲೌಕಿಕವಾದ ಜೀವನದಲ್ಲಿ ಪರಿಶ್ರಮದಿಂದ ದಣಿದ ಮನುಷ್ಯನಿಗೆ ಎಂಟು ತಾಸಿನ ವಿಶ್ರಾಂತಿಯು ಬೇಕಾಗುವುದು. ಇದೇ ಪ್ರಕಾರವಾಗಿ ಜನನ ಮರಣಾತ್ಮಕವಾದ ಈ ಘೋರ ಸಂಸಾರದಲ್ಲಿ ಬೆಂದು ಬೆಂಡಾಗಿರುವ ಜೀವಿಗಳಿಗೆ ಚಿರ ವಿಶ್ರಾಂತಿಯು ಬೇಕೆನಿಸುವುದು. ಈ ಚಿರ ವಿಶ್ರಾಂತಿಗೇನೇ ಮುಕ್ತಿ, ಮೋಕ್ಷ ಮತ್ತು ಅಪವರ್ಗವೆಂಬುದಾಗಿ ಕರೆಯುತ್ತಾರೆ. ಇಂತಹ ಈ ಮುಕ್ತಿಯು ದೊರೆಯಬೇಕಾದರೆ ಶಿವಾದ್ವೈತ ಜ್ಞಾನವನ್ನು ಪಡೆಯಬೇಕಾಗುವುದು. ಅಂತೆಯೇ ಶಾಸ್ತ್ರಕಾರರು ''ತಸ್ಮಾದದ್ವೈತ ವಿಜ್ಞಾನಮಪವರ್ಗಸ್ಯ ಕಾರಣಂ'' ಎಂಬುದಾಗಿ ಉಪದೇಶಿಸಿದ್ದಾರೆ. ಅದ್ವೈತ ವಿಜ್ಞಾನವೆಂದರೆ ಅದ್ವೈತ ವಿಷಯಕವಾದ ಅನುಭವ ಜ್ಞಾನವೆಂದರ್ಥ. ಅದ್ವೈತ ವಿದ್ಯೆಯು ಅನುಭವಗೋಚರವಾಗುವುದೇ ಆ ಜ್ಞಾನದ ವೈಶಿಷ್ಟ್ಯತೆಯು. ಈ ವೈಶಿಷ್ಟ್ಯತೆಯಿಂದಾಗಿ, ಇದಕ್ಕೆ ವಿಜ್ಞಾನ, ಎಂದು ಕರೆದಿದ್ದಾರೆ. ಈ ಅನುಭವಾತ್ಮಕ ಜ್ಞಾನವೇ ಮುಕ್ತಿಗೆ ಸಾಧನವಾಗಿರುತ್ತದೆ. ಈ ತೆರನಾದ ಅದ್ವೈತ ವಿಜ್ಞಾನವನ್ನು ಪಡೆಯಬೇಕಾದರೆ ಶಬ್ದ ಪ್ರಮಾಣಕ್ಕೆ ಶರಣು ಹೋಗಬೇಕಾಗುವುದು.

ಸಂಸಾರದಲ್ಲಿ ನಿರಾಸಕ್ತನಾದ ವಿವೇಕಾದಿ ಗುಣಗಣ ಸಮನ್ವಿತನಾದ ಶಿಷ್ಯನು ಮೋಕ್ಷಕ್ಕಾಗಿ ಸದ್ಗುರುವಿಗೆ ಶರಣಾಗತನಾದಾಗ ಶ್ರೀ ಗುರುವು ಅವನಿಗೆ ''ತತ್ತ್ವಮಸಿ'' ಎಂಬ ಮಹಾವಾಕ್ಯವನ್ನು ಉಪದೇಶಿಸುತ್ತಾನೆ. 'ನೀನು ಪರಶಿವ ಬ್ರಹ್ಮವೇ ಆಗಿರುವಿ' ಪರಶಿವನಿಗಿಂತಲೂ ನೀನು ಭಿನ್ನವಲ್ಲ ಎಂಬುದು ಈ ಮಹಾವಾಕ್ಯದ ಅರ್ಥವು. ಹೀಗೆ ಶಬ್ದ ಪ್ರಮಾಣದ ಮುಖಾಂತರವಾಗಿ ಗುರುವು ಶಿಷ್ಯನಿಗೆ ಶಿವಾದ್ವೈತ ಜ್ಞಾನವನ್ನು ಉಪದೇಶಿಸುತ್ತಾನೆ. ನಾವು ಯಾವುದೇ ಒಂದು ಶಬ್ದವನ್ನು ಕೇಳಿದಾಗ ಅದರ ಅರ್ಥದ ಕಡೆಗೆ ನಮ್ಮ ಗಮನ ಹರಿಯುತ್ತದೆ. ಸಾಮಾನ್ಯವಾಗಿ ಶಾಸ್ತ್ರಕಾರರು ಒಂದು ಶಬ್ದಕ್ಕೆ ಮುಖ್ಯಾರ್ಥ (ವಾಚ್ಯಾರ್ಥ), ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥವೆಂಬುದಾಗಿ ಮೂರು ವಿಧ ಅರ್ಥಗಳನ್ನು ಪ್ರತಿಪಾದಿಸಿದ್ದಾರೆ. ಯಾವುದೇ ಒಂದು ಶಬ್ದವನ್ನು ನಾವು ಕೇಳಿದಾಗ ಮೊದಲು ನಮಗೆ ಆ ಪದದಿಂದ ಪದಾರ್ಥವನ್ನು ಪ್ರತಿಪಾದಿಸುವ ಮುಖ್ಯಾರ್ಥದ ಬೋಧ ಉಂಟಾಗುವುದು. ಇನ್ನು ಮುಖ್ಯಾರ್ಥಕ್ಕೆ ಬಾಧೆಯುಂಟಾದಾಗ ಅದಕ್ಕಿಂತಲೂ ಭಿನ್ನವಾದ ಮತ್ತು ಅದಕ್ಕೆ ನಿಕಟಸಂಬಂಧಿಯಾದ ಲಕ್ಷ್ಯಾರ್ಥವನ್ನು ಸ್ವೀಕರಿಸಬೇಕಾಗುತ್ತದೆ. ಇನ್ನು ಕೆಲವೊಂದು ಸಂದರ್ಭಗಳಲ್ಲಿ ಇವೆರಡೂ ಅರ್ಥಕ್ಕಿಂತ ವಿಲಕ್ಷಣವಾದ ಮುಖ್ಯಾರ್ಥಕ್ಕೆ ಸಂಪೂರ್ಣವಾಗಿ ವಿರುದ್ಧವಾಗಿ ಪ್ರತೀತಿಯಾಗುವ ಅರ್ಥವೇ ವ್ಯಂಗ್ಯಾರ್ಥವು.

ಗಂಗಾ ಎಂಬ ಶಬ್ದವನ್ನು ಪ್ರಯೋಗಿಸಿದಾಗ ಪ್ರವಾಹ ರೂಪವಾದ ನದಿಯು ಅದರ ಅರ್ಥವಾಗುತ್ತದೆ. ಇದರಂತೆ ಘೋಷಃ ಎಂಬ ಶಬ್ದವನ್ನು ಪ್ರಯೋಗಿಸಿದಾಗ ಗುಡಿಸಲು ಎಂಬ ಅರ್ಥ ಬೋಧವಾಗುವುದು. ಇವೆರಡೂ ಅರ್ಥಕ್ಕೆ ಮುಖ್ಯಾರ್ಥ ಇಲ್ಲವೆ ವಾಚ್ಯಾರ್ಥವೆನ್ನುವರು. ಇಲ್ಲಿ ಆ ಶಬ್ದದಿಂದ ಹೊರಡುವ ಮುಖ್ಯವಾದ ಅರ್ಥವೇ ಪ್ರತಿಪಾದ್ಯವಾಗಿರುವುದರಿಂದ ಇದು ಮುಖ್ಯಾರ್ಥವೆಂದು ಕರೆಯಿಸಿಕೊಳ್ಳುವುದು. ಪ್ರತಿಯೊಂದು ಪದಕ್ಕೆ ತನ್ನ ಅರ್ಥವನ್ನು ಬೋಧಿಸುವ ಒಂದು ಸಾಮರ್ಥ್ಯವಿರುತ್ತದೆ. ಅದಕ್ಕೇನೆ ಶಕ್ತಿಯೆಂದು ಕರೆಯುತ್ತಾರೆ. ಇದು ಈಶ್ವರ ಸಂಕೇತ ರೂಪವಾದುದು. ಅಂತೆಯೇ ತರ್ಕಸಂಗ್ರಹದಲ್ಲಿ– 'ಶಕ್ತಂ ಪದಂ' ಎಂಬುದಾಗಿ ಹೇಳಿ ಶಕ್ತಿಯಿಂದ ಯುಕ್ತವಾದುದೇ ಪದವೆಂಬುದಾಗಿ ಅರ್ಥೈಸಿದ್ದಾರೆ. ಈ ಶಬ್ದದಿಂದ ಇದೇ ಅರ್ಥವನ್ನು ಸ್ವೀಕರಿಸಬೇಕೆನ್ನುವ ಈಶ್ವರ ಸಂಕೇತಕ್ಕೆ ಶಕ್ತಿಯೆಂಬುದಾಗಿ ಕರೆದಿದ್ದಾರೆ. ಈ ಈಶ್ವರ ಸಂಕೇತರೂಪವಾದ ಶಕ್ತಿಮೂಲಕವಾಗಿ ಹೊರಡುವ ಅರ್ಥಕ್ಕೆ ಶಕ್ಯಾರ್ಥ, ಮುಖ್ಯಾರ್ಥ ಮತ್ತು ವಾಚ್ಯಾರ್ಥವೆಂಬುದಾಗಿ ಕರೆಯಲಾಗುತ್ತದೆ. ಗಾಂ ಆನಯ ಎಂಬ ವಾಕ್ಯವನ್ನು ಪ್ರಯೋಗಿಸಿದಾಗ ಗೋ ಶಬ್ದದ ಶಕ್ತಿಯು ಆಕಳಿನಲ್ಲಿ ಮತ್ತು ಆನಯ ಎಂಬ ಶಬ್ದ ಶಕ್ತಿಯು ಅದನ್ನು ತರುವ ಕ್ರಿಯೆಯಲ್ಲಿ ನಿಹಿತವಾಗಿರುತ್ತದೆ. ಈ ವಾಕ್ಯವನ್ನು ಕೇಳಿದ ವ್ಯಕ್ತಿಗೆ ಅದರಲ್ಲಿ ಪ್ರಯೋಗಿಸಲ್ಪಟ್ಟ ಪ್ರತಿಯೊಂದು ಪದದ ಶಕ್ತಿಗ್ರಾಹ್ಯವಾದಾಗ ಅವನು ಆ ಕ್ರಿಯೆಯಲ್ಲಿ ಪ್ರವೃತ್ತನಾಗುತ್ತಾನೆ. ಹೀಗೆ ಎಲ್ಲೆಲ್ಲಿ ಪದಗಳ ಶಕ್ತಿಗ್ರಹದ ಮೂಲಕವಾಗಿ ಅರ್ಥ ಹೊರಡುವುದೋ ಅದಕ್ಕೇ ಶಕ್ಯಾರ್ಥ ಇಲ್ಲವೆ ಮುಖ್ಯಾರ್ಥವೆಂಬುದಾಗಿ ಕರೆಯುವ ರೂಢಿಯಿದೆ.

ಇನ್ನು ವಾಕ್ಯವನ್ನು ಕೇಳಿದಾಗ ಅಲ್ಲಿ ಬಳಸಿರುವ ಪದಗಳ ಶಕ್ತಿ ಗ್ರಹಕ್ಕೆ ಬಾಧೆಯುಂಟಾದಾಗ ಆ ಶಕ್ಯಾರ್ಥವನ್ನು ಬಿಟ್ಟು ಲಕ್ಷ್ಯಾರ್ಥವನ್ನು ಗ್ರಹಿಸಬೇಕಾಗುತ್ತದೆ. ಶಾಸ್ತ್ರಕಾರರು ಈ ಲಕ್ಷ್ಯಾರ್ಥವನ್ನು ಜಯತ್‌ಲಕ್ಷಣ, ಅಜಹತ್ ಲಕ್ಷಣ ಮತ್ತು ಜಹದಜಹತ್‌ಲಕ್ಷಣ ಎಂಬುದಾಗಿ ಮೂರು ವಿಧವಾಗಿ ವಿಂಗಡಿಸಿದ್ದಾರೆ. ಇವುಗಳಲ್ಲಿ ಜಹಲ್ಲಕ್ಷಣವೆಂದರೆ 'ಗಂಗಾಯಾಂ ಘೋಷಃ' (ಗಂಗೆಯಲ್ಲಿ ಗುಡಿಸಲು) ಎಂಬ ವಾಕ್ಯದಲ್ಲಿ ಗಂಗಾ ಶಬ್ದಕ್ಕೆ ಪ್ರವಾಹ ರೂಪವಾದ ನದಿಯೆಂಬುದಾಗಿ ಶಕ್ತಿಗ್ರಹ ವಾಗುತ್ತಿದ್ದರೂ ಪ್ರವಾಹದಲ್ಲಿ ಗುಡಿಸಲು ಇರುವುದು ಅಸಂಭವವಾಗಿರೋಣದರಿಂದ ಇಲ್ಲಿ ಗಂಗಾ ಪದದಿಂದ ಗಂಗಾಪ್ರವಾಹ ಎಂಬುದನ್ನು ಪರಿತ್ಯಜಿಸಿ ಗಂಗೆಯ ದಡ ವೆಂಬುದಾಗಿ ಸ್ವೀಕರಿಸಲಾಗುತ್ತದೆ. ಇಲ್ಲಿ ಗಂಗಾ ಪದದ ಶಕ್ಯಾರ್ಥವಾದ ಪ್ರವಾಹರೂಪ ನದಿಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಅದೇ ಪದದಿಂದ ಗಂಗೆಯ ತೀರವೆಂಬುದಾಗಿ ಸ್ವೀಕರಿಸಿದ ಕಾರಣ ಇದಕ್ಕೆ ಜಹಲ್ಲಕ್ಷಣವೆಂದು ಕರೆಯುತ್ತಾರೆ.

ಇನ್ನು 'ಛತ್ರಾಣಿ ಯಾಂತಿ' (ಛತ್ರಿಗಳು ಹೋಗುತ್ತಿವೆ) ಎಂಬ ವಾಕ್ಯವನ್ನು ಪ್ರಯೋಗಿಸಿದಾಗ 'ಛತ್ರ' ಶಬ್ದಕ್ಕೆ 'ಛತ್ರಿ' ಎಂಬ ಶಕ್ತಿಸಂಕೇತವಾದರೂ ಆ ಛತ್ರಿಗಳು ಜಡವಾಗಿರುವುದರಿಂದ ಅವುಗಳಲ್ಲಿ ಸ್ವತಃ ಹೋಗುವ ಕ್ರಿಯೆಯು ಸಂಭವಿಸುವುದಿಲ್ಲ

ಅಂತೆಯೇ ಅಲ್ಲಿ ಛತ್ರಧಾರಿಗಳಾದ ಜನರು ಹೋಗುತ್ತಿದ್ದಾರೆ ಎಂಬ ಅರ್ಥಬೋಧ ವಾಗುತ್ತದೆ. ಇಲ್ಲಿ ಛತ್ರಶಬ್ದದಿಂದ ಛತ್ರಿಯ ಜೊತೆಗೆ ಛತ್ರಧಾರಿಯಾದ ವ್ಯಕ್ತಿಯ ಬೋಧೆಯಾಗುವುದರಿಂದ ಇದಕ್ಕೆ ಅಜಹಲ್ಲಕ್ಷಣವೆಂದು ಕರೆಯುತ್ತಾರೆ. ಇಲ್ಲಿ ಛತ್ರ ಶಬ್ದದ ಶಕ್ಯಾರ್ಥವನ್ನು ಗ್ರಹಿಸುವುದರ ಜೊತೆಗೆ ಛತ್ರದಾರಿಯಾದ ವ್ಯಕ್ತಿಯ ಅಧಿಕ ಗ್ರಹಣವಾಗಿರುವುದರಿಂದ ಇದು ಅಜಹಲ್ಲಕ್ಷಣೆಯ ಉದಾಹರಣೆಯು. ಎಲ್ಲಿಯಾದರೂ ಗಣಾರಾಧನೆ ನಡೆದಾಗ ಊಟಕ್ಕೆ ಕುಳಿತ ಜನರು ಏ ತುಪ್ಪ ಬಾ ! ಏ ಅನ್ನ, ಏ ಸಾರು ಇತ್ಯಾದಿಯಾಗಿ ತನಗೆ ಬೇಕಾದ ಪದಾರ್ಥಗಳನ್ನು ಕುರಿತು ಕರೆಯುವುದನ್ನು ಕಾಣುತ್ತೇವೆ. ಇಲ್ಲಿ ಪದಾರ್ಥಗಳ ಹೆಸರನ್ನು ಕರೆದಿದ್ದರೂ ಆ ಪದಾರ್ಥಧಾರಿಯಾದ ವ್ಯಕ್ತಿಯನ್ನು ಕರೆದ ಅರ್ಥ ಬೋಧೆಯಾಗುವುದರಿಂದ ಇವೆಲ್ಲವುಗಳು ಕೂಡ ಅಜಹಲ್ಲಕ್ಷಣೆಯ ಉದಾಹರಣೆ ಗಳೆಂದು ತಿಳಿದುಕೊಳ್ಳಬೇಕು.

ಇದೇ ಪ್ರಕಾರವಾಗಿ 'ಸೋಽಯಂ ದೇವದತ್ತಃ' (ಅವನೇ ಈ ದೇವದತ್ತನು) ಎಂಬ ವಾಕ್ಯಪ್ರಯೋಗ ಮಾಡಿದಾಗ ಹಿಂದೊಮ್ಮೆ ಯಾವುದೋ ಸ್ಥಾನದಲ್ಲಿ ನೋಡಿದ ಆ ದೇವದತ್ತನನ್ನು ಈ ದೇಶದಲ್ಲಿ ಕಂಡಾಗ ಅವನೇ ಈ ದೇವದತ್ತನು ಎಂಬ ಬೋಧೆಯು ಉಂಟಾಗುತ್ತದೆ. ಇಲ್ಲಿ ಆ ದೇಶ ಮತ್ತು ಈ ದೇಶ, ಆ ಕಾಲ ಮತ್ತು ಈ ಕಾಲ ಇವುಗಳು ಪರಸ್ಪರ ವಿರೋಧವಾಗಿರೋಣದರಿಂದ ಅವುಗಳ ಐಕ್ಯತೆಯು ಅಸಂಭವವಾಗಿರೋಣದ ರಿಂದ ಆ ದೇಶ ಕಾಲಾದಿಗಳನ್ನು ಮತ್ತು ಈ ದೇಶ ಕಾಲಾದಿಗಳನ್ನು ತ್ಯಜಿಸಿ ಅವೆರಡೂ ಸ್ಥಾನಗಳಲ್ಲಿ ತೋರಿದ ವ್ಯಕ್ತಿಯು ಒಬ್ಬನೇ ಎಂಬ ಬೋಧೆಯುಂಟಾಗುತ್ತದೆ. ಇಲ್ಲಿ ದೇಶ ಕಾಲಾದಿಗಳನ್ನು ತ್ಯಜಿಸಿ ದೇವದತ್ತನೊಬ್ಬನನ್ನು ಗ್ರಹಿಸಿರುವ ಕಾರಣ ಇದಕ್ಕೆ ಜಹದಜಹಲ್ಲಕ್ಷಣ ಅಥವಾ ಭಾಗತ್ಯಾಗ ಲಕ್ಷಣವೆಂಬುದಾಗಿ ಕರೆಯುತ್ತಾರೆ. ಹೀಗೆ ಲಕ್ಷ್ಯಾರ್ಥವು ಮೂರು ಪ್ರಕಾರವಾಗಿ ಇರುತ್ತದೆ.

ಇನ್ನು ಈ ಪೂರ್ವದಲ್ಲಿ ಹೇಳಿದ ವಾಚ್ಯಾರ್ಥ ಲಕ್ಷ್ಯಾರ್ಥಗಳಿಗಿಂತಲೂ ಭಿನ್ನವಾದ ಅರ್ಥವೇ ವ್ಯಂಗ್ಯಾರ್ಥವು. ಇದು ವಾಚ್ಯಾರ್ಥಕ್ಕೆ ಸಂಪೂರ್ಣವಾಗಿ ವಿರುದ್ಧವಾದ ಅರ್ಥವನ್ನು ಕೊಡುವಂಥಾದ್ದಾಗಿರುತ್ತದೆ. ಇಲ್ಲಿ ಪ್ರಯೋಗ ಮಾಡಿದ ಶಬ್ದಕ್ಕಿಂತಲೂ, ಆ ಶಬ್ದವನ್ನು ಉಚ್ಚರಿಸುವ ವ್ಯಕ್ತಿಯ ಧ್ವನಿಯ ಏರಿಳಿತಗಳ ಕಡೆಗೆ ಗಮನ ಕೊಟ್ಟಾಗ ಮಾತ್ರ ವ್ಯಂಗ್ಯಾರ್ಥದ ಬೋಧವಾಗುವುದು. ಈತನು ಮಹಾನ್ ಪಂಡಿತನಿದ್ದಾನೆ ಎಂಬ ವಾಕ್ಯವನ್ನು ವ್ಯಂಗ್ಯ ಧ್ವನಿಯಲ್ಲಿ ಉಚ್ಚರಿಸಿದಾಗ ಇವನಂಥ ಮೂರ್ಖನು ಬೇರೊಬ್ಬನಿಲ್ಲ ಎಂಬುದಾಗಿ ಅರ್ಥ ಹೊರಡುವುದು. ಇಲ್ಲಿ ಬಳಸಿದ ಶಬ್ದವು ಪಂಡಿತವೆಂದಿದ್ದರೂ ಅದಕ್ಕೆ ವಿಪರೀತವಾದ ಮೂರ್ಖನೆಂಬ ಅರ್ಥಬೋಧವಾಗುವುದು ವ್ಯಂಗ್ಯಾರ್ಥದ ಮೂಲಕವಾಗಿ ಎಂಬುದನ್ನು ತಿಳಿದುಕೊಳ್ಳಬೇಕು.

ಹೀಗೆ ಒಂದು ಶಬ್ದವನ್ನು ಉಚ್ಚರಿಸಿದಾಗ ಪ್ರಸಂಗ ಪರಿಸ್ಥಿತಿಗನುಸಾರವಾಗಿ ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥಗಳು ಆಗುವುದುಂಟು. ಸಾಮಾನ್ಯವಾಗಿ ವೇದಾಂತ ಶಾಸ್ತ್ರದಲ್ಲಿ ಶ್ರೀ ಗುರುವು ಶಿಷ್ಯನಿಗೆ 'ತತ್ತ್ವಮಸಿ' ಎಂಬ ಮಹಾವಾಕ್ಯವನ್ನು

ಉಪದೇಶ ಮಾಡಿದಾಗ ಆ ಪರಶಿವ ಬ್ರಹ್ಮವೇ ನೀನಿರುವಿ ಎಂಬುದಾಗಿ ಅದರ ವಾಚ್ಯಾರ್ಥವಾಗುವುದು. ಇಲ್ಲಿ ತತ್ ಪದಕ್ಕೆ ವಾಚ್ಯನಾದವನು ಮಾಯಾ ಶಕ್ತಿ ವಿಶಿಷ್ಟ ನಾದ ಈಶ್ವರನು, ಅದರಂತೆ ತ್ವಂ ಪದಕ್ಕೆ ವಾಚ್ಯನಾದವನು ಅವಿದ್ಯಾ ಶಕ್ತಿವಿಶಿಷ್ಟನಾದ ಜೀವನು.ಇವರೀರ್ವರಲ್ಲಿ ಅಭೇದವು ಸಂಭವಿಸುವುದಿಲ್ಲ, ಏಕೆಂದರೆ ಇವರೀರ್ವರಿಗೂ ಇರುವ ಉಪಾಧಿಗಳು ಪರಸ್ಪರ ವಿರುದ್ಧ ಧರ್ಮವುಳ್ಳವುಗಳಾಗಿರುತ್ತವೆ. ಮಾಯಾ ಶಕ್ತಿಯು ಈಶ್ವರನಲ್ಲಿ ಸರ್ವಜ್ಞತ್ವ ಸರ್ವಕರ್ತೃತ್ವಾದಿ ಧರ್ಮಗಳನ್ನು ಸಂಯೋಜಿಸಿದರೆ, ಅವಿದ್ಯಾ ಶಕ್ತಿಯು ಜೀವಾತ್ಮನಲ್ಲಿ ಅಲ್ಪಜ್ಞತ್ವ, ಅಲ್ಪಕರ್ತೃತ್ವಾದಿ ಧರ್ಮಗಳನ್ನು ಸಂಯೋಜಿಸುತ್ತದೆ. ಹೀಗೆ ಜೀವ ಈಶ್ವರರ ಔಪಾಧಿಕಗಳಾದ ಧರ್ಮಗಳು ಪರಸ್ಪರ ವಿರುದ್ಧವಾಗಿರೋಣದ ರಿಂದ ಆ ಧರ್ಮ ವಿಶಿಷ್ಟಗಳಾದ ಅವೆರಡೂ ಚೈತನ್ಯಗಳನ್ನು ಒಂದುಗೂಡಿಸಲು ಬರುವುದಿಲ್ಲ, ಆಗ ತತ್ತ್ವಮಸಿ ಮಹಾವಾಕ್ಯದ ವಾಚ್ಯಾರ್ಥವನ್ನು ತ್ಯಾಗ ಮಾಡಿ ಲಕ್ಷ್ಯಾರ್ಥಕ್ಕೆ ಶರಣು ಹೋಗಬೇಕಾಗುತ್ತದೆ. ಲಕ್ಷ್ಯಾರ್ಥದಲ್ಲಿಯೂ ಪೂರ್ವದಲ್ಲಿ ಹೇಳಿದ ಜಹದಜಹಲ್ಲಕ್ಷಣಾರ್ಥವನ್ನು ಸ್ವೀಕರಿಸಿದಾಗ ಔಪಾಧಿಗಳಾದ ಪರಸ್ಪರ ವಿರುದ್ಧಾಂಶ ಗಳನ್ನು ತ್ಯಜಿಸಿ ಕೇವಲ ಶುದ್ಧ ಚೈತನ್ಯಾಂಶದಲ್ಲಿ ಅಭೇದವನ್ನು ಪ್ರತಿಪಾದಿಸಲು ಸಾಧ್ಯ ವಾಗುತ್ತದೆ. ಹೀಗೆ ಮುಖ್ಯಾರ್ಥಕ್ಕೆ ಬಾಧೆಯುಂಟಾದಾಗ ಲಕ್ಷ್ಯಾರ್ಥವನ್ನು ಸ್ವೀಕರಿಸಿ ಮಹಾವಾಕ್ಯದ ಅರ್ಥವನ್ನು ಬೋಧಿಸಲಾಗುವುದು.

ವೀರಶೈವ ಸಿದ್ಧಾಂತದಲ್ಲಿಯೂ ಸಹ ಅಂಗಲಿಂಗಗಳ ಸಾಮರಸ್ಯವನ್ನು ಬೋಧಿಸ ಲಾಗುತ್ತದೆ. ಇಲ್ಲಿ ಅಂಗನು ಅವಿದ್ಯಾ ಶಕ್ತಿವಿಶಿಷ್ಟನಾಗಿದ್ದರೆ ಲಿಂಗವು ಮಾಯಾಶಕ್ತಿವಿಶಿಷ್ಟ ವಾಗಿರುತ್ತದೆ ಈ ಅಂಗಲಿಂಗಗಳ ಅಭೇದವಾಗುವಲ್ಲಿ ಈ ಮಾಯಾ ಅವಿದ್ಯೆಗಳೆಂಬ ಉಪಾಧಿಗಳು ಪ್ರತಿಬಂಧಕಗಳಾಗಿರುತ್ತವೆ. ಘಟಾಕಾಶ, ಮಠಾಕಾಶಗಳಲ್ಲಿ ಘಟ– ಮಠ ಗಳೆಂಬ ಉಪಾಧಿಗಳು ಎಂದೂ ಏಕರೂಪವಾಗಲಾರವು. ಆದರೆ ಅದರೊಳಗಿನ ಆಕಾಶವು ಮಾತ್ರ ಏಕರೂಪವಾಗಿರುತ್ತದೆ. ಅದರಂತೆ ಮಾಯಾ; ಅವಿದ್ಯೆಗಳೆಂಬ ಉಪಾಧಿ ಗಳನ್ನು ಹೊರತುಪಡಿಸಿ ಉಪಹಿತಗಳಾದ ಅಂಗ, ಲಿಂಗಗಳಲ್ಲಿ ಅಭೇದವನ್ನು ಹೇಳಲು ಸಾಧ್ಯವಾಗುತ್ತದೆ. ಇದುವೇ ಲಕ್ಷ್ಯಾರ್ಥವು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವ ಜೀವರ ಅಭೇದ ಬೋಧನೆಯಲ್ಲಿ ಮುಖ್ಯಾರ್ಥವನ್ನು ಕೈಬಿಟ್ಟಿರುವಂತೆ ಲಕ್ಷ್ಯಾರ್ಥ ವನ್ನು ಸಹ ಪರಿತ್ಯಜಿಸಬೇಕೆಂಬುದಾಗಿ ಹೇಳಿರುವುದೊಂದು ವಿಶೇಷವಾಗಿದೆ. ಲಕ್ಷ್ಯವನ್ನು ಪರಿಲಕ್ಷಿಸುವುದು ಲಕ್ಷ್ಯಾರ್ಥದ ಮುಖ್ಯವಾದ ಗುರಿಯು. ಹೀಗೆ ಲಕ್ಷ್ಯಾರ್ಥ ಮೂಲಕ ವಾಗಿ ಲಕ್ಷ್ಯವನ್ನು ಪ್ರಾಪ್ತಿಮಾಡಿಕೊಂಡ ಬಳಿಕ ಆ ಲಕ್ಷ್ಯಾರ್ಥ ಪ್ರಯೋಜನವೇನು ? ಹೀಗೆ ಈ ಸ್ವೀಕೃತಪ್ರಸಾದಿಸ್ಥಲದ ಸಾಧಕನು ಗುರುವಿನ ಉಪದೇಶ ಮೂಲಕವಾಗಿ ಲಿಂಗಾಂಗಸಾಮರಸ್ಯ ರೂಪವಾದ ಲಕ್ಷ್ಯವನ್ನು ಪಡೆದ ನಂತರ ಲಕ್ಷ್ಯ ರೂಪನೇ ತಾನಾಗಿ ಆ ಲಕ್ಷ್ಯಾರ್ಥವನ್ನು ಕೈಬಿಡುತ್ತಾನೆ.

ಯಾರಿಂದಲಾದರೂ ಭೋಜನದ ನಿಮಂತ್ರಣ ಬಂದಾಗ ಮನಸ್ಸಿನಲ್ಲಿ ಅಡಿಗೆ ಯನ್ನು ಯಾರು ಮಾಡಿರಬಹುದು ? ಊಟಕ್ಕಾಗಿ ಯಾವ ಯಾವ ಪದಾರ್ಥಗಳನ್ನು ಮಾಡಿರಬಹುದು ? ಕುಳಿತುಕೊಳ್ಳುವ ಆಸನಗಳು ಹೇಗಿರಬಹುದು ? ಮುಂತಾದ

ಅನೇಕ ಊಹಾಪೋಹಗಳು ಏಳುತ್ತಿರುತ್ತವೆ. ಈ ಎಲ್ಲ ಊಹಾಪೋಹಗಳ ಮಧ್ಯದಲ್ಲಿ ಆ ವ್ಯಕ್ತಿಯು ಒಮ್ಮೆ ಭೋಜನಕ್ಕೆ ಕುಳಿತುಕೊಂಡನೆಂದರೆ, ತನ್ನ ಮುಂದೆ ತಂದಿರಿಸಿದ ಸುಗ್ರಾಸ ಭೋಜನದ ಆಸ್ವಾದನೆಯನ್ನು ಪ್ರಾರಂಭಿಸಿದಾಗ ಅವನ ಮನಸ್ಸು ರಸಾಸ್ವಾದನೆಯಲ್ಲಿ ತಲ್ಲೀನವಾಯಿತೆಂದರೆ ಮೊದಲಿನ ಎಲ್ಲ ಊಹಾ ಪೋಹಗಳನ್ನು ಮರೆತು ಬಿಡುತ್ತಾನೆ. ಅದರಂತೆ ಸದ್ಗುರುವಿನಿಂದ ಮಹಾವಾಕ್ಯದ ಉಪದೇಶವನ್ನು ಕೇಳಿದಾಗ ಮೊದ ಮೊದಲು ವಾಚ್ಯಾರ್ಥ, ಲಕ್ಷ್ಯಾರ್ಥಗಳು ಮನದಲ್ಲಿ ಸುಳಿಯುವುದು. ಒಮ್ಮೆ ಲಕ್ಷ್ಯಾರ್ಥ ಮೂಲಕವಾಗಿ ಲಿಂಗಾಂಗ ಸಾಮರಸ್ಯರೂಪವಾದ ಲಕ್ಷ್ಯವನ್ನು ಪ್ರಾಪ್ತಿ ಮಾಡಿಕೊಂಡ ನೆಂದರೆ ಆ ಸಾಮರಸ್ಯಾನಂದದ ಆಸ್ವಾದನೆಯಲ್ಲಿ ತಲ್ಲೀನನಾದ ಶಿವಯೋಗಿಯು ಆ ಲಕ್ಷ್ಯಾರ್ಥದ ವಿಚಾರವನ್ನು ಸಹ ತ್ಯಜಿಸಿ ಕೇವಲ ಸಾಮರಸ್ಯಾನಂದದ ಅನುಭೂತಿಯಲ್ಲೇ ತನ್ಮಯನಾಗುತ್ತಾನೆ. ಅವನು ಆಗ ಅನುಭವಿಸುತ್ತಿರುವ ಆನಂದದಲ್ಲಿ ಯಾವುದೇ ವಿಧವಾದ ಬಾಧೆಯು ಇರುವುದಿಲ್ಲ. ಹೀಗೆ ವಿಶೃಂಖಲವಾಗಿ ಸಾಮರಸ್ಯಾನಂದ ರೂಪವಾದ ಪ್ರಸಾದವನ್ನು ಪಡೆದ ಶಿವಯೋಗಿಗೆ ಸ್ವೀಕೃತ ಪ್ರಸಾದಿ ಎಂಬುದಾಗಿ ಕರೆಯಲಾಗಿದೆ.

ಈ ಸ್ವೀಕೃತ ಪ್ರಸಾದಿಯು ಶಿವೋಽಹಂ ಎಂಬ ಭಾವನೆಯಿಂದ ಲಿಂಗಾಂಗ ಸಾಮರಸ್ಯ ರೂಪವಾದ ಆನಂದವನ್ನು ಅನುಭವಿಸುತ್ತಿರುತ್ತಾನೆ. ಅವನು ಅನುಭವಿಸು ತ್ತಿರುವ ಆ ಆನಂದಕ್ಕೇನೇ ಇಲ್ಲಿ ಪ್ರಸಾದವೆಂದು ಕರೆಯಲಾಗಿದೆ. ಭಗವದರ್ಪಿತವಾದ ಅನ್ನವು ಪ್ರಸಾದವೆಂದು ಕರೆಯಿಸಿಕೊಳ್ಳುವಂತೆ, ಶಿವಸ್ವರೂಪದ ಅನುಭವದ ಆಸ್ವಾದನೆಯು ಸಹ ಒಂದು ವಿಲಕ್ಷಣವಾದ ಪ್ರಸಾದವೇ ಅಹುದು. ಅದ್ದಕೇನೇ ಜ್ಞಾನ ಪ್ರಸಾದವೆಂದು ಕರೆಯುತ್ತಾರೆ. ಈ ಸ್ಥಲದ ಶಿವಯೋಗಿಯು ಲಿಂಗಾಂಗ ಸಾಮರಸ್ಯದ ಜ್ಞಾನರೂಪಿ ಪ್ರಸಾದವನ್ನು ಅಖಂಡವಾಗಿ ಸ್ವೀಕರಿಸುತ್ತಿರೋಣದರಿಂದಲೇ ಇವನಿಗೆ ಪೂಜ್ಯಪಾದರು ಸ್ವೀಕೃತ ಪ್ರಸಾದಿಯೆಂದು ಕರೆದಿದ್ದಾರೆ. ಈ ಶಿವಯೋಗಿಯು ಅನುಭವಿ ಸುತ್ತಿರುವ ಸ್ವಸ್ವರೂಪಾನಂದಾನುಭೂತಿಯಲ್ಲಿ ಬೇರಾವ ಬಾಧೆ ಅಥವಾ ವ್ಯವಧಾನಗಳು ಏಕೆ ಇರುವುದಿಲ್ಲ ಎಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗವೇ ಪೂಜ್ಯಪಾದರು ಪುನಃ–

> ಮಾತೃಮೇಯ ಪ್ರಮಾಣಾದಿವ್ಯವಹಾರೇ ವಿಹಾರಿಣೀಮ್ ।
> ಸಂವಿತ್‌ಸಾಕ್ಷಾತ್ಕೃತಿಂ ಲಬ್ಧ್ವಾ ಯೋಗೀ ಸ್ವಾತ್ಮನಿ ತಿಷ್ಠತಿ ॥
>
> (ಸಿ. ಶಿ. ೨೦–೭)

ಹೀಗೆ ಅಪ್ಪಣೆಕೊಡಿಸಿದ್ದಾರೆ. ಈ ಪೂರ್ವದಲ್ಲಿ ವಿವರಿಸಿದ ಪರಿಪೂರ್ಣಜ್ಞಾನರೂಪಿ ಪ್ರಸಾದವನ್ನು ಸ್ವೀಕರಿಸಿದ ಶಿವಯೋಗಿಯು ಪ್ರಮಾತೃ, ಪ್ರಮಾಣ, ಪ್ರಮೇಯಗಳೆಂಬ ತ್ರಿಪುಟಿ ವ್ಯವಹಾರಕ್ಕೆ ಮೂಲಕಾರಣವಾಗಿರುವ ಚಿತ್ ಶಕ್ತಿಯ ಸಾಕ್ಷಾತ್ಕಾರವನ್ನು ಪಡೆದವನಾಗಿ ಸ್ವ–ಸ್ವರೂಪಾನುಸಂಧಾನದಲ್ಲಿಯೇ ಸುಸ್ಥಿರನಾಗಿರುತ್ತಾನೆ.

ಜ್ಞಾನದ ಪ್ರಾಪ್ತಿಯಾಗುವವರೆಗೆ ಪ್ರಮಾತೃ, ಪ್ರಮಾಣ ಹಾಗೂ ಪ್ರಮೇಯ ಗಳೆಂಬ ತ್ರಿಪುಟಿಯ ವ್ಯವಹಾರವು ನಡೆದೇ ಇರುತ್ತದೆ. ಶಿವ–ಜೀವರ ಐಕ್ಯ ಜ್ಞಾನವನ್ನು

ಪ್ರಾಪ್ತಿ ಮಾಡಿಕೊಳ್ಳುವಾಗ ಶಿವನು ಪ್ರಮೇಯನಾಗಿರುತ್ತಾನೆ. ಜೀವಾತ್ಮನು ಪ್ರಮಾತೃವಾಗಿರುತ್ತಾನೆ ಹಾಗೂ ಶಬ್ದಾದಿಗಳು ಪ್ರಮಾಣಗಳಾಗಿರುತ್ತವೆ. ಈ ತ್ರಿಪುಟಿಗಳ ವ್ಯವಹಾರ ಮೂಲಕವಾಗಿ ಪ್ರಮಾತೃವು ಪ್ರಮೇಯನಾದ ಶಿವನನ್ನು ತನ್ನಾತ್ಮ ರೂಪವನ್ನಾಗಿ ಪಡೆದುಕೊಂಡ ನಂತರ ಪ್ರಮಾತಾ ಹಾಗೂ ಪ್ರಮೇಯಗಳೆರಡೂ ಏಕರೂಪಗಳಾಗಿ ಬಿಡುತ್ತವೆ. ಪ್ರಮಾತೃವು ಪ್ರಮೇಯ ಸ್ವರೂಪವನ್ನು ಪಡೆದ ನಂತರ ಪ್ರಮಾಣದ ವ್ಯವಹಾರವು ನಿಂತು ಬಿಡುತ್ತದೆ. ಆ ಸಂದರ್ಭದಲ್ಲಿ ಈ ತ್ರಿಪುಟಿಗಳ ಭೇದವು ಇಲ್ಲದಾಗಿ ಹೋಗುತ್ತದೆ. ಹೀಗೆ ಶಿವಯೋಗಿಯು ಸ್ವಾತ್ಮರೂಪದಲ್ಲಿ ಸುಸ್ಥಿರನಾಗಿರೋಣದರಿಂದ ಅವನ ಮನಸ್ಸಿನಲ್ಲಿ ಪ್ರಮಾತೃ, ಪ್ರಮಾಣ, ಪ್ರಮೇಯಗಳೆಂಬ ತ್ರಿಪುಟಿ ವ್ಯವಹಾರವಾಗಲಿ ಮತ್ತು ವಾಚ್ಯಾರ್ಥ, ಲಕ್ಷ್ಯಾರ್ಥ ವ್ಯವಹಾರವಾಗಲಿ ಸುಳಿಯುವುದಿಲ್ಲ. ಈ ವ್ಯವಹಾರಕ್ಕಿಂತಲೂ ಉನ್ನತವಾದ ಸ್ಥಿತಿಯಲ್ಲಿ ವಿಹರಿಸುತ್ತಿರೋಣದರಿಂದ ಯಾವ ಬಾಧೆಗಳಿಲ್ಲದೆ ತನ್ನಲ್ಲಿಯೇ ತಾನು ಸುಸ್ಥಿರನಾಗಿರುತ್ತಾನೆಂಬುದು ಪೂಜ್ಯಪಾದರ ಆಶಯವಾಗಿದೆ.

ಸ್ವೀಕೃತಪ್ರಸಾದಿ ಸ್ಥಲದ ಶಿವಯೋಗಿಯು ಅನುಭವಿಸುತ್ತಿರುವ ಆನಂದಾನುಭೂತಿಯ ನಿರ್ಭಾದಕತ್ವವನ್ನು ಪೂಜ್ಯಪಾದರು ಪುನಃ–

ಅದ್ವೈತಬೋಧ ನಿರ್ಧೂತಭೇದಾವೇಶಸ್ಯ ಯೋಗಿನಃ ।
ಸಾಕ್ಷಾತ್ಕೃತ ಮಹಾಸಂವಿತ್ ಪ್ರಕಾಶಸ್ಯ ಕ್ವ ಬಂಧನಮ್ ॥

(ಸಿ. ಶಿ. ೨೦–೮)

ಈ ವಿಧವಾಗಿ ವಿವರಿಸಿದ್ದಾರೆ. ಶಿವಾದ್ವೈತ ಬೋಧದಿಂದ ಭೇದವನ್ನು ಸಂಪೂರ್ಣವಾಗಿ ಇಲ್ಲವಾಗಿಸಿಕೊಂಡ ಮತ್ತು ಮಹಾ ಸಂವಿತ್ ಪ್ರಕಾಶವನ್ನು ಸಾಕ್ಷಾತ್ಕರಿಸಿಕೊಂಡ ಯೋಗಿಗೆ ಯಾವುದೇ ವಿಧವಾದ ಬಂಧನವು ಇರುವುದಿಲ್ಲ.

ಶ್ರೀ ಜಗದ್ಗುರು ರೇಣುಕಭಗವತ್ಪಾದರು ಮಹರ್ಷಿ ಅಗಸ್ತ್ಯನನ್ನು ಕುರಿತು ಸ್ವೀಕೃತ ಪ್ರಸಾದಿಸ್ಥಲದ ಶಿವಯೋಗಿಯ ಸ್ಥಿತಿಯನ್ನು ವರ್ಣಿಸುತ್ತ ಶಿವಾದ್ವೈತ ಬೋಧದಿಂದ ಭೇದಾವೇಶವು ಇಲ್ಲದಾಗಿ ಹೋಗುತ್ತದೆ ಎಂಬುದಾಗಿ ಆದೇಶಿಸಿದ್ದಾರೆ. ಇಲ್ಲಿ ಪ್ರಪಂಚದಲ್ಲಿ ತೋರುವ ಭೇದಕ್ಕೆ ಭೇದಾವೇಶವೆಂಬುದಾಗಿ ಶಬ್ದ ಪ್ರಯೋಗ ಮಾಡಿರುವುದು ಒಂದು ವಿಶೇಷವಾಗಿದೆ. ಆವೇಶವೆಂದರೆ ಬಲಪೂರ್ವಕವಾಗಿ ಪ್ರವೇಶಿಸು ಎಂದರ್ಥ. ಒಬ್ಬ ವ್ಯಕ್ತಿಯ ಶರೀರದಲ್ಲಿ ಭೂತಾವೇಶವಾಗುವುದನ್ನು ನೋಡುತ್ತೇವೆ. ಯಾವುದೇ ವ್ಯಕ್ತಿಯ ಶರೀರದಲ್ಲಿ ಒಂದು ಭೂತವು ಬಲಾತ್ಕಾರವಾಗಿ ಪ್ರವೇಶಿಸಿತೆಂದರೆ, ಮೂಲ ವ್ಯಕ್ತಿತ್ವವನ್ನು ಮರೆಯಿಸಿ ಹಾಕಿ ತನ್ನದೇಯಾದ ತಾಂಡವ ನೃತ್ಯವನ್ನು ಮಾಡುತ್ತಿರುತ್ತದೆ. ಭೂತಾವಿಷ್ಟನಾದ ವ್ಯಕ್ತಿಯು ತನ್ನ ಇಚ್ಛೆಯಂತೆ ವ್ಯವಹರಿಸದೇ ಭೂತದ ಇಚ್ಛೆಯ ಅನುಸಾರವಾಗಿ ವ್ಯವಹರಿಸಲು ಪ್ರಾರಂಭಿಸುತ್ತಾನೆ. ಇದೇ ಪ್ರಕಾರವಾಗಿ ಸಂಸಾರದಲ್ಲಿಯ ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿ ದ್ವೈತರೂಪವಾದ ಭೂತವು ಪ್ರವೇಶಿಸಿರುತ್ತದೆ. ಅಂತೆಯೇ ಅವನು ಶಿವರೂಪವಾದ ಈ ಸೃಷ್ಟಿಯನ್ನು ಶಿವರೂಪವಾಗಿ ನೋಡದೇ ಪಂಚವಿಧ ಭೇದಾತ್ಮಕವಾಗಿ ಕಾಣುತ್ತಾನೆ. ಜೀವ–ಜೀವರಲ್ಲಿಯ ಭೇದ, ಜೀವ–ಈಶ್ವರ

ದಲ್ಲಿಯ ಭೇದ, ಜಡ–ಈಶ್ವರದಲ್ಲಿಯ ಭೇದ, ಜೀವ–ಜಡಗಳ ಭೇದ ಮತ್ತು ಜಡ–ಜಡಗಳ ಭೇದವೆಂಬುದಾಗಿ ಶಾಸ್ತ್ರಕಾರರು ಐದು ವಿಧ ಭೇದಗಳನ್ನು ಪ್ರತಿಪಾದಿಸಿದ್ದಾರೆ. ಈ ಭೇದವು ವ್ಯಾವಹಾರಿಕವಾಗಿ ತೋರುತ್ತಿದ್ದರೂ ಇದು ಶಾಶ್ವತವಾಗಿ ಇರುವಂಥದ್ದಲ್ಲ. ಒಬ್ಬ ವ್ಯಕ್ತಿಯ ದೇಹದಲ್ಲಿ ಪ್ರವಿಷ್ಟವಾದ ಭೂತವು ಮಾಂತ್ರಿಕನ ಮಂತ್ರ ಪ್ರಭಾವದಿಂದ ಆತನನ್ನು ಬಿಟ್ಟು ಹೋಗುವಂತೆ, ಈ ಭೇದ ರೂಪವಾದ ಭೂತಾವೇಶವೂ ಸಹ ಲಿಂಗಾಂಗ ಸಾಮರಸ್ಯರೂಪವಾದ ಅಭೇದ ಬೋಧನೆಯಿಂದ ಶಾಶ್ವತವಾಗಿ ಇಲ್ಲವಾಗಿ ಹೋಗುತ್ತದೆ.

ವಿವಾಹ ಪೂರ್ವದಲ್ಲಿ ಪರಸ್ಪರ ಅಪರಿಚಿತರೂ ಭಿನ್ನರೂ ಆಗಿರುವ ವಧೂ–ವರರು ವಿವಾಹ ಸಂಸ್ಕಾರದಿಂದ ಪರಸ್ಪರ ಅಭಿಮಾನಿಗಳಷ್ಟೇ ಅಲ್ಲ ಅವರೀರ್ವರಲ್ಲಿ ತಾದಾತ್ಮ್ಯ ಭಾವನೆಯು ಸಹ ಬೆಳೆದು ಬರುತ್ತದೆ. ಅವರೀರ್ವರಲ್ಲಿ ಯಾರೊಬ್ಬರಿಗೆ ಯಾವುದೇ ವಿಧವಾದ ನೋವು ಉಂಟಾದರೆ ದುಃಖವು ಮಾತ್ರ ಇಬ್ಬರಿಗೂ ಸಮಾನವಾಗಿ ಆಗುವುದನ್ನು ಲೋಕದಲ್ಲಿ ಕಾಣುತ್ತೇವೆ. ಇದಕ್ಕೆಲ್ಲ ಅವರೀರ್ವರಲ್ಲಿಯ ಪರಸ್ಪರ ತಾದಾತ್ಮ್ಯ ಭಾವನೆಯೇ ಕಾರಣವಾಗಿರುತ್ತದೆ. ಪತಿ–ಪತ್ನಿಯರಲ್ಲಿ, ಗುರು–ಶಿಷ್ಯರಲ್ಲಿ ಮತ್ತು ಪಿತಾ–ಪುತ್ರಾದಿಗಳಲ್ಲಿ ಇಂತಹ ಏಕರೂಪದ ಭಾವನೆಗಳನ್ನು ಕಾಣಬಹುದು. ಲೋಕದಲ್ಲಿ ಪರಸ್ಪರ ಭಿನ್ನರಾಗಿರುವ ವ್ಯಕ್ತಿಗಳು ವ್ಯಾವಹಾರಿಕ ಸಂಬಂಧಗಳಿಂದ ತಮ್ಮ ಭೇದವನ್ನು ಮರೆತು ಏಕರೂಪವಾಗಿ ವ್ಯವಹರಿಸುತ್ತಿರುವಾಗ, ವಾಸ್ತವಿಕವಾಗಿ ಅಭಿನ್ನರೇ ಆಗಿರುವ ಶಿವ–ಜೀವರು ಮಧ್ಯದಲ್ಲಿ ಭೂತದಂತೆ ಪ್ರವೇಶವಾಗಿರುವ ದ್ವೈತಭಾವನೆಯಿಂದ ಭಿನ್ನರಾಗಿ ತೋರುವ ಇವರು ಸದ್ಗುರುವಿನ ಅದ್ವೈತ ಬೋಧನೆಯಿಂದ ಅವರೀರ್ವರಲ್ಲಿಯ ದ್ವೈತಭಾವವು ದೂರವಾಗಿ ಅವರಲ್ಲಿ ಶಾಶ್ವತವಾದ ಅದ್ವೈತ ಸ್ಥಿತಿಯು ಪ್ರಾಪ್ತವಾಗುವುದರಲ್ಲಿ ಆಶ್ಚರ್ಯ ಪಡಬೇಕಾಗಿಲ್ಲ. ಹೀಗೆ ಗುರೂಪದೇಶ ಮೂಲಕವಾಗಿ ಭೇದಾವೇಶವು ನಷ್ಟವಾಗಲು ಸ್ವಾತ್ಮಪ್ರಕಾಶದ ಅನುಭವವು ಉಂಟಾಗುವುದು. ಇಂತಹ ಸಂದರ್ಭದಲ್ಲಿ ಆ ಶಿವಯೋಗಿಗೆ ಯಾವುದೇ ಪ್ರಕಾರದ ಬಂಧನಗಳು ಇರಲಾರವು.

ಸಂಸಾರದಲ್ಲಿಯ ಬಂಧನಕ್ಕೆ ಭೇದ ಬುದ್ಧಿಯೇ ಕಾರಣವಾದುದು. ಭೇದ ಬುದ್ಧಿಯ ಮೂಲಕವಾಗಿ ಪ್ರಾಪ್ತವಾದ ಬಂಧನವೇ ದುಃಖದ ಮೂಲಕಾರಣವು. ಲೋಕದಲ್ಲಿಯ ಬಂಧನಗಳು ಕೆಲ ಕಾಲ ಸುಖದಾಯಕವಾಗಿ ತೋರಿದರೂ ಕಾಲಾಂತರದಲ್ಲಿ ಅದು ದುಃಖದಾಯಕವಾಗಿ ಪರಿಣಮಿಸುತ್ತದೆ. ಆಕಾಶದಲ್ಲಿ ಸ್ವಚ್ಛಂದವಾಗಿ ವಿಹರಿಸುವ ಒಂದು ಪಕ್ಷಿಯನ್ನು ಪಂಜರದಲ್ಲಿಟ್ಟು ಬಂಧನಗೊಳಿಸಿ ಅದಕ್ಕೆ ಸಮಯಕ್ಕೆ ಸರಿಯಾಗಿ ನೀರು ಹಾಗೂ ಹಣ್ಣುಗಳ ವ್ಯವಸ್ಥೆ ಮಾಡಲು ಮೊದಮೊದಲು ಅದಕ್ಕೆ ಸಂತೋಷ ಉಂಟಾಗಬಹುದು. ಈ ಪೂರ್ವದಲ್ಲಿ ಅದು ತನ್ನ ಆಹಾರಕ್ಕಾಗಿ ದಿನವಿಡೀ ಅರಣ್ಯದಲ್ಲಿ ಮರದಿಂದ ಮರಕ್ಕೆ ಸಂಚರಿಸಬೇಕಾಗುತ್ತಿತ್ತು. ಸದ್ಯಃ ಮಾತ್ರ ಅದು ಎಲ್ಲಿಯೂ ಹೋಗದೇ ಇದ್ದರೂ ಪೇರಲ, ದಾಳಿಂಬ ಮುಂತಾದ ಅದಕ್ಕೆ ಅಭೀಷ್ಟವಾದ ಫಲಗಳು ಅದರ ಮುಂದೆ ಬಂದು ಬೀಳುವಾಗ ಅದಕ್ಕೆ ಆನಂದವೇ ಆನಂದ.

ಕೆಲವು ದಿನಗಳು ಗತಿಸಿದ ನಂತರ ತನಗೆ ಸಮಯಾನುಸಾರವಾಗಿ ಆಹಾರವು ದೊರೆಯುತ್ತಿದ್ದರೂ ವಿಹಾರಕ್ಕೆ ಅವಕಾಶವಿಲ್ಲವಲ್ಲ ಎಂಬ ಕೊರಗು ಅದನ್ನು ಕೊರೆಯಲು ಪ್ರಾರಂಭಿಸುತ್ತದೆ. ತನ್ನ ಜನ್ಮದಿಂದಲೇ, ಸ್ವಚ್ಛಂದವಾಗಿ ವಿಹರಿಸಿದ ಈ ಪಕ್ಷಿಯು ಪಂಜರದಲ್ಲಿಯೇ ಪಂಕವನ್ನು ಬಡಿಯುತ್ತ ವಿಹಾರದ ಸ್ವಾತಂತ್ರ್ಯವನ್ನು ಕಳೆದುಕೊಂಡು ಉದಾಸೀನ ಭಾವತಾಳುತ್ತದೆ. ಹೀಗೆ ಮನದಲ್ಲಿ ಉದಾಸೀನ ಭಾವನೆಯುಂಟಾಗಲು ತನ್ನೆದುರಿನಲ್ಲಿ ತಂದಿರಿಸಿದ ಫಲಗಳನ್ನು ತಿನ್ನುವ ಅಪೇಕ್ಷೆಯನ್ನು ಸಹ ಕಳೆದುಕೊಳ್ಳುತ್ತದೆ. ಆಗ ಪಂಜರದ ಬಂಧನವು ದುಃಖದಾಯಕವಾಗಿ ಗೋಚರಿಸತೊಡಗುವುದು. ಇದೇ ಪ್ರಕಾರವಾಗಿ ಲೋಕದಲ್ಲಿ ಸತಿ–ಪತಿ, ಪಿತ–ಪುತ್ರ ಮುಂತಾದ ಬಂಧನಗಳು ಪ್ರಾರಂಭದಲ್ಲಿ ಸುಖರೂಪಗಳಾಗಿ ತೋರಿದರೂ ಕಾಲಾಂತರದಲ್ಲಿ ಅವುಗಳಿಂದಲೇ ಜೀವಾತ್ಮನು ದುಃಖಿಯಾಗುತ್ತಾನೆ. ಆಗ ಈ ದುಃಖದಿಂದ ಮುಕ್ತನಾಗಬೇಕೆಂಬ ಇಚ್ಛೆಯಿಂದ ಸದ್ಗುರುವಿಗೆ ಶರಣಾಗಲು ಶ್ರೀ ಗುರುವು ಇವನ ಬಂಧನಕ್ಕೆ ಮೂಲಕಾರಣವಾದುದು ಭೇದ ಬುದ್ಧಿಯೆಂಬುದನ್ನು ಅರಿತು, ಆ ಭೇದ ಬುದ್ಧಿಯನ್ನು ದೂರಮಾಡಲು ಶಿವಾದ್ವೈತವನ್ನು ಬೋಧಿಸುತ್ತಾನೆ. ಈ ಶಿವಾದ್ವೈತಬೋಧದಿಂದ ಭೇದ ಬುದ್ಧಿಯು ನಷ್ಟವಾಗಲು ಬಂಧನಗಳೆಲ್ಲ ತನ್ನಿಂದ ತಾನೇ ಇಲ್ಲವಾಗಿ ಹೋಗುತ್ತವೆ. ಬಂಧನಗಳೇ ಇಲ್ಲದಿದ್ದಾಗ ಪರಿಪೂರ್ಣ ಸ್ವಾತಂತ್ರ್ಯ ಸ್ಥಿತಿಯನ್ನು ಪಡೆದುಕೊಂಡ ಆತನು ಪರಮಾನಂದವನ್ನು ಪಡೆದು ತನ್ನಲ್ಲಿಯೇ ತಾನು ತೃಪ್ತನಾಗುತ್ತಾನೆ.

ಗಾಢವಾದ ನಿದ್ರಾವಸ್ಥೆಯಲ್ಲಿ ಪ್ರತಿಯೊಬ್ಬರಿಗೂ ಆನಂದಾನುಭೂತಿಯಾಗುವುದು ಸರ್ವಾನುಭವಸಿದ್ಧವಾದುದು. ಆ ಅವಸ್ಥೆಯಲ್ಲಿ ಜೀವಾತ್ಮನು ಯಾವುದೇ ಬಂಧನಕ್ಕೆ ಒಳಗಾಗಿರುವುದಿಲ್ಲ, ಅಲ್ಲಿ ಅವನು ಯಾರ ಜೊತೆಗೂ ಯಾವ ಸಂಬಂಧವನ್ನು ಹೊಂದಿರುವುದಿಲ್ಲ, ಅಂತೆಯೇ ಅವನ ಮನಸ್ಸಿನಲ್ಲಿ ಯಾವುದೇ ವ್ಯಕ್ತಿ ಅಥವಾ ವಸ್ತು ವಿಷಯಕವಾದ ಚಿಂತನೆಯು ಇರುವುದಿಲ್ಲ. ವಸ್ತು ಇಲ್ಲವೆ ವ್ಯಕ್ತಿ ವಿಷಯಕವಾದ ಚಿಂತನೆಯೇ ಒಂದು ಮಾನಸಿಕ ಬಂಧನವು. ಸುಷುಪ್ತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸು ಮುಕ್ತವಾಗಿ ನಿರ್ವಿಚಾರ ಮತ್ತು ನಿರ್ವಿಕಾರ ಸ್ಥಿತಿಯನ್ನು ಪಡೆಯುತ್ತದೆ. ಅಂತೆಯೇ ಅಲ್ಲಿ ಪ್ರತಿಯೊಬ್ಬನಿಗೂ ಆನಂದಾನುಭೂತಿಯಾಗುತ್ತದೆ. ಇದಕ್ಕೆ ವಿಪರೀತವಾಗಿ ಜಾಗ್ರತ್ ಹಾಗೂ ಸ್ವಪ್ನಾವಸ್ಥೆಗಳಲ್ಲಿ ಮನದಲ್ಲಿ ಅನೇಕ ಭೇದಭಾವನೆಗಳುಂಟಾಗಿ, ಅನುಕೂಲ ಪ್ರತಿಕೂಲ ವಿಚಾರಗಳು ಮೈದಾಳಿ, ಜೀವಾತ್ಮನು ನಾನಾ ವಿಧವಾದ ದುಃಖವನ್ನು ಅನುಭವಿಸುತ್ತಾನೆ. ಆದ್ದರಿಂದಲೇ ಪೂಜ್ಯಪಾದರು ಶಿವಾದ್ವೈತ ಬೋಧೆಯಿಂದ ಭೇದ ಬುದ್ಧಿಯನ್ನು ಕಳೆದುಕೊಂಡ ಮತ್ತು ಆತ್ಮಸಾಕ್ಷಾತ್ಕಾರವನ್ನು ಹೊಂದಿದ ಶಿವಯೋಗಿಗೆ ಯಾವುದೇ ವಿಧವಾದ ಬಂಧನಗಳಿರುವುದಿಲ್ಲ, ಅಂತೆಯೇ ಅವನು ಆತ್ಮಾನಂದವನ್ನು ಅನುಭವಿಸುತ್ತ ಸ್ವೀಕೃತಪ್ರಸಾದಿಯೆಂಬುದಾಗಿ ಕರೆಯಿಸಿಕೊಳ್ಳುವನೆಂಬುದಾಗಿ ಉಪದೇಶಿಸಿದ್ದಾರೆ.

ಶಿವಾದ್ವೈತ ಜ್ಞಾನವಾದ ಬಳಿಕ ಭೇದ ಜ್ಞಾನವು ಹೇಗೆ ನಿವೃತ್ತಿಯಾಗುವುದೆಂಬ ವಿಷಯವನ್ನು ಪೂಜ್ಯಪಾದರು ಅಗ್ನಿಕಾಷ್ಠಗಳ ದೃಷ್ಟಾಂತ ಮೂಲಕವಾಗಿ ಪುನಃ –

ಚಿದಾತ್ಮನಿ ಶಿವೇ ನ್ಯಸ್ತಂ ಜಗದೇತಚ್ಚರಾಚರಮ್ ।
ಜ್ಞಾಯತೇ ತನ್ಮಯಂ ಸರ್ವಮಗ್ನೌ ಕಾಷ್ಠಾದಿಕಂ ಯಥಾ ॥

(ಸಿ. ಶಿ. ೨೦–೯)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಗ್ನಿಯಲ್ಲಿ ಹಾಕಿದ ಕಟ್ಟಿಗೆಯು ಅಗ್ನಿರೂಪವೇ ಆಗುವಂತೆ ಚಿದಗ್ನಿರೂಪವಾದ ಪರಶಿವನಲ್ಲಿ ತೋರುವ ಈ ಚರಾ ಚರಾತ್ಮಕ ಜಗತ್ತುಸ್ವೀಕೃತಪ್ರಸಾದಿಗೆ ಚಿದ್ರೂಪವಾಗಿಯೇ ತೋರುತ್ತದೆ.

ಶಿವಾದ್ವೈತ ಜ್ಞಾನವು ಪ್ರಾಪ್ತಿಯಾದ ನಂತರ ಭೇದಜ್ಞಾನವು ನಷ್ಟವಾಗುವ ರೀತಿಯನ್ನು ಪೂಜ್ಯಪಾದರು ಅಗ್ನಿಕಾಷ್ಠ ದೃಷ್ಟಾಂತ ಮುಖಾಂತರ ಇಲ್ಲಿ ತಿಳಿಯ ಪಡಿಸಿದ್ದಾರೆ. ಬೇವು, ಮಾವು, ಜಾಲಿ ಮುಂತಾದ ವಿಭಿನ್ನ ಜಾತಿಯ ಕಟ್ಟಿಗೆಗಳನ್ನು ಉರಿಯುವ ಅಗ್ನಿಯಲ್ಲಿ ಹಾಕಿದಾಗ, ಅವು ತಮ್ಮ ಜಾತಿಯ ಭೇದಗಳನ್ನು ಸುಟ್ಟುಕೊಂಡು ಅವೆಲ್ಲವೂ ಒಂದೇಯಾದ ಅಗ್ನಿರೂಪವನ್ನು ತಾಳುತ್ತವೆ. ಒಮ್ಮೆ ಅವು ಅಗ್ನಿರೂಪವಾದ ಮೇಲೆ ಅವುಗಳ ಮೊದಲಿನ ನಾಮರೂಪಗಳ ಭೇದವು ಇಲ್ಲವಾಗಿ ಬಿಡುತ್ತದೆ. ಅಗ್ನಿಯು ಕಟ್ಟಿಗೆಗಳ ಭೇದವನ್ನು ನಷ್ಟಮಾಡಿ ಅವೆಲ್ಲವುಗಳನ್ನು ತನ್ನಂತೆ ಮಾಡಿಕೊಳ್ಳುವಂತೆ ಜ್ಞಾನರೂಪವಾದ ಚಿದಗ್ನಿಯು ಶಿವ ಜೀವರ ಭೇದವನ್ನು ನಷ್ಟಗೊಳಿಸುತ್ತದೆ. ಪ್ರಪಂಚ ದಲ್ಲಿ ದಿವ್ಯಾಗ್ನಿ, ಜಠರಾಗ್ನಿ, ಚಿತಾಗ್ನಿ, ಚಿಂತಾಗ್ನಿ, ಆಕರಜಾಗ್ನಿ ಮತ್ತುವಡವಾಗ್ನಿ ಮುಂತಾದ ಅನೇಕ ಅಗ್ನಿಗಳ ರೂಪವನ್ನು ನಾವು ಕಾಣಬಹುದು. ಇವೆಲ್ಲ ಅಗ್ನಿಗಳಿಗೆ ಅಗ್ನಿತ್ವವು ಪ್ರಾಪ್ತವಾಗಿರುವುದು ಆ ಮುಖ್ಯವಾದ ಚಿದಾಗ್ನಿಯಿಂದಲೇ ಉಳಿದೆಲ್ಲ ಅಗ್ನಿಗಳು ತಮ್ಮ ತಮ್ಮ ಸಾಮರ್ಥ್ಯಕ್ಕನುಸಾರವಾಗಿ ವಸ್ತು ಹಾಗೂ ವ್ಯಕ್ತಿಗಳನ್ನು ದಹಿಸಿದರೆ ಚಿದಗ್ನಿಯು ವಿಶ್ವದ ಸಮಸ್ತ ಭೇದವನ್ನೇ ದಹಿಸಿ ಹಾಕುತ್ತದೆ. ಅಗ್ನಿಯು ತನ್ನ ಸಂಪರ್ಕದಲ್ಲಿ ಬಂದ ಪದಾರ್ಥಗಳನ್ನು ತನ್ನ ರೂಪವಾಗಿಸಿಕೊಳ್ಳುವಂತೆ ಚಿದಗ್ನಿಯು ಅರ್ಥಾತ್ ಜ್ಞಾನಾಗ್ನಿಯು ಸಾಧಕರನ್ನು ತದ್ರೂಪವನ್ನಾಗಿಸುತ್ತದೆ. ಚಿದ್ರೂಪವನ್ನು ಪಡೆದ ಶಿವಯೋಗಿಯು ತನ್ನಲ್ಲಿಯ ಶಿವಭಾವನೆಯಿಂದ ವಿಶ್ವವೆಲ್ಲವನ್ನು ಶಿವರೂಪವಾಗಿಯೇ ಕಾಣುತ್ತಾನೆ. ದೃಷ್ಟಿಯು ಶಿವಮಯವಾದಾಗ ಸೃಷ್ಟಿಯೆಲ್ಲ ಶಿವಮಯವೇ ಆಗಿಬಿಡುತ್ತದೆ. ಅಂತೆಯೇ ಜ್ಞಾನಿಗಳು 'ಯತ್ರ ಯತ್ರ ಮನೋ ಯಾತಿ, ತತ್ರ ತತ್ರ ಬ್ರಹ್ಮದರ್ಶನಂ' ಎಂಬುದಾಗಿ ಹೇಳಿದ್ದಾರೆ. ಇದಕ್ಕೇನೇ ದೃಷ್ಟಿ ಸೃಷ್ಟಿವಾದವೆಂದು ಕರೆಯುವರು. ಹೇಗೆ ದೃಷ್ಟಿಯೋ ಹಾಗೆ ಸೃಷ್ಟಿಯೆಂಬುದು ಇದರ ರಹಸ್ಯವು.

ಶಾಸ್ತ್ರಕಾರರು ಸೃಷ್ಟಿ–ದೃಷ್ಟಿವಾದ ಮತ್ತು ದೃಷ್ಟಿ–ಸೃಷ್ಟಿವಾದ ಎಂಬುದಾಗಿ ಎರಡು ಶಾಸ್ತ್ರೀಯ ಪದ್ಧತಿಗಳನ್ನು ನಿರೂಪಿಸಿದ್ದಾರೆ. ಸೃಷ್ಟಿ ಹೇಗೆ ಇದೆಯೋ ಹಾಗೆಯೇ ಅದನ್ನು ನೋಡುವುದು ಸೃಷ್ಟಿ–ದೃಷ್ಟಿವಾದವು. ಪುಸ್ತಕ, ಪೆನ್ನು, ಹಾಸಿಗೆ ಮುಂತಾದ ವಸ್ತುಗಳನ್ನು ತದ್ರೂಪವಾಗಿಯೇ ನೋಡುವುದು ಸೃಷ್ಟಿ–ದೃಷ್ಟಿವಾದವು. ಇದು ವ್ಯಾವಹಾರಿಕವೂ ಹಾಗೂ ನೈಸರ್ಗಿಕವೂ ಆದುದಾಗಿದೆ. ವಸ್ತುಗಳನ್ನು ಆಯಾ ವಸ್ತುಗಳ ರೂಪದಲ್ಲಿಯೇ ತಿಳಿದುಕೊಳ್ಳಲು ವಿಶೇಷ ಸಾಧನೆಯ ಅವಶ್ಯಕತೆಯಿರುವುದಿಲ್ಲ, ನೋಡುವ ನೇತ್ರ ಸರಿಯಾಗಿದ್ದು ಮನಸ್ಸು ಅದರೊಂದಿಗೆ ಸಂಬಂಧವಾಗಿದ್ದರೆ ಸಾಕು. ಆ

ವಸ್ತುವನ್ನು ಇದ್ದ ಹಾಗೆ ಅರಿಯಲು ಬರುತ್ತದೆ. ಆದರೆ ದೃಷ್ಟಿ–ಸೃಷ್ಟಿವಾದದಲ್ಲಿ ಮಾತ್ರ ನೈಸರ್ಗಿಕವಾದ ದೃಷ್ಟಿಯನ್ನು ಶಿವಭಾವನೆಯಿಂದ ಶಿವಮಯವನ್ನಾಗಿ ಮಾಡಿಕೊಳ್ಳಲು ಬಹಳಷ್ಟು ಸಾಧಿಸಬೇಕಾಗುವುದು. ಆಗ ಈ ಚರಾಚರಾತ್ಮಕವಾದ ಸೃಷ್ಟಿಯನ್ನೆಲ್ಲ ಶಿವಮಯವನ್ನಾಗಿ ನೋಡಲು ಸಾಧ್ಯವಾಗುವುದು. ನಮ್ಮ ಇಂದ್ರಿಯಗಳಲ್ಲಿ ನೇತ್ರ ಹಾಗೂ ಮನಸ್ಸುಗಳು ಬಹಳ ಪ್ರಮುಖವಾದವುಗಳು. ಒಮ್ಮೆ ಇವೆರಡು ಶಿವಮಯವಾದವೆಂದರೆ ವಿಶ್ವವೆಲ್ಲ ವನ್ನು ಶಿವಮಯವಾಗಿ ನೋಡುವುದು ಅತ್ಯಂತ ಸುಲಭವಾಗುವುದು. ಸಣ್ಣ ಮಕ್ಕಳು ಬಣ್ಣ ಬಣ್ಣದ ಕಾಗದಗಳಿಂದ ತಯಾರಿಸಿದ ಕನ್ನಡಕಗಳನ್ನು ಹಾಕಿಕೊಂಡಾಗ ಆ ಕನ್ನಡಕದ ಕಾಗದವು ಯಾವ ಬಣ್ಣದ್ದಿರುತ್ತದೆಯೋ ಪ್ರಪಂಚವೆಲ್ಲ ಅದೇ ಬಣ್ಣದ್ದಾಗಿ ತೋರುತ್ತದೆ. ಬಣ್ಣದ ಕನ್ನಡಕದಿಂದ ಮಕ್ಕಳು ಪ್ರಪಂಚವನ್ನು ಆಯಾ ಬಣ್ಣದ್ದನ್ನಾಗಿ ಸಹಜವಾಗಿ ನೋಡುವಂತೆ ಶಿವದೃಷ್ಟಿಯನ್ನು ಪಡೆದ ಶಿವಯೋಗಿಯು ಅಷ್ಟೇ ಸಹಜವಾಗಿ ಈ ಸೃಷ್ಟಿಯನ್ನು ಶಿವಮಯವಾಗಿ ನೋಡುತ್ತಾನೆ. ಇದುವೇ ದೃಷ್ಟಿ–ಸೃಷ್ಟಿವಾದವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸ್ವೀಕೃತ ಪ್ರಸಾದಿಯ ದೃಷ್ಟಿ ಸೃಷ್ಟಿವಾದವನ್ನು ಅಥವಾ ಶಿವದೃಷ್ಟಿ ವ್ಯವಹಾರವನ್ನು ಪುನಃ –

ನ ಭಾತಿ ಪೃಥ್ವೀ ನ ಜಲಂ, ನ ತೇಜೋ ನೈವ ಮಾರುತಃ ।
ನಾಕಾಶೋ ನ ಪರಂ ತತ್ತ್ವಂ ಶಿವೇ ದೃಷ್ಟೇ ಚಿದಾತ್ಮನಿ ॥

(ಸಿ. ಶಿ. ೨೦–೧೦)

ಎಂಬುದಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿದ್ರೂಪವಾದ ಪರಶಿವಬ್ರಹ್ಮ ತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಶಿವಯೋಗಿಗೆ ಪೃಥ್ವಿ, ಜಲ, ತೇಜ, ವಾಯು ಮತ್ತು ಆಕಾಶಗಳೆಂಬ ಮಹಾಭೂತಗಳು ತೋರುವುದಿಲ್ಲ ಅರ್ಥಾತ್ ಆ ಶಿವಯೋಗಿಯು ಸರ್ವವೆಲ್ಲವನ್ನು ಶಿವಮಯವಾಗಿಯೇ ಕಾಣುತ್ತಾನೆ.

ಒಮ್ಮೆ ದೃಷ್ಟಿಯು ಶಿವಮಯವಾಯಿತೆಂದರೆ ಅದು ಏನನ್ನೇ ನೋಡಿದರೂ ಶಿವರೂಪವಾಗಿಯೇ ನೋಡುತ್ತದೆ. ಆದ್ದರಿಂದಲೇ ಶಿವದೃಷ್ಟಿ ಸಂಪನ್ನನಾದ ಆ ಶಿವಯೋಗಿಯು ಪೃಥ್ವಿ ಮುಂತಾದ ಪಂಚಮಹಾಭೂತಗಳನ್ನು ಮಹಾಭೂತಗಳ ರೂಪದಲ್ಲಿ ಕಾಣದೇ ಶಿವರೂಪವಾಗಿಯೇ ಕಾಣುತ್ತಾನೆ. ಈ ಪಂಚಮಹಾಭೂತ ಗಳಾದರೂ ಶಿವನ ವ್ಯಕ್ತವಾದ ಅಷ್ಟತನುಗಳಲ್ಲಿ ಪರಿಗಣಿಸಲ್ಪಟ್ಟಿವೆ. ವಿಶ್ವದ ರೂಪ ವನ್ನು ಪರಿವರ್ತಿಸುವುದು ಅಸಾಧ್ಯವಾದ ಕಾರ್ಯವು. ಆದರೆ ವಿಶ್ವವನ್ನು ಶಿವಮಯವಾಗಿ ನೋಡುವುದು ಶಿವಯೋಗಿಗಳಿಗೆ ಸುಲಭ ಸಾಧ್ಯವಾದುದು. ಅಂತೆಯೇ ಸ್ವೀಕೃತ ಪ್ರಸಾದಿಯು ಭೌತಿಕ ಪ್ರಪಂಚವೆಲ್ಲವನ್ನು ಶಿವಮಯವಾಗಿ ಕಾಣುತ್ತಾನೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಈ ಸ್ವೀಕೃತಪ್ರಸಾದಿ ಸ್ಥಲದ ಶಿವಯೋಗಿಯು ಅಂತರಂಗದಲ್ಲಿಯ ಜ್ಯೋತಿರ್ಲಿಂಗ ದಲ್ಲಿ ತಲ್ಲೀನನಾಗಿರೋಣದರಿಂದ ಅವನಿಗೆ ಪ್ರಪಂಚದ ಯಾವ ಲೇಪವು ಉಂಟಾಗುವು ದಿಲ್ಲವೆಂಬ ವಿಷಯವನ್ನು ನಿರೂಪಿಸಲೋಸುಗ ಪೂಜ್ಯಪಾದರು ಪುನಃ –

ಜ್ಯೋತಿರ್ಲಿಂಗೇ ಚಿದಾಕಾರೇ ಜ್ವಲತ್ಯಂತರ್ನಿರಂತರಮ್ ।
ವಿಲೀನಂ ನಿಖಿಲಂ ತತ್ತ್ವಂ ಪಶ್ಯನ್ ಯೋಗೀ ನ ಲಿಪ್ಯತೇ ॥

(ಸಿ. ಶಿ. ೨೦–೧೧)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ಹೃದಯದ ಅಷ್ಟದಲ ಕಮಲದ ಮಧ್ಯದಲ್ಲಿ ಪ್ರಕಾಶಿಸುವ ಚಿದ್ರೂಪವಾದ ಲಿಂಗತತ್ತ್ವದಲ್ಲಿ ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳು ಲಯ ಚಿಂತನೆಯನ್ನು ಮಾಡುವ ಶಿವಯೋಗಿಗೆ ಈ ಲೋಕದ ಯಾವ ವಸ್ತುವಿನ ಲೇಪವೂ ಆಗುವುದಿಲ್ಲ ಅರ್ಥಾತ್ ಪ್ರಪಂಚದ ಸರ್ವಭೋಗ ಭಾಗ್ಯಗಳ ಮಧ್ಯದಲ್ಲಿದ್ದರೂ ಆತನು ಅಲಿಪ್ತನಾಗಿರುತ್ತಾನೆ.

ತನ್ನ ಹೃದಯದಲ್ಲಿ ನಿರಂತರ ಪ್ರಜ್ವಲಿಸುತ್ತಿರುವ ಚಿದ್ರೂಪವಾದ ಜ್ಯೋತಿರ್ಲಿಂಗದಲ್ಲಿ ತಲ್ಲೀನವಾದ ಚಿತ್ತವೃತ್ತಿಯುಳ್ಳ ಶಿವಯೋಗಿಯು ಎಲ್ಲೇ ಇದ್ದರೂ ಅಲಿಪ್ತನಾಗಿರುತ್ತಾನೆ. ಯಾವುದೇ ಒಂದು ವಸ್ತುವಿನ ಜೊತೆಗೆ ನಾವು ಲಿಪ್ತರಾಗುವುದಕ್ಕೆ ನಮ್ಮ ಚಿತ್ತವೃತ್ತಿಯೇ ಕಾರಣವು. ಲಿಪ್ತ, ಅಲಿಪ್ತತೆಯಲ್ಲಿ ಶರೀರದ ಪಾತ್ರವು ಗೌಣವಾಗಿದ್ದು, ಚಿತ್ತದ ಪಾತ್ರವು ಪ್ರಮುಖವಾಗಿರುತ್ತದೆ. ನಾವು ಯಾವ ವಸ್ತುವನ್ನು ಸ್ಪರ್ಶಿಸುತ್ತೇವೆಂಬುದು ಬಹಳ ಮುಖ್ಯವಾದುದಲ್ಲ. ಯಾವ ಭಾವನೆಯಿಂದ ಸ್ಪರ್ಶಿಸು ತ್ತೇವೆಂಬುದು ಮುಖ್ಯವಾದುದು. ನಮ್ಮ ಶರೀರ ಹಾಗೂ ಇಂದ್ರಿಯಗಳು ವ್ಯವಹರಿ ಸುತ್ತಿರುವ ಸ್ಥಾನದಲ್ಲಿ ಮನಸ್ಸು ಇದ್ದೇ ಇರುವುದೆಂದು ಹೇಳಲಿಕ್ಕಾಗುವುದಿಲ್ಲ. ಅರಿದಾಗಲೇ ಆ ಇಂದ್ರಿಯದ ವ್ಯವಹಾರವು ಪೂರ್ಣವಾದುದು. ಅಂತೆಯೇ ನಮ್ಮ ಲೌಕಿಕ ಹಾಗೂ ಪಾರಮಾರ್ಥಿಕ ವ್ಯವಹಾರಗಳಲ್ಲಿ ಮನದ ಪಾತ್ರವು ಅತ್ಯಂತ ಪ್ರಮುಖವಾದುದು. ಮನಸ್ಸು ನಮ್ಮನ್ನು ಸಂಸಾರದಲ್ಲಿ ಕಟ್ಟಿ ಹಾಕಲುಬಹುದು. ಇಲ್ಲವೆ ಅದರಿಂದ ಮುಕ್ತಗೊಳಿಸಲುಬಹುದು. ಅಂತೆಯೇ ಶಾಸ್ತ್ರಕಾರರು ''ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ'' ಎಂಬುದಾಗಿ ಉಪದೇಶಿಸಿದ್ದಾರೆ.

ಶಿವಯೋಗಿಯ ಮನಸ್ಸು ಅಂತರಂಗದಲ್ಲಿಯ ಜ್ಯೋತಿರ್ಲಿಂಗದ ಚಿಂತನೆಯಲ್ಲಿ ಮಗ್ನವಾಗಿರೋಣದರಿಂದ ಅಂತಹ ಸಂದರ್ಭದಲ್ಲಿ ಶರೀರ ಇಲ್ಲವೆ ಇಂದ್ರಿಯಗಳಿಗೆ ಯಾವುದೇ ವಸ್ತು ಅಥವಾ ವಿಷಯಗಳ ಸ್ಪರ್ಶವಾದರೂ ಅದರಿಂದ ಮನಸ್ಸು ಲಿಪ್ತವಾಗುವುದಿಲ್ಲ. ಇದೂ ಅಲ್ಲದೆ ಶರೀರದಿಂದ ಯಾವುದೇ ಪ್ರಕಾರದ ಕರ್ಮವು ಸಂಭವಿಸಿದರೂ ಕೂಡ ಆ ಕರ್ಮದ ಫಲವು ಮನಸ್ಸಿಗೆ ಲೇಪವಾಗುವುದಿಲ್ಲ. ಅಗ್ನಿಯು ಸದಾ ಅಲಿಪ್ತವಾಗಿರುವಂತೆ ಶಿವಯೋಗಿಯ ಮನಸ್ಸು ಸಹ ಅಲಿಪ್ತವಾಗಿಯೇ ಇರುತ್ತದೆ. ಜ್ಞಾನಿಗಳ ಅಲಿಪ್ತ ಸ್ಥಿತಿಯನ್ನು ವರ್ಣಿಸುವ ಸಂದರ್ಭದಲ್ಲಿ ಶ್ರೀ ತುಲಸೀದಾಸರು–

ತುಲಸೀ ಜಗಮೇ ಯೂಂ ರಹೊ
ಜೈಸೆ ರಸನಾ ಮುಖಮೊ ಹೀ
ಖಾತೀ ಘೀ ಔರ ತೌಲ ನಿತ
ಫಿರಭೀ ಚಿಕನೀ ನಾಹೀ ॥

ಹೀಗೆ ಉಪದೇಶಿಸಿದ್ದಾರೆ. ಇಲ್ಲಿ ಸರ್ವಾನುಭವಸಿದ್ಧವಾದ ನಾಲಿಗೆಯ ಅಲಿಪ್ತತೆಯನ್ನು ಉದಾಹರಿಸಿದ್ದನ್ನು ಕಾಣುತ್ತೇವೆ. ನಮ್ಮ ನಾಲಿಗೆಯು ಅದೆಷ್ಟು ಎಣ್ಣೆತುಪ್ಪಗಳನ್ನುಂಡರೂ ಅವುಗಳ ಜಿಗುಟುತನವನ್ನು ತನ್ನ ಮೈಗೆ ಅಂಟಿಸಿಕೊಳ್ಳುವುದಿಲ್ಲ. ಆದರೆ ಆ ನಾಲಿಗೆಗೆ ತುಪ್ಪ ಎಣ್ಣೆಗಳನ್ನೊದಗಿಸುತ್ತಿರುವ ಹಸ್ತದ ಬೆರಳುಗಳು ಮಾತ್ರ ಜಿಗಿ ಜಿಗಿಯಾಗಿ ಹೋಗುತ್ತವೆ. ಅಂತೆಯೇ ಪಕ್ವಾನ್ನವನ್ನು ಊಟಮಾಡಿದ ವ್ಯಕ್ತಿಯು ತನ್ನ ಎರಡೂ ಹಸ್ತಗಳನ್ನು ಸಾಬೂನಿನಿಂದ ತೊಳೆದುಕೊಳ್ಳುತ್ತಾನೆ. ಆದರೆ ಅದಾರೂ ನಾಲಿಗೆಯನ್ನು ಸಾಬೂನಿನಿಂದ ತೊಳೆದುಕೊಂಡವರಿಲ್ಲ. ಇದರಿಂದ ನಾಲಿಗೆಯ ನಿರ್ಲಿಪ್ತತೆಯು ಸರ್ವರಿಗೂ ತಿಳಿದು ಬರುವ ವಿಷಯವಾಗಿದೆ. ಹಸ್ತವು ಜಿಗುಟನ್ನು ಅಂಟಿಸಿಕೊಂಡಂತೆ ಅಜ್ಞಾನಿಗಳು ಪ್ರಪಂಚದ ವ್ಯವಹಾರದಲ್ಲಿ ಲಿಪ್ತವಾಗಿ ಹೋದರೂ, ಜ್ಞಾನಿಗಳು ಮಾತ್ರ ನಾಲಿಗೆಯಂತೆ ನಿರ್ಲಿಪ್ತರೇ ಆಗಿರುತ್ತಾರೆ. ಅಂತೆಯೇ ಪೂಜ್ಯಪಾದರು ಸ್ವೀಕೃತ ಪ್ರಸಾದಿಸ್ಥಲದ ಶಿವಯೋಗಿಯನ್ನು ನಿರ್ಲಿಪ್ತನೆಂಬುದಾಗಿ ತಿಳಿಯಪಡಿಸಿದ್ದಾರೆ.

ಈ ಪೂರ್ವದಲ್ಲಿ ವರ್ಣಿಸಲ್ಪಟ್ಟ ಶಿವಯೋಗಿಯು ಅಂತರ್ಮುಖಿಯಾಗಿದ್ದು ಕೊಂಡು ತನ್ನ ಆತ್ಮಜ್ಯೋತಿಯಲ್ಲಿ ಸರ್ವೇ ವಿಷಯಗಳನ್ನು ಹೋಮ ಮಾಡಿ ತಾನು ನಿರ್ವಿಷಯನಾಗಿ ಪ್ರಮೋದಿಸುತ್ತಾನೆಂಬ ವಿಷಯವನ್ನು ಪೂಜ್ಯಪಾದರು ಪುನಃ –

ಅಂತರ್ಮುಖೇನ ಮನಸಾ ಸ್ವಾತ್ಮಜ್ಯೋತಿಷಿ ಚಿನ್ಮಯೇ ।
ಸರ್ವಾನಪ್ಯರ್ಥವಿಷಯಾನ್ ಜುಹ್ವನ್ ಯೋಗೀ ಪ್ರಮೋದತೇ ॥

(ಸಿ. ಶಿ. ೨೦–೧೨)

ಹೀಗೆ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿದ್ರೂಪವಾದ ಸ್ವಸ್ವರೂಪಾಗ್ನಿಯಲ್ಲಿ ಅಂತರ್ಮುಖವಾದ ಮನಸ್ಸಿನಿಂದ ಸರ್ವ ವಿಷಯಗಳನ್ನು ಹೋಮ ಮಾಡುತ್ತಿರುವ ಶಿವಯೋಗಿಯು ಆನಂದವನ್ನನುಭವಿಸುತ್ತ ತನ್ನಲ್ಲಿಯೇ ತಾನು ಇರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಆತ್ಮಜ್ಞಾನಿಯಿಂದ ನಡೆಯಬಹುದಾದ ಒಂದು ವಿಲಕ್ಷಣವಾದ ಹೋಮವಿಧಿಯನ್ನು ಇಲ್ಲಿ ಪ್ರತಿಪಾದಿಸಿದ್ದನ್ನು ಕಾಣಬಹುದು. ಶಿವಾದ್ವೈತ ಜ್ಞಾನ ಸಂಪನ್ನನಾದ ಸ್ವೀಕೃತ ಪ್ರಸಾದಿ ಸ್ಥಲದ ಶಿವಯೋಗಿಯು ಶಬ್ದಸ್ಪರ್ಶಾದಿ ಸರ್ವ ವಿಷಯಗಳನ್ನು ಆತ್ಮ ಜ್ಯೋತಿಯೆಂಬ ಅಗ್ನಿಯಲ್ಲಿ ಹವನ ಮಾಡುತ್ತಾನೆ. ಈ ತೆರನಾದ ವಿಷಯಾರ್ಪಣೆಯಿಂದ ಅವನು ಒಂದು ವಿಲಕ್ಷಣವಾದ ಆನಂದವನ್ನು ಅನುಭವಿಸುತ್ತಿರುತ್ತಾನೆ. ಸಾಮಾನ್ಯರಾದ ಜೀವಿಗಳು ವಿಷಯೋಪಭೋಗವನ್ನು ಮಾಡಿ ಕ್ಷಣಿಕವಾದ ಸುಖವನ್ನು ಅನುಭವಿಸಿದರೆ, ಈ ಶಿವಯೋಗಿಯು ವಿಷಯಾರ್ಪಣೆಯಿಂದ ಅದಕ್ಕಿಂತಲೂ ಹೆಚ್ಚಿನದಾದ ಆನಂದಾನುಭೂತಿಯನ್ನು ಪಡೆಯುತ್ತಾನೆ. ವಿಷಯ ಭೋಗ ಹಾಗೂ ವಿಷಯಾರ್ಪಣೆ ಇವುಗಳಲ್ಲಿಯ ಸೂಕ್ಷ್ಮವಾದ ರಹಸ್ಯವನ್ನು ತಿಳಿದು ಕೊಳ್ಳುವುದು ಪರಮಾವಶ್ಯಕವಾದುದು. ವಿಷಯಗಳನ್ನು ಇಂದ್ರಿಯಗಳಿಗೆ ಸಂಬಂಧ ಗೊಳಿಸಿ ಅದರಿಂದ ಸುಖಾನುಭೂತಿಯನ್ನು ಪಡೆಯುವುದು ವಿಷಯ ಭೋಗವೆಂದು ಕರೆಯಿಸಿಕೊಳ್ಳುತ್ತದೆ. ಈ ತೆರನಾದ ವಿಷಯಭೋಗವು ಜೀವಾತ್ಮನಲ್ಲಿ ಉತ್ತರೋತ್ತರವಾಗಿ ಅತೃಪ್ತಿ ಹಾಗೂ ಅಸಮಾಧಾನಗಳನ್ನು ಉಂಟುಮಾಡುತ್ತದೆ. ಏಕೆಂದರೆ ನಮ್ಮಲ್ಲಿರುವ

ಇಂದ್ರಿಯಗಳು ಯಾವಾಗಲೂ ಹಸಿದವುಗಳೇ ಆಗಿರುತ್ತವೆ. ಇಂದ್ರಿಯಗಳ ಹಸಿವೆಯನ್ನು ಅದೆಷ್ಟು ವಿಷಯಗಳನ್ನು ಕೊಟ್ಟೂ ಸಹ ಪೂರ್ಣಗೊಳಿಸಲಿಕ್ಕಾಗುವುದಿಲ್ಲ. ಇದನ್ನು ತಿಳಿದೇ ವೀರಶೈವ ಆಚಾರ್ಯರು ವಿಷಯಗಳನ್ನು ವಿಷಯರೂಪವಾಗಿ ಅನುಭವಿಸುವುದನ್ನು ತ್ಯಜಿಸಿ, ವಿಷಯಗಳನ್ನು ಪ್ರಸಾದರೂಪವಾಗಿ ಅನುಭವಿಸುವ ಹೊಸ ವಿಜ್ಞಾನವನ್ನು ಆವಿಷ್ಕಾರಗೊಳಿಸಿದ್ದಾರೆ. ಯಾವುದೇ ಪದಾರ್ಥವನ್ನು ನೇರವಾಗಿ ನಾವು ಸ್ವೀಕರಿಸಿದರೆ ಅದು ಪದಾರ್ಥವಾಗಿಯೇ ಇರುತ್ತದೆ. ಆದರೆ ಅದನ್ನೇ ಭಗವದರ್ಪಣ ಮಾಡಿ ಪಡೆದಾಗ ಪ್ರಸಾದವೆನಿಸಿಕೊಳ್ಳುವುದು. ಶಬ್ದ ಸ್ಪರ್ಶಾದಿಗಳು ನೇರವಾಗಿ ಇಂದ್ರಿಯಗಳಿಗೆ ಅರ್ಪಿತವಾದಾಗ ವಿಷಯಗಳೆಂದು ಕರೆಯಿಸಿಕೊಂಡರೆ, ಅವುಗಳನ್ನೇ ಆಯಾ ಇಂದ್ರಿಯಗಳಲ್ಲಿ ಅಧಿಷ್ಠಿತವಾದ ಲಿಂಗಗಳಿಗೆ ಸಮರ್ಪಿಸಿ ಉಪಭೋಗಿಸಿದಾಗ ಶಬ್ದಾದಿಗಳು ವಿಷಯಗಳಾಗಿರದೇ ಪ್ರಸಾದಗಳಾಗಿ ಪರಿಣಮಿಸುತ್ತವೆ. ಅಂತೆಯೇ ಆಗ ಅವುಗಳನ್ನು ಶಬ್ದ ಪ್ರಸಾದ, ಸ್ಪರ್ಶ ಪ್ರಸಾದ, ರೂಪ ಪ್ರಸಾದ, ರಸ ಪ್ರಸಾದ ಮತ್ತು ಗಂಧ ಪ್ರಸಾದ ಎಂದು ಕರೆಯಲಾಗುತ್ತದೆ.

ಸ್ವೀಕೃತ ಪ್ರಸಾದಿ ಸ್ಥಲದ ಅಂತರ್ಮುಖಿಯಾದ ಶಿವಯೋಗಿಯು ಆತ್ಮಾಗ್ನಿಯಲ್ಲಿ ಶಬ್ದಸ್ಪರ್ಶಾದಿ ವಿಷಯಗಳೆಂಬ ಪದಾರ್ಥಗಳನ್ನು ಹವನಗೊಳಿಸಿ, ತನ್ನ ಮನಸ್ಸನ್ನು ವಿಷಯ ಚಿಂತನೆಯಿಂದ ಮುಕ್ತಗೊಳಿಸಿ ಪ್ರಸನ್ನನಾಗಿರುತ್ತಾನೆ. ಅವನ ಮನಸ್ಸಿನ ಈ ಪ್ರಸನ್ನ ಸ್ಥಿತಿಯೇ ಒಂದು ವಿಧವಾದ ಪ್ರಸಾದವು. ಇಂತಹ ಪ್ರಸಾದವನ್ನು ಪಡೆದ ಕಾರಣದಿಂದಲೇ ಅವನಿಗೆ ಸ್ವೀಕೃತ ಪ್ರಸಾದಿ ಎಂಬುದಾಗಿ ಕರೆಯುತ್ತಾರೆ.

ಪ್ರಿಯ, ಮೋದ ಹಾಗೂ ಪ್ರಮೋದಗಳೆಂಬವು ಮನಸ್ಸಿನ ವೃತ್ತಿಗಳಾಗಿರುತ್ತವೆ. ತನಗೆ ಅಭೀಷ್ಟವಾಧ ವಸ್ತುವನ್ನು ನೋಡಿದಾಗ ಪ್ರಿಯ ವೃತ್ತಿಯೂ, ಅದನ್ನು ಪಡೆದಾಗ ಮೋದ ವೃತ್ತಿಯೂ, ಅದನ್ನು ಅನುಭವಿಸಿದಾಗ ಪ್ರಮೋದ ವೃತ್ತಿಯೂ, ಉಂಟಾಗುತ್ತವೆ. ಈ ವೃತ್ತಿಗಳು ಉತ್ತರೋತ್ತರವಾಗಿ ಹೆಚ್ಚು ಮಹತ್ವವುಳ್ಳವುಗಳಾಗಿರುತ್ತವೆ. ಇವುಗಳಲ್ಲಿ ಕೊನೆಯದಾದ ಪ್ರಮೋದ ವೃತ್ತಿಯು ಆನಂದದ ಪರಾಕಾಷ್ಠತೆಯನ್ನು ಅಭಿವ್ಯಕ್ತ ಗೊಳಿಸುತ್ತದೆ. ವಿಷಯಗಳನ್ನೆಲ್ಲ ಆತ್ಮಜ್ಯೋತಿಯಲ್ಲಿ ಹವನ ಮಾಡಿದ ಶಿವಯೋಗಿಗೆ ಪ್ರಮೋದದ ಪ್ರಾಪ್ತಿಯಾಗುತ್ತದೆ ಎಂಬುದಾಗಿ ಪೂಜ್ಯರು ಇಲ್ಲಿ ಅಪ್ಪಣೆ ಕೊಡಿಸಿದ್ದಾರೆ. ವಿಷಯಗಳನ್ನು ಸ್ವತಃ ಅನುಭವಿಸಿ ಆನಂದವನ್ನು ಪಡೆಯುವವರು ಕೆಲವರಾದರೆ, ಅವುಗಳನ್ನು ಪರಮಾತ್ಮನಿಗೆ ಸಮರ್ಪಿಸಿ ಸಂತೋಷವನ್ನು ಪಡೆವವರು ಮತ್ತೆ ಕೆಲವರಾಗಿರುತ್ತಾರೆ. ಜಗತ್ತಿನಲ್ಲಿ ಉಂಡು ಸಂತೋಷಪಡುವವರಿರುವಂತೆ, ಉಣಿಸಿ ಸಂತೋಷ ಪಡುವವರೂ ಇರುವರು. ಇಲ್ಲಿ ಉಂಡು ಸಂತೋಷಪಡುವವನಿಗಿಂತಲೂ ಉಣಿಸಿ ಸಂತೋಷಪಡುವವನು ಉತ್ಕೃಷ್ಟನೆನಿಸಿಕೊಳ್ಳುವನು. ಜಗತ್ತಿನ ಜೀವಿಗಳು ವಿಷಯಗಳನ್ನು ಸ್ವತಃ ಅನುಭವಿಸಿ ಸಂತೋಷ ಪಟ್ಟರೆ, ಈ ಶಿವಯೋಗಿಯು ಅವುಗಳನ್ನು ಪರಮಾತ್ಮನಿಗೆ ಸಮರ್ಪಿಸಿ ತಾನು ವಿಷಯ ವ್ಯಾಮೋಹದಿಂದ ನಿರ್ಮುಕ್ತನಾಗಿ ಸದಾ ಪ್ರಮೋದವನ್ನು ಪಡೆಯುತ್ತಿರುತ್ತಾನೆಂಬುದು ಪೂಜ್ಯಪಾದರ ಆಶಯವಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕೊನೆಯದಾಗಿ ಈ ಸ್ಥಲದ ಶಿವಯೋಗಿಯು ಅನುಭವಿಸುವ ವ್ಯಾವಹಾರಿಕ ಜೀವನವನ್ನು ಕುರಿತು–

ಸಚ್ಚಿದಾನಂದಜಲಧೌ ಶಿವೇ ಸ್ವಾತ್ಮನಿ ನಿರ್ಮಲಃ ।
ಸಮರ್ಪ್ಯ ಸಕಲಾನ್ ಭುಂಕ್ತೇ ವಿಷಯಾನ್ ತತ್ಪ್ರಸಾದತಃ ॥

(ಸಿ. ಶಿ. ೨೦–೧೩)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅತ್ಯಂತ ನಿರ್ಮಲವಾದ ಶಿವಯೋಗಿಯು ಸಚ್ಚಿದಾನಂದ ಸಾಗರ ಸ್ವರೂಪವಾದ ಮತ್ತು ತನ್ನ ಆತ್ಮರೂಪವಾಗಿರುವ ಪರಶಿವನಿಗೆ ಶಬ್ದ, ಸ್ಪರ್ಶಾದಿ ಸಕಲ ವಿಷಯಗಳನ್ನು ಸಮರ್ಪಿಸಿ ಅವುಗಳನ್ನು ಶಿವ ಪ್ರಸಾದ ರೂಪದಲ್ಲಿ ಅನುಭವಿಸುತ್ತಿರುತ್ತಾನೆ. ಅಂತೆಯೇ ಅವನಿಗೆ ಸ್ವೀಕೃತ ಪ್ರಸಾದಿ ಎಂಬುದಾಗಿ ಕರೆಯುತ್ತಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಆತ್ಮ ಪರಮಾತ್ಮರನ್ನು ಆನಂದಸಾಗರ ರೆಂಬುದಾಗಿ ಇಲ್ಲಿ ಪ್ರತಿಪಾದಿಸಿದ್ದಾರೆ. ಈ ಪ್ರಪಂಚದಲ್ಲಿ ಕ್ಷಾರ ಸಮುದ್ರ, ಕ್ಷೀರಸಮುದ್ರ, ಘೃತ ಸಮುದ್ರ ಮುಂತಾಗಿ ಅನೇಕ ಸಮುದ್ರಗಳಿರುವುದನ್ನು ಪುರಾಣಗಳು ವರ್ಣಿಸುತ್ತವೆ. ಸರ್ವೇ ಸಾಮಾನ್ಯವಾಗಿ ನಾವೆಲ್ಲರೂ ನೋಡುತ್ತಿರುವುದು ಕೇವಲ ಕ್ಷಾರ ಸಮುದ್ರ ವೊಂದನ್ನೇ. ಪೂಜ್ಯರು ಇಲ್ಲಿ ಅಪ್ಪಣೆಕೊಡಿಸಿದಂತೆ ನಮ್ಮೆಲ್ಲರ ಆತ್ಮವು ಸಚ್ಚಿದಾನಂದ ಸಾಗರವಾಗಿದೆ. ಶಿವನೂ ಸಹ ಸಚ್ಚಿದಾನಂದ ಸಾಗರ ಸ್ವರೂಪನಾಗಿದ್ದಾನೆ. ಅಂತೆಯೇ ಆತ್ಮ ಪರಮಾತ್ಮರಲ್ಲಿ ಭೇದವಿರುವುದಿಲ್ಲ. ಹೀಗೆ ಆತ್ಮ ಪರಮಾತ್ಮ ಅಭೇದವನ್ನರಿತ ಶಿವಯೋಗಿಯು ಶಬ್ದಸ್ಪರ್ಶಾದಿ ವಿಷಯಗಳನ್ನು ತನ್ನ ಆತ್ಮರೂಪವಾದ ಪರಮಾತ್ಮನಿಗೆ ಸಮರ್ಪಿಸಿ ಅವುಗಳನ್ನು ಶಿವನ ಪ್ರಸಾದವೆಂಬುದಾಗಿ ಸ್ವೀಕರಿಸುತ್ತಾನೆ. ವಿಷಯಗಳು ಪ್ರಸಾದ ರೂಪವನ್ನು ಪಡೆದ ಬಳಿಕ ಅವುಗಳಿಂದ ಯಾವ ಬಾಧೆಯೂ ಉಂಟಾಗುವು ದಿಲ್ಲ. ಹಾವಿನ ವಿಷದ ಹಲ್ಲನ್ನು ತೆಗೆದು ಆದರ ಸಹವಾಸ ಮಾಡಿದರೆ ಯಾವುದೇ ಬಾಧೆ ಯಾಗದಿರುವಂತೆ, ವಿಷಯಗಳೆಂಬ ವಿಷವನ್ನು ಶಿವನಿಗೆ ಸಮರ್ಪಿಸಿದಾಗ ಶಿವನು ಅವುಗಳಲ್ಲಿಯ ಬಾಧಕವಾದ ವಿಷತ್ವವನ್ನು ದೂರೀಕರಿಸಿ ಅವುಗಳನ್ನು ಪ್ರಸಾದ ರೂಪವಾಗಿ ಪರಿವರ್ತಿಸುತ್ತಾನೆ. ಅಂತಹ ಪ್ರಸಾದವನ್ನು ಉಪಭೋಗಿಸಿದಾಗ ಶಿವಯೋಗಿಗೆ ಅದಾವ ದೋಷವೂ ಉಂಟಾಗುವುದಿಲ್ಲ. ಅಂತೆಯೇ ಅವನು ಸದಾ ನಿರ್ಮಲನೇ ಆಗಿರುತ್ತಾನೆ. ಸಂಸಾರದ ಚಿಂತನೆಯು ಜೀವಿಯನ್ನು ಮಲಿನಗೊಳಿಸಿದರೆ ಪರಮಾತ್ಮ ಚಿಂತೆಯು ಅವನನ್ನು ನಿರ್ಮಲಗೊಳಿಸುತ್ತದೆ. ಶರೀರ ಹಾಗೂ ಮನಸ್ಸುಗಳ ಪರಿಶುದ್ಧಿಗಾಗಿ ಭಕ್ತಾದಿಗಳು ಗಂಗೆಯಲ್ಲಿ ಸ್ನಾನ ಮಾಡುವುದನ್ನು ನೋಡುತ್ತೇವೆ. ಗಂಗಾ ನದಿಗೆ ಈ ಮಾಲಿನ್ಯ ಹರಣ ಸಾಮರ್ಥ್ಯವು ಪ್ರಾಪ್ತವಾದುದು ಎಲ್ಲಿಂದ ? ಎಂಬುದನ್ನು ವಿಚಾರಿಸಲಾಗಿ, ಗಂಗೆಯು ಶಿವಸಂಬಂಧಿನಿಯಾಗಿರುವುದರಿಂದ ಈ ಸಾಮರ್ಥ್ಯವನ್ನು ಪಡೆದುದಾಗಿ ತಿಳಿದುಬರುತ್ತದೆ. ಶಿವನ ಜಟೆಯಿಂದ ಹರಿದು ಬಂದ ಕಾರಣದಿಂದಾಗಿ ಅವಳು ಪಾಪನಾಶಿನಿಯೆಂಬುದಾಗಿ ಕರೆಯಿಸಿಕೊಳ್ಳುತ್ತಾಳೆ. ಇದೇ ಪ್ರಕಾರವಾಗಿ ಶಿವಯೋಗಿಯು ಸಹ ತನ್ನ ಚಿತ್ತದಲ್ಲಿ ಸದಾ ಶಿವಧ್ಯಾನವನ್ನು ಮಾಡುತ್ತಿರೋಣದರಿಂದ

ಅವನೊಂದಿಗೆ ಸದಾ ಶಿವಸಂಬಂಧವು ಇದ್ದೇ ಇರುತ್ತದೆ. ಹೀಗೆ ಶಿವಯೋಗಿಯ ಶರೀರವು ಪ್ರಪಂಚದಲ್ಲಿದ್ದರೂ, ಮನಸ್ಸು ಪರಮಾತ್ಮನಲ್ಲಿ ಲೀನವಾಗಿರೋಣದರಿಂದ ಅವನು ಸದಾ ಪವಿತ್ರನಾಗಿಯೇ ಇರುತ್ತಾನೆ. ವಿಷಯಗಳ ಮಧ್ಯ ಇದ್ದರೂ ಅವುಗಳಿಂದ ನಿರ್ಲಿಪ್ತನಾಗಿ ರುತ್ತಾನೆ. ಹೀಗೆ ಈ ಸ್ವೀಕೃತ ಪ್ರಸಾದಿಯು ಪ್ರಪಂಚದಲ್ಲಿದ್ದೂ ಸಹ ಇಲ್ಲದಂತೆ ಇರುತ್ತಾನೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೧ ನವ್ಹೆಂಬರ್, ೧೯೯೮
(ಸ್ಥಾನ ಜ್ಞಾನಮಂದಿರ, ಜಂಗಮವಾಡಿಮಠ, ವಾರಾಣಸಿ)

■■

ಆಶೀರ್ವಚನ-೧

# ಶಿಷ್ಟೌದನಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ವಿದ್ಯಾರ್ಥಿಗಳೇ ! ಮತ್ತು ಕಾರ್ಯಕ್ರಮದಲ್ಲಿ ಪಾಲ್ಗೊಂಡ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳ ಬಗ್ಗೆ ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಸ್ವೀಕೃತಪ್ರಸಾದಿಸ್ಥಲದ ಬಗ್ಗೆ ವಿವೇಚಿಸಲಾಗಿದ್ದು, ಇಂದು ಅದರ ಮುಂದಿನ ಸ್ಥಲವಾದ ಶಿಷ್ಟೌದನಸ್ಥಲದ ಬಗ್ಗೆ ವಿವೇಚಿಸಲಾಗುವುದು. ಇಲ್ಲಿ ಪ್ರಯೋಗಿಸಲ್ಪಟ್ಟ ಶಿಷ್ಟೌದನ ಶಬ್ದವು ವೀರಶೈವ ಸಿದ್ಧಾಂತದ ತಾತ್ವಿಕ ರಹಸ್ಯಾರ್ಥವನ್ನು ತಿಳಿಯಪಡಿಸುವ ಒಂದು ಪಾರಿಭಾಷಿಕ ಶಬ್ದವು. ತತ್ತ್ವಜ್ಞಾನದ ಪ್ರಾಪ್ತಿಯಾದ ನಂತರ ಶರೀರ ಹಾಗೂ ಇಂದ್ರಿಯಾದಿಗಳ ವ್ಯವಹಾರವು ಪ್ರಾರಬ್ಧ ಕರ್ಮವಿರುವವರೆಗೆ ಅದು ಹಾಗೇ ಮುಂದುವರೆಯುತ್ತದೆ. ಆತ್ಮಜ್ಞಾನವು ಸಂಚಿತ ಹಾಗೂ ಆಗಾಮಿ ಕರ್ಮಗಳನ್ನು ಇಲ್ಲದಾಗಿಸುತ್ತದೆ ವಿನಃ ಪ್ರಾರಬ್ಧ ಕರ್ಮವನ್ನು ಕ್ಷಯಿಸುವ ಶಕ್ತಿಯು ಅದಕ್ಕೆ ಇರುವುದಿಲ್ಲ. ಅಂತೆಯೇ ಉಪನಿಷತ್ತುಗಳು ''ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ'' ಎಂಬುದಾಗಿ ಹೇಳಿ ಪ್ರಾರಬ್ಧ ಕರ್ಮವನ್ನು ಅನುಭವಿಸಿಯೇ ಮುಗಿಸಬೇಕೆಂಬುದಾಗಿ ತಿಳಿಯಪಡಿಸುತ್ತವೆ. ಜ್ಞಾನದಲ್ಲಿ ಪ್ರಾರಬ್ಧ ಕರ್ಮವನ್ನೂ ಸಹ ನಾಶಮಾಡುವ ಸಾಮರ್ಥ್ಯವನ್ನು ಒಪ್ಪಿಕೊಂಡದ್ದಾದರೆ ಜ್ಞಾನವ ವಾದೊಡನೆ ಜ್ಞಾನಿಯು ಮರಣವನ್ನಪ್ಪಿಕೊಳ್ಳಬೇಕಾಗುವುದು. ಜ್ಞಾನವಾದ ಮರುಕ್ಷಣ ದಲ್ಲಿಯೇ ಜ್ಞಾನಿಯು ಶರೀರವನ್ನು ತ್ಯಜಿಸಿದರೆ ಗುರುಶಿಷ್ಯ ಪರಂಪರೆಯೇ ಲುಪ್ತವಾಗಿ ಹೋಗುವುದು. ಇದೂ ಅಲ್ಲದೇ ಜ್ಞಾನವಾದೊಡನೆ ಜ್ಞಾನಿಗಳು ದೇಹವನ್ನು ಬಿಡತೊಡಗಿದರೆ ಅದು ಒಂದು ವಿಧವಾದ ರೋಗವೆಂದು ಹೇಳಬೇಕಾದೀತು. ಈ ಎಲ್ಲ ಸಮಸ್ಯೆಗಳನ್ನು ದೂರ ಮಾಡುವುದ ಕ್ಕಾಗಿಯೇ ಪ್ರಾರಬ್ಧ ಕರ್ಮದ ಮೇಲೆ ಜ್ಞಾನದ ಪ್ರಭಾವವು ಆಗುವುದಿಲ್ಲವೆಂಬುದಾಗಿ ಸರ್ವ ಶಾಸ್ತ್ರಕಾರರು ಒಪ್ಪಿಕೊಂಡಿದ್ದಾರೆ. ಜ್ಞಾನೋತ್ತರದಲ್ಲಿ ಪ್ರಾರಬ್ಧ ಕರ್ಮ ವಿರುವವರೆಗೆ ಜ್ಞಾನಿಯ ಜೀವನವನ್ನು ಒಪ್ಪಿ ಕೊಂಡಾಗ ಜೀವನ್ಮುಕ್ತಿಯ ವ್ಯವಸ್ಥೆ, ಗುರುಶಿಷ್ಯ ಪರಂಪರೆಯ ಬೋಧ ಬೋಧ್ಯಕ ವ್ಯವಹಾರ ಇವೆಲ್ಲವುಗಳ ವ್ಯವಸ್ಥೆಯನ್ನು ಮಾಡಲಿಕ್ಕಾಗುತ್ತದೆ.

ವೇದಾಂತ ಶಾಸ್ತ್ರದಲ್ಲಿ ಜ್ಞಾನಿಯ ಅವಿದ್ಯೆಯು ನಿವೃತ್ತವಾಗಿದ್ದರೂ ಶರೀರಾದಿಗಳ ವ್ಯವಹಾರದ ವ್ಯವಸ್ಥೆಗಾಗಿ ಅವಿದ್ಯಾಲೇಶವನ್ನು ಒಪ್ಪಿಕೊಂಡಿದ್ದಾರೆ. ಅಂದರೆ

ಆತ್ಮಜ್ಞಾನವಾದ ನಂತರವೂ ಅವಿದ್ಯೆಯ ಒಂದು ಲೇಶವು ಉಳಿದುಕೊಂಡಿದ್ದು, ಅದುವೇ ಪ್ರಾರಬ್ಧ ಕರ್ಮ ಹಾಗೂ ಶರೀರಾದಿಗಳ ವ್ಯವಹಾರಕ್ಕೆ ಕಾರಣವಾಗುತ್ತವೆ. ಅವಿದ್ಯೆಯೇ ಇಲ್ಲದಾದಾಗ ಅವಿದ್ಯೆಯ ಲೇಶವಾದರೂ ಉಳಿಯುವುದಾದರೂ ಹೇಗೆ ? ಎಂಬ ಪ್ರಶ್ನೆ ಉದ್ಭವಿಸಿದಾಗ ಅದರ ಸಮಾಧಾನಕ್ಕಾಗಿ ಅನೇಕ ಯುಕ್ತಿಗಳನ್ನು ಪ್ರತಿಪಾದಿಸಿದ್ದಾರೆ. ಒಂದು ಪಾತ್ರೆಯಲ್ಲಿ ಬೆಳ್ಳುಳ್ಳಿಯನ್ನು ಅನೇಕ ದಿನಗಳವರೆಗೆ ಹಾಕಿ ಇಟ್ಟು, ಒಮ್ಮೆ ಆ ಪಾತ್ರೆಯೊಳಗಿನ ಎಲ್ಲ ಬೆಳ್ಳುಳ್ಳಿಯನ್ನು ತೆಗೆದು ಹಾಕಿದರೂ ಆ ಪಾತ್ರೆಯಿಂದ ಬೆಳ್ಳುಳ್ಳಿಯ ವಾಸನೆ ಮಾತ್ರ ತಕ್ಷಣ ದೂರವಾಗುವುದಿಲ್ಲ, ಆ ವಾಸನೆಯು ದೂರವಾಗಬೇಕಾದರೆ ಕಾಲಾವಕಾಶ ಬೇಕಾಗುವುದು. ಒಬ್ಬ ಕುಂಬಾರನು ತಿಗರಿಯನ್ನು ತಿರುಗಿಸುತ್ತ ಅದರ ಮೇಲೆ ಮಣ್ಣಿನ ಪಾತ್ರೆಗಳನ್ನು ನಿರ್ಮಿಸುತ್ತಿರುತ್ತಾನೆ. ಅವನು ಒಂದು ಪಾತ್ರೆಯನ್ನು ನಿರ್ಮಿಸಿ ಅದನ್ನು ತಿಗರಿಯಿಂದ ಕೆಳಗೆ ಇರಿಸಿದ ಮೇಲೂ ತಿಗರಿಯು ಇನ್ನೂ ತಿರುಗುತ್ತಲೇ ಇರುತ್ತದೆ. ಅದರ ವೇಗವಿರುವವರೆಗೆ ಅದು ಹಾಗೇ ತಿರುಗುವಂಥಾದ್ದೇ. ಪಾತ್ರೆಯಿಂದ ಪದಾರ್ಥವನ್ನು ತೆಗೆದರೂ ಅದರ ವಾಸನೆಯು ಕೆಲವು ಕಾಲವಿರುವಂತೆ, ಗಡಿಗೆಯನ್ನು ನಿರ್ಮಿಸಿದ ನಂತರವೂ ಕೆಲ ಕಾಲದವರೆಗೆ ತಿಗರಿಯು ತನ್ನ ವೇಗದಲ್ಲಿ ತಿರುಗುತ್ತಿರುವಂತೆ, ಜ್ಞಾನವಾದ ಬಳಿಕವೂ ಸಹ ಜ್ಞಾನಿಯ ಪ್ರಾರಬ್ಧ ಕರ್ಮವು ಕ್ಷಯವಾಗುವವರೆಗೆ ಶರೀರಾದಿಗಳ ವ್ಯವಹಾರಗಳು ಹಾಗೆಯೇ ನಡೆಯುತ್ತಲೇ ಇರುತ್ತವೆ. ವೀರಶೈವ ಆಚಾರ್ಯರು ಜ್ಞಾನಿಯ ಈ ಶರೀರಾದಿಗಳ ವ್ಯವಹಾರಗಳಿಗೆ ಮಾಯೆಯೇ ಮೂಲ ಕಾರಣವೆಂಬುದಾಗಿ ಒಪ್ಪಿಕೊಂಡಿದ್ದಾರೆ. ಜ್ಞಾನಿಯ ಪ್ರಾರಬ್ಧ ಕರ್ಮವು ಕ್ಷಯವಾಗುವ ವರೆಗೆ ಈ ಮಾಯೆಯು ಅವನ ಶರೀರಾದಿ ವ್ಯವಹಾರಗಳಿಗೆ ಕಾರಣೀಭೂತವಾಗಿ ಇರುತ್ತದೆ. ಹೀಗೆ ಜ್ಞಾನೋತ್ತರದಲ್ಲಿಯೂ ತಾನು ಉಳಿದುಕೊಂಡು ಈ ವ್ಯವಹಾರಗಳಿಗೆ ಕಾರಣೀಭೂತವಾಗಿರುವ ಮಾಯೆಗೆ ಇಲ್ಲಿ ಶಿಷ್ಟೌದನವೆಂಬುದಾಗಿ ಕರೆದಿದ್ದಾರೆ. ಅದನ್ನೇ ಪೂಜ್ಯಪಾದರು–

ಪ್ರಕಾಶತೇ ಯಾ ಸರ್ವೇಷಾಂ ಮಾಯಾ ಸೈವೌದನಾಕೃತಿಃ।
ಲೀಯತೇ ತತ್ರ ಚಿಲ್ಲಿಂಗೇ ಶಿಷ್ಟಂ ತತ್ಪರಿಕೀರ್ತಿತಮ್ ॥

(ಸಿ. ಶಿ. ೨೦–೧೪)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಶುದ್ಧಾಧ್ವ, ಮಿಶ್ರಾಧ್ವ ಮತ್ತು ಅಶುದ್ಧಾಧ್ವ ಗಳಲ್ಲಿ ವಾಸಿಸುವ ವಿಜ್ಞಾನಾಕಲ, (ಆಣವಮಲಮಾತ್ರಯುಕ್ತ), ಪ್ರಲಯಾಕಲ (ಆಣವ–ಕಾರ್ಮಮಲದ್ವಯಯುಕ್ತ) ಮತ್ತು ಸಕಲ (ಆಣವಕಾರ್ಮ–ಮಾಯಾ ಮಲತ್ರಯಯುಕ್ತ) ಜೀವಿಗಳಿಗೆಲ್ಲ ಅವರವರಿಗೆ ಯೋಗ್ಯಗಳಾದ ತನು, ಕರಣ, ಭುವನ ಮತ್ತು ಭೋಗಾದಿಗಳ ರೂಪದಲ್ಲಿ ಮಾಯೆಯೇ ತೋರುತ್ತಿರುತ್ತದೆ. ಜೀವನ್ಮುಕ್ತನಾದ ಶಿವಯೋಗಿಯ ಪ್ರಾರಬ್ಧಕರ್ಮ ಪರಿಕ್ಷಯ ಪರ್ಯಂತವಾಗಿ ಈ ಮಾಯೆಯು ಈ ವಿಧವಾಗಿ ಪ್ರತೀತಿಯಾಗುತ್ತ ಇರೋಣದರಿಂದ ಜ್ಞಾನೋತ್ತರದಲ್ಲಿ ಅವಶಿಷ್ಟವಾಗಿ ತೋರುತ್ತಿರೋಣದರಿಂದ ಇದಕ್ಕೆ ಶಿಷ್ಟೌದನವೆಂದು ಕರೆಯುತ್ತಾರೆ. ಈ ಮಾಯೆಯು ಚಿಲ್ಲಿಂಗದಲ್ಲಿ ವಿಲಯವನ್ನು ಹೊಂದುತ್ತದೆ.

ಈ ಪ್ರಪಂಚದ ಎಲ್ಲ ವ್ಯವಹಾರಗಳಿಗೆ ಮಾಯೆಯೇ ಕಾರಣೀಭೂತವಾದುದು. ಇದು ತನ್ನ ಮೂಲರೂಪದಲ್ಲಿ ಅವ್ಯಕ್ತವಾಗಿದ್ದರೂ ಪ್ರಪಂಚರೂಪದಲ್ಲಿ ವ್ಯಕ್ತವಾಗಿ ತೋರುತ್ತಿರುತ್ತದೆ. ಮಾಯೆಯನ್ನು ನೋಡಲು ಪರಿಶ್ರಮ ಪಡಬೇಕಾಗಿಲ್ಲ. ಆದರೆ ಮಾಯೆಗೆ ಅಧಿಷ್ಠಾನವಾಗಿರುವ ಪರಶಿವ ಬ್ರಹ್ಮವನ್ನು ಕಾಣಬೇಕಾದರೆ, ಬಹಳಷ್ಟು ಸಾಧನೆಯನ್ನು ಮಾಡಬೇಕಾಗುವುದು. ವಸ್ತ್ರವು ವಸ್ತುವನ್ನು ಮುಚ್ಚಿಹಾಕಿ ತಾನೇ ತೋರುವಂತೆ, ಮಾಯೆಯು ಪರಶಿವ ಬ್ರಹ್ಮದ ಮೇಲೆ ಆವರಣ ಮಾಡಿ ಅನೇಕ ರೂಪಗಳಲ್ಲಿ ತಾನೇ ತೋರುತ್ತಿರುತ್ತದೆ. ಅಂತೆಯೇ ಪೂಜ್ಯಪಾದರು ಈ ಪೂರ್ವದಲ್ಲಿ ''ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ'' ಎಂಬುದಾಗಿ ಉಪದೇಶಿಸಿದ್ದನ್ನು ಕಾಣುತ್ತೇವೆ. ಮಾಯೆಯ ಕಾರಣದಿಂದಾಗಿ ಮಹಾದೇವನು ಸರ್ವರಿಗೂ ಪ್ರತ್ಯಕ್ಷವಾಗಿ ಗೋಚರಿಸುವುದಿಲ್ಲ. ಆಕಾಶದಲ್ಲಿರುವ ಸೂರ್ಯನ ಮೇಲೆ ಕಾರ್ಮೋಡಗಳು ಬಂದಾಗ ಸೂರ್ಯನಿದ್ದರೂ ಅವನು ಕಾಣದಾಗಿ ಹೋಗುತ್ತಾನೆ. ಸೂರ್ಯನನ್ನು ಮುಚ್ಚಿ ಹಾಕಿದ ಮೋಡಗಳು ಸೂರ್ಯನನ್ನು ತೋರಗೊಡದಿದ್ದರೂ ಅವುಗಳ ತೋರುವಿಕೆಗೆ ಸೂರ್ಯ ಪ್ರಕಾಶವೇ ಕಾರಣವೆಂಬುದನ್ನು ಸರ್ವರೂ ತಿಳಿದುಕೊಳ್ಳಬೇಕು. ಇದೇ ಪ್ರಕಾರವಾಗಿ ಪರಶಿವತತ್ತ್ವವನ್ನು ಆವರಿಸಿ ಪ್ರಪಂಚ ರೂಪದಲ್ಲಿ ತೋರುವ ಈ ಮಾಯೆಯು ಪರಶಿವನ ಪ್ರಕಾಶದಲ್ಲಿಯೇ ತೋರುತ್ತಿರುತ್ತದೆ. ಸೂರ್ಯ ಹಾಗೂ ಸೂರ್ಯನನ್ನು ನೋಡುವ ಕಣ್ಣುಗಳ ನಡುವೆ ಮೋಡವು ಅಡ್ಡ ಬಂದಿರುವಂತೆ ಜೀವ ಹಾಗೂ ಶಿವರ ಮಧ್ಯದಲ್ಲಿ ಈ ಮಾಯೆಯು ಬಂದು ಜೀವನಿಗೆ ಶಿವಸ್ವರೂಪವನ್ನು ತಿಳಿಸಿಕೊಡಲಾರದು. ಶಿವಯೋಗಿಯು ಸದ್ಗುರುವಿನ ಅನುಗ್ರಹದಿಂದ ಆತ್ಮ ಪರಮಾತ್ಮರ ಐಕ್ಯ ಜ್ಞಾನವನ್ನು ಪ್ರಾಪ್ತಿಮಾಡಿಕೊಂಡ ನಂತರವೂ ಈ ಮಾಯೆಯು ಅವನಿಗೆ ಸ್ವರೂಪಾವರಣವನ್ನು ಮಾಡಲು ಅಸಮರ್ಥವಾದರೂ ತನುಕರಣಾದಿಗಳ ರೂಪದಲ್ಲಿ ಅದು ವ್ಯಕ್ತವಾಗಿ ತೋರುತ್ತಿರುತ್ತದೆ. ಇದಕ್ಕೇನೆ ಶಿಷ್ಟೌದನವೆಂಬುದಾಗಿ ಕರೆಯಲಾಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯ ತತ್ತ್ವಪ್ರದೀಪಿಕಾ ಎಂಬ ಸಂಸ್ಕೃತ ವ್ಯಾಖ್ಯಾನಕಾರರಾದ ಶ್ರೀ ಮರಿತೋಂಟದಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಈ ಶಿಷ್ಟೌದನ ರೂಪವಾದ ಮಾಯೆಯು ತನು, ಕರಣ, ಭುವನ ಮತ್ತು ಭೋಗಗಳ ರೂಪದಲ್ಲಿ ತೋರುತ್ತಿರುವುದೆಂಬುದಾಗಿ ಪ್ರತಿಪಾದಿಸಿದ್ದಾರೆ. ಇಲ್ಲಿ ತನು ಎಂದರೆ ಶರೀರ, ಕರಣವೆಂದರೆ ಇಂದ್ರಿಯಗಳು, ಭುವನವೆಂದರೆ ಹದಿನಾಲ್ಕು ಭುವನ ಬ್ರಹ್ಮಾಂಡಗಳು. ಭೋಗವೆಂದರೆ ಶಬ್ದಸ್ಪರ್ಶಾದಿ ವಿಷಯಗಳ ಭೋಗವೆಂಬುದಾಗಿ ತಿಳಿದುಕೊಳ್ಳಬೇಕು. ಮಾಯೆಯು ಅನಂತ ರೂಪಗಳಲ್ಲಿ ಜೀವಿಯ ಮುಂದೆ ಬಂದು ನಿಲ್ಲುತ್ತದೆಂಬುದು ಇದರಿಂದ ತಿಳಿದು ಬರುತ್ತದೆ. ಇದರ ಮೊದಲನೆಯ ರೂಪವೇ ತನುರೂಪವು. ಇದು ಒಂದು ವಿಧವಾಗಿರದೆ ಎಂಬತ್ನಾಲ್ಕು ಲಕ್ಷ ಪ್ರಕಾರವಾಗಿ ಇರುತ್ತದೆ. ಉದ್ಭಿಜ ಇಪ್ಪತ್ತೊಂದು ಲಕ್ಷ, ಅಂಡಜ ಇಪ್ಪತ್ತೊಂದು ಲಕ್ಷ, ಶ್ವೇದಜ ಇಪ್ಪತ್ತೊಂದು ಲಕ್ಷ ಮತ್ತು ಜರಾಯುಜ ಇಪ್ಪತ್ತೊಂದು ಲಕ್ಷ ಹೀಗೆ ಶಾಸ್ತ್ರಕಾರರು ಎಂಬತ್ನಾಲ್ಕು ಲಕ್ಷ ಪ್ರಕಾರದ ಶರೀರಗಳನ್ನು ವಿಂಗಡಿಸಿದ್ದನ್ನು ಕಾಣಬಹುದು. ಹೀಗೆ ಮಾಯೆಯು ತನ್ನ ಅದ್ಭುತವಾದ ಚಮತ್ಕಾರ ಶಕ್ತಿಯಿಂದ

ಎಂಬತ್ನಾಲ್ಕು ಲಕ್ಷ ಪ್ರಕಾರದ ಶರೀರಗಳ ರೂಪದಲ್ಲಿ ತೋರುತ್ತಿರುತ್ತದೆ. ಇವುಗಳಲ್ಲಿ ಕೆಲವು ಶರೀರಗಳು ಸೂಕ್ಷ್ಮಕ್ಕಿಂತ ಸೂಕ್ಷ್ಮಗಳು, ಸ್ಥೂಲಕ್ಕಿಂತ ಸ್ಥೂಲಗಳೂ ಆಗಿರುತ್ತವೆ.

ಇದೇ ಪ್ರಕಾರವಾಗಿ ಕರಣವೆಂದರೆ ಇಂದ್ರಿಯಗಳು. ಇವುಗಳು ಪಂಚ ಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರಗಳ ರೂಪದಲ್ಲಿ ತೋರುತ್ತಿರುತ್ತವೆ. ಈ ಇಂದ್ರಿಯಗಳ ಮುಖಾಂತರವಾಗಿಯೇ ಜೀವಾತ್ಮನ ಸಕಲ ವ್ಯವಹಾರಗಳು ನಡೆಯುತ್ತಿರುತ್ತವೆ. ಇದೇ ಪ್ರಕಾರವಾಗಿ ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕವೆಂಬ ಊರ್ಧ್ವದ ಸಪ್ತಲೋಕಗಳು ಮತ್ತು ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ ಮತ್ತು ಪಾತಾಲಗಳೆಂಬ ಅಧೋಲೋಕಗಳು ಹೀಗೆ ಒಟ್ಟು ಹದಿನಾಲ್ಕು ಭುವನ ಬ್ರಹ್ಮಾಂಡಗಳ ರೂಪದಲ್ಲಿ ಈ ಮಾಯೆ ತೋರುತ್ತಿರುತ್ತದೆ. ಇದರಂತೆ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಪಂಚವಿಷಯಗಳ ಭೋಗರೂಪದಲ್ಲಿ ತೋರುವಂಥಾದ್ದು ಸಹ ಈ ಮಾಯೆಯೇ ಆಗಿರುತ್ತದೆ. ಈ ತೆರನಾಗಿ ಈ ಶಿಷ್ಟೌದನ ರೂಪವಾದ ಮಾಯೆಯು ತನು, ಕರಣ, ಭುವನ ಮತ್ತು ಭೋಗಗಳ ರೂಪದಲ್ಲಿ ಸಕಲ ಜೀವಿಗಳಿಗೆ ವ್ಯಕ್ತವಾಗಿ ತೋರುತ್ತಿರುತ್ತದೆ. ಆತ್ಮಜ್ಞಾನವನ್ನು ಪಡೆಯದ ಅಜ್ಞಜೀವಿಗಳಿಗೆ ಈ ಪ್ರಪಂಚವು ತೋರುವಂತೆ ಆತ್ಮಜ್ಞಾನವನ್ನು ಪಡೆದ ಶಿವಯೋಗಿಗೂ ಸಹ ಪ್ರಾರಬ್ಧ ಕರ್ಮದ ಪರಿಕ್ಷಯವಾಗುವವರೆಗೆ ಇದು ತೋರುತ್ತಿರೋಣದರಿಂದ ಇದಕ್ಕೇ ಶಿಷ್ಟೌದನ ಎಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ. ಜ್ಞಾನಿಗೆ ಜ್ಞಾನೋತ್ತರದಲ್ಲಿ ತೋರುವ ಈ ಮಾಯೆಯೇ ಶಿಷ್ಟೌದನವೆಂಬುದಾಗಿ ಎಲ್ಲರೂ ತಿಳಿದುಕೊಳ್ಳಬೇಕು.

ಈ ಶಿಷ್ಟೌದನದ ವಿಷಯವನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪೂಜ್ಯಪಾದರು ಪುನಃ –

ಜಗದಂಗೇ ಪರಿಗ್ರಸ್ತೇ ಮಾಯಾಪಾಶವಿಜೃಂಭಿತೇ।
ಸ್ವಾತ್ಮಜ್ಯೋತಿಷಿ ಬೋಧೇನ ತದೇಕಮವಶಿಷ್ಯತೇ ॥

(ಸಿ. ಶಿ. ೨೦–೧೫)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಕಲಾದಿ ಭೂಮ್ಯಂತಗಳಾದ ಮೂವತ್ತುತತ್ತ್ವಾತ್ಮಕವಾದ ಮಾಯೆಯೆಂಬ ಪಾಶದಿಂದ ಕಟ್ಟಲ್ಪಟ್ಟ ಮತ್ತು ಸಕಲ ಜಗತ್ತೇ ಶರೀರವಾಗಿರುವ ಆತ್ಮಸ್ವರೂಪವು ಸ್ವಾತ್ಮಜ್ಞಾನದಿಂದ ಮುಸುಕಲ್ಪಡಲು ಮಾಯಾ ತತ್ತ್ವವೊಂದೇ ಉಳಿಯುತ್ತದೆ. ಉಳಿದ ಈ ಮಾಯಾತತ್ತ್ವಕ್ಕೇನೇ ಶಿಷ್ಟೌದನವೆಂದು ಕರೆಯುತ್ತಾರೆ.

ಈ ಜಗತ್ತಿನಲ್ಲಿ ಮೂಲಕಾರಣವಾದುದು ಮಾಯೆಯು. ಅದುವೇ ಸಕಲ ಪ್ರಪಂಚರೂಪವನ್ನು ತಾಳಿ ಮೂಲವಾದ ಪರಶಿವ ತತ್ತ್ವವನ್ನು ಮುಚ್ಚಿ ಹಾಕಿರುತ್ತದೆ. ಸ್ವೀಕೃತ ಪ್ರಸಾದಿ ಸ್ಥಲದ ಶಿವಯೋಗಿಯು ಲಿಂಗಾಂಗ ಸಾಮರಸ್ಯರೂಪವಾದ ಶಿವಾದ್ವೈತ ಜ್ಞಾನದಿಂದ ತನ್ನ ಆತ್ಮವನ್ನು ಪರಶಿವ ಸ್ವರೂಪವನ್ನಾಗಿ ತಿಳಿದುಕೊಂಡು, ಜೀವನ್ಮುಕ್ತ ಸ್ಥಿತಿಯನ್ನು ಪಡೆದಾಗ ಬಾಹ್ಯವಾದ ಈ ಮಾಯಾ ಪ್ರಪಂಚವು ಪೂರ್ವದಂತೆ ಯಥಾವತ್ತಾಗಿ ಇದ್ದೇ ಇರುತ್ತದೆ. ಈ ಮಾಯಾ ಪ್ರಪಂಚವು ಅನಾದಿ ಪ್ರವಾಹ

ರೂಪವಾಗಿರುವುದರಿಂದ ಶಿವಾದ್ವೈತ ಜ್ಞಾನವಾದ ಮಾತ್ರಕ್ಕೆ ಇದು ಇಲ್ಲದಾಗಿ ಹೋಗುವುದಿಲ್ಲ. ಹೀಗೆ ಜ್ಞಾನೋತ್ತರದಲ್ಲಿ ಉಳಿದು ತೋರುತ್ತಿರುವ ಮಾಯಾದಿಗಳಿಗೆ ಶಿಷ್ಟೌದನವೆಂದು ಕರೆಯಲಾಗಿದೆ.

ಅಜ್ಞರಾದ ಜೀವಿಗಳಿಗೆ ಅನಂತ ದುಃಖವನ್ನು ಕೊಡುತ್ತಿರುವ ಈ ಮಾಯೆಯು ಜ್ಞಾನದ ನಂತರವೂ ನಷ್ಟವಾಗದೇಯಿರುವುದರಿಂದ ಜ್ಞಾನಿಗೂ ಸಹ ದುಃಖಾದಿಗಳನ್ನು ಕೊಡಬಹುದಲ್ಲ ಎಂಬ ಶಂಕೆಯುಂಟಾಗಲು ಪೂಜ್ಯಪಾದರು–

ಅಖಂಡ ಸಚ್ಚಿದಾನಂದ ಪರಬ್ರಹ್ಮಸ್ವರೂಪಿಣಃ ।
ಜೀವನ್ಮುಕ್ತಸ್ಯ ಧೀರಸ್ಯ ಮಾಯಾ ಕೈಂಕರ್ಯವಾದಿನೀ ॥

(ಸಿ. ಶಿ. ೨೦–೧೬)

ಹೀಗೆ ಅದರ ನಿರಾಕರಣೆಯನ್ನು ಮಾಡಿದ್ದಾರೆ. ತಾತ್ಪರ್ಯವೇನೆಂದರೆ, ಅಖಂಡವಾದ ಸಚ್ಚಿದಾನಂದ ಸ್ವರೂಪವಾದ ಪರಶಿವ ಬ್ರಹ್ಮವೇ ತನ್ನ ಆತ್ಮರೂಪವೆಂದು ತಿಳಿದು ಕೊಂಡಿರುವ ಜೀವನ್ಮುಕ್ತನೂ, ಧೀರನೂ ಅಂದರೆ ಸ್ಥಿರಚಿತ್ತನೂ ಆದ ಶಿವಯೋಗಿಯ ಎದುರಿನಲ್ಲಿ ಮಾಯೆಯು ಕಿಂಕರಳಾಗಿ ಬಿಡುತ್ತಾಳೆ.

''ಅಘಟಿತಘಟನಾ ಪಟೀಯಸೀ ಮಾಯಾ'' ಎಂಬ ಉಕ್ತಿಗನುಸಾರವಾಗಿ ಮಾಯೆಯು ಅಪಾರವಾದ ಸಾಮರ್ಥ್ಯವನ್ನು ಪಡೆದವಳಾಗಿರುತ್ತಾಳೆ. ಇವಳು ಕರ್ತುಂ ಅಕರ್ತುಂ ಮತ್ತು ಅನ್ಯಥಾ ಕರ್ತುಂ ಸಾಮರ್ಥ್ಯವನ್ನು ಹೊಂದಿದವಳಾಗಿದ್ದು, ಪ್ರಪಂಚದ ಉತ್ಪತ್ತಿಗೆ ಮೂಲ ಕಾರಣಳಾಗಿರುತ್ತಾಳೆ. ಈ ಮಾಯೆಯ ಪಾಶದಿಂದ ಬದ್ಧರಾದ ಅಜ್ಞ ಜೀವಿಗಳು ಪ್ರಾಪಂಚಿಕ ವಿಷಯದಲ್ಲಿ ಆಸಕ್ತಿಯನ್ನು ಹೊಂದಿ ಅನಂತ ದುಃಖಗಳನ್ನು ಪಡೆಯುತ್ತಿರುತ್ತವೆ. ಹೀಗೆ ಜಗತ್ತಿನ ಜೀವಿಗಳನ್ನೆಲ್ಲ ತನ್ನ ಮಾಯಾಪಾಶದಿಂದ ಕಟ್ಟಿ ಹಾಕಿರುವ ಈ ಮಾಯೆಯು ಅಖಂಡವಾದ ಸಚ್ಚಿದಾನಂದ ಸ್ವರೂಪಳಾದ ಪರಶಿವ ಬ್ರಹ್ಮ ತತ್ತ್ವವನ್ನು ತನ್ನಾತ್ಮರೂಪವಾಗಿ ತಿಳಿದುಕೊಂಡ ಜೀವನ್ಮುಕ್ತನೂ, ಧೀರನೂ ಆದ ಶಿವಯೋಗಿಯ ಎದುರಿನಲ್ಲಿ ಸೇವಕಳಾಗಿ ವರ್ತಿಸುತ್ತಾಳೆ. ಪರಶಿವ ಬ್ರಹ್ಮದೊಂದಿಗೆ ಸಾಮರಸ್ಯ ಸ್ಥಿತಿಯನ್ನು ಸಾಧಿಸಿಕೊಂಡಿರುವ ಶಿವಯೋಗಿಯು ಪರಶಿವಬ್ರಹ್ಮರೂಪನೇ ಆಗಿರೋಣದರಿಂದ ಪರಶಿವ ಬ್ರಹ್ಮಕ್ಕೇ ಕಿಂಕರಳಾದ ಈ ಮಾಯೆಯು ಆ ಶಿವಯೋಗಿಗೂ ಸಹ ಕಿಂಕರಳಾಗಿಯೇ ಇರುತ್ತಾಳೆ. ಪೂಜ್ಯರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಇಲ್ಲಿ ಜೀವನ್ಮುಕ್ತನಾದ ಶಿವಯೋಗಿಗೆ ಧೀರನೆಂಬ ವಿಶೇಷಣ ವನ್ನು ಪ್ರಯೋಗಿಸಿದ್ದಾರೆ. ಧೀರನೆಂದರೆ ಸುಸ್ಥಿರ ಚಿತ್ತನೆಂದರ್ಥ. ಅಂತೆಯೇ ಮಹಾಕವಿ ಕಾಳಿದಾಸನು– ''ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ಚ ಏವ ಧೀರಾಃ'' ಎಂಬುದಾಗಿ ಧೀರನ ಲಕ್ಷಣವನ್ನು ಪ್ರತಿಪಾದಿಸಿದ್ದಾನೆ. ಮನಸ್ಸನ್ನು ವಿಕಾರಗೊಳಿಸುವ ಸನ್ನಿವೇಶಗಳು ಕಣ್ಣೆದುರಿನಲ್ಲಿದ್ದರೂ, ಅವುಗಳನ್ನು ಕಂಡೂ ಯಾರ ಮನಸ್ಸು ವಿಕಾರವನ್ನು ಹೊಂದುವುದಿಲ್ಲವೋ ಅವರಿಗೆ ಧೀರರೆಂಬುದಾಗಿ ಕರೆಯುತ್ತಾರೆ. ಈ ಸ್ವೀಕೃತ ಪ್ರಸಾದಿ ಸ್ಥಲದ ಶಿವಯೋಗಿಯು ಅಂತಹ ಧೀರನಾಗಿರುವುದರಿಂದ ತನು,

ಕರಣ, ಭುವನ ಮತ್ತು ಭೋಗಾದಿಗಳ ರೂಪವಾದ ಮಾಯೆಯು ತನ್ನೆದುರಿನಲ್ಲಿದ್ದರೂ ಅವನ ಚಿತ್ತವು ಅದಾವುದರಲ್ಲಿಯೂ ಆಸಕ್ತಿಯನ್ನು ತಳೆಯುವುದಿಲ್ಲ.

ಯಾವ ಮನುಷ್ಯನು ವಿಷಯಗಳ ಆಶೆಗೊಳಗಾಗುವನೋ ಅವನು ಅವುಗಳ ದಾಸನಾಗುತ್ತಾನೆ. ಯಾರ ಮನಸ್ಸು ವಿಷಯಗಳ ಆಶೆಗೆ ಒಳಗಾಗುವುದಿಲ್ಲವೋ ಅವನಿಗೆ ಜಗತ್ತೇ ದಾಸವಾಗುತ್ತದೆ. ಅಂತೆಯೇ ಒಬ್ಬ ಸುಭಾಷಿತಕಾರನು–

ಆಶಾಯಾಃಯೇ ದಾಸಾಃ ತೇ ದಾಸಾಃ ಸಂತಿ ಸರ್ವಲೋಕಸ್ಯ ।
ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ।।

ಈ ರೀತಿಯಾಗಿ ಹೇಳಿದ್ದಾನೆ. ಆಶೆಯು ಮನುಷ್ಯನನ್ನು ತನ್ನ ದಾಸನನ್ನಾಗಿ ಮಾಡಿಕೊಳ್ಳುತ್ತದೆ. ಈ ಆಶೆಗೊಳಗಾದ ಮನುಷ್ಯನು ಅನ್ಯರೆದುರು ಕೈಚಾಚಬೇಕಾಗುತ್ತದೆ. ಆದರೆ ಆಶೆಯನ್ನು ತನ್ನ ಅಧೀನವಾಗಿಸಿಕೊಂಡವನು ಜಗತ್ತನ್ನೇ ತನ್ನ ದಾಸನನ್ನಾಗಿ ಮಾಡಿಕೊಳ್ಳುತ್ತಾನೆ. ಆಶಾಮುಕ್ತನಾದ ಮನುಷ್ಯನು ಸರ್ವತಂತ್ರ ಸ್ವತಂತ್ರನಾಗಿರುತ್ತಾನೆ. ಆದರೆ ಆಶಾಬದ್ಧನಾದ ಜೀವನು ಜಗತ್ತಿನಲ್ಲಿ ಎಲ್ಲರ ಗುಲಾಮನಾಗುತ್ತಾನೆ. ಓರ್ವ ರಾಜನ ಆಸ್ಥಾನದಲ್ಲಿ ಬಲರಾಮನೆಂಬ ಹೆಸರಿನ ಮಂತ್ರಿಯಿದ್ದನು. ಅವನು ರಾಜನಿಗೆ ಅತ್ಯಂತ ವಿಧೇಯನಾಗಿ ರಾಜ ದರ್ಬಾರದಲ್ಲಿ ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದನು. ಪ್ರತಿದಿನ ರಾಜನು ಬರುವ ಪೂರ್ವದಲ್ಲಿಯೇ ದರ್ಬಾರದಲ್ಲಿ ತಾನು ಹಾಜರಾಗಿದ್ದು ರಾಜನು ಬಂದೊಡನೆ ಎದ್ದು ನಿಂತು ಕೈಮುಗಿದು ಗೌರವವನ್ನು ಸಮರ್ಪಿಸಿ ನಂತರ ಕುಳಿತುಕೊಳ್ಳುವುದು ಆತನ ದಿನನಿತ್ಯದ ಪದ್ಧತಿಯಾಗಿತ್ತು. ಕೆಲ ಕಾಲದ ನಂತರ ಓರ್ವ ಸಂತನ ಸಹವಾಸದಿಂದಾಗಿ ಆತನು ದಿನಾಲೂ ಸತ್ಸಂಗದಲ್ಲಿ ಪಾಲ್ಗೊಳ್ಳುತ್ತಿದ್ದನು. ಪ್ರತಿದಿನ ಆತ್ಮ–ಪರಮಾತ್ಮರ ಚಿಂತನೆಯನ್ನು ಮಾಡುತ್ತ ಆತ್ಮಜ್ಞಾನವನ್ನು ಪಡೆದುಕೊಂಡನು. ಆತ್ಮಾನುಸಂಧಾನದ ಅನುಭೂತಿಯ ಆನಂದದಲ್ಲಿ ಒಮ್ಮೊಮ್ಮೆ ತನ್ನನ್ನೇ ತಾನು ಮರೆಯುವಷ್ಟು ಮಾನಸಿಕ ಉನ್ನತ ಸ್ಥಿತಿಯನ್ನು ಪಡೆದುಕೊಂಡನು. ಒಮ್ಮೆ ರಾಜನ ದರ್ಬಾರದಲ್ಲಿ ರಾಜರು ಬಂದಾಗ ಇವನು ತನ್ನಲ್ಲಿ ತಾನು ಲೀನನಾಗಿದ್ದರಿಂದ ಶಿಷ್ಟಾಚಾರಕ್ಕನುಸಾರವಾಗಿ ಎದ್ದು ನಿಂತು ರಾಜನಿಗೆ ಗೌರವವನ್ನು ಸಮರ್ಪಿಸಲಿಲ್ಲ. ಆಗ ಸಿಟ್ಟಿಗೆದ್ದ ರಾಜನು ಇವನ ಅವಿನಯವನ್ನು ಕಂಡು ಇವನನ್ನು ಆಸ್ಥಾನದಿಂದ ಹೊರ ಹಾಕಿದನು. ಆಶೆ, ಆಮಿಷಗಳ ಅವಸ್ಥೆಯನ್ನು ಮೀರಿ ನಿಂತ ಈ ಬಲರಾಮನು ದರ್ಬಾರದಿಂದ ತನ್ನ ನಿವಾಸಕ್ಕೆ ಬಂದು ತನ್ನಲ್ಲಿರುವ ವಸ್ತುವಡವೆಗಳನ್ನೆಲ್ಲ, ಬಡಬಗ್ಗರಿಗೆ ಹಂಚಿ ತಾನು ರಾಜಪೋಷಾಕುಗಳನ್ನೆಲ್ಲ ತೊರೆದು ಕೌಪೀನಧಾರಿಯಾಗಿ ಸಮೀಪದ ನದಿಯ ದಡದಲ್ಲಿ ಕಾಲು ಚಾಚಿ ತನ್ನದೇ ಆದ ಆನಂದದಲ್ಲಿ ಕುಳಿತುಕೊಂಡನು.

ದರ್ಬಾರದಿಂದ ಹೊರಹಾಕಲ್ಪಟ್ಟ ಬಲರಾಮನು ಏನು ಮಾಡುತ್ತಿದ್ದಾನೆ ಎಂಬುದನ್ನು ತಿಳಿಯಲೋಸುಗ ರಾಜನು ತನ್ನ ಸೈನಿಕರನ್ನು ಕಳಿಸಿಕೊಟ್ಟಾಗ ಅವರು ಎಲ್ಲೆಡೆ ತಿರುಗಿ ಕೊನೆಗೆ ನದಿಯ ದಡದಲ್ಲಿ ಆ ಬಲರಾಮನು ಕೌಪೀನಧಾರಿಯಾಗಿ ಕುಳಿತ ವಿಷಯವನ್ನು ರಾಜನಿಗೆ ನಿವೇದಿಸಿಕೊಂಡರು. ಈ ವಾರ್ತೆಯನ್ನು ತಿಳಿದ ರಾಜನು ಆಶ್ಚರ್ಯಚಕಿತನಾಗಿ ಆತನನ್ನು ಕಾಣಲು ಹೋದಾಗ ನದಿಯ ಉಸುಕಿನ ಪ್ರದೇಶದಲ್ಲಿ

ಕೇವಲ ಕೌಪೀನಧಾರಿಯಾಗಿ ತನ್ನ ಆನಂದದಲ್ಲಿಯೇ ತಾನು ತಲ್ಲೀನನಾಗಿ ಕುಳಿತ ಬಲರಾಮನನ್ನು ಕಂಡು ''ಹೇ ಬಲರಾಮನೆ ! ಕಾಲುಚಾಚಿಕೊಂಡು ಕುಳಿತುಕೊಳ್ಳುವ ಪದ್ಧತಿಯನ್ನು ಎಂದು ಕಲಿತಿರುವೆ'' ಎಂಬುದಾಗಿ ಪ್ರಶ್ನಿಸಿದನು. ಆಗ ಬಲರಾಮನು ತನ್ನದೇಯಾದ ಆತ್ಮಾನಂದದ ಶೈಲಿಯೊಳಗೆ ಎಂದು ಕೈಗಳನ್ನು ಮಡಚಿಕೊಂಡೆನೋ ಅಂದೇ ಈ ಪದ್ಧತಿಯನ್ನು ಪ್ರಾರಂಭಿಸಿದ್ದೇನೆ ಎಂಬುದಾಗಿ ಉತ್ತರಿಸಿದನು. ಬಲರಾಮನ ಈ ವೈರಾಗ್ಯಶೀಲವಾದ ವೃತ್ತಿಯನ್ನು ಕಂಡು ಅವನ ಮಾನಸಿಕ ಉನ್ನತ ಸ್ಥಿತಿಯನ್ನು ಅರಿತ ಮಹಾರಾಜನು ಆತನಿಗೆ ಸಾಷ್ಟಾಂಗವೆರಗಿ ಕೊನೆಯವರೆಗೂ ಆತನ ದಾಸನಾದನಂತೆ !

ಆಶೆಗೆ ದಾಸನಾದವನು ಜಗತ್ತಿನ ದಾಸನಾದರೆ, ಆಶೆಯನ್ನು ದಾಸವಾಗಿಸಿಕೊಂಡವನಿಗೆ ಜಗತ್ತೇ ದಾಸವಾಗುತ್ತದೆಂಬುದು ಇಲ್ಲಿ ತಿಳಿದು ಬರುತ್ತದೆ. ಅಂತೆಯೇ ಅಜ್ಞ ಜೀವಿಗಳನ್ನೆಲ್ಲ ತನ್ನ ದಾಸವಾಗಿರಿಸಿಕೊಂಡ ಮಾಯೆಯು ಆಶೆ ಆಮಿಷಗಳನ್ನು ಮೀರಿ ನಿಂತ ಆತ್ಮ ಜ್ಞಾನಿಗೆ ತಾನೇ ದಾಸಳಾಗುತ್ತಾಳೆ. ಹೀಗೆ ದಾಸಳಾದ ಈ ಮಾಯೆಯಿಂದ ಶಿವಯೋಗಿಗೆ ಅದಾವ ಬಾಧೆಯೂ ಉಂಟಾಗುವುದಿಲ್ಲವೆಂಬುದನ್ನೇ ಪೂಜ್ಯಪಾದರು ಇಲ್ಲಿ ''ಮಾಯಾ ಕೈಂಕರ್ಯವಾದಿನೀ'' ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ.

ಪ್ರಸ್ತುತವಾದ ವಿಷಯವನ್ನೇ ಮತ್ತಷ್ಟು ಪ್ರಚುರಗೊಳಿಸಲೋಸುಗ ಪೂಜ್ಯ ಪಾದರು ಪುನಃ–

ವಿಶ್ವಸಂಮೋಹಿನೀ ಮಾಯಾ ಬಹುಶಕ್ತಿನಿರಂಕುಶಾ ।
ಶಿವೈಕತ್ವಮುಪೇತಸ್ಯ ನ ಪುರಃ ಸ್ಥಾತುಮೀಹತೇ ॥

(ಸಿ. ಶಿ. ೨೦–೧೭)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನ ಅನಂತ ಶಕ್ತಿಗಳಿಂದ ನಿರಂಕುಶಳಾಗಿರುವ, ವಿಶ್ವವೆಲ್ಲವನ್ನು ಮೋಹಗೊಳಿಸುವ, ಸಾಮರ್ಥ್ಯಶಾಲಿನಿಯಾದ ಮಾಯೆಯು ಶಿವನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದುಕೊಂಡ ಶಿವಯೋಗಿಯನ್ನು ಮೋಹಗೊಳಿಸಲು ಇಚ್ಛಿಸುವುದಿಲ್ಲ. ಅರ್ಥಾತ್ ಮೋಹಕ ರೂಪವಾಗಿ ಅವನ ಎದುರಿನಲ್ಲಿ ನಿಲ್ಲಲಾರಳೆಂಬ ಭಾವವು.

ಸಮಸ್ತ ವಿಶ್ವವೆಲ್ಲವನ್ನು ಸಮ್ಮೋಹನಗೊಳಿಸುವ ಮಾಯೆಯು ಅನಂತ ಶಕ್ತಿ ಸಾಮರ್ಥ್ಯವನ್ನು ಪಡೆದುದಾಗಿದೆ. ಅಂತೆಯೇ ಇದು ಸ್ವಾಭಾವಿಕವಾಗಿ ನಿರಂಕುಶವಾದುದು. ಅಂದರೆ ಇದರ ಮೇಲೆ ಯಾರ ಅಧಿಕಾರವು ನಡೆಯುವುದಿಲ್ಲವೆಂಬ ಭಾವವು. ಎಲ್ಲ ಜೀವಿಗಳನ್ನು ತನ್ನ ಅಂಕಿತದಲ್ಲಿಟ್ಟುಕೊಂಡು ಈ ಮೋಹ ಪ್ರಪಂಚದಲ್ಲಿ ಪುನಃ ಪುನಃ ಸುತ್ತಾಡುವಂತೆ ಮಾಡುತ್ತದೆ. ಈ ಜಗತ್ತಿನಲ್ಲಿ ಸಮ್ಮೋಹನ ವಿದ್ಯೆಯನ್ನು ಕರಗತ ಮಾಡಿಕೊಂಡ ಕೆಲವು ಜನರು ಆ ವಿದ್ಯೆಯನ್ನು ಇನ್ನೋರ್ವ ವ್ಯಕ್ತಿಯ ಮೇಲೆ ಪ್ರಯೋಗ ಮಾಡಿದಾಗ ಆ ಸಮ್ಮೋಹನಕ್ಕೆ ಒಳಗಾದ ವ್ಯಕ್ತಿಯು ಆ ಮಾಯಾವಿಯ ಅಧೀನನಾಗಿ ಅವನು ಹೇಳಿದಂತೆ ವರ್ತಿಸುತ್ತಾನೆ. ಎಷ್ಟೋ ಸಂದರ್ಭಗಳಲ್ಲಿ ಸಮ್ಮೋಹನ ವಿದ್ಯೆಯಿಂದ ಸಮ್ಮೋಹಿಸಲ್ಪಟ್ಟ ವ್ಯಕ್ತಿಗೆ ಖಾರದ ಪದಾರ್ಥಗಳನ್ನು ತಿನ್ನಲು ಕೊಟ್ಟು ಇದು ಬಹಳ ಸಿಹಿಯಿದೆ ಎಂದು ಆದೇಶವಿತ್ತಾಗ ಅದನ್ನು ಅವನು ಸಿಹಿಯೆಂದೇ ಗ್ರಹಿಸಿ ತಿನ್ನುವುದನ್ನು

ಕಾಣುತ್ತೇವೆ. ಇದೂ ಅಲ್ಲದೇ ಇನ್ನೂ ಎಷ್ಟೋ ವಿಚಿತ್ರವಾದ ಘಟನೆಗಳೂ ಸಹ ಈ ಸಮ್ಮೋಹನವಿದ್ಯೆಯಿಂದ ನಡೆಯುವುದುಂಟು. ಸಮ್ಮೋಹನ ವಿದ್ಯೆಗೆ ಒಳಗಾದ ವ್ಯಕ್ತಿಯು ಸಮ್ಮೋಹನಗೊಳಿಸಿದವನ ಆದೇಶವನ್ನು ಚಾಚೂ ತಪ್ಪದೇ ಪರಿಪಾಲಿಸುತ್ತಾನೆ. ಸಮ್ಮೋಹನ ವಿದ್ಯೆಯನ್ನು ಕಲಿತ ಒಬ್ಬ ವ್ಯಕ್ತಿಯು ಆ ವಿದ್ಯೆಯ ಪ್ರಭಾವದಿಂದ ಇನ್ನೋರ್ವ ವ್ಯಕ್ತಿಯನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುತ್ತಾನೆಂದ ಬಳಿಕ ವಿಶ್ವದ ಸಮಸ್ತ ವೈಚಿತ್ರ್ಯಕ್ಕೆ ಕಾರಣೀಭೂತವಾದ ಸಾಕ್ಷಾತ್ ಮಾಯೆಯ ಅಧೀನದಲ್ಲಿ ಜೀವಿಗಳಿರುವುದೇನು ಆಶ್ಚರ್ಯಕರವಲ್ಲ. ಹೀಗೆ ಅಪಾರ ಶಕ್ತಿಶಾಲಿಯಾದ ಈ ಮಾಯೆಯು ನಿರಂಕುಶವಾದುದಾಗಿದೆ. ಇದು ಯಾವುದೇ ಜೀವಿಯ ಅಧೀನದಲ್ಲಿರುವಂಥದ್ದಲ್ಲ. ಶಿವನ ಕೃಪೆಯನ್ನು ಪಡೆಯದೆ ಸ್ವ–ಸಾಮರ್ಥ್ಯದಿಂದ ಯಾರೂ ಇದನ್ನು ಗೆಲ್ಲಲು ಸಮರ್ಥರಾಗಲಾರರು. ''ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ'' ಎಂಬ ಈ ಗೀತೋಕ್ತಿಯಂತೆ, ಭಗವಂತನ ಕೃಪೆಯನ್ನು ಸಂಪಾದಿಸಿದವನೇ ಮಾಯೆಯನ್ನು ಗೆಲ್ಲಬಲ್ಲನು. ಯಾರು ಭಗವಂತನಿಂದ ದೂರ ದೂರ ಸರಿಯುತ್ತಾರೆಯೋ ಅವರೆಲ್ಲ ಮಾಯಾಪಾಶದಲ್ಲಿ ಸಿಲುಕಿಕೊಂಡು ಜನನ ಮರಣಾತ್ಮಕವಾದ ಚಕ್ರದಲ್ಲಿ ಸಿಲುಕಿ ನುಚ್ಚು ನೂರಾಗುತ್ತಾರೆ. ಭಗವಂತನ ಸಾನಿಧ್ಯವನ್ನು ಹೊಂದಿದ ವ್ಯಕ್ತಿಯು ಮಾತ್ರ ಈ ಮಾಯಾ ಜಾಲದಿಂದ ಮುಕ್ತನಾಗಬಲ್ಲನು.

ಸಂತ ಕಬೀರದಾಸನು ಒಂದು ಸಾರೆ ಭಿಕ್ಷೆಗೆ ಹೋದಾಗ ಮನೆಯ ಯಜಮಾನಿಯು ಬೀಸುವ ಕಲ್ಲಿನಲ್ಲಿ ಕಾಳುಗಳನ್ನು ಹಾಕಿ ಬೀಸುವ ದೃಶ್ಯವನ್ನು ನೋಡುತ್ತ ನಿಂತುಕೊಂಡನು. ಕಲ್ಲಿನಲ್ಲಿ ಹಾಕಿದ ಕಾಳುಗಳು ಕ್ಷಣಾರ್ಧದಲ್ಲಿ ಪುಡಿಪುಡಿಯಾಗಿ ಬೀಳುವುದನ್ನು ಕಂಡು ಕಣ್ಣೀರಿಟ್ಟು–

ಚಲತೀ ಚಾಕೀ ದೇಖ ಕೆ ದಿಯಾ ಕಬೀರಾ ರೋಯ್ ॥
ದೋ ಪಾಟನ ಕೆ ಬೀಚಮೇ ಸಾಬುತ ಬಚಾ ನ ಕೋಯ್ ॥

ಈ ದೋಹೆಯನ್ನು ನುಡಿದಿದ್ದಾನೆ. ತಾತ್ಪರ್ಯವೇನೆಂದರೆ, ಈ ಎರಡೂ ಕಲ್ಲುಗಳ ಮಧ್ಯದಲ್ಲಿ ಸಿಲುಕಿದ ಕಾಳುಗಳು ಪುಡಿ ಪುಡಿಯಾಗುವಂತೆ ಮಾಯೆಯ ದವಡೆಯಲ್ಲಿ ಸಿಲುಕಿದ ಜೀವಿಗಳು ಸಹ ಇದೇ ರೀತಿ ಮರಣವನ್ನಪ್ಪುತ್ತಾರೆ. ಕಬೀರದಾಸನು ಈ ಭಾವದಲ್ಲಿ ಅಳುತ್ತ ನಿಂತಿದ್ದನ್ನು ಕಂಡು, ಆ ಬೀಸುವ ಹೆಣ್ಣು ಮಗಳು ಅಳುವ ಕಾರಣವೇನೆಂದು ಕಬೀರದಾಸನನ್ನು ಪ್ರಶ್ನಿಸಲು, ಅವನು ತನ್ನ ಭಾವನೆಯನ್ನು ವ್ಯಕ್ತ ಮಾಡಿದನು. ಆಗ ಅನುಭವಿಯಾದ ಆ ಹೆಣ್ಣುಮಗಳು ಇವನನ್ನು ಕರೆದುಕೊಂಡು ಹೋಗಿ ಬೀಸುವ ಕಲ್ಲಿನ ಮೇಲಿನ ಕಲ್ಲನ್ನು ಎತ್ತಿ ತೋರಿಸಿದಾಗ ಆ ಕಲ್ಲಿನ ಮಧ್ಯದಲ್ಲಿರುವ ಮೊಳೆಯ ಸುತ್ತಲೂ ಕೆಲವು ಕಾಳುಗಳು ಸುರಕ್ಷಿತವಾಗಿದ್ದವು. ಇದನ್ನು ತೋರಿಸಿ ಆ ವೃದ್ಧೆಯು ಕಬೀರನಿಗೆ ಹೇಳಿದ್ದೇನೆಂದರೆ ಈ ಮೊಳೆಯ ಸುತ್ತಲೂ ತಿರುಗುವ ಕಾಳುಗಳು ಸುರಕ್ಷಿತವಾಗಿರುವಂತೆ ಪರಶಿವ ತತ್ತ್ವವನ್ನು ಆಶ್ರಯಿಸಿದ ವ್ಯಕ್ತಿಯ ಮೇಲೆ ಮಾಯೆಯ ಯಾವ ಪ್ರಭಾವವೂ ಆಗುವುದಿಲ್ಲವೆಂಬುದನ್ನು ತಿಳಿಸಿಕೊಟ್ಟಳು. ಅಂತೆಯೇ ಪೂಜ್ಯಪಾದರು ಶಿವನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯ

ಮೇಲೆ ಮಾಯೆಯು ತನ್ನ ಯಾವುದೇ ಪ್ರಭಾವವನ್ನುಂಟು ಮಾಡಲಾರದು ಎಂದು ಅಪ್ಪಣೆಕೊಡಿಸಿದ್ದಾರೆ. ಶಿವ ನೊಂದಿಗೆ ಸಾಮರಸ್ಯ ಸ್ಥಿತಿಯನ್ನು ಪಡೆದುಕೊಂಡ ಶಿವಯೋಗಿಯ ಎದುರಿನಲ್ಲಿ ಮಾಯೆಯು ಮೋಹಕ ರೂಪವನ್ನು ತಾಳಿ ನಿಲ್ಲಲಾರದು. ಶಿವಜ್ಞಾನವನ್ನು ಪಡೆದವನ ದೃಷ್ಟಿಯು ಶಿವಮಯವಾಗಿರೋಣದರಿಂದ, ಅವನು ಎಲ್ಲವನ್ನು ಶಿವರೂಪವಾಗಿಯೇ ಕಾಣುತ್ತಿರೋಣದರಿಂದ, ಅವನ ದೃಷ್ಟಿಯ ಮೇಲೆ ಮಾಯೆಯ ಯಾವುದೇ ಪ್ರಭಾವವು ನಡೆಯುವುದಿಲ್ಲವೆಂಬುದಾಗಿ ತಿಳಿದುಕೊಳ್ಳಬೇಕು.

ಹೀಗೆ ಶಿವನೊಂದಿಗೆ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯ ಮನಸ್ಸಿನ ಮೇಲೆ ಶಬ್ದ ಸ್ಪರ್ಶಾದಿ ವಿಷಯಗಳ ಪ್ರಭಾವವೂ ಸಹ ಉಂಟಾಗುವುದಿಲ್ಲೆಂಬ ವಿಷಯವನ್ನು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು ಪುನಃ–

ಜ್ಯೋತಿರ್ಲಿಂಗೇ ಚಿದಾಕಾರೇ ನಿಮಗ್ನೇನ ಮಹಾತ್ಮನಾ
ಭುಜ್ಯಮಾನಾ ಯಥಾ ಯೋಗಂ ನಶ್ಯಂತಿ ವಿಷಯಾಃ ಸ್ವತಃ ||

(ಸಿ.ಶಿ. ೨೦–೧೮)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿದ್ರೂಪವಾದ ಮಹಾಲಿಂಗದಲ್ಲಿ ಐಕ್ಯಸ್ಥಿತಿಯನ್ನು ಪಡೆದ ಮಹಾಪುರುಷನಾದ ಶಿವಯೋಗಿಯು ಅರ್ಪಣಾ ವಿಧಿಯಿಂದ ಕ್ರಮವಾಗಿ ಯಾವ ಯಾವ ವಿಷಯಗಳನ್ನು ಅನುಭವಿಸುವನೋ ಅವೆಲ್ಲವು ತನ್ನಿಂದ ತಾನೆ ಇಲ್ಲವಾಗಿ ಹೋಗುವವು.

ವೀರಶೈವ ಸಿದ್ಧಾಂತದಲ್ಲಿ ಶಬ್ದಸ್ಪರ್ಶಾದಿ ವಿಷಯಗಳನ್ನು ವಿಷಯಗಳ ರೂಪದಲ್ಲಿ ಭೋಗಿಸದೇ ಅವುಗಳನ್ನು ಆಯಾ ಇಂದ್ರಿಯಗಳಿಗೆ ಅಧಿಷ್ಠಾನವಾಗಿರುವ ಆಚಾರಾದಿ ಲಿಂಗಗಳಿಗೆ ಅರ್ಪಿಸಿ ಪ್ರಸಾದ ರೂಪದಲ್ಲಿ ಸ್ವೀಕರಿಸುವ ಒಂದು ವಿಲಕ್ಷಣವಾದ ಅರ್ಪಣಾ ವಿಧಿಯು ಪ್ರತಿಪಾದಿಸಲ್ಪಟ್ಟಿದೆ. ಅದರ ಪ್ರಕಾರವಾಗಿ ನಮಗೆ ಪ್ರಾಪ್ತವಾಗಿರುವ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಹಾಗೂ ಇವುಗಳ ಅಧ್ಯಕ್ಷವಾದ ಮನಸ್ಸಿಗೆ ಅಧಿಷ್ಠಾನ ರೂಪವಾಗಿ ಒಂದೊಂದು ಲಿಂಗಗಳನ್ನು ಪರಿಕಲ್ಪಿಸಿದ್ದಾರೆ. ನಮ್ಮ ಪಂಚ ಜ್ಞಾನೇಂದ್ರಿಯಗಳಾದ ಘ್ರಾಣ, ಜಿಹ್ವೆ, ನೇತ್ರ, ತ್ವಕ್ ಮತ್ತುಶ್ರೋತ್ರಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಮತ್ತು ಪ್ರಸಾದಲಿಂಗಗಳನ್ನು ಭಾವಿಸಲಾಗುತ್ತದೆ. ಶಿವಯೋಗಿಯು ತನ್ನ ವ್ಯಾವಹಾರಿಕ ಜೀವನದಲ್ಲಿ ಗಂಧ, ರಸ, ರೂಪ, ಸ್ಪರ್ಶ ಮತ್ತುಶಬ್ದಗಳೆಂಬ ವಿಷಯಗಳನ್ನು ಅನುಭವಿಸುವಾಗ ಅವುಗಳನ್ನು ಆಯಾ ಇಂದ್ರಿಯಕ್ಕೆ ಅಧಿಷ್ಠಾನವಾಗಿರುವ ಆಚಾರಾದಿ ಲಿಂಗಗಳಿಗೆ ಆ ವಿಷಯಗಳನ್ನು ಸಮರ್ಪಿಸಿ, ಅವುಗಳನ್ನು ಕ್ರಮವಾಗಿ ಗಂಧಪ್ರಸಾದ, ರಸಪ್ರಸಾದ, ರೂಪಪ್ರಸಾದ, ಸ್ಪರ್ಶಪ್ರಸಾದ ಮತ್ತು ಶಬ್ದಪ್ರಸಾದಗಳ ರೂಪದಲ್ಲಿ ಸ್ವೀಕರಿಸುತ್ತಾನೆ. ಇದರಿಂದ ಶಬ್ದಾದಿಗಳಲ್ಲಿಯ ವಿಷಯ ಭಾವನೆಯು ದೂರಾಗಿ ಪ್ರಸಾದ ಭಾವನೆ ಒಡಮೂಡುವುದು. ಪ್ರಸಾದ ಭಾವನೆಯಿಂದ ಸ್ವೀಕರಿಸಿದಾಗ ಅವುಗಳಲ್ಲಿಯ ದೋಷವು ದೂರಾಗಿ ಆ ಶಿವಯೋಗಿಗೆ ಯಾವ ಬಾಧೆಯೂ ಉಂಟಾಗುವುದಿಲ್ಲ. ಈ ಶಿಷ್ಟೌದನ ಸ್ಥಲದ ಶಿವಯೋಗಿಯು ತನ್ನಂತರಂಗದ ಜ್ಯೋತಿರ್ಲಿಂಗದ ಚಿಂತನೆಯಲ್ಲಿ ಸದಾ

ನಿಮಗ್ನನಾಗಿರೋಣದರಿಂದ ಆತನು ನಿರ್ಲೇಪಾವಸ್ಥೆಯನ್ನು ಪಡೆದವನಾಗಿರುತ್ತಾನೆ. ಪೂಜ್ಯಪಾದರು ಇಲ್ಲಿ ಬಳಸಿರುವ ನಿಮಗ್ನ ಶಬ್ದವು ಬಹು ಮಹತ್ವಪೂರ್ಣವಾದುದು. ಜಲದಲ್ಲಿ ನಿಮಗ್ನವಾದ ಘಟವು ತನ್ನ ಒಳಹೊರಗೆಲ್ಲ ಜಲವನ್ನೇ ತುಂಬಿಕೊಂಡಿರುವಂತೆ ಚಿದ್ರೂಪವಾದ ಜ್ಯೋತಿರ್ಲಿಂಗದ ಚಿಂತನೆಯಲ್ಲಿ ಈತನ ಮನಸ್ಸು ಸಹ ತನ್ನ ಒಳಹೊರಗೆಲ್ಲ ಆ ಜ್ಯೋತಿರ್ಲಿಂಗದ ಭಾವವನ್ನೇ ತುಂಬಿಕೊಂಡಿರುತ್ತದೆ. ಅಂತೆಯೇ ಈತನಿಗೆ ಮಹಾತ್ಮಾ ಎಂದು ಕರೆಯಲಾಗಿದೆ. ಯಾರ ಮನಸ್ಸು ನಿಃಸ್ವಾರ್ಥ ಭಾವದಿಂದ ಕೂಡಿಕೊಂಡಿರುವುದೋ, ಯಾರು ಸಮಷ್ಟಿ ಜಗತ್ತಿನ ಕಲ್ಯಾಣವನ್ನು ಬಯಸುವರೋ ಅವರಿಗೇನೆ, ಮಹಾತ್ಮಾ ಎಂಬುದಾಗಿ ಕರೆಯುತ್ತಾರೆ. ಈ ಶಿಷ್ಟೌದನಸ್ಥಲದ ಶಿವಯೋಗಿಯ ಚಿತ್ತವು ಇಂತಹ ಮಹಾನ್ ಗುಣಗಳಿಂದ ಪರಿಪೂರ್ಣನಾಗಿರೋಣದ ರಿಂದ ಅವನನ್ನು ಇಲ್ಲಿ ಮಹಾತ್ಮಾ ಎಂದು ಸಂಬೋಧಿಸಲಾಗಿದೆ.

ಈ ಶಿವಯೋಗಿಯು ತನ್ನ ಪ್ರಾರಬ್ಧ ಕರ್ಮಾನುಸಾರವಾಗಿ ಪ್ರಾಪ್ತವಾದ ಭೋಗವನ್ನು ಅನುಭವಿಸುತ್ತಿರುತ್ತಾನೆ. ಶಾಸ್ತ್ರಕಾರರು ಈ ಪ್ರಾರಬ್ಧ ಕರ್ಮವನ್ನು ಇಚ್ಛಾಪ್ರಾರಬ್ಧ, ಅನಿಚ್ಛಾ ಪ್ರಾರಬ್ಧ ಮತ್ತು ಪರೇಚ್ಛಾ ಪ್ರಾರಬ್ಧ ಎಂಬುದಾಗಿ ಮೂರು ವಿಧವಾಗಿ ಹೇಳಿದ್ದಾರೆ. ತಾನು ಇಚ್ಛೆ ಪಟ್ಟು ವಿಷಯಾದಿಗಳನ್ನು ಅನುಭವಿಸುವುದಕ್ಕೆ ಕಾರಣವಾದುದು ಇಚ್ಛಾ ಪ್ರಾರಬ್ಧವು. ಅನ್ಯರ ಇಚ್ಛೆಗೋಳಗಾಗಿ ವಿಷಯಾದಿಗಳನ್ನನು ಭವಿಸುವುದಕ್ಕೆ ಕಾರಣವಾದುದು ಪರೇಚ್ಛಾ ಪ್ರಾರಬ್ಧವು, ಇನ್ನು ತನ್ನ ಹಾಗೂ ಅನ್ಯರ ಇಚ್ಛೆಗಳಿಗಲ್ಲದೇ ಈಶ್ವರನ ಸಂಕೇತ ಮೂಲಕವಾಗಿ ಪ್ರಾಪ್ತವಾಗುವ ಭೋಗಕ್ಕೆ ಕಾರಣವಾದುದೇ ಅನಿಚ್ಛಾ ಪ್ರಾರಬ್ಧ ಕರ್ಮವೆಂಬುದಾಗಿ ತಿಳಿದುಕೊಳ್ಳಬೇಕು. ಪರಸ್ಪರ ಪರಿಚಯವಿಲ್ಲದ ಇಬ್ಬರು ವ್ಯಕ್ತಿಗಳು ರೈಲಿನಲ್ಲಿ ಯಾತ್ರೆಯನ್ನು ಮಾಡುವಾಗ ತಾವು ತಂದಿರುವ ಖಾದ್ಯ ಪದಾರ್ಥಗಳನ್ನು ಪರಸ್ಪರರಲ್ಲಿ ವಿನಿಮಯ ಮಾಡಿಕೊಂಡು ಅವು ಗಳನ್ನು ಉಪಭೋಗಿಸುವುದನ್ನು ಕಾಣುತ್ತೇವೆ. ಇಲ್ಲಿ ಪೂರ್ವ ನಿಯೋಜಿತವಾಗಿ ಪರಸ್ಪರ ರಲ್ಲಿ ಕೊಡುವ–ಕೊಳ್ಳುವ ವಿಚಾರವಿರದೇ ಅಲ್ಲಿ ವ್ಯವಹಾರವು ಆಕಸ್ಮಿಕವಾಗಿ ನಡೆದು ಹೋಗುತ್ತದೆ. ಆ ನಡೆದಿರುವ ಪರಸ್ಪರ ವಿಷಯೋಪಭೋಗ ವ್ಯವಹಾರವು ಈಶ್ವರ ಸಂಕೇತ ಮೂಲಕವಾಗಿ ನಡೆದಿರೋಣದರಿಂದ ಇದಕ್ಕೆ ಕಾರಣವಾದ ಕರ್ಮಕ್ಕೆ ಅನಿಚ್ಛಾ ಪ್ರಾರಬ್ಧವೆಂದು ಕರೆಯುತ್ತಾರೆ.

ಈ ಶಿಷ್ಟೌದನಸ್ಥಲದ ಶಿವಯೋಗಿಯು ಈ ಪೂರ್ವದಲ್ಲಿ ಹೇಳಿದ ಪ್ರಾರಬ್ಧ ಕರ್ಮಾನುಸಾರವಾಗಿ ವಿಷಯಭೋಗವನ್ನು ಮಾಡಿದರೂ, ಆ ವಿಷಯಗಳ ಭೋಗ ವಾಸನೆಯು ಮನಸ್ಸಿನಲ್ಲಿ ಉಳಿಯುವುದಿಲ್ಲ, ವಿಷಯೋಪಭೋಗಜನ್ಯ ಸಂಸ್ಕಾರ ರೂಪವಾದ ವಾಸನೆಯು ಪುನಃ ಪುನಃ ವಿಷಯ ಭೋಗದಲ್ಲಿ ಅಭಿಲಾಷೆಯನ್ನುಂಟು ಮಾಡುತ್ತದೆ. ಆದರೆ ಈ ಶಿವಯೋಗಿಯ ಮನಸ್ಸಿನಲ್ಲಿ ವಾಸನೆಯೇ ಇಲ್ಲದಿರೋಣದ ರಿಂದ ಇವನಿಗೆ ದೊರೆಯುವ ಭೋಗಾದಿಗಳು ಪರೇಚ್ಛಾ ಇಲ್ಲವೆ ಅನಿಚ್ಛಾ ಪ್ರಾರಬ್ಧ ಮೂಲಕವಾದವುಗಳೆಂಬುದಾಗಿ ತಿಳಿದುಕೊಳ್ಳಬೇಕು. ಸರ್ಪ ಇಲ್ಲವೆ ಚೇಳುಗಳು ದಂಶ ಮಾಡಿದ ಮಾತ್ರಕ್ಕೆ ನಮಗೆ ಅಪಾಯವಾಗುವುದಿಲ್ಲ, ಆದರೆ ದಂಶ ಮಾಡುವುದರ ಜೊತೆಗೆ ತಮ್ಮ ವಿಷವನ್ನು ಶರೀರದಲ್ಲಿ ಬಿಟ್ಟಾಗ ಮಾತ್ರ ಜೀವಿಗಳಿಗೆ ವಿಷಬಾಧೆಯಿಂದ

ತೊಂದರೆಯುಂಟಾಗುವುದು. ಇದೇ ಪ್ರಕಾರವಾಗಿ ಇಂದ್ರಿಯ ವಿಷಯಗಳ ಸಂಬಂಧ ವಾದ ಮಾತ್ರಕ್ಕೆ ಯಾವ ಅಪಾಯವೂ ಉಂಟಾಗುವುದಿಲ್ಲ, ಆದರೆ ವಿಷಯೇಂದ್ರಿಯಗಳ ಸಂಬಂಧವಾದಾಗ, ನಮ್ಮ ಮನದಲ್ಲಿ ಅದರ ಅನುಭವ ಜನ್ಯ ಸಂಸ್ಕಾರವು ವಾಸನಾ ರೂಪವಾಗಿ ಉಳಿದುಕೊಂಡಾಗ, ಅದುವೇ ಪುನಃ ಪುನಃ ವಿಷಯಾಭಿಲಾಷೆಯನ್ನು ಹುಟ್ಟಿಸಿ, ಜೀವಿಗಳಿಗೆ ತೊಂದರೆಯನ್ನುಂಟುಮಾಡುತ್ತದೆ. ಪ್ರಕೃತನಾದ ಶಿವಯೋಗಿಯು ಪರೇಚ್ಛಾ, ಅನಿಚ್ಛಾ ಪ್ರಾರಬ್ಧ ಮೂಲಕವಾಗಿ ವಿಷಯಗಳನ್ನನುಭವಿಸಿದರೂ ಅವನು ಆ ವಿಷಯ ವಾಸನಾ ಶೂನ್ಯನಾಗಿರುವುದರಿಂದ ವಿಷಯಗಳ ಅಭಿಲಾಷೆಯೇ ಇಲ್ಲದವನಾಗಿ ವಿಷಯಗಳಿಂದ ಸಹಜವಾಗಿ ಮುಕ್ತನಾಗಿ ಬಿಡುತ್ತಾನೆಂಬುದಾಗಿ ಪೂಜ್ಯರು ಅಪ್ಪಣೆ ಕೊಡಿಸಿದ್ದಾರೆ.

ಶಬ್ದ ಸ್ಪರ್ಶಾದಿ ವಿಷಯಗಳು ಈ ಶಿವಯೋಗಿಗೆ ಅದು ಹೇಗೆ ಇಲ್ಲವಾಗುತ್ತವೆ ಎಂಬ ವಿಷಯವನ್ನು ದೃಷ್ಟಾಂತ ಮೂಲಕವಾಗಿ ಪೂಜ್ಯರು ಪುನಃ–

ಶಬ್ದಾದಯೋಽಪಿ ವಿಷಯಾ ಭುಜ್ಯಮಾನಾಸ್ತದಿಂದ್ರಿಯೈಃ ।
ಆತ್ಮನ್ಯೇವ ವಿಲೀಯಂತೆ ಸರಿತಃ ಸಾಗರೇ ಯಥಾ ॥

(ಸಿ. ಶಿ. ೨೦–೧೯)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಶಿವಯೋಗಿಯು ಆಯಾ ಇಂದ್ರಿಯಗಳಿಂದ ಅನುಭವಿಸುವ ಶಬ್ದಾದಿ ವಿಷಯಗಳು ನದಿಗಳು ಸಮುದ್ರದಲ್ಲಿ ಲಯವಾಗುವಂತೆ ಇವನ ಆತ್ಮದಲ್ಲಿಯೇ ವಿಲಯವನ್ನು ಹೊಂದುತ್ತವೆ.

ಶಿಷ್ಟೌದನಸ್ಥಲದ ಶಿವಯೋಗಿಯು ಶಬ್ದ ಸ್ಪರ್ಶಾದಿ ವಿಷಯಗಳನ್ನು ಆಯಾ ಇಂದ್ರಿಯಗಳಿಂದ ಅನುಭವಿಸಿದರೂ, ಆ ವಿಷಯಗಳು ಅವನ ಚಿತ್ತವನ್ನು ಕ್ಷೋಭೆ ಗೊಳಿಸಲು ಸಮರ್ಥವಾಗಲಾರವು. ಯಾವ ವ್ಯಕ್ತಿಯ ಮನದಲ್ಲಿ ವಿಷಯಾಭಿಲಾಷೆಯು ತುಂಬಿಕೊಂಡಿರುವುದೋ, ಅವನು ಅದೆಷ್ಟೇ ವಿಷಯ ಭೋಗವನ್ನು ಪಡೆದರೂ ಪುನಃ ಅವನ ಚಿತ್ತವು ಅತೃಪ್ತಾವಸ್ಥೆಯಲ್ಲೇ ಇರುತ್ತದೆ. ಆದರೆ ಈ ಶಿವಯೋಗಿಯು ಪ್ರಾರಬ್ಧಾನು ಸಾರವಾಗಿ ಬಂದ ವಿಷಯಗಳನ್ನು ಅನುಭವಿಸಿ ಪುನಃ ಅವುಗಳ ಬಯಕೆಯಿಲ್ಲದವನಾಗಿ ರೋಣದರಿಂದ ಅವನ ಮನಸ್ಸಿನಲ್ಲಿ ಕ್ಷೋಭವು ಉಂಟಾಗುವುದಿಲ್ಲ, ಮನದ ಕ್ಷೋಭೆಗೆ ವಿಷಯೇಂದ್ರಿಗಳ ಸಂಬಂಧವು ಕಾರಣವಾಗಿರದೆ ವಿಷಯ ವಾಸನೆಯೇ ಕಾರಣ ವಾಗಿರುತ್ತದೆ. ಅಪಾರವಾದ ಜಲಾಶಯವಾಗಿರುವ ಸಮುದ್ರದಲ್ಲಿ ಸಹಸ್ರಾರು ನದಿಗಳು ಸದಾ ಬಂದು ಸೇರುತ್ತಲೇ ಇರುತ್ತವೆ. ಹೀಗೆ ಅದೆಷ್ಟೋ ನದಿಗಳು ನಿರಂತರವಾಗಿ ಬಂದು ಸೇರುತ್ತಿದ್ದರೂ ಸಮುದ್ರವು ತನ್ನ ಮರ್ಯಾದೆಯನ್ನು ಮೀರದೆ ಶಾಂತವಾಗಿರುತ್ತದೆ. ಅದೇ ಪ್ರಕಾರವಾಗಿ ಪ್ರಶಾಂತಸಾಗರದಂತಿರುವ ಈ ಶಿಷ್ಟೌದನಸ್ಥಲದ ಶಿವಯೋಗಿಯ ಚಿತ್ತಕ್ಕೆ ಯಾವುದೇ ವಿಷಯದ ಸಂಬಂಧವಾದರೂ ಅದು ವಿಚಲಿತವಾಗದೆ ಶಾಂತ ವಾಗಿಯೇ ಉಳಿಯುತ್ತದೆ. ಅಂದರೆ ವಿಷಯೇಂದ್ರಿಯಗಳ ಸಂಬಂಧವು ಶಿವಯೋಗಿಯ ಚಿತ್ತವನ್ನು ಕದಡಲು ಸಾಧ್ಯವಾಗುವುದಿಲ್ಲವೆಂಬ ಭಾವವು. ಇದೇ ವಿಷಯವನ್ನೇ ಶ್ರೀ ಕೃಷ್ಣ ಪರಮಾತ್ಮನು ಅರ್ಜುನನನ್ನುದ್ದೇಶಿಸಿ–

ಅಪೂರ್ಯಮಾಣಮಚಲ ಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾಽಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥

(ಗೀ. ೨–೭೦)

ಹೀಗೆ ಉಪದೇಶಿಸಿದ್ದನ್ನು ಕಾಣುತ್ತೇವೆ. ವಿಷಯೇಂದ್ರಿಯಗಳ ಸಂಬಂಧವು ಅಜ್ಞ ಜೀವರಲ್ಲಿ ಕ್ಷೋಭವನ್ನುಂಟು ಮಾಡಿದರೂ, ಆತ್ಮಜ್ಞಾನಿಗಳಿಗೆ ಕ್ಷೋಭವನ್ನುಂಟು ಮಾಡುವುದಿಲ್ಲವೆಂಬ ವಿಷಯದಲ್ಲಿ ಶ್ರೀ ಜಗದ್ಗುರು ರೇಣುಕರ ಹಾಗೂ ಶ್ರೀಕೃಷ್ಣಪರಮಾತ್ಮನ ವಿಚಾರ ಸಾಮ್ಯತೆಯನ್ನಿಲ್ಲಿ ಕಾಣಬಹುದು.

ಶಿವಯೋಗಿಯು ಪೂರ್ಣಕಾಮನಾಗಿರುವುದರಿಂದ ಅವನಲ್ಲಿ ಯಾವುದೇ ವಿಷಯಕವಾದ ಅಭಿಲಾಷೆ ಇರುವುದಿಲ್ಲ. ಅಂತೆಯೇ ದುಃಖಗಳಲ್ಲಿ ಉದ್ವಿಗ್ನನಾಗದೆ ವಿಷಯ ಸುಖದಲ್ಲಿ ಅಭಿಲಾಷಾಶೂನ್ಯನಾಗಿರುವುದರಿಂದ ಭಯ, ರಾಗ, ಕ್ರೋಧಗಳನ್ನು ಮೀರಿ ನಿಂತ ಸ್ಥಿತಪ್ರಜ್ಞ ಸ್ಥಿತಿಯನ್ನು ಪಡೆದಿರುವುದರಿಂದ ಇವನು ಸಮುದ್ರದಂತೆ ಧೀರನೂ, ಗಂಭೀರನೂ ಸದಾ ಸಮಾಹಿತ ಚಿತ್ತನೂ ಆಗಿರುತ್ತಾನೆಂಬುದಾಗಿ ಪೂಜ್ಯರು ಅಪ್ಪಣೆಕೊಡಿಸಿದ್ದನ್ನು ಇಲ್ಲಿ ಕಾಣಬಹುದು. ಮನುಷ್ಯನ ಚಿತ್ತವಿಕ್ಷೋಭಕ್ಕೆ ರಾಗ, ಭಯ ಹಾಗೂ ಕ್ರೋಧಗಳು ಕಾರಣವಾಗಿರುತ್ತವೆ. ಈ ವೃತ್ತಿಗಳಿಗೆ ಮೂಲ ಕಾರಣವಾದುದು ಭೇದ ಜ್ಞಾನವು. ಯಾರಲ್ಲಿ ಭೇದಜ್ಞಾನವಿರುತ್ತದೆಯೋ ಅವರ ಮನಸ್ಸು ಅನುಕೂಲ ಸ್ಥಿತಿಯಲ್ಲಿ ರಾಗವನ್ನೂ, ಪ್ರತಿಕೂಲ ಸ್ಥಿತಿಯಲ್ಲಿ ದ್ವೇಷವನ್ನೂ ಹೊಂದಿ ಅದರಿಂದಲೇ ಕ್ಷೋಭಾವಸ್ಥೆಯನ್ನು ಪಡೆದುಕೊಳ್ಳುತ್ತದೆ. ತನಗಿಂತ ಭಿನ್ನವಾದ ವ್ಯಕ್ತಿಗಳಿದ್ದಾಗಲೇ ಅವನಿಂದ ಭಯಾದಿಗಳು ಸಹ ಸಂಭವಿಸುವುದುಂಟು. ಪ್ರಸ್ತುತವಾದ ಶಿಷ್ಯೌದನ ಸ್ಥಲದ ಶಿವಯೋಗಿಯು ಶಿವಾದ್ವೈತ ಜ್ಞಾನವನ್ನು ಪಡೆದಿರೋಣದರಿಂದ ಅವನಲ್ಲಿ ದ್ವೈತ ಬುದ್ಧಿಯು ಇಲ್ಲದಾಗಿ ಹೋಗಿರುತ್ತದೆ. ಆದ್ದರಿಂದಲೇ ಅವನು ರಾಗ, ಭಯ ಮತ್ತು ಕ್ರೋಧಗಳಿಂದ ಮುಕ್ತನಾಗಿರುತ್ತಾನೆ. ಹೀಗಿರುವುದರಿಂದಲೇ ಶಬ್ದಾದಿ ವಿಷಯಗಳ ಸಂಬಂಧವಾದರೂ ಅವನು ನಿರ್ಲಿಪ್ತನಾಗಿದ್ದು ಸದಾ ಶಾಂತಸಾಗರನಾಗಿರುತ್ತಾನೆ.

ಈ ಪೂರ್ವದಲ್ಲಿ ವಿವರಿಸಿದಂತೆ ವಿಷಯಗಳಿಂದ ವಿಕ್ಷೋಭವನ್ನು ಪಡೆಯದಿರುವ ಶಿವಯೋಗಿಯ ಸ್ಥಿತಿಯು ಹೇಗಿರುತ್ತದೆಂಬ ವಿಷಯವನ್ನು ಪೂಜ್ಯಪಾದರು ಈ ಸ್ಥಲದ ಕೊನೆಯಲ್ಲಿ–

ಅರ್ಥಜಾತಮಶೇಷಂ ತು ಗ್ರಸನ್ ಯೋಗೀ ಪ್ರಶಾಮ್ಯತಿ ।
ಸ್ವಾತ್ಮನ್ಯೆವಾಸ್ಥಿತೋ ಭಾನುಸ್ತೇಜೋಜಾಲಮಶೇಷತಃ ॥

(ಸಿ. ಶಿ. ೨೦–೨೦)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸೂರ್ಯನು ತನ್ನೆಲ್ಲ ಕಿರಣಗಳನ್ನು ತನ್ನಲ್ಲಿ ಅಡಗಿಸಿಕೊಂಡು ಹೇಗೆ ಅಸ್ತಂಗತನಾಗುವನೋ, ಅದರಂತೆ ಸಕಲ ವಿಷಯಗಳನ್ನು ಸ್ವ–ಸ್ವರೂಪದಲ್ಲಿ ಅನುಭವಿಸುತ್ತ ಈ ಶಿವಯೋಗಿಯು ತನ್ನಲ್ಲಿಯೇ ತಾನು ಪ್ರಶಾಂತನಾಗಿರುವನು.

ಈ ಜಗತ್ತಿನಲ್ಲಿ ವ್ಯವಹರಿಸುವ ಜ್ಞಾನಿ ಹಾಗೂ ಅಜ್ಞಾನಿಗಳೀರ್ವರೂ ಶಬ್ದಾದಿ ವಿಷಯ ಸಂಬಂಧವನ್ನು ಪಡೆಯುತ್ತಾರೆ. ಅಜ್ಞನಾದ ಜೀವಿಯು ಒಮ್ಮೆ ಅನುಭವಿಸಿದ ವಿಷಯ ಸುಖಾನುಭೂತಿಯನ್ನು ತನ್ನ ಮನಸ್ಸಿನಲ್ಲಿ ವಾಸನಾ ರೂಪವಾಗಿ ಹಿಡಿದಿಟ್ಟು ಕೊಂಡಿರುತ್ತಾನೆ. ಇವನಲ್ಲಿ ಅಡಗಿಕೊಂಡಿರುವ ಆ ವಿಷಯ ವಾಸನೆಯೆ ಇವನಲ್ಲಿ ಪುನಃ ಪುನಃ ವಿಷಯಭೋಗೇಚ್ಛೆಯನ್ನು ಹುಟ್ಟಿಸಿ ಇವನ ಮನಸ್ಸಿನಲ್ಲಿ ಕ್ಷೋಭೆಯನ್ನುಂಟು ಮಾಡುತ್ತಿರುತ್ತದೆ. ಆದರೆ ಶಿಷ್ಟೌದನಸ್ಥಲದ ಶಿವಯೋಗಿಗೆ ವಿಷಯ ಸಂಬಂಧ ಗಳಾದರೂ ಅವುಗಳ ವಾಸನೆಯು ಮನದಲ್ಲಿ ಉಳಿದಿರುವುದಿಲ್ಲ. ಅಲ್ಲಲ್ಲಿ ಅನುಭವಿಸಿದ ವಿಷಯಗಳನ್ನು ಅಲ್ಲಿಯೇ ಮರೆತು ಬಿಡುತ್ತಾನೆ. ಪೂರ್ವದಲ್ಲಿ ಅನುಭವಿಸಿದ ವಿಷಯಗಳ ಪುನಃ ಸ್ಮೃತಿಯುಂಟಾಗಬೇಕಾದರೆ ಪೂರ್ವಾನುಭೂತ ವಿಷಯಜನ್ಯ ಸಂಸ್ಕಾರವು ಮನಸ್ಸಿನಲ್ಲಿ ಇರಬೇಕಾಗುತ್ತದೆ. ಸಂಸ್ಕಾರ ಜನ್ಯ ಜ್ಞಾನಕ್ಕೇನೆ ಸ್ಮೃತಿಯೆಂದು ಕರೆಯುತ್ತಾರೆ. ಸಂಸ್ಕಾರವೇ ಇಲ್ಲದಿರುವಾಗ ಸ್ಮೃತಿಯು ಅದು ಹೇಗೆ ತಾನೆ ಉಂಟಾದೀತು ! ಹೀಗೆ ಪೂರ್ವಾನುಭೂತ ವಿಷಯಗಳ ಸ್ಮೃತಿಯಿಲ್ಲದ ಕಾರಣ ಶಿವಯೋಗಿಯ ಮನದಲ್ಲಿ ಕ್ಷೋಭಾದಿಗಳು ಒಡಮೂಡುವುದಿಲ್ಲ. ಅಂತೆಯೇ ಪೂಜ್ಯಪಾದರು ಸೂರ್ಯಾಸ್ತದ ಉದಾಹರಣೆಯನ್ನು ಕೊಟ್ಟು ಪ್ರಸ್ತುತ ವಿಷಯವನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಪ್ರಾತಃಕಾಲದಲ್ಲಿ ತನ್ನ ಕಿರಣಗಳನ್ನು ವಿಶ್ವದ ತುಂಬೆಲ್ಲ ಹರಡಿ ವ್ಯವಹರಿಸಿದ ಸೂರ್ಯನು ಸಾಯಂಕಾಲ ಆ ತನ್ನೆಲ್ಲ ಕಿರಣಗಳನ್ನು ತನ್ನಲ್ಲಡಗಿಸಿಕೊಂಡು ಶಾಂತನಾಗುವಂತೆ ಈ ಶಿವಯೋಗಿಯೂ ಸಹ ಸಮಸ್ತ ವಿಷಯಗಳನ್ನು ತನ್ನಲ್ಲಡಗಿಸಿಕೊಂಡು ತಾನೂ ಸಹ ಪ್ರಶಾಂತನಾಗಿರುತ್ತಾನೆ.

ಜೀವಾತ್ಮನು ಈ ಜಗತ್ತಿನಲ್ಲಿ ಜನ್ಮತಾಳಿ ಬರುವಾಗ ಅನಂತ ಆಶೆ ಆಕಾಂಕ್ಷೆಗಳನ್ನು ಹೊತ್ತುಕೊಂಡು ಬರುತ್ತಾನೆ. ಇಲ್ಲಿ ಬಂದ ಮೇಲೆ ತನ್ನ ಇಷ್ಟಾರ್ಥದ ಪೂರ್ತಿಗಾಗಿ ಹಗಲಿರುಳೆನ್ನದೇ ತನ್ನ ಆಯುಷ್ಯದುದ್ದಕ್ಕೂ ಪ್ರಯತ್ನಿಸುತ್ತಿರುತ್ತಾನೆ. ಹೀಗೆ ಪ್ರಯತ್ನ ಪಟ್ಟೂ, ಪಟ್ಟೂ ಕೊನೆಗೊಂದು ಸಮಯದಲ್ಲಿ ಇದಾವುದೂ ಬೇಡ ಎನ್ನುವ ಒಂದು ಸ್ಥಿತಿ ಯನ್ನು ಪಡೆಯುವನು. ಇಂತಹ ಸ್ಥಿತಿಯು ಬಂದಾಗಲೇ ಅವನು ಶಿವಾದ್ವೈತ ಜ್ಞಾನಕ್ಕೆ ಅಧಿಕಾರಿಯಾಗುವನು. ಈ ಅಧಿಕಾರದಿಂದಾಗಿಯೇ ಆ ಶಿವಾದ್ವೈತ ಜ್ಞಾನವನ್ನು ಪಡೆದು ಸರ್ವ ವಾಸನೆಗಳಿಂದ ಮುಕ್ತನಾಗಿ ಪರಮ ಶಾಂತಿಯನ್ನು ಪಡೆದುಕೊಳ್ಳುತ್ತಾನೆ. ಶಿಷ್ಟೌದನಸ್ಥಲದ ಶಿವಯೋಗಿಯ ಸ್ಥಿತಿಯೂ ಸಹ ಇದೇ ವಿಧವಾಗಿರುತ್ತದೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೨ ನವ್ಹೆಂಬರ್, ೧೯೯೬
ಜ್ಞಾನ ಮಂದಿರ, ಜಂಗಮವಾಡಿ ಮಠ, ವಾರಾಣಸಿ



ಆಶೀರ್ವಚನ-೧

# ಚರಾಚರಲಯಸ್ಥಲ

ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ವಿದ್ಯಾರ್ಥಿಗಳೇ ! ಮತ್ತು ಕಾರ್ಯಕ್ರಮದಲ್ಲಿ ಪಾಲ್ಗೊಂಡ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳ ಬಗ್ಗೆ ವಿಚಾರ ಮಾಡುತ್ತ ನಿನ್ನೆಯ ದಿನ ಶಿಷ್ಟೌದನ ಸ್ಥಲದ ಬಗ್ಗೆ ನೀವು ಸವಿಸ್ತಾರವಾಗಿ ಶ್ರವಣ ಮಾಡಿದ್ದೀರಿ. ಇಂದು ಅದರ ಮುಂದಿನ ಸ್ಥಲವಾದ ಚರಾಚರಲಯಸ್ಥಲದ ಬಗ್ಗೆ ವಿವೇಚಿಸೋಣ. ಚರಾಚರಾತ್ಮಕವಾದ ಪ್ರಪಂಚವನ್ನು ಲಯಗೊಳಿಸುವ ವಿಧಿ ವಿಧಾನ ವನ್ನು ತಿಳಿಯಪಡಿಸುವ ಸ್ಥಲವೇ ಚರಾಚರಲಯಸ್ಥಲವು. ಬಾಹ್ಯದಲ್ಲಿ ತೋರುವ ಈ ಪ್ರಪಂಚವು ಚರವೆಂತಲೂ, ಅಚರವೆಂತಲೂ ಎರಡು ವಿಧವಾಗಿರುತ್ತದೆ. ಇದಕ್ಕೇನೇ ಸ್ಥಾವರ ಮತ್ತು ಜಂಗಮವೆಂಬುದಾಗಿಯೂ ಕರೆಯುವುದುಂಟು, ಯಾವುದು ಒಂದೇ ಸ್ಥಾನದಲ್ಲಿ ಸುಸ್ಥಿರವಾಗಿರುತ್ತದೆಯೋ ಅದಕ್ಕೆ ಸ್ಥಾವರವೆಂತಲೂ ಮತ್ತು ಅತ್ತಿತ್ತ ಸುಳಿದಾಡು ವುದಕ್ಕೆ ಜಂಗಮವೆಂತಲೂ ಕರೆಯುತ್ತಾರೆ. ಹೀಗೆ ಚರಾಚರಾತ್ಮಕವಾದ ಈ ಸೃಷ್ಟಿಯು ಪರಮಾತ್ಮನಿಂದ ಸೃಷ್ಟಿಸಲ್ಪಟ್ಟಿದೆ. ಪರಮಾತ್ಮನು ಈ ಸೃಷ್ಟಿಯನ್ನು ತನಗಾಗಿ ನಿರ್ಮಿಸಿ ಕೊಂಡಿಲ್ಲ, ಜಗತ್ತಿನ ಜೀವಿಗಳ ಭೋಗಕ್ಕಾಗಿ ನಿರ್ಮಿಸಿದ್ದಾನೆ. ಅಂತೆಯೇ ವಿದ್ಯಾರಣ್ಯ ಸ್ವಾಮಿಗಳು 'ಪಂಚದಶಿ' ಗ್ರಂಥದಲ್ಲಿ– ''ಈಶಕಾರ್ಯಂ ಜೀವ ಭೋಗ್ಯಂ ಜಗದ್‌ದ್ವಾಭ್ಯಾಂ ಪ್ರಕೀರ್ತಿತಮ್'' ಎಂಬುದಾಗಿ ಪ್ರತಿಪಾದಿಸಿದ್ದಾರೆ. ಈಶ್ವರನ ಕಾರ್ಯವಾದ ಈ ಜಗತ್ತು ಜೀವಿಗಳ ಸುಖದುಃಖ ಭೋಗಕ್ಕೆ ಸಾಧನವಾಗಿರುತ್ತದೆ. ಜೀವಿ ಗಳು ಅನುಭವಿಸುವ ಅವರವರ ಭೋಗಕ್ಕೆಲ್ಲ ಈಶ್ವರನು ಕೇವಲ ಸಾಕ್ಷಿಯಾಗಿರುತ್ತಾನೆ.

ಈ ಸೃಷ್ಟಿಯನ್ನು ನಿರ್ಮಿಸಿದ ಈಶ್ವರನೇ ಇದನ್ನು ಲಯಗೊಳಿಸುವ ಸಾಮರ್ಥ್ಯ ವನ್ನು ಹೊಂದಿದ್ದಾನೆ. ಬೇರಾರಿಗೂ ಇದನ್ನು ಲಯಗೊಳಿಸುವ ಹಕ್ಕಿರು ವುದಿಲ್ಲ, ಸೃಷ್ಟಿ ಸ್ಥಿತಿ, ಸಂಹಾರ, ನಿಗ್ರಹ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಗಳಿಗೆ ಈಶ್ವರನೇ ಒಡೆಯನು. ಹೀಗಿರುವಾಗ ಜ್ಞಾನಿಯಾದವನು ಈ ಚರಾಚರ ಪ್ರಪಂಚವನ್ನು ಅದು ಹೇಗೆ ತಾನೇ ಲಯಗೊಳಿಸಬಲ್ಲನು ? ಎಂಬ ಜಿಜ್ಞಾಸೆಯು ಒಡಮೂಡುವುದು ಸಹಜ ವಾದುದು. ಶಿವಾದ್ವೈತಜ್ಞಾನ ಸಂಪನ್ನನಾದ ಶಿವಯೋಗಿಯು ಬಾಹ್ಯದಲ್ಲಿಯ ಚರಾಚರ ಪ್ರಪಂಚವನ್ನು ಲಯಗೊಳಿಸಲು ಅಸಮರ್ಥನಾಗಿದ್ದರೂ ತನ್ನ ಮಟ್ಟಿಗಾದರೂ ಇದರ ಲಯವನ್ನು ಈತನು ಮಾಡಿಕೊಳ್ಳಬಲ್ಲ. ''ಚಿತ್ತೇ ಚಲತಿ ಸಂಸಾರಃ'' ಎಂಬ ಉಕ್ತಿಗನು

ಸಾರವಾಗಿ ನಮ್ಮ ಚಿತ್ತವು ಬಹಿರ್ಮುಖವಾದಾಗ ಚರಾಚರಾತ್ಮಕವಾದ ಪ್ರಪಂಚವು ಗೋಚರವಾಗುವುದು. ಅದೇ ಚಿತ್ತವೇ ಅಂತರ್ಮುಖವಾದಾಗ ಇದೆಲ್ಲವೂ ವಿಲಯವಾಗುವುದು. ಗಾಢವಾದ ನಿದ್ರಾವಸ್ಥೆಯಲ್ಲಿ ಪ್ರತಿಯೊಬ್ಬರಿಗೂ ಪ್ರಪಂಚವೆಲ್ಲ ವಿಲಯವಾಗಿಯೇ ಹೋಗಿರುತ್ತದೆ. ಎದ್ದೊಡನೆ ಪುನಃ ಅದು ದೃಗ್ಗೋಚರವಾಗುವುದು. ಇದು ಸರ್ವಾನುಭವಸಿದ್ಧವಾದ ವಿಷಯವು. ಇದೇ ಪ್ರಕಾರವಾಗಿ ಶಿವಾದ್ವೈತ ಜ್ಞಾನ ಸಂಪನ್ನನಾದ ಶಿವಯೋಗಿಯು ಆತ್ಮ ತೃಪ್ತನಾಗಿರೋಣದರಿಂದ ಬಹಿರಂಗದ ಪ್ರಪಂಚ ವಿಷಯಕವಾಗಿ ಯಾವುದೇ ಇಚ್ಛೆಗಳು ಅವನಲ್ಲಿ ಇಲ್ಲದಿರುವುದರಿಂದ, ಅವನ ಚಿತ್ತವೃತ್ತಿಯು ಸದಾ ಅಂತರ್ಮುಖವಾಗಿರುತ್ತದೆ. ಹೀಗೆ ಅಂತರ್ಮುಖನಾದ ಶಿವಯೋಗಿಗೆ ಬಾಹ್ಯ ಪ್ರಪಂಚವೆಲ್ಲವೂ ವಿಲಯವಾಗಿ ಹೋಗಿರುತ್ತದೆ. ಈ ಸ್ಥಿತಿಗೇನೇ ಚರಾಚರಲಯವೆಂದು ಕರೆಯುತ್ತಾರೆ. ಅದನ್ನೇ ಪೂಜ್ಯಪಾದರು–

ಲಿಂಗೈಕ್ಯೇ ತು ಸಮಾಪನ್ನೇ ಚರಣಾಚರಣೇ ಗತೇ ।
ನಿರ್ದೇಹೀ ಸ ಭವೇದ್ಯೋಗೀ ಚರಾಚರ ವಿನಾಶಕಃ ॥

(ಸಿ. ಶಿ. ೨೦–೨೧)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ಈ ಚರಾಚರಾತ್ಮಕವಾದ ಪ್ರಪಂಚವು ಮಹಾಲಿಂಗದಲ್ಲಿ ಸಾಮರಸ್ಯ ಸ್ಥಿತಿಯನ್ನು ಹೊಂದಲಾಗಿ ಪೂರ್ವದಲ್ಲಿ ಹೇಳಿದ ಶಿಷ್ಟೌದನಸ್ಥಲದ ಶಿವಯೋಗಿಯು ನಿರ್ದೇಹಿಯಾಗುವನು. ಇಂತಹ ನಿರ್ದೇಹಿಯಾದ ಆ ಶಿವಯೋಗಿಗೆ ಚರಾಚರವಿನಾಶಕನೆಂಬುದಾಗಿ ಕರೆಯಲಾಗುತ್ತದೆ.

ಶಿವಾದ್ವೈತ ಜ್ಞಾನ ಸಂಪನ್ನನಾದ ಶಿವಯೋಗಿಯು ತನಗೆ ಪ್ರಾಪ್ತವಾದ ಜ್ಞಾನದ ಮೂಲಕವಾಗಿ ಪರಿದೃಶ್ಯವಾದ ಪ್ರಪಂಚದ ಬಗ್ಗೆ ಲಯಚಿಂತನೆಯನ್ನು ಮಾಡುತ್ತಾನೆ. ಸಮಸ್ತವಾದ ಪದಾರ್ಥಗಳನ್ನು ಪೃಥ್ವಿಯಲ್ಲಿ ಪೃಥ್ವಿಯನ್ನು, ಜಲದಲ್ಲಿ ಜಲವನ್ನು, ಅಗ್ನಿಯಲ್ಲಿ ಅಗ್ನಿಯನ್ನು, ವಾಯುವಿನಲ್ಲಿ ವಾಯುವನ್ನು, ಆಕಾಶದಲ್ಲಿ ಆಕಾಶವನ್ನು, ಮಾಯೆಯಲ್ಲಿ ಮಾಯೆಯನ್ನು ಮಹಾಲಿಂಗದಲ್ಲಿ ಲಯರೂಪವಾಗಿ ಚಿಂತಿಸುವುದೇ ಲಯಚಿಂತನೆಯು. ಹೀಗೆ ಚರಾಚರಾತ್ಮಕವಾದ ಜಗತ್ತು ಮತ್ತು ಅದಕ್ಕೆ ಕಾರಣೀಭೂತವಾದ ಮಾಯೆ ಇವೆಲ್ಲವುಗಳು ಮಹಾಲಿಂಗದಲ್ಲಿ ಭಾವನಾತ್ಮಕವಾಗಿ ಲಯವಾಗುತ್ತವೆ. ಶಿವಯೋಗಿಯಲ್ಲುಂಟಾದ ಈ ಲಯಾತ್ಮಕವಾದ ಭಾವನೆಯ ಪರಿಣಾಮವಾಗಿ ಅವನಿಗೆ ತನ್ನ ದೇಹ ಮತ್ತು ದೈಹಿಕ ವ್ಯವಹಾರಗಳಲ್ಲಿ ಕೂಡ ವಿಸ್ಮೃತಿಯುಂಟಾಗುತ್ತದೆ. ಅಥವಾ ಸಂಪೂರ್ಣವಾದ ನಿರಭಿಮಾನತೆಯು ಪ್ರಾಪ್ತವಾಗುವುದು. ಈ ಸ್ಥಿತಿಯಿಂದಾಗಿಯೇ ಅವನನ್ನು ನಿರ್ದೇಹಿಯೆಂದು ಕರೆಯುತ್ತಾರೆ. ಹೀಗೆ ತನ್ನ ದೇಹಾದಿಗಳನ್ನೇ ಮೊದಲು ಮಾಡಿಕೊಂಡು ಸಕಲ ಪ್ರಪಂಚದ ಬಗ್ಗೆ ಇರುವ ಅಹಂ ಮತ್ತು ಮಮ ರೂಪವಾದ ಭಾವನೆಗಳನ್ನು ಕಳೆದುಕೊಂಡ ಈ ಶಿವಯೋಗಿಯು ನಿರ್ದೇಹಿಯೂ, ಚರಾಚರ ವಿನಾಶಕನೂ ಎಂಬುದಾಗಿ ಕರೆಯಲ್ಪಡುತ್ತಾನೆ.

ಇಲ್ಲಿ ವಿದೇಹೀ ಎಂಬ ಶಬ್ದದಿಂದ ದೇಹವನ್ನು ಬಿಟ್ಟವನು ಎಂಬ ಅರ್ಥವಾಗದೆ ದೇಹಾಭಿಮಾನವನ್ನು ಬಿಟ್ಟವನು ಎಂಬರ್ಥವಾಗುವುದು. ಅಂತೆಯೇ ಜ್ಞಾನಿಯು ಶರೀರ

ಧಾರಿಯಾಗಿದ್ದೂ ಸಹ ಶರೀರಾಭಿಮಾನವನ್ನು ಬಿಟ್ಟಿರುವುದರಿಂದ ನಿರ್ದೇಹಿಯೆಂಬು ದಾಗಿ ಕರೆಯಲ್ಪಡುತ್ತಾನೆ. ಪ್ರಪಂಚದಲ್ಲಿಯ ವಸ್ತು ಇಲ್ಲವೆ ವ್ಯಕ್ತಿಯ ಬಗ್ಗೆ ಮನದಲ್ಲಿ ಮಮತ್ವಾಭಿಮಾನವನ್ನು ಇಟ್ಟುಕೊಂಡು ಅವುಗಳನ್ನು ದೂರ ಬಿಟ್ಟಿದ್ದರೂ ಸಹ ಅವು ಇವನಿಂದ ದೂರಾಗಲಾರವು. ಕಾಶಿಗೆ ಯಾತ್ರಾರ್ಥವಾಗಿ ಬಂದಿರುವ ನೀವೆಲ್ಲ ನಿಮ್ಮ ಹೊಲ, ಮನೆ, ಮಠ ಮತ್ತು ಸಂಪತ್ತು ಇವೆಲ್ಲವುಗಳನ್ನು ಅಲ್ಲಿಯೇ ಬಿಟ್ಟು ಒಂದು ಸಣ್ಣಕೈ ಬ್ಯಾಗನ್ನು ತೆಗೆದುಕೊಂಡು ಬಂದಿದ್ದರೂ, ನಿಮ್ಮ ಮನಸ್ಸಿನಲ್ಲಿ ಆ ಬಿಟ್ಟು ಬಂದಿರುವ ಎಲ್ಲ ವಿಷಯಗಳ ಅಭಿಮಾನವನ್ನು ಮಾತ್ರ ತುಂಬಿಕೊಂಡು ಬಂದಿರುವಿರಿ. ಅಂತೆಯೇ ನೀವು ಕಾಶಿಯಲ್ಲಿ ಇದ್ದರೂ ನಿಮ್ಮ ಮನದ ಪಟಲದ ಮೇಲೆ ನೀವು ಬಿಟ್ಟು ಬಂದ ವಸ್ತುಗಳೆಲ್ಲ ಆಗಾಗ ಬಂದು ಬಂದು ಹೋಗುತ್ತಿರುತ್ತವೆ. ವಸ್ತುಗಳು ಸಮೀಪ ವಿಲ್ಲದಿದ್ದರೂ ಅವುಗಳ ಅಭಿಮಾನವಿದ್ದರೆ ಆ ವಸ್ತುಗಳು ನಮ್ಮ ಸಮೀಪವಿದ್ದಂತೆಯೇ. ಇನ್ನು ಅಭಿಮಾನವಿಲ್ಲ ದಾಗಿ ವಸ್ತುಗಳು ನಮ್ಮ ಬಳಿಯಲ್ಲಿದ್ದರೂ ಅವುಗಳು ಇದ್ದೂ ಸಹ ಇಲ್ಲದಂತೆ. ಇದೇ ಪ್ರಕಾರವಾಗಿ ಈ ಚರಾಚರಲಯಸ್ಥಲದ ಶಿವಯೋಗಿಯು ದೇಹವನ್ನು ಧರಿಸಿಕೊಂಡಿ ದ್ದರೂ, ದೇಹಾಭಿಮಾನವಿಲ್ಲದ ಕಾರಣ ಅವನು ವಿದೇಹೀಯಾಗಿರುತ್ತಾನೆ. ಜನಕ ಮಹಾರಾಜನು ಚಕ್ರವರ್ತಿಯಾಗಿದ್ದು ಸಕಲ ರಾಜ್ಯ ವ್ಯವಹಾರವನ್ನು ಮಾಡುತ್ತಿದ್ದರೂ, ಅವೆಲ್ಲವುಗಳ ಅಭಿಮಾನವು ಅವನ ಮನದಲ್ಲಿ ಇಲ್ಲದ ಕಾರಣದಿಂದಾಗಿ ಅವನಿಗೆ ವಿದೇಹೀ ಜನಕನೆಂಬುದಾಗಿಯೇ ಕರೆಯುವುದುಂಟು.

ಒಮ್ಮೆ ಶುಕದೇವನು ಮಹರ್ಷಿ ವ್ಯಾಸನ ಆದೇಶದಂತೆ ತತ್ತ್ವಜ್ಞಾನವನ್ನು ಪಡೆಯಲು ಜನಕನ ಆಸ್ಥಾನಕ್ಕೆ ಬರುತ್ತಾನೆ. ಅತ್ಯಂತ ವೈರಾಗ್ಯಶೀಲನಾದ ಶುಕದೇವನಿಗೆ ಜನಕನ ಭೋಗ್ಯ ಭಾಗ್ಯ ವ್ಯವಹಾರಗಳನ್ನು ಕಂಡಾಗ ಇವನೆಂಥ ವಿದೇಹಿಯು ? ಇವನಿಂದ ಅದು ಹೇಗೆ ತಾನೆ ನನಗೆ ಆತ್ಮ ಜ್ಞಾನವಾದೀತು ಎಂಬ ಸಂಶಯವು ಉತ್ಪನ್ನ ವಾಯಿತು. ಇವನ ಮನದ ಭಾವವನ್ನರಿತ ಜನಕನು ಇವನಿಗೆ ಉಚಿತವಾದ ಆತಿಥ್ಯ ಗಳನ್ನು ನೆರವೇರಿಸಿ ಅಂದು ಸಾಯಂಕಾಲ ಅವನನ್ನು ಕರೆದುಕೊಂಡು ಒಂದು ನದಿಯ ದಂಡೆಗೆ ಹೋದನು. ಅಲ್ಲಿ ಈರ್ವರೂ ಕುಳಿತುಕೊಂಡು ಅಧ್ಯಾತ್ಮ ಚಿಂತನೆಯನ್ನು ಮಾಡುತ್ತಿರುವಾಗ ಓರ್ವ ರಾಜಭಟನು ಓಡುತ್ತ ಬಂದು ಮಹಾರಾಜರೆ ! ನಿಮ್ಮ ಅರಮನೆಗೆ ಬೆಂಕಿ ತಗುಲಿದೆ ಎಂಬುದಾಗಿ ಗಾಬರಿಯಿಂದ ಹೇಳತೊಡಗಿದನು. ಭಟನು ಹೇಳುವುದನ್ನು ಕೇಳುತ್ತಲಿದ್ದರೂ ಜನಕನು ನಿಶ್ಚಲನೂ, ಶಾಂತನೂ ಆಗಿದ್ದನು. ಆದರೆ ಶುಕದೇವನ ಮನಸ್ಸಿನಲ್ಲಿ ಮಾತ್ರ ತನ್ನ ನಿವಾಸದ ಕೊಠಡಿಯಲ್ಲಿ ಇಟ್ಟಿರುವ ಕೌಪೀನಾದಿ ವಸ್ತುಗಳು ದಹಿಸುವವಲ್ಲ ಎಂಬ ಚಿಂತೆಯಿತ್ತು. ಅರಮನೆಯತ್ತ ಓಡತೊಡಗಿದನು. ತನ್ನ ಮನಸ್ಸಿನಲ್ಲಿ ಇಷ್ಟೊಂದು ಉದ್ವಿಗ್ನತೆ ಬಂದಿದ್ದರೂ ರಾಜನು ನಿಶ್ಚೇಷ್ಟನಾಗಿ ಕುಳಿತಿರು ವುದನ್ನು ಕಂಡು ತನ್ನ ವ್ಯವಹಾರದಿಂದ ತಾನೇ ನಾಚಿಗೆಪಟ್ಟು ಮರಳಿ ರಾಜನಲ್ಲಿಗೆ ಬಂದು ಇದೇನು ಅರಮನೆಗೆ ಬೆಂಕಿ ಹತ್ತಿದಾಗ ಹೀಗೆ ನಿಷ್ಕ್ರಿಯನಾಗಿ ಕುಳಿತುಕೊಳ್ಳುವುದೇ ಎಂಬುದಾಗಿ ಪ್ರಶ್ನಿಸಿದನು. ಆಗ ಜನಕನು ಅಷ್ಟೇ ಧೀರ ಹಾಗೂ ಗಂಭೀರ ಸ್ವರದಲ್ಲಿ– ''ಮಿಥಿಲಾಯಾಂ ಪ್ರದಗ್ಧಾಯಾಂ ನ ಮೇ ಕಿಂಚಿತ್ ಪ್ರದಹ್ಯತೇ'' ಎಂಬುದಾಗಿ ಹೇಳಿದ ನಂತೆ. ಅಂದರೆ ಮಿಥಿಲೆಯು ಸುಡುತ್ತಿದ್ದರೂ ನನ್ನದೇನೂ ಸುಡುತ್ತಿಲ್ಲ ಎಂಬ ಭಾವವು.

ಜನಕನ ಮನಸ್ಸಿನಲ್ಲಿ ಈ ತೆರನಾದ ನಿರಭಿಮಾನತೆಯಿದ್ದದರಿಂದಲೇ ಅವನಿಗೆ ವಿದೇಹಿ ಯೆಂಬುದಾಗಿ ಕರೆಯಲಾಗಿದೆ. ಯಾರು ವಿದೇಹಿ ಸ್ಥಿತಿಯನ್ನು ಹೊಂದುವರೋ ಅವರಿಗೆ ಚರಾಚರ ಪ್ರಪಂಚವೆಲ್ಲವೂ ಇಲ್ಲದಾಗಿ ಹೋಗುವುದು.

ನಾವು ಎಲ್ಲಿಯವರೆಗೆ ಈ ಶರೀರದಲ್ಲಿರುತ್ತೇವೆಯೋ ಅಲ್ಲಿಯವರೆಗೆ ಈ ಶರೀರಕ್ಕೆ ಸಂಬಂಧಪಟ್ಟ ವ್ಯವಹಾರಗಳಲ್ಲಿ ನಾನು ನನ್ನದೆಂಬುದಾಗಿ ಅಭಿಮಾನಿಸುತ್ತಿರುತ್ತೇವೆ. ಒಮ್ಮೆ ಮೃತ್ಯುವು ನಮ್ಮನ್ನು ಈ ದೇಹದಿಂದ ಬೇರ್ಪಡಿಸಿತೆಂದರೆ ನಮ್ಮವೆನ್ನುವವೆಲ್ಲವೂ ನಮ್ಮವಲ್ಲವಾಗಿ ಹೋಗುತ್ತವೆ. ಅಜ್ಞ ಜೀವಿಗಳು ಯಮನಿಂದ ಮೃತ್ಯುವನ್ನು ಪಡೆದ ನಂತರ ತನ್ನವುಗಳಿಂದ ದೂರವಾದರೆ ಜ್ಞಾನಿಯು ಮೃತ್ಯುಪೂರ್ವದಲ್ಲಿಯೇ ಎಲ್ಲದರ ಅಭಿಮಾನವನ್ನು ತ್ಯಜಿಸಿ ಶರೀರವಿದ್ದರೂ ನಿರ್ದೇಹಿಯಾಗಿರುತ್ತಾನೆ. ಏನೆಲ್ಲ ತನ್ನಲ್ಲಿದ್ದರೂ ಅವುಗಳ ಅಭಿಮಾನವೊಂದಿಲ್ಲದಿರೆ ಅವೆಲ್ಲ ಇದ್ದೂ ಇಲ್ಲದಂತೆ. ಆದ್ದರಿಂದ ಭಾವನಾತ್ಮಕ ವಾಗಿ ಅಲಿಪ್ತತೆಯು ಪ್ರಾಪ್ತವಾದರೆ ರಾಜ ಮಹಲಿನಲ್ಲಿದ್ದೂ ಸಹ ಯೋಗಿಯಾಗ ಬಹುದು. ಇನ್ನು ಅಲಿಪ್ತತೆಯು ಇಲ್ಲದವನು ಕಾಡಿನಲ್ಲಿ ಯೋಗಿಯ ವೇಷದಲ್ಲಿದ್ದರೂ ಸಹ ಅವನು ಭೋಗಿಯಾಗಿರುತ್ತಾನೆ. ಶಿವಯೋಗಿಯು ಮಾನಸಿಕ ದೃಷ್ಟಿಯಿಂದ ಅಲಿಪ್ತ ಅವಸ್ಥೆಯನ್ನು ಪಡೆದಿರೋಣದರಿಂದ ಅವನು ವಿದೇಹಿಯೆನಿಸಿ ಚರಾಚರವಿನಾಶಕ ನೆಂಬುದಾಗಿ ಕರೆಯಿಸಿಕೊಳ್ಳುತ್ತಾನೆ.

ಈ ಪೂರ್ವದಲ್ಲಿ ವರ್ಣಿಸಿದ ವಿದೇಹಿ ಶಿವಯೋಗಿಗೆ ಚರಾಚರ ಪ್ರಪಂಚವು ಕಾಣದಿರುವುದಕ್ಕೆ ಕಾರಣವೇನು ಎಂಬುದನ್ನು ಇನ್ನಷ್ಟು ಸ್ಪಷ್ಟಪಡಿಸಲೋಸುಗ ಪೂಜ್ಯಪಾದರು–

ಅನಾದ್ಯವಿದ್ಯಾಮೂಲಾ ಹಿ ಪ್ರತೀತಿರ್ಜಗತಾಮಿಯಮ್ ।
ಸ್ವಾತ್ಮೈಕಬೋಧಾತ್ ತನ್ನಾಶೇ ಕುತೋ ವಿಶ್ವ ಪ್ರಕಾಶನಮ್ ॥

(ಸಿ. ಶಿ. ೨೦–೨೨)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಈ ಚರಾಚರಾತ್ಮಕವಾದ ಪ್ರಪಂಚದ ಪ್ರತೀತಿಗೆ ಅನಾದಿಯಾದ ಅವಿದ್ಯೆಯೇ ಮೂಲಕಾರಣವು. ಆತ್ಮ ಪರಮಾತ್ಮರ ಐಕ್ಯ ಬೋಧೆಯುಂಟಾಗಲು ಆ ಅವಿದ್ಯೆಯು ನಷ್ಟವಾಗುವುದು. ಹೀಗೆ ತನಗೆ ಮೂಲ ಕಾರಣವಾಗಿರುವ ಅವಿದ್ಯೆಯೇ ಇಲ್ಲದಾಗಿ ಹೋದಾಗ ಈ ವಿಶ್ವವು ಅದು ಹೇಗೆ ತಾನೆ ಕಾಣಲು ಸಾಧ್ಯವಾದೀತು !

ವೀರಶೈವ ಸಿದ್ಧಾಂತದಲ್ಲಿ ತೋರುವ ವಿಶ್ವವೆಲ್ಲವೂ ತತ್ತ್ವಾತ್ಮಕವಾದುದು. ಇದು ಶಿವಾದಿ ಭೂಮ್ಯಂತಗಳಾದ ಮೂವತ್ತಾರು ತತ್ತ್ವಗಳ ರೂಪವಾಗಿರುತ್ತದೆ. ಅನಂತ ಮೋಹಕ ವಿಷಯಗಳನ್ನೊಳಗೊಂಡ ಈ ಜಗತ್ತಿನ ಉತ್ಪತ್ತಿಗೆ ಮೂಲ ಕಾರಣವಾದುದು ಅನಾದಿರೂಪವಾದ ಅವಿದ್ಯೆಯು. ಈ ಅನಾದಿ ಅವಿದ್ಯೆಯ ಮೂಲಕವಾಗಿಯೇ ಪರಶಿವನ ಅಂಶನಾದ ಈ ಜೀವನು ಅವಿದ್ಯೆಯ ಪಾಶದಲ್ಲಿ ಸಿಲುಕಿಕೊಂಡು ತತ್ತ್ವ ಜ್ಞಾನ ವಿಲ್ಲದೆ, ದೇಹಾತ್ಮ ಬುದ್ಧಿಯುಳ್ಳವನಾಗಿ ವಿಷಯಾದಿಗಳಲ್ಲಿ ರಮಿಸುತ್ತಿರುತ್ತಾನೆ. ಹೀಗೆ ದುಃಖರೂಪಗಳಾದ ವಿಷಯಗಳನ್ನಾಶ್ರಯಿಸಿರೋಣದರಿಂದಲೇ ಇವನು ಹುಟ್ಟಿ

ದಾರಭ್ಯ ಕೊನೆಯುಸಿರಿನವರೆಗೆ ದುಃಖವನ್ನನುಭವಿಸುತ್ತ ಜನನ ಮರಣ ಚಕ್ರದಲ್ಲಿ ಸಿಲುಕಿಕೊಂಡಿರುತ್ತಾನೆ. ಅನಾದಿ ಕಾಲದಿಂದ ತಾನು ಪಡೆಯುತ್ತಿರುವ ಈ ದುಃಖದಿಂದ ದೂರಾಗಬೇಕಾದರೆ, ದುಃಖದ ಮೂಲವಾದ ಅವಿದ್ಯೆಯನ್ನು ನಾಶಗೊಳಿಸಿಕೊಳ್ಳ ಬೇಕಾಗುತ್ತದೆ. ವಿದ್ಯೆಯೇ ಅವಿದ್ಯೆಯನ್ನು ಇಲ್ಲವಾಗಿಸುವುದು. ಸದ್ಗುರುವಿನ ಉಪದೇಶ ದಿಂದ ತತ್ತ್ವಮಸ್ಯಾದಿ ಮಹಾವಾಕ್ಯಗಳನ್ನು ಶ್ರವಣ ಮಾಡಿ ವಿದ್ಯೆಯನ್ನು ಪ್ರಾಪ್ತಮಾಡಿ ಕೊಂಡಾಗ, ಪ್ರಕಾಶ ಬಂದೊಡನೆ ಅಂಧಕಾರ ಇಲ್ಲದಾಗುವಂತೆ ಆ ಅವಿದ್ಯೆಯು ಇಲ್ಲದಾಗುತ್ತದೆ. ಬೆಳಕು ಹಾಗೂ ಕತ್ತಲೆಗಳಲ್ಲಿ ಸಹ ಅನವಸ್ಥಾಯಿ ವಿರೋಧವಿರುತ್ತದೆ. ಅಂದರೆ ಬೆಳಕು ಕತ್ತಲೆಗಳೆರಡೂ ಕೂಡಿ ಒಂದೆಡೆ ಇರಲು ಸಾಧ್ಯವಿಲ್ಲ. ಕತ್ತಲೆಯಿದ್ದರೆ ಬೆಳಕಿರುವುದಿಲ್ಲ, ಬೆಳಕಿದ್ದರೆ ಅಲ್ಲಿ ಕತ್ತಲೆಯಿರುವುದಿಲ್ಲ. ಅದೇ ಪ್ರಕಾರವಾಗಿ ವಿದ್ಯೆ ಮತ್ತು ಅವಿದ್ಯೆಗಳಲ್ಲಿ ಇದೇ ಪ್ರಕಾರವಾದ ವಿರೋಧವಿರುತ್ತದೆ. ಲಿಂಗಾಂಗ ಸಾಮರಸ್ಯ ಬೋಧರೂಪವಾದ ವಿದ್ಯೆಯು ಅಂತರಂಗದಲ್ಲಿ ಉದಿಸುವವರೆಗೆ ಅವಿದ್ಯೆ ಹಾಗೂ ಅವಿದ್ಯೆಯ ವಿಸ್ತಾರವು ತೋರುತ್ತಿರುತ್ತದೆ. ಒಮ್ಮೆ ಶಿವಜೀವರ ಐಕ್ಯಬೋಧರೂಪವಾದ ವಿದ್ಯೆಯು ಉದಿಸಿತೆಂದರೆ ಪೂರ್ವೋಕ್ತವಾದ ಅವಿದ್ಯೆಯು ನಷ್ಟವಾಗಿ ಹೋಗುತ್ತದೆ. ಹೀಗೆ ಅವಿದ್ಯೆಯೇ ನಾಶವಾದ ಬಳಿಕ ಅದರ ಈ ಕಾರ್ಯವಾದ ಚರಾಚರಾತ್ಮಕ ಪ್ರಪಂಚವು ತನ್ನಿಂದ ತಾನೇ ವಿಲಯ ಹೊಂದುತ್ತದೆ. ಇದಕ್ಕೇನೆ ಚರಾಚರಲಯವೆಂದು ಕರೆದಿದ್ದಾರೆ.

ಇದೇ ವಿಷಯವನ್ನೇ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ದೃಷ್ಟಾಂತ ಮೂಲಕ ಸ್ಪಷ್ಟಪಡಿಸಲೋಸುಗ ಪುನಃ–

ಯಥಾ ಮೇಘಾಃ ಸಮುದ್ಭೂತಾಃ ವಿಲೀಯಂತೇ ನಭಸ್ಥಲೇ ।
ತಥಾತ್ಮನಿ ವಿಲೀಯಂತೇ ವಿಷಯಾಃ ಸ್ವಾನುಭಾವಿನಃ ॥

(ಸಿ. ಶಿ. ೨೦–೨೩)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ಆಕಾಶದಲ್ಲಿ ತೋರಿದ ಮೋಡಗಳು ಕಾಲಾಂತರದಲ್ಲಿ ಅಲ್ಲಿಯೇ ಕರಗಿ ಹೋಗುವಂತೆ, ಪರಮಾತ್ಮನ ಶಕ್ತಿಯ ವಿಲಾಸದಿಂದ ತೋರುತ್ತಿರುವ ಶಬ್ದಾದಿ ವಿಷಯಗಳು ಕೊನೆಗೆ ಅವನಲ್ಲಿಯೇ ಲಯವಾಗಿ ಹೋಗುತ್ತವೆ. ಹೀಗೆ ಶಿವಾನುಭವಿಯಾದ ಶಿವಯೋಗಿಯ ದೃಷ್ಟಿಯಲ್ಲಿ ಉಂಟಾಗುವ ಪ್ರಪಂಚದ ಈ ಲಯಕ್ಕೆ ಚರಾಚರಲಯವೆಂದು ಕರೆಯುತ್ತಾರೆ.

'ವರ್ಷಾ ಋತುವಿನಲ್ಲಿ ಆಕಾಶವು ಕಾರ್ಮೋಡಗಳಿಂದ ತುಂಬಿಹೋಗುತ್ತದೆ. ಶರತ್ ಕಾಲವು ಬಂದೊಡನೆ ಅದು ನಿರಭ್ರವಾಗಿ ಏನೇನು ಇಲ್ಲದೆ ತಾನೆ ತಾನಾಗಿ ತೋರುತ್ತಿರುತ್ತದೆ. ಇದೇ ಪ್ರಕಾರವಾಗಿ ಅಜ್ಞರಾದ ಜೀವಿಗಳ ಮನರೂಪಿ ಆಕಾಶದಲ್ಲಿ ಶಬ್ದ, ಸ್ಪರ್ಶಾದಿ ವಿಷಯಗಳೆಂಬ ಕಾರ್ಮೋಡಗಳು ತುಂಬಿರುತ್ತವೆ. ಹೀಗೆ ವಿಷಯ ಗಳೆಂಬ ಕಾರ್ಮೋಡಗಳಿಂದ ತುಂಬಿದ ಆ ಮನದಲ್ಲಿ ಆತ್ಮಪರಮಾತ್ಮರ ವಿಷಯಕವಾದ ವಿಚಾರವು ಉದಿಸುವುದಿಲ್ಲ. ಇಂತಹ ಅಜ್ಞಾನಾವೃತನಾದ ಜೀವನು ಸತ್ಸಂಗದ ಪ್ರಭಾವ ಮೂಲಕವಾಗಿ ಸದ್ಗುರುವಿಗೆ ಶರಣಾಗತನಾಗಲು, ಪ್ರತಿದಿನದ ಶಾಸ್ತ್ರ ಶ್ರವಣದಿಂದ

ಅವನ ಮನಸ್ಸಿನ ತುಂಬ ಕವಿದಿರುವ ವಿಷಯಗಳೆಂಬ ಕಾರ್ಮೋಡಗಳು ಕ್ರಮೇಣ ಇಲ್ಲವಾಗಿ ಕೊನೆಗೊಮ್ಮೆ ನಿರಭ್ರವಾದ ಆಕಾಶದಂತೆ ಮನಸ್ಸು ವಿಷಯರಹಿತವಾಗಿ ಸ್ವಚ್ಛವಾಗಿ ಹೋಗುತ್ತದೆ. ಅಂತೆಯೇ ಆತನು ವಿಷಯಾದಿಗಳಲ್ಲಿ ಅನಾಸಕ್ತನಾಗಿರುತ್ತಾನೆ. ಹೀಗೆ ಆತ್ಮಾನುಸಂಧಾನದ ಮೂಲಕವಾಗಿ, ವಿಷಯ ಚಿಂತನೆಯು ನಿಂತು ಹೋಗಿ ಕೇವಲ ಆತ್ಮಾನುಭೂತಿಯೊಂದೇ ಅವನಲ್ಲಿ ಉಳಿದಿರೋಣದರಿಂದ ಎಲ್ಲ ವಿಷಯಗಳು ವಿಲೀನವಾಗಿ ಹೋಗುತ್ತವೆ. ಪ್ರಪಂಚದ ಈ ಲಯವನ್ನೇ ಬೇರೊಂದು ಉದಾಹರಣೆ ಮೂಲಕವಾಗಿ ಪೂಜ್ಯಪಾದರು–

ಸ್ವಪ್ನೇ ದೃಷ್ಟಂ ಯಥಾ ವಸ್ತು ಪ್ರಬೋಧೇ ಲಯಮಶ್ನುತೇ ।
ತಥಾ ಸಾಂಸಾರಿಕಂ ಸರ್ವಮಾತ್ಮಜ್ಞಾನೇ ವಿನಶ್ಯತಿ ॥

(ಸಿ. ಶಿ. ೨೦–೨೪)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸ್ವಪ್ನದಲ್ಲಿ ಕಾಣುವ ದೃಶ್ಯವು ಎದ್ದೊಡನೆ ಲಯವಾಗಿ ಹೋಗುವಂತೆ ಈ ಸಾಂಸಾರಿಕ ವ್ಯವಹಾರವೆಲ್ಲವೂ ಆತ್ಮಜ್ಞಾನವಾದೊಡನೆ ಇಲ್ಲವಾಗಿ ಹೋಗುತ್ತದೆ.

ನಮ್ಮ ದೈನಂದಿನ ಜೀವನದಲ್ಲಿ ಜಾಗ್ರತ, ಸ್ವಪ್ನ ಮತ್ತು ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನು ಅನುಭವಿಸುತ್ತಿರುತ್ತೇವೆ. ಒಂದು ಅವಸ್ಥೆಯ ಪ್ರತೀತಿಯಾಗುತ್ತಿರುವಾಗ ಉಳಿದೆರಡು ಅವಸ್ಥೆಗಳು ತೋರಲಾರವು. ಜಾಗ್ರತಾವಸ್ಥೆಯಿರುವಾಗ ಸ್ವಪ್ನ–ಸುಷುಪ್ತಿಗಳಿರುವುದಿಲ್ಲ, ಸ್ವಪ್ನಾವಸ್ಥೆ ಇರುವಾಗ ಜಾಗ್ರತ–ಸುಷುಪ್ತಿಗಳಿರುವುದಿಲ್ಲ, ಸುಷುಪ್ತಾವಸ್ಥೆಯಿರುವಾಗ ಜಾಗ್ರತ–ಸ್ವಪ್ನಗಳಿರುವುದಿಲ್ಲ. ಹೀಗೆ ಒಂದು ಸಮಯದಲ್ಲಿ ಒಂದೇ ಅವಸ್ಥೆಯು ಅನುಭವಗೋಚರವಾಗುವುದೇ ವಿನಃ ಮತ್ತೊಂದರ ಅನುಭವವು ಉಂಟಾಗಲಾರದು. ಇದು ಸರ್ವಾನುಭವಸಿದ್ಧವಾದುದು. ವೇದಾಂತಿಗಳು ಜಾಗ್ರದಾವಸ್ಥೆಗೆ ವ್ಯಾವಹಾರಿಕ ಸತ್ಯವೆಂತಲೂ, ಸ್ವಪ್ನಾವಸ್ಥೆಗೆ ಪ್ರಾತಿಭಾಸಿಕ ಸತ್ಯವೆಂತಲೂ ಕರೆಯುವರು. ಇದಲ್ಲದೇ ಇವೆರಡೂ ಸತ್ಯಗಳು ಮಿಥ್ಯವಾದವುಗಳೆಂಬುದಾಗಿಯೂ ಪ್ರತಿಪಾದಿಸಿ ಪರಶಿವಬ್ರಹ್ಮಸ್ವರೂಪದ ಪಾರಮಾರ್ಥಿಕ ಸತ್ಯವೊಂದನ್ನೇ ಸತ್ಯವನ್ನಾಗಿ ಸ್ವೀಕರಿಸುತ್ತಾರೆ. ಆದರೆ ವೀರಶೈವ ಸಿದ್ಧಾಂತದಲ್ಲಿ ಸರ್ವವೆಲ್ಲವೂ ಶಿವಮಯವೆಂಬುದಾಗಿ ಪ್ರತಿಪಾದಿಸಿ ಎಲ್ಲವೂ ಸತ್ಯವೆಂಬುದಾಗಿ ಸ್ವೀಕರಿಸಿದ್ದಾರೆ. ಅಂತೆಯೇ ಆಗಮದಲ್ಲಿ–

ಜೀವಃ ಸತ್ಯಂ ಜಗತ್ ಸತ್ಯಂ ಶಿವಃ ಸತ್ಯಂ ಸ್ವಭಾವತಃ ।
ತಯೋರಭೇದಃ ಸತ್ಯಂ ವಾ ಕ್ರಿಮಿಭ್ರಮರಯೋರಿವ ।

ಎಂಬುದಾಗಿ ಪ್ರತಿಪಾದಿಸಲಾಗಿದೆ. ಕ್ರಿಮಿಯು ತನ್ನ ಮೊದಲಿನ ಸ್ವರೂಪದಲ್ಲಿ ಸತ್ಯವಾಗಿದ್ದು, ಭ್ರಮರ ಚಿಂತನೆಯಿಂದ ಸಂಪೂರ್ಣ ಪರಿವರ್ತನೆಯಾಗಿ ಭ್ರಮರವೇ ಆಗುತ್ತದೆ. ಇಲ್ಲಿ ಕ್ರಿಮಿ ಮಿಥ್ಯೆ, ಭ್ರಮರವೊಂದೇ ಸತ್ಯವೆಂದು ಹೇಳಲಿಕ್ಕಾಗುವುದಿಲ್ಲ. ಎರಡೂ ಸ್ವಭಾವತಃ ಸತ್ಯವಾಗಿದ್ದೇ ಅವುಗಳಲ್ಲಿ ಸಂಪೂರ್ಣ ಪರಿವರ್ತನೆಯು ಸಂಭವಿಸುವಂತೆ ಜೀವ, ಈಶ್ವರ ಮತ್ತು ಜಗತ್ತು ಇವುಗಳು ಸ್ವಭಾವತಃ ಸತ್ಯವಾಗಿದ್ದು ಇವುಗಳ ಭೇದವೂ ಸಹ ಪೂರ್ವದಲ್ಲಿ ಸತ್ಯವಾಗಿಯೇ ಇರುತ್ತದೆ. ಮುಂದೆ ಶಿವಜೀವರ ಅಭೇದವು

ಸಿದ್ಧವಾಗಲು ಅದೂ ಸಹ ಸತ್ಯವಾಗಿಯೇ ಇರುತ್ತದೆ. ಒಂದು ಅವಸ್ಥೆಯು ಬಂದಾಗ ಮೊದಲಿನ ಅವಸ್ಥೆಯು ನಿವೃತ್ತವಾದರೆ ಅದನ್ನು ಸುಳ್ಳೆಂದು ಹೇಳಲಿಕ್ಕಾಗುವುದಿಲ್ಲ. ಸತ್ಯವಾಗಿದ್ದರೂ ಸಹ ನಿವೃತ್ತಿಯಾಗುವುದು ಸಂಭವಿಸುತ್ತದೆ. ಜೀವನು ಮೂಲತಃ ಸತ್ಯವಾಗಿದ್ದರೂ, ತನ್ನ ಸಾಧನೆಯಿಂದ ತನ್ನ ಮೊದಲಿನ ಸತ್ಯವಾದ ಜೀವತ್ವವನ್ನು ಕಳೆದುಕೊಂಡು ನಂತರ ಸತ್ಯವಾದ ಪರಮಾತ್ಮಸ್ವರೂಪವನ್ನು ಪಡೆದುಕೊಳ್ಳುತ್ತಾನೆಂಬುದಾಗಿ ಅಂಗೀಕರಿಸಿದರೆ ಅದಾವ ತೊಂದರೆಯು ಉಂಟಾಗುವುದಿಲ್ಲ. ಆದ್ದರಿಂದ ಜಾಗ್ರದವಸ್ಥೆ ಬಂದಾಗ ಸ್ವಪ್ನವು ನಿವೃತ್ತವಾಗುತ್ತದೆಂದ ಬಳಿಕ ಸ್ವಪ್ನಾವಸ್ಥೆಯು ಮಿಥ್ಯೆಯೆಂಬುದಾಗಿ ಹೇಳುವುದು ಸರಿಯಲ್ಲ. ಜಾಗ್ರದವಸ್ಥೆಯು ಹೇಗೆ ಸತ್ಯವಾಗಿರುತ್ತದೆಯೋ ಅದೇ ಪ್ರಕಾರವಾಗಿ ಸ್ವಪ್ನಾವಸ್ಥೆಯೂ ಸಹ ಸತ್ಯವೇ ಆಗಿರುತ್ತದೆ. ಶ್ರೀ ಮರಿ ತೋಂಟದಾರ್ಯರು ಸ್ವಪ್ನಾವಸ್ಥೆಯನ್ನು ಕೂಡ ಸತ್ಯವೆಂಬುದಾಗಿ ಪ್ರತಿಪಾದಿಸಲು– ''ಸ್ವಪ್ನೇನಾಪಿ ಫಲಾಫಲ ದರ್ಶನಾತ್ ರೇತಃ ಪಾತಾದಿದರ್ಶನಾಚ್ಚ ಸತ್ಯತ್ವಮೇವ'' ಎಂಬುದಾಗಿ ಪ್ರತಿಪಾದಿಸಿದ್ದಾರೆ. ಸ್ವಪ್ನದಲ್ಲಿ ಓರ್ವ ವ್ಯಕ್ತಿಗೆ ಸ್ತ್ರೀ ಸಂಬಂಧವಾದಂತೆ ಆಗಿ ಆ ಸಂದರ್ಭದಲ್ಲಿ ರೇತಃಸ್ಖಲನವಾಗುತ್ತದೆ. ಸ್ವಪ್ನವನ್ನು ಸಂಪೂರ್ಣವಾಗಿ ಮಿಥ್ಯೆಯೆಂದು ಪರಿಗಣಿಸಿದರೆ ಸತ್ಯವಾದ ರೇತಃಸ್ಖಲನಕ್ಕೆ ಸಮಾಧಾನವೇನು ? ನೈಸರ್ಗಿಕವಾದ ಈ ಘಟನೆಯನ್ನು ಅಪಲಾಪ ಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಇದೂ ಅಲ್ಲದೆ ಯಾರಿಗಾದರೂ ಭಯಾನಕ ಸ್ವಪ್ನಗಳು ಬಿದ್ದಾಗ ಆ ಸ್ವಪ್ನವನ್ನು ನೋಡುತ್ತಿರುವ ವ್ಯಕ್ತಿಯು ಭಯಭೀತನಾಗಿ ಚೀರುತ್ತ ಎದ್ದು ಕಂಪಿಸುವ ದೃಶ್ಯವನ್ನು ಕಾಣುತ್ತೇವೆ. ಒಂದು ವೇಳೆ ಸ್ವಪ್ನದಲ್ಲಿಯ ಘಟನೆ ಸಂಪೂರ್ಣ ಮಿಥ್ಯೆಯಾಗಿದ್ದರೆ ಶರೀರದಲ್ಲಿ ಉಂಟಾಗುತ್ತಿರುವ ಕಂಪನಾದಿ ಕ್ರಿಯೆಗಳಿಗೆ ಕಾರಣವೇನು ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅಂತೆಯೇ ವೀರಶೈವ ಆಚಾರ್ಯರು ಸ್ವಪ್ನವನ್ನು ಸಹ ಮಿಥ್ಯೆಯೆಂಬುದಾಗಿ ಪ್ರತಿಪಾದಿಸುವುದಿಲ್ಲ. ಆದ ಕಾರಣ ನಿದ್ರಾಸ್ಥನಾದ ವ್ಯಕ್ತಿಯು ಎಚ್ಚರಾದೊಡನೆ ಅವನು ಕಾಣುತ್ತಿರುವ ಸ್ವಪ್ನವು ಇಲ್ಲದಾಗುವಂತೆ ಆತ್ಮಜ್ಞಾನವು ಪ್ರಾಪ್ತವಾದೊಡನೆ ಈ ಸಾಂಸಾರಿಕ ಪ್ರಪಂಚವು ಇಲ್ಲದಾಗಿ ಹೋಗುತ್ತದೆ. ಇಲ್ಲಿ ಸಾಂಸಾರಿಕ ಪ್ರಪಂಚವು ಸ್ವಪ್ನ ದಂತೆ ಇಲ್ಲದಾಗುತ್ತದೆಯೆಂದು ಹೇಳಿರೋಣದರಿಂದ ಬಹಳಷ್ಟು ಜನರು ಈ ಪ್ರಪಂಚವು ಸ್ವಪ್ನದಂತೆ ಮಿಥ್ಯೆಯೆಂಬುದಾಗಿ ಪ್ರತಿಪಾದಿಸುವುದುಂಟು. ಆದ್ದರಿಂದ ಪ್ರಸ್ತುತ ಪ್ರಸಂಗದಲ್ಲಿ ಸ್ವಪ್ನವನ್ನು ಸಹ ಸತ್ಯವೆಂಬುದಾಗಿ ಪ್ರತಿಪಾದಿಸಲಾಗಿದೆ. ಇದರಿಂದ ಪ್ರಪಂಚದ ಬಗ್ಗೆ ಇರುವ ಮಿಥ್ಯಾತ್ವ ಬುದ್ಧಿಯು ಸಹಜವಾಗಿ ಇಲ್ಲದಾಗಿ ಹೋಗುತ್ತದೆ. ಪ್ರಪಂಚವು ಸತ್ಯವಾಗಿದ್ದರೂ ಅದು ನಿವೃತ್ತಿಯಾಗುವುದು ಸಂಭವಿಸುತ್ತಿರುವಾಗ ಅದಕ್ಕೆ ಮಿಥ್ಯೆಯೆಂದು ಹೇಳುವ ಅವಶ್ಯಕತೆಯಿರುವುದಿಲ್ಲ.

ಸ್ವಾಭಾವಿಕಗಳಾದ ಜಾಗ್ರದಾದಿ ಅವಸ್ಥೆಗಳ ಹೊರತಾಗಿ ಸಾಧನಾ ಜನ್ಯಗಳಾದ ಸಪ್ತಾವಸ್ಥೆಗಳು ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಅವಕ್ಕೇನೆ ಸಪ್ತಭೂಮಿಕೆಗಳೆಂಬುದಾಗಿ ಕರೆಯುತ್ತಾರೆ. ಮನಸ್ಸಿನ ಉನ್ನತವಾದ ಅವಸ್ಥೆಯೇ ಭೂಮಿಕೆಯು. ಶುಭೇಚ್ಛಾ, ಸುವಿಚಾರಣ, ತನುಮಾಸನ, ಸತ್ವಾಪತ್ತಿ ಅಸಂಸತ್ತಿ ಪದಾರ್ಥಾಭಾವಿನಿ ಮತ್ತು ತುರ್ಯಗಾಮಿನಿ ಇವೇ ಏಳು ಮನಸ್ಸಿನ ಭೂಮಿಕೆಗಳು. ಶಿವಪೂಜೆ, ಸತ್ಸಂಗ ಮತ್ತು

ಸದ್ಗ್ರಂಥಾದಿಗಳ ಅಧ್ಯಯನವನ್ನು ಮಾಡಬೇಕೆನ್ನುವ ಇಚ್ಛೆಗೇನೆ ಶುಭೇಚ್ಛಾ ಎಂದು ಕರೆಯುತ್ತಾರೆ. ಮನದಲ್ಲಿ ಇಂತಹ ಇಚ್ಛೆಯು ಪ್ರಾದುರ್ಭವಿಸಿತೆಂದರೆ ಆ ವ್ಯಕ್ತಿಯ ಜೀವನವು ಉನ್ನತ ಮಟ್ಟದಲ್ಲಿ ಮುನ್ನಡೆಯುವುದೆಂಬುದಾಗಿ ತಿಳಿದುಕೊಳ್ಳಬೇಕು. ಇಚ್ಛೆಗೆ ಅನುರೂಪವಾಗಿಯೇ ಮನಸ್ಸಿನಲ್ಲಿ ವಿಚಾರಗಳು ಒಡಮೂಡುತ್ತವೆ. ಆದ್ದರಿಂದ ಶುಭೇಚ್ಛೆಯ ನಂತರ ಬರುವ ಭೂಮಿಕೆಯೇ ಸುವಿಚಾರಣಾ ಭೂಮಿಕೆಯು. ನಿತ್ಯ, ಅನಿತ್ಯ, ಆತ್ಮ, ಅನಾತ್ಮಗಳ ವಿವೇಕಕ್ಕೇನೆ ಸುವಿಚಾರಣವೆಂಬುದಾಗಿ ಕರೆಯುತ್ತಾರೆ. ಈ ವಿಚಾರ ಮೂಲಕವಾಗಿ ದೇಹಕ್ಕಿಂತಲೂ ಆತ್ಮವು ಭಿನ್ನವಾದುದಾಗಿದೆಯೆಂಬ ದೃಢ ಬುದ್ಧಿಯು ಉತ್ಪನ್ನವಾಗುವುದೇ ತನುಮಾನಸವು. ಈ ಆತ್ಮ ಪರಮಾತ್ಮಗಳ ಅಭೇದ ಜ್ಞಾನವನ್ನು ಮಾಡಿಕೊಳ್ಳುವುದೇ ಸತ್ವಾಪತ್ತಿಯು. ಹೀಗೆ ಪ್ರಾಪ್ತವಾದ ಜ್ಞಾನೋತ್ತರದಲ್ಲಿ ಸಾಂಸಾರಿಕ ವಿಷಯಗಳ ಬಗ್ಗೆ ಮನಸ್ಸಿನಲ್ಲಿ ಅನಾಸಕ್ತಿಯುಂಟಾಗುವುದೇ ಅಸಂಸಕ್ತಿಯೆಂಬ ಭೂಮಿಕೆಯು. ಮನದ ಆಸಕ್ತಿ ಇಲ್ಲದಾದಾಗ ಅದು ಅಂತರ್ಮುಖವಾಗುವುದರಿಂದ ಬಾಹ್ಯ ಪ್ರಪಂಚವು ತೋರಲಾರದು. ಹೀಗೆ ಪದಾರ್ಥಗಳ ತೋರದಿರುವಿಕೆಯ ಸ್ಥಿತಿಗೆ ಪದಾರ್ಥಾಭಾವಿನಿ. ಜ್ಞಾನಿಯ ಈ ಆರನೆಯ ಭೂಮಿಕೆಯಲ್ಲಿ ಚರಾಚರವು ಲಯವಾಗಿ ಹೋಗುತ್ತದೆ. ಪ್ರಪಂಚವನ್ನು ಮರೆತು ಆತ್ಮಚಿಂತನೆಯಲ್ಲಿ ಲೀನವಾದ ಮನಸ್ಸು ಮರಳಿ ಪ್ರಪಂಚಕ್ಕೆ ಎಂದೂ ಬಾರದೇಯಿದ್ದಾಗ ಅದಕ್ಕೆ ತುರ್ಯಗಾಮಿನಿಯೆಂಬುದಾಗಿ ಕರೆಯುತ್ತಾರೆ. ಈ ವಿಧವಾಗಿ ಜ್ಞಾನಿಯ ಮನಸ್ಸಿನ ಉತ್ತರೋತ್ತರವಾದ ಉತ್ಕೃಷ್ಟಾವಸ್ಥೆಗಳು ಪ್ರಾಪ್ತವಾದಂತೆ ಅವನ ಮನಸ್ಸು ಸೂಕ್ಷ್ಮಾತಿ ಸೂಕ್ಷ್ಮರೂಪವನ್ನು ತಾಳಿ ಸ್ಥೂಲ ಪ್ರಪಂಚದ ವ್ಯವಹಾರವನ್ನು ಬಿಟ್ಟು ಆತ್ಮಚಿಂತನೆಯಲ್ಲಿಯೇ ಲೀನವಾಗಿ ಹೋಗುತ್ತದೆ. ಹೀಗೆ ಆತ್ಮ ಜ್ಞಾನದಿಂದ ಸಾಂಸಾರಿಕ ಪ್ರಪಂಚದ ನಿವೃತ್ತಿಯನ್ನು ಪ್ರತಿಪಾದಿಸುವ ಸ್ಥಲವೇ ಚರಾಚರ ಲಯಸ್ಥಲವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಯೋಗಿಗೆ ಪ್ರಾಪ್ತವಾಗಿರುವ ಚರಾಚರಲಯ ಸ್ಥಿತಿಯನ್ನೇ ಇನ್ನಷ್ಟು ಸ್ಪಷ್ಟಪಡಿಸುತ್ತ ಪುನಃ–

ಜಾಗ್ರತ್ ಸ್ವಪ್ನಸುಷುಪ್ತಿಭ್ಯಃ ಪರಾವಸ್ಥಾಮುಪೇಯುಷಃ ।
ಕಿಂ ವಾ ಪ್ರಮಾಣಂ ಕಿಂ ಜ್ಞೇಯಂ ಕಿಂ ವಾ ಜ್ಞಾನಸ್ಯ ಸಾಧನಮ್ ॥

(ಸಿ. ಶಿ. ೨೦–೨೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತನುತ್ರಯಗಳನ್ನು ಅವಲಂಬಿಸಿದ ಜಾಗ್ರತ್–ಸ್ವಪ್ನ–ಸುಷುಪ್ತಿಗಳೆಂಬ ಅವಸ್ಥಾತ್ರಯಗಳನ್ನು ಮೀರಿದ, ಖೇಚರೀ ಮುದ್ರೆಗೆ ಮಾತ್ರ ಸುಲಭವಾಗಿರುವ, ಸರ್ವೋತ್ಕೃಷ್ಟವಾದ, ತುರ್ಯಾವಸ್ಥೆಯನ್ನು ಹೊಂದಿದ ಶಿವಯೋಗಿಯು ತ್ರಿಪುಟಿರೂಪವಾದ ಪ್ರಪಂಚಾತೀತಾವಸ್ಥೆಯನ್ನು ಪಡೆದಿರುವುದರಿಂದ ಅವನಿಗೆ ಪ್ರಮಾಣ ಪ್ರಮೇಯಾದಿಗಳ ಭೇದ ದರ್ಶನವೇ ಇರುವುದಿಲ್ಲ.

ಶಿವಯೋಗ ಸಾಧಕನು ಯೋಗ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟ ಮುದ್ರೆಗಳ ಸಹಾಯದಿಂದ ಸರ್ವೋತ್ಕೃಷ್ಟವಾದ ತುರ್ಯಾವಸ್ಥೆಯನ್ನು ಪಡೆಯುತ್ತಾನೆ. ಈ

ತುರ್ಯಾವಸ್ಥೆಗೆ ಹೋಗಲು ಖೇಚರಿ ಹಾಗೂ ಶಾಂಭವಿ ಮುದ್ರೆಗಳು ಸಹಾಯಕ ಗಳಾಗಿರುತ್ತವೆ. ಬ್ರಹ್ಮನನ್ನೇ ಮೊದಲ್ಗೊಂಡು ಪಿಪೀಲಿಕಾ ಪರ್ಯಂತರವಾದ ಸಕಲ ಚರಾಚರ ಪ್ರಾಣಿಗಳ ಶರೀರದಲ್ಲಿ ವ್ಯಾಪಿಸಿ, ಸರ್ವ ಜಗಕ್ಕೆಲ್ಲ ಸಾಕ್ಷಿಯಾಗಿರುವ ಜ್ಞಾನ ಜ್ಯೋತಿರೂಪವಾದ ಪರಶಿವ ಬ್ರಹ್ಮವೇ ನಾನೆಂದು ಅನುಸಂಧಾನಿಸುವುದೇ ಖೇಚರಿ ಮುದ್ರೆಯೆಂದು ಕರೆಯಲ್ಪಡುತ್ತದೆ. ದೇಹರೂಪವಾದ ಶಿವಪುರದಲ್ಲಿ ಹೃದಯ ಕಮಲ ವೆಂಬ ಶಿವಾಲಯದೊಳಗೆ ಚಿಚ್ಛಕ್ತಿರೂಪವಾದ ಸಿಂಹಾಸನವಿದೆ. ಅದರ ಮೇಲೆ ಮಹಾಘನರೂಪವಾದ ಪರಂಜ್ಯೋತಿಯೊಂದು ಸದಾ ಬೆಳಗುತ್ತಿರುವುದು. ಅಂತಹ ಆ ಬೆಳಕೇ ತನ್ನಾತ್ಮರೂಪವೆಂದು ಅನುಸಂಧಾನಿಸುವುದಕ್ಕೆ ಶಾಂಭವಿ ಮುದ್ರೆಯೆಂದು ಕರೆಯುತ್ತಾರೆ. ವೀರಶೈವ ಶಿವಯೋಗಿಯು ತನ್ನ ಹಸ್ತ ಪೀಠದಲ್ಲಿರುವ ಇಷ್ಟಲಿಂಗದಲ್ಲಿ ನಿರ್ನಿಮೇಷವೂ, ಅರ್ಧನಿಮೀಲಿತವೂ ಆದ ದೃಷ್ಟಿಯನ್ನಿರಿಸಿ, ಈ ಇಷ್ಟಲಿಂಗಾಕಾರದ ಜ್ಯೋತಿಯನ್ನು ಹೃದಯದಲ್ಲಿ ಅನುಸಂಧಾನಿಸುವ ಮುದ್ರೆಗೆ ಶಾಂಭವಿ ಮುದ್ರೆಯೆಂದು ಕರೆಯುವರು. ಈ ಮುದ್ರೆಯನ್ನು ಸಾಧಿಸುವಾಗ ಶಿವಯೋಗಿಯ ದೃಷ್ಟಿಯು ಬಹಿರಂಗ ದಲ್ಲಿದ್ದರೂ, ಅವನ ಚಿತ್ತವೃತ್ತಿಯು ಮಾತ್ರ ಅಂತರಂಗದ ಜ್ಯೋತಿರ್ಲಿಂಗದ ಅನುಸಂಧಾನದಲ್ಲಿ ಅನುರಕ್ತವಾಗಿರುತ್ತದೆ. ಹೀಗೆ ದೃಷ್ಟಿಯನ್ನು ಬಹಿರಂಗದಲ್ಲಿ ಒಂದೆಡೆ ಕೇಂದ್ರವಾಗಿಟ್ಟು ಚಿತ್ತವನ್ನು ಅಂತರಂಗದಲ್ಲಿ ನೆಲೆಗೊಳಿಸುವುದೇ ಮುದ್ರಾಸಾಧನೆ ಯೆಂದು ಕರೆಸಿಕೊಳ್ಳುತ್ತದೆ. ಈ ಪೂರ್ವದಲ್ಲಿ ಹೇಳಿದ ಖೇಚರಿ ಹಾಗೂ ಶಾಂಭವಿ ಮುದ್ರೆಗಳ ಸಹಾಯದಿಂದ ಶಿವಯೋಗಿಯು ಒಮ್ಮೆ ಈ ಜಾಗ್ರತ್–ಸ್ವಪ್ನ– ಸುಷುಪ್ತಿ ಗಳೆಂಬ ಅವಸ್ಥೆಗಳನ್ನು ಮೀರಿ ತುರ್ಯಾವಸ್ಥೆಯನ್ನು ಪಡೆದ ಬಳಿಕ ಅವನಿಗೆ ಪ್ರಮಾಣ, ಪ್ರಮೇಯ ಮತ್ತು ಪ್ರಮಾತೃ ರೂಪವಾದ ತ್ರಿಪುಟಿ ವ್ಯವಹಾರವು ನಿಂತು ಹೋಗುತ್ತದೆ. ಅಂತೆಯೇ ಅವನಿಗೆ ಪ್ರಮಾಣ, ಪ್ರಮಾತೃ ಮತ್ತು ಪ್ರಮೇಯಗಳ ಭೇದ ವ್ಯವಹಾರವು ಇಲ್ಲದಾಗಿ, ಚರಾಚರಲಯದ ಉನ್ನತ ಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ.

ಹೀಗೆ ತುರ್ಯಾವಸ್ಥೆಯನ್ನು ಪಡೆದ ಶಿವಯೋಗಿಯು ಪುನಃ ಪ್ರಪಂಚವನ್ನು ನೋಡುವುದಿಲ್ಲವೆಂಬ ವಿಷಯವನ್ನು ಪೂಜ್ಯಪಾದರು ಪುನಃ–

ತುರ್ಯಾತೀತಪದಂ ಯತ್ತದ್ ದೂರಂ ವಾಙ್ಮನಸಾಧ್ವನಃ ।
ಅನುಪ್ರವಿಶ್ಯತದ್ಯೋಗೀ ನ ಭೂಯೋ ವಿಶ್ವಮೀಕ್ಷತೇ ॥

(ಸಿ. ಶಿ. ೨೦–೨೬)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ತುರ್ಯಾವಸ್ಥೆಗಿಂತಲೂ ಆಚೆಗಿರುವ ವಾಕ್ ಹಾಗೂ ಮನಸ್ಸುಗಳಿಗೆ ಅಗೋಚರವಾಗಿರುವ ತುರ್ಯಾತೀತಾವಸ್ಥೆ ಯನ್ನು ಪಡೆದ ಶಿವಯೋಗಿಯು ಪುನಃ ಪ್ರಪಂಚವನ್ನು ನೋಡುವುದೇ ಇಲ್ಲ.

ಪೂರ್ವದಲ್ಲಿ ವರ್ಣಿಸಿದ ಸಪ್ತಭೂಮಿಕೆಗಳಲ್ಲಿ ತುರ್ಯ ಹಾಗೂ ತುರ್ಯಾತೀತಾವಸ್ಥೆಯನ್ನು ತಲುಪಿದಾಗ, ಅಲ್ಲಿ ವಾಣಿ ಹಾಗೂ ಮನಸ್ಸುಗಳ ವ್ಯವಹಾರವು ನಿಂತುಹೋಗುತ್ತದೆ. ಜಾಗ್ರತ್–ಸ್ವಪ್ನಾವಸ್ಥೆಗಳಲ್ಲಿಯೇ ವಾಣಿ ಹಾಗೂ ಮನಸ್ಸಿನ ವ್ಯವಹಾರವು ಕಂಡುಬರುವುದು. ಸುಷುಪ್ತಿ ಹಾಗೂ ತುರ್ಯಾವಸ್ಥೆಗಳಲ್ಲಿ

ವಾಣಿ–ಮನಗಳು ತಮ್ಮ ವ್ಯವಹಾರವನ್ನು ಮಾಡಲು ಅಸಮರ್ಥಗಳಾಗಿರುತ್ತವೆ. ಒಮ್ಮೆ ತುರ್ಯಾವಸ್ಥೆಯನ್ನು ಪಡೆದ ಶಿವಯೋಗಿಯು ಮರಳಿ ಪ್ರಪಂಚದಲ್ಲಿ ಬರಲಾರನು. ಬಂದರೂ ಸಹ ಬಹಳ ಹೊತ್ತಿನವರೆಗೆ ಇಲ್ಲಿ ವ್ಯವಹರಿಸಲಾರನು. ವಾತಾನುಕೂಲಿತ ವಾದ ಕೊಠಡಿಯೊಳಗೆ ಆನಂದವಾಗಿ ಕಾಲಕಳೆಯುವ ವ್ಯಕ್ತಿಯು ಕಡು ಬೇಸಿಗೆಯ ಬಿಸಿಲಲ್ಲಿ ಹೊರಗೆ ಬರಲು ಇಚ್ಛಿಸುವುದೇ ಇಲ್ಲ. ಅನಿವಾರ್ಯ ಕಾರಣದಿಂದಾಗಿ ಹೊರ ಬಂದರೂ ಮರುಕ್ಷಣದಲ್ಲಿಯೇ ಪುನಃ ಒಳಗೆ ಪ್ರವೇಶಿಸುತ್ತಾನೆ. ಸದಾವಕಾಲದಲ್ಲಿ ಬಿಲದ ತಂಪು ಪ್ರದೇಶದಲ್ಲಿ ವಾಸಿಸುವ ಸರ್ಪವು ಹಗಲಿನಲ್ಲಿ ಹೊರಬರುವುದೇ ಇಲ್ಲ ಬಂದರೂ ಅತಿ ಅವಸರದಲ್ಲಿ ತನ್ನ ಬಿಲವನ್ನೇ ಪ್ರವೇಶಿಸುವುದನ್ನು ನೋಡುತ್ತೇವೆ. ಇದೇ ಪ್ರಕಾರ ವಾಗಿ ವಾಣಿ–ಮನಸ್ಸುಗಳಿಗೆ ನಿಲುಕದೇ ಇರುವ, ಸದಾ ಆನಂದ ಘನವಾಗಿರುವ ತುರ್ಯಾತೀತಾವಸ್ಥೆಯನ್ನು ಪಡೆದ ಶಿವಯೋಗಿಯು ಬಹಿರ್ಮುಖನಾಗಿ ಪ್ರಪಂಚದಲ್ಲಿ ವ್ಯವಹರಿಸುವುದೇ ಇಲ್ಲ. ಆಕಸ್ಮಾತ್ತಾಗಿ ಅವನ ವೃತ್ತಿಯು ಒಂದು ಕ್ಷಣಕಾಲ ಬಹಿರ್ಮುಖ ವಾದರೂ ಮರುಕ್ಷಣದಲ್ಲಿಯೇ ಅಂತರ್ಮುಖವಾಗಿ ಬಿಡುತ್ತದೆ. ಹೀಗೆ ಸದಾ ಅಂತರ್ಮುಖನಾಗಿರುವ ಶಿವಯೋಗಿಗೆ ವಿಶ್ವವು ತೋರುವುದಿಲ್ಲ ಇದುವೇ ಚರಾಚರಲಯಸ್ಥಲವು.

ಈ ಚರಾಚರ ಲಯಸ್ಥಲದ ಶಿವಯೋಗಿಯ ಸ್ಥಿತಿಯನ್ನೇ ಪೂಜ್ಯಪಾದರು ಪುನಃ–

> ನಾನ್ಯತ್ ಪಶ್ಯತಿ ಯೋಗೀಂದ್ರೋ ನಾನ್ಯಜ್ಜಾನಾತಿ ಕಿಂಚನ ।
> ನಾನ್ಯಚ್ಛೃಣೋತಿ ಸಂದೃಷ್ಟೇ ಚಿದಾನಂದಮಯೇ ಶಿವೇ ॥
>
> (ಸಿ. ಶಿ. ೨೦–೨೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿದಾನಂದಮಯನಾದ ಶಿವನ ಸಂದರ್ಶನವನ್ನು ಪಡೆದ ಈ ಶಿವಯೋಗಿಯು ಬೇರೊಂದನ್ನು ನೋಡುವುದಿಲ್ಲ, ಬೇರೊಂದನ್ನು ಕೇಳುವುದಿಲ್ಲ ಹಾಗೂ ಬೇರಾವುದರ ಜ್ಞಾನವನ್ನು ಸಹ ಮಾಡಿಕೊಳ್ಳದೆ ತನ್ನ ಆ ಸ್ವರೂಪಸ್ಥಿತಿಯಲ್ಲಿಯೇ ಉಳಿದುಕೊಳ್ಳುತ್ತಾನೆ.

''ಏಕವಿಜ್ಞಾನೇನ ಸರ್ವವಿಜ್ಞಾನಂ'' ಎಂಬ ಶ್ರುತಿವಚನದಂತೆ ಒಂದನ್ನು ತಿಳಿದು ಕೊಂಡರೆ ಎಲ್ಲವನ್ನು ತಿಳಿದುಕೊಂಡಂತಾಗುವ ಸಚ್ಚಿದಾನಂದ ರೂಪವಾದ ಪರಶಿವ ತತ್ತ್ವವನ್ನು ತನ್ನಾತ್ಮರೂಪದಲ್ಲಿ ಸಾಕ್ಷಾತ್ಕರಿಸಿಕೊಂಡ ಈ ಶಿವಯೋಗಿಪುಂಗವನಿಗೆ ಬೇರೊಂದನ್ನು ನೋಡುವ, ಕೇಳುವ ಮತ್ತು ತಿಳಿದುಕೊಳ್ಳುವ ಆವಶ್ಯಕತೆಯೇ ಉಳಿಯು ವುದಿಲ್ಲ. ಅವನಿಗೆ ಪ್ರಾಪ್ತವಾಗಿರುವ ಶಿವಾದ್ವೈತ ಜ್ಞಾನದ ಪ್ರಭಾವದಿಂದಾಗಿ ಸರ್ವ ವೆಲ್ಲವು ತನ್ನಾತ್ಮರೂಪವಾಗಿಯೇ ತೋರುತ್ತಿರುವಾಗ ಅನ್ಯವೆಂಬುದಾವುದೂ ಉಳಿಯು ವುದಿಲ್ಲ. ಅಂತೆಯೇ ಅವನಿಂದ ಮತ್ತೊಂದನ್ನು ನೋಡುವ, ಕೇಳುವ ಮುಂತಾದ ವ್ಯವಹಾರಗಳು ಸಂಭವಿಸಲಾರವು. ಚರಾಚರಲಯಸ್ಥಲದ ಶಿವಯೋಗಿಯ ಈ ಸ್ಥಿತಿಯು ಸರ್ವೋತ್ಕೃಷ್ಟವಾದುದು. ಇವನ ಸಕಲ ವೃತ್ತಿಗಳು ಪರಮಾತ್ಮನಲ್ಲಿಯೇ ವಿಲೀನವಾಗಿ ರುವುದರಿಂದ ಬೇರೊಂದು ವ್ಯವಹಾರಕ್ಕೆ ಇಲ್ಲಿ ಅವಕಾಶವಿರುವುದಿಲ್ಲ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಚರಾಚರಲಯಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಅಸದೇವ ಜಗತ್‌ಸರ್ವಂ ಸದಿವ ಪ್ರತಿಭಾಸತೇ ।
ಜ್ಞಾತೇ ಶಿವೇ ತದಜ್ಞಾನಂ ಸ್ವರೂಪಮುಪಪದ್ಯತೇ ॥

(ಸಿ. ಶಿ. ೨೦–೨೮)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಚರಾಚರಾತ್ಮಕವಾದ ಜಗತ್ತು ಶಿವನಿಗಿಂತಲೂ ಭಿನ್ನವಾಗಿರುವುದಿಲ್ಲ. ಆದರೆ ಮಾಯಾ ಶಕ್ತಿಯ ವಶದಿಂದ ಭಿನ್ನವಾಗಿ ತೋರಿದರೂ, ಸಚ್ಚಿದಾನಂದರೂಪನಾದ ಪರಶಿವಜ್ಞಾನವನ್ನು ಪಡೆದಾಗ ಭೇದಪ್ರತೀತಿಗೆ ಕಾರಣವಾಗಿ ತೋರುವ ಅಜ್ಞಾನವು ಇಲ್ಲದಾಗಿ ಹೋಗಿ ಸ್ವಸ್ವರೂಪ ವೊಂದೇ ಉಳಿಯುತ್ತದೆ.

ಈ ಜಗತ್ತಿಗೆ ಪರಮಾತ್ಮನ ಅಸ್ತಿತ್ವಕ್ಕಿಂತಲೂ ಭಿನ್ನವಾದ ಸ್ವತಂತ್ರವಾದ ಅಸ್ತಿತ್ವ ವಿರುವುದಿಲ್ಲ. ಆದರೂ ಅಜ್ಞರಾದ ಜೀವಿಗಳಿಗೆ ಪ್ರಪಂಚವು ಪರಮಾತ್ಮನಿಗಿಂತಲೂ ಭಿನ್ನ ವಾದುದೆಂಬ ಪ್ರತೀತಿಯು ಉಂಟಾಗುತ್ತದೆ. ಯಾವಾಗ ಶಿವಜ್ಞಾನವು ಪ್ರಾಪ್ತವಾಗು ವುದೋ ಆಗ ಪ್ರಪಂಚವೆಲ್ಲವೂ, ಶಿವರೂಪವಾಗಿಯೇ ತೋರುವುದರಿಂದ ಇದರ ಅಸ್ತಿತ್ವವು ಭಿನ್ನವಾಗಿ ತೋರಲಾರದು. ತಾನು ಸಾಧಿಸಿರುವ ಜ್ಞಾನದ ಸರ್ವಶ್ರೇಷ್ಠ ಅವಸ್ಥೆ ಯಾದ ತುರ್ಯಾತೀತಾವಸ್ಥೆಯನ್ನು ಹೊಂದಿದ ಶಿವಯೋಗಿಯು ಸಂಪೂರ್ಣವಾಗಿ ಅಂತರ್ಮುಖನಾಗಿರೋಣದರಿಂದ ಅವನಿಗೆ ಪರಮಾತ್ಮನ ಹೊರತಾಗಿ ಬೇರಾವುದೂ ತೋರುವುದಿಲ್ಲ.

ಪ್ರಸ್ತುತ ಪ್ರಸಂಗದಲ್ಲಿ ''ಅಸದೇವ ಜಗತ್ ಸರ್ವಂ'' ಎಂಬುದಾಗಿ ಪ್ರತಿಪಾದಿಸಿ ದ್ದನ್ನು ಕಾಣುತ್ತೇವೆ. ಜಗತ್ತು 'ಅಸತ್' ಎಂದರೆ ಮಿಥ್ಯೆಯೆಂದರ್ಥವಲ್ಲ. ಪರಮಾತ್ಮನ ಅಸ್ತಿತ್ವಕ್ಕಿಂತಲೂ ಭಿನ್ನವಾದ ಅಸ್ತಿತ್ವವು ಈ ಜಗತ್ತಿಗೆ ಇಲ್ಲವೆಂದರ್ಥ. ಆದ್ದರಿಂದ ಪರಮಾತ್ಮ ಜ್ಞಾನವಾದ ಬಳಿಕ ಪ್ರಪಂಚವು ಪರಮಾತ್ಮರೂಪವೇ ಆಗಿಹೋಗೋಣ ದರಿಂದ ಪರಮಾತ್ಮನಿಗಿಂತ ಅದರ ಅಸ್ತಿತ್ವವು ಭಿನ್ನವಾಗಿ ಇಲ್ಲವೆಂದು ಹೇಳುವ ಸ್ಥಲವೇ ಚರಾಚರಲಯಸ್ಥಲವೆಂದು ತಿಳಿದುಕೊಳ್ಳಬೇಕೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೩ ನವ್ಹೆಂಬರ್, ೧೯೯೬
ಜ್ಞಾನ ಮಂದಿರ, ಜಂಗಮವಾಡಿ ಮಠ, ವಾರಾಣಸಿ



ಆಶೀರ್ವಚನ-೧

# ಭಾಂಡಸ್ಥಲ

ವೀರಶೈವ ವಿದ್ವತ್ ಸಂಘದ ಧರ್ಮಾಸಕ್ತ ವಿದ್ಯಾರ್ಥಿಗಳೇ ಮತ್ತು ಕಾರ್ಯಕ್ರಮದಲ್ಲಿ ಭಾಗಿಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶ ಮಾಡಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳ ಬಗ್ಗೆ ವಿಚಾರ ಮಾಡುತ್ತ ನಿನ್ನೆಯದಿನ ಚರಾಚರಲಯಸ್ಥಲವನ್ನು ಕುರಿತು ವಿವೇಚಿಸಲಾಗಿದೆ. ಇಂದು ಅದರ ಮುಂದಿನ ಸ್ಥಲವಾದ ಭಾಂಡಸ್ಥಲದ ಬಗ್ಗೆ ವಿಚಾರಿಸೋಣ. ಇಲ್ಲಿ ಭಾಂಡವೆಂದರೆ ಶಿವನ ವಿಮರ್ಶಶಕ್ತಿಯೆಂದರ್ಥ. ವೀರಶೈವ ಸಿದ್ಧಾಂತದ ಪ್ರಕಾರವಾಗಿ ಶಿವನು ಶಕ್ತಿವಿಶಿಷ್ಟನಾಗಿರುತ್ತಾನೆ. ಶಿವನೊಂದಿಗೆ ಅವಿನಾಭಾವ ಸಂಬಂಧಿನಿಯಾಗಿರುವ ಈ ಶಕ್ತಿಗೆ ಚಿಚ್ಛಕ್ತಿ ಅಥವಾ ವಿಮರ್ಶಶಕ್ತಿಯೆಂಬುದಾಗಿ ಕರೆಯುತ್ತಾರೆ. ಇವಳು ಸಚ್ಚಿದಾನಂದ ಸ್ವರೂಪಿಣಿಯಾಗಿರುತ್ತಾಳೆ. ಅದನ್ನೇ ಈ ಪೂರ್ವದಲ್ಲಿ ಪೂಜ್ಯಪಾದರು– ''ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದ ಲಕ್ಷಣಾ'' ಎಂಬುದಾಗಿ ಪ್ರತಿಪಾದಿಸಿದ್ದಾರೆ. ಈ ಶಕ್ತಿಯು ಒಂದೇಯಾಗಿದ್ದರೂ ಕಾರ್ಯಭೇದದಿಂದ ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಯೆಂಬುದಾಗಿ ಷಡ್‌ವಿಧವಾಗಿರುತ್ತದೆ. ಇವುಗಳಲ್ಲಿ ಸಚ್ಚಿದಾನಂದ ಸ್ವರೂಪ ವಾದ ಚಿಚ್ಛಕ್ತಿಯು ಪರಮಾತ್ಮನೊಂದಿಗೆ ಸಮರಸವಾಗಿರುತ್ತದೆ. ಈ ಶಕ್ತಿಯಿಂದ ಯುಕ್ತನಾದಾಗಲೇನೆ ಪರಶಿವಬ್ರಹ್ಮಕ್ಕೆ ತನ್ನ ಸಚ್ಚಿದಾನಂದ ಸ್ವರೂಪದ ಬೋಧವಾಗುವುದು. ಅಂತೆಯೇ ವೀರಶೈವ ಆಚಾರ್ಯರು ಪರಶಿವ ಬ್ರಹ್ಮವನ್ನು ಶಕ್ತಿ ವಿಶಿಷ್ಟವೆಂಬುದಾಗಿ ಸ್ವೀಕರಿಸಿದ್ದಾರೆ. ಈ ಚಿಚ್ಛಕ್ತಿಯೇ ಸಂಪೂರ್ಣವಾದ ಜಗತ್ತಿನ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣೀಭೂತವಾಗಿರುತ್ತದೆ. ಹೀಗೆ ಅನಂತ ಭುವನ ಬ್ರಹ್ಮಾಂಡಗಳ ಉತ್ಪತ್ತ್ಯಾದಿಗಳಿಗೆ ಕಾರಣೀಭೂತವಾದ ವಿಮರ್ಶ ಶಕ್ತಿಗೆ ಇಲ್ಲಿ ಭಾಂಡಸ್ಥಲವೆಂಬುದಾಗಿ ಸಂಬೋಧಿಸಿದ್ದಾರೆ. ಅದನ್ನೇ ಪೂಜ್ಯಪಾದರು–

ಬ್ರಹ್ಮಾಂಡ ಶತಕೋಟೀನಾಂ ಸರ್ಗಸ್ಥಿತಿಲಯಾನ್ ಪ್ರತಿ ।
ಸ್ಥಾನಭೂತೋ ವಿಮರ್ಶೋ ಯಸ್ತದ್ ಭಾಂಡಸ್ಥಲಮುಚ್ಯತೇ ॥

(ಸಿ. ಶಿ. ೨೦–೨೯)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ವಿಶಾಲವಾದ ವಿಶ್ವದಲ್ಲಿರುವ ಅನಂತ ಭುವನ ಬ್ರಹ್ಮಾಂಡಾದಿಗಳ ಉತ್ಪತ್ತಿ, ಸ್ಥಿತಿ ಮತ್ತು ಲಯಾದಿಗಳಿಗೆ ಆಶ್ರಯಭೂತವಾಗಿರುವ ವಿಮರ್ಶ ಶಕ್ತಿಯೇ ಭಾಂಡಸ್ಥಲವೆಂಬುದಾಗಿ ಕರೆಯಲ್ಪಡುತ್ತದೆ.

ಪೂಜ್ಯಪಾದರು ವಿಮರ್ಶ ಶಕ್ತಿಗೆ ಭಾಂಡವೆಂಬ ಪಾರಿಭಾಷಿಕ ಶಬ್ದವನ್ನು ಬಳಸಿರುವುದು ಒಂದು ವೈಶಿಷ್ಟ್ಯವಾಗಿದೆ. ಲೌಕಿಕ ವ್ಯವಹಾರದಲ್ಲಿ ಭಾಂಡವೆಂದರೆ ಪಾತ್ರೆಯೆಂದರ್ಥ. ಖಾದ್ಯ ಪದಾರ್ಥಗಳನ್ನು ಪಾತ್ರೆಯೊಳಗೆ ಹಾಕಿ ಆ ಪಾತ್ರೆಯನ್ನು ಒಲೆಯ ಮೇಲಿಟ್ಟು ಪದಾರ್ಥಗಳನ್ನು ಬೇಯಿಸುವುದನ್ನು ನಾವೆಲ್ಲ ಕಾಣುತ್ತೇವೆ. ಒಂದು ಪದಾರ್ಥವು ವ್ಯವಸ್ಥಿತವಾಗಿ ಪಕ್ವಗೊಂಡು, ಅದು ಖಾದ್ಯವಾಗಿ ನಮಗೆ ದೊರೆಯಬೇಕಾದರೆ, ಅದನ್ನು ತಯಾರಿಸಲೋಸುಗ ಪಾತ್ರೆಯು ಅವಶ್ಯವಾಗಿ ಬೇಕೇ ಬೇಕು. ಇದರಂತೆ ಅನಂತ ಭುವನ ಬ್ರಹ್ಮಾಂಡಗಳನ್ನು ನಿರ್ಮಾಣ ಮಾಡಬೇಕಾದರೆ, ಅದಕ್ಕೂ ಸಹ ಒಂದು ಆಧಾರವಾದ ಪಾತ್ರೆಯು ಬೇಕೇ ಬೇಕಾಗುತ್ತದೆ. ಈ ವಿಶ್ವವನ್ನು ನಿರ್ಮಾಣಗೊಳಿಸುವ ಪಾತ್ರೆಯು ಈ ವಿಶ್ವಕ್ಕಿಂತಲೂ ಅತ್ಯಂತ ವಿಶಾಲವಾದುದು ಆಗಿರಬೇಕಾಗುತ್ತದೆ. ಆ ದೃಷ್ಟಿಯಿಂದ ನೋಡಿದಾಗ ಶಿವನೊಂದಿಗೆ ಅವಿನಾಭಾವ ಸಂಬಂಧಿಯಾದ ವಿಮರ್ಶ ಶಕ್ತಿಯೇ ಈ ವಿಶ್ವದ ಉತ್ಪತ್ತಿಗೆ ಆಧಾರವಾಗಿರೋಣದರಿಂದ ಈ ವಿಮರ್ಶೆ ಶಕ್ತಿಯನ್ನು ಬ್ರಹ್ಮಾಂಡಗಳನ್ನು ನಿರ್ಮಿಸುವ ಭಾಂಡವೆಂಬುದಾಗಿ ಕರೆದಿರುವುದು ಸೂಕ್ತವೇ ಆಗಿದೆ.

ಬ್ರಹ್ಮಾಂಡಗಳು ಎಷ್ಟಿವೆಯೆಂಬುದು ಇನ್ನೂ ನಿಶ್ಚಿತವಾದ ಗಣನೆಗೆ ಬಂದಿಲ್ಲ. ಪೂಜ್ಯಪಾದರು ಬ್ರಹ್ಮಾಂಡಗಳ ಸಂಖ್ಯೆಯನ್ನು ಶತಕೋಟಿಯೆಂಬುದಾಗಿ ಹೇಳಿದ್ದನ್ನು ಕಾಣುತ್ತೇವೆ. ಅದಾದರೂ ಓಘದಲ್ಲಿ ಹೇಳಿದ ಉಕ್ತಿಯೇ ವಿನಃ ನಿಶ್ಚಿತ ಸಂಖ್ಯೆಯನ್ನು ತಿಳಿಸುವಂಥಾದ್ದಲ್ಲ. ಇಲ್ಲಿ ಬಳಸಿದ ಶತಕೋಟಿ ಶಬ್ದವು ಅನಂತವೆಂದರ್ಥವನ್ನು ಸೂಚಿಸುತ್ತದೆ. ಅಂತೆಯೇ ಹಲವೆಡೆ ಅನಂತ ಭುವನ ಬ್ರಹ್ಮಾಂಡಗಳೆಂಬುದಾಗಿಯೇ ಪ್ರತಿಪಾದಿಸಿದ್ದಾರೆ. ವಿಶ್ವದಲ್ಲಿರುವ ಪಿಂಡಾಂಡಗಳ ನಿರ್ದಿಷ್ಟ ಸಂಖ್ಯೆಯೇ ಸಿಗದಿರುವಾಗ ಬ್ರಹ್ಮಾಂಡಗಳ ಬಗ್ಗೆ ಹೇಳುವುದಾರೂ ಏನು ! ಭಾರತದಲ್ಲಿಯ ಜನಸಂಖ್ಯೆಯು ಒಂದು ನೂರು ಕೋಟಿಯೆಂದು ಅಂದಾಜು ಹೇಳಲಾಗುತ್ತದೆ. ಇದು ಕೇವಲ ಮನುಷ್ಯರ ಗಣನೆ ಮಾತ್ರ. ಉಳಿದ ಪ್ರಾಣಿಗಳ ಗಣನೆ ಇಲ್ಲಿ ಇರುವುದಿಲ್ಲ. ಈ ದೇಶದಲ್ಲಿ ಅಸಂಖ್ಯಗಳಾದ ಪಶು–ಪಕ್ಷಿ, ಕ್ರಿಮಿ–ಕೀಟ–ಪತಂಗಾದಿಗಳು ಇವೆ. ಅವುಗಳನ್ನು ಎಣಿಸಲು ಯಾರಿಂದ ಸಾಧ್ಯ ? ಅವುಗಳ ಒಂದೊಂದು ಶರೀರವು ಕೂಡ ಪಿಂಡಾಂಡವೇ. ಈ ತೆರನಾಗಿ ಪಿಂಡಾಂಡಗಳು ಅಸಂಖ್ಯವಾಗಿರುವಂತೆ ಬ್ರಹ್ಮಾಂಡಗಳಾದರೂ ಅಪರಿಮಿತಗಳಾಗಿರುತ್ತವೆ. ಜೀವಿಗಳು ತಮ್ಮ ತಮ್ಮ ಅಹಂಕಾರವನ್ನು ದೂರಮಾಡಿಕೊಳ್ಳಲು ಬ್ರಹ್ಮಾಂಡಗಳ ವ್ಯಾಪಕತೆಯ ಪರಿಜ್ಞಾನವನ್ನು ಮಾಡಿಕೊಳ್ಳುವುದು ಅವಶ್ಯಕವಾಗಿದೆ. ನಾವು ನಮ್ಮನ್ನು ಎಷ್ಟೇ ದೊಡ್ಡವರನ್ನಾಗಿ ತಿಳಿದುಕೊಂಡಿದ್ದರೂ, ಬ್ರಹ್ಮಾಂಡದ ವಿಶಾಲತೆಯ ಎದುರು ಅಣು, ಪರಮಾಣುವಾಗಿ ತೋರುತ್ತೇವೆ. ಓರ್ವ ವ್ಯಕ್ತಿಯು ತನ್ನ ಗ್ರಾಮದಲ್ಲಿ ಒಂದು ಸುಂದರವಾದ ಮನೆಯನ್ನು ಕಟ್ಟಿಸಿ ಅದರ ಬಗ್ಗೆ ಅತಿಯಾದ ಅಭಿಮಾನವನ್ನು ತಾಳುತ್ತ ಪ್ರತಿಯೊಬ್ಬರಿಗೂ ಅದನ್ನು ತೋರಿಸಿ ನಾನು ಕಟ್ಟಿದ್ದೇನೆ ಎಂಬುದಾಗಿ ಅಹಂಕರಿಸುತ್ತಿದ್ದನು. ಎಲ್ಲರಿಗೂ ತೋರಿಸುವಂತೆ ಶಿವಜ್ಞಾನ ಸಂಪನ್ನನಾದ ಓರ್ವ ಶಿವಯೋಗಿಗೆ ತನ್ನ ಮನೆಯನ್ನು ತೋರಿಸಿ ಅಹಂಕಾರದ ಭಾವವನ್ನು ವ್ಯಕ್ತ ಮಾಡಿದಾಗ, ಅವರು ಆ ಓಣಿಯ ನಕಾಶೆಯನ್ನು ತರಿಸಿ ಅವನ ಮನೆಯ ಸ್ಥಾನವನ್ನು ತೋರಿಸುತ್ತ, ''ನೋಡು, ನೀನು ಅಹಂಕರಿಸುವ ಮನೆ ಓಣಿಯ ದೃಷ್ಟಿಯಿಂದ ಎಷ್ಟು ಚಿಕ್ಕದಾಗಿ ತೋರುತ್ತದೆ. ಇದೂ

ಅಲ್ಲದೆ ನಿನ್ನೂರಿನ ನಕಾಶೆಯಲ್ಲಿ ಓಣಿಯೇ ಸಣ್ಣದಾಗಿ ತೋರುವಾಗ ನಿನ್ನ ಮನೆಯಂತು ಇನ್ನೂ ಚಿಕ್ಕದಾಗಿ ತೋರುವುದು. ಒಂದು ತಾಲೂಕಿನ ನಕಾಶೆಯನ್ನು ನೋಡಿದಾಗ, ನಿನ್ನ ಊರು ಕಾಣುವುದೇ ವಿನಃ ನಿನ್ನ ಓಣಿ–ಮನೆಗಳು ಅಲ್ಲಿ ಕಾಣುವುದೇ ಇಲ್ಲ, ಜಿಲ್ಲೆಯ ನಕಾಶದೊಳಗೆ ನಿನ್ನ ತಾಲೂಕು ಕಾಣುವುದೇ ವಿನಃ ಊರಂತು ಕಾಣುವುದೇ ಇಲ್ಲ, ಅದೇ ಪ್ರಕಾರವಾಗಿ ಪ್ರದೇಶದ ನಕಾಶವನ್ನು ನೋಡಿದಾಗ ಅಲ್ಲಿ ನಿನ್ನ ಜಿಲ್ಲೆ ತೋರುವುದೇ ವಿನಃ ನಿನ್ನ ತಾಲೂಕು ತೋರುವುದಿಲ್ಲ, ಅದರಂತೆ ಇನ್ನು ದೇಶದ ನಕಾಶೆಯನ್ನು ನೋಡಿದಾಗ ನಿನ್ನ ಪ್ರಾಂತ ತೋರುವುದೇ ವಿನಃ ಜಿಲ್ಲೆ ಸಹ ತೋರುವುದಿಲ್ಲ, ಇದೇ ತೆರನಾಗಿ ವಿಶ್ವದ ನಕಾಶೆಯಲ್ಲಿ ವಿಶಾಲವಾದ ಭಾರತವೇ ಒಂದು ಮೂಲೆಯಲ್ಲಿ ಸಣ್ಣದಾಗಿ ತೋರುತ್ತಿರುವಾಗ ಅಲ್ಲಿ ನಿನ್ನ ಪ್ರದೇಶ, ನಿನ್ನ ಜಿಲ್ಲೆ, ನಿನ್ನ ತಾಲೂಕು, ನಿನ್ನ ಊರು, ನಿನ್ನ ಓಣಿ ಮತ್ತು ನಿನ್ನ ಮನೆ ಇವುಗಳು ಯಾವೂ ತೋರುವುದೇ ಇಲ್ಲ'' ಎಂದರು. ಪ್ರದೇಶವೇ ಸಿಗದಿರುವಾಗ ಮನೆ ಸಿಗುವುದೆಲ್ಲಿಂದ ? ದೃಷ್ಟಿ ವಿಶಾಲವಾದಂತೆಲ್ಲ ಈ ವಿಶ್ವದ ಎದುರಿನಲ್ಲಿ ನಾನೆಷ್ಟು ಸಣ್ಣವನಿರುವೆನೆಂಬ ಅರಿವು ಎಲ್ಲರಿಗೂ ಆಗುತ್ತದೆ. ನಮ್ಮಷ್ಟಕ್ಕೆ ನಾವು ನಮ್ಮನ್ನು ದೊಡ್ಡವರನ್ನಾಗಿ ತಿಳಿದು ಅಹಂಕರಿಸುವುದು ಸರಿಯಲ್ಲ. ಬ್ರಹ್ಮಾಂಡದಲ್ಲಿ ಪೃಥ್ವಿಯೇ ಒಂದು ಧೂಳಿ ಕಣದಷ್ಟು ತೋರುತ್ತಿರುವಾಗ ಹೇಗೆ ತಾನೆ ಸಿದ್ಧವಾದೀತು.

ಅಹಂಕಾರದಿಂದಾಗಿ ಮನುಷ್ಯನು ಪತಿತನಾಗುತ್ತಾನೆ. ಅದನ್ನು ತ್ಯಜಿಸಿದಾಗಲೇ ನಾವು ಮಹಾನ್ ಆಗುತ್ತೇವೆ. ಈ ಭಾಂಡಸ್ಥಲದಲ್ಲಿ ಸಾಧಕನು ತನ್ನ ಅಹಂಕಾರವನ್ನು ಕಳೆದುಕೊಂಡು ಹೇಗೆ ಮಹಾನ್ ಆಗುತ್ತಾನೆಂಬುದನ್ನು ತಿಳಿಯಪಡಿಸಲಾಗಿದೆ. ಕೆಲವರ ಅಹಂಕಾರವು ಕೇವಲ ಶರೀರದ ಮಟ್ಟಿಗಿದ್ದರೆ, ಕೆಲವರದು ಮನೆಯ ಮಟ್ಟಿಗೆ, ಬೇರೆಯವರದು ಊರಿನ ಮಟ್ಟಿಗೆ, ಮತ್ತೆ ಕೆಲವರದು ರಾಷ್ಟ್ರಮಟ್ಟಿಗೆ ಹಾಗೂ ವಿಶ್ವಮಟ್ಟಿಗೆ ವ್ಯಾಪಿಸಿಕೊಂಡಿರುತ್ತದೆ. ನಮ್ಮಲ್ಲಿರುವ ಈ ಅಹಂಕಾರವು ಉತ್ತರೋತ್ತರವಾಗಿ ಬೆಳೆಯುತ್ತ ಹೋಗಿ ಕೊನೆಗೆ 'ಪೂರ್ಣಾಹಂತೆ' ಆಗಿ ಪರಿವರ್ತನೆಯನ್ನು ಹೊಂದುತ್ತದೆ. ತುರ್ಯಾವಸ್ಥೆಯಲ್ಲಿ ಪ್ರವೇಶಿಸಿದ ಶಿವಯೋಗಿಯ ಅಹಂಕಾರವು ಪೂರ್ಣಾಹಂತ ರೂಪವೇ ಆಗಿರುತ್ತದೆ. ಅವನ ಭಾವನೆಯು ಸಮಷ್ಟಿ ರೂಪವನ್ನು ತಾಳಿರುತ್ತದೆ. ಶಿವನೇ ವಿಶ್ವರೂಪವಾಗಿ ಪ್ರಕಾಶಿಸುತ್ತಾನೆಂಬ ಬೋಧವು ಅವನಿಗಿರುತ್ತದೆ. ಅಂತೆಯೇ 'ಶಿವೋऽಹಂ' ಆ ಶಿವನೇ ನಾನಿದ್ದೇನೆ. ಈ ತೆರನಾದ ಅನುಭೂತಿಯು ಅವನಿಗಿರುತ್ತದೆ. ಅಂತೆಯೇ ಅವನ ಅಹಂಕಾರಕ್ಕೆ ಪೂರ್ಣಾಹಂತಾ, ಪರಾಹಂತಾ ಎಂಬುದಾಗಿ ಕರೆಯಲಾಗಿದೆ.

ವ್ಯಷ್ಟಿ ಅಹಂಕಾರವು ಸಂಕುಚಿತವಾಗಿದ್ದು, ದುಃಖದಾಯಕವಾಗಿರುತ್ತದೆ. ಆದರೆ ಸಮಷ್ಟಿ ಅಹಂಕಾರವು ಪರಮಾನಂದದಾಯಕವಾಗಿರುತ್ತದೆ. ವ್ಯಷ್ಟಿ ಅಹಂಕಾರವನ್ನು ದೂರ ಮಾಡಿ ಸಮಷ್ಟಿ ಅಹಂಕಾರವನ್ನು ಪ್ರತಿಪಾದಿಸುವ ಸ್ಥಲವೇ ಭಾಂಡಸ್ಥಲವು. ಅನಂತ ಕೋಟಿಗಳಾದ ಬ್ರಹ್ಮಾಂಡಗಳ ಉತ್ಪತ್ತಿ–ಸ್ಥಿತಿ–ಲಯಗಳು ವಿಮರ್ಶ ಶಕ್ತಿಯಿಂದಲೆ ಆಗುತ್ತವೆ. ಪೃಥ್ವಿ, ಅಪ್ಪು, ತೇಜ, ವಾಯು ಮತ್ತು ಆಕಾಶಗಳೆಂಬ ಪಂಚ ಮಹಾಭೂತಗಳಲ್ಲಿ ಆಕಾಶವು ಅತಿ ಸೂಕ್ಷ್ಮವಾದ ಮಹಾಭೂತವು. ಆಕಾಶದಲ್ಲಿಯೇ ಎಲ್ಲ ಜೀವರಾಶಿಗಳ ಉತ್ಪತ್ತಿಯಾಗುತ್ತದೆ. ಮತ್ತು ಅವು ಆಕಾಶದಲ್ಲಿಯೇ ಸ್ಥಿರವಾಗಿರುತ್ತವೆ. ಕೊನೆಗೆ ಅವೆಲ್ಲವುಗಳು ಆಕಾಶದಲ್ಲಿಯೇ ವಿಲಯಹೊಂದುತ್ತವೆ. ಆಕಾಶವು ಸಹ ಒಂದು ಮಹಾಭೂತವಾಗಿರುವುದರಿಂದ ಇದಕ್ಕೂ ಸಹ ಉತ್ಪತ್ತಿ–ಸ್ಥಿತಿ–ಲಯಾದಿಗಳನ್ನು ಹೇಳ

ಬೇಕಾಗುತ್ತದೆ. ಇದು ಅತ್ಯಂತ ಸೂಕ್ಷ್ಮವಾದ ಮಹಾಭೂತವಾಗಿರುವುದರಿಂದ ಅದು ನಮ್ಮೆಲ್ಲರಿಗೆ ದೃಷ್ಟಿಗೋಚರವಾಗುವುದಿಲ್ಲ. ಇದೇ ಪ್ರಕಾರವಾಗಿ ಅನಂತಕೋಟಿ ಭುವನ ಬ್ರಹ್ಮಾಂಡಗಳ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣೀಭೂತವಾದುದು ವಿಮರ್ಶ ಶಕ್ತಿಯು. ಇದು ಸಹ ಆಕಾಶಕ್ಕಿಂತ ಅತಿ ಸೂಕ್ಷ್ಮವಾಗಿರುವುದರಿಂದ ಯಾರಿಗೂ ಕಾಣದು. ಈ ವಿಮರ್ಶ ಶಕ್ತಿಗೇನೇ ಪೂಜ್ಯಪಾದರು ಇಲ್ಲಿ ಭಾಂಡವೆಂದು ಕರೆದಿದ್ದಾರೆ. ಇದಕ್ಕೆ ಕುಂಡಲಿನೀ ಮಹಾಮಾಯಾ, ಶಬ್ದಬ್ರಹ್ಮ, ಶುದ್ಧಮಾಯಾ, ಪರಬಿಂದು ಮುಂತಾದ ಪರ್ಯಾಯ ನಾಮಗಳಿರುತ್ತವೆ.

ಈ ವಿಮರ್ಶ ಶಕ್ತಿಯನ್ನೇ ಕುರಿತು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು.

ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವೋದ್ಭಾಸನಕಾರಿಣೀ ।
ಸಾಕ್ಷಿಣೀ ಸರ್ವಭೂತಾನಾಂ ಸಮಿಂಧೇ ಸರ್ವತೋಮುಖೀ ॥

(ಸಿ. ಶಿ. ೨೦–೩೦)

ಈ ವಿಧವಾಗಿ ಅಪ್ಪಣೆ ಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ವಿಮರ್ಶ ಶಕ್ತಿಯು ಅಧ್ವರೂಪವಾದ ವಿಶ್ವದ ಉತ್ಪತ್ತಿಗೆ ಕಾರಣವಾಗಿರುತ್ತದೆ. ಮತ್ತು ಸರ್ವಭೂತಗಳಿಗೆ ಇದುವೇ ಸಾಕ್ಷಿರೂಪವಾಗಿರುತ್ತದೆ. ಇದಲ್ಲದೆ ಸರ್ವತೋಮುಖವಾಗಿ ಪ್ರಕಾಶಿಸುತ್ತಲಿರುತ್ತದೆ.

ಆಗಮ ಸಿದ್ಧಾಂತದ ಪ್ರಕಾರವಾಗಿ ಜಗತ್ತು ಅಧ್ವರೂಪವಾದುದು. ಈ ಅಧ್ವಗಳು ವರ್ಣ, ಪದ, ಮಂತ್ರ, ಭುವನ, ಕಲಾ ಮತ್ತು ತತ್ತ್ವವೆಂಬುದಾಗಿ ಆರು ವಿಧವಾಗಿರುತ್ತವೆ. ಈ ಅಧ್ವ ಸೃಷ್ಟಿಗೆ ವಿಮರ್ಶಾ ಶಕ್ತಿಯೇ ಕಾರಣೀಭೂತವಾಗಿರುತ್ತದೆ. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ, ಈ ವಿಮರ್ಶಾ ಶಕ್ತಿಯೇ ಅಧ್ವರೂಪವಾದ ಪ್ರಪಂಚದಲ್ಲಿ ಅಭಿವ್ಯಕ್ತವಾಗಿ ತೋರುತ್ತಿರುತ್ತದೆ. ಎತ್ತನೋಡಿದಡತ್ತ ಅದುವೇ ವ್ಯಕ್ತವಾಗಿ ತೋರುತ್ತಿರುತ್ತದೆ. ಭಾಂಡರೂಪದಲ್ಲಿ ಈ ವಿಶ್ವಕ್ಕೆ ಈ ವಿಮರ್ಶೆಯೆ ಆಧಾರಭೂತವಾದುದು. ಸರ್ವತ್ರ ವ್ಯಾಪಕವಾಗಿರೋಣದರಿಂದ ಎಲ್ಲ ಜೀವಿಗಳ ವ್ಯವಹಾರಕ್ಕೆ ಅದು ಸಾಕ್ಷಿರೂಪವೂ ಸಹ ಆಗಿರುತ್ತದೆ. ಅದಕ್ಕೆ ತಿಳಿಯದ ಯಾವ ವ್ಯವಹಾರವೂ ಜಗತ್ತಿನಲ್ಲಿ ಘಟಿಸುವುದಿಲ್ಲ, ಅಂತೆಯೇ ಪೂಜ್ಯಪಾದರು ಇದಕ್ಕೆ ಸರ್ವತೋಮುಖಿ ಎಂಬುದಾಗಿ ಕರೆದಿದ್ದಾರೆ.

ಭಾಂಡರೂಪವಾದ ಈ ವಿಮರ್ಶಶಕ್ತಿಯ ಸ್ವರೂಪವನ್ನೇ ಪುನಃ ಪೂಜ್ಯರು–

ವಿಶ್ವಂ ಯತ್ರ ಲಯಂ ಯಾತಿ ವಿಭಾತ್ಯಾತ್ಮಾ ಚಿದಾಕೃತಿಃ ।
ಸದಾನಂದಮಯಃ ಸಾಕ್ಷಾತ್ ಸಾ ವಿಮರ್ಶಾಮಯೀ ಕಲಾ ॥

(ಸಿ. ಶಿ. ೨೦–೩೧)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವುದರಲ್ಲಿ ಈ ಜಗತ್ತೆಲ್ಲ ಲಯವಾಗಿ ಹೋಗುವುದೋ, ಯಾವುದು ಚಿತ್‌ಸ್ವರೂಪವಾದ ಆತ್ಮವಾಗಿ ಪ್ರಕಾಶಿಸುವದೋ, ಯಾವುದು ಸದಾ ಆನಂದರೂಪವಾಗಿರುವುದೋ ಅದುವೇ ಪರಶಿವನ ವಿಮರ್ಶಶಕ್ತಿಯೆಂಬುದಾಗಿ ತಿಳಿದುಕೊಳ್ಳುವುದೇ ಭಾಂಡಸ್ಥಲವು.

ಈ ವಿಶ್ವವು ವಿಮರ್ಶ ಶಕ್ತಿಯಿಂದಲೇ ಪ್ರಾದುರ್ಭವಿಸಿರೋಣದರಿಂದ ಕೊನೆಗೆ ಅದು ಅಲ್ಲೇ ಲಯವಾಗುತ್ತದೆ. ಕಾರ್ಯವು ತನಗೆ ಉಪಾದಾನವಾದ ಕಾರಣದಲ್ಲಿಯೇ ಲಯವಾಗುವುದು ಪ್ರಕೃತಿಯ ನಿಯಮವೇ ಆಗಿದೆ. ಮಣ್ಣಿನಿಂದ ಉತ್ಪನ್ನವಾದ ಮಡಿಕೆಯು ಭಗ್ನವಾದಾಗ ತನಗೆ ಉಪಾದಾನ ಕಾರಣವಾದ ಮಣ್ಣಿನಲ್ಲಿಯೇ ಲಯವಾಗುತ್ತಿರುವುದನ್ನು ನಾವೆಲ್ಲ ನೋಡುತ್ತೇವೆ. ಹೀಗೆ ಜಗತ್ತಿಗೆ ಉಪಾದಾನ ಕಾರಣವಾಗಿರುವ ಈ ವಿಮರ್ಶಾ ಶಕ್ತಿಯು ಭೂಮಿ–ಜಲಾದಿಗಳಂತೆ ಜಡರೂಪವಾದುದಲ್ಲ, ಅದು ಸಚ್ಚಿದಾನಂದ ಸ್ವರೂಪವೂ ಆಗಿದೆ. ಸಚ್ಚಿದಾನಂದರೂಪವಾದ ವಿಮರ್ಶಶಕ್ತಿಯಿಂದಲೇ ಪರಶಿವ ಬ್ರಹ್ಮವು ಸಚ್ಚಿದಾನಂದ ಸ್ವರೂಪದ ಬೋಧವುಳ್ಳದ್ದಾಗಿರುತ್ತದೆ. ಪರಶಿವ ಬ್ರಹ್ಮನಲ್ಲಿ ಅವಿನಾಭಾವ ಸಂಬಂಧದಿಂದ ಈ ವಿಮರ್ಶ ಶಕ್ತಿಯು ಇರದೇ ಹೋಗಿದ್ದರೆ ಆ ಪರಶಿವ ಬ್ರಹ್ಮವು ಸಚ್ಚಿದಾನಂದ ಸ್ವರೂಪವಾಗಿದ್ದರೂ, ಆ ಸ್ವರೂಪದ ಬೋಧವು ಅದಕ್ಕೆ ಆಗುತ್ತಿರಲಿಲ್ಲ, ಒಂದು ವೇಳೆ ಈ ಸಚ್ಚಿದಾನಂದ ಬೋಧರೂಪವಾದ ವಿಮರ್ಶ ಶಕ್ತಿಯನ್ನು ಒಪ್ಪದೇ ಹೋದರೆ ಆ ಪರಶಿವ ಬ್ರಹ್ಮವು ಜಡರೂಪವಾಗಬೇಕಾಗುವುದು. ''ನ ಶಿವೇನ ವಿನಾ ಶಕ್ತಿಃ ನ ಶಕ್ತಿರಹಿತಃ ಶಿವಃ'' ಎಂಬ ಪ್ರಮಾಣೋಕ್ತಿಗನುಸಾರವಾಗಿ ಶಿವನಿಲ್ಲದೇ ಶಕ್ತಿ ಮತ್ತು ಶಕ್ತಿಯಿಲ್ಲದೇ ಶಿವನು ಸ್ವತಂತ್ರವಾಗಿ ಎಂದೂ ಇರಲಾರರು. ಇವರೀರ್ವರಲ್ಲಿ ಸದಾ ಅವಿನಾಭಾವ ಸಂಬಂಧವಿರುತ್ತದೆ. ಚಂದ್ರ ಮತ್ತು ಚಂದ್ರಿಕೆ, ಪುಷ್ಪ ಮತ್ತು ಸುಗಂಧ ಇವುಗಳಲ್ಲಿ ಪರಸ್ಪರ ಅವಿನಾಭಾವ ಸಂಬಂಧವಿರುವಂತೆ ಶಿವ ಹಾಗೂ ವಿಮರ್ಶ ಶಕ್ತಿಯಲ್ಲಿಯೂ ಸಹ ಇದೇ ರೀತಿಯಾದ ಸಂಬಂಧವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹೀಗೆ ಪರಶಿವನೊಂದಿಗೆ ಅವಿನಾಭಾವಿನಿಯಾಗಿರುವ ಈ ವಿಮರ್ಶ ಶಕ್ತಿಯಿಂದಲೇ ಈ ವಿಶ್ವವು ಉತ್ಪನ್ನವಾಗಿ ಕೊನೆಗೆ ಅಲ್ಲಿಯೇ ಲಯವಾಗುವುದು. ಶಿವನ ಸಚ್ಚಿದಾನಂದ ಸ್ವರೂಪವನ್ನು ಈ ವಿಮರ್ಶ ಶಕ್ತಿಯ ಬಲದಿಂದಲೇ ಶಿವಯೋಗಿಯು ಅನುಭವಿಸುತ್ತಿರುತ್ತಾನೆ. ಇದು ಅಲ್ಲದೇ ಆ ಶಿವಯೋಗಿಯಲ್ಲಿ ಈ ವಿಮರ್ಶ ಶಕ್ತಿಯ ಕೃಪೆಯಿಂದಲೇ ಪರಾಹಂತಾ ಭಾವನೆಯು ಉತ್ಪನ್ನವಾಗಿ ಅವನಿಗೆ 'ಶಿವೋಽಹಂ' ಎಂಬ ಅನುಭೂತಿಯು ಉಂಟಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ 'ಪರಾಹಂತೆ'ಯಿಂದಲೇ ಶಿವನು ಸರ್ವಜ್ಞತ್ವಾದಿ ಗುಣಗಳನ್ನು ಪಡೆಯುತ್ತಾನೆಂಬುದಾಗಿ ತಿಳಿಸಲೋಸುಗ ಪುನಃ–

ಪರಾಹಂತಾ ಸಮಾವೇಶ ಪರಿಪೂರ್ಣ ವಿಮರ್ಶವಾನ್ ।
ಸರ್ವಜ್ಞಃ ಸರ್ವಗಃ ಸಾಕ್ಷೀ ಸರ್ವಕರ್ತಾ ಮಹೇಶ್ವರಃ ॥

(ಸಿ. ಶಿ. ೨೦–೩೨)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಪರಾಹಂತಾ ಸಮಾವೇಶದಿಂದಾಗಿ ಪರಿಪೂರ್ಣ ವಿಮರ್ಶ ಸ್ವರೂಪವನ್ನು ಪಡೆದಿರುವ ಶಿವನು ಸರ್ವಜ್ಞನೂ, ಸರ್ವಸಾಕ್ಷಿಯೂ, ಸರ್ವತ್ರ ವ್ಯಾಪ್ತನೂ, ಸರ್ವಕರ್ತನೂ ಮತ್ತು ಮಹೇಶ್ವರನೆಂಬುದಾಗಿ ಕರೆಸಿಕೊಳ್ಳುತ್ತಾನೆ.

ಕೇವಲ ಪರಿಶುದ್ಧನಾದ ಶಿವನಲ್ಲಿ ಯಾವ ಗುಣಗಳೂ ಇರುವುದಿಲ್ಲ, ಶಿವನಲ್ಲಿ ತೋರುವ ಸರ್ವಜ್ಞತ್ವ, ಸರ್ವಕರ್ತೃತ್ವ, ಸರ್ವಗತ್ವ, ಸರ್ವಸಾಕ್ಷಿತ್ವ ಮತ್ತು

ಮಹೇಶ್ವರತ್ವಾದಿ ಗುಣಗಳು ಈ ವಿಮರ್ಶಶಕ್ತಿಯ ಸಂಬಂಧದಿಂದಲೇ ಪ್ರಾಪ್ತವಾಗಿರುತ್ತವೆ. ಈ ಶಕ್ತಿಯಿರದೇ ಹೋಗಿದ್ದರೆ ಶಿವನು ಒಂದು ಸ್ವಯಂ ಪ್ರಕಾಶವಾದ ರತ್ನದಂತೆ ಜಡವಾಗಿರುತ್ತಿದ್ದನೇ ವಿನಃ ಅವನಿಂದ ಈ ಜಗಲ್ಲೀಲಾದಿ ವ್ಯವಹಾರಗಳು ನಡೆಯುತ್ತಿರಲಿಲ್ಲ. ಆದ್ದರಿಂದಲೇ ವೀರಶೈವ ಸಿದ್ಧಾಂತದಲ್ಲಿ ಶಿವನೊಂದಿಗೆ ಅವಿನಾಭಾವ ಸಂಬಂಧಿನಿಯಾದ ವಿಮರ್ಶ ಶಕ್ತಿಯನ್ನು ಸ್ವೀಕರಿಸಲಾಗಿದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾಂಡರೂಪವಾದ ಈ ವಿಮರ್ಶ ಶಕ್ತಿಯನ್ನೇ ಕುರಿತು ಕೊನೆಯದಾಗಿ–

ವಿಶ್ವಾಧಾರ ಮಹಾಸಂವಿತ್ಪ್ರಕಾಶ ಪರಿಪೂರಿತಮ್ ।
ಪರಾಹಂತಾಮಯಂ ಪ್ರಾಹುರ್ವಿಮರ್ಶಂ ಪರಮಾತ್ಮನಃ ॥

ವಿಮರ್ಶಭಾಂಡವಿನ್ಯಸ್ತವಿಶ್ವತತ್ತ್ವ ವಿಜೃಂಭಣಃ ।
ಅನನ್ಯಮುಖ ಸಂಪ್ರೇಕ್ಷೀ ಮುಕ್ತಃ ಸ್ವಾತ್ಮನಿ ತಿಷ್ಠತಿ ॥

(ಸಿ. ಶಿ. ೨೦, ೩೩–೩೪)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ವಿಶ್ವಕ್ಕೆಲ್ಲ ಆಧಾರಭೂತವಾಗಿರುವ, ಮಹಾಜ್ಞಾನವೆಂಬ ಪ್ರಕಾಶದಿಂದ ಪರಿಪೂರ್ಣವಾಗಿರುವ, ಪರಶಿವನ ವಿಮರ್ಶ ಶಕ್ತಿಗೆ ಶಿವಯೋಗಿಗಳು 'ಪರಾಹಂತಾ' ಎಂಬುದಾಗಿ ಕರೆಯುತ್ತಾರೆ. ಶಕ್ತಿತತ್ತ್ವವನ್ನೇ ಮೊದಲ್ಗೊಂಡು ಪೃಥ್ವೀ ತತ್ತ್ವಪರ್ಯಂತವಾದ ಸರ್ವ ತತ್ತ್ವಗಳಿಗೆ ವಿಮರ್ಶ ಶಕ್ತಿಯೇ ಭಾಂಡರೂಪವಾಗಿರುತ್ತದೆ. ಅಂತೆಯೇ ಶಿವಯೋಗಿಯು ಎಲ್ಲ ತತ್ತ್ವಗಳನ್ನು ಈ ಭಾಂಡದಲ್ಲಿ ಲಯಗೊಳಿಸಿ ಬೇರೆ ಯಾವುದೇ ವಿಚಾರವನ್ನು ತನ್ನ ಮನದಲ್ಲಿ ತರದೇ ತನ್ನಲ್ಲಿಯೇ ತಾನಿದ್ದು ಮುಕ್ತನಾಗುತ್ತಾನೆ.

ವೀರಶೈವ ಸಿದ್ಧಾಂತದ ಪ್ರಕಾರವಾಗಿ ಈ ವಿಶ್ವವು ತತ್ತ್ವಾತ್ಮಕವಾಗಿರುತ್ತದೆ. ಈ ತತ್ತ್ವಗಳನ್ನು ಒಂದರಲ್ಲೊಂದರಂತೆ ವಿಲಯಚಿಂತನಗೊಳಿಸುತ್ತ ಕೊನೆಗೆ ಸರ್ವವೆಲ್ಲವನ್ನು ವಿಮರ್ಶಶಕ್ತಿಯಲ್ಲಿ ಲಯಗೊಳಿಸಿ ಆ ವಿಮರ್ಶಕ ಶಕ್ತಿಯುಕ್ತವಾದ ಪರಶಿವತತ್ತ್ವವನ್ನು ತನ್ನಾತ್ಮರೂಪವನ್ನಾಗಿ ಅನುಸಂಧಾನಿಸಿದಾಗ ಶಿವಯೋಗಿಯು ಮುಕ್ತಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ. ಹೀಗೆ ಈ ಭಾಂಡಸ್ಥಲದಲ್ಲಿ ಶಿವಯೋಗಿಯು ವಿಮರ್ಶ ಶಕ್ತಿಯ ಸ್ವರೂಪವನ್ನರಿತು ಅದರ ಸಹಾಯದಿಂದಲೇ ಪರಶಿವ ತತ್ತ್ವವನ್ನು ತನ್ನಾತ್ಮರೂಪವನ್ನಾಗಿ ತಿಳಿದು ಪರಮ ಕೈವಲ್ಯವನ್ನು ಪಡೆದುಕೊಳ್ಳುತ್ತಾನೆ. ಹೀಗೆ ಶಿವಯೋಗಿಯ ಪರಮ ಕೈವಲ್ಯಕ್ಕೆ ಸಾಧನೀಭೂತವಾದ ವಿಮರ್ಶ ಶಕ್ತಿಯ ಯಥಾರ್ಥ ಸ್ವರೂಪವನ್ನು ತಿಳಿಯಪಡಿಸುವ ಸ್ಥಲವೇ ಭಾಂಡಸ್ಥಲವೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೪ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)



ಆಶೀರ್ವಚನ-೧

# ಭಾಜನಸ್ಥಲ

ವೀರಶೈವ ವಿದ್ವತ್ ಸಂಘದ ಧರ್ಮಾಭಿಮಾನಿ ವಿದ್ಯಾರ್ಥಿಗಳೇ ! ಮತ್ತು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಸಮಸ್ತ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿ ಕೊಂಡು, ಪ್ರಪಂಚದ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ಶ್ರೇಷ್ಠ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳನ್ನು ಕುರಿತು ಆಶೀರ್ವಚನಗಳನ್ನು ದಿನವೂ ಆಲಿಸುತ್ತಿರುವಿರಿ. ನಿನ್ನೆಯ ದಿನ ಭಾಂಡಸ್ಥಲದ ಬಗ್ಗೆ ವಿಚಾರಿಸಲಾಯಿತು. ಇಂದು ಅದರ ಮುಂದಿನ ಸ್ಥಲವಾದ ಭಾಜನ ಸ್ಥಲದ ಬಗ್ಗೆ ವಿವೇಚಿಸೋಣ. ಭಾಜನವೆಂದರೆ ಭಾಂಡಕ್ಕೆ ಆಧಾರವಾದ ತಿರೋಧಾನ ಶಕ್ತಿಯುಳ್ಳ ಪರಶಿವಬ್ರಹ್ಮವೆಂಬುದಾಗಿ ಇಲ್ಲಿ ತಿಳಿಸಲಾಗಿದೆ. ಸಕಲ ಬ್ರಹ್ಮಾಂಡಗಳಿಗೆ ವಿಮರ್ಶ ಶಕ್ತಿಯು ಆಧಾರವಾದರೆ, ಆ ವಿಮರ್ಶ ಶಕ್ತಿಗೆ ತಿರೋಧಾನ ಶಕ್ತಿಯುಳ್ಳ ಪರಶಿವ ಬ್ರಹ್ಮವು ಆಧಾರವಾಗಿರುತ್ತದೆ. ಈ ಪ್ರಪಂಚದಲ್ಲಿಯ ಪ್ರತಿಯೊಂದು ವಸ್ತುವಿಗೂ ಒಂದಿಲ್ಲೊಂದು ಆಧಾರವು ಇದ್ದೇ ಇರುತ್ತದೆ. ಭೌತಿಕ ಪದಾರ್ಥಗಳಿಗೆಲ್ಲ ಪೃಥ್ವಿಯು ಆಧಾರವಾದುದು. ಇದೇ ಪ್ರಕಾರವಾಗಿ ಪೃಥ್ವಿಗೆ ಜಲವು, ಜಲಕ್ಕೆ ಅಗ್ನಿಯೂ, ಅಗ್ನಿಗೆ ವಾಯು ಮತ್ತು ವಾಯುವಿಗೆ ಆಕಾಶವು ಆಧಾರವಾಗಿರುತ್ತದೆ. ಪಂಚಮಹಾಭೂತಗಳು ಉತ್ತರೋತ್ತರ ವಾಗಿ ಒಂದಕ್ಕೊಂದು ಆಧಾರಗಳೂ, ಉತ್ಪತ್ತಿ ಸ್ಥಾನಗಳೂ ಮತ್ತು ವ್ಯಾಪಕಗಳೂ ಆಗಿವೆ. ಅನಂತ ಕೋಟಿ ವಿಸ್ತೀರ್ಣವಾದ ಪೃಥ್ವಿಯು ನಮಗೆ ಬಹು ದೊಡ್ಡದಾಗಿ ತೋರು ತ್ತಿದ್ದರೂ, ಪೃಥ್ವಿಗೆ ಆಧಾರವಾಗಿರುವ ಜಲವು ಅದಕ್ಕಿಂತಲೂ ವ್ಯಾಪಕವಾಗಿರುತ್ತದೆ. ಶಾಸ್ತ್ರಜ್ಞರ ಪ್ರಕಾರವಾಗಿ ಪೃಥ್ವಿಗಿಂತಲೂ ಜಲವು ಎಪ್ಪತ್ತು ಪ್ರತಿಶತ (೭೦%) ಬೃಹತ್ತರ ವಾದುದೆಂದು ತಿಳಿದುಬರುತ್ತದೆ. ನಾವು ಭೂಮಿಯನ್ನು ಅಗಿಯುತ್ತ ಹೋದಂತೆಲ್ಲ ನಮಗೆ ಎಲ್ಲೆಡೆ ಜಲವು ದೊರೆಯುತ್ತಿರುವುದು ಸರ್ವಾನುಭವಸಿದ್ಧವಾದುದು. ಇದೇ ಪ್ರಕಾರವಾಗಿ ಜಲ ತತ್ತ್ವದ ಉತ್ಪತ್ತಿಗೆ ಕಾರಣೀ ಭೂತವಾದುದು ಅಗ್ನಿ ತತ್ವವು ಜಲಕ್ಕೆ ಆಧಾರವಾಗಿರುತ್ತದೆ. ಉಷ್ಣಾಂಶವು ಹೆಚ್ಚಾದಾಗ ಮೈಯಲ್ಲಿ ಬೆವರು ಬಿಡುವುದನ್ನು ಹಾಗೂ ಪ್ರಕೃತಿಯಲ್ಲಿ ಮಳೆ ಬರುವುದನ್ನು ಕಾಣುತ್ತೇವೆ. ಇದರಿಂದ ಅಗ್ನಿಯೇ ಜಲದ ಉತ್ಪತ್ತಿಗೆ ಕಾರಣವೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ಅಗ್ನಿಯು ಜಲಕ್ಕೆ ಆಧಾರ ವೆಂಬುದಾಗಿ ಅರ್ಥೈಸಿಕೊಳ್ಳಬೇಕು. ಇದರಂತೆ, ಅಗ್ನಿಯ ಉತ್ಪತ್ತಿಗೆ ಕಾರಣವಾಗಿ ಅದಕ್ಕೆ ಆಧಾರವಾದುದು ವಾಯುತತ್ತ್ವವು, ವಾಯುವಿನಿಂದಲೇ ಅಗ್ನಿಯು ಪ್ರಜ್ವಲವಾಗುತ್ತದೆ. ವಾಯು ಬರದೇಯಿದ್ದರೆ ಅದು ನಂದಿಹೋಗುವುದು. ಅಂತೆಯೇ ವಾಯು ಅಗ್ನಿಗೆ

ಆಧಾರವೆಂಬುದು ಸಿದ್ಧವಾಗುತ್ತದೆ. ಇದರಂತೆ ವಾಯುವಿಗೆ ಆಧಾರವಾದುದು ಆಕಾಶವು. ವಾಯುವು ಆಕಾಶದಲ್ಲಿಯೇ ಹುಟ್ಟಿ, ಅಲ್ಲಿಯೇ ಸಂಚರಿಸಿ, ಕೊನೆಗೊಂದು ದಿನ ಅಲ್ಲಿಯೇ ಲಯವಾಗುವುದು. ಅಂತೆಯೇ ಆಕಾಶವು ವಾಯುವಿಗೆ ಆಧಾರ ವೆಂಬುದಾಗಿ ಹೇಳಿದ್ದಾರೆ. ಹೀಗೆ ಈ ಪಂಚಮಹಾಭೂತಗಳು ಒಂದಕ್ಕೊಂದು ಆಧಾರ ವಾಗಿ ಭೂತಾಧಾರವಾದ ಆಕಾಶವು ವಿಮರ್ಶ ಶಕ್ತಿಯಲ್ಲಿ ಅಡಕವಾಗುತ್ತದೆ. ಅಂತೆಯೇ ಆಕಾಶಕ್ಕೆ ಆಧಾರವಾದುದು ವಿಮರ್ಶ ಶಕ್ತಿಯು. ಪಾತ್ರೆಯೊಳಗೆ ಪಾತ್ರೆಯನ್ನು ಈ ಪಾತ್ರೆಯೊಳಗೆ ಇನ್ನೊಂದು ಪಾತ್ರೆಯನ್ನು, ಅದರೊಳಗೆ ಮತ್ತೊಂದು ಪಾತ್ರೆಯನ್ನು ಇಟ್ಟಾಗ ಅನಂತ ಪಾತ್ರೆಗಳನ್ನೊಳಗೊಂಡ ಒಂದೇ ಪಾತ್ರೆಯು ನೋಡುವವರಿಗೆ ಕಾಣು ವಂತೆ ಸಕಲ ಭುವನ ಬ್ರಹ್ಮಾಂಡಗಳನ್ನೆಲ್ಲ ತನ್ನೊಳಗೆ ಅಡಗಿಸಿಕೊಂಡ ವಿಮರ್ಶ ಶಕ್ತಿಯೆಂಬ ಭಾಂಡವು ತಿರೋಧಾನ ಶಕ್ತಿ ವಿಶಿಷ್ಟವಾದ ಪರಶಿವ ಬ್ರಹ್ಮವೆಂಬ ಭಾಜನದಲ್ಲಿ ನಿಹಿತ ವಾಗಿರುತ್ತದೆ. ಈ ವಿಷಯವನ್ನು ತಿಳಿಯಪಡಿಸುವ ಸ್ಥಲವೇ ಭಾಜನಸ್ಥಲವು. ಅದನ್ನೇ ಪೂಜ್ಯಪಾದರು–

> ಸಮಸ್ತಜಗದಂಡಾನಾಂ ಸರ್ಗಸ್ಥಿತ್ಯಂತಕಾರಣಮ್ ।
> ವಿಮರ್ಶೋ ಭಾಸತೇ ಯತ್ರ ತದ್ಭಾಜನಮಿಹೋಚ್ಯತೇ ॥

(ಸಿ. ಶಿ. ೨೦–೩೫)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಸಕಲ ಜಗದಂಡಗಳ ಸೃಷ್ಟಿ, ಸ್ಥಿತಿ ಮತ್ತು ಲಯಕ್ಕೆ ಕಾರಣೀಭೂತವಾದ ವಿಮರ್ಶನಾಮಕವಾದ ಪರಬಿಂದುವು ಶಿವಸಮೇತವಾದ ಯಾವ ತಿರೋಧಾನ ಶಕ್ತಿಯಲ್ಲಿ ಪ್ರಕಾಶಿಸುತ್ತಿರುವುದೋ ಆ ತಿರೋಧಾನ ಶಕ್ತಿಯುಳ್ಳ ಪರಶಿವ ಬ್ರಹ್ಮವೇ ಭಾಜನವೆಂಬುದಾಗಿ ತಿಳಿದುಕೊಳ್ಳಬೇಕು.

ವಿಶ್ವದ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣೀಭೂತವಾದ ವಿಮರ್ಶ ಶಕ್ತಿಗೆ ಭಾಜನ ವಾದದ್ದು ಅರ್ಥಾತ್ ಆಧಾರವಾದದ್ದು ತಿರೋಧಾನ ಶಕ್ತಿಯುಳ್ಳ ಪರಶಿವಬ್ರಹ್ಮವೆಂಬು ದಾಗಿ ನೀವೆಲ್ಲ ತಿಳಿದುಕೊಂಡಿದ್ದೀರಿ. ಇಲ್ಲಿಯವರೆಗೆ ಒಂದೊಂದಕ್ಕೆ ಒಂದೊಂದು ಆಧಾರವೆಂಬ ವಿಷಯವು ಸವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ಇಲ್ಲಿಯವರೆಗೆ ಹೇಳಿದ ಎಲ್ಲವುಗಳಿಗೆ ಶಿವನು ಭಾಜನನಾದರೆ ಅರ್ಥಾತ್ ಆಧಾರನಾದರೆ, ಆ ಶಿವನಿಗೆ ಆಧಾರ ವಾದುದೇನು ? ಎಂಬ ಪ್ರಶ್ನೆಯು ಉದ್ಭವಿಸುವುದು. ಶಿವನಿಗೆ ಆಧಾರವಾದ ಇನ್ನೋರ್ವ ಶಿವನನ್ನು ಒಪ್ಪಿದರೆ, ಅವನಿಗೆ ಆಧಾರವಾಗಿ ಮತ್ತೋರ್ವ ಶಿವನನ್ನು ಒಪ್ಪಬೇಕಾಗುವುದು. ಹೀಗೆ ಆಧಾರ ಪರಂಪರೆಯನ್ನು ಬೆಳೆಸುತ್ತ ಹೋದರೆ ಆ ಪರಂಪರೆ ಎಲ್ಲಿಗೂ ನಿಲ್ಲದ ಕಾರಣದಿಂದಾಗಿ ಅನವಸ್ಥಾದೋಷಯುಕ್ತವಾಗುತ್ತದೆ. ಆದ್ದರಿಂದ ಹಾಗೆ ಒಪ್ಪುವುದು ಸರಿಯಾದುದಲ್ಲ. ಇಲ್ಲವಾದರೆ ರಾಜಕುಮಾರಿಗೆ ಹೇಳಿದ ಮುಗಿಯದ ಕಥೆ ಯಂತೆ ಇದೂ ಸಹ ಆಗಬಹುದು.

ಓರ್ವ ರಾಜಕುಮಾರಿಗೆ ಕಥೆ ಕೇಳುವುದೆಂದರೆ ಬಲು ಇಷ್ಟ. ಬಾಲ್ಯದಿಂದಲೇ ಈ ಅಭ್ಯಾಸವು ಅವಳಲ್ಲಿ ಬೆಳೆದುಬಂದಿತ್ತು. ಮನೆಯಲ್ಲಿ ತಂದೆ, ತಾಯಿ, ಅಜ್ಜಿ ಮುಂತಾದವ ರಿಂದ ಯಾವಾಗಲೂ ಕಥೆ ಕೇಳುವುದೊಂದೇ ಅವಳಿಗೆ ಹುಚ್ಚು. ಎಷ್ಟು ಕಥೆಗಳನ್ನು

ಕೇಳಿದರೂ ಇನ್ನೂ ಕೇಳಬೇಕೆನ್ನುವ ಬಯಕೆಯವಳಿಗೆ. ಹೀಗೆ ಕಥೆ ಕೇಳುತ್ತಲೇ ಬೆಳೆದು ದೊಡ್ಡವಳಾದಳು. ರಾಜಕುಮಾರಿಯು ವಯಸ್ಕಳಾದುದನ್ನು ಕಂಡು ಮಹಾರಾಜನು ಮಗಳ ಲಗ್ನಕ್ಕಾಗಿ ಯೋಚಿಸತೊಡಗಿದನು. ತನ್ನ ಸಂಪರ್ಕದಲ್ಲಿರುವ ರಾಜಕುಮಾರರ ಭಾವಚಿತ್ರಗಳನ್ನು ತರಿಸಿ ಮಗಳಿಗೆ ತೋರಿಸಿ ಇದರಲ್ಲಿ ನಿನಗೆ ಯೋಗ್ಯರಾದವರನ್ನು ಆರಿಸಿ ತಿಳಿಸೆಂಬುದಾಗಿ ತಿಳಿಹೇಳಿದನು. ರಾಜಕುಮಾರಿಯು ಸ್ವರೂಪ ಸುಂದರರಾದ ರಾಜಕುಮಾರರ ಭಾವಚಿತ್ರಗಳನ್ನು ನೋಡಿ ಸಂತುಷ್ಟಳಾದಳೇನೋ ನಿಜ. ಆದರೆ ಇವರುಗಳಲ್ಲಿ ತನಗೆ ಯೋಗ್ಯರಾದವರು ಯಾರು ? ಎಂಬುದನ್ನು ಕೇವಲ ಭಾವಚಿತ್ರವನ್ನು ನೋಡಿ ನಿರ್ಣಯಿಸುವುದು ಅವಳಿಗೆ ಅಸಾಧ್ಯವಾಯಿತು. ಆಗ ಅವಳು ''ಮಹಾರಾಜನೇ ಇವರೆಲ್ಲ ರಾಜಕುಮಾರರು ಸ್ವರೂಪ ಸುಂದರರೇನೋ ನಿಜ. ಆದರೆ ನನಗೆ ಕಥೆ ಹೇಳಿ ತೃಪ್ತಿಪಡಿಸುವವರಾರು ? ನನ್ನ ಇಚ್ಛೆಯೇನೆಂದರೆ ಎಂದೂ ಮುಗಿಯದ ಕಥೆಯನ್ನು ಹೇಳಿ ಸಂತೋಷಪಡಿಸುವ ವರನನ್ನು ನಾನು ವರಿಸಬೇಕೆಂದಿದ್ದೇನೆ. ಆದ್ದರಿಂದ ನೀವು ನಮ್ಮ ಇಡೀ ರಾಜ್ಯದ ತುಂಬೆಲ್ಲ ಅಷ್ಟೇ ಅಲ್ಲ, ಹೊರ ರಾಜ್ಯಗಳಲ್ಲಿಯೂ ಡಂಗುರವನ್ನು ಸಾರಿಸಿ ಕಥೆ ಹೇಳುವ ವರಗಳನ್ನು ಆಹ್ವಾನಿಸಿ, ಆಗ ನಾನು ಅವರಲ್ಲಿ ನನಗೆ ಯೋಗ್ಯರಾದವರನ್ನು ಆಯ್ಕೆ ಮಾಡಿಕೊಳ್ಳುತ್ತೇನೆ'' ಎಂದಳು. ತನ್ನ ಪ್ರೀತಿಯ ಮಗಳ ಇಚ್ಛೆಯನ್ನರಿತ ರಾಜನು ತನ್ನ ಪ್ರಾಂತ ಹಾಗೂ ಪರ ಪ್ರಾಂತಗಳಲ್ಲಿ ಡಂಗುರವನ್ನು ಸಾರಿಸಿ ಒಂದು ಬೃಹತ್ತರವಾದ ಸ್ವಯಂವರನ್ನು ಏರ್ಪಡಿಸಿದನು. ಆ ಸ್ವಯಂವರದಲ್ಲಿ ಶೂರರೂ, ಸುಂದರರೂ ಆದ ಅನೇಕ ರಾಜಕುಮಾರರು ರಾಜಕುಮಾರಿಯ ಇಚ್ಛೆಯನ್ನು ಪೂರ್ಣಗೊಳಿಸಿ ಅವಳೊಂದಿಗೆ ವಿವಾಹವಾಗುವ ಉದ್ದೇಶದಿಂದ ಅನೇಕ ಕಥಾಗ್ರಂಥಗಳನ್ನಭ್ಯಸಿಸಿ ಬಹು ಸುಂದರ ಸುಂದರಗಳಾದ ಕಥೆಗಳನ್ನು ಮನನ ಮಾಡಿಕೊಂಡು ಬಂದು ಉಪಸ್ಥಿತರಾದರು.

ಅವರೆಲ್ಲ ಒಬ್ಬೊಬ್ಬರಾಗಿ ತಮ್ಮ ಕಥೆಗಳನ್ನು ಹೇಳತೊಡಗಿದರು. ಅವರು ಹೇಳುತ್ತಿರುವ ಕಥೆಗಳನ್ನು ಕೇಳುತ್ತಿರುವಾಗ ರಾಜಕುಮಾರಿಗೆ ಎಲ್ಲಿಲ್ಲದ ಸಂತೋಷ. ಒಂದು ಕಥೆ ಮುಗಿದೊಡನೆ ಮತ್ತೊಂದು ಕಥೆ, ಅದು ಮುಗಿದೊಡನೆ ಇನ್ನೊಂದು ಕಥೆ, ಹೀಗೆ ಹೇಳಿ ಹೇಳಿ ಕಥೆಗಳು ಮುಗಿದೊಡನೆ ಇನ್ನು ಇವರಿಂದ ಕಥೆ ಹೇಳುವುದು ಸಾಧ್ಯವಿಲ್ಲವೆಂದಾಗ ರಾಜಕುಮಾರಿಯು ಅತ್ಯಂತ ಖಿನ್ನಳಾಗಿ ಆ ರಾಜಕುಮಾರರನ್ನೆಲ್ಲ ತಿರಸ್ಕರಿಸಿದಳು. ಹೀಗೆ ಎಲ್ಲ ದೇಶದ ರಾಜಕುಮಾರರು ಆ ರಾಜಕುಮಾರಿಗೆ ಕಥೆ ಹೇಳಿ ತೃಪ್ತಿಪಡಿಸಲಸಮರ್ಥರಾಗಿ ತಮ್ಮ ತಮ್ಮ ದೇಶಗಳಿಗೆ ನಿರಾಶರಾಗಿ ತೆರಳಿದರು. ಇತ್ತ ರಾಜಕುಮಾರಿಯ ವಿವಾಹದ ಸಮಸ್ಯೆ ಹಾಗೇ ಉಳಿದುಕೊಂಡಿತು. ರಾಜನು ಮಗಳ ಈ ಹಟಮಾರಿತನಕ್ಕೆ ಚಿಂತಿತನಾಗಿ ಕ್ಷತ್ರಿಯರಾರೂ ಸಮರ್ಥರಾಗದೇ ಹೋದಾಗ ಬ್ರಾಹ್ಮಣ ಕುಲೋತ್ಪನ್ನನಾದ, ವಿದ್ವಾಂಸನಾದ, ಮತ್ತು ಕಥೆ ಹೇಳಲು ಸಮರ್ಥನಾದ ವರನಿಗೆ ಮಗಳನ್ನು ಕೊಟ್ಟರಾಯಿತೆಂಬ ಉದ್ದೇಶದಿಂದ ಜಗತ್ತಿನ ಮೂಲೆ ಮೂಲೆಗಳಿಂದ ಪುರಾಣ ಪ್ರವಚನ ಪಟುಗಳೂ ಕಥಾಕುಶಲರೂ ಆದ ವಿದ್ವಾಂಸರನ್ನೆಲ್ಲ ಸ್ವಯಂವರಕ್ಕೆ ಆಹ್ವಾನಿಸಿದನು. ಆ ವಿದ್ವಾಂಸರೂ ಸಹ ತಮಗೆ ಹೊರಲು ಸಾಧ್ಯವಲ್ಲದಷ್ಟು ಕಥೆ ಕಾದಂಬರಿಗಳ ಗ್ರಂಥ ರಾಶಿಯನ್ನೇ ತಂದಿಟ್ಟುಕೊಂಡು ಬಹು ಸುಂದರಗಳಾದ ನೀತಿಬೋಧಕಗಳೂ, ತತ್ವ ಬೋಧಕಗಳೂ, ಹಾಸ್ಯಪ್ರದಗಳೂ ಆದ ಕಥೆಗಳನ್ನು ಹೇಳತೊಡಗಿದರು. ಹೀಗೆಯೆ

ಮಾಸ ಮಾಸ ಪರ್ಯಂತವಾಗಿ ಈ ಕಾರ್ಯಕ್ರಮವು ನಡೆದೇ ಇತ್ತು, ಈ ಪ್ರಪಂಚದಲ್ಲಿ ಮುಗಿಯಲಾರದ ಕಥೆಯು ಎಲ್ಲಾದರೂ ಇರಬಹುದೇ ! ಸ್ವಯಂವರಕ್ಕೆ ಬಂದ ವಿದ್ವಾಂಸರ ಪುಸ್ತಕ–ಮಸ್ತಕಗಳಲ್ಲಿಯ ಕಥೆಗಳೆಲ್ಲ ಮುಗಿದು ಹೋದವು. ಯಾವಾಗ ಅವರು ಇದರ ಮುಂದೆ ನಮಗೆ ಕಥೆಯು ಬರುವುದಿಲ್ಲವೆಂದು ಹೇಳಿದರೋ, ಆಗ ರಾಜಕುಮಾರಿಯು ಪುನಃ ನಿರಾಶಳಾದಳು. ಮಗಳ ಈ ದಯನೀಯ ಸ್ಥಿತಿಯನ್ನು ಕಂಡು ರಾಜನು ಪಂಡಿತರಿಗೆಲ್ಲ ಕನ್ಯಾದಾನವೊಂದನ್ನು ಹೊರತುಪಡಿಸಿ ಉಳಿದೆಲ್ಲ ದಾನಗಳನ್ನಿತ್ತು ಅವರನ್ನು ತೃಪ್ತಿಪಡಿಸಿ ಕಳಿಸಿದನು.

ಹೀಗೆ ಬ್ರಾಹ್ಮಣ, ಕ್ಷತ್ರಿಯ ಸಮಾಜದ ವರಗಳೆಲ್ಲ ನಿರಾಶರಾದ ಬಳಿಕ ರಾಜನು ಈ ವರ್ಣ ವ್ಯವಸ್ಥೆಯನ್ನು ಮೀರಿ ಯಾವುದೇ ಜಾತಿ ಧರ್ಮದವನಿರಬಹುದು. ಅವನು ಕುರೂಪನೇ, ಸುರೂಪನೇ ಇರಬಹುದು ಕೇವಲ ನನ್ನ ಮಗಳಿಗೆ ಸಾಕು ಎನ್ನುವವರೆಗೆ ಯಾರು ಕಥೆ ಹೇಳುತ್ತಾರೆಯೋ, ಅವರಿಗೆ ನನ್ನ ಮಗಳನ್ನು ಮತ್ತು ನನ್ನ ರಾಜ್ಯವೆಲ್ಲವನ್ನು ಸಮರ್ಪಿಸುತ್ತೇನೆ. ಕಾರಣ ಅಂಥವರಾರಾದರೂ ಇದ್ದರೆ ತನ್ನ ಆಸ್ಥಾನಕ್ಕೆ ಬರಬೇಕೆಂಬುದಾಗಿ ತನ್ನ ರಾಜ್ಯದ ಒಳಹೊರಗೆಲ್ಲ ಡಂಗುರ ಹಾಕಿಸಿದನು. ರಾಜಕುಮಾರಿಯ ಕಥೆ ಕೇಳುವ ಹುಚ್ಚುತನವು ರಾಜ್ಯದ ತುಂಬೆಲ್ಲ ಒಂದು ಚರ್ಚೆಯ ವಿಷಯವೇ ಆಗಿ ಹೋಯಿತು. ಮನೆಯಲ್ಲಿ, ಓಣಿಯಲ್ಲಿ, ಊರಲ್ಲಿ ಇಷ್ಟೇ ಅಲ್ಲ ವಾಹನಗಳಲ್ಲಿಯೂ ಸಹ ಇಬ್ಬರು ಪರಿಚಿತರು ಒಬ್ಬರನ್ನೊಬ್ಬರು ಸಂದರ್ಶಿಸಿದಾಗ ಅವರೀರ್ವರ ಮೊದಲ ಚರ್ಚೆಯ ವಿಷಯವೆಂದರೆ ರಾಜಕುಮಾರಿಯ ಕಥೆ ಕೇಳುವ ಹುಚ್ಚುತನವೇ. ಹೀಗೆಯೇ ಅನೇಕ ದಿನಗಳು ಉರುಳಿದವು. ಈ ವಿಷಯವು ಒಬ್ಬ ರೈತ ತರುಣನಿಗೆ ತಿಳಿಯಿತು. ಅವನು ಅಷ್ಟೊಂದು ಕಲಿತವನಾಗಿರದಿದ್ದರೂ ಬಹಳಷ್ಟು ಪ್ರತ್ಯುತ್ಪನ್ನಮತಿಯುಳ್ಳವನಾಗಿದ್ದನು. ಯಾವುದೇ ಕಠಿಣವಾದ ಸಮಸ್ಯೆಯಿದ್ದರೂ ಅದನ್ನು ಸಹಜವಾಗಿ ಬಗೆಹರಿಸುವ ಕಲೆಯನ್ನು ಕರಗತಮಾಡಿಕೊಂಡವನಾಗಿದ್ದನು. ರಾಜಕುಮಾರಿಗೆ ಕಥೆ ಹೇಳಿ ಸಾಕೆನಿಸಿದರೆ ಅವಳೊಂದಿಗೆ ವಿವಾಹವಾಗುವುದರ ಜೊತೆಗೆ ರಾಜ್ಯಸಿಂಹಾಸನವೂ ಸಹ ದೊರೆಯುವುದೆಂಬ ವಿಷಯವನ್ನರಿತು, ತಾನು ಆ ರಾಜನ ಆಸ್ಥಾನಕ್ಕೆ ತೆರಳಿದನು. ದೊಡ್ಡ ಅಂಚಿನ ದೋತ್ರ, ಚೌಬಂದಿ ಅಂಗಿ, ರೇಶ್ಮಿಯ ರುಮಾಲ, ಹೆಗಲಮೇಲೊಂದು ಕಂಬಳಿ, ಕೈಯಲ್ಲೊಂದು ಬಡಿಗೆಯನ್ನು ಹಿಡಿದುಕೊಂಡು ಅರಮನೆಯ ಮಹಾದ್ವಾರಕ್ಕೆ ಬಂದನು. ಆಗ ದ್ವಾರಪಾಲಕರು ನೀನಾರು ? ಏತಕ್ಕಾಗಿ ಬಂದಿರುವೆ? ಎಂಬುದಾಗಿ ಪ್ರಶ್ನಿಸಲು ತಾನು ಬಂದ ಉದ್ದೇಶವನ್ನು ಅವರಿಗೆ ತಿಳಿಸಿದನು. ಎಷ್ಟೋ ದಿನಗಳಿಂದ ಕಥೆ ಹೇಳುವವರು ಬಾರದೇಯಿರೋಣದರಿಂದ ರಾಜಧಾನಿಯಲ್ಲೆಲ್ಲ ಒಂದು ತೆರನಾದ ಉದಾಸೀನತೆ ಪಸರಿಸಿತ್ತು, ಇನ್ನೇನು ನಮ್ಮ ರಾಜಕುಮಾರಿಗೆ ಸಾಕಾಗುವವರೆಗೆ ಕಥೆ ಹೇಳುವ ವರಗಳು ಬರುವದಿಲ್ಲವೆಂದು ಎಲ್ಲರೂ ತಿಳಿದುಕೊಂಡು ನಿರಾಶರಾಗಿರುವ ಅವರುಗಳಿಗೆ ಇವನೊಂದು ಆಶಾಕಿರಣದಂತೆ ಕಂಗೊಳಿಸಿದನು. ಆಗ ದ್ವಾರಪಾಲಕರು ಇವನನ್ನು ಅತ್ಯಾದರಗಳಿಂದ ರಾಜನಲ್ಲಿಗೆ ಕರೆದೊಯ್ದು ಇವನ ಪರಿಚಯ ಮಾಡಿ ಕೊಟ್ಟರು. ಆಗ ರಾಜನಿಗೂ ಸಹ ಎಲ್ಲಿಲ್ಲದ ಸಂತೋಷ. ವರನು ಯಾವುದೇ ಜಾತಿಯವನಾಗಿರಲಿ, ನನ್ನ ಮಗಳಿಗೆ ಕಥೆ ಹೇಳಿ ಅವಳ ಮುಖದಿಂದ ಸಾಕು ಎನ್ನುವ ಶಬ್ದವು

ಬರುವಂತೆ ಮಾಡಿದರೆ ಸಾಕು ! ಎಂಬ ಉದ್ದೇಶದಿಂದ ಮರುದಿನ ತನ್ನ ದರ್ಬಾರದಲ್ಲಿ ಮಗಳಿಗೆ ಕಥೆ ಹೇಳುವ ಕಾರ್ಯಕ್ರಮವನ್ನು ಏರ್ಪಡಿಸಿದನು. ಬಹುದಿನಗಳ ನಂತರ ಒಬ್ಬ ಕಥಾಕಾರನು ಬಂದಿರುವುದನ್ನು ತಿಳಿದು ಊರಿನ ಜನರೂ ಸಹ ಅವನ ಕಥೆಯನ್ನು ಕೇಳಲು ಬಂದು ಕುಳಿತರು. ಉನ್ನತಾಸನದಲ್ಲಿ ಇವನಿಗೆ ಕೂಡ್ರುವ ವ್ಯವಸ್ಥೆಯನ್ನು ಮಾಡಲಾಗಿತ್ತು, ಇವನ ಎದುರಿಗೆ ಸಮಾನವಾಗಿಯೇ ಏರ್ಪಡಿಸಿದ ರಾಜಾಸನದ ಮೇಲೆ ಮಹಾರಾಜ ಹಾಗೂ ಅವನ ಮಗಳು ಮತ್ತು ಅವನ ಪರಿವಾರವೆಲ್ಲ ಕುಳಿತುಕೊಂಡಿತು. ಎಲ್ಲ ವ್ಯವಸ್ಥೆಯಾದ ಮೇಲೆ ರಾಜನು ಆ ವ್ಯಕ್ತಿಯನ್ನು ಕುರಿತು ಕಥೆ ಹೇಳಲು ವಿನಂತಿಸಿಕೊಂಡನು. ಆಗ ಆ ವ್ಯಕ್ತಿಯು ಕಥೆಯನ್ನು ಈ ರೀತಿಯಾಗಿ ಹೇಳತೊಡಗಿದನು–

ನಮ್ಮ ದೇಶದಲ್ಲಿ ಅತಿ ಪ್ರಾಚೀನ ಕಾಲದೊಳಗೆ ಓರ್ವ ಒಕ್ಕಲಿಗನಿದ್ದನು. ಎಲ್ಲ ಊರುಗಳಲ್ಲಿ ಅವನವೇ ಹೊಲಗಳು. ಒಮ್ಮೆ ದೇಶದಲ್ಲಿ ಸುಭಿಕ್ಷೆಯಾಗಿ ಬೆಳೆಗಳು ಹುಲುಸಾಗಿ ಬೆಳೆದವು. ಇವನು ತನ್ನ ಎಲ್ಲ ಹೊಲಗಳಲ್ಲಿ ಜೋಳವನ್ನೇ ಬಿತ್ತಿದ್ದನು. ಜೋಳದ ರಾಶಿಯನ್ನು ಮಾಡುವ ಪ್ರಸಂಗ ಬಂದಾಗ ಒಂದು ವಿಶಾಲವಾದ ಭೂಪ್ರದೇಶದಲ್ಲಿ ಕಣವನ್ನು ತಯಾರಿಸಿ ಅಲ್ಲಿ ಜೋಳದ ರಾಶಿಯನ್ನು ಮಾಡತೊಡಗಿದನು. ಹೀಗೆ ಇವನು ಹೇಳುತ್ತಿರುವ ಈ ಕಥೆಯನ್ನು ರಾಜಕುಮಾರಿಯು ಬಹು ಪ್ರೀತಿಯಿಂದ ಕೇಳುತ್ತ ಹೂಂ ಹೂಂ ಎನ್ನುತ್ತಿದ್ದಳು. ಹೀಗೆಯೇ ಕಥೆ ಮುಂದೆ ಸಾಗಿತು. ಆಗ ಕಥಾಕಾರನು ಮುಂದುವರೆದು ಹೇಳಿದ್ದೇನೆಂದರೆ ಆ ಒಕ್ಕಲಿಗನು ಮಾಡಿದ ಜೋಳದ ರಾಶಿಯು ಆಕಾಶದ ಅಂಚನ್ನೇ ತಲುಪುವಷ್ಟು ಉನ್ನತವಾಗಿ ನಿಂತಿತ್ತು, ಈ ಜೋಳದ ರಾಶಿಯನ್ನು ನೋಡಿ ಆ ರಾಜ್ಯದ ಗುಬ್ಬಿಗಳೆಲ್ಲ ಆ ರಾಶಿಯ ಸಮೀಪಕ್ಕೆ ಬಂದು ಏಕಕಾಲದಲ್ಲಿಯೇ ಜೋಳದ ರಾಶಿಗೆ ಮುತ್ತಿಗೆಯನ್ನು ಹಾಕಲು ಬಂದವು. ಆಗ ಆ ಒಕ್ಕಲಿಗನು ಎಲ್ಲ ಗುಬ್ಬಿಗಳಿಗೆ ಹೇಳಿದ್ದೇನೆಂದರೆ ಈ ವರ್ಷದ ಈ ರಾಶಿಯನ್ನು ನಾನು ನಿಮಗಾಗಿಯೇ ಮೀಸಲಾಗಿಡಬೇಕೆಂದಿದ್ದೇನೆ. ಕಾರಣ ನೀವು ಒಬ್ಬೊಬ್ಬರಾಗಿ ಬಂದು ಒಂದೊಂದು ಕಾಳನ್ನು ತೆಗೆದುಕೊಂಡು ಹೋಗಬೇಕು. ಹೀಗೆ ಮಾಡೋಣದರಿಂದ ಒಂದು ಶಿಸ್ತಿನ ವ್ಯವಸ್ಥೆಯಾಗುವುದಲ್ಲದೇ, ನಮ್ಮ ದೇಶದಲ್ಲಿರುವ ಗುಬ್ಬಿಗಳ ಅಂಕಿ ಸಂಖ್ಯೆಗಳನ್ನು ಸಹ ಗುರುತಿಸಲು ಸಾಧ್ಯವಾಗುವುದು. ಇದು ಅಲ್ಲದೆ ನಾನು ಈ ವರ್ಷ ಎಷ್ಟು ಜೋಳದ ಕಾಳುಗಳನ್ನು ಬೆಳೆದಿದ್ದೇನೆ ಎನ್ನುವುದು ನನಗೆ ತಿಳಿದುಬರುವುದು. ಒಕ್ಕಲಿಗನ ಈ ಮಾತುಗಳನ್ನು ಕೇಳಿದ ಗುಬ್ಬಿಗಳೆಲ್ಲ ಸಾಲಾಗಿ ಕುಳಿತುಕೊಂಡು ಒಂದೊಂದಾಗಿ ಬಂದು ಒಂದೊಂದು ಕಾಳನ್ನು ತೆಗೆದುಕೊಂಡು ಹೋಗತೊಡಗಿದವು. ಈ ಕಥೆಯನ್ನು ಹೇಳುತ್ತಿರುವ ಆ ರೈತ ಯುವಕನು ರಾಜಕುಮಾರಿಯನ್ನುದ್ದೇಶಿಸಿ ರಾಜಕುಮಾರಿಯವರೇ ! ನಾನು ಹೇಳಿದಂತೆಲ್ಲ ನೀವು ಹೂಂಗುಡತ್ತ ಹೋಗಬೇಕು ಎಂಬುದಾಗಿ ರಾಜಕುಮಾರಿಯನ್ನು ಎಚ್ಚರಗೊಳಿಸಿ ಮೊದಲನೆಯ ಗುಬ್ಬಿಯು ಬಂದಿತು ಒಂದು ಕಾಳನ್ನು ತೆಗೆದುಕೊಂಡು ಹೋಯಿತು. ಈ ಕಥೆಯನ್ನು ಕೇಳುತ್ತಿದ್ದ ರಾಜಕುಮಾರಿಯು ಅವನ ಪ್ರತಿಯೊಂದು ವಾಕ್ಯ ಮುಗಿದೊಡನೆ ಹೂಂಗುಡುತ್ತಿದ್ದಳು. ಹೀಗೆ ಕಥೆಯು ಮುಂದುವರೆಯಿತು. ಎರಡನೆಯ ಗುಬ್ಬಿ, ಮೂರನೆಯ ಗುಬ್ಬಿ ನಾಲ್ಕನೆಯ ಗುಬ್ಬಿ ಹೀಗೆ ಲಕ್ಷ ಲಕ್ಷ ಗುಬ್ಬಿಗಳು ಬಂದವು, ಹೋದವು, ಬಂದವು ಹೋದವು. ಎಂಬ ವಾಕ್ಯವನ್ನೇ ಪುನಃ ಪುನಃ ಉಚ್ಚರಿಸುವುದನ್ನು

ಕೇಳಿ ರಾಜಕುಮಾರಿಗೆ ಬೇಸರವಾಗತೊಡಗಿತು. ಆಗ ಆ ಯುವಕನನ್ನುದ್ದೇಶಿಸಿ ರಾಜಕುಮಾರಿಯು ಮುಂದೇನಾಯಿತು ? ಎಂಬುದಾಗಿ ಕೇಳಿದಳು. ಆಗ ಯುವಕನು ಈ ಜೋಳ ಮುಗಿಯುವವರೆಗೆ ಮುಂದಿನ ಪ್ರಸಂಗವನ್ನು ಹೇಳಲಿಕ್ಕಾಗುವುದಿಲ್ಲ, ಆದ್ದರಿಂದ ಈ ಜೋಳ ಮುಗಿಯುವವರೆಗೆ ಈ ಕಥೆ ಹೀಗೇ ನಡೆಯುವುದು. ನೀನು ಬೇಸರಿಸದೇ ಹೂಂ ಎನ್ನಬೇಕೆಂಬುದಾಗಿ ತಿಳಿಸಿ ಮತ್ತು ಅದನ್ನೇ ಹೇಳತೊಡಗಿದನು. ಈ ಕಥೆಯನ್ನು ಕೇಳಿ ಕೇಳಿ ಬೇಸರಗೊಂಡ ಆ ರಾಜಕುಮಾರಿಯು ಕ್ಷೋಭೆಗೊಂಡು ಸಾಕು ಈ ಕಥೆ ಎಂದು ಜೋರಾಗಿ ಚೀರಿದಳು. ಕಥೆಯನ್ನು ಕೇಳುವಾಗ ಮಗಳ ಬಾಯಿಂದ ಸಾಕು ಎಂಬ ಶಬ್ದವನ್ನು ಎಂದೂ ಕೇಳದ ರಾಜನು ಇಂದು ಕೇಳಿ ಸಂತಸ ಪಟ್ಟನಲ್ಲದೆ ಆ ಕಥೆ ಹೇಳುವ ಯುವಕನೂ ಸಹ ನಿನಗೆ ಸಾಕೆನಿಸಿದರೆ ನನ್ನನ್ನು ಮದುವೆಯಾಗು, ಇಲ್ಲವಾದರೆ ಮುಂದಿನ ಕಥೆಯನ್ನು ಕೇಳು, ಇಲ್ಲಿಯವರೆಗೆ ಇವನ ಪುನರುಕ್ತಿಯ ಕಥೆಯನ್ನು ಕೇಳಿ ಬೇಸತ್ತ ರಾಜಕುಮಾರಿಯು ಇವನ ಈ ಕಥೆಯು ಎಂದೂ ಮುಗಿಯುವುದಿಲ್ಲ, ಸುಮ್ಮನೆ ಹೂಂಗುಡುತ್ತ ಕಾಲ ಕಳೆಯುವುದಕ್ಕಿಂತ ನನ್ನ ಪ್ರತಿಜ್ಞಾನುಸಾರವಾಗಿ ಇವನನ್ನು ಲಗ್ನ ವಾಗುವುದೇ ಸೂಕ್ತವೆಂಬುದಾಗಿ ವಿಚಾರಿಸಿ ಲಗ್ನಕ್ಕೆ ಸಮ್ಮತಿಯಿತ್ತಳಂತೆ.

ಈ ಕಥೆಯು ಶಾಸ್ತ್ರದೃಷ್ಟಿಯಿಂದ ಅನವಸ್ಥಾ ದೋಷವುಳ್ಳದ್ದಾಗಿರುತ್ತದೆ. ಅನಂತ ಜೋಳದ ಕಾಳುಗಳ ಆ ರಾಶಿಯು ಎಂದು ಮುಗಿಯಬೇಕು ? ಒಂದು ಕಾಳಾದ ಮೇಲೆ ಮತ್ತೊಂದು, ಮತ್ತೊಂದಾದ ಮೇಲೆ ಇನ್ನೊಂದು ಹೀಗೆ ಹೇಳುತ್ತ ಕುಳಿತರೆ ಅದೆಂದೂ ಮುಗಿಯುವುದಿಲ್ಲವೆಂತಲೇ ಅದಕ್ಕೆ ಅನವಸ್ಥಾ ದೋಷವನ್ನು ಜೋಡಿಸಲಾಗಿದೆ. ಇದೇ ಪ್ರಕಾರವಾಗಿ ಪ್ರಪಂಚಕ್ಕೆ ಆಧಾರನು ಶಿವನೆಂದಿರುವಾಗ ಆ ಶಿವನಿಗೆ ಆಧಾರನಾರು? ಎಂದಾಗ ಅದಕ್ಕಾಗಿ ಮತ್ತೋರ್ವ ಶಿವನನ್ನು ಹೇಳುತ್ತ ಹೋದರೆ ಹೇಳುವವನ ಹಾಗೂ ಕೇಳುವವನ ಆಯುಷ್ಯವೇ ಮುಗಿದು ಹೋಗುವುದೇ ವಿನಃ ಹೇಳುವುದು ಮಾತ್ರ ಮುಗಿಯುವುದಿಲ್ಲ, ಅಂತೆಯೇ ಶಾಸ್ತ್ರಕಾರರು ಈ ಅನವಸ್ಥಾ ದೋಷವನ್ನು ದೂರ ಮಾಡುವುದಕ್ಕಾಗಿ ಸರ್ವವೆಲ್ಲಕ್ಕೂ ಶಿವನೇ ಆಧಾರನೆಂದು ಹೇಳಿ ಶಿವನಿಗೆ ಆಧಾರನಾರೂ ಇಲ್ಲ, ಅವನೇ ಕೊನೆಯ ತತ್ತ್ವವೆಂಬುದಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಸರ್ವಾಧಾರ ವಾಗಿರುವ ತಿರೋಧಾನ ಶಕ್ತಿಯುಳ್ಳ ಶಿವನನ್ನೆ ಭಾಜನವೆಂಬುದಾಗಿ ಪೂಜ್ಯರು ಇಲ್ಲಿ ಅಪ್ಪಣೆಕೊಡಿಸಿದ್ದಾರೆ.

ಈ ಭಾಜನತತ್ತ್ವವನ್ನೇ ವಿವರಿಸುತ್ತ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪುನಃ

ವಿಮರ್ಶಾಖ್ಯಾ ಪರಾ ಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಮ್ ॥

(ಸಿ. ಶಿ. ೨೦–೩೬)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿತ್ರವಿಚಿತ್ರವಾದ ವಿಶ್ವದ ಉತ್ಪತ್ತಿಗೆ ಕಾರಣೀಭೂತವಾದ ವಿಮರ್ಶವೆಂಬ ಹೆಸರಿನ ಪರಾಶಕ್ತಿಯು ಯಾವುದರಲ್ಲಿ ಅವಿನಾಭಾವ ಸಂಬಂಧದಿಂದ ಪ್ರತಿಷ್ಠಿತವಾಗಿರುವುದೋ ಆ ಪರಶಿವ ಬ್ರಹ್ಮವೇ ವಿಶ್ವ ಭಾಜನವೆಂಬುದಾಗಿ ಕರೆಯಲ್ಪಡುತ್ತದೆ.

ಈ ತೋರುತ್ತಿರುವ ಜಗತ್ತು ಅನಂತ ವೈವಿಧ್ಯಗಳಿಂದ ಕೂಡಿಕೊಂಡುದಾಗಿದೆ. ಈ ಸೃಷ್ಟಿಯಲ್ಲಿಯ ಪ್ರಾಕೃತಿಕವಾದ ಯಾವುದೇ ವಸ್ತುಹಾಗೂ ವ್ಯಕ್ತಿಗಳು ಒಂದರಂತೆ ಒಂದಿರದೇ ಎಲ್ಲವೂ ಭಿನ್ನಭಿನ್ನಗಳೇ ಆಗಿರುತ್ತವೆ. ಇಲ್ಲಿರುವ ಮನುಷ್ಯ, ಪಶು, ಪಕ್ಷಿ ಮುಂತಾದ ಎಂಬತ್ನಾಲ್ಕು ಲಕ್ಷ ವಿಧ ಯೋನಿಗಳಿಂದ ಜನಿಸುವ ಕೋಟಿ ಕೋಟಿ ಜೀವಿಗಳು ಪರಸ್ಪರ ಭಿನ್ನಗಳೇ ಆಗಿರುತ್ತವೆ. ಸ್ಥೂಲ ದೃಷ್ಟಿಗೆ ಒಮ್ಮೊಮ್ಮೆ ಇವುಗಳು ಪರಸ್ಪರ ಸಮಾನವಾಗಿ ಕಂಡು ಬಂದರೂ ಅವುಗಳಲ್ಲಿ ಪರಿಪೂರ್ಣ ಸಮಾನತೆ ಇರುವುದೇ ಇಲ್ಲ. ಮನುಷ್ಯನು ಕಾರ್ಖಾನೆಗಳಲ್ಲಿ ನಿರ್ಮಿಸುವ ವಸ್ತುಗಳು ಸಮಾನಗಳಾಗಿರುತ್ತವೆ. ಅವೆಲ್ಲವುಗಳು ಒಂದೇ ಪಡಿಯಚ್ಚಿನಿಂದ ಹೊರಬರುತ್ತಿರುತ್ತವೆ. ಆದರೆ ಸೃಷ್ಟಿಯ ವಸ್ತುಗಳಲ್ಲಿ ಈ ಸಮಾನತೆ ಕಾಣಲು ಸಾಧ್ಯವಾಗುವುದಿಲ್ಲ. ವಿಶ್ವದ ಈ ವೈಚಿತ್ರ್ಯಕ್ಕೆ ವಿಮರ್ಶ ಶಕ್ತಿಯೇ ಕಾರಣ ವಾಗಿರುತ್ತದೆ. ಈ ವಿಮರ್ಶ ಶಕ್ತಿಯಿಂದ ಕೂಡಿದ ಶಿವನು ಬಹುದೊಡ್ಡ ಕಲಾಕಾರನು. ಅವನು ತನ್ನ ಸೃಷ್ಟಿಯಲ್ಲಿ ತನ್ನ ಕಲಾಕೌಶಲ್ಯದಿಂದ ಪ್ರತಿಯೊಂದನ್ನು ಸ್ವತಂತ್ರವಾಗಿಯೇ ನಿರ್ಮಿಸಿದ್ದಾನೆ ಶಿವನ ಸೃಷ್ಟಿಯಲ್ಲಿ ಸಮಾನವಾಗಿ ತೋರುವ ವಸ್ತುಗಳಲ್ಲಿಯ ಪರಸ್ಪರ ವೈಲಕ್ಷಣ್ಯವನ್ನು ಗುರುತಿಸಲೂ ಸಹ ಅತಿ ಸೂಕ್ಷ್ಮವಾದ ಚಿಕಿತ್ಸಾ ಬುದ್ಧಿಯು ಬೇಕಾಗುವುದು. ಶಿವನ ಈ ಸೃಷ್ಟಿಯ ವೈವಿಧ್ಯತೆಗೆ ವೈಜ್ಞಾನಿಕವಾಗಿ ಒಪ್ಪಿಕೊಂಡ ಒಂದು ಸಾಮಾನ್ಯ ಉದಾಹರಣೆಯೆಂದರೆ ಮನುಷ್ಯನ ಹೆಬ್ಬೆರಳು. ಒಬ್ಬ ವ್ಯಕ್ತಿಯ ಹೆಬ್ಬೆರಳಿನಲ್ಲಿರುವ ರೇಖೆಗಳು ಇನ್ನೊಬ್ಬನ ಹೆಬ್ಬೆರಳಿನಲ್ಲಿ ಇರುವುದಿಲ್ಲ. ಈರ್ವರು ವ್ಯಕ್ತಿಗಳು ನೋಡಲು ತದ್ರೂಪರೇ ಆಗಿದ್ದರೂ ಅವರು ಮಾಡುವ ಹಸ್ತಾಕ್ಷರವೂ ಸಹ ಒಂದೇ ರೀತಿಯಾಗಿದ್ದರೂ, ಅವರ ಹೆಬ್ಬೆರಳಿನ ರೇಖೆಗಳು ಮಾತ್ರ ಒಂದೇ ರೀತಿಯಾಗಿರುವುದಿಲ್ಲ. ಅಂತೆಯೇ ಅತಿ ಮಹತ್ವಪೂರ್ಣಗಳಾದ ಸರಕಾರಿ ಕಾಗದಗಳ ಮೇಲೆ ಫೋಟೋ ಅಂಟಿಸಿದ್ದರೂ, ಹಸ್ತಾಕ್ಷರವನ್ನು ಮಾಡಿದ್ದರೂ ಸಹ ಆ ವ್ಯಕ್ತಿಯ ಹೆಬ್ಬೆರಳಿನ ಗುರುತನ್ನು ಆ ಕಾಗದದ ಮೇಲೆ ತೆಗೆದುಕೊಳ್ಳುವುದನ್ನು ನೋಡುತ್ತೇವೆ. ಇದರಿಂದ ತಿಳಿದುಬರುವುದೇನೆಂದರೆ ವ್ಯಕ್ತಿಯ ರೂಪ ಹಾಗೂ ಅವನ ಹಸ್ತಾಕ್ಷರವು ಇನ್ನೊಬ್ಬನ ರೂಪ ಹಾಗೂ ಹಸ್ತಾಕ್ಷರಗಳಿಗೆ ಹೋಲುತ್ತಿದ್ದರೂ ಅಂಗುಷ್ಠದ ರೇಖೆಗಳು ಮಾತ್ರ ಎಂದೂ ಹೊಂದಿಕೆಯಾಗುವುದಿಲ್ಲ. ಆದ್ದರಿಂದ ಶಿವನ ಸೃಷ್ಟಿಯಲ್ಲಿ ಪುನರಾವೃತ್ತಿಯೆಂಬುದೇ ಇಲ್ಲ. ಇಲ್ಲಿಯ ಪ್ರತಿಯೊಂದು ವಸ್ತು ಮತ್ತು ವ್ಯಕ್ತಿಗಳೆಲ್ಲ ನಿತ್ಯ ನೂತನಗಳೇ ಆಗಿರುತ್ತವೆ. ಸೃಷ್ಟಿಯ ಈ ನಾವೀನ್ಯತೆಗೆ ಕಾರಣವಾದದ್ದೇ ವಿಮರ್ಶ ಶಕ್ತಿಯು. ಅಂತಹ ವಿಮರ್ಶ ಶಕ್ತಿಗೆ ಆಧಾರವಾದ ಪರಶಿವಬ್ರಹ್ಮವೇ ಇಲ್ಲಿ ಭಾಜನ ಇಲ್ಲವೇ ವಿಶ್ವಭಾಜನವೆಂಬುದಾಗಿ ಕರೆಯಲ್ಪಡುತ್ತದೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ವಿಶ್ವಭಾಜನವಾದ ಆ ಪರಶಿವ ಬ್ರಹ್ಮದ ಸ್ವರೂಪವನ್ನು ಪುನಃ–

ಅಂತಃಕರಣರೂಪೇಣ ಜಗದಂಕುರರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥

(ಸಿ. ಶಿ. ೨೦–೩೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನಲ್ಲಿ ಅವಿನಾಭಾವ ಸಂಬಂಧ ದಿಂದಿರುವ ಚಿಚ್ಛಕ್ತಿಯು ಅರ್ಥಾತ್ ವಿಮರ್ಶ ಶಕ್ತಿಯು ಜಗವೆಂಬ ಅಂಕುರರೂಪವಾಗಿ ಮತ್ತು ಮೂಲಾಹಂಕಾರ ರೂಪವಾಗಿ ಯಾವ ಶಿವನಲ್ಲಿ ಭಾಸಿಸುವುದೋ ಆ ಶಿವನು ಪರಬ್ರಹ್ಮವೆಂಬುದಾಗಿ ಕರೆಯಲ್ಪಡುತ್ತಾನೆ.

ಶಿವನೊಂದಿಗೆ ಅವಿನಾಭಾವ ಸಂಬಂಧಿನಿಯಾಗಿರುವ ವಿಮರ್ಶಶಕ್ತಿಯು ಶಿವನಷ್ಟೇ ವಿಶಾಲವಾದುದಾಗಿರುತ್ತದೆ. ಇಷ್ಟು ವಿಶಾಲವಾದ ಈ ಶಕ್ತಿಯಲ್ಲಿ ಅನಂತ ಯೋಜನ ವಿಸ್ತೀರ್ಣವಾದ ಚತುರ್ದಶ ಭುವನಬ್ರಹ್ಮಾಂಡವು ಒಂದು ಅಂಕುರ ರೂಪ ದಲ್ಲಿ ತೋರುತ್ತದೆ. ಅಂದ ಮೇಲೆ ಆ ವಿಮರ್ಶ ಶಕ್ತಿಯು ಎಷ್ಟು ಬೃಹತ್ತಾಗಿದೆಯೆಂಬು ದನ್ನು ಊಹಿಸಬಹುದಾಗಿದೆ. ಈ ವಿಮರ್ಶ ಶಕ್ತಿಯೇ ಶಿವಯೋಗಿಗಳಲ್ಲಿ ಅಂತಃಕರಣ ರೂಪದಿಂದ ಇರುವಂಥಾದ್ದಾಗಿದೆ. ಹೀಗೆ ಜಗದ್ರೂಪವಾಗಿ ಮತ್ತು ಜಗತ್ತಿನ ಜೀವಿಗಳಲ್ಲಿ ಅಂತಃಕರಣ ರೂಪವಾಗಿರುವ ಈ ಶಕ್ತಿಗೆ ಆಧಾರವಾಗಿರುವ ಪರಶಿವ ಬ್ರಹ್ಮಕ್ಕೆ ಇಲ್ಲಿ ಭಾಜನವೆಂಬುದಾಗಿ ಕರೆದಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪರಶಿವ ಬ್ರಹ್ಮಕ್ಕೂ ಹಾಗೂ ಶಕ್ತಿಗೂ ವಿಮರ್ಶ ಇರುವ ಸಂಬಂಧವನ್ನು ದೃಷ್ಟಾಂತಮೂಲಕವಾಗಿ–

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾತ್ಮಾ ಪ್ರಕಾರೇ (ಶೇ) ಬ್ರಹ್ಮಣಿ ಸ್ಥಿತಾ ॥

(ಸಿ. ಶಿ. ೨೦–೩೮)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸರ್ವ ವಿಶ್ವವನ್ನು ಪ್ರಕಾಶಿಸುವ ಬೆಳದಿಂಗಳು ಚಂದ್ರನಲ್ಲಿ ಸ್ಥಿರವಾಗಿರುವಂತೆ ವಿಮರ್ಶರೂಪವಾದ ಶಕ್ತಿಯು ಶಿವನಲ್ಲಿ ಅವಿನಾಭಾವ ಸಂಬಂಧಿನಿಯಾಗಿದ್ದು ಈ ಜಗತ್ತೆಲ್ಲವನ್ನು ತನ್ನ ಅಂಶದಿಂದ ವ್ಯಾಪಿಸಿ ಪ್ರಕಾಶಿಸುತ್ತದೆ.

ಚಂದ್ರನ ಬೆಳದಿಂಗಳು ತಾನು ಚಂದ್ರನಲ್ಲಿದ್ದುಕೊಂಡೇ ತನ್ನ ಪ್ರಭೆಯಿಂದ ಜಗತ್ತೆಲ್ಲ ವನ್ನು ಬೆಳಗುತ್ತಿರುತ್ತದೆ. ಇಲ್ಲಿ ಚಂದ್ರ ಮತ್ತು ಚಂದ್ರಿಕೆಯು ಪರಸ್ಪರ ಭಿನ್ನವಾಗಿರುವುದಿಲ್ಲ, ಅವೆರಡೂ ಅವಿನಾಭಾವ ಸಂಬಂಧದಿಂದ ಇರುತ್ತವೆ. ಇದೇ ಪ್ರಕಾರವಾಗಿ ವಿಮರ್ಶ ಶಕ್ತಿಯೂ ಸಹ ಪರಶಿವ ಬ್ರಹ್ಮದಿಂದ ಭಿನ್ನವಾಗಿರದೇ ಅವನಲ್ಲಿ ಅವಿನಾಭಾವ ಸಂಬಂಧ ವುಳ್ಳದ್ದಾಗಿರುತ್ತದೆ. ನ್ಯಾಯ ಶಾಸ್ತ್ರದಲ್ಲಿ ಎರಡು ದ್ರವ್ಯಾದಿ ಪದಾರ್ಥಗಳಲ್ಲಿರುವ ಪರಸ್ಪರ ಸಂಬಂಧವನ್ನು ಅನೇಕ ವಿಧವಾಗಿ ಪ್ರತಿಪಾದಿಸುತ್ತಾರೆ. ಅವರ ವಿಚಾರದಂತೆ, ಸಂಯೋಗ ಸಂಬಂಧ, ಸಮವಾಯ ಸಂಬಂಧ. ಸಂಯುಕ್ತ ಸಮವಾಯ ಸಂಬಂಧ, ಸಂಯುಕ್ತ ಸಮವೇತ ಸಮವಾಯ ಸಂಬಂಧ, ಸಮವೇತ ಸಮವಾಯ ಸಂಬಂಧ ಮತ್ತು ವಿಶೇಷಣ ವಿಶೇಷ್ಯಭಾವ ಸಂಬಂಧ– ಹೀಗೆ ಈ ಸಂಬಂಧಗಳು ಅಥವಾ ಸನ್ನಿಕರ್ಷಗಳು ಆರು ಪ್ರಕಾರವಾಗಿರುತ್ತವೆ. ಪ್ರತ್ಯಕ್ಷವ್ಯವಹಾರದಲ್ಲಿ ಈ ಸನ್ನಿಕರ್ಷಗಳೇ ಸಾಧನಗಳಾಗಿರುತ್ತವೆ. ವಿಭಿನ್ನ ಸನ್ನಿಕರ್ಷಗಳ ಮೂಲಕವಾಗಿ ಪದಾರ್ಥ ಹಾಗೂ ಅವುಗಳಲ್ಲಿರುವ ಧರ್ಮಗಳನ್ನು ತಿಳಿದುಕೊಳ್ಳಲು ಬರುತ್ತದೆ. ಕಣ್ಣಿನಿಂದ ಘಟದ ಪ್ರತ್ಯಕ್ಷ ಜ್ಞಾನವಾಗುವಲ್ಲಿ ಘಟಕ್ಕೂ

ಹಾಗೂ ನೇತ್ರಕ್ಕೂ ಸಂಯೋಗ ಸಂಬಂಧವಿರುತ್ತದೆ. ಇನ್ನು ಘಟದಲ್ಲಿರುವ ರೂಪಜ್ಞಾನ ವಾಗಬೇಕಾದರೆ ಸಂಯುಕ್ತಸಮವಾಯ ಸಂಬಂಧವನ್ನು ಹೇಳಬೇಕಾಗುತ್ತದೆ. ರೂಪವು ಘಟದಲ್ಲಿ ಸಮವಾಯ ಸಂಬಂಧದಿಂದ ಇರುತ್ತದೆ. ಆದ್ದರಿಂದ ಮೊದಲು ನೇತ್ರಕ್ಕೂ ಘಟಕ್ಕೂ ಸಂಯೋಗ ಸಂಬಂಧವಾಗಿ ಆ ಚಕ್ಷು ಸಂಯುಕ್ತವಾದ ಘಟದಲ್ಲಿ ರೂಪವು ಸಮವಾಯ ಸಂಬಂಧದಿಂದ ಇರೋಣದರಿಂದ ಇಲ್ಲಿ ಸಂಯುಕ್ತಸಮವಾಯ ಸಂಬಂಧ ವನ್ನು ಹೇಳಲಾಗಿದೆ. ಇನ್ನು ಆ ರೂಪದಲ್ಲಿರುವ ರೂಪತ್ವವೆಂಬ ಅದರ ಜಾತಿಯ ಪ್ರತ್ಯಕ್ಷ ವನ್ನು ಮಾಡಿಕೊಳ್ಳಬೇಕಾದರೆ ಸಂಯುಕ್ತ ಸಮವೇತ ಸಮವಾಯ ಸಂಬಂಧವನ್ನು ಸ್ವೀಕರಿಸಲಾಗಿದೆ. ಇಲ್ಲಿ ಚಕ್ಷು ಸಂಯುಕ್ತವಾದದ್ದು ಘಟ. ಆ ಘಟದಲ್ಲಿ ರೂಪವು ಸಮ ವೇತವಾಗಿರುತ್ತದೆ. ಆ ರೂಪದಲ್ಲಿ ರೂಪತ್ವವು ಪುನಃ ಸಮವಾಯ ಸಂಬಂಧದಿಂದ ಇರುವುದರಿಂದ ಇಲ್ಲಿಸಂಯುಕ್ತ ಸಮವೇತ ಸಮವಾಯ ಸಂಬಂಧವನ್ನು ಹೇಳಲಾಗಿದೆ. ಇನ್ನು ಶ್ರೋತ್ರೇಂದ್ರಿಯದಿಂದ ಶಬ್ದದ ಸಾಕ್ಷಾತ್ಕಾರವಾಗುವಲ್ಲಿ ಸಮವಾಯ ಸಂಬಂಧ ವನ್ನು ಹೇಳಲಾಗುತ್ತದೆ. ಇಲ್ಲಿ ಕರ್ಣೇಂದ್ರಿಯದ ಒಳಗಿರುವ ಆಕಾಶಕ್ಕೇನೆ ಶ್ರೋತ್ರ ವೆಂಬುದಾಗಿ ಸ್ವೀಕರಿಸಲಾಗಿದ್ದು ಶಬ್ದವು ಆಕಾಶದ ಗುಣವಾಗಿರೋಣದರಿಂದ ಗುಣಗುಣಿಗಳಲ್ಲಿ ಸಮವಾಯ ಸಂಬಂಧವಿರೋಣದರಿಂದ ಇಲ್ಲಿ ಸಮವಾಯ ಸಂಬಂಧ ವನ್ನು ಹೇಳಲಾಗಿದೆ. ಇನ್ನು ಆ ಶಬ್ದದಲ್ಲಿರುವಂತಹ ಶಬ್ದತ್ವ ಧರ್ಮವನ್ನು ಸಾಕ್ಷಾತ್ಕರಿಸಿ ಕೊಳ್ಳಲು ಸಮವೇತ ಸಮವಾಯ ಸಂಬಂಧವನ್ನು ಪ್ರತಿಪಾದಿಸಲಾಗಿದೆ. ಶಬ್ದದಲ್ಲಿ ಶಬ್ದತ್ವ ಧರ್ಮವು ಸಮವಾಯ ಸಂಬಂಧದಿಂದ ಇರೋಣದರಿಂದ ಮತ್ತು ಶಬ್ದವು ಶ್ರೋತ್ರದಲ್ಲಿ ಸಮವೇತವಾಗಿರೋಣದರಿಂದ ಅರ್ಥಾತ್ ಸಮವಾಯ ಸಂಬಂಧದಿಂದ ಇರೋಣ ದರಿಂದ ಶಬ್ದತ್ವ ಜ್ಞಾನಕ್ಕಾಗಿ ಸಮವೇತ ಸಮವಾಯ ಸಂಬಂಧವನ್ನು ಹೇಳಲಾಗಿದೆ. ಇದೇ ಪ್ರಕಾರವಾಗಿ ಅಭಾವದ ಪ್ರತ್ಯಕ್ಷವನ್ನು ಹೇಳುವಾಗ ವಿಶೇಷಣ ವಿಶೇಷ್ಯಭಾವ ಸಂಬಂಧ ವನ್ನು ಹೇಳಲಾಗುತ್ತದೆ. 'ಘಟಾಭಾವವದ್ ಭೂತಲಂ' ಎಂಬ ಜ್ಞಾನವು ಉಂಟಾಗುವಾಗ ಭೂತಲಕ್ಕೂ ಚಕ್ಷುವಿಗೂ ಸಂಯೋಗ ಸಂಬಂಧವಿದ್ದು ಅಲ್ಲಿ ಘಟಾಭಾವವು ಭೂತಲಕ್ಕೆ ವಿಶೇಷಣವಾಗಿರುತ್ತದೆ. ಅಂತೆಯೇ ಅಭಾವ ಪ್ರತ್ಯಕ್ಷದಲ್ಲಿ ವಿಶೇಷಣ ವಿಶೇಷ್ಯಭಾವ ಸಂಬಂಧವನ್ನು ಸ್ವೀಕರಿಸಲಾಗುತ್ತದೆ. ಯಾವ ಸ್ಥಾನದಲ್ಲಿ ಒಂದು ವಸ್ತುವಿನ ದರ್ಶನವು ಅನೇಕ ಸಲ ಆಗಿದ್ದು. ಅಕಸ್ಮಾತ್ ಒಂದು ಸಮಯ ಆ ವಸ್ತು ಅಲ್ಲಿ ಕಾಣದಿರುವಾಗ ಇಲ್ಲಿ ಈ ವಸ್ತು ಇಲ್ಲವಲ್ಲ! ಎನ್ನುವ ಯಾವ ತಿಳುವಳಿಕೆಯಾಗುವುದೋ ಅದಕ್ಕೇನೆ ಅಭಾವಜ್ಞಾನ ವೆನ್ನುವರು. ಈ ಅಭಾವಜ್ಞಾನದಲ್ಲಿ ಆ ವಸ್ತುವಿನ ಅಭಾವವೇ ಆ ಭೂತಲಕ್ಕೆ ವಿಶೇಷಣ ವಾಗಿರುತ್ತದೆ. 'ಘಟಾಭಾವವದ್ ಭೂತಲಂ' ಅಂದರೆ ಈ ಭೂತಲವು ಘಟಾಭಾವ ವುಳ್ಳದ್ದು ಎಂಬ ಜ್ಞಾನದಲ್ಲಿ ಭೂತಲವು ವಿಶೇಷ್ಯವು, ಘಟಾಭಾವವು ವಿಶೇಷಣವು. ಹಾಗೆ ವಿಶೇಷಣ-ವಿಶೇಷ್ಯಭಾವ ಸಂಬಂಧದಿಂದ ಅಭಾವದ ಜ್ಞಾನವಾಗುತ್ತದೆ ಎಂಬುದಾಗಿ ತಿಳಿದುಕೊಳ್ಳಬೇಕು.

ಈ ರೀತಿಯಾಗಿ ನ್ಯಾಯ ಶಾಸ್ತ್ರದಲ್ಲಿ ಪ್ರತ್ಯಕ್ಷ ಜ್ಞಾನವನ್ನು ಹೇಳುವಾಗ ಆರು ವಿಧ ವಾದ ಸೂಕ್ಷ್ಮ ಸಂಬಂಧಗಳನ್ನು ತಿಳಿಯಪಡಿಸಲಾಗಿದೆ. ವೇದಾಂತಿಗಳು ಸಂಬಂಧವನ್ನು ದೂರಮಾಡುವಲ್ಲಿ ಪ್ರಖ್ಯಾತರಾಗಿದ್ದರೆ, ನೈಯಾಯಿಕರು ಸಂಬಂಧವನ್ನು ಜೋಡಿಸುವಲ್ಲಿ

ಪ್ರವೀಣರಾಗಿರುತ್ತಾರೆ. ನೈಯಾಯಿಕರ ಈ ಸಂಬಂಧ ವಿಷಯದಲ್ಲಿ ಪರಂಪರಾಗತವಾದ ಒಂದು ರೋಚಕವಾದ ಕಥೆಯಿದೆ. ಒಂದು ಸಾರೆ ಒಬ್ಬ ನ್ಯಾಯ ಶಾಸ್ತ್ರ ವಿದ್ವಾಂಸನು ತನಗೆ ಅಪರಿಚಿತವಾದ ವ್ಯಕ್ತಿಯ ಮನೆಗೆ ಹೋದನು. ಈ ನ್ಯಾಯಶಾಸ್ತ್ರಿಗಳಿಗೆ ಪೂರ್ವ ಪರಿಚಯವಾಗಲಿ ಲೌಕಿಕ ಸಂಬಂಧವಾಗಲಿ ಬೇಕಾಗುವುದಿಲ್ಲ, ಅವರು ಯಾರ ಮನೆಗೆ ಹೋದರೂ ಸಹ ಅವರೊಂದಿಗೆ ತಮ್ಮ ಸಂಬಂಧವನ್ನು ಹೇಗಾದರೂ ಮಾಡಿ ಜೋಡಿಸಿಯೇ ಬಿಡುತ್ತಾರೆ. ಈ ಅಪರಿಚಿತನಾದ ವ್ಯಕ್ತಿಯು ತನ್ನ ಮನೆಯೊಳಗೆ ಬರುವುದನ್ನು ಕಂಡು ಮನೆಯ ಯಜಮಾನನು ಶಿಷ್ಟಾಚಾರ ರೀತಿಯಾಗಿ ಬನ್ನಿ ಎಂದು ಬರಮಾಡಿಕೊಂಡನೇನೋ ನಿಜ, ಆದರೆ ಈತನಾರು ? ಇವನಿಗೂ ನಮಗೂ ಇರುವ ಸಂಬಂಧವೇನು ? ಏತಕ್ಕಾಗಿ ಈತನು ಬಂದಿರಬಹುದು ? ಎಂಬ ಸಂಶಯಗಳು ಆ ಮನೆಯ ಮಾಲಿಕನ ಮನದಲ್ಲಿ ಸುಳಿಯತೊಡಗಿದವು. ಇಷ್ಟೆಲ್ಲ ಮನಸ್ಸು ಸಂಶಯದಿಂದ ಕೂಡಿಕೊಂಡಿದ್ದರೂ ಆ ಯಜಮಾನನು ಶಿಷ್ಟಾಚಾರಕ್ಕೋಸ್ಕರವಾಗಿ ಅವನೊಂದಿಗೆ ಸರಿಯಾಗಿಯೇ ಮಾತಾಡುತ್ತ ಮಾಡಬೇಕಾದ ಅತಿಥಿ ಸತ್ಕಾರವನ್ನು ಸಹ ಮಾಡಿ ನೀವಾರು ? ...ಲ್ಲಿಂದ ಬಂದಿರುವಿರಿ ? ಯಾವ ಕಾರಣಕ್ಕಾಗಿ ಬಂದಿರುವಿರಿ ? ಎಂಬುದಾಗಿ ಪ್ರಶ್ನಿಸಿ...ದು. ಯಜಮಾನನು ಅಪರಿಚಿತನಂತೆ ಕೇಳುವ ಈ ಪ್ರಶ್ನೆಗಳನ್ನು ಕೇಳಿ ಆ ಬುದ್ಧಿವಂತ...ನ ನ್ಯಾಯಶಾಸ್ತ್ರಿಯು ''ಏನು ಯಜಮಾನ್ರೇ ! ಅಪರಿಚಿತರ ಹಾಗೆ ಪ್ರಶ್ನಿಸುತ್ತಿರು...? ನಾವು ನೀವು ಸಂಬಂಧಿಕರಲ್ಲವೆ ? ಈ ಸಂಬಂಧವು ಕೇವಲ ಈ ತಲೆಮಾರಿನದಲ್ಲ ...ಮ್ಮ ತಾತ ಮುತ್ತಜ್ಜರಿಂದ ಈ ಸಂಬಂಧವು ಹಾಗೇ ನಡೆದುಕೊಂಡು ಬಂದಿದೆ. ಹೀಗಿರುವಾಗ ಇಷ್ಟು ಬೇಗನೆ ನೀವು ಮರೆತರೆ ಹೇಗೆ ?'' ಎಂಬುದಾಗಿ ಧೈರ್ಯವಾಗಿ ನುಡಿದನು. ಆಗ ಮನೆಯ ಯಜಮಾನನು ಮತ್ತಷ್ಟು ಅಚ್ಚರಿಗೊಂಡು ''ಇದೇನು ? ಇವನಾವ ನಮ್ಮ ಸಂಬಂಧಿಯು?'' ಎಂಬ ಸಂಶಯದ ಸುಳಿಯನ್ನು ಒಳಗಿಟ್ಟುಕೊಂಡು ಮೇಲೆ ನುಡಿದದ್ದೇನೆಂದರೆ ''ನಮಗೂ ನಿಮಗೂ ಇರುವ ಸಂಬಂಧವಾವುದು ? ನನಗೊಂದೂ ಅರ್ಥವಾಗುತ್ತಿಲ್ಲ, ನನಗೆ ತಿಳಿದ ಮಟ್ಟಿಗೆ ನಮ್ಮೀರ್ವರಲ್ಲಿ ಅದಾವುದೇ ಪ್ರಕಾರದ ರಕ್ತಸಂಬಂಧವಾಗಿಲ್ಲ, ನಾವೀರ್ವರೂ ಪರಸ್ಪರ ಮಿತ್ರರೂ ಅಲ್ಲ, ಇದೂ ಅಲ್ಲದೆ ಪರಸ್ಪರ ಶತ್ರುಗಳೂ ಅಲ್ಲ, ನಮ್ಮಿಬ್ಬರಲ್ಲಿ ಕೊಡುವ ಕೊಳ್ಳುವ ವ್ಯಾವಸಾಯಿಕ ಸಂಬಂಧವೂ ಇಲ್ಲ, ಹೀಗಿರುವಾಗ ನೀವು ನಮಗೆ ಸಂಬಂಧಿಗಳಾಗುವುದು ಹೇಗೆ ?'' ಎಂಬುದಾಗಿ ಪ್ರಶ್ನಿಸಿದನು. ಈ ಆಗಂತುಕನಾದ ನ್ಯಾಯಶಾಸ್ತ್ರಿಯು ಒಂದು ಎತ್ತಿನ ಗಾಡಿಯಲ್ಲಿ ಕುಳಿತು ಬಂದಿದ್ದನು. ಅವನ ಆ ಚಕ್ಕಡಿಯು ಬೇವಿನ ಕಟ್ಟಿಗೆಯಿಂದ ನಿರ್ಮಿಸಲ್ಪಟ್ಟುದಾಗಿತ್ತು, ಇವನು ಪ್ರವೇಶಿಸಿದ ಯಜಮಾನನ ಮನೆಯ ಅಂಗಳದಲ್ಲಿಯೂ ಸಹ ಒಂದು ವಿಶಾಲವಾದ ಬೇವಿನಮರವಿತ್ತು. ಇವೆರಡನ್ನು ನೋಡಿದ ಆ ನ್ಯಾಯಶಾಸ್ತ್ರಿಯು ತನಗೂ ಆ ಯಜಮಾನನಿಗೂ ಸಂಬಂಧವೆಂದರೆ ನಿಂಬಾಧಿಪತ್ಯ ಸಂಬಂಧವಿರುವುದಾಗಿ ಹೇಳಿದನು. ಈ ಯಜಮಾನನಿಗೆ ಈ ಸಂಬಂಧದ ಅರ್ಥವೇ ಆಗಲಿಲ್ಲ, ನೀವು ಹೇಳಿದ ಸಂಬಂಧವು ತಿಳಿಯುತ್ತಿಲ್ಲ, ಇದನ್ನು ವಿಸ್ತರಿಸಿ ಹೇಳಬೇಕೆಂಬುದಾಗಿ ಕೇಳಿದನು. ಆಗ ಆ ನ್ಯಾಯಶಾಸ್ತ್ರಿಯು ''ನಾನು ತಂದಿರುವ ಈ ಚಕ್ಕಡಿಯು ಬೇವಿನಕಟ್ಟಿಗೆಯಿಂದ ನಿರ್ಮಿಸಲ್ಪಟ್ಟುದಾಗಿದೆ. ನಿಮ್ಮ ಮನೆಯ ಅಂಗಳದಲ್ಲಿಯೂ ಸಹ

ಒಂದು ಪ್ರಾಚೀನ ಬೇವಿನಗಿಡವಿದೆ. ನಿಮ್ಮ ಅಂಗಳದಲ್ಲಿರುವ ಈ ಗಿಡವು ನಿಮ್ಮ ಅಜ್ಜ ಮುತ್ತಜ್ಜರ ಕಾಲದಿಂದ ಬಂದಿರುವಂತೆ ಈ ನನ್ನ ಚಕ್ಕಡಿಯು ಸಹ ನಮ್ಮ ಅಜ್ಜ ಮುತ್ತಜ್ಜರ ಕಾಲದಿಂದಲೂ ಸಹ ನಮ್ಮಲ್ಲಿ ಇರುವಂಥದ್ದಾಗಿದೆ. ಹೀಗಿರುವಾಗ ನೀನು ಬೇವಿನಗಿಡದ ಮಾಲಿಕನಾಗಿರುವಂತೆ, ನಾನು ಬೇವಿನ ಕಟ್ಟಿಗೆಯಿಂದ ಮಾಡಲ್ಪಟ್ಟ ಚಕ್ಕಡಿಯ ಮಾಲಿಕನಾಗಿರುವೆ. ಹೀಗೆ ಇವೆರಡನ್ನೂ ಸೂಕ್ಷ್ಮ ದೃಷ್ಟಿಯಿಂದ ವಿಚಾರಿಸಲಾಗಿ ಬೇವಿನ ಒಡೆತನವು ನಮ್ಮಿರ್ವರಲ್ಲಿ ಸಮಾನವಾಗಿರೋಣದರಿಂದ ನಮ್ಮಿರ್ವರಲ್ಲಿ ನಿಂಬಾಧಿಪತ್ಯ ಸಂಬಂಧವಿದ್ದೇ ಇದೆ. ಇದನ್ನು ಯಾರು ತಾನೆ ಅಲ್ಲಗಳೆಯಬಲ್ಲರು ? ನಿಮಗೆ ಇಲ್ಲಿಯ ವರೆಗೆ ಈ ಸಂಬಂಧದ ಅರಿವಿರಲಿಲ್ಲ, ಈಗ ಉಂಟಾಯಿತಲ್ಲವೆ ?'' ಎಂದನು. ನ್ಯಾಯ ಶಾಸ್ತ್ರಿಯ ಈ ಸಂಬಂಧ ಜೋಡಿಸುವ ಈ ಪದ್ಧತಿಯನ್ನು ಕಂಡು ಮನೆಯ ಯಜಮಾನನು ಆಶ್ಚರ್ಯಕ್ಕೊಳಗಾದನು. ಆದರೂ ಶಿಷ್ಟಾಚಾರಕ್ಕನುಗುಣವಾಗಿ ಅವನಿಗೆ ಯೋಗ್ಯ ಉಪಚಾರವನ್ನು ಮಾಡಿ ಕಳುಹಿಸಿಕೊಟ್ಟನು.

ಈ ಕಥೆಯಲ್ಲಿಯ ವಿನೋದಾಂಶವೊಂದನ್ನು ಬಿಟ್ಟರೆ ಇಲ್ಲಿ ತಿಳಿದು ಬರುವ ವಿಷಯ ವೇನೆಂದರೆ ಈ ಪ್ರಪಂಚದಲ್ಲಿ ಅನೇಕ ಸಂಬಂಧಗಳಿದ್ದು ಆ ಸಂಬಂಧ ಮೂಲಕವಾಗಿಯೆ ಈ ಜಗತ್ತಿನ ವ್ಯವಹಾರವು ನಡೆಯುತ್ತಿರುತ್ತದೆ. ಹೀಗಿರುವ ಈ ಲೌಕಿಕ ಸಂಬಂಧದಲ್ಲಿ ಶಾಸ್ತ್ರೀಯ ಸಂಬಂಧಗಳು ಸಹ ಇರುತ್ತವೆ. ಅವುಗಳಲ್ಲಿ ಅವಿನಾಭಾವ ಸಂಬಂಧವೂ ಕೂಡ ಒಂದಾಗಿರುತ್ತದೆ. ಎರಡು ತತ್ತ್ವಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ಇರದಿರುವ ಸಂಬಂಧವನ್ನು ತಿಳಿಸುವುದಕ್ಕೇನೇ ಅವಿನಾಭಾವ ಸಂಬಂಧವೆನ್ನುತ್ತಾರೆ. ಚಂದ್ರ ಹಾಗೂ ಚಂದ್ರಿಕೆಯರಲ್ಲಿರುವ ಸಂಬಂಧವು ಇದೇ ವಿಧವಾದ ಸಂಬಂಧವಾಗಿರುವುದು. ಅಂತೆಯೇ ಪೂಜ್ಯಪಾದರು ಚಂದ್ರ ಚಂದ್ರಿಕೆಯರ ಸಂಬಂಧದ ಉದಾಹರಣೆ ಕೊಟ್ಟು ಪರಶಿವ ಹಾಗೂ ವಿಮರ್ಶ ಶಕ್ತಿಯರಲ್ಲಿ ಈ ಅವಿನಾಭಾವ ಸಂಬಂಧವಿದೆಯೆಂಬುದಾಗಿ ತಿಳಿಯಪಡಿಸಿದ್ದಾರೆ. ಇದು ನಿತ್ಯ ಸಂಬಂಧವಾಗಿದ್ದು. ಈ ಸಂಬಂಧದಲ್ಲಿ ಎಂದೂ ವ್ಯತ್ಯಯ ವುಂಟಾಗುವುದಿಲ್ಲ, ಅಂತೆಯೇ ವೀರಶೈವ ಆಚಾರ್ಯರು ಪರಶಿವ ತತ್ತ್ವವನ್ನು ಶಕ್ತಿವಿಶಿಷ್ಟ ವೆಂಬುದಾಗಿ ತಿಳಿಯಪಡಿಸಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಶಿವಶಕ್ತಿಯರ ಸ್ವರೂಪವನ್ನು ಬೇರೊಂದು ವಿಧವಾಗಿ ತಿಳಿಯಪಡಿಸುತ್ತ ಪುನಃ–

ಅಕಾರಃ ಶಿವ ಆಖ್ಯಾತೋಽ ಹಂಕಾರಃ ಶಕ್ತಿರುಚ್ಯತೇ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂಪದೇ ॥

(ಸಿ. ಶಿ. ೨೦–೬೫)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಕಾರವು ಶಿವವಾಚಕ ವಾಗಿರುತ್ತದೆ. 'ಹಂ' ಕಾರವು ಶಕ್ತಿವಾಚಕವಾಗಿರುತ್ತದೆ. ಹೀಗೆ ಅಹಂ ಎಂಬ ಒಂದೇ ಒಂದು ಪದದಲ್ಲಿ ಶಿವಶಕ್ತಿಸ್ವರೂಪವಾದ ಬ್ರಹ್ಮವು ಸ್ಥಿತವಾಗಿರುವುದು.

ಪ್ರತಿಯೊಬ್ಬ ಜೀವಾತ್ಮನು ಅಹಂ, ಅಹಂ ಎಂಬುದಾಗಿ ವ್ಯವಹರಿಸುವುದನ್ನು ನೋಡುತ್ತೇವೆ. ಇವನು ಬಳಸುತ್ತಿರುವ ಅಹಂ, ಎಂಬ ಈ ಒಂದು ಪದದಲ್ಲಿ ಶಿವ

ಶಕ್ತಿಯರೀರ್ವರೂ ಇರುವ ವಿಷಯವನ್ನು ಪೂಜ್ಯಪಾದರು ಇಲ್ಲಿ ಪ್ರತಿಪಾದಿಸಿದ್ದಾರೆ. ''ಅಕಾರೋ ವೈ ಸರ್ವಾ ವಾಕ್'', ''ಅಕ್ಷರಾಣಾಮಕಾರೋಽಸ್ಮಿ'' ಎಂಬ ಶ್ರುತಿ ಸ್ಮೃತಿ ಪ್ರಮಾಣಗಳಿಂದ ಅಕಾರವು ಪರಶಿವವಾಚಕವಾಗಿರುವುದು ತಿಳಿದುಬರುತ್ತದೆ. ಇದರಂತೆ ''ಹಕಾರೋಽತ್ಯಕಲಾರೂಪಃ'' ಎಂಬ ಆಗಮ ಪ್ರಮಾಣಾನುಸಾರವಾಗಿ 'ಹಂ' ಕಾರವು ಜ್ಞಾನಶಕ್ತಿವಾಚಕವಾಗಿರುತ್ತದೆ. ಹೀಗೆ ಒಂದೇ ಒಂದಾಗಿರುವ 'ಅಹಂ' ಎಂಬ ಪದದಲ್ಲಿ ಶಿವಶಕ್ತಿಸ್ವರೂಪವಾದ ಪರಶಿವ ಬ್ರಹ್ಮವು ಇರುವುದಾಗಿ ತಿಳಿದು ಬರುತ್ತದೆ. ಯಾವುದೇ ಒಬ್ಬ ವ್ಯಕ್ತಿಯು 'ಅಹಂ' ಎಂಬ ಶಬ್ದವನ್ನು ಪ್ರಯೋಗಿಸಿದಾಗ ಅವನ ಭಾವನೆಯಂತೆ ಅದರ ವ್ಯಷ್ಟಿ ಸಮಷ್ಟಿ ಸ್ವರೂಪಗಳನ್ನು ಹೇಳಬೇಕಾಗುತ್ತದೆ. ಕೇವಲ ತನ್ನ ಸ್ಥೂಲ ಶರೀರದ ವ್ಯಾಪ್ತಿಯಲ್ಲಿ ಮಾತ್ರ 'ಅಹಂ' ಪದವನ್ನು ಬಳಸಿದಾಗ ಅದು 'ವ್ಯಷ್ಟಿ ಅಹಂ' ಎಂಬುದಾಗಿ ಕರೆಯಲ್ಪಡುತ್ತದೆ. ಇನ್ನು ಈ 'ಅಹಂ' ಪದವನ್ನು ಬಳಸುವ ವ್ಯಕ್ತಿಯ ಭಾವನೆಯು ವ್ಯಾಪಕ ವಾಗಿದ್ದಾಗ ಅಲ್ಲಿ ಇದರ ಸಮಷ್ಟಿ ಸ್ವರೂಪವನ್ನು ಹೇಳಬೇಕಾಗುವುದು. ಹೀಗೆ ಸಮಷ್ಟಿ ರೂಪವಾದ ಈ 'ಅಹಂತಾ'ಕ್ಕೆ ಪೂರ್ಣಾಹಂತಾ, ಅಥವಾ ಪರಾಹಂತಾ ಎಂಬುದಾಗಿ ಕರೆಯುತ್ತಾರೆ. ಯಾವಾತನು ತನ್ನ ಆತ್ಮವನ್ನು ಪರಮಾತ್ಮ ರೂಪವಾಗಿ ತಿಳಿದಿರುವನೋ ಅವನ ಈ 'ಅಹಂತೆ'ಯು 'ಪೂರ್ಣಹಂತೆ' ಯಾಗಿರುತ್ತದೆ.

ವರ್ಣಸಮೂಹದಲ್ಲಿ ಅಕಾರವು ಮೊದಲನೆಯದಾಗಿದ್ದು ಅದು ಸ್ವರರೂಪವೂ ಆಗಿರುತ್ತದೆ. ಸ್ವರದ ಸಹಾಯತೆಯನ್ನು ಪಡೆಯದೆ ಕ್, ಖ್ ಮುಂತಾದ ವ್ಯಂಜನಗಳನ್ನು ಸುಖವಾಗಿ ಉಚ್ಚರಿಸಲು ಬರುವುದಿಲ್ಲ, ಏಕೆಂದರೆ ವ್ಯಂಜನಗಳು ಅಪೂರ್ಣವಾಗಿರುತ್ತವೆ. ಆದ್ದರಿಂದ ಇವುಗಳೊಂದಿಗೆ ಸ್ವರವರ್ಣದ ಸಂಯೋಜನೆಯಾದಾಗ ಇವುಗಳು ಸುಖವಾಗಿ ಉಚ್ಚರಿಸಲ್ಪಡುತ್ತವೆ. ಎಲ್ಲ ಸ್ವರಗಳಲ್ಲಿ ಮೊದಲನೆಯದಾದ ಸ್ವರವೇ ಅಕಾರವು. ಅಂತೆಯೇ ಕೃಷ್ಣಪರಮಾತ್ಮನು ವರ್ಣಗಳಲ್ಲಿ ಅಕಾರರೂಪವೇ ನಾನಾಗಿದ್ದೇನೆ, ಎಂದು ಹೇಳಿದ್ದಾನೆ. ಇನ್ನು ಈ 'ಅಹಂ' ಪದದಲ್ಲಿಯ 'ಹಂ' ಎಂಬ ಅಕ್ಷರದ ಅರ್ಥವು ಶಕ್ತಿ ರೂಪವೆಂಬುದಾಗಿ ಈ ಹಿಂದೆ ತಿಳಿಸಲಾಗಿದೆ. ಹೀಗೆ ಅಹಂ ಎಂಬ ಪದದಲ್ಲಿಯ ಅಕಾರವು ಪರಮಾತ್ಮನೆಂತಲೂ, ಹಂಕಾರವು ಶಕ್ತಿಯೆಂತಲೂ ತಿಳಿದುಕೊಳ್ಳಬೇಕು. ಈ ಭಾಜನಸ್ಥಲದ ಶಿವಯೋಗಿಯು ಇಂತಹ ಸಮಷ್ಟಿ ಭಾವನೆಯಿಂದ ಒಡಗೂಡಿರೋಣದರಿಂದ ಅವನು ಸರ್ವವೆಲ್ಲವನ್ನು ತನ್ನ ಆತ್ಮರೂಪವಾಗಿ ತಿಳಿದುಕೊಳ್ಳುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ 'ಪೂರ್ಣಾಹಂತಾ' ಸ್ಥಿತಿಯನ್ನು ಪಡೆದ ಶಿವಯೋಗಿಯು ವಿಶ್ವಾತ್ಮ ಸ್ಥಿತಿಯನ್ನು ಪಡೆಯುವನೆಂಬುದನ್ನು ತಿಳಿಸಲೋಸುಗ ಪುನಃ–

ಅಹಂತಾಂ ಪರಮಾಂ ಪ್ರಾಪ್ಯ ಶಿವಶಕ್ತಿಮಯೀಂ ಸ್ಥಿರಾಮ್ ।
ಬ್ರಹ್ಮಭೂಯಂ ಗತೋ ಯೋಗೀ ವಿಶ್ವಾತ್ಮಾ ಪ್ರತಿಭಾಸತೇ ॥

(ಸಿ. ಶಿ. ೨೦–೪೦)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಶಿವನಿಗೆ ಅಭಿನ್ನವಾದ ಉತ್ಕೃಷ್ಟ ವಾದ ಅಹಂತಾರೂಪವಾದ ಚಿತ್ಕಲೆಯನ್ನು ಸ್ಥಿರವಾದುದನ್ನಾಗಿ ತಿಳಿದು ಅದನ್ನು

ಸ್ವಸ್ವರೂಪದೊಂದಿಗೆ ಅಭಿನ್ನವಾಗಿ ಭಾವಿಸಿದ ಶಿವಯೋಗಿಯು ವಿಶ್ವಾತ್ಮನಾಗಿ ಪ್ರಕಾಶಿಸುತ್ತಾನೆ.

ಈ ಭಾಜನಸ್ಥಲದ ಶಿವಯೋಗಿಯು ಪೂರ್ಣಾಹಂತಾ ಸ್ಥಿತಿಯನ್ನು ಪಡೆದಿರೋಣದರಿಂದ ಅವನು ಯಾವಾಗ ಅಹಂ ಎಂಬ ಶಬ್ದವನ್ನು ಪ್ರಯೋಗಿಸುವನೋ ಆಗ ಅವನ ಸ್ಥಿತಿಯು ವಿಶ್ವಾತ್ಮರೂಪವೇ ಆಗಿರುತ್ತದೆ. ಅವನ ಆ ಅಹಂತೆಯು ಕೇವಲ ತನ್ನ ಶರೀರಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಇದು ಅವನ ಒಂದು ವೈಶಿಷ್ಟ್ಯತೆಯು. ಉಳಿದ ಜೀವಿಗಳಂತೆ ಅವನು ನಾನು ಮತ್ತು ನನಗೆ ಎಂಬ ಶಬ್ದವನ್ನು ಪ್ರಯೋಗಿಸಿದರೂ ಅದರ ಸ್ವರೂಪವು ಮಾತ್ರ ಸಮಷ್ಟಿ ರೂಪವೇ ಆಗಿರುತ್ತದೆ. ಈ ವಿಷಯದಲ್ಲಿ ರಾಮಕೃಷ್ಣ ಪರಮಹಂಸರ ಜೀವನದಲ್ಲಿ ಜರುಗಿದ ಒಂದು ಘಟನೆಯು ಪ್ರತ್ಯಕ್ಷ ಉದಾಹರಣೆಯಾಗಿ ಸಂಭವಿಸುವುದು.

ರಾಮಕೃಷ್ಣ ಪರಮಹಂಸರು ಒಮ್ಮೆ ನೌಕೆಯಲ್ಲಿ ಕುಳಿತು ಹೋಗುತ್ತಿದ್ದರು. ಆಗ ನದಿಯ ಆಚೆಯ ದಡದಲ್ಲಿ ಕೆಲವು ಜನ ಮೀನುಗಾರರು ಓರ್ವ ವ್ಯಕ್ತಿಯನ್ನು ನಿರ್ದಯವಾಗಿ ಬಡಿಯುತ್ತಿದ್ದರು. ಆ ಬಡಿತವನ್ನು ತಾಳದೇ ನನ್ನನ್ನು ಕಾಪಾಡಿರಿ ಎಂಬುದಾಗಿ ಚೀರಾಡುತ್ತಿದ್ದನು. ಆ ಧ್ವನಿಯನ್ನು ಕೇಳಿ ಅತ್ತ ಕಡೆ ಲಕ್ಷ್ಯಗೊಟ್ಟು ಪರಮಹಂಸರು ನೌಕೆಯಲ್ಲಿ ಎದ್ದು ನಿಂತು ನನಗೆ ಬಡಿಯಬೇಡಿ ಎಂಬುದಾಗಿ ಚೀರತೊಡಗಿದರು. ಆಗ ನೌಕೆಯಲ್ಲಿರುವ ಅವರ ಶಿಷ್ಯರೆಲ್ಲ ಇವರ ಈ ವರ್ತನೆಯನ್ನು ಕಂಡು ಗಾಬರಿಯಾಗಿ ''ಏನು ಗುರುದೇವರೇ ! ನಿಮಗೆ ಯಾರು ಬಡಿಯುತ್ತಿದ್ದಾರೆ ? ಸುಮ್ಮನೆ ಹೀಗೇಕೆ ಮಾಡುತ್ತಿರುವಿರಿ'' ಎಂಬುದಾಗಿ ಕೇಳಲು ಆಗ ಪರಮಹಂಸರು ನದಿಯ ಆಚೆಯ ದಡದಲ್ಲಿ ಬಡಿಸಿಕೊಳ್ಳುತ್ತಿರುವ ಆ ವ್ಯಕ್ತಿಯತ್ತ ಕೈ ಮಾಡಿ ತೋರಿಸಿ ''ಅದೋ ನೋಡಿ ಅಲ್ಲಿ ನನಗೆ ಬಡಿಯುತ್ತಿದ್ದಾರೆ'' ಎಂಬುದಾಗಿ ಹೇಳಿದರಲ್ಲದೇ ತಮ್ಮ ಮೈಮೇಲೆ ಮೂಡಿದ ಬಾರುಗಳನ್ನು ಸಹ ತೋರಿಸಿದರಂತೆ. ಪರಮಹಂಸರ ಈ ಘಟನೆಯನ್ನು ಅವಲೋಕಿಸಿದಾಗ ಅವರು ಪೂರ್ಣಾಹಂತೆಯನ್ನು ಪಡೆದವರಾಗಿದ್ದು, ಸರ್ವವೆಲ್ಲವನ್ನು ತನ್ನಾತ್ಮರೂಪವಾಗಿ ಭಾವಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಇದಕ್ಕೆ ಸಮಾನುಭೂತಿಯೆಂತಲೂ ಕರೆಯಬಹುದು. ಮತ್ತೊಬ್ಬನು ದುಃಖವನ್ನನುಭವಿಸುತ್ತಿರುವಾಗ ಸಹಾನುಭೂತಿಯನ್ನು ತೋರಿಸುವುದು ಸಾಮಾನ್ಯ ಜೀವಿಗಳ ವ್ಯವಹಾರವಾದರೆ ಇಂತಹ ಪರಮಹಂಸರು ಮಾತ್ರ ಅದನ್ನು ಸಮಾನುಭೂತಿಯಾಗಿಯೇ ಅನುಭವಿಸುತ್ತಾರೆ. ಲೌಕಿಕ ಜೀವನದಲ್ಲಿಯೂ ಸಹ ರಕ್ತಸಂಬಂಧಿಗಳಲ್ಲಿ ಅತ್ಯಂತ ಆತ್ಮೀಯತೆಯಿದ್ದಾಗ ಓರ್ವನು ದುಃಖವನ್ನನುಭವಿಸುತ್ತಿದ್ದರೆ ಅವನಷ್ಟೇ ಸಮಾನವಾದ ದುಃಖವನ್ನು ಇನ್ನೋರ್ವನು ಅನುಭವಿಸುವುದನ್ನು ಸಹ ಕಾಣಬಹುದು. ಒಂದು ಮಗು ವೇದನೆಯನ್ನನುಭವಿಸುತ್ತ ಅಳುತ್ತಿದ್ದರೆ ಆ ಮಗುವಿನ ತಾಯಿಯ ಕಣ್ಣಲ್ಲಿ ನೀರು ಬರುವುದುಂಟು. ಇಲ್ಲಿ ತಾಯಿಗುಂಟಾಗುವ ದುಃಖವು ಮೋಹಮೂಲವಾದುದಾಗಿದೆ. ಅಂತೆಯೇ ಅವಳು ಮಗುವಿನ ದುಃಖದಿಂದ ತಾನು ದುಃಖಿಯಾಗಿದ್ದರೂ ಅವಳಲ್ಲಿ ಮಗುವೇ ತಾನಾದ ಸ್ಥಿತಿಯು ಇರುವುದಿಲ್ಲ. ಆದರೆ ಮಗುವಿನ ಬಗ್ಗೆ ಪ್ರಗಾಢವಾದ ಮಮತ್ವ ಭಾವ ಮಾತ್ರ ಇರುತ್ತದೆ. ಆದರೆ

ಪರಮಹಂಸರು ಅನುಭವಿಸಿದ ಆ ದುಃಖವು ಮಮತ್ವ ಮೂಲಕವಾಗಿರದೇ ಪೂರ್ಣಾಹಂತಾಭಾವ ಮೂಲಕವಾಗಿತ್ತೆಂಬುದನ್ನು ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಭಾಜನ ಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ವೃಕ್ಷಸ್ಥಂ ಪತ್ರ ಪುಷ್ಪಾದಿ ವಟಬೀಜಸ್ಥಿತಂ ಯಥಾ ।
ತಥಾ ಹೃದಯಬೀಜಸ್ಥಂ ವಿಶ್ವಮೇತತ್ ಪರಾತ್ಮನಃ ॥

(ಸಿ. ಶಿ. ೨೦–೪೧)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಒಂದು ಆಲದ ಬೀಜದಲ್ಲಿ ಆ ಗಿಡದ ಪತ್ರ ಪುಷ್ಪ ಮೊದಲಾದ ಸಕಲ ಅವಯವಗಳೆಲ್ಲ ಅಡಗಿಕೊಂಡಿರುವಂತೆ ಈ ಭಾಜನಸ್ಥಲದ ಶಿವಯೋಗಿಯ ಹೃದಯವೆಂಬ ಬೀಜದಲ್ಲಿ ಸಮಸ್ತ ವಿಶ್ವವೆಲ್ಲವೂ ಅಡಕವಾಗಿರುತ್ತದೆ.

ಯಾವುದೇ ಒಂದು ವೃಕ್ಷವು ಮೊದಲು ಬೀಜದಲ್ಲೇ ಅಡಕವಾಗಿದ್ದು, ಆ ಬೀಜಕ್ಕೆ ಮಣ್ಣು , ನೀರು, ಗಾಳಿ ಮುಂತಾದವುಗಳ ಸಂಬಂಧವಾಗಲು ಅದು ಕ್ರಮವಾಗಿ ಅಂಕುರಿಸಿ ಬೆಳೆದು ಬೃಹದಾಕಾರವನ್ನು ತಾಳಿ ಅನೇಕ ಪುಷ್ಪ ಫಲಗಳನ್ನು ಕೊಡುತ್ತದೆ. ಒಂದು ಬೀಜದಿಂದ ಉತ್ಪನ್ನವಾದ ಆ ವೃಕ್ಷದಲ್ಲಿ ಅಂತಹ ಸಹಸ್ರ ಸಹಸ್ರ ಬೀಜಗಳು ಪುನಃ ಮೈದಾಳುವುವು. ಆ ಒಂದೊಂದು ಬೀಜದಲ್ಲಿ ಭಾವೀ ವೃಕ್ಷದ ಸಕಲ ಸ್ವರೂಪವು ಪುನಃ ಅಡಗಿಕೊಂಡಿರುವುದು. ಹೀಗಿರುವ ಈ ಬೀಜವೃಕ್ಷ ನ್ಯಾಯವನ್ನು ನಾವು ವಿಚಾರಿಸುತ್ತ ಹೋದರೆ ಇಡೀ ವಿಶ್ವವನ್ನೇ ವೃಕ್ಷಮಯವನ್ನಾಗಿ ಮಾಡುವ ಸಾಮರ್ಥ್ಯವು ಒಂದೇ ಒಂದು ಬೀಜದಲ್ಲಿ ಇರುವುದು ಕಂಡು ಬರುತ್ತದೆ. ಇಲ್ಲಿ ಬೀಜವು ನೋಡಲಿಕ್ಕೆ ಗಾತ್ರದಲ್ಲಿ ಚಿಕ್ಕದಾಗಿದ್ದರೂ ಇಡೀ ವಿಶ್ವದ ವೃಕ್ಷಗಳನ್ನೆಲ್ಲ ತನ್ನಲ್ಲಡಗಿಸಿಕೊಳ್ಳುವ ಸಾಮರ್ಥ್ಯವು ಅದಕ್ಕಿರುವಂತೆ ಈ ಭಾಜನಸ್ಥಲದ ಶಿವಯೋಗಿಯ ಹೃದಯವು ಅತಿ ಚಿಕ್ಕದಾಗಿದ್ದರೂ ಭಾವನಾತ್ಮಕವಾಗಿ ವಿಶ್ವವೆಲ್ಲವನ್ನೂ ಸಹ ತನ್ನಲ್ಲಡಗಿಸಿಕೊಳ್ಳುವ ಸಾಮರ್ಥ್ಯವನ್ನು ಅದು ಪಡೆದುದಾಗಿರುತ್ತದೆ. ಅಂತೆಯೇ 'ಸರ್ವಮಹಂ' ಎಲ್ಲವೂ ನಾನೇ ಎಂಬ ಅವನ ಒಂದು ಭಾವನೆಯಲ್ಲಿ ವಿಶ್ವವೆಲ್ಲವೂ ಅಡಕವಾಗಿ ಹೋಗುತ್ತದೆ. ಇಷ್ಟೊಂದು ವಿಶಾಲವಾದ ಭಾವನೆಯು ಅವನಿಗಿರುವುದರಿಂದಲೇ ಅವನಿಗೆ ಭಾಜನಸ್ಥಲೀ ಎಂಬುದಾಗಿ ಕರೆಯಬಹುದೆಂಬುದಾಗಿ ತಿಳಿಯಪಡಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೫ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)



ಆಶೀರ್ವಚನ-೧

# ಅಂಗಾಲೇಪಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ವಿದ್ಯಾರ್ಥಿಗಳೇ ! ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ಉತ್ಕೃಷ್ಟ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳನ್ನು ಕುರಿತು ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿರುವಿರಿ. ನಿನ್ನೆಯ ದಿನ ಭಾಜನ ಸ್ಥಲವನ್ನು ಕುರಿತು ವಿಚಾರಿಸಲಾಯಿತು. ಇಂದು ಅದರ ಮುಂದಿನ ಸ್ಥಲವಾದ ಅಂಗಾಲೇಪ ಸ್ಥಲದ ಬಗ್ಗೆ ವಿವೇಚಿಸೋಣ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭಾಜನ ಸ್ಥಲದ ಶಿವಯೋಗಿಗೆ ಪ್ರಾಪ್ತವಾಗುತ್ತಿರುವ ಅಂಗಾಲೇಪಸ್ಥಲವನ್ನು ಕುರಿತು–

ದಿಕ್ಕಾಲಾದ್ಯನವಚ್ಛಿನ್ನಂ ಚಿದಾನಂದಮಯಂ ಮಹತ್ ।
ಯಸ್ಯರೂಪಮಿದಂ ಖ್ಯಾತಂ ಸೋಽಂಗಾಲೇಪ ಇಹೋಚ್ಯತೇ ॥

(ಸಿ. ಶಿ. ೨೦–೪೨)

ಎಂದು ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಪರಿಚ್ಛಿನ್ನವೂ, ಸಚ್ಚಿದಾನಂದ ಸ್ವರೂಪವೂ ಆದ ಪರಶಿವಬ್ರಹ್ಮ ಸ್ಥಿತಿಯನ್ನು ಪ್ರಾಪ್ತ ಮಾಡಿಕೊಂಡ ಶಿವಯೋಗಿಯು ಶರೀರಕ್ಕೆ ಸಂಬಂಧಪಟ್ಟ ಕ್ರಿಯಾಕಲಾಪಗಳಿಂದ ಅಲಿಪ್ತನಾಗಿರೋಣದರಿಂದ ಅವನಿಗೆ 'ಅಂಗಾಲೇಪ'ನೆಂಬುದಾಗಿ ಕರೆಯಲಾಗಿದೆ.

ದೇಹದಲ್ಲಿದ್ದು ದೇಹದ ವ್ಯವಹಾರವನ್ನು ತನ್ನ ಮೇಲೆ ಆರೋಪ ಮಾಡಿಕೊಳ್ಳದಿರುವ ಸ್ಥಿತಿಯೇ ಅಂಗಾಲೇಪಸ್ಥಿತಿಯು. ಸರೋವರದಲ್ಲಿ ಬೆಳೆದಿರುವ ಕಮಲವು ನೀರಿನಲ್ಲಿಯೇ ಇದ್ದರೂ ಆ ನೀರು ತನಗೆ ಲೇಪವಾಗದ ಹಾಗೆ ಇರುವುದನ್ನು ನಾವೆಲ್ಲ ನೋಡುತ್ತೇವೆ. ನೀರಿನ ಹನಿಗಳು ಕಮಲ ಪತ್ರದ ಮೇಲೆ ಬಿದ್ದಿದ್ದರೂ ಅವು ಕಮಲದ ಎಲೆಗಿಂತಲೂ ಭಿನ್ನವಾಗಿಯೇ ಇದ್ದು ಸ್ವಲ್ಪ ಗಾಳಿ ಬೀಸಿದೊಡನೆ ಕೆಳಗೆ ಉದುರಿ ಹೋಗುತ್ತವೆ. ಆಗ ಆ ಎಲೆಯು ನೀರಿನ ಸ್ಪರ್ಶದಿಂದ ತೋಯದೇ ಅದರಿಂದ ಅಸಂಗವಾಗಿಯೇ ಇದ್ದುದು ಕಂಡುಬರುವುದು. ಪ್ರಕೃತಿಯಲ್ಲಿ ಪರಮಾತ್ಮನು ಇಂತಹ ಅನೇಕ ದೃಶ್ಯಗಳನ್ನು ನಿರ್ಮಿಸಿದ್ದಾನೆ. ಸಂಸಾರದಲ್ಲಿದ್ದೂ ಸಹ ಅದರಿಂದ ಅಲಿಪ್ತನಾಗಿರುವುದನ್ನು ಇದರಿಂದ ಸಹಜವಾಗಿ ತಿಳಿದುಕೊಳ್ಳಬಹುದಾಗಿದೆ. ಹೀಗೆ ಅಲಿಪ್ತನಾದ ವ್ಯಕ್ತಿಯೇ ಸರ್ವದಾ ಸುಖಿಯಾಗಿ ಇರಬಲ್ಲನು. ಈ ಸ್ಥಿತಿಯನ್ನು ಪಡೆದುಕೊಳ್ಳಬೇಕಾದರೆ ತನ್ನಾತ್ಮವು

ಅಪರಿಚ್ಛಿನ್ನವಾಗಿಯೂ, ಸಚ್ಚಿದಾನಂದ ಸ್ವರೂಪವಾಗಿಯೂ ಇರುವುದೆಂದು ತಿಳಿದು ಕೊಂಡಿರಬೇಕಾಗುತ್ತದೆ.

ಪರಿಚ್ಛೇದವೆಂದರೆ ಮರ್ಯಾದೆ, ಇತಿ ಮಿತಿಯೆಂದರ್ಥ. ಶಾಸ್ತ್ರಕಾರರು ಕಾಲಪರಿಚ್ಛೇದ, ದೇಶಪರಿಚ್ಛೇದ ಮತ್ತು ವಸ್ತುಪರಿಚ್ಛೇದ ಎಂಬುದಾಗಿ ಪರಿಚ್ಛೇದವನ್ನು ಮೂರು ಪ್ರಕಾರವಾಗಿ ಪ್ರತಿಪಾದಿಸಿದ್ದಾರೆ. ಒಂದು ಕಾಲದಲ್ಲಿದ್ದು ಇನ್ನೊಂದು ಕಾಲದಲ್ಲಿ ಇಲ್ಲದಿರುವುದೇ ಕಾಲಪರಿಚ್ಛೇದವು. ಇದೇ ಪ್ರಕಾರವಾಗಿ ಒಂದು ದೇಶದಲ್ಲಿದ್ದು ಇನ್ನೊಂದು ದೇಶದಲ್ಲಿ ಇಲ್ಲದಿರುವುದೇ ದೇಶಪರಿಚ್ಛೇದವು. ಇನ್ನು ಘಟವು ಮಠವಲ್ಲ ಮಠವು ಘಟವಲ್ಲ ಎಂಬುದಾಗಿ ಎರಡು ವಸ್ತುಗಳ ಪರಸ್ಪರ ಭೇದ ಪ್ರತೀತಿಯೇ ವಸ್ತು ಪರಿಚ್ಛೇದವು. ಪ್ರಪಂಚದ ಸ್ಥೂಲ ಪದಾರ್ಥಗಳೆಲ್ಲ ಈ ಪೂರ್ವದಲ್ಲಿ ಹೇಳಿದ ಈ ಪರಿಚ್ಛೇದಗಳಿಗೆ ಒಳಪಡುತ್ತವೆ. ಆದರೆ ನಮ್ಮೆಲ್ಲರ ಆತ್ಮವು ಸರ್ವದೇಶ, ಸರ್ವಕಾಲ ಮತ್ತು ಸರ್ವವಸ್ತುಗಳಲ್ಲೆಲ್ಲ ಅನುಸ್ಯೂತವಾಗಿರೋಣದರಿಂದ ಅದನ್ನು ದೇಶಕಾಲಾದಿ ಪರಿಚ್ಛೇದ ಶೂನ್ಯವೆಂಬುದಾಗಿ ತಿಳಿದುಕೊಳ್ಳಬೇಕಾಗುತ್ತದೆ. ಇದೂ ಅಲ್ಲದೇ ಈ ಆತ್ಮವು ಸತ್ತು, ಚಿತ್ತು, ಆನಂದ ಸ್ವರೂಪವು ಸಹ ಆಗಿರುತ್ತದೆ. ಇಂತಹ ಆತ್ಮ ತತ್ತ್ವವೇ ನನ್ನ ಸ್ವರೂಪವೆಂಬುದಾಗಿ ತಿಳಿದುಕೊಂಡ ಶಿವಯೋಗಿಯು ಪರಶಿವಬ್ರಹ್ಮ ಸ್ವರೂಪನೇ ಆಗಿರುತ್ತಾನೆ. ಇಂತಹ ಸ್ವರೂಪವನ್ನು ಪಡೆದ ಶಿವಯೋಗಿಯ ಮನಸ್ಸಿನಲ್ಲಿ ರಾಗ ದ್ವೇಷಾದಿಗಳಾಗಲಿ, ಅನುಕೂಲ ಪ್ರತಿಕೂಲ ಭಾವನೆಗಳಾಗಲಿ ಇರುವುದಿಲ್ಲ. ಅಂತೆಯೇ ಅವನ ಯಾವುದೇ ವ್ಯವಹಾರದಿಂದಲೂ ಪುಣ್ಯಪಾಪಗಳು ಉತ್ಪನ್ನವಾಗದೇ ಅವನು ಅಲಿಪ್ತನಾಗಿರುತ್ತಾನೆ. ಅಂತೆಯೇ ಇದಕ್ಕೆ ಅಂಗಾಲೇಪಸ್ಥಲವೆಂಬುದಾಗಿ ಕರೆದಿದ್ದಾರೆ.

ಇದೇ ವಿಷಯವನ್ನೇ ಪೂಜ್ಯಪಾದರು ಪುನಃ ಮತ್ತೊಂದು ದೃಷ್ಟಾಂತದ ಮೂಲಕ–

ಸಮಸ್ತ ಜಗದಾತ್ಮಾಪಿ ಸಂವಿದ್ರೂಪೋ ಮಹಾಮತಿಃ ।
ಲಿಪ್ಯತೇ ನೈವ ಸಂಸಾರ್ಯೈರ್ಯಥಾ ಧೂಮಾದಿಭಿರ್ನಭಃ ॥

(ಸಿ. ಶಿ. ೨೦–೪೩)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಕಾಶವು ತನ್ನಲ್ಲಿ ಓಡಾಡುವ ಹೊಗೆ ಮೋಡಾದಿಗಳಿಂದ ಅಲಿಪ್ತವಾಗಿರುವಂತೆ ಚಿದ್ರೂಪನೂ, ಮಹಾಮತಿಯೂ ಮತ್ತು ಸಮಸ್ತ ಜಗದಾತ್ಮಸ್ವರೂಪನೂ ಆದ ಈ ಶಿವಯೋಗಿಯು ಸಾಂಸಾರಿಕ ದೋಷಗಳಿಂದ ಲಿಪ್ತನಾಗಲಾರನು.

ಈ ಅಂಗಾಲೇಪಸ್ಥಲದ ಶಿವಯೋಗಿಯು ಶಿವಾದ್ವೈತ ಜ್ಞಾನಸಂಪನ್ನನಾಗಿ ರೋಣದರಿಂದ ಮಹಾಬುದ್ಧಿಶಾಲಿಯಾಗಿರುವನಲ್ಲದೆ, ಜಗತ್ತಿನ ತುಂಬೆಲ್ಲ ತನ್ನಾತ್ಮವೇ ವ್ಯಾಪಿಸಿಕೊಂಡಿದೆ ಎಂಬುದಾಗಿ ತಿಳಿದುಕೊಂಡಿರುತ್ತಾನೆ. ಅಂತೆಯೇ ಆತನಿಗೆ ಜಗದಾತ್ಮಾ ಎಂಬುದಾಗಿ ಕರೆಯಲಾಗಿದೆ. ಅವನು ಅಂತಃಕರಣದ ಧರ್ಮಗಳಿಂದ ಅಸಂಗನಾಗಿ ರೋಣದರಿಂದ ಅವನಿಗೆ ರಾಗ, ದ್ವೇಷ, ಪುಣ್ಯ ಮತ್ತು ಪಾಪಾದಿಗಳ ಸಂಬಂಧವಿರು ವುದಿಲ್ಲ, ಹೀಗೆ ಅಂತಃಕರಣದ ಸ್ಥಿತಿಯನ್ನು ಮೀರಿ ಕೇವಲ ಆತ್ಮಸ್ಥಿತಿಯಲ್ಲಿರುವುದರಿಂದ

ಅವನು ಆಕಾಶದಂತೆ ಅಲಿಪ್ತನಾಗಿರುತ್ತಾನೆ. ಆಕಾಶದಲ್ಲಿ ಮೋಡ, ಮಳೆ ಮತ್ತು ಹೊಗೆ ಮೊದಲಾದವುಗಳು ಇದ್ದರೂ ಆಕಾಶಕ್ಕೆ ಅವುಗಳ ಲೇಪವೇ ಆಗುವುದಿಲ್ಲ. ಮನೆಯೊಳಗೆ ಹೊಗೆ ಹೆಚ್ಚಾದಾಗ ಆ ಹೊಗೆಯ ಸ್ಪರ್ಶವು ಕಣ್ಣಿಗಾಗಲು ಕಣ್ಣುರಿತ, ಕಣ್ಣಲ್ಲಿ ನೀರು ಬರುವುದನ್ನು ನಾವೆಲ್ಲ ಅನುಭವಿಸುತ್ತೇವೆ. ಕಣ್ಣಿಗೆ ಹೊಗೆಯ ಸ್ಪರ್ಶವಾಗಿರುವುದರಿಂದ ಈ ರೀತಿಯಾದ ಪರಿಣಾಮವಾಗುವುದು. ಆದರೆ ಆಕಾಶದಲ್ಲಿ ಅದೆಷ್ಟೇ ದಟ್ಟವಾದ ಹೊಗೆಯಿದ್ದರೂ ಆಕಾಶಕ್ಕೆ ಯಾವುದೇ ವಿಧವಾದ ವಿಕಾರವು ಉಂಟಾಗುವುದಿಲ್ಲ. ಅಂತೆಯೇ ಆಕಾಶವು ನಿರ್ಲೇಪವಾಗಿರುತ್ತದೆ. ಆಕಾಶವು ಒಂದು ಮಹಾಭೂತವು. ಇದರಲ್ಲಿಯೇ ಇಷ್ಟೊಂದು ಅಲಿಪ್ತತೆಯಿರುವಾಗ ಆಕಾಶಕ್ಕೂ ಆಕಾಶವಾಗಿರುವ ಆತ್ಮವು ಅದೆಷ್ಟು ಅಲಿಪ್ತವಾಗಿದೆಯೆಂಬುದನ್ನು ಊಹಿಸಬಹುದಾಗಿದೆ. ಅಂತೆಯೇ ಶಾಸ್ತ್ರಕಾರರು ಆತ್ಮಪರಮಾತ್ಮರುಗಳಿಗೆ ಹೋಲಿಕೆಯನ್ನು ಕೊಡಬೇಕಾದಾಗ ಆಕಾಶದ ಹೋಲಿಕೆಯನ್ನೇ ಕೊಟ್ಟಿರುತ್ತಾರೆ. ಆದ್ದರಿಂದ ಈ ಅಂಗಾಲೇಪಸ್ಥಲದ ಶಿವಯೋಗಿಯು ಸಹ ಆಕಾಶದಂತೆ ಅಲಿಪ್ತನಾಗಿದ್ದಾನೆಂಬುದಾಗಿ ತಿಳಿದುಕೊಳ್ಳಬೇಕು.

ಈ ರೀತಿಯಾಗಿ ಅಂಗಾಲೇಪಸ್ಥಿತಿಯನ್ನು ಪಡೆದ ಶಿವಯೋಗಿಗೆ ಶಾಸ್ತ್ರದ ವಿಧಿ ನಿಷೇಧಗಳು ಇರುವುದಿಲ್ಲ ಎಂಬ ವಿಷಯವನ್ನು ತಿಳಿಸಲೋಸುಗ ಪೂಜ್ಯರು ಪುನಃ–

ನ ವಿಧಿರ್ನ ನಿಷೇಧಶ್ಚ ನ ವಿಕಲ್ಪೋ ನ ವಾಸನಾ ।
ಕೇವಲಂ ಚಿತ್ಸ್ವರೂಪಸ್ಯ ಗಲಿತಪ್ರಾಕೃತಾತ್ಮನಃ ॥

(ಸಿ. ಶಿ. ೨೦–೪೪)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಅಂಗಾಲೇಪಸ್ಥಲದ ಶಿವಯೋಗಿಗೆ ಯಾವುದೇ ವಿಧವಾದ ವಿಧಿ ನಿಷೇಧಗಳು ಇರುವುದಿಲ್ಲ. ಇದೂ ಅಲ್ಲದೆ ಅವನ ಮನಸ್ಸಿನಲ್ಲಿ ಯಾವುದೇ ವಿಷಯಕವಾದ ವಿಕಲ್ಪವಾಗಲಿ, ವಾಸನೆಯಾಗಲಿ, ತಲೆದೋರುವುದಿಲ್ಲ. ಕೇವಲ ಚಿತ್ಸ್ವರೂಪದಲ್ಲಿ ವಿಲೀನನಾದ ಅವನಲ್ಲಿ ಯಾವುದೇ ವಿಧವಾದ ಪ್ರಕೃತ ವಿಚಾರಗಳು ಸಹ ಕಂಡುಬರುವುದಿಲ್ಲ.

ವೇದ, ಆಗಮ ಮುಂತಾದ ಶಾಸ್ತ್ರಗಳು ಮನುಷ್ಯ ಜೀವನವನ್ನು ನಿಯಂತ್ರಣಗೊಳಿಸಲು ವಿಧಿ ಮತ್ತು ನಿಷೇಧ ರೂಪಗಳಾದ ಆದೇಶಗಳನ್ನು ಮಾಡಿರುತ್ತವೆ. ಇವುಗಳಲ್ಲಿ ಯಾವ ಕರ್ಮಾದಿಗಳನ್ನು ಅವಶ್ಯವಾಗಿ ಮಾಡಲೇಬೇಕೆಂಬುದಾಗಿ ಶಾಸ್ತ್ರವು ವಿಧಿಸುತ್ತದೆಯೋ ಅದಕ್ಕೆ ವಿಧಿ ಅಥವಾ ವಿಹಿತ ಕರ್ಮವೆಂದು ಕರೆಯುತ್ತಾರೆ. 'ಸತ್ಯಂ ವದ' ಸತ್ಯವನ್ನು ನುಡಿ, 'ಧರ್ಮಂ ಚರ' ಧರ್ಮದಿಂದ ನಡೆ, 'ಸ್ವಾಧ್ಯಾಯಾನ್ಮಾ ಪ್ರಮದಃ' ದೈನಂದಿನ ಶಾಸ್ತ್ರಾಭ್ಯಾಸವನ್ನು ತಪ್ಪದೇ ಮಾಡು ಮುಂತಾದ ಶಾಸ್ತ್ರದ ಆದೇಶಕ್ಕೆ ವಿಧಿ ಅಥವಾ ವಿಹಿತಕರ್ಮವೆನ್ನುತ್ತಾರೆ. ಇನ್ನು 'ಸುರಾಂ ನ ಪಿಬೇತ', ಮದ್ಯಪಾನವನ್ನು ಮಾಡಕೂಡದು, 'ಮಾ ಹಿಂಸ್ಯಾತ್ ಸರ್ವಭೂತಾನಿ' ಯಾವ ಪ್ರಾಣಿಗಳ ಹಿಂಸೆಯನ್ನೂ ಮಾಡಬಾರದು. 'ನ ಕಲಂಜಂ ಭಕ್ಷಯೇತ' ಮಾಂಸ ಭಕ್ಷಣವನ್ನು ಮಾಡಬೇಡ ಮುಂತಾದ ಶಾಸ್ತ್ರದ ಉಪದೇಶಕ್ಕೆ ನಿಷೇಧ ಅಥವಾ ನಿಷಿದ್ಧಕರ್ಮವೆಂದು ಕರೆಯುತ್ತಾರೆ. ಇಂತಹ ವಿಧಿ ನಿಷೇಧಗಳು ಸಾಮಾನ್ಯರಾದ ಅಜ್ಞ ಜೀವಿಗಳಿಗೆ

ಉಪದೇಶಿಸಲ್ಪಡುವವೇ ವಿನಃ ಈ ಅಂಗಾಲೇಪಸ್ಥಲದ ಸಾಧಕನಿಗೆ ಸಂಬಂಧ ಪಡಲಾರವು. ಯಾರ ಮನಸ್ಸಿನಲ್ಲಿ ದೇಹಾದಿಗಳ ಅಭಿಮಾನವಿದೆಯೋ ಅವನಿಗೇನೆ ವಿಧಿ ನಿಷೇಧಗಳೇ ವಿನಃ ಅಂಗದಿಂದಲೇ ಅಲಿಪ್ತನಾದವನಿಗೆ ಅದಾವ ವಿಧಿ ನಿಷೇಧಗಳೂ ಇರುವುದಿಲ್ಲ, ಇದು ಅಲ್ಲದೆ ಇವನು ಸದಾ ಸಚ್ಚಿದಾನಂದ ರೂಪವಾದ ಪರಶಿವ ತತ್ತ್ವದ ಚಿಂತನೆಯಲ್ಲಿರೋಣದರಿಂದ ಇವನ ಮನಸ್ಸಿನಲ್ಲಿ ಯಾವುದೇ ವಿಧವಾದ ಮನೋ ರಾಜ್ಯವು ಉಂಟಾಗುವುದಿಲ್ಲ, ಸಾಂಸಾರಿಕ ವಸ್ತುಗಳ ಅಪೇಕ್ಷೆಯಿರುವ ವ್ಯಕ್ತಿಯ ಮನಸ್ಸಿ ನಲ್ಲಿ ಮನೋರಾಜ್ಯವು ಉಂಟಾಗುವುದೇ ವಿನಃ ಆತ್ಮಚಿಂತನೆಯಲ್ಲಿ ಇರುವ ಶಿವಯೋಗಿಯ ಮನಸ್ಸಿನಲ್ಲಿ ಅದಾವುದೇ ವಿಧವಾದ ವಿಕಲ್ಪ ವೃತ್ತಿಯು ಜನಿಸುವುದಿಲ್ಲ, ಅಂತೆಯೇ ಈತನು ವಾಸನಾ ರಹಿತನೆಂಬುದಾಗಿಯೂ ಪೂಜ್ಯಪಾದರು ಆದೇಶ ವಿತ್ತಿದ್ದಾರೆ. ಪ್ರಾಕೃತ ಭಾವನೆಗಳಿಲ್ಲದ ಕೇವಲ ಸಚ್ಚಿದಾನಂದ ಸ್ವರೂಪವಾದ ತನ್ನ ಆತ್ಮ ಚಿಂತನೆಯಲ್ಲಿಯೇ ಈತನು ತಲ್ಲೀನನಾಗಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ವಾಸನಾರಹಿತನಾದ ಈ ಶಿವಯೋಗಿಯ ಅಭೇದ ಜ್ಞಾನವನ್ನು ಕುರಿತು ಪುನಃ–

ಘಟಾದಿಷು ಪೃಥಗ್ಭೂತಂ ಯಥಾಕಾಶಂ ನ ಭಿದ್ಯತೇ ।
ತಥೋಪಾಧಿಗತಂ ಬ್ರಹ್ಮ ನಾನಾರೂಪಂ ನ ಭಿದ್ಯತೇ ॥

(ಸಿ. ಶಿ. ೨೦–೪೫)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಉಪಾಧಿರೂಪಗಳಾದ ಘಟಗಳು ಅನೇಕಗಳಾಗಿದ್ದರೂ, ಅವುಗಳೊಳಗಿನ ಆಕಾಶವು ಒಂದೆಯಾಗಿರುವಂತೆ ದೇವ, ದಾನವ ಮತ್ತು ಮಾನವ ಮೊದಲಾದ ಶರೀರರೂಪಿ ಉಪಾಧಿಗಳು ಭಿನ್ನ ಭಿನ್ನ ಗಳಾಗಿದ್ದರೂ, ಆ ಎಲ್ಲ ಶರೀರಗಳಲ್ಲಿರುವ ಪರಶಿವ ಬ್ರಹ್ಮತತ್ತ್ವವು ಒಂದೇಯಾಗಿದೆ ಎಂಬುದಾಗಿ ತಿಳಿದುಕೊಳ್ಳಬೇಕು.

ಓರ್ವ ಕುಂಬಾರನು ಅನೇಕ ಘಟಾದಿಗಳನ್ನು ನಿರ್ಮಾಣ ಮಾಡುತ್ತಿರುವಾಗ ಅವೆಲ್ಲವುಗಳಲ್ಲಿ ಸಹಜವಾಗಿ ಆಕಾಶವು ಸ್ಥಿತವಾಗಿರುತ್ತದೆ. ಆ ಆಕಾಶಕ್ಕೆ ಘಟಾಕಾಶ ವೆಂದು ಕರೆಯುತ್ತಾರೆ. ಹೀಗೆ ನಿರ್ಮಾಣಗೊಂಡ ಪ್ರತಿಯೊಂದು ಘಟದಲ್ಲಿರುವ ಆಕಾಶವು ಉಪಾಧಿಯಿಂದ ಬೇರೆಯಾಗಿ ತೋರುತ್ತಿದ್ದರೂ ವಾಸ್ತವಿಕವಾಗಿ ಅದರಲ್ಲಿ ಯಾವ ಭೇದವೂ ಇರುವುದಿಲ್ಲ, ಇದೇ ತೆರನಾಗಿ ಈ ಜಗತ್ತಿನಲ್ಲಿ ಇರುವ ಎಂಬತ್ನಾಲ್ಕು ಲಕ್ಷ ಪ್ರಕಾರದ ಜೀವರಾಶಿಗಳ ಶರೀರವೆಂಬ ಉಪಾಧಿಯಲ್ಲಿ ಇರುವ ಪರಶಿವ ಬ್ರಹ್ಮತತ್ತ್ವವು ವಾಸ್ತವಿಕವಾಗಿ ಒಂದೇಯಾಗಿದ್ದರೂ ಎಷ್ಟು ಶರೀರಗಳೋ ಅಷ್ಟು ಭೇದ ವಾಗಿ ತೋರುತ್ತಿರುತ್ತದೆ. ಈ ಪ್ರಪಂಚದಲ್ಲಿ ತೋರುವ ಈ ಪರಸ್ಪರ ಭೇದ ವ್ಯವಹಾರವು ಉಪಾಧಿ ಮೂಲಕವಾದುದೇ ವಿನಃ ವಾಸ್ತವಿಕವಾದುದಲ್ಲ. ''ರೂಪಂ ರೂಪಂ ಪ್ರತಿರೂಪೋ ಬಭೂವ'' ಎಂಬ ಉಪನಿಷತ್ತಿನ ಮಂತ್ರವು ಸಹ ಒಬ್ಬನೇಯಾದ ಪರಮಾತ್ಮನ ಅನಂತ ರೂಪಗಳನ್ನು ಪ್ರತಿಪಾದಿಸಿ ಈ ಅನಂತತೆಯು ಔಪಾಧಿಕವೆಂದು ಹೇಳಿ ಕೊನೆಗೆ ಅನಂತವಾಗಿ ತೋರುವ ಆ ತತ್ತ್ವವು ಒಂದೇಯೆಂಬುದಾಗಿ

ಉಪದೇಶಿಸಿದೆ. ಹೀಗೆ ಈ ಅಂಗಾಲೇಪಸ್ಥಲದ ಶಿವಯೋಗಿಯು ಅನಂತ ಭೇದಗಳ ಮಧ್ಯೆಯೂ ಅಭೇದಾನುಭೂತಿಯನ್ನು ಅನುಭವಿಸುತ್ತಿರುತ್ತಾನೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಅಂಗಾಲೇಪಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಕೊನೆಯದಾಗಿ–

ಅನಶ್ವರಮನಿರ್ದೇಶ್ಯಂ ಯಥಾ ವ್ಯೋಮ ಪ್ರಕಾಶತೇ ।
ತಥಾ ಬ್ರಹ್ಮಾಪಿ ಚೈತನ್ಯಮತ್ರ ವೈಶೇಷಿಕೀ ಕಲಾ ॥

ನ ದೇವತ್ವಂ ನ ಮಾನುಷ್ಯಂನ ತಿರ್ಯಕ್ತ್ವಂ ನ ಚಾನ್ಯಥಾ ।
ಸರ್ವಾಕಾರತ್ವಮಾಖ್ಯಾತಂ ಜೀವನ್ಮುಕ್ತಸ್ಯ ಯೋಗಿನಃ ॥

(ಸಿ. ಶಿ. ೨೦–೪೬–೪೭)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಆಕಾಶವು ಯಾವ ಪ್ರಕಾರವಾಗಿ ಅನಶ್ವರವೂ, ಅನಿರ್ದೇಶ್ಯವೂ ಆಗಿರುತ್ತದೆಯೋ ಅದೇ ಪ್ರಕಾರವಾಗಿ ಪರಶಿವ ಬ್ರಹ್ಮಚೈತನ್ಯವೂ ಸಹ ನಾಶರಹಿತವೂ, ಅವಾಙ್ಮನಸಗೋಚರವೂ ಆಗಿ ಈ ಭೂತಾಕಾಶ ಕ್ಕಿಂತಲೂ ವಿಲಕ್ಷಣವಾಗಿ ತೋರುತ್ತಿರುತ್ತದೆ. ಆ ಪರಶಿವ ತತ್ತ್ವವು ದೇವ, ತಿರ್ಯಙ್ಮನು ಷ್ಯಾದಿಗಳಿಗಿಂತಲೂ ಭಿನ್ನವಾಗಿರುವುದಲ್ಲದೆ ಸರ್ವರೂಪವೂ ಸಹ ಆಗಿರುತ್ತದೆ. ಜೀವನ್ಮುಕ್ತನಾದ ಶಿವಯೋಗಿಯು ಇಂತಹ ವಿಲಕ್ಷಣವಾದ ಸ್ಥಿತಿಯನ್ನು ಪಡೆದು ಕೊಂಡವನಾಗಿ ಅಂಗಾಲೇಪಸ್ಥಲೀ ಎಂದು ಕರೆಸಿಕೊಳ್ಳುತ್ತಾನೆ.

ಪಂಚಮಹಾಭೂತಗಳಲ್ಲಿ ಅತಿ ಸೂಕ್ಷ್ಮವಾಗಿರುವ ಮಹಾಭೂತವಾದ ಆಕಾಶವು ನಿತ್ಯವಾಗಿರುತ್ತದೆ. ಯಾವುದು ನಾಶಹೊಂದುವುದಿಲ್ಲವೋ ಅದಕ್ಕೆ ಅನಶ್ವರವೆಂದು ಕರೆಯುತ್ತಾರೆ. ಆಕಾಶವು ಸರ್ವಥಾ ಅನಶ್ವರವಾಗಿರದಿದ್ದರೂ ಉಳಿದ ಭೂತಗಳೊಂದಿಗೆ ಹೋಲಿಸಿ ನೋಡಿದಾಗ ಇದು ಅನಶ್ವರವಾಗಿ ಕಂಡುಬರುತ್ತದೆ. ಆಕಾಶದ ವಿನಾಶವು ಹೇಗಾಗುವುದೆಂಬುದು ಸಹಸಾ ತಿಳಿಯದ ವಿಷಯವು. ಇದರ ಅನಶ್ವರತೆಯು ಸರ್ವರಿಗೂ ಅನುಭೂತವಾಗಿರೋಣದರಿಂದ ಈ ಆಕಾಶದ ಉದಾಹರಣೆ ಮೂಲಕ ವಾಗಿಯೇ ಪರಶಿವ ತತ್ತ್ವದ ಅನಶ್ವರತೆಯನ್ನು ಪ್ರತಿಪಾದಿಸಲಾಗಿದೆ. ಆಕಾಶವು ನಾಶರಹಿತವಾಗಿರುವಂತೆ ಅನಿರ್ದೇಶ್ಯವೂ ಸಹ ಆಗಿರುತ್ತದೆ. ಅನಿರ್ದೇಶ್ಯವೆಂದರೆ ತೋರಿಸಲು ಬಾರದ್ದೆಂದರ್ಥ. ಆಕಾಶವನ್ನು ತೋರಿಸಲಿಕ್ಕಾಗುವುದಿಲ್ಲ. ಆಕಾಶದೊಳಗಿನ ವಸ್ತುಗಳನ್ನು ನಾವು ಕಾಣಬಹುದು. ವಸ್ತುಗಳು ಇರದೇ ಇದ್ದಾಗ ಆಕಾಶದ ತುಂಬೆಲ್ಲ ವ್ಯಾಪಿಸಿರುವ ಬೆಳಕನ್ನಾಗಲಿ ಅಥವಾ ಕತ್ತಲೆಯನ್ನಾಗಲಿ ಕಾಣಬಹುದೇ ವಿನಹ ನೇರ ವಾಗಿ ಆಕಾಶವನ್ನು ನೋಡಲಿಕ್ಕಾಗಲಿ ಅಥವಾ ಮುಟ್ಟಲಿಕ್ಕಾಗಲಿ ಸಾಧ್ಯವಾಗುವುದಿಲ್ಲ. ಏಕೆಂದರೆ ಅದಕ್ಕೆ ಉದ್ಬುದವಾದ ರೂಪಸ್ಪರ್ಶಾದಿಗಳು ಇರುವುದಿಲ್ಲ. ಅಂತೆಯೇ ಪೂಜ್ಯಪಾದರು ಆಕಾಶಕ್ಕೆ ಅನಿರ್ದೇಶ್ಯವೆಂಬುದಾಗಿ ಕರೆದಿದ್ದಾರೆ. ಆಕಾಶವು ಅನಿರ್ದೇಶ್ಯ ವಾಗಿರುವಂತೆ ಆಕಾಶಕ್ಕೂ ಆಕಾಶವಾಗಿರುವ ಆತ್ಮವು ಸಹ ಅನಿರ್ದೇಶ್ಯವೇ ಆಗಿರುತ್ತದೆ. ಇಲ್ಲಿ ಆತ್ಮಸ್ವರೂಪವನ್ನು ತಿಳಿಸಲೋಸುಗ ಆಕಾಶಕ್ಕೆ ಅನಶ್ವರ ಅನಿರ್ದೇಶ್ಯವೆಂಬುದಾಗಿ ಹೇಳಿದ್ದರೂ ಆತ್ಮನ ಅನಶ್ವರತ್ವ, ಅನಿರ್ದೇಶ್ಯತ್ವಗಳು ಇದಕ್ಕಿಂತಲೂ ವಿಲಕ್ಷಣ

ವಾಗಿರುತ್ತವೆ. ಸಾಮಾನ್ಯತಃ ಆಕಾಶವು ಅನಶ್ವರವೂ ಅನಿರ್ದೇಶ್ಯವೂ ಎಂದು ಹೇಳಿದ್ದರೂ ಅದು ಒಂದು ಮಹಾಭೂತವಾಗಿರೋಣದರಿಂದ ಅದರ ವಿನಾಶ ಮತ್ತು ನಿರ್ದೇಶಗಳು ಸಂಭವಿಸಿದರೂ ಆತ್ಮನಲ್ಲಿ ಮಾತ್ರ ಇವೆರಡೂ ಸರ್ವಥಾ ಇರುವುದಿಲ್ಲವೆಂಬುದಾಗಿ ತಿಳಿದುಕೊಳ್ಳಬೇಕು. ಆಕಾಶವು ಜಡವಾಗಿದ್ದು ಪರಶಿವ ಬ್ರಹ್ಮತತ್ತ್ವವು ಚಿದ್ರೂಪವಾಗಿರುತ್ತದೆ. ಅಂತೆಯೇ ಅದಕ್ಕೆ ಚಿದಾಕಾಶವೆಂತಲೂ ಕರೆದಿದ್ದಾರೆ. ಪರಶಿವ ಬ್ರಹ್ಮತತ್ತ್ವಕ್ಕೆ ತನ್ನ ಬೋಧೆಯಿರುವಂತೆ ಆಕಾಶಕ್ಕೆ ಸ್ವಸ್ವರೂಪದ ಬೋಧೆಯಿರುವುದಿಲ್ಲ. ಇಲ್ಲಿ ಪರಶಿವ ತತ್ತ್ವಕ್ಕೆ ಹೋಲಿಕೆಯಾಗಿ ಕೊಟ್ಟಿರುವ ಆಕಾಶದ ಹೋಲಿಕೆಯು ನೀಚೋಪಮಾರೂಪವಾದುದು. ಸಮುದ್ರವನ್ನು ನೋಡದಿರುವವನಿಗೆ ಸಮುದ್ರದ ಬಗ್ಗೆ ತಿಳಿಸುವಾಗ ಊರಿನ ಬಹುದೊಡ್ಡದಾದ ಕೆರೆಯನ್ನು ತೋರಿಸಿ ಸಮುದ್ರವು ಹೀಗೆ ವಿಸ್ತೃತವಾದ ಜಲಸಮೂಹದಂತೆ ಇರುತ್ತದೆಯೆಂದು ಹೇಳುವುದು ಹೇಗೆ ನೀಚೋಪಮಾರೂಪವಾಗಿರುವುದೋ ಹಾಗೇನೇ ಪರಮಾತ್ಮನಿಗೆ ಕೊಟ್ಟಿರುವ ಆಕಾಶದ ಉಪಮಾನವು ಸಹ ನೀಚೋಪಮಾನವೆಂದೇ ತಿಳಿದುಕೊಳ್ಳಬೇಕು.

ಇಂತಹ ಪರಶಿವ ತತ್ತ್ವವನ್ನು ತಿಳಿದುಕೊಂಡ ಜೀವನ್ಮುಕ್ತನಾದ ಶಿವಯೋಗಿಯು ದೇವನಲ್ಲ, ರಾಕ್ಷಸನಲ್ಲ, ಮನುಷ್ಯನಲ್ಲ ಮತ್ತು ಕ್ರಿಮಿಕೀಟ ಪತಂಗಾದಿ ತಿರ್ಯಕ್ ಪ್ರಾಣಿಯೂ ಸಹ ಅವನಾಗಿರುವುದಿಲ್ಲ. ಆದರೆ ಅವನು ಸರ್ವಾಂತರ್ಯಾಮಿಯಾದ ಸರ್ವರ ಆತ್ಮರೂಪವೇ ಆಗಿರುತ್ತಾನೆ. ಹೀಗೆ ಜೀವನ್ಮುಕ್ತನಾದ ಈ ಶಿವಯೋಗಿಯು ಅಂಗಗುಣಗಳನ್ನು ಅಭಿಮಾನಿಸದೇ ಅವುಗಳಿಂದ ಅಸಂಗನಾಗಿರುವುದರಿಂದಲೇ ಇವನಿಗೆ ಅಂಗಾಲೇಪಸ್ಥಲೀಯೆಂಬುದಾಗಿ ಕರೆಯಲಾಗಿದೆ ಎಂದು ತಿಳಿಯಪಡಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೬ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನ ಮಂದಿರ, ಜಂಗಮವಾಡಿ ಮಠ, ವಾರಾಣಸಿ)



ಆಶೀರ್ವಚನ-೧

# ಸ್ವಪರಾಜ್ಞಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಸಿದ್ಧಾಂತಾಸಕ್ತ ವಿದ್ಯಾರ್ಥಿಗಳೇ ! ಮತ್ತು ಕಾರ್ಯಕ್ರಮದಲ್ಲಿ ಭಾಗಿಗಳಾದ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ದಿವ್ಯಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗ ಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲದ ಅವಾಂತರ ಸ್ಥಲಗಳನ್ನು ಕುರಿತು ನೀವೆಲ್ಲ ಆಶೀರ್ವಚನವನ್ನು ಆಲಿಸುತ್ತಿರುವಿರಿ. ನಿನ್ನೆಯ ದಿನ ಅಂಗಾಲೇಪಸ್ಥಲವನ್ನು ಕುರಿತು ವಿಚಾರಿಸಲಾಯಿತು. ಇಂದು ಅದರ ಮುಂದಿನ ಸ್ಥಲವಾದ ಸ್ವಪರಾಜ್ಞಸ್ಥಲದ ಬಗ್ಗೆ ವಿವೇಚಿಸೋಣ. ಸ್ವ ಮತ್ತು ಪರವೆಂಬ ಭೇದ ಜ್ಞಾನವಿಲ್ಲದಿರುವ ಸ್ಥಿತಿಯೇ ಸ್ವಪರಾಜ್ಞ ಸ್ಥಿತಿಯು. ಈ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲಕ್ಕೆ ಸ್ವಪರಾಜ್ಞಸ್ಥಲವೆಂದು ಕರೆಯುತ್ತಾರೆ. ಅದನ್ನೇ ಕುರಿತು ಪೂಜ್ಯಪಾದರು–

ಅಪ್ರಮೇಯೇ ಚಿದಾಕಾರೇ ಬ್ರಹ್ಮಣ್ಯದ್ವೈತವೈಭವೇ ।
ವಿಲೀನಃ ಕಿನ್ನು ಜಾನಾತಿ ಸ್ವಾತ್ಮಾನಂ ಪರಮೇವ ವಾ ॥

(ಸಿ. ಶಿ. ೨೦–೪೮)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಅಪರಿಮಿತ ಚಿದ್ರೂಪವಾದ ಪರಶಿವ ಬ್ರಹ್ಮತತ್ತ್ವದಲ್ಲಿ ಸಮರಸಭಾವದಿಂದ ವಿಲೀನವಾದ ಶಿವಯೋಗಿಯು ತನ್ನನ್ನಾಗಲಿ, ಅನ್ಯರನ್ನಾಗಲಿ ತಿಳಿದುಕೊಳ್ಳುವ ಸ್ಥಿತಿಯಲ್ಲಿ ಇರುವುದಿಲ್ಲ.

ಸ್ವಗತ, ಸಜಾತೀಯ ಮತ್ತು ವಿಜಾತೀಯ ಭೇದರಹಿತವಾದ ಪರಶಿವ ಬ್ರಹ್ಮ ತತ್ತ್ವದಲ್ಲಿ ಸಾಮರಸ್ಯ ಸ್ಥಿತಿಯನ್ನು ಪಡೆದ ಪೂರ್ವದ ಅಂಗಾಲೇಪಸ್ಥಲದ ಶಿವಯೋಗಿಯು ಯಾವಾಗ ತನ್ನ ಹಾಗೂ ಅನ್ಯದರ ಭೇದಜ್ಞಾನಶೂನ್ಯನಾಗುವನೋ ಆಗ ಅವನಿಗೆ ಸ್ವಪರಾಜ್ಞವೆಂದು ಕರೆಯುವರು. ಅವನ ಆ ಸ್ಥಿತಿಯನ್ನು ಪ್ರತಿಪಾದಿಸುವ ಸ್ಥಲವೇ ಸ್ವಪರಾಜ್ಞ ಸ್ಥಲವು. ಪರಶಿವ ತತ್ತ್ವದೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆಯುವ ಪೂರ್ವದಲ್ಲಿ ಸ್ವ–ಪರವೆಂಬ ಭೇದಜ್ಞಾನವಿರುತ್ತದೆ. ಆ ಸಾಮರಸ್ಯವನ್ನು ಪಡೆದಾಗ ಅದು ಇಲ್ಲದಾಗಿ ಅವನು ಸ್ವಪರಾಜ್ಞನಾಗುವನು. ಇದೇ ವಿಷಯವನ್ನೇ ಬೃಹದಾರಣ್ಯಕೋಪನಿಷತ್ತಿನಲ್ಲಿ–''ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಂ ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಮ್'' ಹೀಗೆ ಲೌಕಿಕ ಉದಾಹರಣೆಯ ಮೂಲಕ

ವಾಗಿ ಪ್ರತಿಪಾದಿಸಲಾಗಿದೆ. ತನ್ನ ಪ್ರಿಯತಮೆಯೊಂದಿಗೆ ಸಮರಸನಾಗಿರುವ ವ್ಯಕ್ತಿಯು ತನ್ನ ಹಾಗೂ ಅನ್ಯದರ ತಿಳುವಳಿಕೆಯಿಲ್ಲದ ಸ್ಥಿತಿಯಲ್ಲಿ ಇರುವಂತೆ ಪರಮಾತ್ಮನೊಂದಿಗೆ ಸಮಾನ ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯೂ ಸಹ ಬಾಹ್ಯಾಭ್ಯಂತರಜ್ಞಾನ ವಿಲ್ಲದವನಾಗಿರುತ್ತಾನೆ. ಈ ಸ್ಥಿತಿಯನ್ನು ಪಡೆದ ಆ ಶಿವಯೋಗಿಗೆ ಸ್ವ ಹಾಗೂ ಪರವೆಂಬ ಜ್ಞಾನವು ಇರುವುದಿಲ್ಲ. ''ಸ್ವಪರಜ್ಞಾನಶೂನ್ಯತ್ವಂ ಜಡತ್ವಮ್'' ಎಂಬುದಾಗಿ ಶಾಸ್ತ್ರ ದಲ್ಲಿ ಯಾವುದಕ್ಕೆ ಸ್ವ–ಪರಜ್ಞಾನವಿರುವುದಿಲ್ಲವೋ ಅದಕ್ಕೆ ಜಡವೆಂಬುದಾಗಿ ಕರೆಯು ತ್ತಾರೆ. ಅಂದಾಗ ಈ ಸ್ವಪರಾಜ್ಞ ಶಿವಯೋಗಿಯ ಸ್ಥಿತಿಯು ಕಲ್ಲು, ಮಣ್ಣುಗಳಂತೆ ಜಡ ರೂಪವಾಗಬೇಕಾದೀತಲ್ಲ ಎಂಬ ಸಂಶಯವು ಇಲ್ಲಿ ಉದ್ಭವಿಸಬಹುದು. ಆದರೆ ಕಲ್ಲು ಮಣ್ಣುಗಳಂತೆ ಇವನು ಸರ್ವಥಾ ಜಡನಾಗಿರುವುದಿಲ್ಲ. ಬಾಹ್ಯ ದೃಷ್ಟಿಯಿಂದ ನೋಡಿ ದಾಗ ಜಡನಂತೆ ತೋರಿದರೂ ಸುಷುಪ್ತಿ ಸ್ಥಿತಿಯಲ್ಲಿ ಇರುವ ವ್ಯಕ್ತಿಯಂತೆ ಚಿದ್ರೂಪನೇ ಆಗಿರುತ್ತಾನೆ.

ಗಾಢವಾದ ನಿದ್ರಾವಸ್ಥೆಯಲ್ಲಿ ಮಲಗಿದ ಮನುಷ್ಯನಿಗೆ ಬಾಹ್ಯ ಜಗತ್ತಿನ ಹಾಗೂ ತನ್ನ ಅರಿವು ಅವನಿಗಿರುವುದಿಲ್ಲ. ಆ ಅವಸ್ಥೆಯಲ್ಲಿ ಇರುವಾಗ ತನ್ನ ಸಮೀಪದಲ್ಲಿ ಶತ್ರು–ಮಿತ್ರರಾರೇ ಬರಲೀ ಅವನು ಯಾರಿಗೂ ತಿರಸ್ಕಾರ–ಪುರಸ್ಕಾರಗಳನ್ನು ಮಾಡುವುದಿಲ್ಲ. ಇದರಿಂದ ಜಡನಂತೆ ತೋರಿದರೂ ಆತನು ಜಡನಾಗಿರುವುದಿಲ್ಲ. ಅವನಿಗೆ ಅಮನಸ್ಕ ಸ್ಥಿತಿಯು ಪ್ರಾಪ್ತವಾಗಿರೋಣದರಿಂದ ಹಾಗೆ ಜಡದಂತೆ ತೋರುತ್ತಿರು ತ್ತಾನೆ. ಮನುಷ್ಯನ ಜಾಗ್ರದಾವಸ್ಥೆಯಲ್ಲಿ ಅವನಿಗೆ ಅವನ ಕರಣಗಳಾದ ಬಹಿರಿಂದ್ರಿಯ ಗಳು ಹಾಗೂ ಮನೋಬುದ್ಧಿಗಳು ಸಹಕಾರಿಯಾಗಿದ್ದು, ಅವನ ಬಹಿರಂಗ ವ್ಯವಹಾರವು ಸುಚಾರು ರೀತಿಯಲ್ಲಿ ನಡೆಯುವಂತೆ ಅನುಕೂಲವಾಗಿರುತ್ತದೆ. ಸ್ವಪ್ನಾವಸ್ಥೆಯಲ್ಲಿ ಬಹಿರಿಂದ್ರಿಯಗಳು ತಮ್ಮ ಕಾರ್ಯದಿಂದ ವಿರತವಾದರೂ ಅವನ ಅಂತಃಕರಣವು ಅವನ ಸ್ವಪ್ನ ವ್ಯವಹಾರಕ್ಕೆ ಅನುಕೂಲವಾಗಿ ವರ್ತಿಸುತ್ತಿರುತ್ತದೆ. ಯಾವಾಗ ಜೀವಾತ್ಮನು ಸುಷುಪ್ತಾವಸ್ಥೆಯನ್ನು ತಲುಪುವನೋ ಆಗ ಅವನ ಅಂತಃಕರಣವೂ ಸಹ ತನ್ನ ಕಾರ್ಯ ದಿಂದ ನಿವೃತ್ತವಾಗುವುದು. ಹೀಗೆ ಸುಷುಪ್ತಾವಸ್ಥೆಯಲ್ಲಿ ಬಹಿಃಕರಣ ಹಾಗೂ ಅಂತಃಕರಣದ ವ್ಯವಹಾರವು ನಿಂತು ಹೋಗಿ ಅಲ್ಲಿ ತಾನೇ ತಾನಾಗಿರುವ ಸ್ಥಿತಿಯು ಪ್ರಾಪ್ತ ವಾಗುತ್ತದೆ. ಲೌಕಿಕ ವ್ಯವಹಾರದಲ್ಲಿ ಓರ್ವ ಅಧಿಕಾರಸ್ಥನಾದ ವ್ಯಕ್ತಿಯು ಹೊರಗಡೆ ವ್ಯವಹರಿಸುವಾಗ ತನ್ನೆಲ್ಲ ಸೇವಾ–ಸಿಬ್ಬಂದಿಯೊಡಗೂಡಿ ಕಾರ್ಯವನ್ನು ನಿರ್ವಹಿಸುತ್ತಿರು ತ್ತಾನೆ; ಅವನು ಕಾರ್ಯ ನಿವೃತ್ತನಾಗಿ ಮನೆಯಲ್ಲಿ ಪ್ರವೇಶ ಮಾಡಿದಾಗ ಅವನ ಅದೆಷ್ಟೋ ಸೇವಕರು ಮನೆಯ ಹೊರಗೆ ಉಳಿದುಕೊಳ್ಳುತ್ತಾರೆ. ಆಗ ಅವನೊಂದಿಗೆ ಕೆಲವೇ ಜನ ಅಂತರಂಗದ ಪರಿಚಾರಕರು ಸಹಕರಿಸುತ್ತಾರೆ. ಯಾವಾಗ ಅವನು ಎಲ್ಲ ವ್ಯವಹಾರದಿಂದ ನಿವೃತ್ತನಾಗಿ ಶಯನ ಕಕ್ಷವನ್ನು ಪ್ರವೇಶಿಸುವನೋ ಆಗ ಅವನ ಉಳಿದ ಪರಿಚಾರಕರೂ ಸಹ ಹೊರಗೆ ಉಳಿದು ಆತನೋರ್ವನೇ ಇರುತ್ತಾನೆ. ಇದೇ ಪ್ರಕಾರ ವಾಗಿ ಸುಷುಪ್ತಾವಸ್ಥೆಯಲ್ಲಾಗಲಿ ಸ್ವಪರಾಜ್ಞ ಸ್ಥಿತಿಯಲ್ಲೇ ಆಗಲಿ ಆ ವ್ಯಕ್ತಿಯ ಅಂತಃಕರಣ ಬಹಿಃಕರಣಗಳು ತಮ್ಮ ತಮ್ಮ ವ್ಯವಹಾರದಿಂದ ನಿವೃತ್ತವಾಗಿರೋಣದರಿಂದ ಅಲ್ಲಿ ಸ್ವ–ಪರವೆಂಬ ಭೇದ ವ್ಯವಹಾರವು ಸಂಭವಿಸುವುದಿಲ್ಲ. ಅಂತೆಯೇ ಆ ಸ್ಥಿತಿಗೆ ಸ್ವಪರಾಜ್ಞ ಸ್ಥಿತಿಯೆಂಬುದಾಗಿ ಕರೆಯಲಾಗಿದೆ.

ಈ ಸ್ವಪರಾಜ್ಞಸ್ಥಲದ ಶಿವಯೋಗಿಯ ಸ್ಥಿತಿಯನ್ನೇ ಪೂಜ್ಯಪಾದರು ಈ ಮುಂದೆ–

ಯತ್ರ ನಾಸ್ತಿ ಭಿದಾಯೋಗಾದಹಂತ್ವಮಿತಿ ವಿಭ್ರಮಃ ।
ನ ಸಂಯೋಗೋ ವಿಯೋಗಶ್ಚ ನ ಜ್ಞೇಯಜ್ಞಾತೃಕಲ್ಪನಾ ॥

ನ ಬಂಧೋ ನ ಚ ಮುಕ್ತಿಶ್ಚ ನ ದೇವಾದ್ಯಭಿಮಾನಿತಾ ।
ನ ಸುಖಂ ನೈವ ದುಃಖಂ ಚ ನಾಜ್ಞಾನಂ ಜ್ಞಾನಮೇವ ವಾ ॥

ನೋತ್ಕೃಷ್ಟತ್ವಂ ನ ಹೀನತ್ವಂ ನೋಪರಿಷ್ಟಾನ್ನ ಚಾಪ್ಯಧಃ ।
ನ ಪಶ್ಚಾನ್ನೈವ ಪುರತೋ ನ ದೂರೇ ನ ಕಿಂಚಿದಂತರೇ ॥

ಸರ್ವಾಕಾರೇ ಚಿದಾನಂದೇ ಸತ್ಯರೂಪಿಣಿ ಶಾಶ್ವತೇ ।
ಪರಾಕಾಶಮಯೇ ತಸ್ಮಿನ್ ಪರೇ ಬ್ರಹ್ಮಣಿ ನಿರ್ಮಲೇ ॥

ಏಕೀ ಭಾವಮುಪೇತಾನಾಂ ಯೋಗೀನಾಂ ಪರಮಾತ್ಮನಾಮ್ ।
ಪರಾಪರ ಪರಿಜ್ಞಾನ ಪರಿಹಾಸಕಥಾ ಕುತಃ ॥

(ಸಿ. ಶಿ. ೨೦.೪೯–೫೩)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವ ಸ್ಥಿತಿಯಲ್ಲಿ ಭೇದ ಸಂಬಂಧವಾದ ನಾನು ನೀನೆಂಬ ವಿಭ್ರಮೆಯು ಇರುವುದಿಲ್ಲವೋ, ಅದರಂತೆ ಎಲ್ಲಿ ಸಂಯೋಗ ವಿಯೋಗಗಳು ಸಂಭವಿಸುವುದಿಲ್ಲವೋ, ಇದು ಅಲ್ಲದೇ ಯಾವ ಸ್ಥಿತಿಯಲ್ಲಿ, ಜ್ಞಾತೃಜ್ಞೇಯಾದಿಗಳ ಪರಿಕಲ್ಪನೆಯೇ ಇರುವುದಿಲ್ಲವೋ, ಅದುವೇ ಸ್ವಪರಾಜ್ಞಸ್ಥಲವು. ಈ ಸ್ವಪರಾಜ್ಞ ಸ್ಥಿತಿಯನ್ನು ತಲುಪಿದ ಶಿವಯೋಗಿಗೆ ಬಂಧ ಮೋಕ್ಷಗಳಿರುವುದಿಲ್ಲ, ದೇವದಾನವಾದಿ ಅಭಿಮಾನವಿರುವುದಿಲ್ಲ, ಅವನಿಗೆ ಯಾವುದೇ ವಿಧವಾದ ಬಾಹ್ಯದ ಸುಖದುಃಖಗಳ ಸೋಂಕು ಸಹ ಇರುವುದಿಲ್ಲವಷ್ಟೇ ಅಲ್ಲ, ಆ ಸ್ಥಿತಿಯಲ್ಲಿ ಜ್ಞಾನ ಅಜ್ಞಾನ ಗಳ ಚರ್ಚೆಯೂ ಕೂಡ ಸಂಭವಿಸುವುದಿಲ್ಲ. ಈ ಸ್ವಪರಾಜ್ಞಸ್ಥಲದ ಶಿವಯೋಗಿಗೆ ಹೆಚ್ಚು–ಕಡಿಮೆಗಳೆಂಬ ಭಾವನೆಗಳಾಗಲಿ, ಮೇಲು–ಕೆಳಗೆಂಬ ತಿಳುವಳಿಕೆಯಾಗಲಿ, ಹಿಂದು–ಮುಂದೆಂಬ ಪರಿಜ್ಞಾನವಾಗಲಿ, ದೂರು–ಸಮೀಪಗಳೆಂಬ ತಿಳುವಳಿಕೆಯಾಗಲಿ ಇರುವುದಿಲ್ಲ, ಸರ್ವಾತ್ಮಕವೂ, ಚಿದಾನಂದ ಸ್ವರೂಪವೂ, ಶಾಶ್ವತವೂ, ನಿರ್ಮಲವೂ, ಮಹಾಕಾಶರೂಪವೂ ಆದ ಆ ಪರಶಿವಬ್ರಹ್ಮತತ್ತ್ವದಲ್ಲಿ ಸಮರಸಭಾವವನ್ನು ಹೊಂದಿದ ಪರಮಾತ್ಮ ಸ್ವರೂಪಿಗಳಾದ ಶಿವಯೋಗಿಗಳಿಗೆ ಪರ ಅಪರವೆಂಬ ಪರಿ ಜ್ಞಾನವು ಹೇಗೆ ತಾನೆ ಉಂಟಾದೀತು !

ಈ ಸ್ಥಲದ ಶಿವಯೋಗಿಯ ಮನಸ್ಸಿನಲ್ಲಿ ನಾನು ಬೇರೆ, ಪರಮಾತ್ಮನು ಬೇರೆ ಎಂಬ ಭೇದ ಭ್ರಮೆಯು ಇರುವುದಿಲ್ಲ, ಅಂತೆಯೇ ಯಾರೊಂದಿಗೆಯೂ ಅವನ ಸಂಯೋಗ ವಿಯೋಗಗಳು ಸಂಭವಿಸಲಾರವು. ಎಲ್ಲಿ ಭೇದವಿದೆಯೋ ಅಲ್ಲಿಯೇ ಸಂಯೋಗವು ಸಂಭವಿಸುತ್ತದೆ. ಪಕ್ಷಿಯು ಹಾರುತ್ತ ಹೋಗಿ ಗಿಡದ ಮೇಲೆ ಕುಳಿತು ಕೊಂಡಾಗ ಅಥವಾ ಎರಡು ಟಗರುಗಳು ಎದುರು ಬದುರಾಗಿ ಓಡುತ್ತ ಬಂದು ಒಂದಕ್ಕೊಂದು ಡಿಕ್ಕಿ ಹೊಡೆದಾಗ ಅವರೆಡರಲ್ಲಿ ಸಂಯೋಗವು ಸಂಭವಿಸುವುದು.

ಎರಡು ವಸ್ತುಗಳಲ್ಲಿ ಅಥವಾ ವ್ಯಕ್ತಿಗಳಲ್ಲಿ ಸಂಯೋಗವಾಗಬೇಕಾದಾಗ ಎರಡರ ಪೈಕಿ ಒಂದರಲ್ಲಿಯಾಗಲಿ ಅಥವಾ ಎರಡರಲ್ಲಿಯೂ ಕ್ರಿಯೆಯು ಸಂಭವಿಸಿದಾಗ ಅಲ್ಲಿ ಸಂಯೋಗವು ಸಂಭವಿಸುತ್ತದೆ. ಎಲ್ಲಿ ಸಂಯೋಗವಾಗುವುದೋ ಅಲ್ಲಿ ವಿಯೋಗವು ಸಹ ಅವಶ್ಯವಾಗಿ ಆಗುವುದು. ಈ ಸಂಯೋಗ–ವಿಯೋಗಗಳು ಮನುಷ್ಯನಿಗೆ ಸುಖದುಃಖ ಗಳನ್ನುಂಟು ಮಾಡುತ್ತಿರುತ್ತವೆ. ಅನುಕೂಲ ವ್ಯಕ್ತಿಯ ಸಂಯೋಗದಿಂದ ಸುಖವುಂಟಾದರೆ ಪ್ರತಿಕೂಲ ವ್ಯಕ್ತಿಯ ಸಂಯೋಗದಿಂದ ದುಃಖವುಂಟಾಗುತ್ತದೆ. ಒಮ್ಮೊಮ್ಮೆ ಅನುಕೂಲ ವ್ಯಕ್ತಿಯ ವಿಯೋಗದಿಂದ ದುಃಖವೂ ಪ್ರತಿಕೂಲ ವ್ಯಕ್ತಿಯ ವಿಯೋಗದಿಂದ ಸುಖವೂ ಉಂಟಾಗುತ್ತದೆ. ಹೀಗೆ ಈ ಸಂಯೋಗ ಹಾಗೂ ವಿಯೋಗಗಳು ಸುಖ ಹಾಗೂ ದುಃಖ ಗಳಿಗೆ ಕಾರಣವಾಗಿರುತ್ತವೆ. ಆದರೆ ಭೇದ ಭಾವ ಶೂನ್ಯವಾದ ಅವಸ್ಥೆಯಲ್ಲಿರುವ ಶಿವಯೋಗಿಗೆ ಯಾರೊಂದಿಗೆ ಸಂಯೋಗವಾಗಲಿ, ಯಾರೊಂದಿಗೆ ವಿಯೋಗವಾಗಲಿ ಸಂಭವಿಸಲಾರವು. ಅಂತೆಯೇ ಜೀವ–ಪರಮಾತ್ಮರಲ್ಲಿ ಜ್ಞಾತಾ–ಜ್ಞೇಯ ಭಾವಗಳು ಕೂಡ ಉಂಟಾಗುವುದಿಲ್ಲ. ಹೀಗೆ ಅದ್ವೈತ ಸ್ಥಿತಿಯನ್ನು ಪಡೆದ ಶಿವಯೋಗಿಗೆ ಬಂಧ ಮೋಕ್ಷಗಳಾಗಲಿ, ಸುಖ–ದುಃಖಗಳಾಗಲಿ, ಜ್ಞಾನಾಜ್ಞಾನಗಳಾಗಲಿ ಇರುವುದಿಲ್ಲವೆಂಬು ದಾಗಿ ತಿಳಿದುಕೊಳ್ಳಬೇಕು. ಆ ಜ್ಞಾನಿಯನ್ನು ಉನ್ನತಸ್ಥಾನದ ಮೇಲೆ ಕೂಡ್ರಿಸಿದರೆ ನಾನು ಶ್ರೇಷ್ಠನೆಂದಾಗಲಿ, ನಿಮ್ನ ಸ್ಥಾನದಲ್ಲಿ ಕೂಡ್ರಿಸಿದಾಗ ನಾನು ಕನಿಷ್ಠನೆಂದಾಗಲಿ ಭಾವನೆ ಗಳು ಅವನಲ್ಲಿ ಒಡಮೂಡುವುದಿಲ್ಲ. ಸರ್ವತ್ರ ತನ್ನನ್ನೇ ತಾನು ಕಾಣುತ್ತಿರುವುದರಿಂದ ಮುಂದೆ–ಹಿಂದೆ, ದೂರ–ಸಮೀಪಗಳೆಂಬ ವಿಚಾರಗಳು ಸಹ ಅವನಲ್ಲಿ ಸುಳಿಯು ವುದಿಲ್ಲ. ಆಕಾಶಕ್ಕೆ ಯಾವ ಆಕಾರವೂ ಇಲ್ಲದಿರುವಂತೆ ಪರಶಿವ ತತ್ವಕ್ಕೂ ಸಹ ಸ್ವತಂತ್ರ ವಾದ ಯಾವುದೇ ಆಕಾರ ಇರುವುದಿಲ್ಲ. ಆದರೆ ಸರ್ವದರಲ್ಲಿ ಅನುಸ್ಯೂತವಾಗಿ ರೋಣದರಿಂದ ಅದಕ್ಕೆ ಸರ್ವಾಕಾರವೆಂದು ಕರೆದಿದ್ದಾರೆ. ಘಟ ಮಠಾದಿ ಉಪಾಧಿ ಗಳನ್ನು ಪಡೆದಾಗ ಆಕಾಶವು ಘಟಾಕಾಶ–ಮಠಾಕಾಶವೆಂದು ಕರೆಯಿಸಿಕೊಂಡಂತೆ ಪರಶಿವತತ್ತ್ವವೂ ಸಹ ದೇವ–ದಾನವ–ಮಾನವಾದಿ ಶರೀರಗಳಲ್ಲಿ ಪ್ರವೇಶಿಸಿ ತತ್ತದಾಕಾರವಾಗಿ ತೋರುತ್ತದೆ. ಅಂತೆಯೇ ಅದು ಸರ್ವಾಕಾರ ರೂಪವಾದುದು. ಸರ್ವಾಕಾರರೂಪವಾದ ಈ ಪರಶಿವ ಬ್ರಹ್ಮವು ಸಚ್ಚಿದಾನಂದ ಸ್ವರೂಪವೂ, ಶಾಶ್ವತವೂ, ನಿರ್ಮಲವೂ ಸಹ ಆಗಿರುತ್ತದೆ. ಇಂತಹ ಪರಮತತ್ತ್ವದೊಂದಿಗೆ ಸಮರಸ ಭಾವವನ್ನು ಸಾಧಿಸಿದ ಯೋಗಿಯು ಸರ್ವತ್ರ ವ್ಯಾಪಕನಾದ ಪರಮಾತ್ಮ ಸ್ವರೂಪವೇ ಆಗಿರುವುದರಿಂದ ಆ ಸ್ಥಿತಿಯಲ್ಲಿ ಪರ ಅಪರವೆಂಬ ಜ್ಞಾನಗಳು ಅವನಲ್ಲಿ ಅದೆಂದಿಗೂ ಸಂಭವಿಸಲಾರವು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಸ್ವಪರಾಜ್ಞಸ್ಥಲವನ್ನು ಪರಿಸಮಾಪ್ತಿ ಗೊಳಿಸುತ್ತ ಕೊನೆಯದಾಗಿ–

ದೇಶಕಾಲಾನವಚ್ಛಿನ್ನ ತೇಜೋರೂಪಸಮಾಶ್ರಯಾತ್ ।
ಸ್ವಪರಜ್ಞಾನವಿರಹಾತ್ ಸ್ವಪರಾಜ್ಞಸ್ಥಲಂ ವಿದುಃ ॥

(ಸಿ. ಶಿ. ೨೦–೫೪)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ ದೇಶ–ಕಾಲಾದಿಗಳಿಂದ ಖಂಡಿತ ವಾಗದಿರುವ ಸ್ವಯಂ ಜ್ಯೋತಿಸ್ವರೂಪವಾದ ಪರಶಿವ ತತ್ತ್ವದಲ್ಲಿ ಸಮರಸವಾಗೋಣ ದರಿಂದ ಸ್ವ ಮತ್ತು ಪರವೆಂಬ ಜ್ಞಾನವು ಯಾವ ಶಿವಯೋಗಿಗೆ ಉಂಟಾಗುವುದಿಲ್ಲವೋ ಅವನೇ ಸ್ವಪರಾಜ್ಞನೆಂಬುದಾಗಿ ತಿಳಿದುಕೊಳ್ಳಬೇಕು.

ದೇಶ, ಕಾಲ ಮತ್ತು ವಸ್ತುಗಳೆಂಬ ಪರಿಚ್ಛೇದವಿಲ್ಲದಿರುವ ಅಂದರೆ ಸರ್ವದೇಶ, ಸರ್ವಕಾಲ ಮತ್ತು ಸರ್ವವಸ್ತುಗಳಲ್ಲಿ ವ್ಯಾಪಕವಾಗಿರುವ ಮತ್ತು ಸ್ವಯಂ ಜ್ಯೋತಿ ಸ್ವರೂಪನಾದ ಪರಶಿವನೊಂದಿಗೆ ಸಮರಸವಾಗಿರುವ ಶಿವಯೋಗಿಗೆ ಇದು ನಾನು, ಇದು ಅನ್ಯವೆಂಬ ಭೇದಜ್ಞಾನವು ಇರುವುದಿಲ್ಲ. ಹೀಗೆ ಈ ಭೇದ ಜ್ಞಾನವನ್ನು ಕಳೆದು ಕೊಂಡ ಶಿವಯೋಗಿಗೆ ಸ್ವಪರಾಜ್ಞನೆಂಬುದಾಗಿ ಪೂಜ್ಯಪಾದರು ಸಂಕೇತಿಸಿದ್ದಾರೆ. ಇದುವೇ ಸ್ವಪರಾಜ್ಞಸ್ಥಲವೆಂದು ತಿಳಿಯಬೇಕೆಂಬುದಾಗಿ ತಿಳಿಯಪಡಿಸಿ ಈ ಸ್ಥಲದ ಆಶೀರ್ವಚನವನ್ನು ಪೂರ್ಣಗೊಳಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೭ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)



ಆಶೀರ್ವಚನ-೧

# ಭಾವಾಭಾವಲಯಸ್ಥಲ

ಕಾಶೀ ವೀರಶೈವ ವಿದ್ವತ್ ಸಂಘದ ಮುಮುಕ್ಷುಗಳಾದ ವಿದ್ಯಾರ್ಥಿಗಳೇ ! ಈ ಸಮಾರಂಭದಲ್ಲಿ ಪಾಲ್ಗೊಂಡ ಸಮಸ್ತ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಐಕ್ಯ ಸ್ಥಲದ ಅವಾಂತರ ಸ್ಥಲಗಳನ್ನು ಕುರಿತು ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಸ್ವಪರಾಜ್ಞ ಸ್ಥಲವನ್ನು ಕುರಿತು ವಿಚಾರಿಸಲಾಯಿತು. ಇಂದು ಅದರ ಮುಂದಿನ ಸ್ಥಲವಾದ ಭಾವಾಭಾವಲಯ ಸ್ಥಲದ ಬಗ್ಗೆ ವಿವೇಚಿಸೋಣ. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಭಾವಾಭಾವಲಯ ಸ್ಥಲವನ್ನು ಕುರಿತು–

ತ್ವಂತಾಹಂತಾವಿನಿರ್ಮುಕ್ತೇ ಶೂನ್ಯಕಲ್ಪೇ ಚಿದಂಬರೇ ।
ಏಕೀಭೂತಸ್ಯ ಸಿದ್ಧಸ್ಯ ಭಾವಾಭಾವಕಥಾ ಕುತಃ ॥

(ಸಿ. ಶಿ. ೨೦–೫೫)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಿಚ್ಛಿನ್ನಗಳಾದ ನಾನು ನೀನೆಂಬ ಭಾವನೆಗಳಿಲ್ಲದ, ಶೂನ್ಯಸದೃಶವಾದ, ಚಿದ್ರೂಪವಾದ ಪರಶಿವನೊಂದಿಗೆ ಸಮರಸ ನಾಗಿರುವ ಸಿದ್ಧ ಮಹಾಯೋಗಿಗೆ ಭಾವಾಭಾವಗಳು ಎಲ್ಲಿಂದ ತಾನೆ ಉಂಟಾಗಬಲ್ಲವು !

ಈ ಭಾವಾಭಾವಲಯಸ್ಥಲದಲ್ಲಿ ಭಾವ ಅಭಾವಗಳ ಅರ್ಥವನ್ನು ಮೊದಲು ತಿಳಿದುಕೊಳ್ಳಬೇಕು. ಇಲ್ಲಿ ಭಾವವೆಂದರೆ ಪರಿಚ್ಛಿನ್ನವಾದ ದೇಹದಲ್ಲಿರುವ ಅಹಂ ರೂಪ ವಾದ ಮನೋವೃತ್ತಿಗೆ ಭಾವವೆಂದು ಕರೆಯುತ್ತಾರೆ. ಇನ್ನು ದೇಹಕ್ಕೆ ವ್ಯತಿರಿಕ್ತವಾದ ಆತ್ಮ ವೆಂಬ ತತ್ತ್ವವು ಇರುವುದೇ ಇಲ್ಲ ಎಂಬ ಭ್ರಮಾತ್ಮಕವಾದ ಮನೋವೃತ್ತಿಗೆ ಅಭಾವ ವೆಂದು ಕರೆಯುವರು. ಈ ಪೂರ್ವದಲ್ಲಿ ಹೇಳಿದ ಸ್ವಪರಾಜ್ಞನಾದ ಶಿವಯೋಗಿಯಲ್ಲಿ ಇವೆರಡೂ ಭಾವನೆಗಳು ಇರುವುದಿಲ್ಲ. ಏಕೆಂದರೆ ಅವನು ನಾನು ನೀನೆಂಬ ಸಂಕುಚಿತ ಭಾವನೆಗಳಿಂದ ವಿನಿರ್ಮುಕ್ತನಾಗಿರುವನಲ್ಲದೇ ಪರಿಪೂರ್ಣ ಸ್ವರೂಪವಾದ ಚಿದಾಕಾಶ ದೊಂದಿಗೆ ಅವನು ಸಮರಸೀಭೂತನಾಗಿರುತ್ತಾನೆ. ಪೂರ್ವದಲ್ಲಿ ಹೇಳಿದ ಮನಸ್ಸಿನ ಆ ಭಾವಾಭಾವಗಳು ಅಜ್ಞ ಜೀವಿಗಳಲ್ಲಿರುತ್ತವೆಯೇ ವಿನಃ ಆತ್ಮಜ್ಞಾನಿಗಳಲ್ಲಿ ಅವೆಂದಿಗೂ ಇರಲಾರವು. ಹೀಗೆ ಇವೆರಡೂ ಭಾವನೆಗಳನ್ನು ಲಯ ಮಾಡಿಕೊಂಡ ಶಿವಯೋಗಿಯ ಸ್ಥಿತಿಯನ್ನು ತಿಳಿಸುವ ಸ್ಥಲವೇ ಭಾವಾಭಾವಲಯಸ್ಥಲವು. ಇದೇ ವಿಷಯವನ್ನೇ ಪೂಜ್ಯರು ಪುನಃ–

ಅಹಂ ಭಾವಸ್ಯ ಶೂನ್ಯತ್ವಾದಭಾವಸ್ಯ ತಥಾತ್ಮನಃ ।
ಭಾವಭಾವವಿನಿರ್ಮುಕ್ತೋ ಜೀವನ್ಮುಕ್ತಃ ಪ್ರಕಾಶತೇ ॥

(ಸಿ. ಶಿ. ೨೦–೫೬)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಶರೀರವೇ ನಾನೆಂಬ ಅಹಂಭಾವ-ಶೂನ್ಯನಾದ ಮತ್ತು ಶರೀರಕ್ಕಿಂತಲೂ ಭಿನ್ನವಾದ ಆತ್ಮವಿಲ್ಲವೆಂಬ ಅಭಾವ ಭಾವನೆಯಿಂದಲೂ ರಹಿತನಾದ ಆ ಜೀವನ್ಮುಕ್ತನು ಭಾವಾಭಾವಗಳಿಲ್ಲದವನಾಗಿ ಪ್ರಕಾಶಿಸುತ್ತಿರುತ್ತಾನೆ.

ಈ ಭಾವಾಭಾವ ಶೂನ್ಯನಾದ ಶಿವಯೋಗಿಗೆ ಸುಖದುಃಖಾದಿಗಳು ಸಹ ಇರುವುದಿಲ್ಲವೆಂಬ ವಿಷಯವನ್ನು ಪೂಜ್ಯಪಾದರು ಪುನಃ–

ಸುಖದುಃಖಾದಿಭಾವೇಷು ನಾಭಾವೋ ಭಾವ ಏವ ವಾ ।
ವಿದ್ಯತೇ ಚಿತ್ಸ್ವರೂಪಸ್ಯ ನಿರ್ಲೇಪಸ್ಯ ಮಹಾತ್ಮನಃ ॥

(ಸಿ. ಶಿ. ೨೦–೫೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಚಿತ್ಸ್ವರೂಪನೂ, ನಿರ್ಲೇಪನೂ ಆದ ಆ ಮಹಾಶಿವಯೋಗಿಗೆ ಸುಖದುಃಖಾದಿಗಳ ಬಗ್ಗೆಯೂ ಭಾವಾಭಾವರೂಪವಾದ ಭಾವನೆಯು ಇರುವುದಿಲ್ಲ, ಅಂದರೆ ನಾನು ಸುಖಿಯಾಗಿದ್ದೇನೆ ಅಥವಾ ನಾನು ದುಃಖಿಯಾಗಿದ್ದೇನೆ ಎಂಬ ಭಾವನೆಯಾಗಲಿ, ನಾನು ಸುಖಿಯಲ್ಲ ಮತ್ತು ದುಃಖಿಯಲ್ಲವೆಂಬ ಅಭಾವರೂಪವಾದ ಭಾವನೆಯಾಗಲಿ ಅವನ ಮನಸ್ಸಿನಲ್ಲಿ ಪ್ರಾದುರ್ಭವಿಸುವುದಿಲ್ಲವೆಂಬುದಾಗಿ ತಿಳಿದುಕೊಳ್ಳಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಭಾವಾಭಾವಸ್ಥಿತಿಯನ್ನೇ ವಿವರಿಸುತ್ತ ಪುನಃ–

ಯಸ್ಮಿನ್ ಜ್ಯೋತಿಷಿ ಚಿದ್ರೂಪೇ ದೃಶ್ಯತೇ ನೈವ ಕಿಂಚನ ।
ಸದ್ರೂಪಂ ವಾಪ್ಯಸದ್ರೂಪಂ ಭಾವಾಭಾವಂ ವಿಮುಂಚತಃ ॥

ಪ್ರತೀಯಮಾನೌ ವಿದ್ಯೇತೇ ಭಾವಾಭಾವೌ ನ ಕುತ್ರಚಿತ್ ।
ಲಿಂಗೈಕ್ಯ ಸತಿ ಯತ್ತಸ್ಮಾದ್ ಭಾವಾಭಾವಲಯ ಸ್ಥಲಮ್ ॥

(ಸಿ. ಶಿ. ೨೦; ೫೮–೫೯)

ಹೀಗೆ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಹೀಗೆ ಭಾವಾಭಾವಗಳಿಲ್ಲದಿರುವ ಶಿವಯೋಗಿಗೆ ಚಿದ್ರೂಪವಾದ ಆ ಪರಂಜ್ಯೋತಿಯಲ್ಲಿ ಸದ್ರೂಪವಾಗಲಿ ಅಥವಾ ಅಸದ್ರೂಪವಾಗಲಿ ಯಾವುದೂ ತೋರುವುದಿಲ್ಲ, ಹೀಗೆ ಪರಶಿವನೊಂದಿಗೆ ಲಿಂಗೈಕ್ಯ ರೂಪವಾದ ಸಾಮರಸ್ಯ ಸ್ಥಿತಿಯನ್ನು ಪ್ರಾಪ್ತಿಮಾಡಿಕೊಂಡ ಆ ಶಿವಯೋಗಿಗೆ ಎಲ್ಲಿಯೂ ಭಾವಾಭಾವಗಳ ಪ್ರತೀತಿಯು ಉಂಟಾಗುವುದಿಲ್ಲ, ಅಂತೆಯೇ ಇದಕ್ಕೆ ಭಾವಾಭಾವ ಲಯಸ್ಥಲವೆಂದು ಪ್ರತಿಪಾದಿಸಲಾಗಿದೆ.

ಈ ಭಾವಾಭಾವಲಯಸ್ಥಲದ ಶಿವಯೋಗಿಯ ಚಿತ್ತವು ಚಿದ್ರೂಪವಾದ ಜ್ಯೋತಿ ಸ್ವರೂಪದಲ್ಲಿ ಲೀನವಾಗಿರೋಣದರಿಂದ ಅವನಿಗೆ ಅದರ ಹೊರತಾಗಿ ಬೇರಾವುದೂ ಪ್ರತೀತಿಯಾಗದ ಕಾರಣದಿಂದಾಗಿ ಇದಕ್ಕೆ ಭಾವಾಭಾವಲಯಸ್ಥಲವೆಂಬುದಾಗಿ ಪ್ರತಿಪಾದಿಸಲಾಗಿದೆ. ಈ ಶಿವಯೋಗಿಗೆ ಆತ್ಮ-ಅನಾತ್ಮಗಳ, ಸುಖ-ದುಃಖಗಳ ಮತ್ತು ಸದ್ರೂಪ-ಅಸದ್ರೂಪಗಳ ವೃತ್ತಿಗಳೇ ಪ್ರಾದುರ್ಭವಿಸದಿರೋಣದರಿಂದ ಇವನ ಈ ಸ್ಥಿತಿಗೆ ಭಾವಾಭಾವಲಯಸ್ಥಿತಿಯೆಂಬುದಾಗಿ ಪೂಜ್ಯಪಾದರು ಇಲ್ಲಿ ತಿಳಿಸಿರುವುದಾಗಿ ವಿವರಿಸಿ ಇಂದಿನ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ದಿನಾಂಕ ೮ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)



ಆಶೀರ್ವಚನ-೧

# ಜ್ಞಾನಶೂನ್ಯಸ್ಥಲ

ಕಾಶೀವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ಸಾಧಕರೇ ! ಈ ಸಮಾರಂಭದಲ್ಲಿ ಪಾಲ್ಗೊಂಡ ಸದ್ಭಕ್ತರೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ದರ್ಶನ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಲಿಂಗಷಟ್‌ಸ್ಥಲಾಂತರ್ಗತವಾದ ಐಕ್ಯಸ್ಥಲವನ್ನು ಕುರಿತು ನೀವೆಲ್ಲ ಆಶೀರ್ವಚನಗಳನ್ನು ಆಲಿಸುತ್ತಿದ್ದೀರಿ. ನಿನ್ನೆಯ ದಿನ ಭಾವಾಭಾವಲಯಸ್ಥಲದ ಬಗ್ಗೆ ವಿಚಾರಿಸಲಾಯಿತು. ಇಂದು ಅದರ ಮುಂದಿನ ಸ್ಥಲವಾದ ಮತ್ತು ಅಂತಿಮ ಸ್ಥಲವಾದ ಜ್ಞಾನಶೂನ್ಯಸ್ಥಲವನ್ನು ಕುರಿತು ವಿವೇಚಿಸೋಣ. ಈ ಜ್ಞಾನಶೂನ್ಯಸ್ಥಲವು ಶ್ರೀ ಸಿದ್ಧಾಂತ ಶಿಖಾಮಣಿಯ ನೂರೊಂದು ಸ್ಥಲಗಳಲ್ಲಿ ಕೊನೆಯದಾದ ಸ್ಥಲವು. ಬಹಳಷ್ಟು ಜನರಿಗೆ ಈ ಸ್ಥಲದ ಹೆಸರನ್ನು ಕೇಳಿದಾಗ ಆಶ್ಚರ್ಯವಾಗಬಹುದು. ಏನಿದು ಜ್ಞಾನಶೂನ್ಯವೆಂದರೆ ! ಜ್ಞಾನವೇ ಶೂನ್ಯವಾದ ಮೇಲೆ ಉಳಿಯುವುದಾದರೂ ಏನು ಎಂಬ ಅನೇಕ ವಿಚಾರಗಳು ಜಿಜ್ಞಾಸುಗಳ ಮನದಲ್ಲಿ ಮೂಡಿಬರುತ್ತವೆ. ಆದ್ದರಿಂದ ಇಲ್ಲಿ ಇದರ ರಹಸ್ಯಾರ್ಥವನ್ನು ತಿಳಿದುಕೊಳ್ಳುವುದು ಪರಮಾವಶ್ಯಕವಾದುದು. ನಮ್ಮ ಅಜ್ಞಾನವನ್ನು ದೂರಮಾಡುವ ಜ್ಞಾನವೂ ಸಹ ದೂರಾಗಬೇಕಾಗುತ್ತದೆ. ಅಂದಾಗಲೇನೇ ಪರಮ ಕೈವಲ್ಯಸ್ಥಿತಿಯು ಪ್ರಾಪ್ತವಾಗುತ್ತದೆ. ಮಳೆಗಾಲದಲ್ಲಿ ಮಲಿನವಾದ ಜಲವನ್ನು ಶುದ್ಧಗೊಳಿಸಿಕೊಳ್ಳಲು ಪಟಕದ ಕಲ್ಲನ್ನು ಪ್ರಯೋಗಿಸುವ ಪದ್ಧತಿಯು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ. ಒಂದು ಕೊಡದೊಳಗಿನ ನೀರನ್ನು ಶುದ್ಧಿಗೊಳಿಸಲು ಒಂದು ಪಟಕದ ಹರಳನ್ನು ತೆಗೆದುಕೊಂಡು ನೀರಿನಲ್ಲಿ ತಿರುಗಿಸುತ್ತ ಕುಳಿತಾಗ ಆ ಪಟಕವು ನೀರಿನಲ್ಲಿ ಕರಗಿ ನೀರಿನಲ್ಲಿ ವ್ಯಾಪ್ತವಾಗಿರುವ ಧೂಳಿಯ ಕಣಗಳನ್ನು ನೀರಿನಿಂದ ಬೇರ್ಪಡಿಸಿ ತಾನೂ ಸಹ ಆ ನೀರಿನಿಂದ ಬೇರ್ಪಡುವುದು. ಇದಕ್ಕೆ ಸಂಸ್ಕೃತ ಸಾಹಿತ್ಯದಲ್ಲಿ ''ಕತಕ ರಜನ್ಯಾಯ''ವೆಂದು ಕರೆದಿದ್ದಾರೆ. ಇದೇ ಪ್ರಕಾರವಾಗಿ 'ಶಿವೋಽಹಂ' ಎನ್ನುವ ಜ್ಞಾನಾಕಾರ ವೃತ್ತಿಯು ಅಜ್ಞಾನ–ಭೇದಜ್ಞಾನಗಳನ್ನೆಲ್ಲ ದೂರೀಕರಿಸಿ ಕೊನೆಗೆ ತಾನೂ ಸಹ ಇಲ್ಲದಾಗಿ ಹೋಗುತ್ತದೆ. ಹೀಗೆ ವ್ಯತ್ಯಾತ್ಮಕವಾದ ಆ ಜ್ಞಾನವು ಅಡಗಿ ತಾನೇ ತಾನಾಗಿರುವ ಸ್ಥಿತಿಯನ್ನು ಇಲ್ಲಿ ಜ್ಞಾನಶೂನ್ಯ ಸ್ಥಿತಿಯೆಂಬುದಾಗಿ ಕರೆಯಲಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಪರಿಪೂರ್ಣವಾದ ಪರಶಿವ ತತ್ತ್ವಕ್ಕೆ ಶೂನ್ಯವೆಂಬುದಾಗಿಯೂ ಕರೆಯಲಾಗಿದೆ. ಇಲ್ಲಿ ಶೂನ್ಯವೆಂದರೆ ಏನೂ ಇಲ್ಲವೆಂದರ್ಥವಲ್ಲ. ಆದರೆ ಪರಶಿವತತ್ತ್ವನ್ನುಳಿದು ಬೇರೇನೂ ಇಲ್ಲವೆಂಬರ್ಥವನ್ನು ಭಾವಿಸಬೇಕು. ಮನೆಯೊಳಗಿನ

ಎಲ್ಲ ಜನರು ಹೊರ ಹೋಗಿ ಓರ್ವ ವ್ಯಕ್ತಿಯು ಮಾತ್ರ ಆ ಮನೆಯಲ್ಲಿರುವಾಗ ಹೊರಗಿನ ಓರ್ವ ವ್ಯಕ್ತಿಯು ಬಂದು ಮನೆಯಲ್ಲಿ ಯಾರಿದ್ದಾರೆ ? ಎಂಬುದಾಗಿ ಪ್ರಶ್ನೆ ಮಾಡಲು ಒಳಗಿರುವ ವ್ಯಕ್ತಿಯು ಬಾಗಿಲು ತೆರೆದು ಮನೆಯಲ್ಲಿ ಯಾರೂ ಇಲ್ಲ ಎಂಬು ದಾಗಿ ಹೇಳುವ ವ್ಯವಹಾರವನ್ನು ನಮ್ಮ ದೈನಂದಿನ ಜೀವನದಲ್ಲಿ ಕಾಣುತ್ತೇವೆ. ಇಲ್ಲಿ ಯಾರೂ ಇಲ್ಲವೆಂದು ಹೇಳುವ ಆ ವ್ಯಕ್ತಿಯು ತನ್ನನ್ನು ಹೊರತುಪಡಿಸಿ ಬೇರೆ ಯಾರೂ ಇಲ್ಲ ಎಂದು ಹೇಳುವ ಅಭಿಪ್ರಾಯವುಳ್ಳವನಾಗಿದ್ದಾನೆಯೇ ವಿನಃ ತಾನೂ ಸಹ ಇಲ್ಲ ವೆಂದು ಹೇಳುವುದು ಅವನ ಉದ್ದೇಶವಾಗಿರುವುದಿಲ್ಲ. ಅದರಂತೆ ವೀರಶೈವ ಆಚಾರ್ಯ ರಾಗಲಿ ಅಥವಾ ಶರಣರಾಗಲಿ ಮೂಲ ತತ್ತ್ವಕ್ಕೆ ಶೂನ್ಯವೆಂದು ಹೇಳುವಾಗ ಆ ತತ್ತ್ವದಲ್ಲಿ ಅದರ ಹೊರತಾಗಿ ಬೇರಾವುದೂ ಇಲ್ಲವೆಂದು ಹೇಳುವುದೇ ಆಗಿರುತ್ತದೆ. ಆದ್ದರಿಂದ ಶೂನ್ಯವೆಂದರೆ ಏನೇನೂ ಇಲ್ಲವೆಂದು ಅರ್ಥ ಮಾಡದೇ, ಬೇರೆ ಏನನ್ನೂ ಒಳಗೊಳ್ಳದೇ ತಾನೇ ತಾನಾದ ಶುದ್ಧ ತತ್ತ್ವವೊಂದಿದೆಯೆಂಬುದಾಗಿ ತಿಳಿದುಕೊಳ್ಳ ಬೇಕು. ಆ ಶೂನ್ಯ ಸ್ಥಿತಿಯನ್ನು ತಿಳಿಯಪಡಿಸುವ ಸ್ಥಲವೇ ಜ್ಞಾನಶೂನ್ಯಸ್ಥಲವು. ಈ ಸ್ಥಲ ದಲ್ಲಿ ಪೂಜ್ಯಪಾದರು–

> ಪರಾಪರಸಮಾಪೇಕ್ಷಭಾವಾಭಾವ ವಿವೇಚನಮ್ ।
> ಜ್ಞಾನಂ ಬ್ರಹ್ಮಣಿ ತನ್ನಾಸ್ತಿ ಜ್ಞಾನಶೂನ್ಯಸ್ಥಲಂ ವಿದುಃ ॥

(ಸಿ. ಶಿ. ೨೦–೬೦)

ಈ ವಿಧವಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಸ್ಪರ ಸಾಪೇಕ್ಷವಾಗಿರುವ ಆಸ್ತಿ–ನಾಸ್ತಿರೂಪ ಭಾವಾಭಾವಗಳ ವಿವೇಚನಾತ್ಮಕವಾದ ಯಾವ ಭೇದ ಜ್ಞಾನ ವಿದೆಯೋ ಅದು ಪರಶಿವ ಬ್ರಹ್ಮಸ್ಥಿತಿಯಲ್ಲಿ ಇರುವುದಿಲ್ಲ. ಅಂತೆಯೇ ಅದಕ್ಕೆ ಜ್ಞಾನ ಶೂನ್ಯ ಸ್ಥಿತಿಯೆಂದು ಕರೆಯುತ್ತಾರೆ. ಸಾಮರಸ್ಯರೂಪ ಅದ್ವೈತ ಸ್ಥಿತಿಯನ್ನು ಪಡೆದಾಗ ವೃತ್ಯಾತ್ಮಕ ಜ್ಞಾನವು ಈ ಪೂರ್ವದಲ್ಲಿ ಹೇಳಿದ 'ಕತಕ ರಜನ್ಯಾಯ'ದಂತೆ ಇಲ್ಲವಾಗಿ ಹೋಗುತ್ತದೆ. ಹೀಗೆ ವೃತ್ಯಾತ್ಮಕ ಜ್ಞಾನದ ಇಲ್ಲವಾಗುವಿಕೆಯನ್ನು ಪ್ರತಿಪಾದಿಸುವ ಸ್ಥಲವೇ ಜ್ಞಾನಶೂನ್ಯಸ್ಥಲವು.

ಈ ಜ್ಞಾನಶೂನ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯ ಸ್ಥಿತಿಯು ಹೇಗಿರುತ್ತದೆ ಯೆಂಬ ಜಿಜ್ಞಾಸೆಯುಂಟಾಗಲು ಪೂಜ್ಯಪಾದರು ಪುನಃ–

> ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಮ್ ।
> ಪರೇ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥

(ಸಿ. ಶಿ. ೨೦–೬೧)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಜಲದಲ್ಲಿ ಜಲ, ಅಗ್ನಿಯಲ್ಲಿ ಅಗ್ನಿ ಬೆರೆತಂತೆ ಪರಶಿವತತ್ತ್ವದಲ್ಲಿ ವಿಲೀನನಾದ ಈ ಶಿವಯೋಗಿಯು ಅದಕ್ಕಿಂತಲೂ ಭಿನ್ನ ವಾಗಿ ತೋರುವುದಿಲ್ಲ. ಅಂದರೆ ತದ್ರೂಪನೇ ಆಗಿರುತ್ತಾನೆಂಬ ಭಾವವು.

ನದಿಯ ನೀರು ಹರಿಯುತ್ತ ಹೋಗಿ ಸಮುದ್ರವನ್ನು ಸೇರಿದಾಗ ನದಿಗಳೆಲ್ಲ ಸಮುದ್ರರೂಪಗಳೇ ಆಗುವವೇ ವಿನಃ ಸಮುದ್ರದಲ್ಲಿ ತನ್ನದೇಯಾದ ಅಸ್ತಿತ್ವವನ್ನು

ಬೇರೆಯಾಗಿ ತೋರಿಸಲು ಅದಕ್ಕೆ ಸಾಧ್ಯವಾಗುವುದಿಲ್ಲ. ಇದೇ ಪ್ರಕಾರವಾಗಿ ಕಿರು ಅಗ್ನಿಯೊಂದು ಮಹಾ ಅಗ್ನಿಯೊಳಗೆ ಸೇರಿದಾಗ ತನ್ನ ಅಸ್ತಿತ್ವವನ್ನು ಆ ಮಹಾ ಅಗ್ನಿಗೆ ಸಮರ್ಪಿಸಿ ತಾನೂ ಅದರೊಂದಿಗೆ ಸಮರಸವಾಗುವುದೇ ವಿನಃ ಬೇರೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಿಲ್ಲ. ಇದೇ ಪ್ರಕಾರವಾಗಿ ಶಿವಯೋಗಿಯು ಶಿವಯೋಗ ಸಾಧನೆಯಿಂದ ಒಮ್ಮೆ ಪರಬ್ರಹ್ಮದಲ್ಲಿ ಸಮರಸನಾದನೆಂದರೆ ಆತನು ಆ ಪರಬ್ರಹ್ಮದಿಂದ ಭಿನ್ನನಾಗಿ ಎಂದೂ ತೋರುವುದಿಲ್ಲ.

ಜೀವೇಶ್ವರರ ಈ ಸಮರಸತೆಯಿಂದ ಎಲ್ಲಿಯೂ ಹಾನಿವೃದ್ಧಿಗಳು ಉಂಟಾಗುವುದಿಲ್ಲ. ಒಂದು ಪಾತ್ರೆಯೊಳಗಿನ ನೀರನ್ನು ನೀರಿರುವ ಇನ್ನೊಂದು ಪಾತ್ರೆಯಲ್ಲಿ ಹಾಕಿದಾಗ ಆ ಪಾತ್ರೆಯಲ್ಲಿಯ ನೀರು ವೃದ್ಧಿಯಾಗುವುದರ ಜೊತೆಗೆ ಮೊದಲಿನ ಪಾತ್ರೆಯು ಸಂಪೂರ್ಣವಾಗಿ ರಿಕ್ತವಾಗಿ ಹೋಗುವುದು. ಆದರೆ ಜೀವ–ಶಿವರ ಈ ಸಾಮರಸ್ಯವು ಇಂತಹ ಹಾನಿ–ವೃದ್ಧಿಗಳನ್ನು ಉಂಟುಮಾಡುವುದಿಲ್ಲ. ಈ ಸಾಮರಸ್ಯ ಸ್ಥಿತಿಯನ್ನು ತಿಳಿಸಲು ಇಲ್ಲಿ ಕೊಟ್ಟಿರುವ ನದೀ ಸಮುದ್ರಗಳ ದೃಷ್ಟಾಂತವೇ ಸಾಕು. ಹಾನಿ–ವೃದ್ಧಿಗಳು ಕಂಡುಬಂದರೂ ದೃಷ್ಟಾಂತದಲ್ಲಿ ಅವು ಇರುವುದಿಲ್ಲ. ಈ ಸಾಮರಸ್ಯವನ್ನು ಘಟಾಕಾಶ ಮಹಾಕಾಶಗಳ ದೃಷ್ಟಾಂತದಿಂದಲೂ ತಿಳಿಯಪಡಿಸಬಹುದು. ಅನೇಕ ಘಟಾಕಾಶಗಳು ತಮ್ಮ ತಮ್ಮ ಉಪಾಧಿಗಳನ್ನು ಕಳೆದುಕೊಂಡು, ಮಹಾಕಾಶದಲ್ಲಿ ವಿಲಯವಾದಾಗ ಆ ಮಹಾಕಾಶದಲ್ಲಿ ವೃದ್ಧಿಯಾದದ್ದು ಕಂಡುಬರುವುದಿಲ್ಲ. ಇಲ್ಲಿ ಇರುವ ರಹಸ್ಯವೇನೆಂದರೆ ವಾಸ್ತವಿಕವಾಗಿ ಘಟಾಕಾಶ–ಮಹಾಕಾಶಗಳು ಭಿನ್ನವಾಗಿರುವುದಿಲ್ಲ. ಕೇವಲ ಉಪಾಧಿಯಿಂದ ಭಿನ್ನವಾಗಿ ತೋರುತ್ತಿದ್ದು, ಆ ಉಪಾಧಿ ಹೋದೊಡನೆ ಉಪಹಿತವಾದ ಆಕಾಶವು ಒಂದೇ ಒಂದಾಗಿರುತ್ತದೆ. ಇದರಂತೆ ಜೀವ–ಶಿವರು ಮೂಲತಃ ಒಂದೇ ತತ್ತ್ವವಾಗಿರೋಣದರಿಂದ ಜೀವನ ಸಾಮರಸ್ಯವು ಶಿವನೊಂದಿಗೆ ಉಂಟಾದರೂ ಶಿವನಲ್ಲಿ ಯಾವುದೇ ವಿಧವಾದ ವೃದ್ಧಿಯು ಕಂಡು ಬರುವುದಿಲ್ಲ. ಹೀಗೆ ಪೂಜ್ಯಪಾದರು ಸಾಮರಸ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯ ಸ್ಥಿತಿಯನ್ನು ವರ್ಣಿಸುತ್ತ ಅವನ ಜ್ಞಾನಶೂನ್ಯ ಸ್ಥಿತಿಯನ್ನು ತಿಳಿಸಲೋಸುಗ ಪುನಃ–

ಸರ್ವಾತ್ಮನಿ ಪರೇ ತತ್ತ್ವೇ ಭೇದಶಂಕಾವಿವರ್ಜಿತೇ ।
ಜ್ಞಾತ್ರಾದಿವ್ಯವಹಾರೋತ್ಥಂ ಕುತೋ ಜ್ಞಾನಂ ವಿಭಾವ್ಯತೇ ॥

(ಸಿ. ಶಿ. ೨೦–೬೨)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಸರ್ವಮಯವೂ ದ್ವೈತಕ್ಕೆ ಆಸ್ಪದವಿಲ್ಲದಿರುವ ಒಂದೇ ಒಂದಾದ ಪರಶಿವ ಬ್ರಹ್ಮ ವಿಷಯದಲ್ಲಿ ಜ್ಞಾತೃ, ಜ್ಞಾನ, ಮತ್ತು ಜ್ಞೇಯಗಳೆಂಬ ತ್ರಿಪುಟಿ ವ್ಯವಹಾರಕ್ಕೆ ಒಳಗಾಗಿರುವ ಜ್ಞಾನಕ್ಕೆ ಅವಕಾಶವಿರುವುದಿಲ್ಲ.

ಪರಶಿವ ಬ್ರಹ್ಮತತ್ತ್ವವು ಅಂತರ್ಯಾಮಿ ರೂಪದಲ್ಲಿ ಸರ್ವರ ಆತ್ಮರೂಪವಾಗಿರುತ್ತದೆ. ಒಂದೇಯಾದ ಆಕಾಶವು ಘಟಮಠಾದಿಗಳಲ್ಲೆಲ್ಲ ವ್ಯಾಪಿಸಿರುವಂತೆ ಆ ಪರಮತತ್ತ್ವವು ಸರ್ವವೆಲ್ಲವನ್ನು ವ್ಯಾಪಿಸಿಕೊಂಡಿರುತ್ತದೆ. ಅಂತೆಯೇ ಅದು ಔಪಾಧಿಕವಾಗಿ

ಅನೇಕ ವಿಧವಾಗಿ ತೋರಿದರೂ, ಆದರಲ್ಲಿ ಯಾವುದೇ ವಿಧವಾದ ಭೇದವಿರುವುದಿಲ್ಲ. ಹೀಗೆ ಭೇದವಿಲ್ಲದ ಕಾರಣದಿಂದಲೇ ಜ್ಞಾತಾ, ಜ್ಞಾನ ಮತ್ತು ಜ್ಞೇಯಗಳೆಂಬ ತ್ರಿಪುಟಿ ವ್ಯವಹಾರಜನ್ಯವಾದ ಜ್ಞಾನವೂ ಸಹ ಅಲ್ಲಿರುವುದಿಲ್ಲ. ಹೀಗೆ ವೃತ್ಯಾತ್ಮಕವಾದ ಜ್ಞಾನವು ಸಂಭವಿಸದಿರೋಣದರಿಂದಲೇ ಈ ಸ್ಥಿತಿಗೆ ಜ್ಞಾನಶೂನ್ಯಸ್ಥಿತಿಯೆಂದು ಕರೆಯಲಾಗಿದೆ.

ತ್ರಿಪುಟಿಗಳಿಂದ ಉತ್ಪನ್ನವಾದ ಜ್ಞಾನವಿಲ್ಲದಿರುವ ಆ ಶಿವಯೋಗಿಯ ಸ್ಥಿತಿಯು ಹೇಗಿರುತ್ತದೆಂಬ ವಿಷಯವನ್ನು ಪೂಜ್ಯಪಾದರು ಪುನಃ–

ನಿರ್ವಿಕಾರಂ ನಿರಾಕಾರಂ ನಿತ್ಯಂ ಸೀಮಾವಿವರ್ಜಿತಮ್ ।
ವ್ಯೋಮವತ್ ಪರಮಂ ಬ್ರಹ್ಮಂ ನಿರ್ವಿಕಲ್ಪತಯಾ ಸ್ಥಿತಮ್ ॥

ನ ಪೃಥಿವ್ಯಾದೀನಿ ಭೂತಾನಿ ನ ಗ್ರಹಾ ನೈವ ತಾರಕಾಃ ।
ನ ದೇವಾ ನ ಮನುಷ್ಯಾಶ್ಚನ ತಿರ್ಯಂಚೋ ನ ಚಾಪರೇ ॥

ತಸ್ಮಿನ್ ಕೇವಲ ಚಿನ್ಮಾತ್ರ ಸತ್ತಾನಂದೈಕಲಕ್ಷಣೇ ।
ತ್ವಂತಾಹಂತಾದಿ ಸಂರೂಢಂ ವಿಜ್ಞಾನಂ ಕೇನ ಭಾವ್ಯತೇ ॥

(ಸಿ. ಶಿ. ೨೦; ೬೩–೬೫)

ಈ ವಿಧವಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಪರಶಿವ ಬ್ರಹ್ಮವು ಯಾವುದೇ ವಿಧವಾದ ವಿಕಾರಕ್ಕೆ ಒಳಗಾಗುವುದಿಲ್ಲ ಮತ್ತು ಅದಕ್ಕೆ ಯಾವ ಆಕಾರವೂ ಇರುವುದಿಲ್ಲ. ಅದು ನಿತ್ಯವಾಗಿದ್ದು ಆಕಾಶದಂತೆ ನಿಸ್ಸೀಮವಾಗಿರುತ್ತದೆ. ಅದರಲ್ಲಿ ಪೃಥಿವ್ಯಾದಿ ಮಹಾಭೂತಗಳಾಗಲಿ, ಗ್ರಹನಕ್ಷತ್ರಗಳಾಗಲಿ, ದೇವ–ದಾನವ–ಮನುಷ್ಯಾದಿಗಳಾಗಲಿ ಮತ್ತು ತಿರ್ಯಕ್ ಪ್ರಾಣಿಗಳಾಗಲಿ ಯಾವುವೂ ಇರುವುದಿಲ್ಲ. ಕೇವಲ ಸಚ್ಚಿದಾನಂದ ಸ್ವರೂಪವಾದ ಅದರಲ್ಲಿ ತ್ವಂ, ಅಹಂ ರೂಪವಾದ ಜ್ಞಾನವು ಹೇಗೆ ತಾನೆ ಉಂಟಾದೀತು !

ತ್ರಿಪುಟಿಜ್ಞಾನ ವ್ಯವಹಾರವಿಲ್ಲದಿರುವ ಪರಶಿವ ತತ್ತ್ವದಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ ಮತ್ತು ಆ ಪರತತ್ತ್ವಕ್ಕೆ ನೀಲಪೀತಾದಿ ಆಕಾರಗಳು ಸಹ ಇರುವುದಿಲ್ಲ. ವ್ಯೋಮದಂತೆ ನಿಸ್ಸೀಮವೂ, ನಿರ್ವಿಕಲ್ಪವೂ ಆಗಿರುವ ಆ ಪರತತ್ತ್ವದಲ್ಲಿ ಭೂಮ್ಯಾದಿ ಪಂಚಮಹಾಭೂತಗಳಾಗಲಿ, ಆದಿತ್ಯಾದಿ ನವಗ್ರಹಗಳಾಗಲಿ, ಅಶ್ವಿನ್ಯಾದಿ ನಕ್ಷತ್ರ ಗಳಾಗಲಿ ಬ್ರಹ್ಮ–ವಿಷ್ಣು ಮುಂತಾದ ದೇವತೆಗಳಾಗಲಿ ಮತ್ತು ತಿರ್ಯಕ್ ಪ್ರಾಣಿ ಗಳಾಗಲಿ ಅದಕ್ಕಿಂತಲೂ ಭಿನ್ನವಾಗಿ ತೋರುವುದಿಲ್ಲ. ಅಂದರೆ ಇವೆಲ್ಲವುಗಳು ತದ್ರೂಪ ಗಳೇ ಆಗಿರುತ್ತವೆಂಬುದಾಗಿ ಭಾವಿಸಬೇಕು. ಇಂತಹ ಅಖಂಡವಾದ ಆ ಪರಶಿವ ತತ್ತ್ವ ದಲ್ಲಿ ತ್ವಂ ಮತ್ತು ಅಹಂ ರೂಪವಾದ ವ್ಯವಹಾರದಿಂದುಂಟಾಗುವ ಜ್ಞಾನವು ಅದು ಹೇಗೆ ತಾನೆ ಸಂಭವಿಸಬಲ್ಲದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಜ್ಞಾನಶೂನ್ಯಸ್ಥಲದ ಶಿವಯೋಗಿಯ ತ್ರಿಪುಟಿ ವ್ಯವಹಾರ ರಾಹಿತ್ಯವನ್ನು ತಿಳಿಯಪಡಿಸಲೋಸುಗ ಪುನಃ–

ಜ್ಞೇಯಾಭಾವಾದ್ ವಿಶೇಕ್ಷೀಣ ಶೂನ್ಯಕಲ್ಪಂ ವಿಭಾವ್ಯತೇ ।
ಜ್ಞಾತೃಜ್ಞೇಯಾದಿಭಿಃ ಶೂನ್ಯಂ ಶೂನ್ಯ ಜ್ಞಾನಾದಿಭಿಗುಣೈಃ ॥

ಆದಾವಂತೇ ಚ ಮಧ್ಯೇ ಚ ಶೂನ್ಯಂ ಸರ್ವತ್ರ ಸರ್ವದಾ ।
ದ್ವಿತೀಯೇನ ಪದಾರ್ಥೇನ ಶೂನ್ಯಂ ಶೂನ್ಯವಿಭಾವ್ಯತೇ ॥

(ಸಿ. ಶಿ. ೨೦/೬೬–೬೭)

ಹೀಗೆ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ ; ಜ್ಞೇಯ ವಸ್ತುವಿದ್ದಾಗಲೇನೆ ಜ್ಞಾನದ ವ್ಯವಹಾರವು. ಜ್ಞೇಯ ರೂಪವಾದ ಬೇರೊಂದು ವಸ್ತು ಇಲ್ಲದಿರುವಾಗ ಜ್ಞಾನವು ಶೂನ್ಯ ಸದೃಶವಾಗುತ್ತದೆ. ಅಂತೆಯೇ ಆ ಜ್ಞಾನವು ಜ್ಞಾತೃಜ್ಞೇಯಾದಿ ತ್ರಿಪುಟಿ ಪ್ರಪಂಚ ಶೂನ್ಯವೂ, ಇಚ್ಛಾ ಜ್ಞಾನಾದಿ ಗುಣ ಶೂನ್ಯವೂ, ಆದಿ–ಮಧ್ಯ ಅಂತಶೂನ್ಯವೂ ಆದ ಶೂನ್ಯವೇ ತಾನಾಗಿರುತ್ತದೆ. ಅಲ್ಲಿ ಅದರ ಹೊರತಾಗಿ ದ್ವಿತೀಯವಾದ ಬೇರೊಂದು ಪದಾರ್ಥವು ಇಲ್ಲದಿರುವುದರಿಂದ ಅದು ಶೂನ್ಯವಾಗಿಯೇ ಪ್ರತೀತಿಯಾಗುವುದು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಈ ಶೂನ್ಯ ಸ್ಥಿತಿಯನ್ನೇ ಮುಂದು ವರೆಸುತ್ತ ಪುನಃ–

ಕೇವಲಂ ಸಚ್ಚಿದಾನಂದ ಪ್ರಕಾಶಾದ್ವಯಲಕ್ಷಣಮ್ ।
ಶೂನ್ಯಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೇ ॥

ಶೂನ್ಯ ಜ್ಞಾನಾದಿಸಂಕಲ್ಪೇ ಶೂನ್ಯ ಸರ್ವಾರ್ಥಸಾಧನೇ ।
ಜ್ಯೋತಿರ್ಲಿಂಗೇ ಚಿದಾಕಾರೇ ಸ್ವಪ್ರಕಾಶೇ ನಿರುತ್ತರೇ ॥
ಏಕೀಭಾವಮುಪೇತಸ್ಯ ಕಥಂ ಜ್ಞಾನಸ್ಯ ಸಂಭವಃ ।

(ಸಿ. ಶಿ. ೨೦/೬೮–೭೦)

ಈ ರೀತಿಯಾಗಿ ಉಪದೇಶಿಸಿದ್ದಾರೆ. ತಾತ್ಪರ್ಯವೇನೆಂದರೆ, ಆ ಪರಶಿವ ಬ್ರಹ್ಮವು ಮಹಾಕಾಶ ಸ್ವರೂಪವುಳ್ಳದ್ದಾಗಿ ಕೇವಲ ಶೂನ್ಯವಾಗಿಯೇ ಪ್ರಕಾಶಿಸುತ್ತಿರುವುದು. ಇಂತಹ ಪರಶಿವ ಬ್ರಹ್ಮದಲ್ಲಿ ತಾದಾತ್ಮ್ಯಗೊಂಡಿರುವ ಜೀವನ್ಮುಕ್ತನಲ್ಲಿ ವಿಕಲ್ಪಜ್ಞಾನವೇ ಉದಿಸುವುದಿಲ್ಲ. ಶೂನ್ಯಜ್ಞಾನ, ಶೂನ್ಯೇಚ್ಛೆ, ಶೂನ್ಯಸಂಕಲ್ಪಗಳುಳ್ಳ, ಸಕಲ ಪುರುಷಾರ್ಥ ಸಾಧನಗಳೆಲ್ಲವೂ ಶೂನ್ಯವಾಗಿರುವ, ತನಗೆ ಮೀರಿದ ಬೇರೊಂದು ವಸ್ತು ವಿಲ್ಲದಿರುವ, ಪರಮ ಜ್ಯೋತಿರ್ಲಿಂಗವೆನಿಸಿದ ಜ್ಞಾನಾಕಾಶದ ಪ್ರಕಾಶದಲ್ಲಿ ಬೆರೆತು ಒಂದೇ ಒಂದಾಗಿರುವ ಶಿವಯೋಗಿಗೆ ಬೇರೆ ಜ್ಞಾನದ ಉದಯವು ಹೇಗೆ ಆಗುವುದು ? ಅರ್ಥಾತ್ ಜ್ಞಾನಾಂತರಾವಿರ್ಭಾವಕ್ಕೆ ಅವಕಾಶವೇ ಇಲ್ಲವೆಂಬ ಭಾವವು.

ಜೀವನ್ಮುಕ್ತನಾದ ಶಿವಯೋಗಿಯ ಜ್ಞಾನಶೂನ್ಯಸ್ಥಿತಿಯೆಂದರೆ ಬೌದ್ಧರು ಹೇಳು ವಂತೆ ಏನೊಂದೂ ಇರುವುದಿಲ್ಲವೆಂದರ್ಥವಲ್ಲ, ಆದರೆ ಸಚ್ಚಿದಾನಂದ ಸ್ವರೂಪವಾದ, ಪ್ರಕಾಶರೂಪವಾದ, ಅದ್ವಯ ಸ್ವರೂಪವಾದ ಆ ಪರಾಕಾಶ ತತ್ತ್ವವು ಶೂನ್ಯ ರೂಪ ದಲ್ಲಿ ಪ್ರಕಾಶಿಸುತ್ತದೆ ಎಂಬುದಾಗಿ ತಿಳಿದುಕೊಳ್ಳಬೇಕು. ಅಂದರೆ ಆ ಸ್ಥಿತಿಯಲ್ಲಿ ಅದೊಂದೇ ಇದೆ. ಅದರ ಹೊರತು ಬೇರೊಂದೇನೂ ಇರುವುದಿಲ್ಲ. ಇಂತಹ ಜ್ಞಾನ ಶೂನ್ಯ ಸ್ಥಿತಿಯನ್ನು ಪಡೆದ ಶಿವಯೋಗಿಯ ಮನಸ್ಸಿನಲ್ಲಿ ಆ ಶೂನ್ಯಸ್ಥಿತಿಯ ಜ್ಞಾನದ

ಸಂಕಲ್ಪವೂ ಸಹ ಇರುವುದಿಲ್ಲ. ಅವನ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಯಾವುದೇ ಪುರುಷಾರ್ಥದ ಸಾಧನೆಯುಳ್ಳವನೂ ಸಹ ಆಗಿರುವುದಿಲ್ಲ. ಇದೂ ಅಲ್ಲದೇ ಸ್ವಯಂ ಪ್ರಕಾಶ ರೂಪವಾದ ಜ್ಯೋತಿರ್ಲಿಂಗದಲ್ಲಿ ಸಾಮರಸ್ಯಾತ್ಮಕವಾದ ಐಕ್ಯಸ್ಥಿತಿಯನ್ನು ಪಡೆದ ಈ ಶಿವಯೋಗಿಗೆ ಬೇರೊಂದು ಜ್ಞಾನವು ಅದು ಹೇಗೆ ತಾನೆ ಉತ್ಪನ್ನವಾದೀತು ! ಸ್ವಸ್ವರೂಪಸ್ಥಿತಿಯ ಹೊರತಾಗಿ ಅಲ್ಲಿ ಬೇರೊಂದೇನು ಇರುವುದೇ ಇಲ್ಲ. ಅಂತೆಯೇ ಆ ಸ್ಥಿತಿಗೆ ನಿರುತ್ತರ ಸ್ಥಿತಿ ಎಂಬುದಾಗಿ ಹೇಳಲಾಗಿದೆ. ಅಂದರೆ ಇದರ ಮುಂದೆ ಬೇರಾವುದೇ ಸ್ಥಿತಿಯೂ ಇರುವುದಿಲ್ಲ, ಇದುವೇ ಕೊನೆಯದಾದ ಸ್ಥಿತಿಯೆಂದರ್ಥ. ಹೀಗೆ ಚಿತ್ಸ್ವರೂಪವೂ, ಜ್ಞಾನಸಂಕಲ್ಪಾದಿರಹಿತವೂ, ಸರ್ವ ಪುರುಷಾರ್ಥಸಾಧನಾತೀತವೂ, ಸ್ವಯಂಪ್ರಕಾಶಸ್ವರೂಪವೂ ಮತ್ತು ನಿರುತ್ತರ ರೂಪವೂ ಆದ ಪರಶಿವ ಬ್ರಹ್ಮದೊಂದಿಗೆ ಸಮರಸನಾಗಿ ಹೋಗಿರುವ ಆ ಶಿವಯೋಗಿಯಲ್ಲಿ ಜ್ಞಾತೃ, ಜ್ಞಾನ ಮತ್ತು ಜ್ಞೇಯಾದಿ ವ್ಯವಹಾರವು ಅದು ಹೇಗೆ ತಾನೆ ಉಂಟಾದೀತು ! ಈ ಸ್ಥಿತಿಯನ್ನು ಪಡೆದ ಶಿವಯೋಗಿಯು ಮೌನಿಯಾಗುತ್ತಾನೆ. ಅಂದರೆ ಅಲ್ಲಿಗೆ ಎಲ್ಲ ವ್ಯವಹಾರವು ನಿಂತು ಹೋಗುತ್ತದೆ ಎಂದರ್ಥ.

ಈ ಜ್ಞಾನಶೂನ್ಯಸ್ಥಲವನ್ನು ಪರಿಸಮಾಪ್ತಿಗೊಳಿಸುತ್ತ ಪೂಜ್ಯಪಾದರು ಕೊನೆಯದಾಗಿ–

ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮಥಾಪಿ ವಾ ।
ಶೇಷತ್ವಂ ನೈವ ಶೇಷಿತ್ವಂ ಸ ಮುಕ್ತಃ ಪರ ಉಚ್ಯತೇ ॥

(ಸಿ. ಶಿ. ೨೦–೭೦)

ಈ ರೀತಿಯಾಗಿ ಅಪ್ಪಣೆಕೊಡಿಸಿದ್ದಾರೆ. ತಾತ್ಪರ್ಯವೇನೆಂದರೆ, ಯಾವ ಅವಸ್ಥೆಯನ್ನು ತಲುಪಿದ ಬಳಿಕ ಕಾರ್ಯ–ಕಾರಣ ಭಾವಗಳಾಗಲಿ ಮತ್ತು ಶೇಷ–ಶೇಷಿಭಾವಗಳಾಗಲಿ ಇರುವುದಿಲ್ಲವೋ ಅಂತಹ ಸ್ಥಿತಿಯನ್ನು ಪಡೆದ ಈ ಶಿವಯೋಗಿಯು ಮುಕ್ತನೂ ಪರಾತ್ಪರನೂ ಎಂಬುದಾಗಿ ಕರೆಯಲ್ಪಡುತ್ತಾನೆ.

ಏಕೋತ್ತರಶತಸ್ಥಲದಲ್ಲಿ ಕೊನೆಯದಾಗಿರುವ ಆ ಜ್ಞಾನಶೂನ್ಯ ಸ್ಥಿತಿಯನ್ನು ತಲುಪಿದ ಶಿವಯೋಗಿಗೆ ಕಾರ್ಯ–ಕಾರಣಗಳಾವುವೂ ಶೇಷವಾಗಿರುವುದಿಲ್ಲ. ಅವನು ಒಂದು ರೀತಿಯಲ್ಲಿ ಕೃತಕೃತ್ಯನೇ ಆಗಿರುತ್ತಾನೆ. ಮಾಡಬೇಕಾಗಿರುವುದೆಲ್ಲವನ್ನೂ ಅವನು ಮಾಡಿಬಿಟ್ಟಿದ್ದಾನೆ. ಅವನ ದೃಷ್ಟಿಯಲ್ಲಿ ಇನ್ನೂ ಏನಾದರೂ ಮಾಡುವಂಥಾದ್ದು ಯಾವುದೂ ಇರುವುದಿಲ್ಲ. ಪರಮಾತ್ಮ ತತ್ತ್ವವು ಪರಿಪೂರ್ಣವಾಗಿರುವುದರಿಂದ ಅದನ್ನು ಪಡೆದ ಬಳಿಕ ಪುನಃ ಪಡೆಯುವಂಥಾದ್ದು ಯಾವುದೂ ಇರುವುದಿಲ್ಲ. ಸಂಸಾರದ ವ್ಯವಹಾರವು ಮಾತ್ರ ಇದಕ್ಕೆ ಸಂಪೂರ್ಣವಾಗಿ ವಿಪರೀತವಾಗಿರುತ್ತದೆ. ಎಷ್ಟು ಮಾಡಿದರೂ ಯಾರು ಮಾಡಿದರೂ ಎಂದೂ ಮುಗಿಯದಿರುವ ವ್ಯವಹಾರಕ್ಕೇನೇ ಸಂಸಾರವೆನ್ನುವರು. ಒಂದು ನೂರು ವರ್ಷದವರೆಗೆ ಏನೆಲ್ಲವನ್ನು ಮಾಡಿ ಮಾಡಿ ಕೊನೆಯ ಉಸಿರೆಳೆಯುತ್ತಿರುವ ಓರ್ವ ಶತಾಯುಷಿಯನ್ನು ಕುರಿತು ನಿನ್ನ ಸಂಸಾರದ ವ್ಯವಹಾರವು ಎಲ್ಲವೂ ಮುಗಿಯಿತೆ ? ಅದಾವ ಇಚ್ಛೆಗಳೂ ನಿನ್ನಲ್ಲಿ ಇಲ್ಲ ತಾನೆ ?

ಎಂಬುದಾಗಿ ಕೇಳಲಾಗಿ ಆತನು ನಿರಾಶೆಯ ಉಸಿರನ್ನೆಳೆಯುತ್ತ, ತಾನಿನ್ನೂ ಮಾಡಬೇಕಾಗಿರುವ ವ್ಯವಹಾರದ ಒಂದು ಸುದೀರ್ಘವಾದ ಪಟ್ಟಿಯನ್ನೇ ಮುಂದಿಟ್ಟು ಮೃತ್ಯುಮುಖನಾಗುವುದನ್ನು ಅನೇಕ ಕಡೆಗಳಲ್ಲಿ ಕಾಣುತ್ತೇವೆ. ಸಾಂಸಾರಿಕ ವ್ಯವಹಾರದಲ್ಲಿ ಅತೃಪ್ತನಾದ ಆತನು ತನ್ನಿಂದ ಉಳಿದಿರುವ ಕಾರ್ಯಗಳನ್ನು ತನ್ನ ಶಿಷ್ಯರಿಗಾಗಲಿ, ತನ್ನ ಮಕ್ಕಳಿಗಾಗಲಿ ಹೇಳಿಯೇ ಹೋಗುತ್ತಾನೆ. ಆದ್ದರಿಂದ ಅಪೂರ್ಣವೂ, ಎಂದೂ ಪರಿಸಮಾಪ್ತವಾಗದಿರುವುದೂ ಯಾವುದೋ ಅದುವೇ ಸಂಸಾರವು. ಇನ್ನು ಪರಿಪೂರ್ಣವೂ, ಕರ್ತವ್ಯಾದಿಗಳಿಲ್ಲದಿರುವುದೂ ಆದ ಸ್ಥಿತಿಯೇ ಪರಶಿವ ಬ್ರಹ್ಮಸ್ಥಿತಿಯು. ಇದು ''ಪೂರ್ಣಮದಃ ಪೂರ್ಣಮಿದಂ ............'' ಎಂಬ ಉಪನಿಷನ್ಮಂತ್ರದಂತೆ ಸದಾ ಸರ್ವದಾ ಪೂರ್ಣವೇ ಆಗಿರುವುದರಿಂದ ಇದನ್ನು ಪಡೆದವರಾರೂ ಅಪೂರ್ಣರಾಗಿ ಉಳಿಯುವುದಿಲ್ಲ. ಪರಮಾತ್ಮ ತತ್ತ್ವವು ಪ್ರತಿಯೊಬ್ಬರಿಗೂ ಪೂರ್ಣವಾಗಿ ದೊರಕುವಂತೆ ಪ್ರಪಂಚವು ಯಾರಿಗೂ ಪೂರ್ಣವಾಗಿ ದೊರೆಯುವುದಿಲ್ಲ. ಅಂತೆಯೇ ಪರಮ ತತ್ತ್ವದ ಅರಿವಿಲ್ಲದ ಪ್ರಪಂಚದ ಅಜ್ಞ ಜೀವಿಗಳು ಮರಣಕಾಲದಲ್ಲಿ ಅತೃಪ್ತರಾಗಿ ಅಳುತ್ತಲೇ ಪ್ರಾಣವನ್ನು ಬಿಡುತ್ತಾರೆ. ಪ್ರಪಂಚವು ಅಪೂರ್ಣವಾಗಿರುವುದರಿಂದ ಅದು ಯಾರಿಗೇ ದೊರೆತರೂ ಒಂದು ಪಾಲು ದೊರೆಯಬಹುದೇ ವಿನಃ ಸರ್ವವೂ ದೊರೆಯಲಾರದು.

ಓರ್ವ ಆಗರ್ಭ ಸಿರಿವಂತನು ತನ್ನ ಶಯನ ಕಕ್ಷೆಯಲ್ಲಿ ಒಂದು ಸುಂದರವಾದ ಪಲ್ಲಂಗವನ್ನು ಹಾಕಿ, ಅದರ ಮೇಲೆ ಕುತ್ನಿಯ ವಸ್ತ್ರದಿಂದ ನಿರ್ಮಿಸಲ್ಪಟ್ಟ ಗಾದಿಯನ್ನು ಹಾಸಿ, ಅದನ್ನು ಪುಷ್ಪಗಳಿಂದ ಅಲಂಕರಿಸಿ, ಸುಗಂಧ ದ್ರವ್ಯಗಳನ್ನು ಪ್ರೋಕ್ಷಿಸಿ, ರಾತ್ರಿ ತುಂಬೆಲ್ಲ ಅದರ ಮಾರ್ದವ ಸುಖವನ್ನು ಅನುಭವಿಸುವ ಲವಲವಿಕೆಯಲ್ಲಿ ಶಯನ ಕಕ್ಷೆಯನ್ನು ಪ್ರವೇಶಿಸಿದನು. ಹಂಸತೂಲಿಕಾ ಸದೃಶವಾದ ಆ ಶಯ್ಯೆಯನ್ನು ನೋಡಿಯೇ ಅತಿ ಸಂತೋಷಪಟ್ಟು, ಸಾವಕಾಶವಾಗಿ ಹೋಗಿ ಅದರ ಮೇಲೆ ಒರಗಿಕೊಂಡನು. ತನ್ನ ದೇಹದ ಒಂದು ಮಗ್ಗಲಿಗೆ ದೊರೆತ ಆ ಶಯ್ಯೆಯ ಮೃದುತ್ವ ಹಾಗೂ ತಂಪುತನವನ್ನು ಅನುಭವಿಸುತ್ತಲೇ ಮನಸ್ಸು ಒಂದು ಕ್ಷಣಕಾಲದಲ್ಲಿ ಸಂತೋಷ ಸಾಗರದಲ್ಲಿ ತೇಲಾಡಿ ಹೋಯಿತು. ಅವನ ದೇಹದ ಒಂದು ಮಗ್ಗಲು ಹಾಸಿಗೆಯ ಸ್ಪರ್ಶ ಸುಖವನ್ನು ಅನುಭವಿಸುತ್ತಿದ್ದರೂ, ಉಳಿದ ಮೂರು ಮಗ್ಗಲುಗಳು ಮಾತ್ರ ಆ ಸುಖದಿಂದ ವಂಚಿತವಾಗಿದ್ದವು. ಆಗ ಆ ಸಿರಿವಂತನು ತನ್ನ ದೇಹದ ಉಳಿದ ಅಂಗಗಳಿಗೂ ಸಹ ಆ ಸುಖವು ಸಿಗಬೇಕೆಂಬ ಉದ್ದೇಶದಿಂದ ಒಂದು ಮಗ್ಗಲನ್ನು ಬದಲಿಸಿ ಇನ್ನೊಂದು ಮಗ್ಗಲಲ್ಲಿ ಮಲಗಿಕೊಂಡನು. ಆಗ ಎರಡನೇ ಮಗ್ಗಲಿಗೆ ಹಾಸಿಗೆಯ ಸ್ಪರ್ಶವಾದರೂ ಮೊದಲನೆಯ ಮಗ್ಗಲು ಅದರಿಂದ ವಂಚಿತವಾಗಿ ಉಳಿಯಿತಲ್ಲದೇ ಅವನ ಹೊಟ್ಟೆ ಬೆನ್ನುಗಳು ಇನ್ನೂ ಆ ಸ್ಪರ್ಶ ಸುಖದಿಂದ ಸಂಪೂರ್ಣವಾಗಿ ವಂಚಿತಗಳೇ ಆಗಿದ್ದವು. ಇದರಿಂದ ಅತೃಪ್ತಾವಸ್ಥೆಯನ್ನು ಪಡೆದ ಆ ಶ್ರೀಮಂತನು ಹಾಸಿಗೆಯ ತುಂಬೆಲ್ಲ ಅತ್ತಿಂದಿತ್ತ ಇತ್ತಿಂದತ್ತ ಹೊರಳಾಡತೊಡಗಿದನು. ಇಡೀ ರಾತ್ರಿಯೆಲ್ಲ ಬೇಕಾದಷ್ಟು ಹೊರಳಾಡಿದರೂ ದೇಹದ ಸಂಪೂರ್ಣ ಭಾಗಕ್ಕೆ ಏಕಕಾಲದಲ್ಲಿ ಆ ಶಯ್ಯೆಯ ಮೃದುತ್ವವನ್ನು ಅನುಭವಿಸಲು ಅವನಿಂದ ಆಗಲಿಲ್ಲ. ಇದರಿಂದಾಗಿ ಅವನ ಮನಸ್ಸಿನಲ್ಲಿ ಆ ಅತೃಪ್ತಿಯ

ಕೊರಗು ಹಾಗೆಯೇ ಉಳಿಯಿತಂತೆ. ಸಂಸಾರದ ಸುಖವೂ ಸಹ ಇದೇ ಪ್ರಕಾರ ವಾದುದು. ಇಲ್ಲಿರುವ ಸರ್ವಪ್ರಕಾರದ ಸುಖಗಳು ಸರ್ವರಿಗೂ ಸದಾ ಸಿಗಲಾರವು. ಸಾಂಸಾರಿಕ ಜೀವಿಗಳು ಸುಖದ ಪ್ರಾಪ್ತಿಯ ಪ್ರತೀಕ್ಷೆಯಲ್ಲಿಯೇ ತಮ್ಮ ಆಯುಷ್ಯವನ್ನೇ ಕಳೆದುಕೊಳ್ಳುತ್ತಾರೆ. ಆದರೂ ಅದು ಅವರಿಗೆ ಪರಿಪೂರ್ಣವಾಗಿ ಸಿಗಲಾರದು. ಪರಶಿವ ತತ್ತ್ವವು ಮಾತ್ರ ಇದಕ್ಕೆ ಸಂಪೂರ್ಣವಾಗಿ ವಿಪರೀತವಾದುದು. ಇದು ಯಾರಿಗೇ ದೊರೆತರೂ ಅಪೂರ್ಣವಾಗಿ ದೊರೆಯದೇ ಪರಿಪೂರ್ಣವಾಗಿ ದೊರೆಯುತ್ತದೆ. ಇದನ್ನು ಪಡೆದವನು ಸಹ ಪರಿಪೂರ್ಣನೇ ಆಗಿಹೋಗುತ್ತಾನೆ. ಅಂತೆಯೇ ಅವನಿಗೆ ಕರ್ತವ್ಯ, ಪ್ರಾಪ್ತವ್ಯಗಳಾವುವೂ ಉಳಿಯುವುದಿಲ್ಲ. ಇಂತಹ ಪರಿಪೂರ್ಣಸ್ಥಿತಿಯನ್ನು ಪಡೆದ ಈ ಶಿವಯೋಗಿಯಲ್ಲಿ ನಾನು ಇದನ್ನು ಪಡೆದಿದ್ದೇನೆ ಎಂಬ ಜ್ಞಾನವೂ ಸಹ ಇಲ್ಲ ದಾಗಿ ಹೋಗಿ ಅವನು ಸದಾ ಜ್ಞೇಯ ರೂಪನೇ ಆಗಿ ಬಿಡುತ್ತಾನೆ. ಇದಕ್ಕೇನೆ ಪರಮುಕ್ತಿ, ಪರಮ ಸಾಮರಸ್ಯಸ್ಥಿತಿ, ಎಂಬುದಾಗಿಯೂ ಕರೆಯಲಾಗುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಪ್ರತಿಪಾದಿಸಿದ ನೂರೊಂದನೆಯ ಸ್ಥಲವೇ ಜ್ಞಾನಶೂನ್ಯಸ್ಥಲವು. ಪರಮ ಪೂಜ್ಯರಿಂದ ಈ ನೂರೊಂದು ಸ್ಥಲದ ನಿಲುವನ್ನರಿತ ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯೂ ಸಹ ಕೃತಕೃತ್ಯನಾದನು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರಿಂದ ಏಕೋತ್ತರಶತಸ್ಥಲಗಳನ್ನು ಶ್ರೀ ಅಗಸ್ತ್ಯಮಹರ್ಷಿಯು ಸಾವಧಾನ ಚಿತ್ತನಾಗಿ ಆಲಿಸಿದ ನಂತರ ಮುಂದೆ ಏನಾಯಿ ತೆಂಬ ವಿಷಯವನ್ನು ಈ ಗ್ರಂಥಕಾರರಾದ ಶ್ರೀ ಶಿವಯೋಗಿ ಶಿವಾಚಾರ್ಯರು–

ಏತಾವದುಕ್ತ್ವಾ ಪರಮಪ್ರಬೋಧಮದ್ವೈತಮಾನಂದ ಶಿವಪ್ರಕಾಶಮ್ ।
ದೇವ್ಯೈ ಪುರಾ ಭಾಷಿತಮೀಶ್ವರೇಣ ತೂಷ್ಣೀಮಭೂತ್ ಧ್ಯಾನಪರೋ ಗಣೇಂದ್ರಃ ॥

ಏವಮುಕ್ತ್ವಾ ಸಮಾಸೀನಂ ಶಿವಯೋಗಪರಾಯಣಮ್ ।
ರೇಣುಕಂ ತಂ ಸಮಾಲೋಕ್ಯ ಬಭಾಷೇ ಪ್ರಾಂಜಲಿರ್ಮುನಿಃ ॥

(ಸಿ. ಶಿ. ೨೦; ೭೧–೭೨)

ಹೀಗೆ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ಪೂರ್ವದಲ್ಲಿ ಪರಮೇಶ್ವರನು ಪಾರ್ವತಿಗೆ ರಹಸ್ಯವಾಗಿ ಉಪದೇಶಿಸಿದ ಶಿವಾನಂದ ಪ್ರಕಾಶಕವೂ, ಸ್ವಸ್ವರೂಪದ ಸಾಧಕವೂ, ಶಿವಾದ್ವೈತರೂಪವೂ ಆದ ಪಿಂಡಸ್ಥಲಾದಿ ಜ್ಞಾನಶೂನ್ಯಸ್ಥಲಾಂತವಾದ ವೀರಶೈವ ಶಾಸ್ತ್ರವನ್ನು ಶ್ರೀಮದ್ ರೇಣುಕಾಚಾರ್ಯರು ಮಹರ್ಷಿಯಾದ ಅಗಸ್ತ್ಯನಿಗೆ ಇದುವರೆಗೆ ಹೇಳಿದ ರೀತಿಯಲ್ಲಿ ಉಪದೇಶಿಸಿ, ಕೊನೆಗೆ ಸ್ವಸ್ವರೂಪ ಧ್ಯಾನಾಸಕ್ತನಾಗಿ ಮೌನಮುದ್ರೆಯೊಳಗೆ ಕುಳಿತುಕೊಂಡನು. ಹೀಗೆ ಶಿವಯೋಗ ಪರಾಯಣನಾದ ರೇಣುಕ ಗುರುವರನು ತನಗೆ ಇಲ್ಲಿಯವರೆಗೆ ಉಪದೇಶ ಮಾಡಿ ಸುಮ್ಮನೇ ಕುಳಿತಿರು ವುದನ್ನು ಕಂಡು ಅಗಸ್ತ್ಯ ಮಹರ್ಷಿಯು ಅಂಜಲಿಬದ್ಧನಾಗಿ–

ಶಿವಯೋಗ ವಿಶೇಷಜ್ಞ ಶಿವಜ್ಞಾನಮಹೋದಧೇ ।
ಸಮಸ್ತವೇದಶಾಸ್ತ್ರಾದಿ ವ್ಯವಹಾರದುರಂಧರ ॥

ಆಲೋಕಮಾತ್ರನಿರ್ಧೂತ ಸರ್ವಸಂಸಾರಬಂಧನ ।
ಸ್ವಚ್ಛಂದಚರಿತೋಲ್ಲಾಸ ಸ್ವಪ್ರಕಾಶಾತ್ಮವಚ್ಛಿವ ॥

ಅವತೀರ್ಣಮಿದಂ ಶಾಸ್ತ್ರಮನವದ್ಯಂ ತ್ವದಾನನಾತ್ ।
ಶ್ರುತ್ವಾ ಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯೇ ಶಿವಾಭಿದಮ್ ॥

ಅದ್ಯ ಮೇ ಸಫಲಂ ಜನ್ಮ ಗತೋ ಮೇ ಚಿತ್ತವಿಭ್ರಮಃ ।
ಸಂಜಾತಾ ಪಾಶವಿಚ್ಛಿತ್ತಿಸ್ತಪಾಂಸಿ ಫಲಿತಾನಿ ಮೇ ॥

ಇದಾನೀಮೇವ ಮೇ ಜಾತಂ ಮುನಿರಾಜೋತ್ತಮೋತ್ತಮಮ್ ।
ಇತಃ ಪರಂ ಮಯಾ ನಾಸ್ತಿ ಸದೃಶೋ ಭುವನತ್ರಯೇ ॥

ಶಾಸ್ತ್ರಂ ತವ ಮುಖೋದ್ಗೀರ್ಣಂ ಶಿವಾದ್ವೈತಪರಂ ಪರಮ್ ।
ಮಾಂ ವಿನಾ ಕಸ್ಯ ಲೋಕೇಷು ಶ್ರೋತುಮಸ್ತಿ ತಪಃಶುಭಮ್ ॥

ತಪಸಾಂ ಪರಿಪಾಕೇನ ಶಂಕರಸ್ಯ ಪ್ರಸಾದತ ಃ ।
ಆಗತಸ್ತ್ವಂ ಮಹಾಭಾಗ ಮಾಂ ಕೃತಾರ್ಥಯಿತುಂ ಗಿರಾ ॥

(ಸಿ. ಶಿ. ೨೦; ೭೩-೭೯)

ಹೀಗೆ ಸ್ತುತಿಸಿದನು. ತಾತ್ಪರ್ಯವೇನೆಂದರೆ, ಹೇ ಗಣಶ್ರೇಷ್ಠನಾದ ರೇಣುಕನೆ ! ನೀನು ಶಿವಯೋಗದ ರಹಸ್ಯವನ್ನು ವಿಶೇಷವಾಗಿ ಅರಿತವನಾಗಿರುವಿ, ನೀನು ಶಿವಜ್ಞಾನದ ಮಹಾಸಾಗರವೇ ಆಗಿರುವಿ. ಸಕಲ ವೇದ, ಆಗಮ ಮತ್ತು ಪುರಾಣಾದಿ ಶಾಸ್ತ್ರಗಳಲ್ಲಿ ನೀನು ಅತ್ಯಂತ ಪ್ರವೀಣನಾಗಿರುವಿ. ಕೇವಲ ಕೃಪಾದೃಷ್ಟಿಯಿಂದಲೇ ಜೀವಿಗಳ ಸಂಸಾರ ಬಂಧನವನ್ನು ಕಡಿದು ಹಾಕುವ ಸಾಮರ್ಥ್ಯವು ನಿನಗಿದೆ. ನೀನು ಸರ್ವ ತಂತ್ರ ಸ್ವತಂತ್ರ ನಾಗಿರುವಿ. ಸ್ವಯಂ ಪ್ರಕಾಶರೂಪನಾದ ಶಿವನೇ ನೀನಿರುವೆ. ಅತ್ಯಂತ ಪವಿತ್ರವಾದ ಏಕೋತ್ತರಶತಸ್ಥಲಾತ್ಮಕವಾದ ಈ ಷಟ್‌ಸ್ಥಲಸಿದ್ಧಾಂತವು ನಿನ್ನ ಮುಖಾರವಿಂದದಿಂದಲೇ ಲೋಕದ ಕಲ್ಯಾಣಾರ್ಥವಾಗಿ ಅವತೀರ್ಣವಾದುದಾಗಿದೆ. ಅಮೃತ ಸದೃಶವಾದ ನಿನ್ನ ಉಪದೇಶವನ್ನು ಶ್ರವಣಮಾಡಿ ನನ್ನ ಚಿತ್ತವು ಆನಂದತುಂದಿಲವಾಗಿದೆಯಲ್ಲದೆ ಈ ಶ್ರವಣದ ಪರಿಣಾಮವಾಗಿ ನನ್ನೊಳಗೆ ಶಿವರೂಪವಾದ ಜ್ಯೋತಿಯನ್ನು ಕಾಣುತ್ತಲಿದ್ದೇನೆ. ಇಂದು ನನ್ನ ಈ ಜನ್ಮವು ಸಫಲವಾಯಿತು. ನನ್ನ ಮನಸ್ಸಿನಲ್ಲಿರುವ ಸಂಶಯಾದಿ ಭ್ರಮೆಗಳೆಲ್ಲ ದೂರಾದವು. ನನ್ನ ಪಾಶಗಳೆಲ್ಲ ಕತ್ತರಿಸಿ ಹೋದವು. ನಾನು ಇಷ್ಟು ದಿನಗಳ ವರೆಗೆ ಮಾಡಿದ ನಾನಾ ಪ್ರಕಾರದ ತಪಸ್ಸುಗಳು ಇಂದು ಸಫಲಗಳಾದವು. ನನಗೆ ಇಲ್ಲಿಯವರೆಗೆ ಮುನಿರಾಜ, ಮುನಿಶ್ರೇಷ್ಠನೆಂದು ಜನರು ಕರೆಯುತ್ತಿದ್ದರು. ಅವನ ಆ ಕರೆಯುವಿಕೆಯು ಇಂದು ನನಗೆ ಸತ್ಯವಾಗಿ ತೋರುತ್ತಿವೆ. ಈ ಭುವನತ್ರಯಗಳಲ್ಲಿ ನನಗೆ ಸದೃಶರಾದವರು ಇನ್ನು ಮೇಲೆ ಯಾರೂ ಇರುವುದಿಲ್ಲ. ನಿನ್ನ ಮುಖಾರವಿಂದದಿಂದ ಹೊರ ಹೊರಟ ಶಿವಾದ್ವೈತ ರೂಪವಾದ ಶಾಸ್ತ್ರವನ್ನು ಕೇಳಲು ನನ್ನ ಹೊರತಾಗಿ ಬೇರಾವ ತಪಸ್ವಿಯು ಇರುವುದಿಲ್ಲ. ಅಂತೆಯೇ ತಾವು ಪ್ರಪ್ರಥಮ ಬಾರಿಗೆ ನನಗೇನೇ ಈ ಸಿದ್ಧಾಂತವನ್ನು ಉಪದೇಶಿಸಿದ್ದೀರಿ. ನಾನು ಮಾಡಿದ ತಪಸ್ಸಿನ ಫಲವೂ, ಶಿವನ ಅನುಗ್ರಹವೂ ಒಂದುಗೂಡಿರೋಣದರಿಂದ ನನ್ನನ್ನು ಕೃತಾರ್ಥನನ್ನಾಗಿ ಮಾಡುವುದ

ಕ್ಕಾಗಿ ತಾವು ನನ್ನಲ್ಲಿಗೆ ಬಂದಿದ್ದೀರಿ. ಆದ್ದರಿಂದ ನಾನೇ ಧನ್ಯನು, ಎಂಬುದಾಗಿ ಅಗಸ್ತ್ಯ ಮಹರ್ಷಿಯು ಶ್ರೀ ರೇಣುಕ ಭಗವತ್ಪಾದರನ್ನು ನಾನಾ ವಿಧವಾಗಿ ಸ್ತುತಿಸಿದನು.

ಮಹರ್ಷಿಯಾದ ಅಗಸ್ತ್ಯನ ಈ ಸ್ತುತಿಯನ್ನು ಆಲಿಸಿದ ರೇಣುಕ ಭಗವತ್ಪಾದರು ಮಹರ್ಷಿಯನ್ನು ಕುರಿತು–

ಇತಿ ಸ್ತುವಂತಂ ವಿನಯಾದಗಸ್ತ್ಯಂ ಮುನಿಪುಂಗವಮ್ ।
ಆಲೋಕ್ಯ ಕರುಣಾದೃಷ್ಟ್ಯಾ ಬಭಾಷೇ ಸ ಗಣೇಶ್ವರಃ ॥

ಅಗಸ್ತ್ಯ ಮುನಿಶಾರ್ದೂಲ ತಪಃಸಿದ್ಧಮನೋರಥ ।
ತ್ವಾಂ ವಿನಾ ಶಿವಶಾಸ್ತ್ರಸ್ಯ ಕಃ ಶ್ರೋತುಮಧಿಕಾರವಾನ್ ॥

ಪಾತ್ರಂ ಶಿವಪ್ರಸಾದಸ್ಯ ಭವಾನೇಕೋ ನ ಚಾಪರಃ ।
ಇತಿ ನಿಶ್ಚಿತ್ಯ ಕಥಿತಂ ಮಯಾ ತೇ ತಂತ್ರಮೀದೃಶಮ್ ॥

ಸ್ಥಾಪ್ಯತಾಂ ಸರ್ವಲೋಕೇಷು ತಂತ್ರಮೇತತ್ ತ್ವಯಾ ಮುನೇ ।
ಈದೃಶಂ ಶಿವಬೋಧಸ್ಯ ಸಾಧನಂ ನಾಸ್ತಿ ಕುತ್ರಚಿತ್ ॥

ರಹಸ್ಯಮೇತತ್ ಸರ್ವಜ್ಞಃ ಸರ್ವಾನುಗ್ರಾಹಕಃ ಶಿವಃ ॥
ಅವಾದೀತ್ ಸರ್ವಲೋಕಾನಾಂ ಸಿದ್ಧಯೇ ಪಾರ್ವತೀಪತಿಃ ॥

ತದಿದಂ ಶಿವಸಿದ್ಧಾಂತಸಾರಾಣಾಮುತ್ತಮೋತ್ತಮಮ್ ।
ವೇದವೇದಾಂತ ಸರ್ವಸ್ವಂ ವಿದ್ಯಾಚಾರಪ್ರವರ್ತಕಮ್ ॥

ವೀರಮಾಹೇಶ್ವರಗ್ರಾಹ್ಯಂ ಶಿವಾದ್ವೈತ ಪ್ರಕಾಶಕಮ್ ।
ಪರೀಕ್ಷಿತೇಭ್ಯೋ ದಾತವ್ಯಂ ಶಿಷ್ಯೇಭ್ಯೋ ನಾನ್ಯಥಾ ಕ್ವಚಿತ್ ॥

ಏತಚ್ಛ್ರವಣ ಮಾತ್ರೇಣ ಸರ್ವೇಷಾಂ ಪಾಪಸಂಕ್ಷಯಃ ।
ಅವತೀರ್ಣಂ ಮಯಾ ಭೂಮೌ ಶಾಸ್ತ್ರಸ್ಯಾಸ್ಯ ಪ್ರವೃತ್ತಯೇ ॥
ಪ್ರವರ್ತಯ ಶಿವಾದ್ವೈತಂ ತ್ವಮಪಿ ಜ್ಞಾನಮೀದೃಶಮ್ ॥

(ಸಿ. ಶಿ. ೨೦/೮೦–೮೭)

ಈ ರೀತಿಯಾಗಿ ಆದೇಶವಿತ್ತರು. ತಾತ್ಪರ್ಯವೇನೆಂದರೆ, ತನ್ನೆದುರಿಗೆ ವಿನಯಾಂಜಲಿ ಬದ್ಧನಾಗಿ ಸ್ತುತಿಸುತ್ತಿರುವ ಮುನಿಪುಂಗವನಾದ ಅಗಸ್ತ್ಯನನ್ನು ತಮ್ಮ ಕರುಣಾಮಯ ದೃಷ್ಟಿಯಿಂದ ನೋಡುತ್ತ, ಗಣಶ್ರೇಷ್ಠರಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯನನ್ನು ಕುರಿತು ಹೀಗೆ ಹೇಳತೊಡಗಿದರು– ಮುನಿಗಳಲ್ಲಿ ಅಗ್ರಗಣ್ಯನಾದ, ತಪಸ್ಸಿನಿಂದ ಮನೋರಥವನ್ನು ಪೂರ್ಣಮಾಡಿಕೊಂಡಿರುವ, ಎಲೈ ಅಗಸ್ತ್ಯ ಮಹರ್ಷಿಯೇ ! ನಾನು ಉಪದೇಶ ಮಾಡಿದ ಈ ಶಿವಾದ್ವೈತ ಶಾಸ್ತ್ರವನ್ನು ಶ್ರವಣ ಮಾಡಲು ನಿನ್ನ ಹೊರತಾಗಿ ಬೇರಾರಿಗೆ ಅಧಿಕಾರವಿದೆ ! ಈ ಭೂಲೋಕದಲ್ಲಿ ಶಿವಪ್ರಸಾದಕ್ಕೆ ಪಾತ್ರನಾದವನು ನೀನೊರ್ವನೇ ಇರುವಿಯೇ ವಿನಃ ಬೇರಾರೂ ಇಲ್ಲ ಎಂಬುದನ್ನು ನಿಶ್ಚಯಿಸಿಕೊಂಡೇ ನಿನಗೆ ಈ ಸರ್ವಶ್ರೇಷ್ಠವಾದ ವೀರಶೈವ ಸಿದ್ಧಾಂತವನ್ನು ಉಪದೇಶಿಸಿದ್ದೇನೆ. ಶಿವನ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳಲಿಕ್ಕೆ ಈ ಷಟ್‌ಸ್ಥಲ ಸಿದ್ಧಾಂತದ

ಹೊರತಾಗಿ ಬೇರೊಂದು ಸಾಧನವಿಲ್ಲ. ಆದ್ದರಿಂದ ಇಂತಹ ದುರ್ಲಭವಾದ ಈ ಸಿದ್ಧಾಂತವನ್ನು ನೀನೂ ಸಹ ಈ ಲೋಕದಲ್ಲೆಲ್ಲ ಪ್ರಚಾರ– ಪ್ರಸಾರಗೊಳಿಸುವವನಾಗು. ನಿನಗೆ ನಾನು ಉಪದೇಶಿಸಿದ ಈ ಸಿದ್ಧಾಂತವು ಅತ್ಯಂತ ಅಪೂರ್ವವಾದುದು. ಈ ಪೂರ್ವದಲ್ಲಿ ಭೂಲೋಕದಲ್ಲಿ ಯಾರಿಗೂ ಇದರ ತಿಳುವಳಿಕೆಯಿರಲಿಲ್ಲ, ನಾನೇ ಇದನ್ನು ಪ್ರಥಮ ಬಾರಿಗೆ ಭೂಲೋಕದಲ್ಲಿ ಪ್ರತಿಷ್ಠಾಪಿಸಿದ್ದೇನೆ. ಪಾರ್ವತೀ ಪತಿಯಾದ ಪರಮೇಶ್ವರನು ಕೈಲಾಸದಲ್ಲಿ ಕುಳಿತುಕೊಂಡು ಸರ್ವಲೋಕಗಳ ಕಲ್ಯಾಣಕ್ಕಾಗಿ ರಹಸ್ಯ ವಾದ ಈ ವೀರಶೈವ ಸಿದ್ಧಾಂತವನ್ನು ಮೊದಲು ಪಾರ್ವತಿಗೆ ಉಪದೇಶಿಸಿದ್ದನು. ಆ ಸಿದ್ಧಾಂತವನ್ನೇ ಇಂದು ನಿನಗೆ ಉಪದೇಶಿಸಿದ್ದೇನೆ. ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳ ಸಾರರೂಪವಾದ ಈ ವೀರಶೈವ ಷಟ್‌ಸ್ಥಲ ಸಿದ್ಧಾಂತವು ಎಲ್ಲ ಸಿದ್ಧಾಂತಗಳಲ್ಲಿ ಸರ್ವಶ್ರೇಷ್ಠವಾದುದಾಗಿದೆ. ನಾಲ್ಕು ವೇದ ಮತ್ತು ಸರ್ವ ಉಪನಿಷತ್ತು ಗಳ ಸಾರ ಸರ್ವಸ್ವವಾಗಿರುವ ಈ ಸಿದ್ಧಾಂತವು ಜ್ಞಾನ–ಕ್ರಿಯೆಗಳೆರಡಕ್ಕೂ ಮಾನ್ಯತೆ ಯನ್ನು ಕೊಟ್ಟಿರುವುದಾಗಿದೆ. ವೀರಮಾಹೇಶ್ವರರಿಂದ ಅಂಗೀಕರಿಸಲ್ಪಟ್ಟ ಈ ಸಿದ್ಧಾಂತವು ಶಿವಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವಂಥಾದ್ದಾಗಿದೆ. ಈ ವಿದ್ಯೆಯನ್ನು ಯೋಗ್ಯ ಅಧಿಕಾರಿಯಾದ ಶಿಷ್ಯನಿಗೆ ಕೊಡಬೇಕೇ ವಿನಃ ಅನ್ಯರಾರಿಗೂ ಇದರ ಉಪದೇಶವನ್ನು ಮಾಡಕೂಡದು. ಅಯೋಗ್ಯರೂ, ಅನಧಿಕಾರಿಗಳೂ ಆದ ಶಿಷ್ಯರಿಗೆ ಉಪದೇಶ ಮಾಡಿದರೆ ಅವರಿಂದ ಲೋಕದಲ್ಲಿ ಅನರ್ಥವೇ ಉಂಟಾಗುವುದು. ಆದ ಕಾರಣ ಯೋಗ್ಯರಾದ ಶಿಷ್ಯರಿಗೆ ಮಾತ್ರ ಈ ವಿದ್ಯೆಯನ್ನು ಉಪದೇಶಿಸಬೇಕು. ನಾನು ಉಪದೇಶ ಮಾಡಿದ ಈ ಶಾಸ್ತ್ರವನ್ನು ಯಾರು ಭಕ್ತಿಯಿಂದ ಶ್ರವಣ ಮಾಡುವರೋ ಅವರ ಆ ಶ್ರವಣದ ಫಲವಾಗಿಯೇ ಅವರ ಎಲ್ಲ ಪಾಪಗಳು ಕ್ಷಯಿಸಿ ಹೋಗುವವು. ಇಂತಹ ಅಪೂರ್ವವಾದ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಈ ಭೂಲೋಕದಲ್ಲಿ ಪ್ರತಿಷ್ಠಾಪಿಸುವುದಕ್ಕಾಗಿಯೇ ನಾನು ಅವತಾರವನ್ನು ತಾಳಿ ಬಂದಿದ್ದೇನೆ. ನಿನಗೆ ಇಲ್ಲಿಯ ವರೆಗೆ ಉಪದೇಶ ಮಾಡಿದ ಈ ಶಿವಾದ್ವೈತ ಜ್ಞಾನವನ್ನು ನೀನು ಅರಿಯುವುದರೊಂದಿಗೆ ಇದರ ಪ್ರಚಾರ– ಪ್ರಸಾರವನ್ನೂ ಸಹ ಮಾಡುವಂಥವನಾಗು. ಈ ರೀತಿಯಾಗಿ ಅಗಸ್ತ್ಯ ಮಹರ್ಷಿಗೆ ಸರ್ವವೆಲ್ಲವನ್ನು ಅರುಹಿದ ರೇಣುಕ ಭಗವತ್ಪಾದರು ಕುಳಿತಲ್ಲಿಯೇ ಅಂತರ್ಧಾನರಾದರು.

ಹೀಗೆ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಷಟ್‌ಸ್ಥಲಾಂತರ್ಗತವಾದ ಏಕೋತ್ತರ ಶತಸ್ಥಲಗಳನ್ನು ಆಮೂಲಾಗ್ರವಾಗಿ ಶ್ರವಣ ಮಾಡಿದ ಅಗಸ್ತ್ಯ ಮಹರ್ಷಿಯು, ಈ ವೀರಶೈವ ಸಿದ್ಧಾಂತವನ್ನು ಈ ಲೋಕದಲ್ಲಿ ಪ್ರಚಾರ ಮಾಡಿದನೆಂಬುದು ಅವನು ಬರೆದ ಬ್ರಹ್ಮಸೂತ್ರದ ಮೇಲಿನ ''ಮುನಿವೃತ್ತಿ''ಯಿಂದ ತಿಳಿದುಬರುತ್ತದೆ. ಶ್ರೀ ಪತಿಪಂಡಿತಾ ರಾಧ್ಯರು ಆ ಮುನಿವೃತ್ತಿಯ ಆಧಾರದಿಂದಲೇ ಶ್ರೀಕರ ಭಾಷ್ಯವನ್ನು ವಿರಚಿಸಿರುವುದಾಗಿ ಅವರದೇ ಆದ–

ಅಗಸ್ತ್ಯ ಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಮ್ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಮ್ ॥

(ಶ್ರೀಕರಭಾಷ್ಯ ಅಧಿ ೧. ಶ್ಲೋಕ ೧೭)

ಈ ಪದ್ಯದಿಂದ ತಿಳಿದುಬರುತ್ತದೆ. ವ್ಯಾಸಮಹರ್ಷಿಗಳ ಬ್ರಹ್ಮಸೂತ್ರಗಳ ಮೇಲೆ ಅಗಸ್ತ್ಯ ಮಹರ್ಷಿಯು ವೀರಶೈವ ಸಿದ್ಧಾಂತ ಪರವಾದ ವೃತ್ತಿಯನ್ನು ಬರೆದಿದ್ದನು. ಅದಕ್ಕೆ 'ಅಗಸ್ತ್ಯವೃತ್ತಿ' 'ಮುನಿವೃತ್ತಿ'ಯೆಂಬುದಾಗಿ ಕರೆಯುತ್ತಿದ್ದರು. ಇಂದು ಆ ವೃತ್ತಿ ಗ್ರಂಥವು ಉಪಲಬ್ಧವಿಲ್ಲವಾದರೂ ಸುಮಾರು ೧೧ನೆಯ ಶತಮಾನಕ್ಕಿಂತಲೂ ಪೂರ್ವದಲ್ಲಿ ಅದು ಉಪಲಬ್ಧವಿತ್ತೆಂಬುದು ತಿಳಿದುಬರುತ್ತದೆ. ೧೧ನೆಯ ಶತಮಾನದ ಶ್ರೀಪತಿಪಂಡಿತಾರಾಧ್ಯರು ಈ ಅಗಸ್ತ್ಯ ವೃತ್ತಿಯನ್ನು ಆಧಾರವಾಗಿಟ್ಟುಕೊಂಡೇ ವೀರಶೈವ ಸಿದ್ಧಾಂತ ಪರವಾದ ಶ್ರೀಕರ ಭಾಷ್ಯವನ್ನು ಬರೆದಿದ್ದಾರೆ. ಹೀಗೆ ಈ ಷಟ್‌ಸ್ಥಲ ಸಿದ್ಧಾಂತವೂ ಮೂಲತಃ ಆಚಾರ್ಯರಿಂದ ಮಹರ್ಷಿಗಳಿಗೆ, ಮಹರ್ಷಿಗಳಿಂದ ಪರಂಪರೆಯಾಗಿ ಜನಸಾಮಾನ್ಯರಿಗೆ ಹರಿದುಬಂದುದು ತಿಳಿದುಬರುತ್ತದೆ.

ಅಂದು ಶ್ರೀ ರೇಣುಕ ಭಗವತ್ಪಾದರು ಮಹರ್ಷಿಯಾದ ಅಗಸ್ತ್ಯನಿಗೆ ಮಾಡಿದ ಉಪದೇಶವನ್ನೇ ಸಾಂಕೇತಿಕವಾಗಿಟ್ಟುಕೊಂಡು ಶ್ರೀ ಶಿವಯೋಗಿ ಶಿವಾಚಾರ್ಯರು ರೇಣುಕಾಗಸ್ತ್ಯ ಸಂವಾದ ರೂಪವಾಗಿ ಈ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ವಿರಚಿಸಿದ್ದಾರೆ. ಈ ಗ್ರಂಥವನ್ನು ಇವರು ರಚಿಸಬೇಕಾದರೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶೈವಾಗಮ (ಸಿದ್ಧಾಂತಾಗಮ)ಗಳನ್ನು ಮತ್ತು ವ್ಯಾಸ ಮಹರ್ಷಿಯಿಂದ ವಿರಚಿಸಲ್ಪಟ್ಟ ಶಿವಸಂಬಂಧಿಯಾದ ಪುರಾಣಗಳನ್ನು ಹಾಗೂ ವೇದ ಭಾಗವನ್ನು ಸಹ ಆಧಾರವಾಗಿಟ್ಟುಕೊಂಡುದು ಕಂಡುಬರುತ್ತದೆ. ಹೀಗೆ ಲೋಕಕಲ್ಯಾಣಾರ್ಥವಾಗಿ ಶಿವಯೋಗಿ ಶಿವಾಚಾರ್ಯರು ಮಾಡಿದ ಈ ಕಾರ್ಯವು ಅತ್ಯಂತ ಶ್ಲಾಘನೀಯವಾದುದು. ಇಲ್ಲಿಯವರೆಗೆ ಈ ಗ್ರಂಥದಲ್ಲಿಯ ತಾತ್ತ್ವಿಕ ವಿಚಾರವು ಪೂರ್ಣವಾಗಿದ್ದು, ಇಲ್ಲಿಗೆ ಈ ಗ್ರಂಥದ ಇಪ್ಪತ್ತನೆಯ ಪರಿಚ್ಛೇದವು ಪರಿಸಮಾಪ್ತಿಯಾಗುವುದು. ಈ ಗ್ರಂಥದ ಮುಂದಿನ ಪರಿಚ್ಛೇದದಲ್ಲಿ ತ್ರಿಕೋಟಿ ಶಿವಲಿಂಗಸ್ಥಾಪನಾ ರೂಪವಾದ ರೇಣುಕರ ಲೀಲಾ ಚಾರಿತ್ರ್ಯವು ಪ್ರತಿಪಾದಿಸಲ್ಪಟ್ಟಿದೆ. ಆ ಲೀಲೆಯನ್ನು ಕುರಿತು ನಾಳೆ ವಿವೇಚಿಸೋಣವೆಂಬಲ್ಲಿಗೆ ಇಂದಿನ ಈ ಆಶೀರ್ವಚನಕ್ಕೆ ವಿರಾಮವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ–ಪ್ರವಚನಪ್ರಭೆ'' ಗ್ರಂಥದ ವಿಂಶತಿತಮ ಪರಿಚ್ಛೇದವು ಪೂರ್ಣವಾದುದು.

ದಿನಾಂಕ ೯ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)



# ಏಕವಿಂಶತಿತಮ ಪರಿಚ್ಛೇದ

ಆಶೀರ್ವಚನ-೧

## ತ್ರಿಕೋಟಿಲಿಂಗ ಸ್ಥಾಪನಾ ಲೀಲೆ

ಕಾಶೀ ವೀರಶೈವ ವಿದ್ವತ್ ಸಂಘದ ಜಿಜ್ಞಾಸುಗಳಾದ ವಿದ್ಯಾರ್ಥಿಗಳೇ ! ಮತ್ತು ಕಾರ್ಯಕ್ರಮದಲ್ಲಿ ಪಾಲ್ಗೊಂಡ ಪೀಠಾಭಿಮಾನಿಗಳೇ !

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು, ಜಗತ್ತಿನ ಸಮಸ್ತ ಮಾನವರನ್ನು ಕುರಿತು ಉಪದೇಶಿಸಿದ ದಿವ್ಯ ಗ್ರಂಥವೇ ಶ್ರೀ ಸಿದ್ಧಾಂತ ಶಿಖಾಮಣಿಯು. ಈ ಮಹಾನ್ ಗ್ರಂಥದ ಏಕೋತ್ತರಶತಸ್ಥಲಗಳ ಬಗ್ಗೆ ಇಲ್ಲಿಯವರೆಗೆ ಸಿದ್ಧಾಂತ ತತ್ತ್ವವನ್ನು ನೀವೆಲ್ಲ ಶ್ರವಣ ಮಾಡಿದ್ದೀರಿ. ಈ ದಿವ್ಯ ಗ್ರಂಥದ ಕೊನೆಯದಾದ ಇಪ್ಪತ್ತೊಂದನೆಯ ಪರಿಚ್ಛೇದದಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ತ್ರಿಕೋಟಿಲಿಂಗ ಸ್ಥಾಪನಾ ರೂಪವಾದ ಲೀಲೆಯನ್ನು ಬಹು ಹೃದಯಂಗಮ ವಾಗಿ ವಿವರಿಸಿದ್ದಾರೆ. ಆ ಗ್ರಂಥದಲ್ಲಿ ಬಂದಿರುವ ಆ ಲೀಲೆಯನ್ನು ಕುರಿತೇ ವಿವೇಚಿಸೋಣ.

ಈ ಇಪ್ಪತ್ತೊಂದನೆಯ ಪರಿಚ್ಛೇದವನ್ನು ಪ್ರಾರಂಭಿಸುತ್ತ ಶ್ರೀ ಶಿವಯೋಗಿ ಶಿವಾಚಾರ್ಯರು–

ಇತ್ಯುಕ್ತ್ವಾ ಪಶ್ಯತಸ್ತಸ್ಯ ಪುರಸ್ತಾದೇವ ರೇಣುಕಃ ।
ಅಂತರ್ದಧೇ ಮಹಾದೇವಂ ಚಿಂತಯನ್ನಂತರಾತ್ಮನಾ ॥

ಯ ಇದಂ ಶಿವಸಿದ್ಧಾಂತಂ ವೀರಶೈವ ಮತಂ ಪರಮ್ ।
ಶೃಣೋತಿ ಶುದ್ಧಮನಸಾ ಸ ಯಾತಿ ಪರಮಾಂ ಗತಿಮ್ ॥

ಸ್ವಚ್ಛಂದಾಚಾರರಸಿಕಃ ಸ್ವೇಚ್ಛಾನಿರ್ಮಿತ ವಿಗ್ರಹಃ ।
ಆಸಸಾದ ಪುರೀಂಲಂಕಾಂ ರೇಣುಕೋ ಗಣನಾಯಕಃ ॥

(ಸಿ. ಶಿ. ೨೧, ೧–೩)

ಹೀಗೆ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ಈ ಪೂರ್ವದಲ್ಲಿ ಹೇಳಿದ ರೀತಿಯಲ್ಲಿ ಮಹರ್ಷಿಯಾದ ಅಗಸ್ತ್ಯನಿಗೆ ಈ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸಿ, ಅವನು ನೋಡುತ್ತಿರುವಂತೆಯೇ ತನ್ನ ಅಂತರಾತ್ಮದೊಳಗೆ ದೇವಾಧಿದೇವನಾದ ಮಹಾದೇವ ನನ್ನು ಚಿಂತಿಸುತ್ತ ಕುಳಿತಲ್ಲಿಯೇ ಶ್ರೀ ರೇಣುಕ ಭಗವತ್ಪಾದರು ಅಂತರ್ಧಾನರಾದರು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಸಮಸ್ತ ಮಾನವರ ಕಲ್ಯಾಣಕ್ಕಾಗಿ ಉಪದೇಶಿ ಸಿದ ಅಂಗ–ಲಿಂಗ ಷಟ್‌ಸ್ಥಲ ರೂಪವಾದ ಸರ್ವೋತ್ಕೃಷ್ಟವಾದ ವೀರಶೈವ ಸಿದ್ಧಾಂತ

ವನ್ನು ಯಾರು ಪರಿಶುದ್ಧವಾದ ಮನಸ್ಸಿನಿಂದ ಶ್ರವಣ ಮಾಡುತ್ತಾರೆಯೋ ಅವರಿಗೆ ಲಿಂಗಾಂಗ ಸಾಮರಸ್ಯ ರೂಪವಾದ ಪರಮ ಕೈವಲ್ಯವು ಪ್ರಾಪ್ತವಾಗುವುದು. ಸರ್ವತಂತ್ರ ಸ್ವತಂತ್ರರೂ, ಸರ್ವತ್ರ ಸ್ವೇಚ್ಛಾನುಸಾರವಾಗಿ ಸಂಚರಿಸಬಲ್ಲವರೂ, ತಮ್ಮ ಇಚ್ಛಾನುಸಾರವಾಗಿ ಅನಂತ ಲೀಲಾ ವಿಗ್ರಹಗಳನ್ನು ಧರಿಸಬಲ್ಲ ಸಾಮರ್ಥ್ಯವುಳ್ಳವರೂ, ಶಿವನ ಸಮೀಪವರ್ತಿಗಳಾದ ಗಣರಲ್ಲಿ ಶ್ರೇಷ್ಠರಾದವರೂ ಆದ ಶ್ರೀ ರೇಣುಕ ಗಣಾಧೀಶ್ವರರು ಅಗಸ್ತ್ಯನ ಆಶ್ರಮದಲ್ಲಿ ಅಂತರ್ಧಾನರಾಗಿ ಶ್ರೀ ಲಂಕೆಯೊಳಗೆ ಪ್ರಕಟಗೊಂಡರು.

ಹೀಗೆ ತನ್ನ ಪುರ ಪ್ರವೇಶವನ್ನು ಮಾಡಿದ ರೇಣುಕ ಗಣೇಶ್ವರರನ್ನು ಲಂಕಾಧಿಪತಿಯಾದ ವಿಭೀಷಣನು ಸ್ವಾಗತಿಸಿ ಸತ್ಕರಿಸಿದ ವಿಷಯವನ್ನು ಕುರಿತು ಶ್ರೀ ಶಿವಯೋಗಿ ಶಿವಾಚಾರ್ಯರು ಪುನಃ–

ತಮಾಗತಂ ಮಹಾಭಾಗಂ ಸರ್ವಾಗಮವಿಶಾರದಮ್ ।
ವಿಭೀಷಣಃ ಸಮಾಲೋಕ್ಯ ಗೇಹಂ ಪ್ರಾವೇಶಯನ್ನಿಜಮ್ ॥

ಭದ್ರಾಸನೇ ನಿಜೇ ರಮ್ಯೇ ನಿವೇಶ್ಯ ಗಣನಾಯಕಮ್ ।
ಅರ್ಘ್ಯ ಪಾದ್ಯಾದಿಭಿಃ ಸರ್ವೈರುಪಚಾರೈರಪೂಜಯತ್ ॥

ಪೂಜಿತೇನ ಪ್ರಸನ್ನೇನ ರೇಣುಕೇನ ನಿರೂಪಿತಃ ।
ನಿಷಸಾದ ತದಭ್ಯಾಸೇ ಸ ನಿಜಾಸನಮಾಶ್ರಿತಃ ॥

(ಸಿ. ಶಿ. ೨೧, ೪–೬)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ದಿವ್ಯಾಗಮಗಳಲ್ಲಿ ವಿಶಾರದನೆನಿಸಿಕೊಂಡ ಸರ್ವಶ್ರೇಷ್ಠನಾದ ರೇಣುಕ ಗಣಾಧೀಶ್ವರನನ್ನು ಕಂಡ ಆ ವಿಭೀಷಣನು ತನ್ನ ಅರಮನೆಗೆ ಬಿಜಯಂಗೈಸಿಕೊಂಡನು. ಅವರನ್ನು ಆದರದಿಂದ ಬರಮಾಡಿಕೊಂಡ ಬಳಿಕ ತನ್ನ ಸುಂದರವಾದ ರಾಜ್ಯ ಸಿಂಹಾಸನದ ಮೇಲೆ ಗಣನಾಯಕನಾದ ರೇಣುಕನನ್ನು ಕುಳ್ಳಿರಿಸಿ ಪಾದ್ಯದಿಂದ ಪಾದವನ್ನು ತೊಳೆದು, ಅರ್ಘ್ಯದಿಂದ ಹಸ್ತವನ್ನು ಪ್ರಕ್ಷಾಲಿಸಿ, ಮುಖಶುದ್ಧಿಗೆ ಆಚಮನವನ್ನಿತ್ತು. ಸಕಲವಿಧ ಉಪಚಾರಗಳಿಂದ ಆತನನ್ನು ವಿಧಿವತ್ತಾಗಿ ಪೂಜಿಸಿದನು. ಹೀಗೆ ಪೂಜಿಸಲ್ಪಟ್ಟ, ಅಂತೆಯೇ ಪ್ರಸನ್ನನಾಗಿರುವ ರೇಣುಕ ಭಗವತ್ಪಾದರ ಆದೇಶ ದಂತೆ ಅವರ ಸಮೀಪದಲ್ಲಿಯೇ ಬೇರೊಂದು ಆಸನದ ಮೇಲೆ ವಿಭೀಷಣನು ಕುಳಿತುಕೊಂಡನು.

ಹೀಗೆ ಪೂಜೋಪಚಾರಾದಿಗಳನ್ನು ಪೂರೈಸಿದ ವಿಭೀಷಣನು ರೇಣುಕ ಭಗವತ್ಪಾದರನ್ನು ಕುರಿತು ಪ್ರಾರ್ಥಿಸಿದ ವಿಷಯಕವಾಗಿ ಶ್ರೀ ಶಿವಯೋಗಿ ಶಿವಾಚಾರ್ಯರು–

ಆಬಭಾಷೆ ಗಣೇಂದ್ರಂ ತಂ ಕೃತಾಂಜಲಿ ವಿಭೀಷಣಃ ।
ಮಾನುಷಾಕಾರಸಂಪನ್ನಂ ಸಾಕ್ಷಾಚ್ಛಿವಮಿವಾಪರಮ್ ॥

ರೇಣುಕ ತ್ವಾಂ ಗಣಾಧೀಶ ಶಿವಜ್ಞಾನಪರಾಯಣ ।
ಅವತೀರ್ಣಂ ಮಹೀಮೇನಾಮಿತಿ ಸಮ್ಯಕ್ ಶ್ರುತಂ ಮಯಾ ॥

ಮದ್ ಭಾಗ್ಯಗೌರವಾದದ್ಯ ಸಮಾಯಾಸ್ತ್ವಂ ಪುರೀಮಿಮಾಮ್
ಕಥಂ ಭಾಗ್ಯವಿಹೀನಾನಾಂ ಸುಲಭಾಃ ಸ್ಯುರ್ಭವಾದೃಶಾಃ ॥

ಮತ್ಸಮೋ ನಾಸ್ತಿ ಲೋಕೇಷು ಭಾಗ್ಯಾತಿಶಯವತ್ತಯಾ ।
ಯಸ್ಯ ಗೇಹಂ ಸ್ವಯಂ ಪ್ರಾಪ್ತೋ ಭವಾನ್ ಸಾಕ್ಷಾನ್ಮಹೇಶ್ವರ ಃ ॥

ಕೃತಾರ್ಥಾ ಮೇ ಪುರೀ ಹ್ಯೇಷಾ ಕೃತಾರ್ಥೋ ರಾಕ್ಷಸಾನ್ವಯಃ ।
ಜೀವಿತಂ ಚ ಕೃತಾರ್ಥಂ ಮೇ ಯಸ್ಯ ತ್ವಂ ದೃಷ್ಟಿಗೋಚರಃ ॥

(ಸಿ. ಶಿ. ೨೧, ೭–೧೧)

ಹೀಗೆ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ಮನುಷ್ಯಾಕಾರದಿಂದ ಬಂದಿರುವ ಸಾಕ್ಷಾತ್ ಶಿವನಂತಿರುವ ರೇಣುಕ ಗಣಾಧೀಶ್ವರನನ್ನು ಕುರಿತು ಅಂಜಲಿಬದ್ಧನಾದ ವಿಭೀಷಣನು ಹೀಗೆ ಪ್ರಾರ್ಥಿಸಿಕೊಂಡನು–ಶಿವಜ್ಞಾನ ಸಂಪನ್ನನೂ, ಗಣಾಧೀಶ್ವರನೂ, ರೇಣುಕನೆಂಬ ಹೆಸರಿನ ನೀನು ಈ ಭೂಲೋಕದಲ್ಲಿ ಅವತಾರ ತಾಳಿರುವುದಾಗಿ ನಾನು ಕೇಳಿದ್ದೆನು. ನನ್ನ ಭಾಗ್ಯವಶದಿಂದಾಗಿ ಇಂದು ನೀನು ಈ ಲಂಕಾ ಪಟ್ಟಣದೊಳಗೆ ಬಂದಂಥವನಾಗಿರುತ್ತಿ ಭಾಗ್ಯಹೀನರಾದ ಆದಾವ ಜನರಿಗೆ ನಿಮ್ಮಂಥವರ ದರ್ಶನವು ಸುಲಭವಾಗಿ ದೊರೆತಿತು! ''ಎಲೈ ರೇಣುಕ ಗಣೇಶ್ವರನೇ ಭೂಲೋಕಕ್ಕೆ ಶಿವನಂತೆ ಬಂದಿರುವ ನೀನು ಸ್ವತಃ ನನ್ನ ಅರಮನೆಗೆ ಆಗಮಿಸಿರೋಣದರಿಂದ ಈ ಲೋಕದಲ್ಲಿ ನನಗೆ ಸಮಾನವಾದ ಉತ್ಕೃಷ್ಟ ವಾದ ಭಾಗ್ಯವುಳ್ಳವನು ಬೇರಾವನೂ ಇರುವುದಿಲ್ಲ. ಇಷ್ಟೇ ಅಲ್ಲ ನನ್ನ ಈ ಲಂಕಾ ಪಟ್ಟಣವು 'ಇಂದು ಪುನೀತವಾಯಿತು. ನನ್ನ ರಾಕ್ಷಸವಂಶವೇ ಇಂದು ಉದ್ಧಾರವಾಗಿ ಹೋಯಿತು. ತಮ್ಮ ದಿವ್ಯವಾದ ದೃಷ್ಟಿಪಾತದಿಂದ ನನ್ನ ಜೀವನವೇ ಪಾವನವಾಗಿ ಹೋಯಿತು'' ಎಂಬುದಾಗಿ ಅತ್ಯಂತ ಭಕ್ತಿ ಭಾವಗಳಿಂದ ರೇಣುಕ ಭಗವತ್ಪಾದರನ್ನು ವಿಭೀಷಣನು ಸ್ತುತಿಸಿದನು.

ವಿಭೀಷಣನ ಈ ಮಾತುಗಳನ್ನು ಕೇಳಿದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅವನನ್ನು ಕುರಿತು ಏನು ಹೇಳಿದರೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ಇತಿ ಬ್ರುವಾಣಂ ಕಲ್ಯಾಣಂ ರಾಕ್ಷಸೇಂದ್ರಂ ಗಣೇಶ್ವರಃ ।
ಬಭಾಷೇ ಸಸ್ಮಿತೋ ವಾಣೀಂ ವಿಶ್ವೋಲ್ಲಾಸಕರೀಂ ಶುಭಾಮ್ ॥

ವಿಭೀಷಣ ಮಹಾಭಾಗ ಜಾನೇ ತ್ವಾಂ ಧರ್ಮಕೋವಿದಮ್ ।
ತ್ವಾಂ ವಿನಾ ಕಸ್ಯ ಲೋಕೇಷು ಜಾಯತೇ ಭಕ್ತಿರೀದೃಶೀ ॥

ಸಮಸ್ತಶಾಸ್ತ್ರಸಾರಜ್ಞಂ ಸರ್ವಧರ್ಮಪರಾಯಣಮ್ ।
ಅಧ್ಯಾತ್ಮವಿದ್ಯಾನಿರತಮಾಹುಸ್ತ್ವಾಂ ರಾಕ್ಷಸೇಶ್ವರ ॥

ತ್ವದೀಯಧರ್ಮಸಂಪತ್ತಿಂ ಶ್ರುತ್ವಾಹಂ ವಿಸ್ಮಿತಾಶಯಃ ।
ವ್ರಜನ್ ಕೈಲಾಸಮಚಲಂ ತ್ವದಂತಿಕಮುಪಾಗತಃ ॥

ಪ್ರೀತೋಽಸ್ಮಿತವ ಚಾರಿತ್ರೈಃ ಶೋಭನೈರ್ಲೋಕವಿಶ್ರುತೈಃ ।
ದಾಸ್ಯಾಮಿ ತೇ ವರಂ ಸಾಕ್ಷಾತ್ ಪ್ರಾರ್ಥಯಸ್ವ ಯಥೇಪ್ಸಿತಮ್ ॥

(ಸಿ. ಶಿ. ೨೧–೧೨–೧೬)

ಹೀಗೆ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ರೀತಿಯಾಗಿ ಹೇಳುತ್ತಿರುವ ಮಂಗಳ ಸ್ವರೂಪನಾದ ವಿಭೀಷಣನನ್ನು ಕುರಿತು ಶ್ರೀ ರೇಣುಕ ಗಣೇಶ್ವರನು ಮುಗುಳ್ನಗೆಯಿಂದ ಒಡಗೂಡಿದವನಾಗಿ ಸರ್ವರಿಗೂ ಆನಂದಕರವಾಗುವ ಮಾತನ್ನು ಹೇಳತೊಡಗಿದನು, ''ಎಲೈ ಭಾಗ್ಯಶಾಲಿಯಾದ ವಿಭೀಷಣನೇ ! ನೀನು ಧರ್ಮಜ್ಞಾನಿಯೆಂಬುದನ್ನು ನಾನು ತಿಳಿದುಕೊಂಡಿರುವೆನು. ನಿನ್ನ ಹೊರತಾಗಿ ಇಂತಹ ಭಕ್ತಿಯು ಈ ಲೋಕದಲ್ಲಿ ಯಾರಲ್ಲಿ ತಾನೆ ಉಂಟಾಗಲು ಸಾಧ್ಯ? ರಾಕ್ಷಸ ಕುಲ ಶ್ರೇಷ್ಠನಾದ ವಿಭೀಷಣನೆ ! ನೀನು ಸಕಲ ಶಾಸ್ತ್ರಗಳನ್ನು ಬಲ್ಲವನಾಗಿರುವೆಯೆಂದೂ, ಸರ್ವವಿಧಗಳಾದ ಧರ್ಮಾಚರಣೆಗಳಲ್ಲಿ ತತ್ಪರನಾಗಿರುವೆಯೆಂತಲೂ, ಶಿವಾದ್ವೈತಜ್ಞಾನಪ್ರದಾಯಕವಾದ ಆಧ್ಯಾತ್ಮ ವಿದ್ಯೆಯಲ್ಲಿ ನೀನು ನಿರತನಾಗಿರುವೆಯೆಂತಲೂ ಜನರು ಹೇಳುತ್ತಿರುವರು. ನಿನ್ನ ಈ ಧರ್ಮಪ್ರವೃತ್ತಿ ಯನ್ನು ಕೇಳಿ ಆಶ್ಚರ್ಯಚಕಿತನಾದ ನಾನು ಕೈಲಾಸಕ್ಕೆ ಹೋಗುವುದನ್ನು ಬಿಟ್ಟು ನಿನ್ನಲ್ಲಿಗೆ ಬಂದಿದ್ದೇನೆ. ಜಗತ್ಪ್ರಸಿದ್ಧವೂ ಮಂಗಳಕರವೂ ಆದ ನಿನ್ನ ನಡೆನುಡಿಗಳನ್ನು ಕಂಡು ನಾನು ಸಂತುಷ್ಟನಾಗಿದ್ದೇನೆ. ನಿನಗೆ 'ಇಷ್ಟವಾದ ವರವನ್ನು ಬೇಡು, ಕೊಡಲು ಸಿದ್ಧನಾಗಿದ್ದೇನೆ'' ಎಂಬುದಾಗಿ ಶ್ರೀ ರೇಣುಕ ಭಗವತ್ಪಾದರು ವಿಭೀಷಣನನ್ನು ಕುರಿತು ನುಡಿಯುತ್ತಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಪ್ರಾಸಾದಿಕ ವಾಣಿಯನ್ನು ಆಲಿಸಿ ಸಂತುಷ್ಟವಾಗಿ ವಿಭೀಷಣನು ಪೂಜ್ಯರನ್ನು ಕುರಿತು ಏನನ್ನು ಪ್ರಾರ್ಥಿಸಿಕೊಂಡನೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ಇತಿ ಪ್ರಸಾದಸುಮುಖೇ ಭಾಷಮಾಣೇ ಗಣೇಶ್ವರೇ ।
ಪ್ರಣಮ್ಯ ಪರಯಾ ಪ್ರೀತ್ಯಾ ವ್ಯಾಜಹಾರ ವಿಭೀಷಣ ಃ ॥

ಆಗಮಾನುಗ್ರಹಾದೇವ ಭವತಃ ಶಿವಯೋಗಿನಃ ।
ದುರ್ಲಭಾಃ ಸರ್ವಲೋಕಾನಾಂ ಸಮುಪದ್ಯಂತ ಸಂಪದಃ ॥

ತಥಾಪಿ ಪ್ರಾರ್ಥನೀಯಂ ಮೇ ಕಿಂಚಿದಸ್ತಿ ಗಣೇಶ್ವರ ।
ಸುಕೃತೇ ಪರಿಪಕ್ವೇ ಹಿ ಸ್ವಯಂ ಸಿದ್ಧ್ಯತಿವಾಂಛಿತಂ ॥

ರಾವಣೋ ಹಿ ಮಮ ಭ್ರಾತಾ ಮಾಹೇಶ್ವರ ಶಿಖಾಮಣಿಃ ।
ಅದೃಷ್ಟ ಶತ್ರುಸಂಬಾಧಂ ಶಶಾಸ ಹಿ ಜಗತ್ ತ್ರಯಮ್ ॥

ಯಸ್ಯ ಪ್ರತಾಪಮತುಲಂ ಸೋಢುಮಕ್ಷಮಶಕ್ತಯಃ ।
ಇಂದ್ರಾದಯಃ ಸುರಾಃ ಸರ್ವೇ ರಾಜ್ಯಲಕ್ಷ್ಮ್ಯಾ ವಿಯೋಜಿತಾಃ ॥

ಸ ತು ಕಾಲವಶೇನೈವ ಸ್ವಚಾರಿತ್ರ್ಯ ವಿಪರ್ಯಯಾತ್ ।
ರಣೇ ವಿಷ್ಣ್ವವತಾರೇಣ ರಾಮೇಣ ನಿಹತೋಽಭವತ್ ॥

ಸ ತು ರಾಮಶರಾವಿದ್ಧಃ ಕಂಠಸ್ಖಲಿತಜೀವಿತಃ ।
ಅವಶಿಷ್ಟಂ ಸಮಾಲೋಕ್ಯ ಮಾಮವಾದೀತ್ ಸುದುಃಖಿತಃ ॥

(ಸಿ. ಶಿ. ೨೧, ೧೭–೨೩)

ಈ ರೀತಿಯಾಗಿ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ಶ್ರೀ ರೇಣುಕ ಗಣೇಶ್ವರನು ಪ್ರಸನ್ನವದನನಾಗಿ ಈ ರೀತಿಯಾಗಿ ನುಡಿಯಲು, ಶ್ರೀ ವಿಭೀಷಣನು ಅವರಿಗೆ ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಹೀಗೆ ನುಡಿಯತೊಡಗಿದನು–ಎಲೈ ಗಣಶ್ರೇಷ್ಠನಾದ ರೇಣುಕೇಶ್ವರನೇ ! ಮಹಾಶಿವಯೋಗಿಯಾದ ನೀನು ದಯಮಾಡಿಸಿದ ಮಾತ್ರ ದಿಂದಲೇ ಸಕಲರಿಗೂ ದುರ್ಲಭವಾದ ಸಂಪತ್ತುಗಳೆಲ್ಲ ಪ್ರಾಪ್ತವಾಗಿವೆ. ಆದರೂ ಸಹ ಹೇ ಗಣೇಶ್ವರನೇ ! ನನ್ನದೊಂದು ಅಲ್ಪವಾದ ಪ್ರಾರ್ಥನೆಯಿದೆ. ಪುಣ್ಯವು ಪರಿಪಕ್ವ ವಾದರೆ ಮನೋರಥವು ತಾನಾಗಿ ಸಿದ್ಧಿಸುವುದಿಲ್ಲವೆ ? ನನ್ನ ಇಷ್ಟಾರ್ಥವೇನೆಂದರೆ, ನನ್ನ ಅಣ್ಣನಾದ ರಾವಣನು ಶಿವಭಕ್ತರಲ್ಲಿಯೇ ಶಿಖಾಮಣಿಯಾಗಿದ್ದನು. ಅವನಿಗೆ ಮೂರೂ ಲೋಕಗಳಲ್ಲಿ ಯಾರೊಬ್ಬರೂ ಶತ್ರುಗಳಿರಲಿಲ್ಲ. ಇಂತಹ ಶತ್ರುರಹಿತನಾದ ಶಾಸಕನಾಗಿ ಆತನು ಮೂರು ಲೋಕಗಳನ್ನು ಪರಿಪಾಲಿಸುತ್ತಿದ್ದನು. ಶ್ರೀ ರಾವಣೇಶ್ವರನ ಅಸದೃಶ ವಾದ ಪರಾಕ್ರಮವನ್ನು ಸೈರಿಸಲಾರದೇ ಇಂದ್ರಾದಿ ದೇವತೆಗಳೆಲ್ಲರೂ ಸ್ವರ್ಗವನ್ನು ಬಿಟ್ಟು ಪಲಾಯನ ಮಾಡಿದರು. ಅಂತಹ ಆ ಮಹಾಪರಾಕ್ರಮಿಯಾದ ರಾವಣನು ಕಾಲಕರ್ಮವಶದಿಂದ ಚಾರಿತ್ರ್ಯ ದೋಷವುಳ್ಳವನಾಗಿ ಸೀತಾಪಹರಣದ ಅಪರಾಧ ದಿಂದಾ ವಿಷ್ಣುವಿನ ಅವತಾರಿಯೆನಿಸಿದ ಶ್ರೀ ರಾಮನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು. ರಾಮ–ರಾವಣರ ಯುದ್ಧದಲ್ಲಿ ರಾಮಬಾಣದ ಪೆಟ್ಟಿನಿಂದ ನೆಲಕ್ಕುರಳಿ ಪ್ರಾಣವನ್ನು ಬಿಡುವ ಪ್ರಸಂಗವಿದ್ದಾಗ ರಾಕ್ಷಸವಂಶದಲ್ಲಿ ಉಳಿದಿರುವ ನನ್ನೋರ್ವನನ್ನೇ ಕಂಡು ಅತ್ಯಂತ ದುಃಖಿತನಾಗಿ ಹೀಗೆ ನುಡಿದನು.

ಮರಣಾಸನ್ನನಾದ ರಾವಣನು ಶ್ರೀ ವಿಭೀಷಣನನ್ನು ಕುರಿತು ಏನು ಹೇಳಿದನೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ವಿಭೀಷಣ ವಿಶೇಷಜ್ಞ ಮಹಾಬುದ್ಧೇ ಸುಧಾರ್ಮಿಕ ।
ಅವಶಿಷ್ಟೋಽಸಿ ವಂಶಸ್ಯ ರಕ್ಷಸಾಂ ಭಾಗ್ಯಗೌರವಾತ್ ॥

ವಯಮಜ್ಞಾನಸಂಪನ್ನಾ ಮಹತ್ಸು ದ್ರೋಹಕಾರಿಣಃ ।
ಈದೃಶೀಂ ತು ಗತಿಂ ಪ್ರಾಪ್ತಾ ದುಸ್ತರಾ ಹಿ ವಿಧಿಸ್ಥಿತಿಃ ॥

ನವಕಂ ಲಿಂಗಕೋಟೀನಾಂ ಪ್ರತಿಷ್ಠಾಪ್ಯಮಹೀ ಸ್ಥಲೇ ।
ಇತಿ ಸಂಕಲ್ಪಿತಂ ಪೂರ್ವಂ ಮಯಾ ತದವಶಿಷ್ಯತೇ ॥

ಕೋಟಿಷಟ್ಕಂ ತು ಲಿಂಗಾನಾಂ ಮಯಾ ಸಾಧು ಪ್ರತಿಷ್ಠಿತಮ್ ।
ಕೋಟಿತ್ರಯಂ ತು ಲಿಂಗಾನಾಂ ಸ್ಥಾಪನೀಯಮತಸ್ತ್ವಯಾ ॥

ಇತಿ ತಸ್ಯ ವಚಃ ಶ್ರುತ್ವಾ ದೀನಬುದ್ಧೇರ್ಮರಿಷ್ಯತಃ ।
ತಥಾ ಸಾಧು ಕರೋಮಿತಿ ಪ್ರತಿಜ್ಞಾತಂ ಮಯಾ ತಥಾ ॥

ಯುಗಪಚ್ಛಿವಲಿಂಗಾನಾಂ ಕೋಟಿತ್ರಯ ಮನುತ್ತಮಮ್ ।
ಪ್ರತಿಷ್ಠಾಪ್ಯಂ ಯಥಾ ಶಾಸ್ತ್ರಮಿತಿ ಮೇ ನಿಶ್ಚಯೋಽಭವತ್ ॥

ಲಿಂಗಕೋಟಿತ್ರಯಸ್ಯೇಹ ಯುಗಪತ್ ಸ್ಥಾಪನಾವಿಧೌ ।
ಅವಿದನ್ನೇಕಮಾಚಾರ್ಯಮಹಮೇವಮವಸ್ಥಿತಃ ॥

ಶಿವಶಾಸ್ತ್ರ ವಿಶೇಷಜ್ಞಃ ಶಿವಜ್ಞಾನನಿಧಿರ್ಭವಾನ್ ।
ಆಚಾರ್ಯಭಾವಮಾಸಾದ್ಯ ಮಮ ಪೂರಯ ವಾಂಛಿತಮ್ ॥

(ಸಿ. ಸಿ. ೨೧, ೨೪–೩೧)

ಹೀಗೆ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಧರ್ಮತತ್ಪರನೂ, ಬುದ್ಧಿವಂತನೂ ವಿವೇಕ ಸಂಪನ್ನನೂ ಆದ ಎಲೈ ವಿಭೀಷಣನೇ ಪೂರ್ವಜನ್ಮದ ಪುಣ್ಯದ ಫಲವಾಗಿ ನಮ್ಮ ಈ ರಾಕ್ಷಸ ಕುಲಕ್ಕೆ ನೀನೋರ್ವನೇ ಉಳಿದಿರುವಿ. ಅಜ್ಞಾನಿಯಾದ ನಾನು ಮಹಾಪುರುಷರಿಗೆ ದ್ರೋಹವನ್ನು ಮಾಡಿ ಇಂತಹ ಗತಿಯನ್ನು ಹೊಂದಿರುವೆನು. ವಿಧಿಲಿಖಿತವು ಆದಾರಿಂದಲೂ ಬದಲಿಸಲು ಸಾಧ್ಯವಿಲ್ಲವಲ್ಲವೆ ? ನಮ್ಮೀ ಲಂಕಾಪಟ್ಟಣ ದಲ್ಲಿ ಒಂಬತ್ತು ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಬೇಕೆಂದು ಈ ಪೂರ್ವದಲ್ಲಿ ನಾನು ಸಂಕಲ್ಪ ಮಾಡಿದ್ದೆನು. ಆ ನನ್ನ ಸಂಕಲ್ಪದಲ್ಲಿ ಒಂದಿಷ್ಟು ಕಾರ್ಯವು ಉಳಿದು ಕೊಂಡಿರುತ್ತದೆ. ಅದೇನೆಂದರೆ ನಾನು ಪೂರ್ವದಲ್ಲಿ ಸಂಕಲ್ಪಿಸಿದ ಪ್ರಕಾರವಾಗಿ ಇಲ್ಲಿಯ ವರೆಗೆ ಆರು ಕೋಟಿ ಶಿವಲಿಂಗಗಳನ್ನು ಶಾಸ್ತ್ರೋಕ್ತ ಪದ್ಧತಿಯಂತೆ ಚೆನ್ನಾಗಿ ಪ್ರತಿಷ್ಠಾಪಿಸಿರುವೆನು. ಆದರೆ ಇನ್ನೂ ಮೂರು ಕೋಟಿ ಶಿವಲಿಂಗಗಳ ಪ್ರತಿಷ್ಠಾಪನೆಯು ಉಳಿದುಕೊಂಡಿದೆ. ನನ್ನ ಆ ಸಂಕಲ್ಪವನ್ನು ಪೂರ್ಣಗೊಳಿಸಲೋಸುಗ ನೀನು ಆ ಮೂರು ಕೋಟಿ ಶಿವಲಿಂಗಗಳನ್ನು ವಿಧಿವತ್ತಾಗಿ ಪ್ರತಿಷ್ಠಾಪಿಸು ಎಂಬುದಾಗಿ ಹೇಳಿದನು. ಅತ್ಯಂತ ದೈನ್ಯಭಾವನೆಯಿಂದೊಡಗೂಡಿದ, ಮರಣಾಸನ್ನನಾದ ನನ್ನ ಅಣ್ಣನ ಆ ಮಾತು ಗಳನ್ನು ಕೇಳಿ, ಹಾಗೆಯೇ ಆಗಲಿ, ನಿನ್ನ ಸಂಕಲ್ಪವನ್ನು ಪೂರ್ಣಮಾಡುವೆನೆಂಬುದಾಗಿ ಆಗ ಅವನ ಮುಂದೆ ಪ್ರತಿಜ್ಞೆಯನ್ನು ಮಾಡಿದೆನು. ನಮ್ಮ ಅಣ್ಣನ ಆ ಸಂಕಲ್ಪವನ್ನು ಪೂರ್ಣ ಮಾಡಲೋಸುಗ ಮೂರು ಕೋಟಿ ಶಿವಲಿಂಗಗಳನ್ನು ಒಂದೇ ಮೂಹೂರ್ತ ದಲ್ಲಿ ಶಾಸ್ತ್ರೋಕ್ತ ಪದ್ಧತಿಯಂತೆ ಪ್ರತಿಷ್ಠಾಪಿಸಬೇಕೆಂದು ನಾನು ನಿಶ್ಚಯಿಸಿಕೊಂಡೆನು. ಆದರೆ ಒಂದೇ ಸುಮೂಹರ್ತದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲು ಸಮರ್ಥನಾದ ಆಚಾರ್ಯನನ್ನು ಕಾಣದೇ ಇಷ್ಟು ದಿನ ಸುಮ್ಮನೇ ಕುಳಿತುಕೊಂಡಿದ್ದೇನೆ. ಶಿವಶಾಸ್ತ್ರದ ರಹಸ್ಯವನ್ನು ವಿಶೇಷವಾಗಿ ಅರಿತಿರುವ ಎಲೈ ರೇಣುಕ ಗಣೇಶ್ವರನೇ ನೀನು ಶಿವಜ್ಞಾನದ ಮಹಾನಿಕ್ಷೇಪನಾಗಿರುವೆ. ಆದಕಾರಣ ಮೂರು ಕೋಟಿ ಆಚಾರ್ಯರ ರೂಪವನ್ನು ಧರಿಸಿ, ನನ್ನ ಈ ಇಷ್ಟಾರ್ಥವನ್ನು ಪೂರ್ಣಗೊಳಿಸಬೇಕೆಂಬುದಾಗಿ ಬೇಡಿ ಕೊಂಡನು.

ಶ್ರೀ ವಿಭೀಷಣನ ಈ ಪ್ರಾರ್ಥನಾ ವಚನವನ್ನು ಆಲಿಸಿದ ಶ್ರೀ ರೇಣುಕ ಗಣೇಶ್ವರನು ಮುಂದೇನು ಮಾಡಿದನೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ತಸ್ಯೇತಿ ವಚನಂ ಶ್ರುತ್ವಾ ರಾಕ್ಷಸೇಂದ್ರಸ್ಯ ಧೀಮತಃ ।
ತಥೇತಿ ಪ್ರತಿಶುಶ್ರಾವ ಸರ್ವಜ್ಞೋ ಗಣನಾಯಕಃ ॥

ತತ್ರ ಸಂತುಷ್ಟಚಿತ್ತಸ್ಯ ಪೌಲಸ್ತ್ಯಸ್ಯೇಷ್ಟ ಸಿದ್ಧಯೇ ।
ಕೋಟಿತ್ರಯಂ ತು ಲಿಂಗಾನಾಂ ಯಥಾ ಶಾಸ್ತ್ರಂ ಯಥಾ ವಿಧಿ ॥

ತ್ರಿಕೋಟ್ಯಾಚಾರ್ಯರೂಪೇಣ ಸ್ಥಾಪಿತಂ ತೇನ ತತ್ಕ್ಷಣೇ ।

(ಸಿ. ಶಿ. ೨೧, ೩೨–೩೪)

ಹೀಗೆ ಪ್ರತಿಪಾದಿಸಿದ್ದಾರೆ. ತಾತ್ಪರ್ಯವೇನೆಂದರೆ, ಬುದ್ಧಿವಂತನಾದ, ರಾಕ್ಷಸೇಂದ್ರನಾದ ವಿಭೀಷಣನು ಈ ಹಿಂದೆ ಹೇಳಿದ ಮಾತುಗಳನ್ನು ಕೇಳಿ ಸರ್ವಜ್ಞನೂ, ಗಣನಾಯಕನೂ ಆದ ರೇಣುಕ ಗಣೇಶ್ವರನು ತಥಾಸ್ತು! ಎಂಬುದಾಗಿ ಅಭಿವಚನವನ್ನಿತ್ತನು. ರೇಣುಕನ ಈ ಅಭಿವಚನವನ್ನು ಕೇಳಿ ಅತ್ಯಂತ ಸಂತುಷ್ಟ ಚಿತ್ತನಾಗಿರುವ ಪುಲಸ್ತ್ಯನ ಮಗನಾದ ವೀಭಿಷಣನ ಮನೋರಥವನ್ನು ಪೂರ್ಣಗೊಳಿಸಲೋಸುಗ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮೂರು ಕೋಟಿ ಆಚಾರ್ಯರ ರೂಪವನ್ನು ತಾಳಿ ಮೂರು ಕೋಟಿ ಶಿವಲಿಂಗಗಳನ್ನು, ಶಾಸ್ತ್ರೋಕ್ತ ಪದ್ಧತಿಯಂತೆ ಒಂದೇ ಮುಹೂರ್ತದಲ್ಲಿ ಪ್ರತಿಷ್ಠಾಪಿಸಿದರು.

ಯೋಗ ಸಾಮರ್ಥ್ಯದಿಂದ ಓರ್ವಯೋಗಿಯು ಒಂದೇ ಕಾಲದಲ್ಲಿ ಅನೇಕ ದೇಹಗಳನ್ನು ಧರಿಸಿಕೊಳ್ಳಲು ಸಮರ್ಥನಾಗಿರುತ್ತಾನೆಂಬುದಾಗಿ ಯೋಗ ಶಾಸ್ತ್ರವು ಪ್ರತಿಪಾದಿಸುತ್ತದೆ. ಇದಕ್ಕೆ ಯೋಗ ಶಾಸ್ತ್ರದಲ್ಲಿ ಕಾಯವ್ಯೂಹವೆಂದು ಕರೆಯುತ್ತಾರೆ. ಈ ಕಾಯವ್ಯೂಹವನ್ನು ಯೋಗಿಗಳು ಅನೇಕ ಕಾರಣಗಳಿಗಾಗಿ ಮಾಡುವುದುಂಟು. ತಮ್ಮ ಪ್ರಾಕ್ತನ ಅನೇಕ ಜನ್ಮಗಳ ಕರ್ಮವನ್ನು ಒಂದೇ ಜನ್ಮದಲ್ಲಿ ಉಪಭೋಗಿಸಿ, ಅದನ್ನು ಇಲ್ಲದಾಗಿಸುವ ಉದ್ದೇಶದಿಂದಲೂ ಸಹ ಯೋಗಿಗಳು ಕಾಯವ್ಯೂಹವನ್ನು ರಚಿಸಿಕೊಳ್ಳುತ್ತಾರೆ. ಇದೊಂದು ಯೋಗಸಿದ್ಧಿಯ ಚಮತ್ಕಾರವು. ಯೋಗಾಭ್ಯಾಸವನ್ನು ಮಾಡಿದ ಯೋಗಿಯು ಕಾಯವ್ಯೂಹವನ್ನು ರಚಿಸುವ ಸಾಮರ್ಥ್ಯವನ್ನು ಪಡೆದಿರುತ್ತಾನೆಂದ ಬಳಿಕ ಶಿವನಷ್ಟೇ ಸಮಾನರಾದ ಪಂಚಾಚಾರ್ಯರಲ್ಲೊಬ್ಬರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಭಕ್ತೋದ್ಧಾರಕ್ಕಾಗಿ ಕಾಯವ್ಯೂಹವನ್ನು ರಚಿಸಿಕೊಂಡು ಮೂರು ಕೋಟಿ ಶಿವಲಿಂಗಗಳನ್ನು ಏಕಕಾಲದಲ್ಲಿ ಪ್ರತಿಷ್ಠಾಪಿಸಿದರೆಂಬ ವಿಷಯದಲ್ಲಿ ಆಶ್ಚರ್ಯಪಡುವ ಕಾರಣವಿಲ್ಲ. ಇದೊಂದು ಶ್ರೀ ಜಗದ್ಗುರು ರೇಣುಕರ ಮಹಿಮಾ ಲೀಲೆಯೆಂದೇ ಭಾವಿಸಬೇಕು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಈ ಮಹಿಮೆಯನ್ನು ಕಂಡು ಶ್ರೀ ವಿಭೀಷಣನು ಏನು ಮಾಡಿದನೆಂಬ ವಿಷಯವನ್ನು ಕುರಿತು ಶ್ರೀ ಶಿವಯೋಗಿ ಶಿವಾಚಾರ್ಯರು–

ತಾದೃಶಂ ತಸ್ಯ ಮಾಹಾತ್ಮ್ಯಂ ಸಮಾಲೋಕ್ಯ ವಿಭೀಷಣಃ ।
ಪ್ರಣನಾಮ ಮುಹುರ್ಭಕ್ತ್ಯಾ ಪಾದಯೋಸ್ತಸ್ಯ ವಿಸ್ಮಿತಃ ॥

ಪ್ರಣತಂ ವಿನಯೋಪೇತಂ ಪ್ರಹೃಷ್ಟಂ ರಾಕ್ಷಸೇಶ್ವರಮ್ ।
ಅನುಗೃಹ್ಯ ಸ್ವಮಾಹಾತ್ಮ್ಯಾದ್ ರೇಣುಕೋಽಂತರ್ಹಿತೋಭವತ್ ॥

ವಿಭೀಷಣೋಽಪಿ ಹೃಷ್ಟಾತ್ಮಾ ರೇಣುಕಸ್ಯ ಪ್ರಸಾದತಃ ।
ಶಿವಭಕ್ತಿರಸಾಸಕ್ತಃ ಸ್ಥಿರರಾಜ್ಯಮಪಾಲಯತ್ ॥

(ಸಿ. ಶಿ. ೨೧, ೩೪–೩೬)

ಹೀಗೆ ಹೇಳಿದ್ದಾರೆ. ತಾತ್ಪರ್ಯವೇನೆಂದರೆ, ಈ ರೀತಿಯಾದ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಮಹಿಮೆಯನ್ನು ಪ್ರತ್ಯಕ್ಷವಾಗಿ ಕಂಡ ವಿಭೀಷಣನು ಆಶ್ಚರ್ಯ ಚಕಿತನಾಗಿ ಅವರ ಪಾದಗಳಿಗೆ ಅತ್ಯಂತ ಭಕ್ತಿಯಿಂದ ಪುನಃ ಪುನಃ ನಮಸ್ಕರಿಸತೊಡಗಿದನು. ವಿನಯಸಂಪನ್ನನೂ, ವಿನಮ್ರತೆಯಿಂದ ಪಾದದಲ್ಲೆರಗಿ ನಮಸ್ಕರಿಸುತ್ತಿರುವವನೂ, ರಾಕ್ಷಸೇಂದ್ರನೂ ಆದ ವಿಭೀಷಣನನ್ನು ಉಚಿತ ವಚನಾಶೀರ್ವಾದಗಳಿಂದ ಅನುಗ್ರಹಿಸಿ ತನ್ನ ಮಹಿಮಾ ಶಕ್ತಿಯಿಂದ ಅಲ್ಲಿಂದಲ್ಲಿಯೇ ಅಂತರ್ಧಾನನಾದನು. ಇತ್ತ ವಿಭೀಷಣನೂ ಸಹ ಶ್ರೀ ರೇಣುಕ ಗಣೇಶ್ವರನ ಅನುಗ್ರಹದಿಂದ ಸಂತೋಷಗೊಂಡವನಾಗಿ, ಶಿವನಲ್ಲಿ ಅಪಾರವಾದ ಭಕ್ತಿಸಂಪನ್ನನಾಗಿ ತನ್ನ ರಾಜ್ಯವನ್ನು ಸ್ಥಿರವಾಗಿ ಪರಿಪಾಲಿಸತೊಡಗಿದನು.

ಹೀಗೆ ವಿಭೀಷಣನಿಗೆ ಅನುಗ್ರಹಿಸಿ ಅವನ ಅಭೀಷ್ಟವನ್ನು ಪೂರ್ಣಮಾಡಿದ ಶ್ರೀ ರೇಣುಕ ಗಣೇಶ್ವರನು ಮುಂದೇನು ಮಾಡಿದನೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ರೇಣುಕೋಽಪಿ ಮಹಾತೇಜಾಃ ಸಂಚರನ್ ಕ್ಷಿತಿಮಂಡಲೇ ।
ಪ್ರಚ್ಛನ್ನಶ್ಚ ಪ್ರಕಾಶಶ್ಚ ಪರಮಾದ್ವೈತಭಾವಿತಃ ॥

ಕಾಂಶ್ಚಿದ್ ದೃಷ್ಟಿನಿಪಾತೇನ ಕರುಣಾರಸವರ್ಷಿಣಾ ।
ಅಪರಾನುಪದೇಶೇನ ಶಿವಾದ್ವೈತಾಭಿಮರ್ಶಿನಾ ॥

ಅನ್ಯಾಂಶ್ಚ ಸಹವಾಸೇನ ಸಮಸ್ತಮಲಹಾರಿಣಾ ।
ಕೃತಾರ್ಥಯನ್ ಜನಾನ್ ಸರ್ವಾನ್ ಕೃತಿನಃ ಪಕ್ವಕರ್ಮಿಣಃ ॥

ದರ್ಶಯಿತ್ವಾ ನಿಜಾಧಿಕ್ಯಂ ಶಿವದರ್ಶನಲಾಲಸಃ ।
ಖಂಡಯಿತ್ವಾ ದುರಾಚಾರನ್ ಪಾಷಂಡಾನ್ ಭಿನ್ನದರ್ಶನಾನ್ ॥

ಯಂತ್ರಮಂತ್ರಕಲಾಸಿದ್ಧಾನ್ ವಿಮತಾನ್ ಸಿದ್ಧಮಂಡಲಾನ್ ॥
ವಿಜಿತ್ಯ ಸ್ವಪ್ರಭಾವೇನ ಸ್ಥಾಪಯಿತ್ವಾ ಶಿವಾಗಮಾನ್ ॥

ಆಜಗಾಮ ನಿಜಾವಾಸಂ ಕೊಲ್ಲಿಪಾಕ್ಯಭಿದಂ ಪುರಮ್ ॥

(ಸಿ. ಶಿ. ೨೧, ೩೭–೪೧)

ಹೀಗೆ ನಿರೂಪಿಸಿದ್ದಾರೆ. ತಾತ್ಪರ್ಯವೇನೆಂದರೆ, ಮಹಾತೇಜಸ್ವಿಯೂ, ಶಿವಾದ್ವೈತ ಸಿದ್ಧಾಂತ ಪ್ರತಿಷ್ಠಾಪನ ದುರಂಧರನೂ ಆದ ಶ್ರೀ ರೇಣುಕನು ಭೂಮಂಡಲದಲ್ಲೆಲ್ಲ ಸಂಚರಿಸುತ್ತ ಏಳು ನೂರು ವರ್ಷಗಳ ಕಾಲ ಗುಪ್ತನಾಗಿಯೂ, ಏಳು ನೂರು ವರ್ಷಗಳ ಕಾಲ ಪ್ರಕಟನಾಗಿಯೂ ಇದ್ದುಕೊಂಡು ಕೆಲವರನ್ನು ತನ್ನ ಕರುಣಾಕಟಾಕ್ಷದಿಂದ ನೋಡಿ ಮತ್ತೆ ಕೆಲವರನ್ನು ಶಿವಾದ್ವೈತಜ್ಞಾನಪ್ರದವಾದ ಉಪದೇಶದಿಂದ ಕೃತಾರ್ಥರನ್ನಾಗಿ ಮಾಡುತ್ತ, ಬೇರೆ ಕೆಲವರನ್ನು ಕೇವಲ ಮಲತ್ರಯನಾಶಕವಾದ ತನ್ನ ಸಹವಾಸ ಮಾತ್ರದಿಂದ ಧನ್ಯರನ್ನಾಗಿ ಮಾಡುತ್ತ ಇನ್ನುಳಿದ ಕೆಲ ಜನರನ್ನು ಕರ್ತವ್ಯ ಕುಶಲರನ್ನಾಗಿಸುತ್ತ, ಮತ್ತೆ ಪಕ್ವ ಕರ್ಮಿಗಳಾದ ಕೆಲವರನ್ನು ಕೃತಾರ್ಥರನ್ನಾಗಿ ಮಾಡುತ್ತ ಅತ್ಯಾಶ್ಚರ್ಯಕರವಾದ ತನ್ನ ಮಹಿಮೆಯನ್ನು ಸರ್ವರಿಗೂ ತೋರ್ಪಡಿಸಿ, ದುರಾಚಾರಿಗಳನ್ನೂ, ಪಾಷಂಡಿಗಳನ್ನೂ ವಾದದಿಂದ ಖಂಡಿಸುತ್ತ ಯಂತ್ರ ತಂತ್ರ ಮೊದಲಾದ ಅರವತ್ನಾಲ್ಕು ಕಲೆಗಳಲ್ಲಿ ಸಿದ್ಧಿಯುಳ್ಳ ಕಾಪಾಲಿಕಾದಿ ಮತದ ಖರ್ಪರ ಗೋರಕ್ಷಾದಿ ನವಕೋಟಿ ಸಿದ್ಧರ ಸಮೂಹವನ್ನು ತನ್ನ ಮಹಿಮೆಯಿಂದ ಜಯಿಸಿ, ಶಿವಾಗಮೋಕ್ತವಾದ ವೀರಶೈವ ಸಿದ್ಧಾಂತವನ್ನು ಭೂಮಂಡಲದಲ್ಲಿ ಪ್ರತಿಷ್ಠಾಪಿಸಿ, ತನ್ನ ಅವತಾರಕ್ಕೆ ಮೂಲಸ್ಥಾನವಾಗಿದ್ದ ಸೋಮನಾಥ ಶಿವಲಿಂಗದ ಸ್ಥಾನವಾದ ಕೊಲ್ಲಿಪಾಕಪುರಕ್ಕೆ ಆಗಮಿಸಿದನು.

ಹೀಗೆ ಕೊಲ್ಲಿಪಾಕ ಪುರಕ್ಕೆ ಬಂದ ಶ್ರೀ ರೇಣುಕ ಗಣೇಶ್ವರನು ಮುಂದೇನು ಮಾಡಿದನೆಂಬ ವಿಷಯವನ್ನು ಶ್ರೀ ಶಿವಯೋಗಿ ಶಿವಾಚಾರ್ಯರು–

ತತ್ರ ಸಂಭಾವಿತಃ ಸರ್ವೈರ್ಜನ್ಯೈಃ ಶಿವಪರಾಯಣೈಃ ।
ಸೋಮನಾಥಾಭಿದಾನಸ್ಯ ಶಿವಸ್ಯ ಪ್ರಾಪ ಮಂದಿರಮ್ ॥
ಪಶ್ಯತಾಂ ತತ್ರ ಸರ್ವೇಷಾಂ ಭಕ್ತಾನಾಂ ಶಿವಯೋಗಿನಾಮ್ ।
ತನ್ವಾನೋ ವಿಸ್ಮಯಂ ಭಾವ್ಯೈಸ್ತುಷ್ಟಾವ ಪರಮೇಶ್ವರಮ್ ॥
ದೇವದೇವ ಜಗನ್ನಾಥ ಜಗತ್ಕಾರಣಕಾರಣ ।
ಬ್ರಹ್ಮವಿಷ್ಣುಸುರಾಧೀಶವಂದ್ಯಮಾನಪದಾಂಬುಜ ॥
ಸಂಸಾರನಾಟಕಭ್ರಾಂತಿಕಲಾನಿರ್ವಹಣಪ್ರದ ।
ಸಮಸ್ತವೇದವೇದಾಂತಪರಿಬೋಧಿತ ವೈಭವ ॥
ಸಂಸಾರವೈದ್ಯ ಸರ್ವಜ್ಞ ಸರ್ವಶಕ್ತಿ ನಿರಂಕುಶ ।
ಸಚ್ಚಿದಾನಂದ ಸರ್ವಸ್ವ ಪರಮಾಕಾಶವಿಗ್ರಹ ॥
ಸಮಸ್ತಜಗದಾಧಾರ ಜ್ಯೋತಿರ್ಲಿಂಗ ವಿಜೃಂಭಣ ।
ಸದಾಶಿವಮುಖಾನೇಕದಿವ್ಯಮೂರ್ತಿಕಲಾಧರ ॥
ಗುಣತ್ರಯಪ್ರದಾತೀತ ಮಲತ್ರಯವಿನಾಶನ ।
ಜಗತ್ರಯವಿಲಾಸಾತ್ಮನ್ ಶ್ರುತಿತ್ರಯವಿಲೋಚನ ॥
ಪಾಹಿ ಮಾಂ ಪರಮೇಶಾನ ಪಾಹಿ ಮಾಂ ಪಾರ್ವತೀಪತೇ ।
ತ್ವದಾಜ್ಞಯಾ ಮಯೈತಾವತ್ ಕಾಲಮಾತ್ರಂ ಮಹೀತಲೇ ॥
ಆಚಾರಿ ಭವದುಕ್ತಾನಾಮಾಗಮಾನಾಂ ಪ್ರಸಿದ್ಧಯೇ ।

ಅತಃ ಪರಂ ಸ್ವರೂಪಂ ತೇ ಪ್ರಾಪ್ತುಕಾಮೋಽಸ್ಮಿ ಶಂಕರ ॥
ಅಂತರಂ ದೇಹಿ ಮೇ ಕಿಂಚಿದನುಕಂಪಾವಿಶೇಷತಃ ।

(ಸಿ. ಶಿ. ೨೧, ೪೨–೫೦)

ಹೀಗೆ ಪ್ರಸ್ತಾಪಿಸಿದ್ದಾರೆ. ತಾತ್ಪರ್ಯವೇನೆಂದರೆ, ತನ್ನೆಲ್ಲ ಲೋಕಕಲ್ಯಾಣದ ಕಾರ್ಯವನ್ನು ಪೂರೈಸಿಕೊಂಡು ಶ್ರೀ ರೇಣುಕ ಗಣೇಶ್ವರನು ಕೊಲ್ಲಿಪಾಕಪುರಕ್ಕೆ ಬರಲಾಗಿ ಅಲ್ಲಿದ್ದ ಸಕಲ ಶಿವಭಕ್ತರೆಲ್ಲ ಅವನಿಗೆ ಅಪಾರ ಗೌರವವನ್ನು ಕೊಟ್ಟು ಸತ್ಕರಿಸಿದರು. ಶಿವಭಕ್ತರ ಸನ್ಮಾನವನ್ನು ಪಡೆದ ರೇಣುಕನು ನೇರವಾಗಿ ಸೋಮನಾಥ ದೇವಾಲಯಕ್ಕೆ ಬಂದು ಅಲ್ಲಿರುವ ಶಿವಭಕ್ತರೆಲ್ಲ ತನ್ನತ್ತ ನೋಡುತ್ತಿರುವಾಗಲೇ ಅವರೆಲ್ಲರಿಗೂ ಆಶ್ಚರ್ಯವಾಗುವ ರೀತಿಯಲ್ಲಿ ಪರಮೇಶ್ವರನ ಸ್ತೋತ್ರವನ್ನು ಮಾಡತೊಡಗಿದನು. ದೇವರಿಗೂ ದೇವನಾಗಿರುವ, ಅಂತೆಯೇ ಜಗನ್ನಾಥನೆಂಬ ನಾಮದಿಂದ ಪ್ರಸಿದ್ಧನಾಗಿರುವ, ಹೇ ಶಿವನೇ ನೀನೇ ಈ ಜಗತ್ತಿಗೆಲ್ಲ ಕಾರಣನಾಗಿರುವಿ, ಈ ಜಗತ್ತಿನ ಸೃಷ್ಟಿ ಪಾಲನಾದೀ ವ್ಯವಹಾರವನ್ನು ಮಾಡುತ್ತಿರುವ ಬ್ರಹ್ಮ, ವಿಷ್ಣು ಮತ್ತು ಇಂದ್ರ ಮೊದಲಾದ ದೇವತೆಗಳಿಂದ ಪೂಜಿಸಲ್ಪಟ್ಟ ಪಾದವುಳ್ಳವನು ನೀನಾಗಿರುವಿ. ಜನನ ಮರಣಾತ್ಮಕವಾದೀ ಸಂಸಾರವೆಂಬ ಈ ನಾಟಕವು ಸ್ಥಿರವೆನ್ನುವ ಭ್ರಾಂತಿಯು ನಿನ್ನಿಂದಲೇ ಇಲ್ಲವಾಗುವುದು. ಸಕಲ ವೇದ ಉಪನಿಷತ್ತುಗಳು ನಿನ್ನ ವೈಭವವನ್ನೇ ಕೊಂಡಾಡುತ್ತಿರುವವು. ಭವರೋಗ ವೈದ್ಯನೂ, ಸರ್ವಜ್ಞನೂ, ಸರ್ವಕರ್ತೃತ್ವಾದಿ ಮಹಾಶಕ್ತಿ ಸಂಪನ್ನನೂ, ಯಾರಿಂದಲೂ ತಡೆಯಲ್ಪಡದವನೂ, ಸಚ್ಚಿದಾನಂದ ಸ್ವರೂಪನೂ ಚಿದಾಕಾಶ ರೂಪನೂ ನೀನಾಗಿರುವಿ. ಸಕಲಜಗತ್ತಿಗೆ ಆಧಾರ ಭೂತನಾದ ಹೇ ಶಿವನೇ, ಈ ಜಗತ್ತಿನಲ್ಲಿ ಜ್ಯೋತಿರ್ಲಿಂಗ ರೂಪದಿಂದ ನೀನೇ ಗೋಚರಿಸುತ್ತಿರುವಿ. ಸದಾಶಿವ, ರುದ್ರ ಮತ್ತು ಭರ್ಗ ಮೊದಲಾದ ಅನೇಕ ಲೀಲಾ ಮೂರ್ತಿಗಳನ್ನು ಧರಿಸಿ ಈ ಜಗತ್ತಿನಲ್ಲಿ ಲೀಲಾಪುರುಷನಾಗಿರುವಿ. ಸತ್ವಾದಿ ಗುಣತ್ರಯಗಳನ್ನೂ, ಆಣವಾದಿ ಮಲತ್ರಯಗಳನ್ನೂ ನಾಶಮಾಡುವ ಸಾಮರ್ಥ್ಯವುಳ್ಳವನಾಗಿರುವಿ. ಈ ಮೂರು ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಸಂಹಾರಾದಿ ಪಂಚಕೃತ್ಯಗಳನ್ನು ಕೇವಲ ಲೀಲೆಯಿಂದ ನಿರ್ವಹಿಸುವವನು ನೀನಾಗಿರುವಿ. ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೇ ನಿನ್ನ ಮೂರು ಕಣ್ಣುಗಳಾಗಿರುತ್ತವೆ. ಇಂತಹ ಅಪಾರಮಹಿಮಾಶಾಲಿಯಾದ ಹೇ ಪರಮೇಶ್ವರನೇ ! ಎಲೈ ಪಾರ್ವತೀ ವಲ್ಲಭನೇ, ನನ್ನನ್ನು ರಕ್ಷಿಸು ರಕ್ಷಿಸು ; ನಿನ್ನ ಅಪ್ಪಣೆಯ ಮೇರೆಗೆ ಇದುವರೆಗೆ ನಾನು ಭೂಲೋಕದಲ್ಲಿ ಸಂಚರಿಸಿ ನಿನ್ನಿಂದ ಉಪದೇಶಿಸಲ್ಪಟ್ಟ ಶಿವಾಗಮ ಪ್ರತಿಪಾದಿತವಾದ ವೀರಶೈವ ಸಿದ್ಧಾಂತವನ್ನು ಪ್ರತಿಷ್ಠಾಪಿಸಿದ್ದೇನೆ. ಹೇ ಶಿವನೆ ! ಇನ್ನು ಮೇಲೆ ನಾನು ನಿನ್ನ ನಿಜಸ್ವರೂಪವನ್ನು ಪಡೆದುಕೊಳ್ಳಬೇಕೆಂದಿದ್ದೇನೆ. ಆದ್ದರಿಂದ ಕೃಪೆಮಾಡಿ ನನಗೆ ಅವಕಾಶವನ್ನು ಮಾಡಿಕೊಡು ಎಂಬುದಾಗಿ ಶ್ರೀ ರೇಣುಕ ಗಣೇಶ್ವರನು ಆ ಸೋಮೇಶ್ವರ ಮಹಾಲಿಂಗವನ್ನು ಕುರಿತು ಪರಿಪರಿಯಾಗಿ ಸ್ತುತಿಸ ತೊಡಗಿದನು.

ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಮಹಾಲಿಂಗದ ಎದುರಿನಲ್ಲಿ ಕುಳಿತು ಶ್ರೀ ರೇಣುಕ ಭಗವತ್ಪಾದರು ಈ ಪೂರ್ವದಲ್ಲಿ ವರ್ಣಿಸಿದಂತೆ ಶಿವನ ಸ್ತುತಿಯನ್ನು ಮಾಡು

ತ್ತಿರಲಾಗಿ ಮುಂದೇನಾಯಿತೆಂಬ ವಿಷಯವನ್ನು ಕುರಿತು ಶ್ರೀ ಶಿವಯೋಗಿ ಶಿವಾಚಾರ್ಯರು–

ಇತ್ಯುಕ್ತೇ ಗಣನಾಯಕೇನ ಸಹಸಾ ಲಿಂಗಾತ್‌ತತಃ ಶಾಂಕರಾದ್
ವತ್ಸಾಗಚ್ಛ ಮಹಾನುಭಾವ ಭವತೋ ಭಕ್ತ್ಯಾ ಪ್ರಸನ್ನೋಽಸ್ಮ್ಯಹಮ್ ।
ಇತ್ಯುಚ್ಚೈರಗದಾದ್ ವಚಸ್ತನುಭೃತಾಮಾಶ್ಚರ್ಯಮಾಸೀತ್ ತದಾ
ದಿವ್ಯೋ ದುಂದುಭಿರಾನನಾದ ಗಗನೇ ಪುಷ್ಪಂ ವವರ್ಷುರ್ಗಣಾಃ ॥
ಶ್ರುತ್ವಾ ಲಿಂಗಾದ್ ವಚನಮುದಿತಂ ಶಾಂಕರಂ ಸಾನುಕಂಪಂ
ಸಂಹೃಷ್ಟಾತ್ಮಾ ಗಣಪತಿರಥೋ ಜ್ಯೋತಿಷಾ ದೀಪ್ಯಮಾನಃ ।
ಜಾತೋತ್ಕಂಠೈಃ ಪರಮನುಚರೈರ್ಯೋಗಿಭಿಃ ಸ್ತೂಯಮಾನೋ
ಜ್ಯೋತಿರ್ಲಿಂಗಂ ಪರಮಮನುವಿಶತ್ ಸ್ವಪ್ರಕಾಶಂ ತದಾನೀಮ್ ॥
ಲೀಲೇ ತಸ್ಮಿನ್ ಶಾಂಕರೇ ಸ್ವಪ್ರಕಾಶೇ ದಿವ್ಯಾಕಾರೇ ರೇಣುಕೇ ಸಿದ್ಧನಾಥೇ ।
ಸರ್ವೋ ಲೋಕೋ ವಿಸ್ಮಿತೋಽಭೂತ್ ತದಾನೀಂ ಶೈವೀ ಭಕ್ತಿಃ
ಸಪ್ರಮಾಣಾ ಬಭೂವ ॥ (ಸಿ. ಶಿ. ೨೧, ೫೧–೫೩)

ಹೀಗೆ ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ, ಪೂರ್ವೋಕ್ತ ರೀತಿಯಲ್ಲಿ ಶ್ರೀ ರೇಣುಕ ಗಣೇಶ್ವರನು ಶಿವನನ್ನು ಸ್ತುತಿಸಲು ಆ ಕೂಡಲೇ ಆ ಸೋಮೇಶ್ವರ ಮಹಾಲಿಂಗದಿಂದ ಹೇ ವತ್ಸನಾದ ರೇಣುಕನೆ ! ನಿನ್ನ ಭಕ್ತಿವಿಶೇಷದಿಂದ ನಾನು ಪ್ರಸನ್ನನಾಗಿರುವೆನು. ಬಾ ! ನನ್ನಲ್ಲಿ ಸಮರಸನಾಗು ! ಎಂಬ ಧ್ವನಿಯು ಉತ್ಪನ್ನವಾಯಿತು. ಆ ಧ್ವನಿಯನ್ನು ಕೇಳಿ ಜನರೆಲ್ಲ ಆಶ್ಚರ್ಯಚಕಿತರಾದರು. ಅದೇ ಸಮಯದಲ್ಲಿ ದೇವ ದುಂದುಭಿಗಳು ಮೊಳಗ ತೊಡಗಿದವು. ಶಿವಗಣರು ಪುಷ್ಪವೃಷ್ಟಿಯನ್ನು ಗೈದರು. ಶಿವಲಿಂಗದಿಂದ ಹೊರ ಹೊರಟ ದಯಾಘನನಾದ ಶಿವನ ಆ ನುಡಿಯನ್ನು ಕೇಳಿ ರೇಣುಕಗಣೇಶ್ವರನು ಅತ್ಯಂತ ಸಂತುಷ್ಟಾಂತರಂಗನಾಗಿ ಶಿವತೇಜಸ್ಸಿನಿಂದ ಹೊಳೆಯತೊಡಗಿದನು. ಆಗ ಅವನ ಒಡನಾಡಿಗಳಾದ ಶಿವಯೋಗಿಗಳೆಲ್ಲ ಆಶ್ಚರ್ಯಗೊಂಡು ಅವನ ಸ್ತುತಿಯನ್ನು ಮಾಡುತ್ತಿರುವಾಗ ಆ ಜ್ಯೋತಿರ್ಲಿಂಗದಲ್ಲಿ ತಾನು ಜ್ಯೋತಿಯಾಗಿ ಬೆರೆತು ಹೋದನು. ಯೋನಿಜನಲ್ಲದ, ಅಪ್ರಾಕೃತ ದೇಹವನ್ನು ಧರಿಸಿಕೊಂಡಿದ್ದ ಆ ರೇಣುಕಗಣನಾಥನು ಹೀಗೆ ಸ್ವಪ್ರಕಾಶಮಯವಾದ ಸೋಮೇಶ್ವರ ಜ್ಯೋತಿರ್ಲಿಂಗದಲ್ಲಿ ಐಕ್ಯನಾಗಲಾಗಿ, ಅಲ್ಲಿ ನೆರೆದ ಜನರೆಲ್ಲ ಮೂಕವಿಸ್ಮಿತರಾದರು. ಅವರಿಂದ ಪ್ರತಿಷ್ಠಾಪಿಸಲ್ಪಟ್ಟ ಶಿವಭಕ್ತಿಯು ಸಪ್ರಮಾಣವಾಗಿ ಭೂಲೋಕದಲ್ಲಿ ಉಳಿದುಕೊಂಡಿತು.

ಇಲ್ಲಿಯವರೆಗೆ ರೇಣುಕಾಗಸ್ತ್ಯ ಸಂವಾದವನ್ನು ಮತ್ತು ಶ್ರೀ ರೇಣುಕಲೀಲೆಯನ್ನು ವಿವರಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ರೇಣುಕಾಗಸ್ತ್ಯರ ಸಂವಾದ ರೂಪವಾಗಿ ಬರೆಯಲ್ಪಟ್ಟ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ಗ್ರಂಥವು ಅದೆಷ್ಟು ಮಹಿಮಾನ್ವಿತವಾದುದೆಂಬುದನ್ನು ಕುರಿತು–

ಶ್ರೀ ವೇದಾಗಮವೀರಶೈವಸರಣಿಂ ಶ್ರೀ ಷಟ್‌ಸ್ಥಲೋದ್ಯನ್ಮಣೀಮ್
ಶ್ರೀ ಜೀವೇಶ್ವರಯೋಗಪದ್ಮತರಣಿಂ ಶ್ರೀ ಗೋಪ್ಯಚಿಂತಾಮಣಿಮ್ ।

ಶ್ರೀ ಸಿದ್ಧಾಂತಶಿಖಾಮಣಿಂ ಲಿಖಯಿತಾ ಯಸ್ತಂ ಲಿಖಿತ್ವಾ ಪರಾನ್
ಶ್ರುತ್ವಾ ಶ್ರಾವಯಿತಾ ಸ ಯಾತಿ ವಿಮಲಾಂ ಭುಕ್ತಿಂ ಚ ಮುಕ್ತಿಂ ಪರಾಮ್ ॥

(ಸಿ. ಶಿ. ೨೧-೫೪)

ಹೀಗೆ ವರ್ಣಿಸಿದ್ದಾರೆ. ತಾತ್ಪರ್ಯವೇನೆಂದರೆ, ಈ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟ ವೀರಶೈವ ಸಿದ್ಧಾಂತವು ವೇದ ಮತ್ತು ಆಗಮಗಳಿಗೆ ಸಮ್ಮತವಾದುದಾಗಿದೆ. ಅರ್ಥಾತ್ ವೇದಾಗಮಗಳ ಸಮನ್ವಯ ಸಿದ್ಧಾಂತವು ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟಿದೆ. ಶ್ರೀ ಸಿದ್ಧಾಂತ ಶಿಖಾಮಣಿಯು ನಿಜವಾಗಿಯೂ ಭಕ್ತ ಮಾಹೇಶ್ವರಾದಿ ಷಟ್‌ಸ್ಥಲ ಮಾರ್ಗವನ್ನು ತೋರಿಸಿಕೊಡುವ ಸ್ವಯಂ ಪ್ರಕಾಶ ರೂಪವಾದ ಒಂದು ಮಣಿಯೇ ಅರ್ಥಾತ್ ರತ್ನವೇ ಆಗಿರುತ್ತದೆ. ಸಿದ್ಧಾಂತ ಶಿಖಾಮಣಿಯು ಜೀವ ಮತ್ತು ಈಶ್ವರರ ಅಭೇದವೆಂಬ ಕಮಲವನ್ನು ಅರಳಿಸಲು ಸೂರ್ಯನೋಪಾದಿಯಾಗಿರುತ್ತದೆ. ಅಂದರೆ ಸೂರ್ಯೋದಯವಾಗಲು ಕಮಲವು ಸಹಜವಾಗಿ ಅರಳುವಂತೆ ಈ ಗ್ರಂಥದ ಸ್ವಾಧ್ಯಾಯವನ್ನು ಮಾಡುವ ಸಾಧಕರಿಗೆ ಶಿವ-ಜೀವೈಕ್ಯರೂಪವಾದ ಮುಕ್ತಿಯು ಸಹಜವಾಗಿ ಪ್ರಾಪ್ತವಾಗುವುದು. ಶ್ರೀ ಸಿದ್ಧಾಂತ ಶಿಖಾಮಣಿಯು ಶಿವಾದ್ವೈತ ಜ್ಞಾನವೆಂಬ ಗುಪ್ತನಿಧಿಯನ್ನು ತೋರಿಸಿಕೊಡುವ ಚಿಂತಾಮಣಿಯೂ ಸಹ ಆಗಿರುತ್ತದೆ. ಇಂತಹ ಸಕಲ ಸಿದ್ಧಾಂತಗಳಿಗೆ ಶಿಖಾರತ್ನದಂತಿರುವ 'ಶ್ರೀ ಸಿದ್ಧಾಂತ ಶಿಖಾಮಣಿ'ಯೆಂಬ ನಾಮಾಂಕಿತವಾದ ಈ ಗ್ರಂಥವನ್ನು ಯಾರು ಸ್ವತಃ ಬರೆದು, ಇತರರಿಂದಲೂ ಬರೆಯಿಸುವರೋ, ಅದೇ ಪ್ರಕಾರವಾಗಿ ಯಾರು ಸ್ವತಃ ಕೇಳಿ ಅನ್ಯರಿಗೂ ಕೇಳಿಸುವರೊ ಅವರು ನಿರ್ಮಲವಾದ ಐಹಿಕ ಸುಖಭೋಗವನ್ನು ಪಡೆಯುವುದರ ಜೊತೆಗೆ ಸರ್ವೋತ್ಕೃಷ್ಟವಾದ ಮುಕ್ತಿಯನ್ನು ಸಹ ಪಡೆದುಕೊಳ್ಳುವರು. ಕಾರಣ ಸರ್ವರೂ ಸಹ ಈ ಗ್ರಂಥವನ್ನು ಸ್ವಾಧ್ಯಾಯ ಪ್ರವಚನಗಳ ರೂಪದಲ್ಲಿ ಬಳಸಿಕೊಂಡು, ಇದರಲ್ಲಿ ಬಂದಿರುವ ಆಚಾರ ವಿಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಇದೇ ಜನ್ಮದಲ್ಲಿಯೇ ಜೀವನ್ಮುಕ್ತಿಯನ್ನು ಸಾಧಿಸಿಕೊಂಡು 'ವೀರಶೈವರಿಗೆ ಒಂದೇ ಜನ್ಮದಲ್ಲಿ ಮುಕ್ತಿ' ಎಂದು ಹೇಳಿದ ಆಗಮಗಳ ವಾಕ್ಯವನ್ನು ಸತ್ಯವಾಗಿಸುತ್ತ ನೀವೆಲ್ಲ ಪರಮ ಕೈವಲ್ಯವನ್ನು ಪಡೆಯುವವರಾಗಿರೆಂಬುದಾಗಿ ಆಶೀರ್ವದಿಸಿ ಇಂದಿನ ಈ ಆಶೀರ್ವಚನಕ್ಕೆ ವಿರಾಮ ವನ್ನೀಯುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಇಂತು ''ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ''
ಗ್ರಂಥದ ಏಕವಿಂಶತಿತಮ ಪರಿಚ್ಛೇದವು ಪೂರ್ಣವಾದುದು

ದಿನಾಂಕ ೧೦ ನವ್ಹೆಂಬರ್, ೧೯೯೬
(ಸ್ಥಾನ ಜ್ಞಾನಮಂದಿರ, ಜಂಗಮವಾಡಿ ಮಠ, ವಾರಾಣಸಿ)

''ಶಿವಂಭೂಯಾತ್''



# ಸಹಾಯಕ ಗ್ರಂಥಸೂಚಿ


ಅನುಭವಸೂತ್ರ : ಮಾಯಿದೇವ ವಿರಚಿತ,

ಸಂಪಾದಕ : ಎಚ್. ಪಿ. ಮಲ್ಲೇದೇವರು, ಓ. ಆರ್. ಆಯ್. ಮೈಸೂರು.

ಅಮರಕೋಶ : ಅಮಸಿಂಹ ಕೃತ, ನಿರ್ಣಯಸಾಗರ ಪ್ರೆಸ್, ಮುಂಬಯಿ ೧೯೨೯

ಇಷ್ಟಲಿಂಗ ವಿಜ್ಞಾನ : ಶ್ರೀ ಟಿ. ಜಿ. ಅಕ್ಕುಲಯ್ಯ ದೀಕ್ಷಿತ ಕೃತ,
ಪ್ರಬೋಧ ಪುಸ್ತಕ ಮಾಲೆ, ಬೆಂಗಳೂರು ೧೯೪೬

ಈಶಾದ್ಯಷ್ಟೋತ್ತರಶತೋಪನಿಷದ : ವಾಸುದೇವಶರ್ಮ ಸಂಪಾದಿತ,
ನಿರ್ಣಯಸಾಗರ ಪ್ರೆಸ್ ೧೯೨೫

ಋಗ್ವೇದಸಂಹಿತಾ : ವೈದಿಕ ಸಂಶೋಧನ ಮಂಡಲ, ಪುನಾ ೧೯೪೧

ಕಿರಣಾವಲೀ : ಉದಯನಾಚಾರ್ಯ ಕೃತ, ಪ್ರಕಾಶಕ–೧೦
ರಘುನಾಥ ಚಟರ್ಜಿ ಸ್ಟ್ರೀಟ್, ಕಲ್ಕತ್ತಾ, ವಂಗ ಸಂವತ್ ೧೯೬೩

ಕ್ರಿಯಾಸಾರ : ಶ್ರೀ ನೀಲಕಂಠಶಿವಾಚಾರ್ಯ ವಿರಚಿತ ಭಾಗ ೧–೩,
ಓ. ಆರ್. ಆಯ್. ಮೈಸೂರ, ೧೯೫೪, ೫೭, ೫೮

ಕೈವಲ್ಯಪದ್ಧತಿ : ಶ್ರೀ ನಿಜಗುಣಶಿವಯೋಗಿ ವಿರಚಿತ,
ಜಡೆಸಿದ್ಧಾಶ್ರಮ, ಗಣೇಶ ಪೇಟೆ, ಹುಬ್ಬಳ್ಳಿ ೧೯೪೮

ಚಂದ್ರಜ್ಞಾನಾಗಮ : ಲಿಂ. ಪಂ. ಕಾಶೀನಾಥಶಾಸ್ತ್ರಿ ಸಂಪಾದಿತ,
ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು ೧೯೫೬

ತಂತ್ರಸಂಗ್ರಹ : ಭಾಗ–೧
ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ ೧೯೭೦

ತಂತ್ರಸಂಗ್ರಹ : ಶಂಕ್ರಪ್ಪಾ, ಅಚ್ಚಪ್ಪ ಟೊಪಿಗಿ ಸಂಪಾದಿತ
ಮೂರುಸಾವಿರಮಠ ಹುಬ್ಬಳ್ಳಿ ೧೯೧೪

ನ್ಯಾಯಕೋಶ : ಝಳಕೀ ಭೀಮಾಚಾರ್ಯ ವಿರಚಿತ
ಭಂಡಾರಕರ ಪ್ರಾಚ್ಯವಿದ್ಯಾ ಸಂಶೋಧನಾಲಯ, ಪುನಾ ೧೯೨೮

ಪರಮರಹಸ್ಯ : ಸಂತಶಿರೋಮಣಿ ಮನ್ಮಥಸ್ವಾಮಿ ವಿರಚಿತ,
ಸಂ. ಡಾ. ಶಿವಲಿಂಗಶಿವಾಚಾರ್ಯ, ವೀರಮಠ, ಅಹಮದಪುರ ೧೯೭೪

ಪಾರಮೇಶ್ವರಾಗಮ : ಮಣೂರ ಮಲ್ಲಿಕಾರ್ಜುನಶಾಸ್ತ್ರಿ ಸಂಪಾದಿತ, ವೀರಶೈವ
ಲಿಂಗೀ ಬ್ರಾಹ್ಮಣ ಗ್ರಂಥಮಾಲಾ, ಸೋಲ್ಲಾಪುರ ೧೯೦೪

ಪೂರ್ವಪ್ರಯೋಗರತ್ನ : ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ ಸಂಪಾದಿತ,
ಪ್ರಬೋಧ ಪುಸ್ತಕಮಾಲೆ, ಮೈಸೂರು ೧೯೬೩

ಬಹಿರಂಗಯೋಗ : ಸ್ವಾಮೀ ಯೋಗೇಶ್ವರಾನಂದ ಸರಸ್ವತಿ ವಿರಚಿತ
ಯೋಗನಿಕೇತನ ಟ್ರಸ್ಟ, ಪಂಚಾಲಿಬಾಗ, ಹೊಸದಿಲ್ಲಿ ೧೯೮೫

ಭಗವದ್ಗೀತಾ : ಅಷ್ಟಟೀಕಾಯುಕ್ತ, ಮುನ್ನಿರಾಮ ಮನೋಹರಲಾಲ,
ಪಬ್ಲಿಷರ್ಸ್ ಪ್ರಾ. ಲಿ. ಹೊಸದಿಲ್ಲಿ ೧೯೭೮

ಮಂಕುತಿಮ್ಮನ ಕಗ್ಗ : ಶ್ರೀ ಡಿ. ವಿ. ಗುಂಡಪ್ಪ ವಿರಚಿತ,
ಕಾವ್ಯಾಲಯ ಪ್ರಕಾಶಕರು, ಮೈಸೂರು ೧೯೬೪

ಯೋಗಪ್ರತಿಪಾದನಸ್ಥಲ : ಶ್ರೀ ನಿಜಗುಣಶಿವಯೋಗಿ ವಿರಚಿತ, ಟೀಕಾಕಾರ,
ಶ್ರೀ ಚಿಕ್ಕರಾಮಾರೂಢಸ್ವಾಮಿಗಳು, ಮಲ್ಲಾಪುರ ೧೯೭೭

ಯೋಗಸೂತ್ರ : ಪತಂಜಲಿ ಪ್ರಣೀತ, ವ್ಯಾಸಭಾಷ್ಯ, ತತ್ತ್ವವೈಶಾರದಿ ಸಹಿತ,
ಜೀವಾನಂದ ವಿದ್ಯಾಸಾಗರ, ಕಲಕತ್ತಾ ೧೯೪೦

ರಾಮಚರಿತ ಮಾನಸ : ತುಲಸೀದಾಸ ವಿರಚಿತ, ಗೀತಾ ಪ್ರೆಸ್, ಗೋರಖಪುರ
ವಿ. ಸಂ. ೧೯೪೧

ಲಿಂಗಧಾರಣಚಂದ್ರಿಕಾ : ನಂದಿಕೇಶ್ವರ ಶಿವಾಚಾರ್ಯ ವಿರಚಿತ, ಪಂ. ಶಿವಕುಮಾರ
ಶಾಸ್ತ್ರಿ ಕೃತ, ಟೀಕಾಸಹಿತ, ಜಂಗಮವಾಡಿಮಠ, ವಾರಾಣಸಿ, ೧೯೦೫
,, ಆಸ್ಥಾನ ವಿದ್ವಾನ್, ಶ್ರೀ ಗುರುಶಾಂತಶಾಸ್ತ್ರಿ ಕೃತ,
ಕನ್ನಡ ಟೀಕಾ, ಎಸ್. ಶಿವಕುಮಾರಸ್ವಾಮಿ, ಮೈಸೂರು ೧೯೫೧

ಲಿಂಗಮಹಾಪುರಾಣ : ವ್ಯಾಸಪ್ರಣೀತ, ಸಂ. ಅಷ್ಟಾದಶ ಪುರೋಣೋದ್ಧಾರಕ,
ಪುವ್ವಾಡ ವೆಂಕಟರಾಯ, ಕಾಂಚಿ ೧೯೭೯

ವಚನಸಾಹಿತ್ಯ ಸಂಗ್ರಹ : ಸಂ. : ಸಂ. ಶಿ. ಭೂಸನೂರಮಠ,
ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆ, ಬೆಂಗಳೂರು ೧೯೬೫

ವಾತುಲ ಶುದ್ಧಾಗಮ : ಭಾಗ–೨, ಸಂ. ಡಾ. ಎಚ್. ಪಿ. ಮಲ್ಲೇದೇವರು,
ಓ. ಆರ್. ಆಯ್. ಪ್ರಕಾಶನ, ಮೈಸೂರು ೧೯೮೩

ವಾತುಲ ಶುದ್ಧಾಖ್ಯ ತಂತ್ರ : (ತಂತ್ರ ಸಂಗ್ರಹ ಭಾಗ–೧) ಸಂಪೂರ್ಣಾನಂದ
ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸಿ ೧೯೭೦

ವೀರಶೈವರತ್ನ : ಲಿಂ. ಪಂ. ಕಾಶೀನಾಥಶಾಸ್ತ್ರಿ ವಿರಚಿತ (ಮರಾಠಿ)
ಶೈವಭಾರತೀ ಭವನ, ಜಂಗಮವಾಡಿಮಠ, ವಾರಾಣಸಿ ೧೯೫೨

ವೀರಶೈವಾನಂದಚಂದ್ರಿಕಾ : ಶ್ರೀಮನ್ನಿರಂಜನ ಮರಿತೋಂಟದಾರ್ಯ ವಿರಚಿತ,
(ವಾದಕಾಂಡ) ಮೂರುಸಾವಿರಮಠ, ಹುಬ್ಬಳ್ಳಿ ೧೯೩೬

ವೀರಶೈವಾನ್ವಯಚಂದ್ರಿಕಾ : ಶಾಕಟೇಪುರೀ ನಿಲಯ, ಶ್ರೀ ಹುಚ್ಚವೀರಶಾಸ್ತ್ರೀ ವಿರಚಿತ,
ಶ್ರೀ ರಾಜರಾಜೇಶ್ವರೀ ಮುದ್ರಣಾಲಯ, ಬೆಂಗಳೂರ ೧೯೪೦

